॥ ಹರಿಃ ಓಂ ॥

ಶ್ರೀ ಜಗನ್ನಾಥದಾಸಾರ್ಯ ವಿರಚಿತ

# ಶ್ರೀ ಹರಿಕಥಾಮೃತಸಾರ ಟೀಕಾ

## ಪಂಚರತ್ನ ಪ್ರಕಾಶಿಕಾ

ಪ್ರಕಟನೆ ೭೧.

(ಭಾಗ ೫)





ಅವತಾರ ಶಕೆ ೧೬೪೯ ಕೀಲಕ ಸಂ॥ ಶ್ರಾವಣ ಶು॥ ೨

ಮೈ. ಯಾತ್ರೆ ೧೭೩೧ ಶುಕ್ಲ ಸಂ॥ ಭಾದ್ರಪದ ಶು॥ ೮

ಹರಿಃ ಓಂ

ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ

ಲಿಂಗಸೂಗೂರು ಪ್ರಕಟನೆ ೨೧.

ಶ್ರೀ ಅಪರೋಕ್ಷಜ್ಞಾನಿಗಳಾದ

ಶ್ರೀಮಜ್ಜಗನ್ನಾಥ ದಾಸಾರ್ಯರ ವಿಚಿತ

# ಶ್ರೀ ಹರಿಕಥಾಮೃತಸಾರ ಟೀಕಾ

## ಪಂಚರತ್ನ ಪ್ರಕಾಶಿಕಾ ಭಾಗ–೫

ಸಂಧಿ ೧೯ ರಿಂದ ಸಂಧಿ ೨೪ ಪೂರ್ತಿ

೧. ಸಂಧಿಗಳ ಸಾರ ಮತ್ತು ಪದ್ಯಾರ್ಥ ಸವಿಸ್ತರ ವಿಶೇಷ ಸೂಚನೆ

— ಸಂಪಾದಕರು.

೨. ಶ್ರೀ ಜಂಬುಖಂಡಿ ಆಚಾರ್ಯರ ಭಾವಸೂಚನೆ ಟೀಕಾ.

೩. ಶ್ರೀ ಜಂಬುಖಂಡಿ ಆಚಾರ್ಯರ

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ ಟೀಕಾ. ಸಂಸ್ಕೃತ.

೪. ,, ,, ,, ಕನ್ನಡಾರ್ಥ ಅನುವಾದಕರು.

ಪಂಡಿತ: ಶ್ರೀ ಕೇಶವಾಚಾರ್ಯರ ಜಾಲಿಹಾಳ, ಗದಗ.

ಶಕೆ ೧೮೮೫ ಜ್ಯೇಷ್ಠ ಶು॥ ೬

ಮೇ-೧೯೬೩-ಇಸವಿ.

(ಇದರ ಎಲ್ಲ ಬಾಧ್ಯತೆ ಮಂಡಲದ್ದು)

ಮೊದಲನೇ ಆವೃತ್ತಿ ೧೦೦೦ ಪ್ರತಿಗಳು.



ಪುಟಗಳು ೮೦೮ ಬೆಲೆ ೮ ರೂ.

---

ಮುಂದೆ ಮುಂಗಡ ಕೊಟ್ಟು ಎಲ್ಲ ೬ ಭಾಗಗಳನ್ನು

ತೆಗೆದುಕೊಳ್ಳುವ ಚಂದಾದಾರರಿಗೆ ಮಾತ್ರ ರೂ. ೩೦

ಅಂಚೆ ವೆಚ್ಚ ಬೇರೆ

ಪೋಷ್ಟೇಜ್ ದ್ವಿಗುಣಿತವಾಗಿದೆ. ಸಹಕರಿಸಿರಿ.

ಸಂಗ್ರಾಹಕ, ಸಂಪಾದಕರು :
ಹನುಮಂತರಾವ ಗೊರಬಾಳ,
ಲಿಂಗಸುಗೂರು.

ಪ್ರಕಾಶಕರು ;
ಹನುಮಂತರಾವ, ಗೊರಬಾಳ
ಸಂಚಾಲಕ : ಶ್ರೀ ವರದೇಂದ್ರ
ಹರಿದಾಸ ಸಾಹಿತ್ಯ ಮಂಡಲ,
ಲಿಂಗಸೂಗೂರು, ಜಿ-ರಾಯಚೂರು



ಅರ್ಪಣೆ

ಶ್ರೀಮಜ್ಜಗನಾಥ ದಾಸಾರ್ಯರ ವಿದ್ಯಾಗುರುಗಳು
ಶ್ರೀವರದೇಂದ್ರ ಗುರುಸಾರ್ವಭೌಮರ ಹೃತ್ಕಮಲಮಧ್ಯನಿವಾಸಿ
ಶ್ರೀಮದ್ರಾಘವೇಂದ್ರ ಗುರು ಸಾರ್ವಭೌಮರ
ಅಂತರ್ಗತ ಶ್ರೀಮಧ್ವೇಶ
ಶ್ರೀ ಮೂಲ ರಾಮಚಂದ್ರನ
ಅಡಿದಾವರೆಗಳಲ್ಲಿ



ಮುದ್ರಕರು :

೧ ರಿಂದ ೨೪ ಫಾರಂ ವರೆಗೆ ಅಂದರೆ
(ಪುಟ ೧೯೪೬ ರಿಂದ ೨೩೩೦)
ಶ್ರೀ ಎ. ಗುರುರಾಜರಾವ್,
ರಾಮಚಂದ್ರ ಅಗ್ರಹಾರ,
ಚಾಮರಾಜಪೇಟೆ, ಬೆಂಗಳೂರು.

೨೫ನೇ ಫಾರಂ ಪುಟ ೨೩೩೧ ರಿಂದ
ಮುಂದೆ ಸಂಪೂರ್ಣ ಬೈಂಡ್ ಸಹಿತ
ಶ್ರೀ ಪಿ. ಎ. ಉಪಾಧ್ಯಾಯ
ಭಾರತಲಕ್ಷ್ಮೀ ಮುದ್ರಣಾಲಯ,
ಅರಳೇಪೇಟೆ, ಬೆಂಗಳೂರು ಸಿಟಿ

# ಅನುಕ್ರಮಣಿಕೆ



## ಚಿತ್ರಗಳು

ಶ್ರೀಮದ್ವೈಷ್ಣವ ರಾದ್ಧಾಂತ ಪ್ರವರಾನ್ ಶ್ರೀಕೃಷ್ಣಸೇವಕಾನ್ |
ವಿದ್ಯಾಧೀಶಯತೀನ್ ಸತ್ಸರಾಜ್ಞಗುಣಾನ್ ಭಜೇ ||

ಶಾ. ಶಕೆ ೧೮೦೨ (1881) ಬೆಂಗಳೂರು. ಭಾವಸೂಚನೆ, ವ್ಯಾ. ದಾ. ಕೌ. ಕರ್ತೃ



ಉಡುಪಿ ಶ್ರೀ ಕೃಷ್ಣಾಪುರ ಮಠಾಧೀಶರಾದ
ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು

ಶ್ರೀ ಜಂಬುಖಂಡಿ ಆಚಾರ್ಯರ ಗುರುಗಳು

ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರು

ಶ್ರೀ ಆರ್ಯ ಅಕ್ಷೋಭ್ಯತೀರ್ಥಕೂಡಲಿ ಮಠಾಧೀಶ



ಶ್ರೀ ಶ್ರೀ ರಘುಕಾಂತತೀರ್ಥಶ್ರೀಪಾದಂಗಳು (ಮಳಖೇಡ)
ಕೃಷ್ಣಾಪುರ ಶ್ರೀವಿದ್ಯಾಧೀಶರ ವಿದ್ಯಾಶಿಷ್ಯರು, ವೇದಾಂತ ಸಾಮ್ರಾಜ್ಯ ಪರಿಪಾಲಕರು
ಶಾಪಾನುಗ್ರಹಶಕ್ತರು, ಶ್ರೀ ಹರಿಕಥಾಮೃತಸಾರ ನಿಷ್ಠರು.

ಶ್ರೀ ವ. ಹ. ಸಾಹಿತ್ಯಮಂಡಲ ಮಹಾಪೋಷಕರು

**ಅಧ್ಯಕ್ಷರು.**



ಶ್ರೀ ರಾಮಪ್ಪಯ್ಯಾ ದೇಸಾಯಿ ಕಾಟಾಪುರ.

ತಾ॥ ಕುಷ್ಟಗಿ, ಜಿ. ರಾಯಚೂರು.

ಶ್ರೀ ಶ್ರೀ ರಘುಕಾಂತತೀರ್ಥ ಶ್ರೀಪಾದಂಗಳವರ ಮತ್ತು ಶ್ರೀ ಗುರುಜಗನ್ನಾಥ ದಾಸರ ಶಿಷ್ಯ,



ಶ್ರೀವರದೇಂದ್ರಹರಿದಾಸ ಸಾಹಿತ್ಯ ಮಂಡಲ ಸಂಚಾಲಕ

**ಹನುಮಂತರಾವ ಗೊರಾಬಾಳ**

ವಿದ್ವಾನ್, ಸಾಹಿತ್ಯ ಸೇವಾಲಂಕಾರ (ಸುಂದರವಿಠಲ)

॥ ಶ್ರೀ ಗುರುರಾಜೋವಿಜಯತೆ ॥

## ಶ್ರೀ ಬಾದರಾಯಣ ದೇವರ ಸ್ತೋತ್ರ

ರಾಗ—ಕಾಂಬೋದಿ, ತಾಳ—ಝಂಪೆ.

ಬಾದರಾಯಣ ದೇವ ಭಕುತ ಬಂಧೋ ।
ವೇದ ವೇದ್ಯನೆ ದಯದಿ ಸಂದರ್ಶನವನಿತ್ತೆ ॥ ಪ. ॥

ಬೆಳಗು ಝಾವದ ಸ್ವಪ್ನ ಕಳವಳಗೊಳಸಲ್ಲ ।
ತಳಿರು ತೋರಣಾಲಂಕೃತ ಪರಿಮಳೋದ್ಯಾನ ॥
ದೊಳಗೆ ತರುವೇದಿಕದಿ ಶತ ರವಿಯ ದೀಪ್ತಿಯಲಿ ।
ಕುಳಿತು ಋಷಿಗಳ ಮಧ್ಯ ಉಪದೇಶಗೈಯ್ಯುತಲಿ ॥ ೧ ॥

ಪೊಳೆವ ಜಟಾಜೂಟ ಪೊಂಬಣ್ಣದಂತೆಸೆಯೆ ।
ನಳಿನಾಕ್ಷನಾ ನಿಮಗೆ ನಮನಗೈಯ್ಯಲುಪರಸಿ ॥
ಒಳಿತೇ ಈ ಭಿತ್ತಿಯಲಿ ಬರೆದುದನು ಓದೆನಲು ।
ಸಲೆ ಬಾರದೆನ್ನೆ ಛಾಂದೋಗ್ಯ ಶ್ರುತಿಗಳ ಪೇಳ್ದೆ ॥ ೨ ॥

ವರ ಶ್ರುತಿಗಳೆನ್ನಿಂದ ಉಚ್ಚರಿಸಿ ಅದರರ್ಥ ।
ಅರುಹುಸೈ ಭೃಗು ಋಷಿಯೆ ಬ್ರಹ್ಮ ಕುಲಮಾನಿ ಎನೆ ॥
ಮರುಳೆ ಮರೆತಿಯೊ ಯೆಂದು ಎರಡು ಶ್ರುತ್ಯಾರ್ಥಗಳ ।
ತರತಮಭಾವ ವಿಸ್ತರಿಸಿ ಪೇಳ್ಸಿದ ಧೊರಿಯೆ ॥ ೩ ॥

ಇಪ್ಪತ್ತನೇ ವಯದಿ ಓದಿದೀ ಗುರುಗಳಲಿ ।
ಎಪ್ಪತ್ತನೆ ವಯದ ಮುಪ್ಪಿನಾ ಮರಹೇನೋ ॥
ಅಪ್ಪ ನೀಂ ಮರೆಸಿದರೆ ನಾ ಮರೆದೆನೊ ಸ್ವಾಮಿ ।
ತಪ್ಪು ಎನದಲ್ಲ ಗುರುಗಳ ಸಾಕ್ಷಿ ಬಿನ್ನೈಪೆ ॥ ೪ ॥

ಇಂತನುಗ್ರಹಿಸಿ ಶ್ರೀಮಂತ್ರ ಮಂದಿರ ದಯಕೆ ।
ಸಂತತದಿ ಪಾತ್ರ ಬ್ರಹ್ಮವಿದ್ಯಾ ಗುರುಗಳ ॥
ಮುಂತೈನಿಶ್ಚಯಲಭ್ಯ ರಘುಕಾಂತ ತೀರ್ಥರ ಪಾದ ।
ಸಂತಸದಿ ತೋರ್ದ ತೈಜಸನೆ ಸುಂದರವಿಠಲ ॥ ೫ ॥

॥ ಶ್ರೀ ತೈಜಸಾಭಿನ್ನ ಶ್ರೀ ಮಧ್ವೇಶಾರ್ಪಣಾ ॥

# ಅರಿಕೆ



ಈ ತಾರತಮ್ಯ ಘಟ್ಟವು ಬಹು ಕಠಿಣ, ನಿಬಿಡವಾದ ಶಾಸ್ತ್ರಾರ್ಥ ವಿಚಾರದಿಂದ ಪೂರಿತವಾದುದು. ಮದ್ಗುರುವರ್ಯರಂತರ್ಗತ ಶ್ರೀಮಧ್ವೇಶರಾದ ಶ್ರೀ ಬಾದರಾಯಣ ದೇವರು ಅನುಗ್ರಹಿಸಿ ಎಚ್ಚರದಿಂದ ಪೂರೈಸಿದುದು ಅಚ್ಚರವೆ? ಕ್ರಿಮಿಯಿಂದ ರಾಜ್ಯವಾಳಿಸಿದ ಸ್ವಾಮಿಗೆ ಇದೇನು ಆಶ್ಚರ್ಯ! ಸಾಧಕರಾದ ಜೀವರುಗಳಲ್ಲಿ ತಾನೇ ಅನುಗ್ರಹಿಸಿ ಜ್ಞಾನ-ಭಕ್ತ್ಯಾದಿಗಳಿತ್ತು, ಸಾಧನ ಮಾಡಿಸಿ, ತನ್ನ ಸಂದರ್ಶನವೀವ. ಈ ಮಹತ್ತರವಾದ ಕಾರ್ಯವು ಎನ್ನ ಆತ್ಮೋದ್ಧಾರಕ್ಕೆ ಕಾರಣವಾದರೂ, ಸಜ್ಜನರಿಗೆ ಉಪಕಾರವಾಗಲೆಂದು ಮಾಡಿಸುತ್ತಿರುವನು. ಮಂದಮತಿಗಳಿಗೆ ಇದರ ಭಾವ ತಿಳಿಯುವುದು ಕಷ್ಟ.

ಪ್ರಕೃತ ಈ ೫ನೇ ಭಾಗದಲ್ಲಿ ೧೯, ೨೦, ೨೧, ೨೨, ೨೩, ೨೪-ಹೀಗೆ ಆರು ತಾರತಮ್ಯ ಸಂಧಿಗಳನ್ನು ಪೂರೈಸಲಾಗಿದೆ.

೧೯ ಗುಣ-ತಾರತಮ್ಯ (ಅವರೋಹಣ), ೨೦ ಆರೋಹಣ-ತಾರತಮ್ಯ ಈ ಎರಡೂ ಸಂಧಿಗಳು ೪ನೇ ಭಾಗದಲ್ಲೇ ಅಚ್ಚಾಗಬೇಕಾಗಿತ್ತು. ವಿಶ್ವಪ್ರಯತ್ನ ಮಾಡಿದರೂ ಆಗಲಿಲ್ಲ. ದಾಸರ ಇಚ್ಛೆಯೇ ಬೇರೊಂದು. ನಾನು ಅರಿಯದ ಮೂಢನು.

ಈ ಮಹಾಗ್ರಂಥದಲ್ಲಿ ೧೦ ತಾರತಮ್ಯ ಸಂಧಿಗಳು ಮತ್ತು ೨೧, ೨೨, ೩೧ ಈ ಮೂರು ತಾರತಮ್ಯ ಸಂಧಿಗಳು ತರತಮಕ್ಕೆ ಅನುಗುಣವಾದವು. ಸಂಚಿತಾಗಾಮಿ ಕರ್ಮನಾಶನಾನಂತರ ಬಿಂಬಾಪರೋಕ್ಷ ತರತಮದಿಂದ ಪ್ರಾರಬ್ಧ ಅನುಭೋಕ್ತೃವ್ಯವೆಂಬುದು ತಾರತಮ್ಯಕ್ಕೆ ಸಂಬಂಧಿಸಿದವು. ಮುಂದೆ ೩೧ನೇ ನೈವೇದ್ಯ ಪ್ರಕರಣ ಸಂಧಿಯಲ್ಲಿಯೂ ಪದಾರ್ಥ ನಿವೇದನಾನುಗುಣ ತಾರತಮ್ಯದಿಂದ ಅಭಿಮಾನಿದೇವತೆಗಳ ತರತಮ-ಇದು ಬಹು ಸೂಕ್ಷ್ಮವಾಗಿ ತಿಳಿಯುವುದಾಗಿದೆ. ಹೀಗೆ ೧೩

ಸಂಧಿಗಳು ಬಹು ದುರ್ಘಟವಾದವು. ಕೇವಲ ದೇವತೆಗಳ ನಾಮೋಚ್ಚರಣೆ ಸಾಲದು.

ಈ ತಾರತಮ್ಯ ವಿವರ ವಿಚಾರಿಸದಿರಲು ದಾಸರು, ೧೯-೨೦ ಸಂಧಿ ಮುಂದುವರಿಸಿ ಎಚ್ಚರಿಕೆ ಇತ್ತರು.

೧. ಮೊದಲಿಗೆ ತಾರತಮ್ಯವೇ ಮುಖ್ಯ. ಈ ತಾರತಮ್ಯದಲ್ಲಿ ಆದರ ಪ್ರಟ್ಟಲು ಶ್ರೀಕೃಷ್ಣ ಭಗವಾನನು, ಗರುಡದೇವರಿಗೆ ಉಪದೇಶವಿತ್ತ ಗಾರುಡ ಪ್ರಮಾಣಗಳನ್ನೂ, ಅದರ ಸಾರಾಂಶವನ್ನೂ ಬರೆಸಿದ್ದಾರೆ. ಮನನ ಮಾಡುವುದು.

೨. ನಂತರ ಇಂತು ತಾರತಮ್ಯದಿಂದ ದೇವತೆಗಳ ದ್ವಾರಾ ಭಗವದುಪಾಸನೆ ಮಾಡುವ ಪ್ರಯೋಜನವೇನೆಂಬುದೇ ಮುಖ್ಯ ಉದ್ದೇಶ ವಾಗಿತ್ತು ಬಹು ದಿನಗಳ ಮೇಲೆ ದಾಸರೇ ಕರುಣಿಸಿ ಎಚ್ಚರವಿತ್ತರು; ಜ್ಞಾನ ಪ್ರೇರಿಸಿದರು. ಛಾಂದೋಗ್ಯ ಶ್ರುತಿಗಳನ್ನೂ, ಶ್ರುತ್ಯರ್ಥಗಳನ್ನೂ ತಿಳಿಸಿದರು. ಶ್ರೀ ವಿಜಯರು ತಮ್ಮ ಸ್ವವಾಕ್ಯವಾದ “ನಾಮಾಭಿಮಾನಿ ಉಪಾರಂಭಿಸಿ ಪ್ರಾಣಪರ್ಯಂತವಾಗಿ ಭಜಿಸುವ ವೈಕಾರಿಕ ಮನಸ್ಸು ಕೊಡೆಂದು ಶ್ರೀ ಮಂತ್ರಾಲಯ ಪ್ರಭುಗಳ ಸ್ತೋತ್ರದಲ್ಲಿ ಪೇಳಿದ್ದು ನೆನಪಿಗೆ ತಂದಿತ್ತರು. ಯಾವ ಯಾವ ದೇವತೆಗಳ ದ್ವಾರಾ ಉಪಾಸನೆ ಮಾಡಿದರೆ ಯಾವ ಯಾವ ಶಕ್ತಿಯುಂಟಾಗಿ, ಪ್ರಾಣದ್ವಾರಾ ಸತ್ಯನಾಮಕ ಹರಿಯು ಏನಂ ಮೋಚಯಾಮಿ ಎಂಬ ಸುಪ್ರಸಾದದಿಂದ ಪ್ರತ್ಯಕ್ಷ ನಾಗುವನೆಂದು ಛಾಂದೋಗ್ಯ ಉಪನಿಷತ್ ಅಧ್ಯಾಯ-೭, ೧೬ನೇ ಖಂಡ ದಿಂದ ೨೬ನೇ ಖಂಡದವರೆಗೆ ಸವಿಸ್ತಾರವಾಗಿ ವಿವರಿಸಿದ ವಿಷಯಗಳನ್ನು ಶ್ರೀ ಮಂತ್ರಾಲಯ ರಾಘವೇಂದ್ರ ಪ್ರಭುಗಳು ಭಾಷ್ಯಾರ್ಥದಂತೆ ಉಪ-ನಿಷತ್ ಖಂಡಾರ್ಥದಲ್ಲಿ ಪೇಳಿರುವಂತೆ ಉಪಾರಂಭಿಸಿ, ಆಯಾ ದೇವತೆ ಗಳ ಶಕ್ತಿಪ್ರದಾತೃತ್ವ ವಿವರ ಭಾಷ್ಯವನ್ನು ಕೊಟ್ಟು, ಖಂಡಾರ್ಥ ವಿವರಿಸಿ ಬರೆಸಿದ್ದಾರೆ. ಇನ್ನು ಹಲ ಉಪನಿಷತ್ ಪ್ರಮೇಯವೂ ತುಂಬಿದೆ. ಹೀಗೆ ಉಪನಿಷತ್ ಪ್ರಸ್ಥಾನದಲ್ಲಿ ತಾರತಮ್ಯೋಪಾಸನಾ ಹೇಳಿದೆ.

ಸೂತ್ರಪ್ರಸ್ಥಾನದಲ್ಲಿಯೂ ಶ್ರೀ ಬಾದರಾಯಣ ದೇವರ ಸದಾ ಅನುಗ್ರಹಕ್ಕೆ ಪಾತ್ರರಾದ ಶ್ರೀ ಸರ್ವಜ್ಞರಾಯರು, ಬ್ರಹ್ಮಸೂತ್ರ ಭಾಷ್ಯ

ಅನುವ್ಯಾಖ್ಯಾನ, ತತ್ವವಿವೇಕದಲ್ಲಿ ಸವಿಸ್ತರಿಸಿದಂತೆ ಶ್ರೀಸುಧಾ ಪರಿಮಳ ಕಾರರ ದಯೆಯಿಂದ ತಾರತಮ್ಯೋಪಾಸನಾ ಮಹಿಮೆ ಸೂತ್ರಪ್ರಸ್ಥಾನ ದಿಂದಲೂ ಬರೆಸಿದುದು ಬರೆದು ವಿವೇಚಿಸಲಾಗಿದೆ. ಮತ್ತು,

ಭಾರತ ಪ್ರಸ್ಥಾನ ಗೀತಾ ತಾತ್ಪರ್ಯ ಭಾಷ್ಯ- ತಾತ್ಪರ್ಯ ನಿರ್ಣಯ ಗ್ರಂಥಗಳಲ್ಲಿ ತಾರತಮ್ಯ ಉಪಾಸನೆ ವಿವರ ವಿವೇಚಿಸಲಾಗಿದೆ. ಇಂತು ಪ್ರಸ್ಥಾನತ್ರಯದಲ್ಲೂ ತಾರತಮ್ಯ ಧ್ಯಾನೋಪಾಸನೆ ಮುಖ್ಯವೆಂದು ಸರ್ವಜ್ಞರ ಆಜ್ಞೆ ಮರೆಯಲಾಗದು.

ಮುಂದೆ ೧೯ನೇ ತಾರತಮ್ಯ ಸಂಧಿಯಿಂದ ಪ್ರಾರಂಭಿಸಿ, ೩೨ ಸಂಧಿ ಪೂರ್ತಿಯಾಗಿ ಒಂದೊಂದು ಸಂಧಿಗಳಿಗೆ ಸಂಬಂಧವೇನು? ಈ ಸಂಧಿಗಳನ್ನು ಕ್ರಮವಾಗಿ ಏಕೆ ರಚಿಸಿದ್ದಾರೆ? ಎಂಬುದಕ್ಕೆ ದಾಸರು ತಮ್ಮ ಭಾವವನ್ನು ಪ್ರೇರಿಸಿ ಬರೆಸಿದ್ದಾರೆ. ಮೂಲ ಶುದ್ಧ ಪ್ರತಿಗಳೇ ಇದಕ್ಕೆ ಕಾರಣ. ಮತ್ತು ಕರ್ಜಗಿ ದಾಸರ ಶಿಷ್ಯರು, ಶ್ರೀ ಭೀಮೇಶವಿಠಲರ ಸಂಧಿ ಮಾಲಾಸಂಧಿಯೇ ಪ್ರಮಾಣ. ಇದಕ್ಕೆ ಶ್ರೀ ವಿಜಯದಾಸರ ಉಪಾಸನಾ ಭಾಗ ಸುಳಾದಿಗಳು ಉಪನಿಷತ್ ಪ್ರಮಾಣವಾಗಿವೆ. ಈ ಗ್ರಂಥ ಮಹಿಮೆ ಎಷ್ಟೆಂದು ಹೇಳಲು ಮಂದಮತಿಯಿಂದ ಸಾಧ್ಯವಿಲ್ಲ. ಇವೆಲ್ಲ ವಿವೇಚನ ದಿಂದ ಹಿಂದೆ ಪ್ರಕಟವಾಗದಿರುವುದೇ ದಾಸರ ಇಚ್ಛೆ. ಕಾಲ, ದೇಶವೂ, ಪಾತ್ರಗುಣಾನುಕೂಲ್ಯವೂ ಶ್ರೀಹರಿಯ ಸತ್ಯಸಂಕಲ್ಪಾನುಸಾರವಾಗಿ ನಡೆಯುವುವು. ಇದೇ ಭಗವದಿಚ್ಛಾ ತಿಳಿದು ಸಾಧನ ಮಾಡುವುದೇ ಸಾಧಕನ ಮುಖ್ಯ ಕರ್ತವ್ಯ.

೧೯ನೇ ಗುಣ ತಾರತಮ್ಯ ಅವರೋಹಣ ಸಂಧಿ ಸೃಷ್ಟಿ ಚಿಂತನೆ ೨೦ನೇ ಆರೋಹಣ ತಾರತಮ್ಯ ಸಂಧಿ ಲಯ ಚಿಂತನೆ ಈ ಪ್ರಕಾರ ಧ್ಯಾನ ದಿಂದ ಕಾಲಕ್ಲೃಪ್ತದಲ್ಲಿ ನಿಯತ ಗುರುಲಭ್ಯವಾಗಿ ಇದೇ ಸ್ಥೂಲದೇಹ ದಲ್ಲೇ ಬಿಂಬಾಪರೋಕ್ಷವಾಗುವುದು. ಸ್ವರೂಪ ದೇಹಗತ ಬಿಂಬನೆ ಹೊನ್ನ ಮಳುವಿನಂತೆ ಪೊಳೆವನು ಸಂದೇಹವಿಲ್ಲವೆಂಬ ಶಾಸ್ತ್ರಾರ್ಥ ವಿಚಾರಗಳ ನ್ನೆಲ್ಲಾ ಶ್ರೀ ಸರ್ವಜ್ಞರ ಶಾಸ್ತ್ರಗಹನ ವಿಚಾರಕ್ಕೆ ಆಧಾರವಾದ ಪ್ರಕಾಶ ಸಂಹಿತಾ, ಗಾರುಡ ಬ್ರಹ್ಮಕಾಂಡ, ವಿಷ್ಣುರಹಸ್ಯ ಶಾಂಡಿಲ್ಯ ತತ್ವಾದಿ ಗ್ರಂಥಗಳ ವಿಶೇಷ ಪ್ರಮೇಯಗಳನ್ನು ಬುದ್ಧಿಯಲ್ಲಿ ಪ್ರೇರಿಸಿದ್ದೇ ವಿವೇಚನ

ಲಾಗಿದೆ.

ಇಂತಹ ಸ್ವರೂಪಾಪರೋಕ್ಷದಿಂದ ಸಂಚಿತ ಕರ್ಮನಾಶ ಆಗಾಮಿ ಕರ್ಮಲೇಪವಿಲ್ಲವೆಂಬುದನ್ನು ೨೧ನೇ ಸಂಧಿಯಲ್ಲಿ ಬ್ರಹ್ಮಸೂತ್ರಾದಿ ಸದ್ಗ್ರಂಥಗಳ ಆಧಾರವಾಗಿ ದಾಸರು ನಿರೂಪಿಸಿದಂತೆ ಬಹು ಪ್ರಮೇಯ ತಿಳಿಸಿ ಬರೆಸಿದ್ದು, ಬರೆದು ಸಜ್ಜನರ ಮುಂದಿರಿಸಿದೆ.

೨೨ನೇ ಸಂಧಿಯಲ್ಲಿ ಪ್ರಾರಬ್ಧ ಅನುಭೋಕ್ತೃತ್ವ ಕಾಲ, ಜೀವರಧಿಕಾರಾನುಸಾರ, ಸಾಂಶ,ನಿರಂಶ ಜೀವರ ಪ್ರಾರಬ್ಧ ಅನುಭೋಕ್ತೃತ್ವ ಬಗೆಯ ಸೂಕ್ಷ್ಮ ವಿಚಾರಗಳನ್ನು ಅನೇಕ ಗ್ರಂಥಾಧಾರಗಳಿಂದ ವಿವರಿಸಲಾಗಿದೆ. ನಂತರ ೨೩ನೇ ಸಂಧಿಯಲ್ಲಿ

ಅಪರೋಕ್ಷಾನಂತರವೂ ಧಾರಣ ಧ್ಯಾನಯೋಗದಿಂದ ದೇವತೆಗಳ ಅಂಶ, ಆವೇಶ, ಅವತಾರಾದಿ, ಶಕ್ತಿ-ಬಲ, ಓಜಸ್ಸಾದಿಗಳನ್ನುಕೊಡುವರು. ಈ ಧಾರಣ ಧ್ಯಾನಯೋಗವು ಸಹ ಮುಕ್ತಿಯಲ್ಲಿ ಆನಂದಾಭಿವೃದ್ಧಿಗೆ ಕಾರಣವಾಗುವ ಭಾವ, ಅದರ ವಿಚಾರ, ೨೩ನೇ ಆವೇಶಾವತಾರತಮ್ಯ ಸಂಧಿಗಳಲ್ಲಿ ಬೃಹದಾರಣ್ಯಕೋಪನಿಷತ್ ಬೃಹದ್ ಭಾಷ್ಯ ಪ್ರಮಾಣ ಗಳೊಂದಿಗೆ ವಿಶದವಾಗಿ ದಾಸರು ಪ್ರೇರಿಸಿದಂತೆ ವಿವೇಚಿಸಲಾಗಿದೆ. ಇದು ಪರಮ ಮುಖ್ಯ ಶಾಸ್ತ್ರಾರ್ಥವಾಗಿದೆ. ಅಲ್ಲಿಂದ,

೨೪ನೇ ಸಂಧಿಯಲ್ಲಿ ತೃಣಾದಿ ಜೀವರುಗಳಿಂದ ಪುರುಷೋತ್ತಮರ ವರೆಗೆ ಅವರ ಸಾಧನಕಾಲ, ಉಪಾಸನಾ ಕಾಲ ಅಲ್ಲಿಂದ ಕರ್ಮಯೋಗಿ ಗಳು, ಜ್ಞಾನಯೋಗಿಗಳು, ಇವರ ಲಕ್ಷಣ, ಸಾಧನ ಕಾಲ, ಅಪರೋಕ್ಷಾ ನಂತರ ಪ್ರಾರಬ್ಧ ಅನುಭೋಗಿಸುವ ಸೂಕ್ಷ್ಮಕಾಲ ವಿಚಾರ, ಭಕ್ತಿಯೋಗಿ ಗಳ ಲಕ್ಷಣ, ಅವರವರ ಸಾಧನಕಲ್ಪ, ಋಜುಯೋಗಿಗಳ ಲಕ್ಷಣ, ಋಜುಗಳ ಸಂಖ್ಯಾ, ಋಜುಗಳಾದ ೯೮ ಜನ ಬ್ರಾತವ್ಯರ ನಾಮಸ್ಮರಣೆ, ವಾಯು, ಬ್ರಹ್ಮದೇವರ ಮಹಿಮೆ, ಇವರಲ್ಲಿರುವ ಅಚ್ಛಿನ್ನಭಕ್ತತೆ ವರ್ಣನೆ, ಕಾಲ, ವಿಚಾರಗಳು, ಅನೇಕ ಸದ್ಗ್ರಂಥಗಳ ಆಧಾರದ ಮೇಲೆ ದಾಸರು ವಿಶದ ವಾಗಿ ಬರೆಸಿದ್ದಾರೆ.

ಇಂತು ಅಪರೋಕ್ಷಾನಂತರವೂ ಲಿಂಗಭಂಗಪವರೆಗೆ ಅನುಕ್ತ ದೆಶೆ ಯಲ್ಲಿ ಮುಂದೆ ಮುಕ್ತದೆಶೆಯಲ್ಲಿ ಸಾಧನ ವಿಚಾರವು ಬಹು ಸೂಕ್ಷ್ಮ

ವಾದುದು. ಹಿಂದೆ ಎಲ್ಲಿಯೂ, ಯಾರೂ ಇಷ್ಟು ವಿವರವಾಗಿ ಬರೆದಿಲ್ಲ. ಪ್ರಕಟಿಸಿಲ್ಲ.

ಈ ಪ್ರಕಾರವಾಗಿ ದಾಸಾರ್ಯರು, ಸಕಲ ಶಾಸ್ತ್ರ ಪಂಡಿತರು, ಶಾಸ್ತ್ರಾಪರೋಕ್ಷಿಗಳು, ಬಿಂಬಾಪರೋಕ್ಷಿಗಳು, ದೇವಾಂಶರು, ಕಲಿಯುಗದಲ್ಲಿ ಸಾಧನ ಜೀವರ ಪಾರಾಯಣಕ್ಕಾದರೂ ಇರಲೆಂದು ಭಗವಂತನ ಆಜ್ಞಾನುಸರಿಸಿ ಶ್ರೀ ವಾದಿರಾಜರು, ಶ್ರೀಪುರಂದರದಾಸರು ಪ್ರೇರಿಸಿದಂತೆ ರಚಿಸಿದ ಕನ್ನಡ ಕಾವ್ಯದಲ್ಲಿ ಉದ್ದಾಮ ಗ್ರಂಥವಿದು. ಕೇವಲ ಕನ್ನಡ ಮಾತುಗಳಾದರೇನು ಸರ್ವಜ್ಞರ ಸಕಲ ಶಾಸ್ತ್ರವೇ ಪೂರಿತವಾಗಿ ಅಣು ಸುಧೆಯೆಂದು ಜ್ಞಾನಿಗಳಿಂದ ಹೊಗಳಿಸಿಕೊಂಡಿದೆ. ಆಗಿನ ಕಾಲ, ಅಪರೋಕ್ಷಿಗಳಾದ ಶ್ರೀ ತಾಮ್ರಪರ್ಣಿ ಆಚಾರ್ಯರು ಸಂಸ್ಕೃತದಲ್ಲಿ ಟೀಕಾ ಬರೆದಿದ್ದಾರೆ. ಮೊದಲನೇ ಪದ್ಯದಲ್ಲಿ ಈ ಗ್ರಂಥ ವಿಚಾರ ಗ್ರಂಥ ಮಹಿಮೆ ಸಕಲ ಧ್ಯಾನೋಪಾಸನ ವಿಷಯವೇ ಈ ಗ್ರಂಥದಲ್ಲಿ ತುಂಬಿದೆಯೆಂದು ಕೊಂಡಾಡಿದ್ದಾರೆ. ಶ್ರೀ ಭಗವದಪರೋಕ್ಷಿಗಳು ಅವಧೂತರಾದ ಶ್ರೀ ಜಂಬುಖಂಡಿ ಆಚಾರ್ಯರು ಸಹ ಟೀಕಾದಲ್ಲಿ ಕೇವಲ ಭಗವದುಪಾಸನೆಗೆ ತಕ್ಕುದಾದ ಗ್ರಂಥವಿದೆಂದು ಹೇಳಿದ್ದಾರೆ.

ಅಲ್ಲದೆ ಫಲಶ್ರುತಿ ಸಂಧಿಯಲ್ಲಿ ಶ್ರೀ ದಾಸರಾಯರ ಸಾಕ್ಷಾತ್ ಶಿಷ್ಯರು. ಗ್ರಂಥ ಮಹಿಮಾ ವರ್ಣಿಸಿದ್ದಾರೆ. ಪದ್ಯ ೫-೬ ಕಾರಣ, ಇದು ಸಕಲ ಶಾಸ್ತ್ರಾರ್ಥಪೂರಿತ ನಿರಂತರ ಗುರು ಅನುಗ್ರಹ, ಭಗವದುಪಾಸನೆ, ಧ್ಯಾನೋಪಾಸನೆ ದ್ವಾರಾ ಅಪರೋಕ್ಷ ಲಭ್ಯವಾದುದೆಂದು ನಿಸ್ಸಂದೇಹವಾಗಿ ಕರವೆತ್ತಿ ಹೇಳಿದ್ದಾರೆ. ಸುಧಾದಿ ಸಕಲ ಶಾಸ್ತ್ರ, ಉಪನಿಷದಾದಿ ಪ್ರಸ್ಥಾನತ್ರಯ ವಿಚಾರಗಳನ್ನು ಗುರ್ವನುಗ್ರಹದಿಂದ ತಿಳಿದು ಭಕ್ತಿಯಿಂದ ವಿವೇಕ ವಿಚಾರ ಮಾಡಿದರೆ ಇದರ ಭಾವ ಕೆಲಮಟ್ಟಿಗಾದರೂ ತಿಳಿಯುವುದು ಅಸಾಧ್ಯ. ಇಂತಿರಲು,

ಇಲ್ಲಿ ಕೆಲವರ ಆಕ್ಷೇಪ: ಸುಧಾದಿ ಪ್ರವಚನಾಸಕ್ತ ಶಾಸ್ತ್ರಜ್ಞರಾದ ಓರ್ವ ಪೀಠಾಧಿಪತಿಗಳು ಮತ್ತು ಕೆಲವು ಪಂಡಿತರು ಭಗವದಪರೋಕ್ಷ ಜ್ಞಾನಕ್ಕೆ ಶಾಸ್ತ್ರ ಪ್ರಮಾಣವೇ ಮುಖ್ಯ. ಧ್ಯಾನ ಉಪಾಸನೆಯೇಕೆ ಮಾಡಬೇಕು? ಶ್ರೀ ಸರ್ವಜ್ಞರು—

**ತಂತ್ರಸಾರ ಅಧ್ಯಾಯ-೪, ಶ್ಲೋಕ-೧೪೩, ೧೪೪ರಲ್ಲಿ—**

"ಅಪರೋಕ್ಷದೃಶೇರೇವ ಯಸ್ಮಾನ್ ಮೋಕ್ಷೋ ನ ಚಾನ್ಯಥಾ ॥
ಅಪರೋಕ್ಷದೃಶಿಶ್ಚೈವ ಶ್ರವಣಾನ್ಮನನಾದನು ॥ ೧೪೩ ॥
ಸಮ್ಯಕ್ ನಿಶ್ಚಿತತತ್ವಸ್ಯ ನಿದಿಧ್ಯಾಸನಯಾ ಭವೇತ್ ॥
**ದ್ವಿವಿಧಾ ಸಾ ಚ ಸಂಪ್ರೋಕ್ತಾ ವಿಷ್ಣುಶಾಸ್ತ್ರವಿಮರ್ಶನಮ್ ॥ ೧೪೪ ॥**

**ಮತ್ತು ಅನುವ್ಯಾಖ್ಯಾನದಲ್ಲಿ—**

ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಿಣೀ ॥
ಧ್ಯಾನರೂಪಾ ಪರಾ ಚೈವ ತದಂಗಧಾರಣಾದಿಕಮ್ ॥
ತಥೋಭಯಾತ್ಮಕಂ ಚೈವ ಪಾದೇಸ್ಮಿನ್ ಬಾದರಾಯಣಃ ॥

ಎಂದು ಪ್ರಮಾಣಗಳಿವೆ. ವಿಷ್ಣುಶಾಸ್ತ್ರವಿಮರ್ಶನವೇ (೧) ಮುಖ್ಯ ಸಂತತ ವಿಷ್ಣುಶಾಸ್ತ್ರವಿಮರ್ಶನ ಮಾಡಲು ಭಗವದಪರೋಕ್ಷವಾಗುತ್ತದೆ. (೨) ಎರಡನೇದು ಧ್ಯಾನ-ಹೀಗೆ ದ್ವಿವಿಧವಾಗಿದೆ. ಅಪರ ಎರಡನೇದು ಧ್ಯಾನ ಮುಖ್ಯವಲ್ಲ. ಹೀಗಿದ್ದರೂ ಶ್ರೀ ಪಂಡಿತ ಕೇಶವಾಚಾರ್ಯ ಜಾಲಿಹಾಳ ಇವರು ತಾಮ್ರಪರ್ಣಿ ಜಂಬುಖಂಡಿ ಆಚಾರ್ಯರ ಟಿಪ್ಪಣಿ ಕನ್ನಡ ಅನುವಾದ ಮಾಡುವಲ್ಲಿ ಧ್ಯಾನೋಪಾಸನೆ ಮುಖ್ಯವೆಂದು ಬರೆದಿರುವರು. ಮತ್ತು ಕೆಲವೆಡೆ ಟೀಕಾದಲ್ಲಿ ಹೇಳಿದ್ದು ಸಹ ಬಿಟ್ಟಿರುವರು. ಹೀಗೆ ಕೆಲ ಜನ ಪಂಡಿತರು ಆರೋಪಿಸಿದ್ದು ಕೇಳಿದೆನು. ಇಂತಹ ಆಕ್ಷೇಪ ಮಾಡುವವರು ಬೇಕು. ಅಂದರೆ ತತ್ವನಿಶ್ಚಯಕ್ಕೆ ಕಾರಣವಾಗುತ್ತದೆ.

ಶ್ರೀ ಕೇಶವಾಚಾರ್ಯರು--

ಶ್ರೀ ತಾಮ್ರಪರಣಿ ಆಚಾರ್ಯರು ಟೀಕಾದಲ್ಲಿ ಬರೆದಂತೆ ಅನುವಾದ ಮಾಡಿದ್ದಾರೆ. ಅವರೇನು ಸ್ವಮತಿಯಿಂದ ಬರೆದಿಲ್ಲ. ಕೆಲವು ಕಡೆ ಜಂಬುಖಂಡಿ ಆಚಾರ್ಯರ ಟೀಕಾದಲ್ಲಿ ಕೆಲವು ಬೃಹತೀ ಸಹಸ್ರ ಛಂದಸ್ಸು ಶ್ರುತಿಗಳ ಟೀಕಾ ಉಪಲಬ್ಧವಿಲ್ಲದ ಕಾರಣ ಸಾಮಾನ್ಯವಾಗಿ ವಿರೋಧ ಬಾರದಂತೆ ಅರ್ಥ ಬರೆದಿರುವರು. ಕನ್ನಡ ಅನುವಾದ ಕಾಲದಲ್ಲಿ ಬಹು ಜಾಗ್ರತೆ, ಕೌಶಲ್ಯ, ಜಾಣಾಕ್ಷತನ, ಮರೆಯದೇ ಪಾಂಡಿತ್ಯಪೂರ್ಣತೆಯ ಅನುವಾದವಿದೆ.

ಮೊದಲನೆಯ ಆಕ್ಷೇಪದಲ್ಲಿ ಎರಡು ಅಂಶಗಳು. ೧ ಮುಕ್ತಿಸಾಧನ

ಅಪರೋಕ್ಷಕ್ಕೆ ಸಂತತ ಶಾಸ್ತ್ರಶ್ರವಣ ಮನನವೇ ಮುಖ್ಯವಾದುದು. ಧ್ಯಾನ ಬೇಕಾಗಿಲ್ಲ. ೨. ಧ್ಯಾನವು ಅಮುಖ್ಯವಾದುದೆಂದು ಹೇಳುವರು. ಸಂತತ ಶಾಸ್ತ್ರಾಸ್ತ್ರ ಅಭ್ಯಾಸದಿಂದಲೇ ಅಪರೋಕ್ಷವಾಗುವದು. ಇದು ಈಗಿನ **ಪಂಡಿತರ ಅಭಿಪ್ರಾಯ.**

೨. ಧ್ಯಾನವೇ ಮುಖ್ಯ ಧ್ಯಾನದಿಂದಲೇ ಅಪರೋಕ್ಷವಾಗುವುದು ಕೇವಲ ವಿಷ್ಣುಶಾಸ್ತ್ರಾವಮರ್ಶನದಿಂದ ನಿಶ್ಚಿತತತ್ವವಲ್ಲದೇ ಅಪರೋಕ್ಷವಾಗುವುದಿಲ್ಲ. ಹೀಗೆ ಕೆಲಪಂಡಿತರು ದಾಸರ ಪಂಗಡವು ಬೇರೆ ತಿಳಿದಿವೆ. ಎರಡು ಪಂಗಡವೂ ಬೇರೆ ತಿಳಿದು ವಾದಿಸುವದು ನಿರರ್ಥಕವಾದವಿದೆ. ಒಬ್ಬ ಮುಕ್ತಿಯೋಗ್ಯನಾದ ಸಾಧಕನಿಗೆ ಅಪರೋಕ್ಷವಾಗಲು ೧೧೩ ಜನ್ಮ ಸಂತತ ಎಡಬಿಡದೇ ಸಾಧನಬೇಕು. ಎಷ್ಟೋ ಜನ್ಮ ಶ್ರವಣ ಕೆಲ ಜನ್ಮಗಳಲ್ಲಿ ಮನನ ಕೆಲಜನ್ಮಗಳಲ್ಲಿ ಧ್ಯಾನ ಹೀಗಿರಲು (ತಿಳಿಯದೇ ಉಭಯ ಪಂಥದವರು ಸಿಕ್ಕಂತೆ ಮನ ಬಂದ ಹಾಗೆ ಶುಷ್ಕವಾದ) ವಾದಿಸುವದು ಸರಿಯಲ್ಲ. ಶ್ರೀ ಆಚಾರ್ಯರ ಶಾಸ್ತ್ರದಂತೆ ದಾಸರು ಗ್ರಂಥ ರಚಿಸಿದ್ದಾರೆ. ಶ್ರೀ ಕರ್ಜಗಿ ದಾಸಾರ್ಯರು ಫಲಶ್ರುತಿ ಸಂಧಿ ಪದ್ಯ ೬ರಲ್ಲಿ "ಶ್ರುತಿಗೆ ಶೋಭನವಾಗವಡೆ ಜಡಮತಿಗೆ ಮಂಗಳವೀಯುವಡೆ ಶ್ರುತಿ ಸ್ಮೃತಿಗೆ ಸಮ್ಮತವಾಗದಿದ್ದಡೆ ನಮ್ಮ ಗುರುರಾಯ ॥ **ಮಥಿಸಿ ಮಧ್ವಾಗಮಪಯೋಬ್ಧಿಯ । ಕ್ಷಿತಿಗೆ ತೋರಿದ ಬ್ರಹ್ಮವಿದ್ಯಾ । ರತರೀಗಿಪ್ಸಿತ ಹರಿ ಕಥಾಮೃತಸಾರವೆನಿಸುವದು ॥ ೬ ॥**

ಶ್ರೀಮದಾಚಾರ್ಯರ ಮತ್ತು ದಾಸರು ಪುರಂದರದಾಸಾದಿಗಳ ಅಭಿಪ್ರಾಯ ಬೇರೆ ಇಲ್ಲ. ಆಚಾರ್ಯರು ಸರ್ವಜ್ಞರ ಅವತಾರ. ಅನಂತರ ಸಂಸ್ಕೃತ ಜ್ಞಾನವು ವಿಶೇಷ ಕಡಿಮೆಯಾದ ಕಾರಣ ದೇವಾಂಶರೇ ದಾಸರಾಗಿ ಅವತರಿಸಿ ಕರ್ನಾಟಕ ನಾಡಿನಲ್ಲಿ ಮಧ್ಯಮಾಧಿಕಾರಿ ಜೀವರಿಗೆ ಜ್ಞಾನವೀಯಲೋಸುಗ ಸ್ವಾಮಿಗಳೂ ಸಂಸ್ಕೃತ ಪಂಡಿತರಾದ ೧. ಶ್ರೀಪಾದರಾಜರು. ೨. ಶ್ರೀ ವ್ಯಾಸರಾಜ ಪ್ರಭೃತಿಗಳು. ೩ ಶ್ರೀ ಸ್ವಾದಿ ಗುರುರಾಜರು ಕನ್ನಡ ನುಡಿಗಳಲ್ಲೇ ತತ್ವಶಿಕ್ಷೆಯು ಮಾಡಿ ಕೊಟ್ಟಿದ್ದಾರೆ. ದೇಶ ಕಾಲಾನುಸರಿಸಿ ಜೀವರಧಿಕಾರಾನುಸಾರ, ಜ್ಞಾನವೇ ಮುಖ್ಯವಾದುದು. ಸಂಸ್ಕೃತ ಭಾಷೆಯೇ ಜ್ಞಾನವೇ ತತ್ವನಿಷ್ಠೆ ಮುಕ್ತೆ

ಕಾರಣವಲ್ಲ. ಕೇವಲ ಶ್ರವಣ ಶಾಸ್ತ್ರಾರ್ಥ ವಿಚಾರವೂ ವಾದಿನಿಗ್ರಹಾದಿ ಘಟಪಟ ಶಬ್ದಾದಿಗಳ ಬಹಿರಂಗ ಶಬ್ದಾಡಂಬರದಿಂದ ನಿಶ್ಚಯವಾಗುವದಿಲ್ಲ. ಇದನ್ನು ಈಗಿನ ಸಂಸ್ಕೃತ ಪಂಡಿತರು ನೆನಪಿನಲ್ಲಿಡತಕ್ಕದ್ದಾಗಿದೆ. ಮತ್ತು ತತ್ವನಿಶ್ಚಯಾರ್ಥವಿಲ್ಲದೇ ಸಂತೇಕೂಟವ ಆಧುನಿಕ ದಾಸರ ಬಕಧ್ಯಾನವೂ ಸರಿಯಲ್ಲ. ನಿಜವಾದ ವೃಥವಾದ, ದಾರ್ಢ್ಯ ತತ್ವ ನಿಶ್ಚಯ ಆಚಾರ್ಯರೂ, ದಾಸರೂ ಅಂತಹ ಜ್ಞಾನಿಗಳು ಕಣ್ಮರೆಯಾಗಿ ೬೦ ವರ್ಷ ಮೇಲಾಗಿದೆ. ಕಾಲಾಯ ತಸ್ಮೈ ನಮಃ ಬ್ರಹ್ಮದರ್ಶನಕ್ಕೆ ಮುಖ್ಯ **ಮೊದಲು** (೧) ಜ್ಞಾನಗೋಸುಗ ಶ್ರವಣ ಸದ್ಗುರುಗಳಿಂದ **ಮಾಡುವದು. ಇದಕ್ಕೆ ತತ್ವನಿಶ್ಚಯವೇ ಫಲ.** ೨. ಇಲ್ಲಿಂದ ಮನನ **ವೆಂದರೆ ಶ್ರವಣಮಾಡಿದ್ದೇ ಪುನಃ ಪುನಃ ಅವಿರೋಧವಾದ ವೇದಾರ್ಥ ವಿಚಾರಕ್ಕೆ ಅಜ್ಞಾನ** ವಿಪರ್ಯಯ ಪ್ರತಿಬಂಧಕನಿರಸನ-ಧ್ಯಾನಕ್ಕೆ ಸಾಧನ **ಅಂಗಭೂತವಾಗಿರುವವು ಹೊರ್ತಾಗಿ** ಸಾಕ್ಷಾತ್ ಬ್ರಹ್ಮದರ್ಶನ ಅಪರೋಕ್ಷಜ್ಞಾನಕ್ಕೆ ಮುಖ್ಯಕಾರಣವಲ್ಲ. ಶ್ರವಣ ಮನನ ನಂತರ ತತ್ವ ನಿಶ್ಚಯದ್ವಾರಾ.

೩) ಧ್ಯಾನೋಪಾಸನೆಯೇ ಮುಖ್ಯವಾದುದು ಧ್ಯಾನವೆಂದರೆ ವಿಷಯ ವಾಸನೆಗಳನ್ನು ಬಿಟ್ಟು ದ್ರವ್ಯ ಸ್ತ್ರೀ ಪುತ್ರಾದಿಗಳಲ್ಲಿ ಮಮತಾ ರಹಿತರಾಗಿ ಯಮನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರಾದಿ ಗಳಿಂದ ಚಿತ್ತೈಕಾಗ್ರತೆಯಿಂದ ಗುರುಪ್ರಸಾದದಿಂದ ಭಗವಂತನ ಅಖಂಡೋಪಾಸನೆ ಧಾರಣಯೋಗವೆ ಹರಿಯ ಸಾಕ್ಷಾತ್ ಕಾರಕ್ಕೆ ಮುಖ್ಯ

ಆದರೆ ಶ್ರವಣ ಮನನಾದಿಗಳೇತಕ್ಕೆ ಮಾಡುವದೆಂದರೆ ಶ್ರೋತವ್ಯೋ ಮಂತವ್ಯೋ-ನಿದಿಧ್ಯಾಸಿತವ್ಯ ಎಂಬ ಶ್ರುತ್ಯರ್ಥ ಶ್ರವಣ ಮನನಗಳು ಧ್ಯಾನಾಂಗ ಸಹಿತವಾಗಿ ಧ್ಯಾನ ಮಾಡುವದೆಂದು ಸಕಲ ಶಾಸ್ತ್ರಾರ್ಥ ನಿರ್ಣಯ. ಸಂಸ್ಕೃತ ಪಂಡಿತರಿಗೋಸುಗ ಸಕಲ ಗ್ರಂಥಗಳ ಪ್ರಮಾಣ ಕೊಡಲಾಗಿದೆ. ತತ್ವನಿಶ್ಚಯ ಮಾಡಲು ಪ್ರಾರ್ಥನೆ. ಸರ್ವಜ್ಞರ ಟೀಕಾ ಟಿಪ್ಪಣಿ ಸುಧಾದಿ ಗ್ರಂಥಗಳ ಪ್ರಮಾಣಗಳು ಕೊಟ್ಟಿದೆ.

೧. **ತಂತ್ರಸಾರದಲ್ಲಿ.** ೧೪೩ ನೇ ಶ್ಲೋಕದಲ್ಲಿ ಏಕಂ ಧ್ಯಾನಂ

ಷರೀರಸ್ಯಚ್ಛತ್ವಾರ್ಯರ್ಜಂಗಾನಿ ತಸ್ಯ ಚ ॥ ಯಮಶ್ಚ ನಿಯಮಾಶ್ಚಾಸೌ ಪ್ರಾಣಾಯಾಮ ಇತೀರಿತಃ ॥೧೪॥ ಎಂದು ಅಪ್ಪಣೆ ಕೊಡಿಸಿದಂತೆ ಟೀಕಾಕಾರರು ಶ್ರವಣ ಮನನಾದಿಗಳಿಂದ ತತ್ವನಿಶ್ಚಯ ವಿಪರೀತ ಜ್ಞಾನ ನಾಶನಂತರ ಯಮ ನಿಯಮಾದಿಗಳ ಧ್ಯಾನದಿಂದ ಸಮಾಧಿ ಸಾಕ್ಷಾದ ಪರೋಕ್ಷ ಜ್ಞಾನರೂಪ ಬ್ರಹ್ಮದರ್ಶನ ಪಾರಂಪರ್ಯದಿಂದ ಅಂದರೆ ಶಾಸ್ತ್ರ ಶ್ರವಣದಿಂದ ತತ್ವನಿಶ್ಚಯ ಮನನದಿಂದ ವಿಪರೀತ ಜ್ಞಾನ ಪರಿಹಾರ ಪೂರ್ವಕ ವೇದಾರ್ಥನಿಶ್ಚಯ "ತಸ್ಯೈವ ಅಪರೋಕ್ಷಜ್ಞಾನಸಾಧನತ್ವಾತ್" ಎಂಬಂತೆ ಶಾಸ್ತ್ರ ಶ್ರವಣಮನನಾದಿಗಳು ಧ್ಯಾನಕ್ಕೆ ಸಾಧನವಾದವು ಎಂದು ಹೇಳಿದ್ದಾರೆ. ೧೪೩ ಶ್ಲೋಕದಲ್ಲಿಯೂ ಶ್ರವಣಮನನಾದನು ॥ ಅಂದರೆ ಶ್ರವಣಮನನಾಂತರದಲ್ಲಿಯೇ ಧ್ಯಾನವನ್ನುಹೇಳಿದ್ದಾರೆ. ದ್ವಿವಿಧಾ ಎಂಬಲ್ಲಿ ಹೀಗೆ ಅರ್ಥ ಮಾಡಿದ್ದಾರೆ ಹೊರ್ತಾಗಿ ಕೇವಲ ವೈಷ್ಣವ ಶಾಸ್ತ್ರವೇ ಮುಖ್ಯವಾಗಿ ಅಪರೋಕ್ಷ ಜ್ಞಾನಕ್ಕೆ ಸಾಕ್ಷಾತ್‌ಕಾರಣವಾದುದಲ್ಲ. "ದರ್ಶನಾರ್ಥಂಹ್ಯುಪಾಸನಂ । ತಚ್ಚ ಶ್ರವಣಾದೇರೇವ ಭವತಿ ಅಥ ಕಿಮರ್ಥ ಮಿತ್ಯತ್ರೋಚ್ಯತೇ

೨. ಬ್ರಹ್ಮಸೂತ್ರ ಅಧ್ಯಾಯ೩ ಪಾದ೩ ಸೂತ್ರ ೪೩ರಲ್ಲಿಯೂ ಸರ್ವಜ್ಞರು ಶ್ರೀ ಬಾದರಾಯಣರ ಸೂತ್ರ "ಓಂ ತನ್ನಿರ್ಧಾರಣಾರ್ಥ ನಿಯಮಸ್ತದ್ದೃಷ್ಟೇಃ ಪೃಥಗ್ಘ್ಯ ಪ್ರತಿಬಂಧಃ ಫಲಂ ॥ ಓಂ ॥

**ಸೂತ್ರ ಭಾಷ್ಯ** :—(೧) ತತ್ವನಿಶ್ಚಯೋ ವೇದಾರ್ಥ ನಿಯಮಶ್ಚ ಬ್ರಹ್ಮದೃಷ್ಟೇಃ ಪೃಥಗೇವ

(೨) ಹಿತಬ್ದೇನಾsತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ, ನಿದಿಧ್ಯಾಸಿತವ್ಯಃ(ಬ್ರ. ೪–೪–೫) ಇತಿ ಶ್ರುತಿಂ ಸೂಚಯತಿ॥

(೩) ಶ್ರವಣಾದಿ ಫಲಂ ಚಾಜ್ಞಾನ ವಿಪರ್ಯಾದಿ ದರ್ಶನ ಪ್ರತಿಬಂಧ ನಿವೃತ್ತಿಃ

(೪) ಬ್ರಹ್ಮತರ್ಕೇ ಚ॥ಶ್ರುತತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನ ವಿಪರ್ಯಯೌ ॥ ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಮಿತಿ॥ ಭಾಷ್ಯಕಾರರ ಸಾಕ್ಷಾತ್ ಶಿಷ್ಯರ—

೪. **ಪ್ರಥಮ ಟೀಕಾ ತತ್ವ ಪ್ರದೀಪ –ತಾರತಮ್ಯ ಜ್ಞಾನ**

ಪೂರ್ವಕಂ ಸಪರಿವಾರಸ್ಯ ವಿಷ್ಣೋರುಪಾಸನ ಮಿತಿದರ್ಶಿತಮ್ ॥ ತಚ್ಚೋಪಾಸನಂ ಹರೇರ್ದರ್ಶನಾರ್ಥಂ ಹೀಷ್ಯತೇ । ತತ್ರ ಶ್ರವಣ ಮನನಯೋಃ ಫಲಂ ವಾಚ್ಯಂ।ಪೃಥಕ್ ಫಲಾಭಾವೇ ತಯೋರಪಿ ದರ್ಶನ ಮೇವೇತಿ ಕಿಮರ್ಥಮೇತತ್ ॥ ತಯೋಶ್ಚ ಪ್ರಥಮಮೇವ ಸ್ಯಾತ್ ॥ ತೇನಾಪಿ ದರ್ಶನ ಸಂಭವಾತ್ । ನ ಚಾಗ್ನಿ ಹೋತ್ರಾಗ್ನಿಷ್ಟೋಮಾದಿವತ್ ಬಹೂನಾಮನುಷ್ಠಾನಮ್ ॥ ದೃಷ್ಟಫಲೇ ಫಲನಿಷ್ಪತ್ತಾವಿತರವೈಯ್ಯ-ರ್ಥ್ಯಾತ್ । ಅತಿಶಯಾರ್ಥತ್ವೇ ಪ್ರಥಮಾವೃತ್ತ್ಯಾಪಿ ತದ್ವ್ಯಕ್ತೇರಿತ್ಯತ ಆಹ । ತನ್ನಿರ್ಧಾರಣೇತ್ಯಾದಿ ಸೂತ್ರಮ್ ॥ ತತ್ವನಿಶ್ಚಯ ಇತ್ಯಾದೇರಯಂ ಭಾವ "ಆತ್ಮಾ ವಾ ಅರೆದೃಷ್ಟವ್ಯ" ಇತ್ಯುಕ್ತ್ವಾ ತದ್ದರ್ಶನಾರ್ಥ ಮೇವ "ಶ್ರೋತವ್ಯೋ ಮಂತವ್ಯ ನಿದಿಧ್ಯಾಸಿತವ್ಯ" ಇತಿ ವಿಧೀಯಂತೇ। ನೈಕಮೇವ । ನ ಚ ವಿಕಲ್ಪ್ಯಂತೇ । ಅತೋ ನೈಕಫಲತ್ವಂ ಶ್ರವಣಾದೀನಾಂ ಕಲ್ಪ್ಯಮ್ । ಪ್ರಥಗ್ ವಿಧಿವಿರೋಧಾತ್ । ಸಮಸ್ತ ಗುಣ ಪರಿಪೂರ್ಣೋ ನಾರಾಯಣ ಇತ್ಯಯಮೇವ ವೇದಾರ್ಥ ಇತಿ ಜ್ಞಾನಂ ॥ ವೇದಾರ್ಥ ನಿಯಮಃ । ಉಪಪನ್ನ ಏವೈಂ ಭಾವ ಇತ್ಯಧಿಗಮಸ್ತತ್ವ ನಿಶ್ಚಯಃ । ತೌ ಬ್ರಹ್ಮದೃಷ್ಟೇಃ ಪೃಥಗೇವ ॥ ತತ್ಸಾಧನೋಪಾಸನಾ ಪೂರ್ವಭಾವಿನೌ ಶ್ರವಣ ಮನನಯೋಃ ಫಲಂ ॥ ತತ್ರಾಜ್ಞಾನ ನಿವೃತ್ತಿ ಸ್ತದ್ವಿಪರ್ಯಯ ಪ್ರತೀತಿ ನಿವೃತ್ತಿಶ್ಚ । ವೇದಾರ್ಥ ನಿಯಮೋ ಜ್ಞಾನ ನಿವೃತ್ತಿ ರೂಪಃ ॥ ತತ್ವನಿಶ್ಚಯೋ ವಿಪರ್ಯಯ ನಿವೃತ್ತಿರೂಪಃ ತತ್ರಾಜ್ಞಾನಂ ತದನುಪಪತ್ತಿಶ್ಚ ಹಿ ದೃಷ್ಟಿಸಾಧನೋಪಾಸ್ತಿ ಪ್ರತಿ-ಬಂಧೌ । ತತ್ವನಿಶ್ಚಯವತೋಪಿ ಪರೋಕ್ಷಾತ್ಕಶ್ಚಿತ್ ಸಂಶಯೋ ಭವತ್ಯಾದೃಷ್ಟೇಃ । ದರ್ಶನೇ ಕೀದೃಶೋ ನು ಭವೇದಿತಿ । ತದೇತದಾಹ ॥

"ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನ ವಿಪರ್ಯಯೌ ॥
ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಮಿತಿ ॥
ಅತಃ ಶ್ರವಣ ಮನನವತೋಪಾಸನಾ ಕಾರ್ಯೇತಿ ಸಿದ್ಧಮ್ ॥

ತತ್ವಪ್ರಕಾಶಿಕಾ :— ಟೀಕಾದಲ್ಲಿಯೂ,

ಅತ್ರ ಭಗವತ್ ಜ್ಞಾನ ಸಾಧನೋಪಾಸನಸ್ಯ ಸಮಸ್ತಸ್ಯಾಪಿ ಕರ್ತ-ವ್ಯತಾ ಸಾಧನಾದಸ್ತಿ ಶಾಸ್ತ್ರಾದಿಸಂಗತಿಃ ॥ ಅನ್ಯಥಾ ಸಮಸ್ತೋಪಾಸ್ತಿ

ವಿಧಾನವೈಯರ್ಥ್ಯಾಪತ್ತೇಃ ಸಾ ಸಮರ್ಥನೀಯಾ॥ **ಪ್ರಕೃತೋಪಾಸನ ನೇವ ವಿಷಯಃ**॥ ಕಿಂ ಸಮಸ್ತಂ ಕರ್ತವ್ಯಂ ವ್ಯಸ್ತಮೇವೇತಿ ಸಂದೇಹಃ॥ ವಿಧೇಃ ಪಕ್ಷದ್ವಯ ಸಾಧಾರಣ್ಯಂ ಸಂದೇಹ ಬೀಜಮ್॥ಪೂರ್ವಪಕ್ಷಯತಿ॥ **ದರ್ಶನಾರ್ಥಮಿತಿ** ॥ ವ್ಯಸ್ತಮೇವೋಪಾಸನಂ ಕರ್ತವ್ಯಮ್ ತಥಾ ಹಿ ಉಪಾಸನಂ ತಾವದ್ಭಗವದ್ದರ್ಶನಾರ್ಥಂ ನ ಚ ಪ್ರಯೋಜನಾಂತರಂ ದೃಷ್ಟಮಿಷ್ಟಂ ವಾ ॥ ತಚ್ಚ ದರ್ಶನಂ ಶ್ರವಣ ಮನನಾಭ್ಯಾಂ ಭವಿಷ್ಯತಿ ಕಿಂ ಧ್ಯಾನೇನ॥ ಅಥೋಚ್ಯೇತ । ಜ್ಞಾನ ಪ್ರತಿಬಂಧಕಸ್ಯ ದೃಢತ್ವಾದ್ಧ್ಯಾನಾ ದೇವ ದರ್ಶನಮಿತಿ ॥ ತಥಾ ಸತಿ ಧ್ಯಾನೇ ನೈವ ದರ್ಶನ ಸಂಭವಾದಲಂ ಶ್ರವಣಾದಿನಾ ॥ ನಚೋಭಯ ಸಮುಚ್ಚಯೇ ನೈವ ದರ್ಶನಮಿತಿ ಮಾನಮಸ್ತಿ ॥ ನ ಚೋ ಭಯೋರಪಿ ಕೃತ್ಯಂ ಪಶ್ಯಾಮಃ ॥ **ಅತಃ** ಸಮಸ್ತೋಪಾಸನಸ್ಯಾ ಕರ್ತವ್ಯತ್ವಾದ್ವ್ಯರ್ಥಂ ತದ್ವಿಧಾನಮಿತಿ ಭಾವಃ ॥

"ಸಿದ್ಧಾಂತಯತ್ಯತ್ರ ಮತಾರ್ಯವ್ಯಾಚಷ್ಟೇ ಅತ್ರೇತಿ ॥
ಕರ್ತವ್ಯಮೇವ ಸಮಸ್ತೋಪಾಸನಂ ನ ಶ್ರವಣ ಮನನ ಮಾತ್ರಮ್॥
ಶ್ರವಣಾದಿ ಮಾತ್ರೇಣ ದರ್ಶನಾ ಭಾವಾತ್ ॥
ತತ್ವಜ್ಞಾನಂ ಹಿ ಶ್ರವಣ ಫಲಮ್ ॥
ಅಯಮೇವ ವೇದಾರ್ಥೋನಾನ್ಯ ಇತಿನಿರ್ಣಯಸ್ತು ಮನನಫಲಮ್॥
ತದುಭಯಂ ಚ ಬ್ರಹ್ಮದರ್ಶನಾತ್ಪೃಥಗೇವ ॥
ಅತೋಧ್ಯಾನಂ ದರ್ಶನಾರ್ಥಂ ಕರ್ತವ್ಯಮಿತಿ ಭಾವಃ ॥"

ನನು ಧ್ಯಾನಾದೇವ ಚೇತಿ ಭಗವದ್ದರ್ಶನಂ ಕಿಂ ತರ್ಹಿ ಶ್ರವಣ ಮನನಾಭ್ಯಾ ಮಿತ್ಯತ ಆಹ॥ ಹಿ ಶಬ್ದೇನೇತಿ॥ ಜ್ಞಾನಾರ್ಥಂ ತ್ರಯಸ್ಯಾಪಿ ವಿಹಿತತ್ವಾತ್ಸರ್ವಮುಪಾಸನಂ ಕರ್ತವ್ಯಮಿತಿಭಾವಃ॥ ನನು ಶ್ರೌತೋಪಿ ಸಮುಚ್ಚಯಃ ಕಥಮಂಗೀಕರ್ತುಂ ಶಕ್ಯತೇ ॥ ಧ್ಯಾನಾದೇವ ದರ್ಶನ ಸಂಭವಾತ್ ॥ ನ ಚ ಜ್ಞಾನೋದಯೋಪಯೋಗಿತಯಾ ಶ್ರವಣಾದೇಃ ಕರ್ತವ್ಯತಾ ॥ ಶ್ರವಣಾದೇಃ ಫಲಾಂತರಸ್ಯೈವೋಕ್ತತ್ವಾದಿತ್ಯತ ಆಹ ॥ ಶ್ರವಣಾದಿತಿ ॥ ಕರ್ತವ್ಯಮೇವ ಸಮಸ್ತೋಪಾಸನಂ ಶ್ರವಣಾದೇರಪಿಧ್ಯಾನ ಫಲದರ್ಶನೋಪಯೋಗಿತ್ವಾತ್ ॥ ತಥಾಹಿ ॥ ಭಗವದ್ದರ್ಶನಸ್ಯ ತಾವದ್ ಜ್ಞಾನ ಸಂಶಯ ವಿಪರ್ಯಾಸಾಃ ಪ್ರತಿಬಂಧಕಾಃ (ಗ) ತತ್ರ **ಶ್ರವಣಂ**

ತತ್ವಜ್ಞಾನಮುತ್ಪಾದ್ಯಾಜ್ಞಾನಂ ನಿವರ್ತಯತಿ ॥ (೨) ಮನನಂ ವೇದಾರ್ಥನಿರ್ಣಯಂ ಕುರ್ವತ್ಸಂಶಯವಿಪರ್ಯಯೌ ನಿವರ್ತಯತಿ॥ ಅತಃ ಪ್ರತಿಬಂಧಕ ನಿವರ್ತಕತಯಾ ಜ್ಞಾನೋಪಯೋಗಿತ್ವಾತ್ಸಮಸ್ತೋಪಾಸನಮಪೇಕ್ಷಿತಮಿತಿ ಭಾವಃ ॥ ಅತ್ರ ಸ್ಮೃತಿಂ ಚಾಹ ॥ ಬ್ರಹ್ಮತರ್ಕೇ ಚೇತಿ ॥ ಅತಃ ಸರ್ವೋಪಾಸನಸ್ಯ ಕರ್ತವ್ಯತ್ವಾದುಕ್ತಂ ಯುಕ್ತಮಿತಿ ಸಿದ್ಧಮ್ ॥ ೪೩ ॥ ೨೫ ಅ)

**ಶ್ರೀ ಸ್ವಾದೀ ಗುರುರಾಜೀಯ** ತತ್ವಪ್ರಕಾಶಿಕಾಯಾಃ **ಟಿಪ್ಪಣೀ ಗುರ್ವರ್ಥದೀಪಿಕಾ — ಅನ್ಯಥಾ ಸಮಸ್ತೋಪಾಸ್ತಿ** ವಿಧಾನ ಇತ್ಯತ್ರ ಸಮಸ್ತೋಪಾಸ್ತಿಃ **ಶ್ರವಣ ಮನನ ನಿದಿಧ್ಯಾಸನ ರೂಪೇ**ತ್ಯರ್ಥಃ ॥ ಅಲಂ ಶ್ರವಣಾದಿನೇತ್ಯಸ್ಯ ಧ್ಯಾನಾರ್ಥಮಸ್ತು ಶ್ರವಣಾದಿಕಂ ಶ್ರವಣಾದಿನಾ ಅಲಮ್-ಅಪರೋಕ್ಷದರ್ಶನಾಯಾಲಂ ತದ್ಧೇತುತಾ ನಾಸ್ತೀತ್ಯರ್ಥಃ ॥ ಶ್ರವಣಫಲಂ ಮನನಫಲಮಿತ್ಯತ್ರ ಸಾಕ್ಷಾದಿತಿ ಶೇಷಃ ॥ ಅನ್ಯಥಾ ಪ್ರತಿಬಂಧಸ್ಯಾಪಿ ಶ್ರವಣ ಮನನ ಫಲತ್ವಸ್ಯ ವಕ್ಷ್ಯಮಾಣತ್ವಾದ್ವಿರೋಧಃ ಸ್ಯಾತ್ । ಏವಂ ಚ ತನ್ನಿರ್ಧಾರಣಂ ॥

“ತತ್ವನಿರ್ಧಾರಣಂ ತೇನ ಸಹಿತೋಽರ್ಥನಿಶ್ಚಯಃ ।
ವೇದಾರ್ಥನಿಶ್ಚಯಶ್ಚೇತಿ ಶ್ರವಣ ಮನನ ಸಾಕ್ಷಾತ್ಫಲಂ
ಬ್ರಹ್ಮದೃಷ್ಟೇಃ ಪೃಥಗೇವ ॥
ಅತೋ ಬ್ರಹ್ಮದೃಷ್ಟೇಃ ಸಾಕ್ಷಾತ್ ಸಾಧನಂ ಧ್ಯಾನಮೇವೇತಿ ಭಾವಃ॥

ತರ್ಹಿ ತಯೋರ್ವೈಯರ್ಥ್ಯಮಿತ್ಯತ ಉಕ್ತಂ **ಅಪ್ರತಿಬಂಧಃ** ಫಲಮಿತಿ । ಬ್ರಹ್ಮದರ್ಶನೋಪಯೋಗಿ ಪ್ರತಿಬಂಧನಿರಾ**ಸಾಖ್ಯಾವಾಂತರ ಫಲಾಯ ಕರ್ತವ್ಯಮ್** । ತದ್ವಾರಾ ಬ್ರಹ್ಮದರ್ಶನಯೋಗಿತ್ವಮಸ್ತಿ ॥ ನ ತು ಧ್ಯಾನವತ್ ಸಾಕ್ಷಾತ್ । ಇದಂ ಚೋಪಲಕ್ಷಣಮ್ । ಶ್ರುತಾ ನಿಶ್ಚಿತಾರ್ಥ ಧ್ಯಾನಯೋಗಾತ್ ಸಾಕ್ಷಾತ್ ದೃಷ್ಟಿಸಾಧನ **ಧ್ಯಾನಹೇತು ತಯಾ**ಪ್ಯುಪಯೋಗ ಇತ್ಯಪಿ ದ್ರಷ್ಟವ್ಯಮ್ ॥

ಪ್ರತಿಬಂಧಕ ನಿವರ್ತಕತಯಾ ಜ್ಞಾನೋಪಯೋಗಿತ್ವಾದಿತ್ಯತ್ರ

ಜ್ಞಾನಮುತ್ಪಾದ್ಯ ತಾದರ್ಥ್ಯೇನ ಶ್ರವಣಾದಿ ತ್ರಿಕಸ್ಯಾಪಿ ವಿಹಿತತ್ವಾತ್ತಸ್ಯ ಪ್ರತಿಬಂಧನಿರಸನ ಮಾತ್ರೇಣ ಚರಿತಾರ್ಥತೇತಿ ಭಾವಃ ||

ಉಪಾಸನೇತಿ ಕರ್ತವ್ಯತಾ ಸಾಧನಾದಿತ್ಯತ್ರ "ಉಪಾಸನಸ್ಯ ಗುರು ಪ್ರಸಾದ ಪೂರ್ವಕ ಪ್ರಧಾನಾಖ್ಯೇತಿಕರ್ತವ್ಯತಾ ಸಾಧನಾದಿತ್ಯರ್ಥಃ |"

ನಿತ್ಯೈಕಾಗ್ರ್ಯ ವ್ಯಂಗತಾಹೇತುತಶ್ಚೇತ್ಯತ್ರ ಏಕಾಗ್ರಚಿತ್ತಸ್ಯ ಭಾವಃ ಏಕಾಗ್ರ್ಯಂ ಧ್ಯಾನಮಿತಿ ಯಾವತ್ |" ನಿತ್ಯಮೈಕಾಗ್ರ್ಯೇ ಕೃತೇ ಸತಿ ಯಸ್ಯ ಗುಣಸ್ಯ ವ್ಯಂಗ್ಯತಾ ತಸ್ಯೈವೋಪಾಸ್ಯತೇತಿ ಹೇತೋರಿತ್ಯರ್ಥಃ"

ಇದೇ ವಿವರವನ್ನೇ ಸೂತ್ರಾರ್ಥಸಂಗ್ರಹದಲ್ಲಿ ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರು **ತಂತ್ರದೀಪಿಕಾದಲ್ಲಿ ಅಪ್ಪಣೆ ಕೊಡಿಸಿದ್ದೇನೆಂದರೆ—**

**ತಂತ್ರದೀಪಿಕಾ**—ಶ್ರವಣ ಮನನೋಪಾಸ್ತೀನಾಂ ತಿಸೃಣಾಮಪಿ **ಕರ್ತವ್ಯತ್ವಂ** ಸಾಧ್ಯತೇ || ಹಿಃ ಶ್ರುತಿ ಸೂಚಕಃ | ಫಲಮಿತ್ಯಾವರ್ತತೇ | **ತ**ದ್ದೃಷ್ಟೇರಿತ್ಯಪಿ ತನ್ನಿರ್ಧಾರಣಂ ತದಿತಿ ವೇದಬೋಧ್ಯ ತತ್ತ್ವಪರಾಮರ್ಶಃ | ಭಾವಪ್ರಧಾನಂ **ವಾ** | ಇಯದಿತ್ಯಾದಿನಾ ಪೂರ್ವಪ್ರಕೃತ ಪರಾಪರ ತತ್ತ್ವ ಪರಾಮರ್ಶೋ ವಾ ಅಯಮಸ್ಯಾರ್ಥ ಇತಿ ತತ್ತ್ವನಿಶ್ಚಯ ಇತ್ಯರ್ಥಃ | ತೇನ ಸಹಿತೋऽರ್ಥನಿಯಮಃ| **ಅಯಮೇವ ವೇದಾರ್ಥೋ ನಾನ್ಯ ಇತಿ ನಿಶ್ಚಯೋऽರ್ಥನಿಯಮಃ** | ಶ್ರವಣ ಮನನ ಫಲರೂಪಂ **ತದ್ದ್ವಯಮಪಿ** ತದ್ದೃಷ್ಟೇರ್ನೇತಿ ಪ್ರಸ್ತುತ **ಬ್ರಹ್ಮಣೋ ದರ್ಶನಾತ್ ಧ್ಯಾನಸಾಧ್ಯಾ ಪೃಥಕ್** |ಅತಸ್ತಾಭ್ಯಾಂ ದೃಷ್ಟ್ಯಸಿದ್ಧೇ**ರ್ದೃಷ್ಟ್ಯರ್ಥಂ ಧ್ಯಾನಂ ಕಾರ್ಯಮಿತಿ ಭಾವಃ** || ಮುಕ್ತಿಹೇತು ದೃಷ್ಟೇರ್ಧ್ಯಾನಾದೇವ ಸಿದ್ಧೌ ಕಿಂ ತಾಭ್ಯಾಮಿತ್ಯತ ಉಕ್ತಂ | ಹೀತಿ | ಶ್ರೋತವ್ಯ ಇತಿ ಶ್ರುತೌ **ದೃಷ್ಟ್ಯರ್ಥಂ** ತ್ರಯಸ್ಯಾಪಿ ವಿಹಿತತ್ವಾದಿತ್ಯರ್ಥಃ | ವಿಧಾನೇऽಪಿ ಕಥಂ ಯುಕ್ತಮಿತ್ಯತ ಉಕ್ತಂ | ಅಪ್ರತಿಬಂಧಃ ಫಲಂ ತದ್ದೃಷ್ಟೇಃ ಸಂದೇಹ ವಿಪರ್ಯಯ ಕೃತಪ್ರತಿಬಂಧಾಭಾವಃ ಫಲಂ ಶ್ರವಣಮನನಯೋರಿತ್ಯರ್ಥಃ ಸಾಕ್ಷಾದ್ದೃಷ್ಟಿ ಸ್ವರೂಪಾ ಜನನೇऽಪಿ ತತ್ಪ್ರತಿಬಂಧನಿರಾಸದ್ವಾರಾ ತತ್ರ

ವ್ಯಾಪ್ರಿಯತೇ ಇತಿ ಯುಕ್ತಂ ತಾದರ್ಥ್ಯವತ್ ॥ ಶ್ರುತ್ವಾ ಮತ್ವಾ ತಥಾ ಧ್ಯಾತ್ವೇತ್ಯಾದೇರಿತಿ ಭಾವಃ । ಪ್ರತಿಬಂಧಃ ಪ್ರತಿಬಂಧಕ ಇತಿ ಸಂಬಂಧಾ ದೀರ್ವಾ । ತದ್ದೃಷ್ಟೇರ್ಯಪ್ರತಿಬಂಧಃ **ಫಲಮಿತ್ಯುಕ್ತ್ಯೈವ ದೃಷ್ಟ್ಯರ್ಥಂ ಧ್ಯಾನಂ** ಅಪ್ರತಿಬಂಧಾರ್ಥಂ ಪ್ರತಿಮಾತೀ ಕಾರ್ಯೇ ಇತಿ ಸಿದ್ಧಾವಪಿ ಶೇಷೋಕ್ತಿಃ । ದೃಷ್ಟಿಸ್ತಯೋಃ ಸಾಕ್ಷಾದೇವ ಫಲಂ ಸ್ಯಾತ್ ಕಿಂ ಧ್ಯಾನೇ ನೇತಿ ಶಂಕಾಂ ವ್ಯುದಸಿತುಂ । ತರ್ಹಿ ತೇನೈವ ದೃಷ್ಟಿಸಿದ್ಧೇಃ ಕಿಂ ತಾಭ್ಯಾ ಮಿತಿ ಶಂಕಾಂ ವ್ಯುದಸಿತುಂ ಅಪ್ರತಿಬಂಧ ಇತ್ಯುಕ್ತಿಃ । ಅಪ್ರತಿಬಂಧಸ್ಯ ಫಲತ್ವಕಲ್ಪಕತಯಾ ಹೀತಿ ದೃಷ್ಟ್ಯರ್ಥಂ ವಿಹಿತತ್ವಾಖ್ಯಹೇತೂಕ್ತಿಃ ॥ ತದುಪಾದಕತ್ವೇನ ಚಾಪ್ರತಿಬಂಧಃ ಫಲಮಿತೀತಿ ಸರ್ವಮರ್ಥವತ್ ॥ ಶ್ರವಣಾದೇರ್ಜನಲೋಕಾದ್ಯರ್ಥ ಕಾರ್ಯತ್ವ ಸಿದ್ಧಾವಪಿ **ದೃಷ್ಟ್ಯರ್ಥಂ ತ್ರಿತಯ** ಕರ್ತವ್ಯತ್ವಮತ್ರೋಚ್ಯತ ಇತಿ ಬೋಧ್ಯಂ ॥ ೨೫ ॥ ಮತ್ತು ಶ್ರೀಮನ್ನ್ಯಾಯಮುಕ್ತಾವಲಿಯಲ್ಲೂ ಶ್ರೀ ಮಂತ್ರಾಲಯ ಪ್ರಭುಗಳೇ ಮತ್ತು ವಿಶೇಷವಾಗಿ ಅಪ್ಪಣೆ ಕೊಡಿಸಿದ್ದು ಪಂಡಿತರ ಮನನಾರ್ಹವಾಗಿದೆ.

**ಶ್ರೀಮನ್ನ್ಯಾಯ ಮುಕ್ತಾವಳೀ** ॥ ಪೂರ್ವತ್ರ ಶ್ರಿಯಃ ಕೃತಾರ್ಥ ತಯಾ ಫಲಾಭಾವೇಽಪ್ಯುಪಾಸನಾಲೋಪೋಕ್ತೌ ತರ್ಹ್ಯಕೃತಾ ರ್ಥಾನಾಂ ಫಲಾಭಾವಾಚ್ಛ್ರವಣಾದಿ ಸಮಸ್ತೋಪಾಸನಸ್ಯ ಲೋಪ ಏವ ಸ್ಯಾದಿತಿ ಶಂಕನಾತ್ಸಂಗತಿಃ । ಅತ್ರ ಶ್ರವಣ ಮನನ ಧ್ಯಾನ ರೂಪ ತ್ರಿವಿಧಮುಪಾಸನಂ ವ್ಯಸ್ತಂ ಕಾರ್ಯಮುತ ಸಮಸ್ತಮಿತಿ ಚಿಂತಾ ॥ ತದರ್ಥಂ ತ್ರಿವಿಧಸ್ಯಾಪಿ ಫಲಂ ನಾಸ್ತ್ಯುತಾಸ್ತೀತಿ ॥ ತದರ್ಥಂ ದರ್ಶನಂ ಕಿಂ ತ್ರಿತಯಾನ್ಯತಮಸಾಧ್ಯಮುತ ತ್ರಿತಯಸಾಧ್ಯಮಿತಿ ॥ ತದರ್ಥಂ ತ್ರಿತಯಸ್ಯಾಪಿ ತತ್ ಸಾಧನತ್ವೇನ ಮಾನೋಪಯೋಗೌ ನಸ್ತ ಉತ ಸ್ತ ಇತಿ ॥ **ಪೂರ್ವಪಕ್ಷಸ್ತು** ॥ ಉಪಾಸನಂ ಹಿ ಭಗವದ್ದರ್ಶನಾರ್ಥಂ ದೃಷ್ಟ ವ್ಯಶ್ರುತೇಃ ತಸ್ಯ ಶ್ರವಣ ಮನನಾಭ್ಯಾಂ ವಾ ಧ್ಯಾನೇನೈವೋಪಪತ್ತೌ ನ ತ್ರಿತಯಸಾಧ್ಯತ್ವೇ ಪ್ರಮಾಣಮಸ್ತಿ ॥ ದೃಷ್ಟವ್ಯೋ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯ ಇತಿ ಶ್ರುತಿಸ್ತ್ವೇಕಸ್ಮಿನ್ ಸಾಧನವಿಧಾ ನೇನಾಪ್ಯುಪಪನ್ನಾ ಕಿಂ ಚ ನ ತ್ರಿತಯಸ್ಯೋಪಯೋಗೋಸ್ತಿ ॥ ನ ಚಾ

ಜ್ಞಾತ ಜ್ಞಾಪನೇನ "ಶ್ರವಣಸ್ಯ ತನ್ನಿಯಮ ಜನನೇನ ಮನನಸ್ಯ ಧ್ರುತಿ ಜನನೇನ ಧ್ಯಾನಸ್ಯೋಪಯೋಗ ಇತಿ ಯುಕ್ತಂ॥ ತಥಾ ಚ ತ್ರಿತಯ ಸ್ಯಾಪಿ ಪೃಥಕ್ ಫಲತ್ವೇನ ದರ್ಶನೋದ್ದೇಶೇನ ತ್ರಿತಯ ವಿಧಾನಾನು ಪತ್ತೇಃ॥" ಏವಂ ಚ ಪ್ರಮಾಣೋಪಯೋಗಯೋರಭಾವೇ ದರ್ಶನಸ್ಯ ತ್ರಿತಿಯಸಾಧ್ಯತ್ವಾಭಾವೇನ ಫಲಾಭಾವಾಚ್ಚ । **ಸಮುಸ್ತೋಪಾಸನಂ ಕಾರ್ಯಮಿತಿ॥ ಸಿದ್ಧಾಂತಸ್ತು॥** ದ್ರಷ್ಟವ್ಯ ಇತಿ ಶ್ರುತೌ ದರ್ಶನೋದ್ದೇಶೇನ ತ್ರಿತಯಸ್ಯಾಪಿ ವಿಧಾನಾದ್ವಿಕಲ್ಪ ದ್ಯೋತಕ ಶಬ್ದಾಭಾವೇನ ತತ್ಸಮುಚ್ಚಯ ಸಾಧನತಾವಗಮಾತ್ಸಮುಚ್ಚಿತಾನಾಮೇವ ದೃಶಿರೂಪ ಫಲಹೇತು ತ್ರಿತಯ ಕಾರ್ಯಮೇವ ನ ಚೋಪಯೋಗಾಭಾವಃ ಶಂಕ್ಯಃ॥ ದರ್ಶನಂ ಪ್ರತಿ ಧ್ಯಾನಸ್ಯೈವ ಹೇತುತ್ವೇಪಿ ಧ್ಯಾನಸ್ಯ ಧ್ರುತಿ ಜನನೇಽಪೇಕ್ಷಿತತಯಾ ಪ್ರತಿಬಂಧಕಾಜ್ಞಾನಸಂಶಯ ವಿಪರ್ಯಯ ನಿವೃತ್ತೇಃ ಸಂಪಾದನೇನ ಶ್ರವಣ ಮನನಯೋರುಪಯೋಗಿತ್ವಾದಿತಿ॥ ಫಲಂ ತು ಜಿಜ್ಞಾಸಾ ಸೂತ್ರೋಕ್ತ ತ್ರಿತಯಸಮರ್ಥನಂ ॥ ೨೫ ॥

ಇನ್ನು ನ್ಯಾಯ ವಿವರಣದಲ್ಲಿಯೂ ಮತ್ತು ಶ್ರೀ ರಘೋತ್ತಮ ತೀರ್ಥರು ಭಾವಬೋಧಕಾರರ ಟಿಪ್ಪಣಿಯು ವಿಚಾರಾರ್ಹವಾಗಿದೆ.

**ನ್ಯಾಯವಿವರಣ** ॥ ನ ಚ ಶ್ರೇಯೋಪಪನ್ನತ್ವಾದನುಪಾಸನಂ ಸಂಸಾರೋ ವಾ । ನಿತ್ಯಂ ಭಗವದುಪಸ್ಥಿತೇರತಿ ಪ್ರಿಯತ್ವಾತ್ ಸಂಸ್ಕಾರ ಪಾಟವಾನ್ನಿತ್ಯೋಪಾಸೋಪಪತ್ತೇಶ್ಚ ॥ ೨೬ ॥

ನ ಚ ಬಂಧದಾರ್ಢ್ಯೇ ಶ್ರವಣಾಽಽದೀನಾಮಫಲತಾ । ಅನ್ಯಥೋಪಾಸಾಂ ವಿನೈವ ಶ್ರವಣಾಽಽದಿ ಜ್ಞಾನ ಮಾತ್ರೇಣ ಮುಕ್ತಿರಿತಿ **ದೋಷಃ** ॥ "ಶ್ರವಣಾದಿ ತ್ರಯೋತ್ಪನ್ನ ದೃಷ್ಟ್ಯೈವ ಸ್ವೇಚ್ಛಯಾ ಹರಿಃ । ಪ್ರಸನ್ನೋ ಮುಕ್ತಿದೋ ನಿತ್ಯಮನ್ಯಥಾ ನ ಕಥಂ ಚನೇತಿ" ಈಶ್ವರೇಚ್ಛಾನಿಯತಿ ಶ್ರುತೇಃ॥ ೨೭ ॥

**ಭಾವಬೋಧಃ** ॥ ಓಂ ತಸ್ಮಿನ್ ಫಲಾರ್ಥ ನಿಯಮಸ್ತ ದೃಷ್ಟೇಃ

ಪ್ರಥಮಸ್ಯ ಪ್ರತಿಬಂಧಃ ಫಲಮ್ ಓಂ ॥ ಇತ್ಯತ್ರ "ಶ್ರೋತವ್ಯ" ಇತ್ಯಾದಿ
ಶ್ರವಣವಿಧೇಃ ಸಮಸ್ತವ್ಯಸ್ತೋಪಾಸನಯೋಃ ಸಾಧಾರಣ್ಯಾತ್ಕಿಂ ಸಮಸ್ತ
ಮುಪಾಸನಂ ಕರ್ತವ್ಯಮುತ ವ್ಯಸ್ತಮಿತಿ ಸಂದೇಹೇ ವ್ಯಸ್ತಂ ಕರ್ತವ್ಯಮಿತಿ
ಪೂರ್ವಪಕ್ಷಃ **ಸಮಸ್ತಂ ಕರ್ತವ್ಯಮಿತಿ** ಸಿದ್ಧಾಂತಃ । ತತ್ರ "ದೃಷ್ಟ
ಬಂಧ" ಇತ್ಯುಕ್ತಪೂರ್ವಪಕ್ಷ ನ್ಯಾಯಂ ವಿವೃಣ್ವನ್ ಪ್ರತಿಕ್ಷಿಪತಿ ॥ **ನ ಚ**
**ಬಂಧದಾರ್ಢ್ಯಮಿತಿ** ॥ ಧ್ಯಾನಂ ವಿನಾ ಶ್ರವಣ ಮನನ ಮಾತ್ರಾ
ನಿವರ್ತ್ಯಸ್ಯ **ಬಂಧಸ್ಯ** ಜ್ಞಾನ ಪ್ರತಿಬಂಧಸ್ಯ ದಾರ್ಢ್ಯೇಽಂಗೀಕ್ರಿಯ
ಮಾಣೇ ಅವಶ್ಯಕ ಧ್ಯಾನೇನೈವ ಬಂಧ ನಿವೃತ್ತಿದ್ವಾರಾಽಪರೋಕ್ಷ ಜ್ಞಾನ
ಸಂಭವಾಚ್ಛ್ರವಣಾದೀನಾ**ಮಫಲತಾ** ॥ **ವೈ**ಯರ್ಥ್ಯಮ್ ಶ್ರವಣ ಮನ-
ನಾಽತಿ ಬಾಹುಲ್ಯಾತ್ ಸಾಧನಾಂತರಾಪೇಕ್ಷಯಾ ವಾ ಶ್ರವಣಾದೀನಾ
ಮಿತಿ ಬಹುವಚನಮ್ ॥ **ಅನ್ಯಥಾ** ಬಂಧದಾರ್ಢ್ಯಾಭಾವೇ ಧ್ಯಾನರೂಪ
ಮುಪಾಸನಾಂ ವಿನೈವ ಶ್ರವಣಾದಿ ಜ್ಞಾನ ಮಾತ್ರೇಣ ಶ್ರವಣ ಮನನ
ಮಾತ್ರಾ ಜನಿತಾಪರೋಕ್ಷಜ್ಞಾನೇ ಮುಕ್ತಿಜನಕತ್ವಲಾಭಾರ್ಥಮಪಿ ನ
ಧ್ಯಾನ ಜನ್ಯತ್ವಾಪೇಕ್ಷೇತಿ ಸೂಚಯತಿ ॥ ಏವಂ ಚ **ದೃಢ ಬಂಧಾತ್**
**ಧ್ಯಾನೇನೈವಾಪರೋಕ್ಷಜ್ಞಾನಮಿತಿ** ಶ್ರವಣಾದೀನಾಂ ವೈಯರ್ಥ್ಯ-
ಪ್ರಸಕ್ತೇರ್ವ್ಯಸ್ತೋಪಾಸನಂ ಕರ್ತವ್ಯಮಿತಿ ನೇತಿ ಭಾವಃ ॥ (ಅಯಂ **ಚ**
ನಾನ್ಯಃ ಪ್ರತಿಬಂಧ ಫಲಮಿತ್ಯನೇನ ಶ್ರವಣಾದೇಃ ಪ್ರತಿಬಂಧ ನಿವೃತ್ತಿ
ಫಲತ್ವೋಕ್ತ್ಯಾ ಸೂಚಿತಃ) "ತದ್ಧೇತುತ್ವೇನ **ಈಶ್ವರೇಚ್ಛಾನಿಯತಿ**"
ರಿತ್ಯುಕ್ತ ಸಿದ್ಧಾಂತ ನ್ಯಾಯಂ ಪ್ರಮಾಣೋದಾಹರಣ ಪೂರ್ವಕಂ ವಿವೃ-
ಣೋತಿ ॥ **ಶ್ರವಣಾದೀತಿ** ॥ ಏವಂ ಚೇಶ್ವರೇಚ್ಛಾನಿಯತ್ಯಾ ಶ್ರವಣಾದಿ
ತ್ರಿತಯ ಜನ್ಯಾಽಪರೋಕ್ಷಜ್ಞಾನೇನೈವ ಮುಕ್ತಿರಿತಿ **ಸಮಸ್ತೋಪಾಸನಂ**
**ಕರ್ತವ್ಯಮಿತಿ** ಭಾವಃ (ಅಯಂ ಚ ನ್ಯಾಯೋ) ಹಿ ಶಬ್ದೇನ ಭಾಷ್ಯೋ
ದಾಹೃತ ಶ್ರುತಿರೇವೇಶ್ವರೇಚ್ಛಾನಿಯತಿ ಪ್ರತಿಪಾದಕ ನ್ಯಾಯವಿವರಣೋ
ದಾಹೃತ ಶ್ರುತೇರಪಿ ಗ್ರಹಣೇನ ಸೂಚಿತಃ ॥ ೨೫ ॥

**ಅನುವ್ಯಾಖ್ಯಾನ:**—ಹಿಂದೆ ಪೂರ್ವಪಕ್ಷದಲ್ಲಿ ಹೇಳಿದಂತೆ ಸೋಪಾ
ಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಿಣೀ।ಧ್ಯಾನರೂಪಾ ಪರಾ ಚೈವ

ತದಂಗಂ ಧಾರಣಾದಿಕಂ॥ ಎಂದು ೫೫ ನೇ ಶ್ಲೋಕ ಪೂರ್ವ ಪಕ್ಷದಲ್ಲಿ ಹೇಳಿ ಮುಂದೆ ದ್ವಿವಿಧಾ ಎರಡು ವಿಧವು ೧ ಶಾಸ್ತ್ರಾಭ್ಯಾಸವು ಹಾಗೂ ಎರಡನೇದು. ಧ್ಯಾನ ರೂಪಾ ಎಂದು ಹೇಳಿದ್ದಾನೆ. ಇದು ಪೂರ್ವಪಕ್ಷ ಯುಕ್ತಿ ಹೇಳುತ್ತಾ ಮುಂದೆ ಸಿದ್ಧಾಂತಯುಕ್ತಿ ಹೇಳುತ್ತಾರೆ, ೬೩ ನೇ ಶ್ಲೋಕ ಕೊನೆಗೆ "ಸಿದ್ಧಾಂತ ನಿರ್ಣಯೊ (ಯೋ) ಹ್ಯೇತಾ ಯುಕ್ತ್ಯೋಽ ವ್ಯಾಹತಾ ಸದಾ"ಎಂದು ಅಪ್ಪಣೆ ಕೊಡಿಸಿ ವಿಶದವಾಗಿ ಶಾಸ್ತ್ರಾರ್ಥ ಹೇಳಿ ಸಕಲಶಾಸ್ತ್ರ ವಿಚಾರ, ಮೊದಲನೇದು. ಎರಡನೇದು. "ಯಥಾಶಕ್ತ್ಯಖಿಲಾನ್ ವೇದಾನ್ ವಿಜ್ಞಾಯೋಪಾಸನಂ ಭವೇತ್ ॥ ಅಧಿಕಾರವಿವಕ್ಷಾದಿಂದ ಸಕಲ ವೇದ ವೇದಾರ್ಥವನ್ನು ತಿಳಿದು ಉಪಾಸನೆ ಮಾಡಬೇಕು, ಕೊನೆಗೆ ಸ್ವಶಾಖಾ ವೇದಾರ್ಥವನ್ನು ಅವಶ್ಯ ತಿಳಿಯಲಿಕ್ಕೆ ಬೇಕು. ಇದರಿಂದ ತತ್ವನಿಶ್ಚಯ ಪ್ರತಿಬಂಧಕವಾದ ಅಜ್ಞಾನ ವಿಪರ್ಯನಾಶ ಮುಂದೆ ಧ್ಯಾನದಿಂದ ಬ್ರಹ್ಮದರ್ಶನವೆಂದು ಹೇಳಿದ್ದಾರೆ. ಹೇಗೆಂದರೆ--

"ಅದ್ಯಾಪಿ ತೇನ ದೇವಾದ್ಯಾಃ ಶೃಣ್ವತೇ ಮನ್ವತೇ ಸದಾ ॥
ಧ್ಯಾಯಂತಿ ಚ ಯಥಾಯೋಗಂ ತಥಾಪ್ಯಾವಸ್ತು ನಿರ್ಣಯಾತ್ ॥೬೪॥

ದೇವಾದಿಗಳು ಈಗಲೂ ಕೂಡ, ನಿರಂತರ, ಯಥಾ ಯೋಗ್ಯಶಕ್ತ್ಯನುಸಾರ ಶ್ರವಣಮಾಡುತ್ತಾರೆ. ಮನನ ಮಾಡುತ್ತಾರೆ. "ಸದಾ ಧ್ಯಾಯಂತಿ ಚ" ಧ್ಯಾನವನ್ನು ಮಾಡುತ್ತಾರೆ. ಅಂದರೆ ಬ್ರಹ್ಮ ಸಾಕ್ಷಾತ್ಕಾರ ಉಳ್ಳ ದೇವಾದಿಗಳೂ ಸಹ ಮಾಡುತ್ತಾರೆ. ಏಕೆಂದರೆ ಬ್ರಹ್ಮಜಿಜ್ಞಾಸಾ ಸಕಲ ಶ್ರುತಿ ನಿರ್ಣಯಪೂರ್ವಕ ಮಾಡುವುದರಿಂದ ಮೋಕ್ಷದಲ್ಲಿ ಆನಂದವು ಹೆಚ್ಚು.

ಶ್ರವಣಂ ದೃಷ್ಟ ತತ್ವಸ್ಯ ಮನನಂ ಧ್ಯಾನಮೇವ ಚ ॥
ವಿಶೇಷಾನಂದಸಂಪ್ರಾಪ್ತ್ಯೈ ಅನ್ಯಸ್ಯೈತಾನಿ ದೃಷ್ಟಯೇ ॥ ೬೫ ॥

ಅಂದಮೇಲೆ ಮನುಜಾದಿಗಳಂತೂ, ಶ್ರವಣ ಮನನ ನಿಧಿಧ್ಯಾಸನ ಮಾಡಲೇಬೇಕು.

"ಶ್ರವಣಂ ಮನನಂ ಚೈವ ಕರ್ತವ್ಯಂ ಸರ್ವದೈವ ಹಿ॥
ಮತಿ ಶ್ರುತಿ ಧ್ಯಾನ ಕಾಲವಿಶೇಷಂ ಗುರುರುತ್ತಮಃ ॥
ವೇತ್ತಿ ತಸ್ಯೋಕ್ತಮಾರ್ಗೇಣ ಕುರ್ವತಃ ಸ್ಯಾದ್ಧಿ ದರ್ಶನಮ್॥೭೫॥

ಸಮ್ಯಗ್ವಿಷಯ ವಿಜ್ಞಾನ ತಾರತಮ್ಯಾನುಸಾರತಃ ॥ ಅಂದರೆ ಮೊದಲು ಶ್ರವಣ ನಂತರ ಮನನ ನಂತರ ಧ್ಯಾನವೆಂದು ಅರ್ಥ. ಧ್ಯಾನ ದಿಂದೇ ಬ್ರಹ್ಮದರ್ಶನ.

ಇದರ ತಾತ್ಪರ್ಯವೇನಂದರೆ ಬ್ರಹ್ಮದರ್ಶನಕ್ಕಾಗಿ ಶ್ರವಣಾದಿಗಳು ಅತ್ಯಾವಶ್ಯಕಗಳು. ತನ್ನ ಇಚ್ಛೆಯಂತೆ ಅನುಷ್ಠಿತವಾದ ಶ್ರವಣಾದಿಗಳು ಬ್ರಹ್ಮದರ್ಶನಕ್ಕೆ ಸಾಧ್ಯವಾಗಲಾರವು. ಆದರೆ ನಿಯತಗುರು ಶಿಷ್ಯನ ಯೋಗ್ಯತೆಯನ್ನು ತಿಳಿದ ಗುರುಗಳ ಉಪದೇಶಪೂರ್ವಕವಾದ ಶ್ರವಣಾದಿ ಗಳೇ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾಗುವುವು. ಅಂತಹ ಉತ್ತಮ ಗುರುಗಳೇ ಕಾಲವಿಶೇಷದಲ್ಲಿ ಶ್ರವಣಾದಿಗಳನ್ನು ಮಾಡಿಸುವರು. ಆ ಮೇಲೆ ಸಹಸ್ರಾರು ಕಾರಣ ಬಂದರೂ ಜ್ಞಾನ ಸಂಶಯಾದಿಗಳು ಹುಟ್ಟಲಾರವು. ಸಾರಾಂಶ ಗುರು ಪ್ರಸಾದದಿಂದ ಶ್ರವಣ ಮನನ ನಿಧಿಧ್ಯಾಸದಿಂದ ಬ್ರಹ್ಮದರ್ಶನ.

ಶ್ರೀಮನ್ನ್ಯಾಯ ಸುಧಾದಲ್ಲಿಯೂ,

ನಿತ್ಯಮಿತಿ ಯಸ್ಮಾದುಪಾಸನಾ ನಿತ್ಯಮಾದರೇಣ ಕರ್ತವ್ಯಾ । ಆದರ ನೈರಂತರ್ಯಾಭ್ಯಾಮೇವ ಸಂಸ್ಕಾರಾತಿಶಯಸ್ಯೋತ್ಪಾದಾತ್ । ಆದರ ನೈರಂತರ್ಯೇ ಚೋಪಾಸನಾಯಾಂ ನಾಭಕ್ತಸ್ಯ ಭವತಃ । ಇ• ತಸ್ಮಾದಿದಾನೀಮುಪಾಸನಾ ವಕ್ತವ್ಯೇತಿ ಸಂಬಂಧಃ ॥ ಏವಂ ತರ್ಹ್ಯು- ಪಾಸನೈವ ವಿಚಾರಣೀಯಾ ಸರ್ವಶಾಸ್ತ್ರ ಪರಿಜ್ಞಾನಂ ಪ್ರಥಮಾಧಿಕರಣೇ ಕಸ್ಮಾದ್ವಿಚಾರ್ಯತ ಇತ್ಯತ ಆಹ ॥

ಸೇತಿ ॥ ಯಾ ವಕ್ತವ್ಯತಯಾ ಅವಸರಪ್ರಾಪ್ತಾ ಸಾಚೋಪಾಸ- ನಾದ್ವಿವಿಧೈವ ನತ್ವೇಕರೂಪೈವ । ಕಥಮ್ । ಏಕಾ ಶಾಸ್ತ್ರಾಭ್ಯಾಸ

ಸ್ವರೂಪಿಣೀ । ಪರಾ ಚ ಧ್ಯಾನರೂಪಾ । ಅತೋ ಯುಕ್ತ್ಯಾ । ಪ್ರಥಮಾಧಿಕರಣಸ್ಯಾತ್ರಾಂತರ್ಭಾವಃ । ತಥಾಪ್ಯುಭಯೋಃ ಕ್ರಮಃ ಕುತಃ । ಧ್ಯಾನಸ್ಯ **ಶಾಸ್ತ್ರಾಭ್ಯಾಸ ಸಾಧ್ಯತ್ವಾತ್ ತದಿದಮುಕ್ತಂ** । ಪರೇತಿ ಧ್ಯಾನ **ಸಮಾಧ್ಯೋರನತಿ ಭಿನ್ನತ್ವಾದ್ಧ್ಯಾನ ಶಬ್ದೇನ ಸಮಾಧಿರಪಿ ಗೃಹ್ಯತೇ** । ಧಾರಣ ಪ್ರತ್ಯಾಹಾರ ಪ್ರಾಣಾಯಾಮಾಸನ ಯಮನಿಯಮಾನಾಮ ಪ್ಯುಪಾಸನಾ ಭೇದಾನಾಂ ಸತ್ವಾತ್ ಕಥಂ ದ್ವೈವಿಧ್ಯಮಿತ್ಯತ ಆಹ ॥ ತದಂಗಮಿತಿ॥ ತಸ್ಯ ಧ್ಯಾನಸ್ಯ ಅಂಗಮೇವ ನ ತು ಸ್ವತಂತ್ರಮುಪಾಸನಮ್

ಬ್ರಹ್ಮಸಾಕ್ಷಾತ್ಕಾರಕ್ಕೆ ಹೀಗೆ ಶಾಸ್ತ್ರಾಭ್ಯಾಸ ರೂಪ ಒಂದು ಪರಾ ಚ ಎರಡನೇ ಧ್ಯಾನ. ಹೀಗೆ ಎರಡು ಮಾರ್ಗವೆಂದು ಹೇಳಲು, ಇವರ ಕ್ರಮ ಹೇಗೆ? ಎಂದು ಕೇಳಿದರೆ ಧ್ಯಾನಕ್ಕೆ ಅಂದರೆ, ಧ್ಯಾನಮಾಡಲು ವಸ್ತು ನಿರ್ಣಯಗೋಸುಗವೇ ಶಾಸ್ತ್ರಾಭ್ಯಾಸವು ಧ್ಯಾನಕ್ಕೆ ಸಾಧಕವು, ಈ ಶಾಸ್ತ್ರಾಭ್ಯಾಸದಿಂದಲೇ ಧ್ಯಾನಕ್ಕೆ ಸಾಧ್ಯತ್ವವು ಹೇಳಿದ್ದಾರೆ. ಮತ್ತು ಧ್ಯಾನಸಮಾಧಿಗೆ ಭೇದವೇ ಎಂದರೆ, ಧ್ಯಾನಶಬ್ದದಿಂದ ಸಮಾಧಿ ಕೂಡ ತೆಗೆದುಕೊಳ್ಳಬೇಕು. ಮೊದಲು ಶಾಸ್ತ್ರಾಭ್ಯಾಸದಿಂದ ಧ್ಯಾನಸಾಧ್ಯ. ಈ ಧ್ಯಾನವು ಭಕ್ತ್ಯತಿಶಯ. ಶಮದಮಾದಿ ಸಂಪತ್ತಿನಿಂದ ಕೂಡಿದ್ದು ಆಗಿರಬೇಕು. ಶಾಸ್ತ್ರಾಭ್ಯಾಸವು ಧ್ಯಾನಾಂಗವು. ಬ್ರಹ್ಮಸಾಕ್ಷಾತ್ಕಾರೋತಿ. ಧ್ಯಾನಕಾರ್ಯಸ್ಯ ಸಾಕ್ಷಾತ್ಕಾರಸ್ಯ ಶಾಸ್ತ್ರಾಭ್ಯಾಸ ಮಾತ್ರೇಣಾಧಮಾಧಿಕಾರಿಣಾಂ ಸಿದ್ಧೇಸ್ತಸ್ಯ ಧ್ಯಾನಕಾರ್ಯ ಕಾರಿತ್ವಮಿತ್ಯರ್ಥಃ ॥ (ಶ್ರೀಮ) ವಾಕ್ಯಾರ್ಥ ಚಂದ್ರಿಕಾಕಾರರು ಅಧಿಕಾರಿ ವಿಶಿಷ್ಟ್ಯಭೇದ ವಿವರಿಸಿದ್ದಾರೆ. ಮುಂದೆ ಶ್ರೀ ಪರಿಮಳಕಾರರು ಇದೇ ವಿಷಯ ವಿವರಿಸಿದ್ದಾರೆ. ಮತ್ತು ಶ್ರೀ ಸುಧಾಕಾರರು ಮೊದಲಿಗೆ ೩ನೇ ಪಾದ ಪ್ರಾರಂಭದಲ್ಲಿಯೇ **ಉಪಾಸನಯಾ ಚಾತಿ ದೀರ್ಘಕಾಲ ಮನುಷ್ಠಿತಯಾ ಪ್ರಸನ್ನೋ ಭಗವಾನಾತ್ಮಾನಂ ದರ್ಶಯತಿ** ॥ ಎಂದು ನಿಃಸಂದೇಹವಾಗಿ ಬಹುಕಾಲ ಧ್ಯಾನ ಉಪಾಸನೆಯಿಂದ ಭಗವಂತನು ತಾನೇ ಕಾಣಿಸಿಕೊಳ್ಳುತ್ತಾನೆಂದು ಹೇಳಿದ್ದಾರೆ. ಶ್ರೀ ವಿಜಯದಾಸರು ಉಪಾಸನಾ ಸುಳಾದಿಗಳಲ್ಲಿಯೇ ಚೆನ್ನಾಗಿ ವಿವರಿಸಿದ್ದಾರೆ. ನಿಶ್ಚಿತತತ್ವ ಆದಮೇಲೆ ೪೦೦ ವರ್ಷ ಪರಿಯಂತ ಧ್ಯಾನ ಮಾಡಿದರೆ ನಿಯತ ಗುರುದ್ವಾರಾ ಭಗವದ್ದರ್ಶನ ಲಾಭವೆಂದು ಹೇಳಿದ್ದಾರೆ

**ಶ್ರೀ ಮನ್ನ್ಯಾಯಸುಧಾಟಿಪ್ಪಣೀಸ್ಸ್ವಾದೀ ಗುರು ರಾಜೀಯ** ಧ್ಯಾನೋಪಾಸನಾರ್ಥಿಭಿರಿತ್ಯರ್ಥ:- ಧ್ಯಾನಾಖ್ಯೋಪಾಸನಾರ್ಥಿಭಿರಿತ್ಯರ್ಥಃ ॥ ಪರೇತ್ಯುಕ್ತಂ ವಿವೃತಂ ಭವತೀತ್ಯತ್ರ ಧ್ಯಾನರೂಪಾ ಪರೇತ್ಯತ್ರ ಉಕ್ತಂ ಧ್ಯಾನಸ್ಯ ಶ್ರವಣ ಮನನಾಖ್ಯಶಾಸ್ತ್ರವಿಜ್ಞಾನೋತ್ತರ ಕಾಲೀನತ್ವಂ ವಿವೃತಂ ಭವತಿ । ವಿಜ್ಞೇಯೇತಿ ॥ ಶಾಸ್ತ್ರ ಜ್ಞಾನಸ್ಯಪೂರ್ವ ಕಾಲೀನತ್ವಕಥನಾದಿತ್ಯರ್ಥಃ ॥ ಪುಟ (೧೯೩) ಶ್ರವಣಂ ಮನನಂ ಕೃತ್ವಾ ಕುರ್ವನ್ತೀತೀತ್ಯತ್ರ ನಿಧಿಧ್ಯಾಸನ ಮಾರಭ್ಯ ಪುನರಪಿ ಮಧ್ಯೇ ಮಧ್ಯೇ ಶ್ರವಣಾದಿಕಂ ಕುರ್ವನ್ನಿತಿ ಶ್ರುತವಿಸ್ಮರಣ ಶೀಲಮಂದಾಧಿಕಾರಿ ವಿಷಯ ಮಿತಿ ಜ್ಞೇಯಮ್, ಅನುಷ್ಠೇಯಸ್ಯ ತಥಾತ್ವಾದಿತ್ಯತ್ರ । ವಿಷ್ಣುಭಕ್ತ್ಯಾದಿ ಗುಣ ಸಮುದಾಯಸ್ಯ ವಿಷಯಸಂಸರ್ಗಾದಿ ದೋಷವರ್ಜನಸ್ಯ ತಥಾತ್ವಾತ್ ॥ ಯಮಶಬ್ದಾಭಿಧೇಯತ್ವಾದಿತ್ಯರ್ಥಃ॥ ಕಸ್ಮಿನ್ ದೇಶೇ ಕದಾಚಿದೇವಾನುಷ್ಠಾನಂ ನಾಲಮ್ ॥ ಕಿಂ ತು ಸರ್ವದೇಶೇ ಸರ್ವಕಾಲೇ ಚೇತಿ ಭಾವಃ (ಪುಟ ೧೯೬)

ಇದರ ಸಾರಾಂಶವೇನಂದರೆ, ಧ್ಯಾನಕ್ಕೆ, ಶ್ರವಣಮನನರೂಪವಾದ ಶಾಸ್ತ್ರ ಜ್ಞಾನಾನಂತರ ಕಾಲವು ಧ್ಯಾನವೆಂದು ವಿವರವಾಗುತ್ತದೆ. ಶಾಸ್ತ್ರ ಜನ್ಯ ಜ್ಞಾನವು ಪೂರ್ವಕಾಲೀನವಾದುದು. ಮೊದಲು ಶಾಸ್ತ್ರಜನ್ಯ ಜ್ಞಾನಾನಂತರ ಧ್ಯಾನ ಕಾಲವೆಂದು ಹೇಳಲಾಗಿದೆ. ಶ್ರವಣ ಮನನಾದಿಗಳು ಮಾಡಿದನಂತರವೇ ನಿಧಿಧ್ಯಾಸನ ಮಾಡುವದು.

ಆದರೆ ಕೇಳಿದ್ದು ಶ್ರವಣ ಮಾಡಿದ್ದು ಧ್ಯಾನಕಾಲದಲ್ಲಿ ಮರೆತ ಮಂದಾಧಿಕಾರಿಗಳು ಪುನಃ ಪುನಃ ಶ್ರವಣ ಮಾಡತಕ್ಕದ್ದು. ಹೀಗೆ ಕೇಳಿದ್ದೇ ಕೇಳುತ್ತ ಧ್ಯಾನಮಾಡಲು ವಿಷಯ ಸಂಸರ್ಗ ದೋಷ ದೂರಾಗಿ ವಿಷ್ಣು ಭಕ್ತ್ಯಾದಿ ಗುಣಸಮುದಾಯ ವ್ಯಕ್ತಿಗೆ ಯಮ ನಿಯಮಾದಿಗಳೇ ಧ್ಯಾನಕ್ಕೆ ಅಂಗವಾಗಿರುವುವು. ಇನ್ನು ಯಾವ ದೇಶ ಯಾವ ಕಾಲದಲ್ಲಿ ಈ ಧ್ಯಾನಮಾಡುವದೆಂಬ ಶಂಕಾ ಬಂದರೆ, ಸರ್ವದೇಶದಲ್ಲಿಯೂ, ಸರ್ವ ಕಾಲದಲ್ಲಿಯೂ, ಮಾಡುವದೆಂದು ಭಾವ, ಇದನ್ನೇ ದಾಸರಾಯರು "ಸರ್ವದೇಶವು ಪುಣ್ಯದೇಶವು ಸರ್ವಕಾಲವು ಪರ್ವಕಾಲವು । ಸರ್ವ

ವಂದ್ಯನ ನಿರ್ಮಲ ಮೂರ್ತಿ ಧ್ಯಾನ ಉಳ್ಳವಗೆ ॥ ಎಂದು ಅಪ್ಪಣೆ ಕೊಡಿಸಿದ್ದಾರೆ.

ಶ್ರೀ ಪರಿಮಳ—೩ನೇ ಅಧ್ಯಾಯ, ೩ನೇ ಪಾದ ಅಧಿಕರಣ (೧) ಪುಟ-೪೧೩.

ವೇದಾದಿ ಶ್ರವಣ ಇತಿ— ನಿರ್ಣೀತಸ್ಯ ಗ್ರಂಥಶ್ರವಣೇ ಇತ್ಯರ್ಥಃ॥

ತದಿತಿರೇತಿ— ನಿರ್ಣೀತ ಗ್ರಂಥೇತ್ಯರ್ಥಃ । ಸಂಶಯಾನಿತಿ ಬಹುವಚನಾರ್ಥಮಾಹ ॥

ಸಂಶಯಾಜ್ಞಾನ ವಿಪರ್ಯಯಾನಿತಿ ಶ್ರವಣಾದಿ ಫಲಮಿತಿ— ಅಜ್ಞಾನನಿರಸನಂ ಶ್ರವಣಫಲಂ । ಅನ್ಯತ್ ಮನನ ಫಲಮಿತಿ ಜ್ಞೇಯಂ॥

ಅಪಿ ಚ ಇತರೇತರಯೋಗ ಇತಿ— ಅಭ್ಯಾಸ ಪ್ರವಚನಯೋ ರನ್ಯೋನ್ಯ ಸಮುಚ್ಚಯ ಇತ್ಯರ್ಥಃ ರಥಮಿತ್ರೋ ಚಕ್ರದ್ವಯಮಿವಾ- ನ್ಯೋನ್ಯಸಹಾಯ್ಯೇನೈಕ ಕಾರ್ಯಂ ನಿಷ್ಪಾದಕತ್ವರೂಪಮಿತರೇತರ ಯೋಗಂ ದರ್ಶಯತಿ ॥

ಶ್ರುತೇತಿ— ಅಭಿನವ್ರೋಕ್ತ್ಯೇತ್ಯಾಽ ಅಪೂರ್ವನಿಶ್ಚಯ ಶ್ರವಣ ಫಲ ಮಜ್ಞಾನಾದಿ ನಿವೃತ್ತಿರೂಪಂ ಸತ್ಪದಕೃತ್ಯಂ ವಕ್ತುಮಾಹ ॥

ಪ್ರಮಾಣೇ ಕರ್ತುಮಿತಿಯೇತಿ— ಪರಾಪರೇತಿ ॥ ಪರೋ ಭಗವ- ದ್ವಿಷಯಃ ಅಪರೋ ಜಗದ್ವಿಷಯಃ ॥ ನಿದಿಧ್ಯಾಸನಸ್ಯೈವ ಬ್ರಹ್ಮದರ್ಶನ ಸಾಧನತ್ವೇ ಶ್ರೌತವಾಕ್ಯೈಃ ಶ್ರವಣಾದೇಃ ಪೂರ್ವಮುಕ್ತಿಃ ಕುತ ಇತ್ಯತ ಆಹ ॥

ತತ್ಸಿದ್ಧ್ಯತಿ ಇತಿ— ಉಪೋದ್ಘಾತ ಪ್ರಕ್ರಿಯಾ ತದುಕ್ತಿರಿತಿ ಭಾವಃ॥ ಏತೇನ ನಿದಿಧ್ಯಾಸನಂ ಪ್ರಧಾನ ಮನ್ಯತ್ತದಂಗಮಿತಿ ಸೂಚಿತಮ್ ॥ ದ್ವಿವಿಧಮಂಗ ಸಾಧನ ಸ್ವರೂಪ ನಿಷ್ಪತ್ತ್ಯಾ ಸಹಕಾರಿ ಭೂತಂ ನಿಷ್ಪನ್ನೇ ಚ ಸಾಧನೇ ತಸ್ಯ ಫಲಜನನೇ ಕಾರ್ಯೇ ಸಹಕಾರಿ

ಭೂತಂ ಚೇತಿ ತತ್ರ ದ್ವಿತೀಯಂ ಫಲೋಪಕಾರ್ಯಂಗ ಮಿತ್ಯುಚ್ಯತ ಇತಿ ಜ್ಞೇಯಂ॥

**ಅಪರೇಷಾಂ ಚೇತಿ** । ಯೋಗಿನಾಂ ಸ್ವರ್ಗಸ್ಥಾನಾಂ ಚೇತ್ಯರ್ಥಃ॥ **ಅಪರೋಕ್ಷಜ್ಞಾನ ಸಂಗತ ಇತಿ** ॥

**ನನು ನಿದಿಧ್ಯಾಸನಂ ನಾಮ**– (ಮನೋಮಯಸ್ಯ ಪಸ್ತುನೋ ಮನಸಾ) ವಾಸನಾಮಯಸ್ಯ ಮನಸಾವಲೋಕನಂ । ತಥಾ ಚ ಭಗವದ್ಧಿಷ್ಣ್ಯಾಸ್ಯ ಮನಸಾऽನವರತಾವಲೋಕನೇನ ಮನಸಾ ಕರಣೇನ ಭಗವತೋ ಪರೋಕ್ಷಮಿತ್ಯುಕ್ತಂ ಸ್ಯಾತ್ ॥ ತತ್ಕಥಮುಪಪದ್ಯತ ಇತಿ ಶಂಕ್ಯತೇ॥ **ಮನಸಃ ಇತಿ ಇದಮಿತಿ** ॥ ಇದಂ ಬ್ರಹ್ಮ ಅಪ್ರಮೇಯಂ ಜ್ಞಾತವ್ಯಮಿತ್ಯರ್ಥಃ॥ತದ್ವ್ಯಾಸ್ಯೇತಿ ಸ್ಮೃತಯ ಇತಿ॥ತನ್ನಿರ್ಧಾರಣಾರ್ಥ ನಿಯಮ ಇತ್ಯಾಶಾ ಭಾಷ್ಯೋಕ್ತಂ ಶ್ರುತ್ಯೇತಿ ಸ್ಮೃತಿಃ॥ ಶ್ರುಣುಯಾದಿತಿ ಸ್ಮೃತಿಸ್ತು **ಯಥಾ ಚ ಶ್ರವಣಮಿತ್ಯಾದಿ** ॥ **ತಚ್ಚೇತಿ** ॥ ।ನಿಧಿಧ್ಯಾಸನಮಿತ್ಯರ್ಥಃ **ಅಧಿಕಮುಚ್ಯತೇ ಯದಿತಿ**॥ ಕೃತ್ಸ್ನೇತ್ಯಾದ್ಯುಕ್ತರಾರ್ಥೋಕ್ತ ಮಧಿಕಮಿತ್ಯರ್ಥಃ॥ **ಉಕ್ತಸ್ಯೇತಿ** ॥ ಅಸಂಶಯೇನ ತತ್ವಸ್ಯ ನಿರ್ಣಯೋ ಬ್ರಹ್ಮದರ್ಶನಮಿತ್ಯತ್ರೋಕ್ತಸ್ಯೇತ್ಯರ್ಥಃ ॥ ವ್ಯವತಿಷ್ಠತ ಇತಿ । ಅಧಿಕಾರಿ ಭೇದೇನ ವ್ಯವಸ್ಥಿತೋ ಭವತೀತ್ಯರ್ಥಃ ॥೩।೩।೧॥

**ಉಪಸಂಹಾರೋಽರ್ಥಭೇದಾತ್** ॥ **ಉಕ್ತನ್ಯಾಯಾದಿತಿ** ॥ ತತ್ರಾಖಿಲಸ್ಯ ವಿಜ್ಞಪ್ತಿಃ ಸಮ್ಯಗ್ ಬ್ರಹ್ಮಣ ಏವ ಹಿ ಇತ್ಯಾದಿ ಗ್ರಂಥೇನ ಸರ್ವಪರಿಜ್ಞಾನೋಕ್ತ ನ್ಯಾಯಾದಿತ್ಯರ್ಥಃ ॥

**ಇತ್ಯಾದೀನಾಮಿತಿ**–ಪಾದಮಧ್ಯೋಕ್ತಮಾಧಿಕಾರಿ ಭೇದನಾಲ್ಪಾ ನಲ್ಪಾಲ್ಪತಮ ಗುಣೋಪ ಸಂಹಾರ ವ್ಯವಸ್ಥಾಪರಾಣಾಂ ಪ್ರಾಪ್ತೇಽ ಸಮಂಜಸಮ್ ॥ ಸರ್ವಾ ಭೇದಾನ್ಯತ್ರಮೇತ್ಯೇವಮಾದೀನಾಮನೇಕೇಷಾಂ ತಾತ್ಪರ್ಯ ಮುಕ್ತಮಿತ್ಯರ್ಥಃ॥ ಅಧಿಕರಣ ಶರೀರಾಣಿ ತು ನ್ಯಾಯ ಮುಕ್ತಾವಲ್ಯಾಂ ಸಂಕ್ಷೇಪಣ ಭಾಷ್ಯ ವ್ಯಾಖ್ಯಾನೇ ಚ

ವ್ಯಕ್ತಾನಿ ॥ "ತನ್ನಿರ್ಧಾರಣಾರ್ಥ ನಿಯಮಃ ಇತ್ಯಾದಿನಾಪೀತಿ ॥" ಅಸಂಶಯೇನ ತತ್ತ್ವಸ್ಯ ನಿರ್ಣಯೋ ಬ್ರಹ್ಮದರ್ಶನ ನಿಮಿತ್ತತ್ವೇನ ತನ್ನಿರ್ಧಾರಣೇತಿ ಸೂತ್ರತಾತ್ಪರ್ಯಮುಕ್ತಂ ॥ ಅಪಿಪದಗೃಹೀತಾನಾಂ ಪ್ರಧಾನಪದೇರ್ವೇತ್ಯೇವಮಾದೀನಾಂ ಗುಣನಿಯಮೋಕ್ತಿಪರಾಣಾಂ ತಾತ್ಪರ್ಯಮಿತಿ ಶ್ರುತೀಃ ॥ ಧ್ಯಾನಾನಾಂ ವಿಶೇಷಂ ಗುಣಂಗುತ್ತಮಂ ಇತ್ಯಾದಿನೋಕ್ತಂ ॥

ಹೀಗೆ ಸುಧಾಗ್ರಂಥಕ್ಕೆ ಪರಿಮಳವನ್ನು ರಚಿಸಿ, ಲೋಕೋಪಕಾರ ಮಾಡಿದ ಶ್ರೀ ಮಂತ್ರಾಲಯ ಪ್ರಭುಗಳೇ ಅನುಗ್ರಹಿಸಿ ಜ್ಞಾನ, ಧ್ಯಾನ, ದಾರ್ಢ್ಯ ಕೊಡುವರು. ಇದರ ವಿವರವನ್ನೇ—

ಸತ್ತತ್ತ್ವರತ್ನಮಾಲಾ— ಉಪಾಸನಾ ಪ್ರಕರಣ, ಪುಟ-೪೩, ೧೪೦
ಬಿಂಬರೂಪೋಪಾಸನಂ ಚ ಕಾರ್ಯಂ ಸದ್ಭಕ್ತಿಪೂರ್ವಕಮ್ ॥
ಸರ್ವೈರ್ಕಷ್ಟವಿಘ್ನಹಾನ್ಯರ್ಥಂ ನೃಸಿಂಹಾದೇರುಪಾಸನಮ್ ॥೪೨೮॥
ನಿತ್ಯಶಃ ಶ್ರವಣಂ ಚೈವ ಮನನಂ ಧ್ಯಾನಮೇವ ಚ ॥
ಕರ್ತವ್ಯಮೇವ ಪುರುಷೈರ್ಬ್ರಹ್ಮದರ್ಶನವಾಂಛಿಭಿಃ ॥
ತಾರತಮ್ಯಪರಿಜ್ಞಾನಪೂರ್ವಕಂ ಕಮಲಾಪತೇಃ ॥ ೪೨೯ ॥

ಟೀಕಾ— ತತ್ತ್ವಪ್ರಕಾಶಿಕಾಯಾಂ ಚ "ಸರ್ವಾಧಿಕಾರಿ ಸಾಧಾರಣ್ಯೇನ ಬಿಂಬಮೇವಾವಶ್ಯಂ ಉಪಾಸ್ಯಮಿತ್ಯುಕ್ತಂ । ಉಪಾಸನೇತಿ ಕರ್ತವ್ಯತಾವಿಶೇಷಂ । "ಅಂಬುವದಗ್ರಹಣಾತ್ತು ನ ತಥಾತ್ವ" ಮಿತ್ಯುಕ್ತಮಾಹ ॥

ಸದ್ಭಕ್ತಿ ಪೂರ್ವಕಮಿತಿ ॥ ನೃಸಿಂಹಾದಿಕಮನ್ಯಚ್ಚ ದುರಿತಾದಿ ನಿವೃತ್ತಯಃ ॥ ಇತ್ಯುಕ್ತೇರಾಹ ವಿಘ್ನೇತಿ ॥೪೨೮॥ ಇದಾನೀಮುಪಾಸನಾಶಬ್ದಾರ್ಥಂ ವದನ್ನುಪಸಂಹರತಿ ॥

ನಿತ್ಯಶ ಇತಿ । ತಾರತಮ್ಯ ಪರಿಜ್ಞಾನ ಪೂರ್ವಕಂ ನಿತ್ಯಶ ಇತೀತಿ ಕರ್ತವ್ಯ ನಿರೂಪಣಂ । ಕಮಲಾಪತೇಃ ಕಮಲಾಪತಿ ವಿಷಯಕಂ

ಶ್ರವಣ ಮಿತ್ಯಾದಿ ಯೋಜನಾ । ತಾರತಮ್ಯ ಪರಿಜ್ಞಾನ ಪೂರ್ವಕಂ ಸಪರಿವಾರಸ್ಯ ವಿಷ್ಣೋರುಪಾಸನಮಿತಿ ದರ್ಶಿತಮಿತಿ ತತ್ವಪ್ರದೀಪೇ । ತಥಾ ಚ **ದೇವತಾತಾರತಮ್ಯ ಪರಿಜ್ಞಾನಪೂರ್ವಕಂ ತಾರತಮ್ಯಾಂತ-ರ್ಗತ**ತ್ವೇನ ಸರ್ವೋತ್ತಮತ್ವಂ ಸಕಲ ನಿರವಧಿಕ ಗುಣ ಗಣ ಪರಿ ಬೃಂಹಿತತ್ವಂ ನಿಶ್ಶೇಷಾವದ್ಯ ಗಂಧರಾಹಿತ್ಯಂ ಚ ಯಥಾಯೋಗ್ಯಂ ಸಕಲ ಸಚ್ಛಾಸ್ತ್ರ ಶ್ರವಣ ಮನನಾಭ್ಯಾಂ ನಿಶ್ಚಿತ್ಯಾತಿ ವೈರಾಗ್ಯೇಣಾತಿ ದೃಢೀಕೃತಯಾಽನನ್ಯಭಕ್ತ್ಯಾ ಬ್ರಹ್ಮಾದಿ ಸಕಲ ಪರಿವಾರ ಸಂಸೇವಿತಸ್ಯ ನಿರ್ದೋಷಾತಿ ಕಮನೀಯಾನಂತ ಗುಣೋಜ್ವಲಯಾ ಮಹಾಲಕ್ಷ್ಮ್ಯಾ ಶ್ರೀ ಸಮೇತಸ್ಯ ಭಗವತೋ ನಾರಾಯಣಸ್ಯ ನಿಜಗುರೂಪದೇಶಾನುಸಾರೇಣ ಆತ್ಮಯೋಗ್ಯ ಗುಣಕ್ರಿಯಾದ್ಯುಪೇತ ಭಗವದ್ರೂಪ ವಿಶೇಷೋಪಾಸನಂ ಸರ್ವೈರಪಿ ಸ್ವೈರಂತರ್ಯೇಣ ಕಾರ್ಯಮಿತಿ ಸಿದ್ಧಂ ॥ ೪೬೭ ॥

**ಮಧ್ವಸಿದ್ಧಾಂತಸಾರದಲ್ಲಿ:**— ಈ ಸಮಗ್ರ ಗ್ರಂಥಗಳನ್ನು ಕ್ರೋಢೀಕರಿಸಿ ಬರೆದ ನಿರ್ಣಯವೇನಂದರೆ ೪೮೫ **ಮೋಕ್ಷ ಸಾಧನೀ ಭೂತಾಪರೋಕ್ಷಾ ಜ್ಞಾನ ಸಾಧನಾನಿ ಚ** ವಿವಿಧ ಸಾಂಸಾರಿಕ ದುಃಖದರ್ಶನೇನ ಸಜ್ಜನಸಂಗತ್ಯಾ ಚೇಹಾಮುತ್ರ ಫಲಭೋಗವಿರಾಗಃ । ಶಮದಮಾದಿ ಸಂಪತ್ತಿಃ ಅಧ್ಯಯನಸಂಪತ್ತಿಃ ಶರಣಾಗತಿಃ ಗುರುಕುಲವಾಸಃ ತದುಪದೇಶೇನ ಸಚ್ಛಾಸ್ತ್ರ ಜ್ಞಾನರೂಪಶ್ರವಣಂ ಶ್ರುತಸ್ಯ ತತ್ವಸ್ಯ ದೃಢೀಕರಣಾಯ ಮೀಮಾಂಸಾಪರಪರ್ಯಾಯೋ ವಿಚಾರೋ ಮನನಂ ಗುರುಭಕ್ತಿರ್ಯಥಾಯೋಗ್ಯಾ ಪರಮಾತ್ಮಭಕ್ತಿಃ ಸ್ವಾಧಮೇಷು ಸತ್ಸು ದಯಾ ಸ್ವಸಮೇಷು ಸ್ವಾತ್ಮವತ್ ಸ್ನೇಹ:- ಉತ್ತಮೇಷು ಭಕ್ತಿ:- ನಿವೃತ್ತಕರ್ಮಾನುಷ್ಠಾನಂ ನಿಷಿದ್ಧ ಸಂತ್ಯಾಗ :— ಸರ್ವಸಮರ್ಪಣಂ **ತಾರಮ್ಯ ಪರಿಜ್ಞಾನಂ** ಪಂಚಭೇದಜ್ಞಾನಂ ಪ್ರಕೃತಿಪುರುಷ ವಿವೇಕ ಜ್ಞಾನಂ ಅಯೋಗ್ಯನಿಂದಾ **ಉಪಾಸನಾಚೇತಿ** । ಬ್ರಹ್ಮಾದಿಸರ್ವಯೋಗ್ಯ ಜೀವಸಾಧರಣಾನಿ ॥ ಇದರ ಸಾರಾಂಶವೇನಂದರೆ.

ಮೋಕ್ಷಕ್ಕೆ ಸಾಧನವಾದ ಮುಖ್ಯ ಭಗವದಪರೋಕ್ಷ ಜ್ಞಾನ ಸಂಪಾದಿಸಲು ಸಾಧನಗಳು. (೧) ವಿವಿಧ ಸಂಸಾರದ ದುಃಖ ಅನುಭೋಗಿಸಿ

ಸಂಸಾರ ಹೇಯವೆಂಬ ವಿರಾಗಪೊಂದಿ ಸಜ್ಜನ ಸಮಾಗಮದಿಂದ ಇಹ ಪಾರತ್ರಿಕವಲ್ಲಾಗುವ ಫಲ ಭೋಗ ವಿಚಾರ. ೨ ಶಮದಮಾದಿ ಭಗವನ್ನಿಷ್ಠತಾಬುದ್ಧಿ ಇಂದ್ರಿಯ ನಿಗ್ರಹಾದಿಗಳು, ೩ ಅಧ್ಯಯನ ಸಂಪತ್ತು ಪೊಂದಲು ಗುರುಗಳಲ್ಲಿ ಶರಣು ಹೋಗೋಣ. ೪ ಗುರುಗಳಲ್ಲಿ ವಾಸ ಮಾಡೋಣ. ೫ ಗುರುಗಳ ಉಪದೇಶದಿಂದ ಸಮೀಚೀನವಾದ ಮಧ್ವಶಾಸ್ತ್ರ ಜ್ಞಾನರೂಪವಾದ ಸಚ್ಛಾಸ್ತ್ರಶ್ರವಣ ೬ ಗುರುಗಳಿಂದ ಕೇಳಿದ್ದು ಧೃಢೀಕರಣವಾದ ಮನನ. ೭ ತಾರತಮ್ಯದಿಂದ ಗುರುಭಕ್ತಿ ೮ ಸರ್ವೋತ್ತಮತ್ವೇನ ಹರಿಭಕ್ತಿ. ೯ ಸ್ವಾಧಮರಲ್ಲಿ ದಯಾ. ೧೦ ಸಮಾಸಿಕರಲ್ಲಿ ತನ್ನಂತೆ ಸ್ನೇಹ ಪ್ರೀತಿ. ೧೧ ಉತ್ತಮರಲ್ಲಿ ಭಕ್ತಿ. ೧೨ ಫಲರಹಿತವಾಗಿ ನಿವೃತ್ತ ಕರ್ಮಾಚರಣೆ. ೧೩ ನಿಷಿದ್ಧ ಕರ್ಮತ್ಯಾಗ. ೧೪ ಸರ್ವಕರ್ಮ ಸಮರ್ಪಣೆ ೧೫ ತಾರತಮ್ಯ ಪಂಚಭೇದ ಜ್ಞಾನ. ೧೬ ಪ್ರಕೃತಿ ಜಡ, ಮತ್ತು ಚಿತ್ಪ್ರಕೃತಿ. ಪುರುಷರೂಪಿ ಪರಮಾತ್ಮನ ವಿವೇಚನ ಜ್ಞಾನ. ೧೭ ಅಯೋಗ್ಯರ ನಿಂದಾ. ೧೮ **ಉಪಾಸನಾ** ಹೀಗೆ ಪಾರಂಪರ್ಯದಿಂದ ಒಂದೊಂದು ಪಾವಟಿಗೆ ಏರುತ್ತಾ ಕೊನೆಗೆ ನಿಯತ ಗುರು ಉಪದೇಶದಿಂದ ಬಿಂಬರೂಪಿಯಾದ ಹರಿಯ ಅಪರೋಕ್ಷ ಇವೆಲ್ಲವೂ ಕ್ರಮೇಣ ಬ್ರಹ್ಮಾದಿ ಸರ್ವಯೋಗ್ಯ ಜೀವರಿಗೆ ಸಾಧನವಾದವುಗಳು. ಮುಕ್ತಿ ಯೋಗ್ಯರು ಕ್ರಮವಾಗಿ ಆಚರಿಸಲಿಕ್ಕೆ ಬೇಕಾದುದೆಂದು ಪಂಡಿತವರ್ಗಕ್ಕೂ, ದಾಸಕೂಟಸ್ಥರಿಗೂ ತಲೆಬಾಗಿ ಬಿನ್ನೈಸುವೆ. ದಾಸಕೂಟ ವ್ಯಾಸಕೂಟಗಳಿಗೆ ಕಿಂಚಿತ್ತಾದರೂ ಭೇದವಿಲ್ಲ. ದಾಸರಾಯರ ಗ್ರಂಥಗಳೆಲ್ಲ ಶಾಸ್ತ್ರಾರ್ಥ ಗ್ರಂಥಗಳಿಗೆ ಟೀಕಾರೂಪವಾಗಿರುವವು. ದಾಸರ ಗ್ರಂಥ ನೋಡದ ವಿನಾ ಸುಧಾದಿ ಗ್ರಂಥಗಳ ಅರ್ಥವಾಗುವುದಿಲ್ಲವೆಂಬುದು ಈಗಿನ ಪಂಡಿತರು ಮರೆಯಲಾಗದು.

ಇಂತು ಸಂತರ ಗ್ರಂಥದಲ್ಲಿ ಅನಂತ ಪರಿ ಶಾಸ್ತ್ರಾರ್ಥ ಸಂತತವಾಗಿ ಚಿಂತಿಸಲು ನಿಂತಿದೆಂದು ಕಂತು ಪಿತನಾದ ಶ್ರೀಕಾಂತನ ದಯವೇ ಅದ್ಯಂತವಾದುದು. ಆ ಅನಂತನೇ ಮಧ್ವಾಂತರ್ಯಾಮಿ ಎನ್ನಂತರಂಗನು ಸರ್ವಾಂತರ ಹೃದಯಾಂತರ್ಯಾಮಿ ಎಂದು ಚಿಂತನೆಗೆ ಬರಲಿ.

# ಕ್ಷಮಾಪನೆ

೧. ಗ್ರಂಥ ವಿಸ್ತಾರವಾಯಿತೆಂದು ಕೆಲವರ ಸೂಚನೆ ಬಂದಿದೆ ಸತ್ಯ, ದೇಶ ಕಾಲಾಧಿಪತಿಯಾದ ದೇಹೇಂದ್ರಿಯಾದಿಪತಿ ದೇಶಕಾಲ ಅಧಿಷ್ಠಾನವನುಸರಿಸಿ, ಈ ಮಹತ್ಕಾರ್ಯ ಮಾಡಿಸತೊಡಗಿದ್ದಾನೆ. ಎನ್ನ ಸ್ವಮತಿಯಲ್ಲ ಕಾರಣ ಕ್ಷಮಿಸಿರೆಂದು ಸರ್ವ ಸಜ್ಜನರ ಪಾದದಡಿ ಶಿರವಿಡುವೆ.

೨. ಈ ಐದನೆ ಭಾಗ ಪ್ರಾರಂಭವಾಗಿ ಒಂದು ವರ್ಷವಾಯಿತು. ೫ ತಿಂಗಳಲ್ಲಿ ಪೂರ್ತಿ ಮಾಡುವೆನೆಂದು ಬರೆದು ಕೊಟ್ಟವರು ೫ ತಿಂಗಳಲ್ಲಿ ೫ ಫಾರಂ ಮಾಡಲಿಲ್ಲ. ೧೦ ತಿಂಗಳಲ್ಲಿ ಬಹುಶ್ರಮದಿಂದ ೨೪ ಫಾರಂ ಆಯಿತು. ನಂತರ ೧ ತಿಂಗಳು ಕಾಗದದ ಅಭಾವ, ೨೫ ನೇ ಫಾರಂದಿಂದ ೫೦ ಫಾರಂವರೆಗೆ ಶ್ರೀ ಭಾರತಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಪಿ. ಎ. ಉಪಾಧ್ಯಾಯರು ಜಾಗ್ರತೆಯಿಂದ ಮಾಡಿ ಕೊಟ್ಟವರ ಉಪಕಾರ ಸ್ಮರಿಸುತ್ತೇನೆ.

ಮತ್ತು ಶ್ರೀ ವೇ ಪಂಡಿತ ಕೆ. ನರಸಿಂಹಾಚಾರ್ಯರು ೩೯, ೪ನೇ ಬೀದಿ ಚಾಮರಾಜಪೇಟೆ ಬೆಂಗಳೂರು. ಇವರು ಪೂರ್ಣ ಜಾಗ್ರತೆಯಿಂದ ಪ್ರೂಫ್ ನೋಡಿ ಅಚ್ಚುಮಾಡಿಸಿಕೊಟ್ಟವರಲ್ಲಿ ಮಂಡಲದ ಕೃತಜ್ಞತೆ ಇದೆ.

೬ ನೇ ಭಾಗ ಕೆಲಸವೂ ಪ್ರಾರಂಭವಾಗಿದೆ. ಚಂದಾದಾರರು ಸಹಕರಿಸಿ ಬೇಗ ಬಾಕಿ ಚಂದಾ ಕಳಿಸಿ ಸಹಕರಿಸುವದಾಗಿ ಪ್ರಾರ್ಥಿಸುವೆನು.

ತಾ. ಶಕೆ೧೮೮೫ ಜೇಷ್ಠ ಶು॥೬
ಶ್ರೀ ಮೋಹನದಾಸರ ಪುಣ್ಯತಿಥಿ
೨೮—೫—೬೩

ಹರಿದಾಸರದಾಸ,
**ಹನುಮಂತರಾವ ಗೊರಾಬಾಳ**
ಸಂಚಾಲಕಮಂಡಲ, ಲಿಂಗಸೂಗೂರು.

ಶ್ರೀ ಶ್ರೀ ಉಪೇಂದ್ರ ತೀರ್ಥ ಶ್ರೀಪಾದಂಗಳವರಿಂದ ಅನುಗೃಹೀತ

ಶ್ರೀಮಜ್ಜಗನ್ನಾಥದಾಸರ ಉಪಾಸ್ಯ

**ಗರುಡವಾಹನ ಶ್ರೀ ಲಕ್ಷ್ಮೀನರಸಿಂಹ ದೇವರು**



**ನರಸಿಂಹ ಪಾಹಿ ಲಕ್ಷ್ಮೀನರಸಿಂಹ । ಗರುಡವಾಹನ ಲಕ್ಷ್ಮೀನರಸಿಂಹ**

ಶ್ರೀ ಗುರುರಾಜೋ ವಿಜಯತೇ .

**ದುರಿತಪರಿಹಾರಕ ಮಂಗಳ ಪದಗಳು**

ಜಗನ್ನಾಥದಾಸ ವಿರಚಿತ

# ಶ್ರೀ ಲಕ್ಷ್ಮೀನರಸಿಂಹದೇವರ ಸ್ತೋತ್ರ

ಪದ ರಾಗ ಸಾವೇರಿ ಆದಿತಾಳ

ನಮೋ ನಮಸ್ತೇ ನರಸಿಂಹ ದೇವ । ಸ್ಮರಿಸುವವರ ಕಾವ ।
ಸುಮಹಿಸ ನಿನಗೆಣೆ ಲೋಕದೊಳಾವ ತ್ರಿಭುವನ ಸಂಜೀವ ॥
ಉಮೆಯರಸನ ಹೃತ್ಕಮಲ । ದ್ಯುಮಣಿ ಮಾ ರಮಣ
**ಕನಕಸಂಯಮಿವರ ವರದಾ** ॥ ಪಲ್ಲವಿ ॥

ಕ್ಷೇತ್ರಜ್ಞ ಕ್ಷೇಮಧಾಮ ಭೂಮ । ದಾನವ ಕುಲ ಭೀಮ ।
ಗಾತ್ರ ಸನ್ನುತ ಬ್ರಹ್ಮಾದಿ ಸ್ತೋಮ । ಸನ್ಮಂಗಳ ನಾಮಾ ।
ಚಿತ್ರಮಹಿಮ ನಕ್ಷತ್ರ ನೇಮಿ ಸರ್ವತ್ರ ।ಮಿತ್ರ ಸುಚರಿತ್ರ ಪವಿತ್ರಾ ॥೧॥

ಅಪರಾಜಿತ ಅನಘಾ ಅನಿರ್ವಿಣ್ಣಾ । ಲೋಕೈಕ ಶರಣ್ಯಾ ।
ಶಫರಾಕೇತು ಕೋಟಿ ಲಾವಣ್ಯ।ದೈತ್ಯೇಂದ್ರ ಹಿರಣ್ಯ ಕ ।
ಶಿಪು ತನಯನ ಕಾಯ್ದೆ ಪೆನೆನುತಲಿ ನಿ ।
ಷ್ಕಪಟ ಮನುಜ ಹರಿ ವಪುಷ ನೀನಾದೆ ॥೨॥

ತಪನ ಕೋಟಿ ಪ್ರಭಾ ಶರೀರ । ದುರಿತೌಘ ವಿದೂರ ।
ಪ್ರಪಿತಾಮಹ ಭಕ್ತಜನಮಂದಾರ । ಖಳ ವಿಪಿನ ಕುಠಾರ ॥
ಕೃಪಣ ಬಂಧು ತವ। ನಿಪುಣತನಕೆ ನಾ ।
ನುಪಮೆಗಾಣೆ ಕಾ । ಶ್ಯಪಿವರವಹನ ॥೩॥

ವೇದವೇದಾಂಗ ವೇದ ವೇದ್ಯ । ಸಾದ್ಧ್ಯ ಅಸಾಧ್ಯ ।
ಶ್ರೀದಾ ಮುಕ್ತಾಮುಕ್ತರಾರಾಧ್ಯ । ಅನುಪಮ ಅನವದ್ಯ ॥
ಮೋದಮಯನೆ ಪ್ರಹ್ಲಾದವರದ ನಿತ್ಯೋ ।
ದಯ ಮಂಗಳ ಪಾದ ಕಮಲಕೆ ॥೪॥

ಅನಿಮಿತ್ತ ಬಂಧು **ಜಗನ್ನಾಥ** । **ವಿಠಲನೆ** ಸಾಂಪ್ರತ ।
ನಿನಗೆ ಬಿನ್ನೈಪೆಯನಂತಾ । ಲಾಲಿಸುವದು ತಾತಾ ॥
ಗಣಣೆ ಇಲ್ಲದವಗುಣವೆಣಿಸದೆ ಪ್ರತಿ ।
ಕ್ಷಣಕೆ ಕಥಾಮೃತ ಉಣಿಸು ಕರುಣದೀ ||೫||

|| ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ||



## *ಶ್ರೀ ಲಕ್ಷ್ಮೀವೇಂಕಟೇಶದೇವರ ಸ್ತೋತ್ರ

ಪದ ರಾಗ ಕಾಂಬೋದಿ-ತ್ರಿವಿಡಿ ತಾಳ

ಆ ವೇಂಕಟಗಿರಿ ನಿಲಯನಂಘ್ರಿರಾಜೀವಯುಗಳಕಾನಮಿಸುವೆನು ।
ಸೇವಿಪ ಜನರಿಗಮರ ತರುವೆನಿಸಿ ಧ।ರಾವಲಯಾಖ್ಯ ದಿವಿಯೊಳೆಸೆವ ||ಪ||

ಆವನಂಘ್ರಿಜಲ ನಿಖಿಳ ಜಗತ್ತಿಗೆ ಪಾವನತರವೆಂದೆನಿಸುವದು ।
ಶ್ರೀ ವಿಧಿಭವ ಶಕ್ರಾದ್ಯರು ಆವನ । ಸೇವಕ ಜನರೆಂದೆನಿಸುವರು ॥
ತಾ ಉತ್ತುಮ ಪುರುಷನೆನಿಸಿ ಜಗವ ಸ।ದಾವ ಕಾಲ ಸಂತೈಸುವನು ।
ಜೀವಾಂತರ್ಗತನಾಗಿ ವಿವಿಧ ವೇದಾವಳಿಯಿಂದ ತುತಿಸಿಕೊಂಬ ||೧||

ವಾತನೊಳಗೆ ಅಹಿಪ(ತಿ) ವಿರೋಧಿಸೆ ತವ ಸ। ತ್ವಾತಿಶಯ ತೋರೆಂದೆನುತ ।
ಜಾತರೂಪ ಶೈಲಾತ್ಮಜನಪ್ಪಿರೆ । ವೀತಿಹೋತ್ರ ಸಖ ಕಿತ್ತ್ಯೊಗಿಯೆ ॥
ವೀತಕರ್ನನಳವಳಿದು ತುತಿಸಲು ನಿ।ಕೇತನ ತ್ರಯಗಳುಳಿದು ವೇಗ ।
ಧಾತ ಮಹಿಳೆ ತೀರ್ಥದಿ ಭೂಲಕ್ಷ್ಮೀ ಸ।ಮೇತನಾಗಿ ಮೋದಿಸುತಿಪ್ಪ ||೨||

---

* ಈ ಸ್ತೋತ್ರವು ಹರಿಕಥಾಮೃತಸಾರ ಸಂಧಿ ೨೧-೨೨ರ ಸಾರರೂಪವಾಗಿದೆ.

ಭೂಸುರನೋರ್ವನು ತೋಂಡಮಾನ ಧ| ಣೀಶನ ಗೃಹದೊಳಿರಿಸಿ ಸತಿಯಾ|
ಕಾಶಿಗೆ ಪೋಗಲು ವಿಸ್ಮೃತಿಯಲಿ ನೃಪ | ಪೋಷಿಸದಿರೆ ಪಂಚತ್ವವನೂ ||
ಆ ಸರೋಜಮುಖಿ ಐದೆ ದ್ವಿಜವರೋ|ಲ್ಲಾಸದಿ ಕೇಳ್ದ ನಿಜ ಮಹಿಷಿಯಾ |
ಕ್ಲೇಶದಿ ಭೂಮಿಪ ತುತಿಸೆ ಸಲಿಲದಿ ಸು|ವಾಸನೆಯಾಕ್ಷಣ ತೆಗೆದಿತ್ತ ||೩||

ವೃದ್ಧ ಬ್ರಾಹ್ಮಣನು ತುತಿಸೆ ಸಲಿಲದೊಳ | ಗದ್ದಿ ಕುಮಾರತ್ವವನಿತ್ತಾ |
ಅಧ್ವರನೆಸಗುವ ಋಷಿಗಳ ಮಂತ್ರದ | ಪದ್ಧತಿ ತಿದ್ದಿ ಯಜ್ಞವ ಮಾಡ್ದ ||
ಮಧ್ಯರಾತ್ರಿಯೊಳು ಬೆಸಗೊಂಡ ನೃಪನು|ಪದ್ರವ ಕಳೆದಾಯುಧವಿತ್ತು |
ಮೃದ್ಭಾಂಡವ ರಚಿಸುವವಗೊಲಿದವನ ಚೋದ್ಯ ತೋಂಡಮಾನಗೆ ತೋರ್ದ ||೪||

ಮನೋವಾಕ್ಕಾಯದಿ ಬಿಡದೆ ಸೇವಿಸುವ|ಜನರ ಸಂಚಿತ ಕುಕರ್ಮಗಳ |
ಮೊನಿಯ ಮುರಿದು ಆಗಾಮಿ ಫಲಂಗಳ | ಅನುಭವಕೀಯದೇ ಪ್ರಾರಬ್ಧ ||
ಉಣಿಸಲು ಭವದಲಿ ತನ್ನ ಮೂರ್ತಿ ಚಿಂ|ತನೆ ಇತ್ತು ಸ್ವರೂಪಸುಖ|
ಅನುದಿನದಲಿ ವ್ಯಕ್ತಿಯ ಮಾಡಿಸಿ ಕೊ|ಟ್ಟನಿಮಿತ್ತಾಪ್ತನೆನಿಸುತಿಪ್ಪ ||೫||

ಏಕಮೇವ ರತ್ನಾಕರ ಮಂದಿರ | ಆಕೂತಿಜ ಯಜ್ಞಾಕರನೆ |
ಲೋಕ ವಿಲಕ್ಷಣ ಸೂಕರಾತ್ಮ ಪಿ|ನಾಕಿ ವಿನುತ ಲಕ್ಷ್ಮೀಕಾಂತ ||
ಗೋಕುಲ ಮಂದಿರ ಏಕಾಂತಿಗಳ ನಿ|ರಾಕರಿಸದೆ ಲೋಕೈಕ ಸುಖಾ |
ಶೋಕರಹಿತ ನಿಜಲೋಕವನಿತ್ತು ನಿ|ರಾಕುಲ ಸುಖಗಳ ತಾ ಕೊಡುವ ||೬ |

ದಿನಪನೊಳಗೆ ವಾಜಿನಿ ವಸು ತಾ ಎಂ|ದೆನಿಸಿ ಜಯಾಪತಿ ಪ್ರದ್ಯುಮ್ನ |
ಅನಿರುದ್ಧಾದಿ ಚತುರ್ಮೂರ್ತ್ಯಾತ್ಮಕ |.ತನಗೆ ತಾನೆ ಪೂಜಕ ಪೂಜ್ಯ ||
ಅನುಪಮನಾಮದಿ ಕರೆಸುತಲಿಹ್ಯ ತ|ನ್ನನು ಈ ಪರಿ ಧೇನಿಸುತಿಪ್ಪ |
ಮನುಜರಿಗೊಲಿದು **ಜಗನ್ನಾಥ ವಿಠ್ಠಲ**|ಜನನ ಮರಣಗಳ ಪರಿಹರಿಪ||೭||

|| ಶ್ರೀ ಗುರುಮಧ್ವೇಶಕೃಷ್ಣಾರ್ಪಣಮಸ್ತು ||

# ಶ್ರೀ ತಾರತಮ್ಯ ಉಪಾಸನಾ ವಿಷಯೇ ಆದರ ಜನನಾಯ

### ಭಗವಾನ್ ಶ್ರೀಕೃಷ್ಣನ ಉಪದೇಶ

**ಗಾರುಡ ಬ್ರಹ್ಮಕಾಂಡ ಅಧ್ಯಾಯ ೩೧—ತಾರತಮ್ಯಾದರ ವಿಷಯೇ**

"ನಾಸ್ಮಿನ್ಕ್ಶ್ಚಿದ್ವಿಷಯೇ ವೀಂದ್ರ ಆದರೋ ನಾಸ್ತಿ ಸರ್ವಥಾ || ಯದ್ಯಾದರೋ ಭವೇತ್ತತ್ರ ರಘುಟೇತಿ ಮೋಕ್ಷಗೋ ಭವೇತ್ ||೧೮|| ಅತಸ್ತ್ತಜ್ಞಾನಿನಾಂ ವೀಂದ್ರ ನೈಪುಣ್ಯಂ ನಾಸ್ತಿ ಸರ್ವಥಾ | ಜ್ಞಾತವ್ಯಂ ಚ ಮಯಾ ಸಮ್ಯಗಿತ್ಥಂ ನಾಸ್ತ್ಯಾದರಃ ಕ್ವಚಿತ್ ||೧೯|| ಯಥಾ ನೈಯಾಯಿಕೇ ಶಾಸ್ತ್ರೇ ಶಬ್ದಶಾಸ್ತ್ರೇ ತಥೈವ ಚ | ಆದರೋ ಹ್ಯಸ್ತಿ ಪಕ್ಷೀಂದ್ರ ತಥಾ ನಾಸ್ತ್ಯತ್ರ ಚಾದರಃ ||೨೦|| ಯಥಾ ಕೌಶಲ್ಯತಾ ಚಾಸ್ತಿ ವ್ಯಾಖ್ಯಾನೇ ಖಗಸತ್ತಮ || ತಥಾ **ತರತಮಜ್ಞಾನೇ** ಕೌಶಲ್ಯಂ ನಾಸ್ತಿ ಸರ್ವಥಾ ||೨೧|| ವ್ಯಾಖ್ಯಾನ ಕುಶಲಾಸ್ತೇಽಪಿ ಸ್ವಸಿದ್ಧಾಂತವಿಚಾರಣೇ | ನ ವೈಷ್ಣವಾಸ್ತೇ ವಿಜ್ಞೇಯಾಃ ಕ್ರಮಜ್ಞಾನೇ ಹ್ಯನಾದರಾಃ ||೨೨|| ದುರ್ಲಭಂ ತರತಮಂ ಜ್ಞಾನಂ ವೈಷ್ಣವಾನಾಂ ಕಲೌ ಖಗ | ದ್ವಿಷಡ್ಗುಣಯುತೋ ವಾಪಿ ಚತುರ್ವೇದಯುತೋಽಪಿ ಚ ||೨೩|| ತಾರತಮ್ಯ ಜ್ಞಾನಶೂನ್ಯಃ ಸ ವೈ **ಶೂದ್ರಸಮಃ ಸ್ಮೃತಃ | ಅನಾಚಾರೀ ವೇದಹೀನಸ್ತಾರತಮ್ಯವಿದಃ ಖಗ** ||೨೪|| ಸ ಏವ ವೇದ ವಿದ್ವಿಪ್ರಾದುತ್ತಮಂ ವಿದ್ಧಿ:ತಂ ಖಗ|ತಾರತಮ್ಯವಿಹೀನೋ ಯೋ ವಿಷ್ಣುಃ ಸರ್ವೋತ್ತಮೇತಿ ಚ||೨೫|| ವದನ್ನಪಿ ಸ ವೈವಾಪಿ ನ ಪ್ರೀಣಾತಿ ಹರಿಃ ಸ್ವಯಮ್ | ತಾರತಮ್ಯವಿಹೀನಸ್ಯ ವೇದಾನಾಂ ಪಠನಾದಪಿ ||೨೬|| ಫಲಂ ನಾಸ್ತ್ಯೇವ ನಾಸ್ತ್ಯೇವ **ಯಥಾಸೂತಕಿನಸ್ತಥಾ** | ವೇದಸ್ಯ ಪಠನಾತ್ಪುಣ್ಯಂ ಶ್ರುತ್ಯಾದೌ ಉಚ್ಯತೇ ಖಗ ||೨೭|| ತಾರತಮ್ಯಜ್ಞಾನವತಾಮುಚ್ಯತೇ **ನ ತು ಮಾಯಿನಾಂ | ಅವೈಷ್ಣವಾನಾಂ ಶೂದ್ರಾಣಾಂ ಚಾಂಡಾಲಾನಾಂ ಖಗೇಶ್ವರ ||೨೮|| ತಾರತಮ್ಯವಿಹೀನಾನಾಂ ವೈಷ್ಣವಾನಾಮಪಿ ದ್ವಿಜ | ವೇದಸ್ಯ ಪಠನಾದ್ವೀಂದ್ರ ವ್ಯರ್ಥಮೇವ ನ ಸಂಶಯಃ || ೨೯ || ಇದಂ ತಾರತಮ್ಯಜ್ಞಾನಂ ದುರ್ಲಭಂ ವೈ ಕಲೌ ನೃಣಾಮ್ ||**

## ಇದರ ಸಾರಾಂಶವೇನೆಂದರೆ

೧. ಅನವರತ ತಾರತಮ್ಯ ಉಪಾಸನಾ ಜ್ಞಾನಿಗೆ ತ್ವರೆಯಾಗಿ ಮೋಕ್ಷವಾಗುತ್ತದೆ.

೨. ನ್ಯಾಯಶಾಸ್ತ್ರ, ಶಬ್ದಶಾಸ್ತ್ರ(ವ್ಯಾಕರಣ)ದಲ್ಲಿ ಪಂಡಿತರಿಗೆ ಆದರವಿದ್ದಂತೆ ತಾರತಮ್ಯ ವಿಷಯದಲ್ಲಿ ಆದರವಿರುವುದಿಲ್ಲ.

೩. ವ್ಯಾಖ್ಯಾನ ಕೌಶಲ್ಯದಲ್ಲಿ ಆದರವಿದ್ದಂತೆ ತಾರತಮ್ಯ ವಿಷಯದಲ್ಲಿ ಅನಾದರ.

೪. ವ್ಯಾಖ್ಯಾನ ಕೌಶಲ್ಯ ಪಂಡಿತನಾದರೂ, ಸ್ವಸಿದ್ಧಾಂತ ವೈಷ್ಣವ ತರತಮ ಜ್ಞಾನ ಧ್ಯಾನದಲ್ಲಿ ಅನಾದರ.

೫. ದ್ವಿಷಡ್ಗುಣಯುತ ವೈಷ್ಣವ ಬ್ರಾಹ್ಮಣನಾದರೂ, ಕ್ರಮವಾದ ತಾರತಮ್ಯ ಜ್ಞಾನದಲ್ಲಿ ಅನಾದರ.

೬. ಚತುರ್ವೇದ ಪಾಠಿಯಾದರೂ ತರತಮ ಜ್ಞಾನಶೂನ್ಯನು ಶೂದ್ರ ಸಮಾನನು.

೭. ವಿಷ್ಣು ಸರ್ವೋತ್ತಮನೆಂಬ ತಾರತಮ್ಯ ಜ್ಞಾನ ವಿಹೀನನಾದವನು ಪಾಪಿಯು. ಇವನಿಗೆ ಹರಿಯು ಪ್ರೀತನಾಗುವುದಿಲ್ಲ.

೮. ತಾರತಮ್ಯ ಜ್ಞಾನ ವಿಹೀನನು ಸರ್ವದಾ ವೇದಗಳನ್ನು ಪಠನ ಮಾಡಿದರೂ, ಸೂತಕದಲ್ಲಿದ್ದವನು ಮಂತ್ರ ಪಠಿಸಿದಂತೆ ಅವನಿಗೆ ಏನೂ ಫಲವಿಲ್ಲ.

೯. ವೇದ ಪಠಣೆಯು ಶ್ರುತ್ಯಾದಿಗಳಲ್ಲಿ ಪುಣ್ಯಕರವೆಂದು ಹೇಳಿದೆ. ಅದು ಯಾರಿಗೆಂದರೆ ತಾರತಮ್ಯಜ್ಞಾನವುಳ್ಳವರಿಗೆ ಮಾತ್ರ ಬಂಧನದಿಂದ ಮೋಚಕವು. ಮಾಯಿಗಳು ವೇದ ಪಠಣೆ ಮಾಡಿದರೂ ಬಂಧ ಮೋಚನವಿಲ್ಲ.

೧೦. ಅವೈಷ್ಣವರೂ, ಶೂದ್ರರೂ, ಚಾಂಡಾಲರೂ, ಮತ್ತು ತಾರತಮ್ಯ ಜ್ಞಾನ ಧ್ಯಾನವಿಲ್ಲದ ವೈಷ್ಣವಾಭಾಸಕರು, ವೇದ ಪಠಣೆ ಮಾಡಿದರೂ ವ್ಯರ್ಥವೇ ಸರಿ. ಇದಕ್ಕೆ ಸಂಶಯವಿಲ್ಲ. ಕಲಿಯುಗದಲ್ಲಿ ವೈಷ್ಣವರಿ

ಗಾದರೂ ತಾರತಮ್ಯ ಜ್ಞಾನವು ದುರ್ಲಭವು. ಎಂದು ಶ್ರೀಕೃಷ್ಣನು ಗರುಡ ದೇವರಿಗೆ ಉಪದೇಶಿಸಿರುವನು.

೧೧. ಇದನ್ನು ಚನ್ನಾಗಿ ಮನವರಿತು ತಾರತಮ್ಯ ಜ್ಞಾನ ಧ್ಯಾನದಲ್ಲಿ ಆದರ ಉಳ್ಳವರಾಗಿ ಅನಭಿಜ್ಞರು ಗುರುಗಳಿಂದ ಅರಿತು ಪಂಡಿತರು ಶ್ರೀ ಮದಾಚಾರ್ಯರ ಪ್ರಸ್ಥಾನತ್ರಯದಲ್ಲಿ ತಾರತಮ್ಯ ಉಪಾಸನೆಯೇ ಮುಖ್ಯವೆಂದು ಆಜ್ಞೆಯಿತ್ತಂತೆ ಈ ತಾರತಮ್ಯ ಸಂಧಿಗಳ ಸಾರಾರ್ಥ ತಿಳಿದು ಧ್ಯಾನ ಉಪಾಸನೆ ಮಾಡಿದರೇನೇ ಮೋಕ್ಷ. ಕೇವಲ ಬಾಹಿರ ಘಟಪಟಾದಿ ಶಬ್ದ ಶಾಸ್ತ್ರ ಪಾಂಡಿತ್ಯದಿಂದ ಮೋಕ್ಷ ಮಾರ್ಗ ವಿಲ್ಲ.

# ಗುಣತಾರತಮ್ಯಾದಿ ಧ್ಯಾನೋಪಾಸನೆಯ ಪೀಠಿಕೆ

**"ತಾರತಮ್ಯ ಜ್ಞಾನಪೂರ್ವಂ ತದಂತರ್ಗತತ್ವೇನೋಪಾಸಿತೋ ಹರಿರ್ಮೋಕ್ಷಾದಿ ಸರ್ವಪುರುಷಾರ್ಥಪ್ರದ ಇತ್ಯತೋ ದೇವಾನಾಂ ತಾರತಮ್ಯಮಾಹ"** ಎಂದು **ಶ್ರೀ ಮಂತ್ರಾಲಯ ಪ್ರಭುಗಳು ಛಾಂದೋಗ್ಯ ಉಪನಿಷತ್ ಖಂಡಾರ್ಥಲ್ಲಿ ಆಜ್ಞಾ ಕೊಡಿಸಿದ್ದಾರೆ.** ಅಂದರೆ ಶ್ರೀಹರಿಯನ್ನು ಉಪಾಸಿಸಲಿಕ್ಕೆ, ಗುರುಪರಂಪರಯಾ, ಪುಷ್ಕರಾದಿ ಬ್ರಹ್ಮ ಪರಿಯಂತವಾಗಿ ಉತ್ತಮೋತ್ತಮ ಗುರುಗಳು, ಆಯಾ ದೇವತೆಗಳನ್ನು ಕ್ರಮವಾಗಿ ತಾರತಮ್ಯದಿಂದ ತಿಳಿದು ಆ ದೇವತೆಗಳಲ್ಲಿ ಅಂತರ್ಗತನಾದ ಶ್ರೀ ಹರಿಯನ್ನು ಉಪಾಸನೆ ಮಾಡಿದರೆ ಶ್ರೀಹರಿಯು ಮೋಕ್ಷ ಮೊದಲಾದ ಸರ್ವ ಪುರುಷಾರ್ಥಗಳನ್ನು ಕೊಡುತ್ತಾನೆ. ಆದಕಾರಣ ದೇವತೆಗಳ ತಾರತಮ್ಯವರಿಯುವದು ಅತ್ಯಾವಶ್ಯ. ಆಯಾ ದೇವತೆಗಳಂತರ್ಗತಹರಿಯು ಆಯಾ ಶಕ್ತಿ ಕೊಟ್ಟು, ಪ್ರಸನ್ನನಾಗಿ ಮುಕ್ತಿಯಲ್ಲಿ ಆನಂದವೀಯುತ್ತಾನೆ. ಮೊದಲಿಗೆ ದೇವತೆಗಳ ಉತ್ಪತ್ತಿಕ್ರಮ ಹೇಳುತ್ತಾರೆ.

### ಛಾಂದೋಗ್ಯ ಭಾಷ್ಯ ಅಧ್ಯಾಯ ೭ ರಲ್ಲಿ ಶ್ರುತಿ

(೧) "ಅಥಾತಃ ಸಂಭೂತಿ ಪರಮಾದ್ವಿದ್ಯಾ. ವಿದ್ಯಾಯಾಃ ಪ್ರಾಣಃ. ಪ್ರಾಣಾಚ್ಛ್ರದ್ಧಾ. ಶ್ರದ್ಧಾಯಾಃ ಶಿವಃ. ಶಿವಾದ್ಬುದ್ಧಿಃ. ಬುದ್ಧೇರಿಂದ್ರಃ. ಇಂದ್ರಾತ್ತೈಜಸಃ ಪ್ರಾಣಾತ್ತೈಜಸಾದನಿರುದ್ಧೋ ನಿರುದ್ಧಾತ್ ಸ್ಪರ್ಶವಾತಃ. ಸ್ಪರ್ಶವಾತಾತ್ಸೋಮಸ್ಸೋಮಾದ್ವರುಣೋ ವರುಣಾದಗ್ನಿರಗ್ನೇರ್ಮಿತ್ರೋ ಮಿತ್ರಾತ್ ಪರ್ಜನ್ಯಃ। ಪರ್ಜನ್ಯಾತ್ ಸ್ವಾಹಾ. ಸ್ವಾಹಾಯಾ ಉಷಾ ಜಾಯತೇ। ತೇಷಾಂ ಪರಃ **ಪರೋ ಜ್ಯಾಯಾನ್ಗುಣೈರುತ್ತರ ಉತ್ತರಃ** ಪ್ರತ್ಯವರಃ ಪರಸ್ಮಾತ್ಪರಸ್ಮಾದುತ್ತರ ಉತ್ತರೋ ಮುಚ್ಯತೇ ಸ್ವಂ ಸ್ವಂ ಭಾವಮಾಪದ್ಯತೇ.

(೨) ನೈಷಾಂ ಪಾರಾವರ್ಯಮುಚ್ಛಿದ್ಯತೇ ಕದಾಚನ ನೈಷಾಂ ಪಾರಾವರ್ಯಮುಚ್ಛಿದ್ಯತೇ ಕುತಶ್ಚನ ಪಾರಾವರ್ಯೇಣ ಬ್ರಹ್ಮೋಪಯಂತಿ ಪಾರಾವರ್ಯೇಣೈವ ಮುಕ್ತಾಃ ಸಂಚರಂತಿ ಇತ್ಯಾದಿ ಶ್ರುತೇಶ್ಚ

**ಭಾಷ್ಯ** (೩) ನಾಮಾದಿ ಮಾರುತಾಂತೇಷು ದೇವೇಷ್ವೇಭ್ಯಶ್ಚ ಭೇದತಃ। ಉಪಾಸಿತೋ ಹರಿರ್ಮುಕ್ತಿಂ ದದ್ಯಾನ್ನಾಸ್ತ್ಯತ್ರ ಸಂಶಯಃ॥

ಇತಿ ಸತ್ತ್ವತ್ವೇ||೫|| **ಶ್ರೀ ಸರ್ವಜ್ಞರ ಉಕ್ತಿ.** ಇವರ ಸಾರಾಂಶವೇನೆಂದರೆ ನಿತ್ಯಮುಕ್ತಳಾದ ರಮೆಯು ಶ್ರೀಲಕ್ಷ್ಮಿಯು ಶ್ರೀಹರಿ ಇಚ್ಛೆಯಂತೆ ಪರಾಧೀನ ಅವಾಪ್ತಳಾಗಿ ಆವಿರ್ಭೂತಳಾದಳು. ಶ್ರೀ ಲಕ್ಷ್ಮಿಯಿಂದ ಪ್ರಾಣನು, ಪ್ರಾಣನಿಂದ ಭಾರತಿಯು, ಭಾರತಿಯಿಂದ ಶಿವನು, ಶಿವನಿಂದ ಪಾರ್ವತಿಯು, ಪಾರ್ವತಿಯಿಂದ ಇಂದ್ರನು, ಇಂದ್ರನಿಂದ ಆಹಂಕಾರಿಕಪ್ರಾಣ, ಆಹಂಕಾರಿಕ ಪ್ರಾಣನಿಂದ ಅನಿರುದ್ಧನು, ಅನಿರುದ್ಧನಿಂದ ಸ್ಪರ್ಶಾಭಿಮಾನಿ ಪ್ರವಹ ವಾಯುವು, ಪ್ರವಹ ವಾಯುವಿನಿಂದ ಚಂದ್ರನು, ಚಂದ್ರನಿಂದ ವರುಣ, ವರುಣನಿಂದ ಅಗ್ನಿಯು, ಅಗ್ನಿಯಿಂದ ಮಿತ್ರನು, ಮಿತ್ರನಿಂದ ಪರ್ಜನ್ಯನು, ಪರ್ಜನ್ಯನಿಂದ ಸ್ವಾಹಾದೇವಿಯು, ಸ್ವಾಹಾದೇವಿಯಿಂದ ಉಷಾದೇವಿ ಸೃಷ್ಟಿ, (ಇಲ್ಲಿ ಆಯಾ ಸಮಕಕ್ಷದಲ್ಲಿದ್ದ ಇತರ ದೇವತೆಗಳನ್ನು ಸಹ ಗ್ರಹಿಸಬೇಕು.) ಮೊದಲು ಪುಟ್ಟಿದವರು ಗುಣದಿಂದ ಶ್ರೇಷ್ಠರು. ಹೆಚ್ಚೆಚ್ಚು ಗುಣವುಳ್ಳವರು. ನಂತರ ಕ್ರಮವಾಗಿ ಪುಟ್ಟಿದವರು ಅವರರು. ಒಬ್ಬರಕಿಂತಲೂ ಒಬ್ಬರು ಕಡಿಮೆ ಗುಣವುಳ್ಳವರು. ಉತ್ತಮೋತ್ತಮರಿಂದ ಅವರರು ಮೊದಲಿಗೆ ಮುಕ್ತರಾಗಿ ಸ್ವಸ್ವರೂಪ ಹೊಂದುತ್ತಾರೆ. ಈ ತಾರತಮ್ಯವು ನಿತ್ಯವು, ಮೋಕ್ಷದಲ್ಲಿಯೂ ನಿಯತವಾಗಿದೆ. ದೇವತೆಗಳಲ್ಲಿ ಈ ತಾರತಮ್ಯವು ಯಾವಾಗಲೂ, ಯಾವುದರಿಂದಲೂ ನಾಶವಾಗುವದೇ ಇಲ್ಲ. ತಾರತಮ್ಯದಿಂದಲೇ ಪರಬ್ರಹ್ಮನನ್ನು ಪೊಂದುತ್ತಾರೆ. ಮುಕ್ತಿಯಲ್ಲಿ ಸಹ ತಾರತಮ್ಯದಿಂದ ಕ್ರೀಡಿಸುತ್ತಾರೆ. ನಾಮಾಭಿಮಾನಿ ಉಷಾದೇವಿಯಿಂದ ಆರಂಭಿಸಿ, ಪ್ರಾಣಪರಿಯಂತರ ಆಯಾ ದೇವತೆಗಳಲ್ಲಿ ಶ್ರೀಹರಿಯು ಅಂತರ್ಗತನು, ಅಭಿನ್ನನು, ಸರ್ವೋತ್ತಮನೆಂದು ಉಪಾಸನೆ ಮಾಡಿದರೆ, ಮೋಕ್ಷವನ್ನು ಕೊಡುವನು. ಇದರಲ್ಲಿ ಸಂದೇಹವಿಲ್ಲ, **ಕಾರಣ ತಾರತಮ್ಯ ಉಪಾಸನೆ ಮುಖ್ಯ.**

ಇನ್ನು ಸರ್ವದೇವತೆಗಳಲ್ಲಿ ನೀಚೋಚ್ಚಭಾವವು, ತಾರತಮ್ಯವು ಇದ್ದಂತೆ. ಅವರಂತರ್ಯಾಮಿ ಹರಿಗೆ ನೀಚೋಚ್ಚ ಭಾವವಿಲ್ಲ. ಸರ್ವ ದೇವತೆಗಳಲ್ಲಿ ಸಮನಾದ ಹರಿಯು ಒಬ್ಬನೆ. **ಉತ್ತಮೋತ್ತಮರಲ್ಲಿ ಶ್ರೀ ಹರಿಯಧ್ಯಾನ ಮಾಡುವದರಿಂದ** ಶ್ರೀಹರಿಯ ಪ್ರೀತಿ ಅಧಿಕವಾಗಿ ಉತ್ತಮ ಪ್ರಸಾದವಾಗುತ್ತದೆಂದು ಹೇಳುತ್ತಾರೆ.

**ಛಾಂದೋಗ್ಯಭಾಷ್ಯ ||** (೧) "ಉಷಾದಿಮಾರುತಾಂತೇಷು ಸಮಃ ಸಮಗುಣೋಪಿ ಸನ್ | ಧ್ಯಾತಃ ಪ್ರೀತಿಂ ಹರಿರ್ಯಾಯಾದಧಿಕಾಮುತ್ತ್ರ-ರೋತ್ತರೇ ||

ಉತ್ತಮೇಷೂತ್ತಮಾ ಪ್ರೀತಿಸ್ತಸ್ಯ ತತ್ರ ಸ್ಮೃತಃ ತತಃ || ಧ್ಯಾತು ರಪ್ಯುತ್ತಮಾಂ ಪ್ರೀತಿಂ ಯಾಯಾನ್ನಾಸ್ತ್ಯತ್ರ ಸಂಶಯಃ ||

ತಾರತಮ್ಯಪರಿಜ್ಞಾನಾತ್ತೇಷು ಧ್ಯಾತೋ ವಿಮುಕ್ತಿದಃ || ಪ್ರೀತಿಂ ನ ಚಾನ್ಯಥಾ ಯಾಯಾದಿತಿ ಶಾಸ್ತ್ರಸ್ಯ ನಿರ್ಣಯಃ || ಇತಿ ತತ್ತ್ವವಿವೇಕೇ ||

**ಇದರ ಸಾರಾಂಶವೇನೆಂದರೆ** ಶ್ರೀ ಸರ್ವಜ್ಞರು ಬಹು ರಹಸ್ಯವನ್ನು ವಿವರಿಸುತ್ತಾರೆ. ನಾಮಾಭಿಮಾನಿ ಉಷಾದೇವಿಯನ್ನಾರಂಭಿಸಿ ಮುಖ್ಯ ವಾಯುಪರಿಯಂತ ಉತ್ತಮೋತ್ತಮ ದೇವತೆಗಳಲ್ಲಿ ಶ್ರೀಹರಿಯು ಸ್ವಸ್ವರೂಪ ದಿಂದ ವ್ಯತ್ಯಾಸವಿಲ್ಲದೆ ಸಮನಾಗಿ ಸಮಗುಣವುಳ್ಳವನಾಗಿ **ಕಿಂಚಿತು ಭೇದ ವಿಲ್ಲದೇ ನಿರ್ದೋಷಿಯಾಗಿರುವನೆಂದು ಶ್ರೀಹರಿಯನ್ನು ಜೀವರು ಧ್ಯಾನಿಸಿದರೆ ಪರಮಾತ್ಮನು ಪ್ರೀತಿ ಹೊಂದುತ್ತಾನೆ. ಉತ್ತಮೋತ್ತ ಮರಲ್ಲಿ ಧ್ಯಾನಿಸಿದರೆ ಶ್ರೀ ಹರಿಗೆ ಹೆಚ್ಚು ಪ್ರೀತಿಯಾಗುತ್ತದೆ.** ಏಕೆಂದರೆ ಶ್ರೀಹರಿಗೆ ಉತ್ತಮರಾದ ದೇವತೆಗಳಲ್ಲಿ ಉತ್ಕೃಷ್ಟವಾದ ಪ್ರೀತಿ ಇರುವದರಿಂದ ಉತ್ತಮರಲ್ಲಿ ಶ್ರೀಹರಿಯನ್ನು ಉಪಾಸಿದರೆ ಉತ್ತಮವಾದ ಪ್ರೀತಿಯನ್ನು ಮಾಡುವನು, ಸಂದೇಹವಿಲ್ಲ. ಏಕೆಂದರೆ ಉತ್ತಮೋತ್ತಮರು ಶ್ರೀಹರಿಯ ಗುಣಗಳನ್ನು ಹೆಚ್ಚುಹೆಚ್ಚಿಗೆ ಧ್ಯಾನಿಸುವದರಿಂದ ಅವರ ಜ್ಞಾನ ಆನಂದಾದಿ ಗುಣೋಪಾಸನೆ, ದೇವತೆಗಳ ತಾರತಮ್ಯ ಜ್ಞಾನವು ಅತ್ಯಾ ವಶ್ಯಕವು.

(೩) ಕ್ರಮೇಣ ಆಯಾ ದೇವತೆಗಳಲ್ಲಿ ತಾರತಮ್ಯ ಜ್ಞಾನ ಬಿಡದೆ ಶ್ರೀಹರಿಯನ್ನು ಧ್ಯಾನಿಸಿದರೆ, ಧ್ಯಾನದಿಂದ ಪ್ರೀತನಾಗಿ ಸ್ವಯೋಗ್ಯ ಮೋಕ್ಷ ವನ್ನು ಕೊಡುತ್ತಾನೆ. ತಾರತಮ್ಯ ಪರಿಜ್ಞಾನವಿಲ್ಲದೆ ಧ್ಯಾಸಿಸಿದರೆ ಶ್ರೀ ಹರಿಯು ಪ್ರೀತಿಯನ್ನು ಹೊಂದಲಾರನು. ಎಂದು ಸಕಲ ಶಾಸ್ತ್ರಾರ್ಥಗಳ ನಿರ್ಣಯವು ಇದೆಂದು ತತ್ತ್ವವಿವೇಕದಲ್ಲಿ ಹೇಳಿದೆಂದು **ಶ್ರೀ ಸರ್ವಜ್ಞರ ಭಾಷ್ಯದ ಉಕ್ತಿ ನಂಬಿ ತಾರತಮ್ಯ ಉಪಾಸನೆ ಮುಖ್ಯವಾಗಿ**

**ಮಾಡುವುದು.** ನೀಚಾಧಿಷ್ಠಾನದಲ್ಲಿ ಅಚೇತನವಾದ ಜಡಗಳಲ್ಲಿ ಉಪಾಸನೆ ಮಾಡಬಾರದೆಂದು ಮುಂದೆ ಉಪನಿಷತ್ತಿನಂತೆ ಭಾಷ್ಯವೂ ಇದೆ.

ಇನ್ನು ನಾಮಾಭಿಮಾನಿ ಉಷಾದೇವಿಯನ್ನಾರಂಭಿಸಿ ಪ್ರಾಣಪರ್ಯಂತ ಉಪಾಸನೆ ತಾರತಮ್ಯದಿಂದ ಏಕೆ ಮಾಡುವದೆಂದರೆ, ವೇದಾದಿಗಳಲ್ಲಿ ಹೇಳಿದಂತೆ.

ಆಯಾ ದೇವತೆಗಳು ೧ ನಾಮ=ಉಷಾ, ೨ ವಾಕ್=ಸ್ವಾಹಾ, ೩ ಮನಃ=ಪರ್ಜನ್ಯ, ೪ ಸಂಕಲ್ಪ=ಮಿತ್ರ, ೫ ಚಿತ್ತ=ಅಗ್ನಿ, ೬ ಧ್ಯಾನ=ವರುಣ, ೭ ವಿಜ್ಞಾನ=ವಿಧು, ಚಂದ್ರ ೮ ಬಲ=ಪ್ರವಹವಾಯು, ೯ ಅನ್ನ=ಅನಿರುದ್ಧ, ೧೦ ಅಪ್=ಅಹಂಕಾರಿಕ ಪ್ರಾಣ ೧೧ ತೇಜ=ಇಂದ್ರ, ೧೨ ಆಕಾಶ=ರುದ್ರ, ೧೩ ಸ್ಮರ=ವಾಣೀ, ೧೪ ಆಶಾ=ಪ್ರಾಣಾದಿ ದೇವತೆಗಳು ಆಯಾ ಶಬ್ದವಾಚ್ಯರಾಗಿ, ಆಯಾ ದೇವತೆಗಳನ್ನು ಆಯಾ ಶಬ್ದಗತ ಫಲಾಭಿಮಾನಿಗಳನ್ನು ತಿಳಿದು ಉಪಾಸಿಸಿದರೆ ಆಯಾ ಫಲ ಕೊಡುವರು. ಆಯಾ ದೇವತೆಗಳ ಉಪಾಸನೆಗೆ ಆಯಾ ಫಲ ಕೊಡುವರಾದುದರಿಂದ ತಾರತಮ್ಯ ಉಪಾಸನೆಯೇ ಪ್ರಾಮುಖ್ಯ. **ಛಾಂದೋಗ್ಯ ಉಪನಿಷತ್ ಭಾಷ್ಯ** ಅಧ್ಯಾಯ ೭ ರಲ್ಲಿ ಹೇಳಿದಂತೆ ಸರ್ವಜ್ಞರ ಭಾಷ್ಯ **ಕ್ರಮವಾಗಿ ಕೊಟ್ಟು, ಮುಂದೆ ಖಂಡಾರ್ಥದಂತೆ ಅರ್ಥಕೊಡುತ್ತದೆ.**

೧. **ಉಷಾ=ವಿಷ್ಣೋರ್ನಾಮ** ಯತೋ ವಿದ್ಯಾ ಸರ್ವನಾಮೇತ್ಯತಃ ಸ್ಮೃತಃ। ನಾಮಾಭಿಮಾನಿನೀ **ಚೋಷಾ ತಸ್ಯಾಂ** ಬ್ರಹ್ಮ ಪರಂ ಸ್ಮರೇತ್ ॥ ಯದೇಷಾ ನ ತ್ವಮೇಯಾಸ್ಯಾನ್ಮಿ (ನ್ಮೇ)ಯತೇ ಹ್ಯುಷಿಸಿ ಧ್ರುವಮ್ । ರಾತ್ರಿಮಾನಮಜಾನದ್ಭಿಃ ತತೋ ನಾಮೇತ್ಯುಷಾ ಸ್ಮೃತಾ ॥೭-೧॥

(೨) **ಸ್ವಾಹಾ ಯಸ್ಯಾಸ್ತು ಭೂಯಸೀ।** ಸ್ವಾಹಾ ಧರ್ಮಜ್ಞಾನ ಸುಖಾದಿಭಿಃ। ಸರ್ವೈರ್ಗುಣೈರ್ವಿಮುಕ್ತಾ ಚ ತಥಾ ಬಂಧೇ ಚ ಸರ್ವದಾ। ವಾಚೋಽಭಿಮಾನಿನೀ ಸೈವ ವಾಜ್ಞಾವಿಡ್ಜಾ ಚಾಂಚನಾದ್ವಸೋಃ ॥

(೩) **ಪರ್ಜನ್ಯ**=ಏವಂ ತಸ್ಯಾ ವಿಮುಕ್ತಾ ಚ ಪರ್ಜನ್ಯಃ ಸರ್ವತೋಽವರಃ ॥ ಮನೋಽಭಿಮಾನೀ ಸಂಪ್ರೋಕ್ತೋ ವೃಷ್ಟ್ಯಾ ನಿರ್ಮಾಣತೋ ಮನಃ ॥

(೪) **ಮಿತ್ರ - ಸಂಕಲ್ಪದೇವತಾ**

ತಥಾ ತಸ್ಮಾದ್ವರೋ ಮಿತ್ರೋ.ಮುಕ್ತೌ ಸಂಕಲ್ಪದೇವತಾ ।
ಅಹ್ನಿಸಂಕಲ್ಪಯೇದ್ಯಸ್ಮಾತ್ ಸ್ವಪ್ಸ್ಯಂತಿ ನಿಶಿ ಯತ್ತ್ರತಃ ॥

(೫) **ತಥಾ ಮಿತ್ರಾದ್ವರಸ್ತ್ವಗ್ನಿರ್ಮುಕ್ತೌ,** ಚಿತ್ತಸ್ಯ ದೇವತಾ । **ಚಿತತ್ವಾಚ್ಚಿತ್ತನಾಮಾ ಚ** ॥

(೬) **ತಸ್ಮಾದ್ವರುಣ ಏವ ಚ । ಧ್ಯಾನಸ್ಯ** ದೇವತಾ ಚಾಸೌ ತನ್ನಾಮಾ ಚ ಸಿದಾನತಃ । ಸತ್ಯಾನೃತವಿವೇಕಾರ್ಥಮ್ ।

(೭) **ತಥಾ ತಸ್ಮಿನ್ನಿಶಾಕರಃ । ವಿಜ್ಞಾನದೇವತಾ ಚಾಸೌ** ತನ್ನಾಮಾ ಚ ವಿವೇಚನಾತ್ ಸತ್ಯಸ್ಯ.

(೮) ತಸ್ಮಾಚ್ಚ ತಥಾ **ವಾಯುರ್ಭೂತಾತ್ಮಕೋ ವರಃ** ಬಲಾತ್ಮಕಸ್ತಥಾ ॥

(೯) **ತಸ್ಮಾದನ್ನದೇವೋನಿರುದ್ಧಕಃ**।ಅನ್ನನಾಮಾನುನಾದಿತ್ವಾತ್

(೧೦) ತೈಜಸೋಽಹಂ ಭವಸ್ತತಃ ॥ ತಥಾ ವರಿಷ್ಠಃ ಪ್ರಾಣಾಖ್ಯೋ **ವಾಯುಃ ಸೋಽಪಾಂ ಚ ದೇವತಾ** ।

ಆಮ್ನಾಯಾ ದೇಹ ಸಂವ್ಯಾಪ್ತೇಃ

(೧೧) ತಥಾ ತಸ್ಮಾತ್ಪುರಂದರಃ ॥ **ತೇಜೋಽಭಿಮಾನೀ** ತನ್ನಾಮಾ ತೇಜೋ ಹ್ಯೋಜ ಇತೀ(ಉದೀ)ರ್ಯತೇ ।

(೧೨) ತಥಾ **ತಸ್ಮಾದುಮಾ ಚೈವ ಸಾ ಚಾಕಾಶಾಭಿಮಾನಿನೀ** ॥

(೧೩) ಆಕಾಶನಾಮ್ನೀ ದೀಪ್ತತ್ವಾತ್ ತಸ್ಮಾಚ್ಚೈವ ಸದಾಶಿವಃ ।

(೧೪) ಸ್ಥಿರಸ್ಮೃತ್ಯಭಿಮಾನೀ ಸ ಸಮಮೇವ ರತೇಃ ಸ್ಮರಃ । ಮುಖ್ಯವಾಯುಪ್ರಿಯಾ ತಸ್ಮಾತ್ಪರಮ್ಯೈವ ಸರಸ್ವತೀ ॥

(೧೫) ಬಂಧಮುಕ್ತ್ಯೋಃ ಸರ್ವಗುಣೈಃ ಸರ್ವದಾ ಶ್ವಾಸರೂಪಿಣೀ ಶಮಿತ್ಯಾನಂದ ಉದ್ದಿಷ್ಟ ಆಶಾ ಪೂರ್ಣಸುಖತ್ವತಃ ॥ ತಸ್ಮಾಚ್ಛ್ರೇಷ್ಠೋ ಮುಖ್ಯವಾಯುಃ ಪ್ರಕೃಷ್ಟಾನಾಂ ಚ ನಾಯಕಃ । ಪ್ರಾಣನಾಮಾಣ ಇತ್ಯೇವ

ಹ್ಯಾನಂದಸ್ಸಮುದೀರಿತಃ ॥ ಅಣಾ ಸರಸ್ವತೀ ಪ್ರೋಕ್ತಾ ತತ್ಪ್ರಕೃಷ್ಟಸುಖ ತ್ವತಃ । ಪ್ರಾಣ ಇತ್ಯುಚ್ಯತೇ ವಾಯುಃ ॥

**ಛಾಂದೋಗ್ಯ ಭಾಷ್ಯಾರ್ಥ ಮತ್ತು ಖಂಡಾರ್ಥ ಸಾರಾಂಶ**

**೧. ನಾಮಾಭಿಮಾನಿ ಉಷಾದೇವಿಯ**=ನಾಮ್ನೈವೈತತ್ ॥ ಋಗ್ವೇದಾದಿ ಎಲ್ಲ ವಿದ್ಯೆಗಳಿಗೂ ಹೇಳಿದೆ. ಅವುಗಳೆಲ್ಲ ಯಾರಿಗೆ ನಾಮ ? ಶ್ರೀಹರಿಯಾದ ವಿಷ್ಣುವಿಗೇನೇ ಎಲ್ಲ ವಿದ್ಯೆಗಳು ನಾಮವಾಗಿರುವದರಿಂದ **"ವಿಷ್ಣುವು ಸರ್ವನಾಮಾ"** ಯೆನಿಸುವನು. ನಾಮಗಳಿಗೆ ಅಭಿಮಾನಿ ಉಷಾದೇವಿಯಲ್ಲಿ ನಿಯಾಮಕನಾದ ಪರಮಾತ್ಮನ್ನ ಧ್ಯಾನಿಸಬೇಕು. ನಾಮಶಬ್ದ ಉಷಾದೇವಿಗೆ ಹೇಗೆಂದರೆ ರಾತ್ರಿ ಮಾನವನ್ನು ಉಷಸಿಯು ತಿಳಿಯದಿರುವುದರಿಂದ, ಉಷಾದೇವಿ ಉಷಃಕಾಲಕ್ಕೆ ಅಭಿಮಾನಿ. ಉಷಃಕಾಲದಲ್ಲಿ ಚನ್ನಾಗಿ ತಿಳಿಯಲ್ಪಡುತ್ತಾಳೆ. (ರೈಭಾರತ್ಯಾದಿಗಳಂತೆ ರಾತ್ರ್ಯಾದಿ ಸಕಲಕಾಲದಲ್ಲಿ ಚನ್ನಾಗಿ ತಿಳಿಯುವದಿಲ್ಲ.) **ಅಮಾ**=ತಿಳಿಯಲ್ಪಡದಿರುವಳು **ನ**=ಅಲ್ಲವೆಂಬುವದರಿಂದ ನಾಮವೆನಿಸುತ್ತಾಳೆ. ಸಃ-ಯ ಇತಿ ಸಃ=ಪ್ರಸಿದ್ಧಃ "ಯೋಧಿಕಾರಿನಾಮ ಬ್ರಹ್ಮೇತಿ" ನಾಮ್ನಿ ಬ್ರಹ್ಮಾಸ್ಮೀತ್ಯುಪಾಸ್ತೇ ॥ ಅಸ್ಯೋಪಾಸಕಸ್ಯ ಯಾವನ್ನಾಮ್ನಃ ಉಷಾ ದೇವ್ಯಾಗತಂ ವ್ಯಾಪ್ತಿಃ।ತತ್ರ ತಾವತಿ ದೇಶೇ ಯಥಾಕಾಮಚಾರೋ ಭವತಿ ॥ **ಖಂಡಾರ್ಥಃ** ॥ ಅತ್ರ ನಾಮ್ನಃ ಪೂರ್ವಂ ಕರ್ಮಭೂಮಿಮಾನಿನೌ ಕ್ರಮಾನ್ನೀಚೋಚ್ಚಪುಷ್ಕರಪಸ್ಯೈಷ್ಟರೌ ಗ್ರಾಹ್ಯೌ ॥**ಭಗವನ್ನಾಮತ್ವಂ ದೃಢೀಕರ್ತುಮಂತೇಪ್ಯವಧಾರಯತಿ ನಾಮ್ನಿ ಉಷಾದೇವ್ಯಾಂ ಬ್ರಹ್ಮಾಸ್ಮೀತ್ಯುಪಾಸ್ವ ಇತಿ ತಮುವಾಚೇತ್ಯನ್ವಯಃ ॥**

**೨. ವಾಙ್ನಾಮ್ನೋ ಸ್ವಾಹಾದೇವೀ॥** ನಾಮಾಭಿಮಾನಿ ಉಷಾದೇವಿ (ಅಶ್ವಿನಿಗಳ ಪತ್ನಿ) ಗಿಂತಲೂ, ವಾಗಿಂದ್ರಿಯಾಭಿಮಾನಿ ಅಗ್ನಿಪತ್ನಿ ಸ್ವಾಹಾದೇವಿಯು, ಧರ್ಮ-ಜ್ಞಾನ-ಸುಖ ಮೊದಲಾದ ಎಲ್ಲ ಗುಣಗಳಿಂದಲೂ, ಸಂಸಾರದಲ್ಲೂ, ಮೋಕ್ಷದಲ್ಲಿಯೂ ಸರ್ವದಾ ಶ್ರೇಷ್ಠಳು. ಸ್ವಾಹಾದೇವಿಯು ಅಗ್ನಿಯನ್ನು ಪೂಜಿಸುವದರಿಂದಲೂ, ಅಗ್ನಿಯನ್ನು ಹೊಂದಿರುವದರಿಂದಲೂ **ವಾಕ್** ಎಂದು ಹೆಸರುಳ್ಳವಳು. **ಖಂಡಾರ್ಥ**:- ವಂ ವಸುಂ ಅಂಚತಿ ಗಚ್ಛತಿ ವಸುನಾಮಕಾಗ್ನಿಂ ಚ ಹೇತುನಾ ವಾಗಿತ್ಯುಕ್ತಾ ॥ **ವಾಗ್ದೇವೀ**

**ಸ್ವಾಹಾಖ್ಯ ಋಗ್ವೇದಂ ವಿಜ್ಞಾಪಯತಿ ನೈ॥ ವಾಗಿಂದ್ರಿಯ ದೇವತಾಪ್ರಸಾದೇನ ಹಿ ಗುರುಚರಣಾದಿನಾ ಋಗ್ವೇದಂ ಜಾನಾತಿ ಜೀವ ಇತ್ಯರ್ಥಃ ॥** ಈ ಸ್ವಾಹಾದೇವ್ಯಂತರ್ಗತ ಭಗವದುಪಾಸನೆಯಿಂದ, ಸಕಲ ಮಂತ್ರ ಅನೂಚ್ಚಾರಣ-ಗುರೂಚ್ಚಾರಣ ಪೂರ್ವಕ ಋಗ್ವೇದಾದಿ ಗಳನ್ನು ತಜ್ಜನ್ಯಸುಖ **ಭಗವತ್ತತ್ವಾದಿಗಳನ್ನು ತಿಳಿಯುತ್ತಾನೆ.**

**೩. ಮನಃ-ಪರ್ಜನ್ಯನಾಮಕ ಸೂರ್ಯನು,** ಸ್ವಾಹಾದೇವಿ ಗಿಂತಲೂ ಸೃಷ್ಟಿಯಲ್ಲಿ-ಮೋಕ್ಷದಲ್ಲಿಯೂ ಸದಾ ಉತ್ತಮನು. ಪರ್ಜನ್ಯನು ಮನಸ್ಸಿಗೆ ಅಭಿಮಾನಿಯಾಗಿರುವದರಿಂದ ಮಳೆಯಿಂದ ಅಂಕುರಾದಿಗಳನ್ನು ಬೆಳೆಸುವದರಿಂದ ಮನಃ ಎಂದೆನಿಸುತ್ತಾನೆ. **"ಬಳ್ಳಿಯು ಕುಡಿಯಂತೆ ಮನಸು ಬೆಳಿಸು ನಿತ್ಯ"** ಎಂಬ ಶ್ರೀ ವಿಜಯದಾಸರ ವಚನದಂತೆ **ಧ್ಯಾನೋಪಾಸನೆಯಲ್ಲಿ ಮನಸ್ಸು ಅಂಕುರಿಸಿ ಬೆಳಿಸುವವನು ಪರ್ಜನ್ಯನು.**

**ಖಂಡಾರ್ಥ :** ಮನೋ ಮನೋಶಬ್ದಿತಃ ಪರ್ಜನ್ಯಃ, ಸ್ವಸಾಮರ್ಥ್ಯೇ ಅಂತರ್ಭಾವಯತಿ ; ಏವಂ ವಾಚಂ ವಾಗ್ದೇವೀ, ನಾಮ ಚ ಉಷಸಂ ಸ್ವಸ್ವಾಧೀನತಯಾ ಕರೋತಿ । ಸ ಮನಸಿ ಪುಮಾನ್ - ಮನಸಾ ಮನಸ್ಯತಿ ಆಲೋಚಯತಿ ॥ ಕಿಮಿತಿ ಮಂತ್ರಾಧೀಯತೇತಿ । ಮಂತ್ರಾಧ್ಯಯನಂ ಕರವಾಣೀತಿ ॥ ಅಥಾನಂತರಮಧೀಯತೇ । ಮನಸಾ ಮನಸ್ಯತೀತ್ಯೇತತ್। ಕರ್ಮಾಣಿ ಕುರ್ವೀತೇತ್ಯೇತತ್ ॥ ಆತ್ಮನೋ ಮನೋಧೀನಪ್ರವರ್ತ ಕತ್ವಾನ್ಮನೋ ಹ್ಯಾತ್ಮಾ ಮನೋಧೀನತ್ವಾನ್ಮನೋ ಹಿ ಲೋಕಾಃ। ಮನೋ ಬ್ರಹ್ಮ ಮನಸಿ ಸನ್ನಿಧಿವಿಶೇಷಾತ್ ಮನಸಿ ಪರ್ಜನ್ಯೇ ಬ್ರಹ್ಮೇತ್ಯು ಪಾಸೀತೇತ್ಯರ್ಥಃ ॥

**(೪) ಸಂಕಲ್ಪನಾಮಾ ಮಿತ್ರದೇವನು :** ಮನಃ ಎನಿಸಿದ ಪರ್ಜನ್ಯ (ತತ್ಸಮಾನ-ಗಂಗಾ - ಸಂಜ್ಞಾ - ಶಾಮಲಾ ರೋಹಿಣಿ - ಅನಿರುದ್ಧ ಪತ್ನಿ ಬ್ರಹ್ಮಾಂಡಾಭಿಮಾನಿ ಉಷಾದೇವಿ) ಕಿಂತಲೂ ಶ್ರೇಷ್ಠನು. ಈ ಮಿತ್ರ ನಾಮಕ ಸೂರ್ಯನು ಇಲ್ಲಿಯೂ, ಮೋಕ್ಷದಲ್ಲಿಯೂ, ಸಂಕಲ್ಪದೇವತೆಯು. ಸಂಕಲ್ಪವೆಂದರೆ, ಹಗಲು ಪ್ರಜೆಗಳಿಗೆ ಸಂಕಲ್ಪವನ್ನು ಮಾಡುತ್ತೇನೆಂದು

ಸಂಕಲ್ಪ=(**ನಿಶ್ಚಯ-ಯೋಜನೆ** ಅಂದರೆ ಕರ್ಮ ಪ್ರಾರಂಭದ ಮೊದಲು ಮಾಡುವ ಅಭಿಲಾಷೆ ವಚನ,) ಸಂಕಲ್ಪವನ್ನು ಹುಟ್ಟಿಸುವದರಿಂದ ಸಂಕಲ್ಪನೆನಿಸುತ್ತಾನೆ. **ಅಹ್ನಿ** - ಎಂಬುದರಿಂದ ರಾತ್ರಿ ಸ್ವಾಪಕಾಲದಿಂದ ಭಿನ್ನವಾದ ಹಗಲು ಎಂದು ಗ್ರಹಿಸಬೇಕು.

**ಖಂಡಾರ್ಥ**—ಯದಾ ಪುಮಾನ್ ಸಂಕಲ್ಪಾಖ್ಯ **ಮಿತ್ರೇಣ ಪ್ರೇರಿತಃ ಸಂಕಲ್ಪಯತೇ । ಮನನಾದಿಕಂ ಕರೋಮೀತಿ ಸಂಕಲ್ಪಂ ಕರೋತಿ। ಅಥ ಅನಂತರಂ ಮನಸ್ಯತಿ । ಮನಃ ಪ್ರೇರಯತಿ । ಅನಂತರಂ ವಾಚಂ ವಾಗಿಂದ್ರಿಯಮೀರಯತಿ ।**

**(೫) ಚಿತ್ತ - ಮಾನಿ - ಅಗ್ನಿ**= ಈ ಅಗ್ನಿದೇವನು ಸಂಕಲ್ಪಾಭಿಮಾನಿ ಮಿತ್ರಗೆ (ತತ್ಸಮರಾದ ನಿಋತಿ-ತಾರಾ-ಪ್ರಾವಹಿ) ಇವರಿಂದ ಚಿತ್ತಾಭಿಮಾನಿಯಾದ ಅಗ್ನಿಯು, ಈತನ ಸಮಾನ-ಭೃಗುಋಷಿಗಳು ಪ್ರಸೂತಿ ದೇವಿಯು ಶ್ರೇಷ್ಠರು. ಅಗ್ನಿಯು ಮೋಕ್ಷದಿ ಸಹ ಚಿತ್ತಕ್ಕೆ ದೇವತೆಯು ಯಜ್ಞಕುಂಡದಲ್ಲಿ ಪೂಜಿಸಲ್ಪಡುವದರಿಂದ ಚಿತ್ತನೆನಿಸುತ್ತಾನೆ.

**ಖಂಡಾರ್ಥ :**—ಅಸ್ಥಿರ ಸ್ಮೃತಿರೂಪ ಚಿತ್ತಮಾನೀ ಹೋಮಕುಂಡೇ ಚಿತತ್ವಹೇತುನಾ ಚಿತ್ತನಾಮಾಗ್ನಿಃ, **ಯದಾ ಪುಮಾನ್ ಚಿತ್ತಮಾನಿ ಪ್ರೇರಿತಃ ಚೇತಯತೇ ಕರ್ತವ್ಯಾಕರ್ತವ್ಯಂ ಜಾನಾತಿ ।** ಅಥಾನಂತರಂ **ಸಂಕಲ್ಪಯತೇ।** ಇದಂ **ಕರ್ಮ ಕರೋಮೀತ್ಯಾದಿರೂಪೇಣ, ಸಂಕಲ್ಪ ವಿಶೇಷಮನೋವೃತ್ತಿವಿಶೇಷಂ ಕರೋತಿ । ಮನಸ್ಯತಿ ಮನಃ ಪ್ರೇರಯತಿ ।**

**(೬) ಧ್ಯಾನಮಾನಿ ವರುಣ**= ಧ್ಯಾನಕ್ಕೆ ವರುಣದೇವತೆಯು ಅಗ್ನಿ ಭೃಗು-ಪ್ರಸೂತಿಗಳಿಗಿಂತಲೂ, ಧ್ಯಾನಾಭಿಮಾನಿ ವರುಣನು ಶ್ರೇಷ್ಠನು. ಈ ವರುಣನು, **ಸತ್ಯ ಸುಳ್ಳು ಇವುಗಳನ್ನು ವಿವೇಚಿಸಲಿಕ್ಕೆ** ಬ್ರಹ್ಮನಿಂದ **ಸ್ಥಾಪಿಸಲ್ಪಟ್ಟ ಕಾರಣ, ಧ್ಯಾನನೆನಿಸುತ್ತಾನೆ. ಖಂಡಾರ್ಥ:**-ಸತ್ಯಾನೃತವಿವೇಚನಾರ್ಥಂ ಬ್ರಹ್ಮಣಾ ನಿಹಿತತ್ವಹೇತುನಾ, **ಧ್ಯಾನನಾಮಾ ವರುಣಃ ।** ಧ್ಯಾಯತೀವೇತಿ ಪೃಥಿವ್ಯಾದಯಃ ಸರ್ವೇ ಚೇತನಾಃ ಧ್ಯಾಯಂತೀವ **ಭಗವಧ್ಯಾನಪರಾ ಏವ ತಿಷ್ಠಂತಿ । ನಿಶ್ಚಲತ್ವಾತ್ ಧ್ಯಾಯಂತೀ**

**ವೇತ್ಯರ್ಥಃ** ॥ ತಸ್ಮಾದ್ಧ್ಯಾನಸ್ಯ ಭೂಯಸ್ತ್ವಾದೇವ ಇಹ ಲೋಕೇ ಯೇ ಜನಾಃ । **ಮನುಷ್ಯಾಣಾಂ ಮಧ್ಯೇ ಮಹತ್ತ್ವಂ ಜ್ಞಾನಬಲೈಶ್ವರ್ಯಾದಿಭಿರ್ಮಹತ್ವಂ ಪ್ರಾಪ್ನುವಂತಿ ತೇ ಜನಾಃ**॥ಅಥ ಯೇ ಅಲ್ಪಾಃ ಜ್ಞಾನ ಬಲೈಶ್ವರ್ಯಾದಿಹೀನತಯಾ ವರ್ತಂತೇ । ತೇ ಕಲಹೀನಾಃ ಕಲಹವಂತಃ। **ಪಿಶುನಾಃ** ರಾಜಾದೌ **ಪರವಿತ್ತಾಪಹಾರಕಾಃ** (ವಾಚಕಾಃ) ಉಪವಾದಿನಾ **ಪರದೋಷಾನುವಾದಕಾಃ** ಭವಂತೀತ್ಯರ್ಥಃ । **ಭೂತಿಮಂತೋ ಧ್ಯಾನಾನುಷ್ಠಾನೇನ ತಜ್ಜನ್ಯಫಲೈಕದೇಶಭಾಗಿನೋ ಭವಂತೀತ್ಯರ್ಥಃ । ತಸ್ಮಾತ್ ಧ್ಯಾನಮಾನಿನಿ ವರುಣೇ ಬ್ರಹ್ಮೋಪಾಸ್ಯೇತೇತ್ಯರ್ಥಃ**

(೭) **ವಿಜ್ಞಾನಮಾನಿ**—ಚಂದ್ರ, ತತ್ಸಮಾನ ವಿವಾಸ್ವಾನ್ನಾಮಕ ಸೂರ್ಯ, ಯಮ, ಶತರೂಪಾ, ಇವರು. ಧ್ಯಾನಾಭಿಮಾನಿ, ವರುಣಗಿಂತ ಶ್ರೇಷ್ಠರು. ಚಂದ್ರನು ವಿಜ್ಞಾನಕ್ಕೆ ದೇವತೆಯು, **ಸತ್ಯವನ್ನು ಶೋಧಿಸುವ ಕಾರಣ ವಿಜ್ಞಾನನೆನಿಸುತ್ತಾನೆ. ಖಂಡಾರ್ಥ :– ವಿಜ್ಞಾನಮಾನೀ ಸತ್ಯಸ್ಯ ವಿವೇಚನಹೇತುನಾ, ವಿಜ್ಞಾನಾಮಾ ಚಂದ್ರಃ,** (ಸೂರ್ಯ ಯಮ ಶತರೂಪಾಃ ಗ್ರಾಹ್ಯಾಃ) ಹೃದಯಂ ಭಗವಂತಂ ಅಹೃದಯಂ ಭಗವತೋನ್ಯತ್ರ । **ವಿಜ್ಞಾನಮುಪಾಸ್ವೇತಿ ವಿಜ್ಞಾನಶಬ್ದಿ**ತಚಂದ್ರಾದಿ ಚತುಷ್ಟಯೇ ಬ್ರಹ್ಮೋಪಾಸ್ಯೇತೇತ್ಯರ್ಥಃ ॥

(೮) **ಬಲಸ್ವರೂಪ ಬಲಕ್ಕೆ ದೇವತೆಯಾದ – ಭೂತವಾಯು ಪ್ರವಹವಾಯು, ಚಂದ್ರಾದಿ ನಾಲ್ವರಿಂದ ಉತ್ತಮನು. ಬಲದಲ್ಲಿ ದ್ವಿವಿಧ ೧. ಯುಕ್ತಿಜನ್ಯನಿರ್ಣಯತ್ವರೂಪಂ ಅಂತರ್ಬಲಂ ೨ ದೇಹದಾರ್ಢ್ಯರೂಪ ಗುರು ಶುಶ್ರೂಷಾ ರೂಪ ಬಾಹ್ಯಬಲ** ಹೀಗೆ ಉಪಾಸನಾ ಮಾಡಿದರೆ ಎರಡು ಬಲ ಪ್ರಾಪ್ತವಾಗುತ್ತವೆ.

(೯) **ಅನ್ನಕ್ಕೆ ಅಭಿಮಾನಿ ಅನಿರುದ್ಧನು.** ಬಲಾಭಿಮಾನಿಯಾದ ಪ್ರವಹವಾಯುವಿನಿಂದ ಶ್ರೇಷ್ಠನು. ಈ ಅನ್ನವಾದರೂ (೧) **ಜ್ಞಾನಜನ್ಯರತಿರೂಪವಾದ ಅಂತರ ಅನ್ನ,** (೨) ಪ್ರಸಿದ್ಧ ಬಾಹ್ಯಮನ್ನವೆಂದು ಎರಡು ವಿಧ. "ದ್ವಿವಿಧಾನ್ನಮಾನೀ ಅನುನಾದಿತ್ವಹೇತುನಾ ಅನ್ನನಾಮಾ. ಅನಿರುಧ್ಧ, ದ್ವಿವಿಧ ಬಲದಿಂದಲೂ ಶ್ರೇಷ್ಠ. ಅನ್ನಪ್ರಾಶನದಿಂದ ಅಂತರಂಗ

ಮನೋದಾರ್ಢ್ಯ ಶ್ರವಣಾದಿಗಳಿಂದ ಪ್ರಾಪ್ತಿ, ಬಾಹ್ಯಾನ್ನದಿಂದ ಗುರು ಶುಶ್ರೂಷಾದಿ ದೇಹಬಲ. ಕಾರಣ ಅನ್ನ – ಅನ್ನಮಾನಿ ಉತ್ತಮ.

(೧೦) **ಅಪ್ ಅಭಿಮಾನಿ ಆಹಂಕಾರಿಕ ಪ್ರಾಣವಾಯು**, ಅನಿರುದ್ಧಾದಿಗಳಿಂದ ಶ್ರೇಷ್ಠನು. (ಅನಿರುದ್ಧ, ಗುರು, ದಕ್ಷ, ಶಚಿ, ರತಿ, ಸ್ವಾಯಂಭುವಮನು ಗ್ರಾಹ್ಯ) ಶರೀರದಲ್ಲಿ ವ್ಯಾಪಿಸಿರುವ ಕಾರಣ ಅಪ್ ಎಂದೆನಿಸುವನು. ೧ "**ಆಪೋऽಪಿ ಜ್ಞಾನರತ್ಯಾ ಜಾಯಮಾನವಿಷಯಾಲಂಬುದ್ಧಿತೃಪ್ತಿ ಲಕ್ಷಣಾಂತರಾ** (೨) ಆಪೋ ದ್ರವರೂಪಾ ಬಾಹ್ಯವೆಂದು ಎರಡು ವಿಧ. ಈ ಉಭಯ ಅಬಭಿಮಾನಿ ದೇಹ ವ್ಯಾಪಿಸಿಕೊಂಡಿರುವ **ಅಪ್** ಶಬ್ದನಾದ ಆಹಂಕಾರಿಕ ಪ್ರಾಣನು ಬಾಹ್ಯ ಅಂತರ ಅನ್ನಕ್ಕಿಂತಲೂ ತೃಪ್ತಿ ಹೇತುವಾದುದರಿಂದ ಅನ್ನದಿಂದ ಶ್ರೇಷ್ಠನು.

(೧೧) **ತೇಜ ಎನಿಸಿದ ಪುರಂದರಕಾಮರು** ಅಪ್ ಅಹಂ ಪ್ರಾಣನಿಂದ ಶ್ರೇಷ್ಠರು. "ತೇಜೋऽಪಿ **೧ ಪ್ರತಿಭಾಖ್ಯಮಾಂತರಂ ಬಾಹ್ಯಂ ಚೇತಿ ದ್ವಿವಿಧಮ್** ತದುಭಯಮಾನೀ ಓಜೋರೂಪತ್ವೇನ ತೇಜಶ್ಶಬ್ದಿತಃ ಪುರಂದ್ರೇಂದ್ರಃ ತತ್ ಸಮಃ ಕಾಮಾತ್ ಭೂಯಃ ಶ್ರೇಷ್ಠಃ **೧ ತತ್ರಾಂತರಾತ್ ಅಪ್‌ಶಬ್ದಿತಾತ್ ಜ್ಞಾನರತಿಜನ್ಯತೃಪ್ತಿರೂಪ ವಿಷಯಾಲಂಬುದ್ಧಿರೂಪಾಂತರಂ ಪ್ರತಿಭಾಖ್ಯಂ ತೇಜೋ ಭೂಯಃ ೨ ಬಾಹ್ಯದ್ರವರೂಪಾದ್‌ಭ್ಯೋ ಜಡರೂಪಂ ತೇಜೋ ಭೂಯ ಇತಿ ವಿವೇಕಃ॥** ತೇಜಸ್ಸು, ಓಜಸ್ಸು=ಪ್ರಕಾಶ, ಕಾಂತಿ, ಶಕ್ತಿ, ಸಾಮರ್ಥ್ಯಾದಿಗಳು ಪ್ರಾಪ್ತಿ.

(೧೨) **ಆಕಾಶಕ್ಕೆ ಅಭಿಮಾನಿಯಾದ ಉಮಾ–ಸೌಪರಣಿ–ವಾರುಣಿಯರು**, ತೇಜೋಭಿಮಾನಿ ಇಂದ್ರ ಕಾಮರಿಗಿಂತ ಶ್ರೇಷ್ಠರು. ಚನ್ನಾಗಿ ಪ್ರಕಾಶಿಸಿಕೊಂಡಿರುವುದರಿಂದ ಆಕಾಶವೆನಿಸುತ್ತಾರೆ. **೧ ಆಕಾಶೋऽಪಿ ಸ್ಥಿರಪ್ರತಿಭಾರೂಪಾಂತರ, ೨ ಛಿದ್ರಾತ್ಮಕೋ ಬಾಹ್ಯಶ್ಚೇತಿ ದ್ವಿವಿಧಃ !** ತದುಭಯಮಾನಿನೀ ದೀಪ್ತತ್ವಾದಾಕಾಶನಾಮ್ನಾ **ಉಮಾದೇವೀ।** ತತ್‌ಸಮಭೂತೇ ಸೌಪರಣೀ ವಾರುಣೀ ಚೇತ್ಯೇತತ್ತ್ರಯಮ್ ತೇಜಃಶಬ್ದೋಕ್ತೇಂದ್ರಕಾಮಾಭ್ಯಾಂ ಶ್ರೇಷ್ಠಂ । ತತ್ರಾಂತರ

ಚಂಚಲಪ್ರತಿಭಾಖ್ಯತೇಜಸ ಅಂತರ **ಸ್ಥಿರಪ್ರತಿಭಾಖ್ಯಃ** ಆಕಾಶಃ ಶ್ರೇಷ್ಠಃ ಬಾಹ್ಯಾಕಾಶೋ ಬಾಹ್ಯಾಕಾಶ ಇತಿ ಧ್ಯೇಯಮ್ ॥

**(೧೩) ಸ್ಮರೋಭಿಮಾನಿ ಶಿವ ಶೇಷ ಗರುಡರು ಸ್ಥಿರವಾದ ಸ್ಮರಣೆಗೆ ಅಭಿಮಾನಿಗಳು.** ತಮ್ಮ ವ್ಯಾಪಾರಗಳಲ್ಲಿಯೂ ಶ್ರೀಹರಿಯ ಜ್ಞಾನಾದಿಗಳಲ್ಲಿಯೂ ಒಂದೇ ಪ್ರಕಾರವಿರುವದರಿಂದ ಸ್ಮರರೆನಿಸುವರು. ಆಕಾಶಾಭಿಮಾನಿ ಉಮಾದಿಗಳಿಂದ ಶ್ರೇಷ್ಠರು.

**ಖಂಡಾರ್ಥ :—ಅಚ್ಛಿದ್ರರೂಪ ಸ್ಮರಮಾನೀ ಸಮೇಕಪ್ರಕಾರಂ ರಮುತ"** ಇತಿ ಸ್ಮರನಾಮಾ ಶಿವಃ ತತ್ಸಮೌ ಸುಪರ್ಣಶೇಷೌ ಚೇತಿ ತ್ರಯ ಆಕಾಶೋಮಾದೇಃ ಭೂಯಃ ಶ್ರೇಷ್ಠಾಃ ॥ (ಜಾಂಬವತ್ಯಾದಿ ದೇವಿಷಟ್ಕಾದಪಿ ಭೂಯಾನ್ ಸ್ಮರಃ ಶಿವಾದಿ ಜ್ಞೇಯಂ) ॥ "ಯದ್ಯಪಿ ಯದಿ ಬಹವ ಏಕತ್ರಾಶೀರನ್ನಪಿ ಉಪವಿಶೇಯುಃ **ತೇ ಪ್ರಾಗಭೂತ ಸ್ಮರಂತಃ ಶ್ರವಣಮನನವಿಜ್ಞಾನಹೀನಾ ಭವಂತಿ । ಯದಾ ವಾ ತೇ ಏಕತ್ರ ಮಿಲಿತಾಃ ಪ್ರಾಕ್ ಜ್ಞಾತಂ ಸ್ಮರೇಯುರಥ ತರ್ಹಿ ಶ್ರವಣಾದಿ ಮಂತೋ ಭವೇಯುರಿತ್ಯರ್ಥಃ ॥ ಸ್ಮರಮಿತಿ** ಸ್ಮರಶಬ್ದಿತೇ ಶಿವಾದಿ ದೇವತ್ರಯೇ **ಬ್ರಹ್ಮೋಪಾಸ್ಸ್ವೇತ್ಯರ್ಥಃ ॥**

**೧೪. ಆಶಾ ವಾಕ್ ಸ್ಮರಾದ್ಭೂಯಸೀ—ಆಶಾ ಸರಸ್ವತಿಯು** ಶಿವಾದಿಗಳಿಂದ ಶ್ರೇಷ್ಠಳು. ಈ ಬ್ರಹ್ಮಪತ್ನಿಯು ಸೃಷ್ಟಿಯಲ್ಲಿ ಮೋಕ್ಷದಲ್ಲಿ ಶ್ರೇಷ್ಠಳು. ಆಶಾಸ್ವರೂಪವುಳ್ಳವಳು. ಆಶೆಗೆ ದೇವತೆಯು. **ಶಂ ಎಂದರೆ ಆನಂದವು, ಪೂರ್ಣಸುಖವಿರುವುದರಿಂದ ಸರಸ್ವತಿಯು** ಆಶಾಯೆನಿಸುತ್ತಾಳೆ.

**ಖಂಡಾರ್ಥ :—ಆಶೇತಿ** ಆ ಸಮಂತಾತ್ ಶಂ **ಸುಖಂ** ಯಸ್ಯಾ ಇತಿ ವ್ಯುತ್ಪತ್ತ್ಯಾ ಪೂರ್ಣಸುಖರೂಪತಯಾಽಽಶಾನಾಮ್ನಾ ಆಕಾಶವಾಸಿನೀ ಭಾರತೀ ತತ್ಸಮಾ ಸರಸ್ವತೀ ಚ ಸ್ಮರಾತ್ ಸ್ಮರ ಶಬ್ದಿತದೇವತಾತ್ರಯಾತ್ ಭೂಯಸೀ ಸರ್ವ ಗುಣೈಃ ಶ್ರೇಷ್ಠಾ । **ಇಯಂ ಚ ಪ್ರಾಣಿನಾಮಿಾಶ್ವರಾ ಪರೋಕ್ಷಜ್ಞಾನಸ್ವಾಮಿನೀ ।** ಆಶಾಮಾಶಾಶಬ್ದಿತ **ಭಾರತೀಸರಸ್ವತ್ಯೋಃ ಬ್ರಹ್ಮೋಪಾಸ್ಸ್ವೇತ್ಯರ್ಥಃ ॥**

**೧೫. ಪ್ರಾಣೋ ವಾ ಆಶಾಭೂಯಾನ್॥** ಪ್ರಾಣ ಬ್ರಹ್ಮರು ಭಾರತಿ ಸರಸ್ವತಿಗಿಂತಲೂ ಶ್ರೇಷ್ಠರು. **ಪ್ರಾಣ**ನೆಂದರೆ, ಮುಖ್ಯವಾಯು ಉತ್ಕೃಷ್ಟವಾದ ನಾಮವನ್ನಾರಂಭಿಸಿ ಸರಸ್ವತಿ ಪರಿಯಂತ ಎಲ್ಲರಿಗೆ ಪ್ರೇರಕ ನಾದುದರಿಂದ **ಪ್ರಾಣ**ನೆನಿಸುತ್ತಾನೆ. ಅಥವಾ **ಣ** ಎಂಬುದರಿಂದ ಆನಂದವು ಹೇಳಲ್ಪಡುತ್ತದೆ. ಕಾರಣ **ಪೂರ್ಣಾ**ನಂದ **ಆಣಾ** ಎಂದರೆ ಸರಸ್ವತಿಗಿಂತಲೂ ಉತ್ಕೃಷ್ಟ ಸುಖಸ್ವರೂಪನಾದುದರಿಂದ ಪ್ರಾಣ ಎನಿಸುತ್ತಾನೆ.

**ಖಂಡಾರ್ಥ :—**ಪ್ರಕೃಷ್ಟ ಸ್ವರೂಪಾನಂದ ಲಕ್ಷಣ **ಮುಕ್ತ್ಯಭಿಮಾನೀ ಸರ್ವಚೇಷ್ಟಕತ್ವಹೇತುನಾ ಪ್ರಾಣನಾಮಾ ಮುಖ್ಯವಾಯುರ್ಬ್ರಹ್ಮಾ ಚಾಽಽಶಾಯಾಃ** ಭಾರತ್ಯಾದಿದೇವಿದ್ವಯಾತ್ ಶ್ರೇಷ್ಠೌ। ಉಪಾಸಕವರ್ಗೇ ಅಯಮೇವೋತ್ತಮ ಇತ್ಯರ್ಥಃ॥ ಯಥಾ ವಾ ಇತಿ ॥ ರಥನಾಭೌ ರಥಚಕ್ರೇ ಅರಾ ಯಥಾ ಸಮರ್ಪಿತಾಃ ಸಂಪ್ರೋತಾ ಏವಮೇತಸ್ಮಿನ್ ಪ್ರಾಣೇ ಸರ್ವಂ ಜಗತ್ ಸಮರ್ಪಿತಂ ಸಂಪ್ರೋತಂ। **ಪ್ರಾಣಃ ಮುಖ್ಯವಾಯುಃ ಪ್ರಾಣೇನ ಹರಿಣಾ ಯಾತಿ। ಪ್ರಾಣಃ ಹರಿಃ** ಪ್ರಾಣಂ ವಾಯುಂ ಪ್ರತ್ಯಭೀಷ್ಟಂ ದದಾತಿ। ಯದ್ವಾ ಪ್ರಾಣೋ ವಾಯುಃ ಪ್ರಾಣಂ ಭಗವಂತಂ ದದಾತಿ ಶಿಷ್ಯೇಭ್ಯ ಉಪದಿಶತೀತ್ಯರ್ಥಃ। **ಪ್ರಾಣಾಯ ಹರಯೇ ದದಾತಿ ಮುಕ್ತ್ವಾ ಹರಿಂ ಪ್ರಾಪಯತಿ ಭಕ್ತಾನಿತಿ ಯಾವತ್ ॥**

**ಈ** ಪ್ರಕಾರ ನಾಮಾದಿ ಪ್ರಾಣಪರ್ಯಂತ ಅವರವರ ಕಾರ್ಯ ತಿಳಿದು ಧ್ಯಾನೋಪಾಸನೆ ಮಾಡಬೇಕು. ಸರ್ವತಾತ್ತ್ವಿಕರು ದಶಾಧಿಕ ಗುಣವುಳ್ಳವರು. "ಪರ್ಜನ್ಯಮಿತ್ರಶಿಖಿನೋ ಭೂತವಾಯುಸ್ತಥೈವ ಚ। ದ್ವಿಗುಣಾ ಏವಾನಿರುದ್ಧೋಽನಿಲಾತ್ಪಂಚಗುಣಾಧಿಕ ಇತ್ಯಾದಿ ಭಾಷ್ಯ ವಚನಾನುಸಾರ ತಿಳಿಯತಕ್ಕದ್ದು.

ಕೊನೆಗೆ ನಾರದರು ಸನತ್ಕುಮಾರರನ್ನು ಕುರಿತು ಪ್ರಶ್ನೆ ಮಾಡಿದರು. ಪ್ರಾಣನಿಗಿಂತಲೂ ಶ್ರೇಷ್ಠರು ಇರುವರೇ ಹೇಗೆಂದು ಕೇಳಲು ಸನತ್ಕುಮಾರರು ಹೇಳುತ್ತಾರೆ :

**ಉಪನಿಷತ್ತು**:—"ಏಷ ತು ವಾ ಅತಿವದತಿ ಯಃ **ಸತ್ಯೇನಾತಿವದತಿ** ಸೋಽಹಂ ಭಗವಃ ಸತ್ಯೇನಾತಿವದಾನೀತಿ ಸತ್ಯಂ ತ್ವೇವ **ವಿಜಿಜ್ಞಾಸಿತವ್ಯ ಮಿತಿ ಸತ್ಯಂ ಭಗವೋ ವಿಜಿಜ್ಞಾಸಿತವ್ಯ ಇತಿ" ||೧೬||** ಸಾರಾಂಶ

ಪ್ರಾಣನಿಗಿಂತಲೂ ವಿಶೇಷವಾಗಿ **ಸತ್ಯನು** ಶ್ರೇಷ್ಠನು ಸರ್ವೋತ್ತಮನಾದ ಶ್ರೀ ವಿಷ್ಣುವು ನಿಯಾಮಕನು. ಆದುದರಿಂದ ಸತ್ಯನೆನಿಸುತ್ತಾನೆ. ಕಾರಣ ಈ ಸತ್ಯನೇ ಉಪಾಸ್ಯನು. "ಪ್ರಾಣಾತ್ತು ಭಗವಾನ್ ವಿಷ್ಣುರನಂತ ಗುಣತೋಽಧಿಕಃ || ನಿತ್ಯಮುಕ್ತಾತ್ತು ನಿತ್ಯಶಕ್ತಿಃ ನಿತ್ಯೋದ್ರಿಕ್ತಗುಣಃ ಪ್ರಭುರಿತಿ ತತ್ವವಿವೇಕೇ || **ಛಾಂದೋಗ್ಯ ಭಾಷ್ಯ ||**

**ಖಂಡಾರ್ಥ :—**ಕಿಮಯಮೇವ ಸರ್ವೋತ್ತಮಃ ಇತಿ ಉಪಾಸಕ ವರ್ಗೇಽಸ್ಯ ಸರ್ವಾತಿಶಯಿತ್ವಂ ಉಪಾಸ್ಯಸ್ತು ಸರ್ವಶ್ರೇಷ್ಠೋನ್ಯೋಸ್ತೀತ್ಯಾಹ || ಏಷತ್ವಿತಿ || ತು ಶಬ್ದೋಽರ್ಥಾಂತರವಾಚೀ | ಯಃ ಸತ್ಯೇನ **ನಿರ್ದೋಷತ್ವನಿಯಾಮಕತ್ವ**ಹೇತುಭ್ಯಾಂ **ಸತ್ಯನಾಮಕೇನ** ಹರಿಣಾ ಯೋಽತಿವದತಿ **ಸತ್ಯಾಖ್ಯಂ** ಬ್ರಹ್ಮೈವ ಸರ್ವಾತಿಶಾಯೀತಿ ವದತಿ||........ ಹೇ ಭಗವೋ ನಾರದ **ಸತ್ಯೇನಾತಿ**ವದಾಮಿ **ಸತ್ಯಾಖ್ಯಂ** ಬ್ರಹ್ಮೈವ ಸರ್ವಾತಿಶಾಯೀತಿ ವದಾಮಿ **ಸತ್ಯಂ ತ್ವೇವ ವಿಜಿಜ್ಞಾಸಿತವ್ಯಃ ಕುಮಾರ ಇತ್ಯರ್ಥಃ ||**

ಮುಖ್ಯ ತಾತ್ಪರ್ಯವೇನೆಂದರೆ ನಾಮಾದಿ ಪ್ರಾಣಪರಿಯಂತವಾಗಿ ಅವರಂತರ್ಗತ ಹರಿಯನ್ನು ಉಪಾಸಿಸಬೇಕು.

ಸಕಲ ವೇದಾದಿಗಳಿಗೆ ನಾಮಾಭಿಮಾನಿ ಉಷಸೆಯು, ವಾಕ್ಪ್ರಸಾದದಿಂದ ಸಂಕಲ್ಪನೆಂಬ ಮಿತ್ರನಿಂದ ಪ್ರೇರಿತನಾಗಿ ಮನನಾದಿಗಳನ್ನು ಮಾಡುವೆನೆಂಬುವ ಸಂಕಲ್ಪ ಮಾಡುವನೋ ಅನಂತರ. ಮನಃ ಪ್ರೇರಿಸುತ್ತಾನೆ. ಅನಂತರ ವಾಗಿಂದ್ರಿಯದಿಂದ ಉಚ್ಚಾರವ್ಯಾಪಾರ ಮಾಡುತ್ತಾನೆ. ಆಗ ನಾಮಾಭಿಮಾನಿ ಉಷಸೆಯು ಭಗವನ್ನಾಮ ಶಬ್ದರಾಶಿ ವಿಷಯದಲ್ಲಿ ಪ್ರೇರಿಸುತ್ತಾಳೆ. ನಂತರ ವಾಗಿಂದ್ರಿಯ ವ್ಯಾಪಾರಾದಿ. ಇದರಂತೆ ಮೇಲೆ ಖಂಡಾರ್ಥದಲ್ಲಿ ವಿವರಿಸಿದಂತೆ ಧ್ಯಾನ ವಿಜ್ಞಾನ ಚಿತ್ತಾದಿ ಕೊನೆಗೆ ಮುಕ್ತಿದಾರಿ ತೋರಿಸುವ ಪ್ರಾಣ ಪರ್ಯಂತರವೂ **ಸತ್ಯ** ನಿರ್ದುಷ್ಟ ಜ್ಞಾನಾನಂದ

ಪರಿಪೂರ್ಣನಾದ ಭಗವಂತನನ್ನು ತಾರತಮ್ಯದಿಂದ ಮುಖ್ಯವಾಗಿ ಉಪಾಸಿಸಿದರೆ ಮುಕ್ತಿ ಕೊಡುವನೆಂದೂ, ತಾರತಮ್ಯೋಪಾಸನೆ ವಿನಾ ಮುಕ್ತಿ ಇಲ್ಲವೆಂದೂ ಅನೇಕ ಉಪನಿಷತ್ತು ಹೇಳುತ್ತವೆ.

ಮತ್ತು ಬೃಹದಾರಣ್ಯಕೋಪನಿಷತ್ ಭಾಷ್ಯ ಅಧ್ಯಾಯ ೬ । ೩ । ೩೩ "ಸ ಯೋ ಹವೈ ಮನುಷ್ಯಾಣಾಂ ರಾದ್ಧಾ ಇತ್ಯಾದಿ. ಮತ್ತು ತೈತ್ತಿರೀಯ ಉಪನಿಷತ್. ದ್ವಿತೀಯವಲ್ಲಿ ಮಂತ್ರ ೧೭-೧೮-೧೯ ರಲ್ಲಿಯೂ, ಮತ್ತು ಕೇನೋಪನಿಷತ್ತಿನಲ್ಲಿಯೂ, ತಾರತಮ್ಯಜಿಜ್ಞಾಸಾ ಹೇಳಿರುತ್ತಾರೆ. ಗುರುಗಳಿಂದ ಅರಿತರೆ ಆನಂದಾಭಿವೃದ್ಧಿ. **ಇದು ಉಪನಿಷತ್ ಪ್ರಸ್ಥಾನ.**

## ಸೂತ್ರ ಪ್ರಸ್ಥಾನದಲ್ಲಿಯೂ ತಾರತಮ್ಯ ಉಪಾಸನಾ

ಬ್ರಹ್ಮಸೂತ್ರಭಾಷ್ಯ ಅಧ್ಯಾಯ (೩) ಪಾದ (೩) ಅಧಿಕರಣ (೨೧). ಸೂತ್ರ **ಓಂ ಇಯದಾಮನನಾತ್ ಓಂ ॥೩೫॥ ಭಾಷ್ಯ** ॥ ನಾಮಾದ್ಯಾರಭ್ಯ ಪ್ರಾಣಾಂತಮುತ್ತರೋತ್ತರಮುತ್ತಮತ್ವಮುಕ್ತಮ್ ಇತ್ಯತ್ರ ॥ (ಛಾಂದೋಗ್ಯಶ್ರುತೌ)

ಶ್ರೀಮಜ್ಜಗನ್ನಾಥ **ತೀರ್ಥೀಯ ಭಾಷ್ಯದೀಪಿಕಾ.** ನಾಮಾದಿತ್ಯಾದಿ ಪದೇನ (೧) ನಾಮ (೨) ವಾಕ್ (೩) ಮನಃ (೪) ಸಂಕಲ್ಪ (೫) ಚಿತ್ತ (೬) ಧ್ಯಾನ (೭) ವಿಜ್ಞಾನ (೮) ಬಲ (೯) ಅನ್ನ (೧೦) ಅಪ್ (೧೧) ತೇಜ (೧೨) ಆಕಾಶ (೧೩) ಸ್ಮರ, (೧೪) ಆಶಾ (೧೫) ಪ್ರಾಣಾಃ ಗೃಹ್ಯಂತೇ ॥ **ನಾಮಾದಿಶಬ್ದಾಶ್ಚ ॥** (೧) ಉಷಾ (೨) ಸ್ವಾಹಾ (೩) ಪರ್ಜನ್ಯ (೪) ಮಿತ್ರ (೫) ಅಗ್ನಿ (೬) ವರುಣ (೭) ವಿಧು (೮) ಪ್ರವಹ (೯) ಅನಿರುದ್ಧ (೧೦) ಅಹಂಕಾರಿಕ ಪ್ರಾಣ (೧೧) ಉಮಾ (೧೨) ರುದ್ರ (೧೩) ವಾಣೀ — ಪರಾಃ ಇತ್ಯಾದಿ॥ ಪ್ರಾಣಾಂತಂ ಮುಖ್ಯವಾಯು ಪರ್ಯಂತಂ ಉತ್ತರೋತ್ತರತ್ವಂ ಪೂರ್ವಪೂರ್ವಾಪೇಕ್ಷಯೋತ್ತರೋತ್ತರಮಾಧಿಕ್ಯಮುಕ್ತಮಿತ್ಯರ್ಥಃ। ಭಾ. ದೀಪಿಕಾ (ಪುಟ ೮೬೨)

ಮತ್ತು ಅನುವ್ಯಾಖ್ಯಾನ ಅಧ್ಯಾಯ (೩) ಪಾದ (೩)
ಅಧಿಕರಣ (೨೧) ಸೂತ್ರ ೩೫ ರಲ್ಲಿ ಶ್ರೀ ಸರ್ವಜ್ಞರ ಉಕ್ತ ॥

ಓಂ ಇಯದಾಮನನಾತ್ ಓಂ॥

ಅಧಿಕಾರಿತಾರತಮ್ಯಂ। ಇಯದೇವ। ಪ್ರಾಣಾದಧಿಕಮೇವ। ಕುತಃ। ಆಮನನಾತ್ ಪ್ರಾಣೋ ನಾ ವೇತಿ ಶ್ರುತೇರಿತ್ಯರ್ಥಃ। ಇತಿ ಸೂತ್ರ ವಿವೃತೌ॥

"ಉಷಾ ಸ್ವಾಹಾ ಚ ಪರ್ಜನ್ಯೋ ಮಿತ್ರೋಽಗ್ನಿರ್ವರುಣೋ ವಿಧುಃ॥ ಪ್ರವಹೋಽನಿರುದ್ಧ ಇಂದ್ರೋಽಮೋ ರುದ್ರೋ ವಾಣೀ ಚ ಮಾರುತಃ॥ ಉತ್ತರೋತ್ತರತಸ್ತ್ವೇತೇ ಗುಣೈಸ್ಸರ್ವೈಶ್ಚ ಮುಕ್ತಿಗಾಃ॥ ಸೂರ್ಯಧರ್ಮೌ ಯಥಾ ಸೋಮೋ ಮನುರ್ದಕ್ಷೋ ಬೃಹಸ್ಪತಿಃ॥ ಶಚೀರತಿಶ್ಚಾನಿರುದ್ಧಾಸ್ಸಮಾಸ್ತಾರಾ ಚ ಮಿತ್ರವತ್॥ ಸೋಮವಚ್ಛತರೂಪಾ ತು, ಪ್ರಸೂತಿವನ್ನಿವದ್ವಿರಾಟ್॥ ಪರ್ಜನ್ಯವದ್ವಾರುಣೀ ಚ ತಥಾ ಸಂಜ್ಞಾ ಚ ರೋಹಿಣೀ॥ ಧರ್ಮಿಣೀ ಚ ಮಿತ್ರವತ್ತ್ವೇವ ಪ್ರಾವಹೀ ಪರಿಕೀರ್ತಿತಾ॥ ಮಿತ್ರಪರ್ಜನ್ಯಮಧ್ಯಸ್ಥಾವಾಶ್ವಿನೌ ವಿತ್ತವಿಘ್ನಪೌ॥ ಭೃಗುರಗ್ನಿಸಮೋ ಮಿತ್ರಸ್ತನ್ಮಧ್ಯೇ ಬ್ರಹ್ಮಪುತ್ರಕಾಃ॥ ವರುಣಾಗ್ನ್ಯಂತರಾ ತತ್ರ ನಾರದಃ ಪ್ರಾಯ ಇಂದ್ರವತ್॥ ಕಾಮಃ ಸೌಪರ್ಣೀ ಚೋಮಾವದ್ವೀಂದ್ರೋ ರುದ್ರವದೀರಿತಃ॥ ನಿಮುತಿರ್ಮಿತ್ರಸದೃಶೋ ವಿಶ್ವಾಮಿತ್ರಃ ಕಸೂನುವತ್॥ ವೈವಸ್ವತೋ ಮನುಶ್ಚಾಶ್ವೀ ಪಶ್ಚಾದನ್ಯೇ ತತೋ ವರಾಃ॥ ಚವನೋಽಚಥ್ಯ ವೈನ್ಯಾಶ್ಚ ಶಶಿಬಿಂದುಶ್ಚ ಹೈಹಯಃ॥೯೬॥ ತದ್ವಚ್ಚ ವಿಪ್ರರಾಜನ್ಯವಿಶೇಷೋಽತ್ರಾಪಿ ಕಶ್ಚನ॥ ತದ್ವತ್ಪ್ರಿಯವ್ರತಶ್ಚಾಪಿ ತದನ್ಯಾಃ ಶತದೇವತಾಃ॥೯೭॥ ಪರ್ಜನ್ಯಮಿತ್ರಾಂತರಾಳೇ ತದನ್ಯೇ ಚ ತತೋ ವರಾಃ॥ ಏತೇಭ್ಯೋಽಭ್ಯಧಿಕಾ ಶ್ರೀಸ್ತು ಸದಾ ಮುಕ್ತಾ ವಿಶೇಷತಃ॥೯೮॥ ತತ್ಸಮೋ ನಾಸ್ತಿ ಪರಮೋ ಹರಿರೇವ ನ ಚಾಪರಃ॥ ಸಂಹಿತಾಯಾಂ ಬೃಹತ್ಯಾಂ ತು ಸ್ವಯಂ ಭಗವತೋದಿತಮ್॥೯೯॥ ತದೇತದಖಿಲಂ ಪ್ರಾಣ ಆಹಂಕಾರಿಕ ಏವ ಚ॥ ಇಂದ್ರಾದನಂತರೋ ದೃಷ್ಟಿರಪಿ ಯೋಗ್ಯಾನುಸಾರತಃ॥೧೦೦॥ ಸಮ್ಯಕ್ ಗುರುಪ್ರಸಾದಶ್ಚ ಮುಖ್ಯತೋ ದೃಷ್ಟಿಕಾರಣಮ್॥ ಗುರುರ್ಬ್ರಹ್ಮಾಖಿಲಾನಾಂ ಚ

ವಿದ್ಯಾ ಚೈವ ಸರಸ್ವತೀ ॥ ದೇವತಾ ಭಗವಾನ್ ವಿಷ್ಣುಸ್ಸರ್ವೇಷಾಮವಿಶೇಷತಃ।ತತ್ಪ್ರಸಾದೇನ ಮುಕ್ತಿಸ್ಸ್ಯಾತ್ ನಾನ್ಯಥಾ ತು ಕದಾಚನ॥ಸ್ವೋತ್ತಮಾಸ್ತು ಕ್ರಮೇಣೈವ ಸರ್ವೇಷಾಂ ಗುರವಃ ಸ್ಮೃತಾಃ॥ಉಪದೇಶೋ ಬ್ರಹ್ಮಣಸ್ತು ಸರ್ವೇಷಾಮೇವ ಮುಕ್ತಯೇ॥ಸಾಧನೇಭ್ಯೋಽಧಿಕಾ ಭಕ್ತಿರ್ನೈವಾನ್ಯಂ ತಾದೃಶಂ ಕ್ವಚಿತ್ ॥ ಭಕ್ತಿಶ್ಚೈವ ಹರಾವೇವ ಮುಖ್ಯಾನ್ಯತ್ರ ಯಥಾಕ್ರಮಮ್॥ ಸ್ವಾಧಿಕತ್ವೇನ ಸರ್ವತ್ರ ಸ್ವೋತ್ತಮೇಷು ಕ್ರಮೇಣ ಚ॥ಅನುವರ್ತತೇ ಚ ಸಾ ಭಕ್ತಿರ್ಮುಕ್ತಾವಾನಂದರೂಪಿಣೀ॥**ತತ್ಪೂರ್ವಕೋಪಾಸನೈವಂ ಕರ್ತವ್ಯಾ ಮುಕ್ತಯೇ ಗುಣೈಃ॥**

ಪರಂಪರಾ ಗುರುಗಳ ಅನುಗ್ರಹಗೋಸುಗ ಆಯಾ ದೇವತೆಗಳ ಪ್ರಸಾದಾನುಗುಣವಾಗಿ ನಾಮಾಭಿಮಾನಿ ಉಷಾರಂಭಿಸಿ ಪ್ರಾಣ ಪರಿಯಂತವಾಗಿ ಅವರಂತರ್ಗತ ಹರಿಯನ್ನು ಉಪಾಸನಾ ಮುಕ್ತಿ ಪರ್ಯಂತವಾಗಿ ಮಾಡಬೇಕು. ಸಾಧನದಲ್ಲಿ ಭಕ್ತಿಯೇ ಅಧಿಕ. ಭಕ್ತಿಯಿಂದ ಉಪಾಸನೆ ಮಾಡಿದರೆ ಮುಕ್ತಿಯಲ್ಲಿ ಆನಂದ, ಕಾರಣ ಮುಕ್ತಿಪರಿಯಂತವಾಗಿ ಉಪಾಸನಾ ಮಾಡಿದರೆ ನಿಶ್ಚಯವಾಗಿ ಮುಕ್ತಿ ಕೊಡುವನು. **ಕಾರಣ ತಾರತಮ್ಯೋಪಾಸನೆಯೇ ಮುಖ್ಯ.**

ಇದರ ವಿವರಣೆಯನ್ನು ಶ್ರೀಟೀಕಾಕೃತ್ಪಾದರು **ಶ್ರೀಮನ್ನ್ಯಾಯಸುಧೆಯಲ್ಲಿ** ಮಾಡಿದ್ದಾರೆ. "ಏಷಾಂ ಜ್ಞಾನಯೋಗ್ಯಾನಾಮಿದಂ ಮುಕ್ತಿಸಂಸಾರಯೋಸ್ತಾರತಮ್ಯಂ ಸಮರ್ಥಿತಮ್॥**ಶೇ ಛಂದೋಗಾನಾಮುಪನಿಷದಿ** ನಾಮ ವಾಗಾದಿಕ್ರಮೇಣ ಪ್ರಾಣಾಂತಾ ಉಕ್ತಾಃ।ತತ್ರ ಕಿಂ ಪ್ರಾಣ ಏವಾಧಿಕಾರಿತಾರತಮ್ಯಸ್ಯಾವಧಿರುತಾಧಿಕೋಽಪ್ಯಸ್ತೀತಿ ಸಂಶಯೇ ಸತಿ ಯದೇವದೇವತಾತಾರತಮ್ಯಮಿತಿ ಸಿದ್ಧಾಂತಿತಮ್ ॥

ಸಕಲ ಶಾಸ್ತ್ರಾರ್ಥಗಳನ್ನು ಬಹು ವಿಸ್ತಾರ ಮಾಡಿ ಕೊನೆಗೆ ತಾರತಮ್ಯ ನಿರ್ಣಯ ಪೇಳುತ್ತಾರೆ. ನಾಮಾದ್ಯಾ ದೇವತಾ ಉಷಾ ಇತಿ । ಅಯಮತ್ರ **ಸಂಗ್ರಹಃ॥ಪುಷ್ಕರೋ ನಾಮ ಸರ್ವಾವರೋ ದೇವಃ।**ಕಳಾಭ್ಯಶ್ಚಾನ್ಯದೇವೇಭ್ಯಃ ಕರ್ಮ ಪ್ರತ್ಯವರಂ ಯತಃ।ಕಳಾಭ್ಯಃ ಪೃಥಗುಕ್ತಂ ತತ್ಪುಷ್ಕರಃ ಕರ್ಮ ಚೋಚ್ಯತೇ। ಇತ್ಯನ್ಯತ್ರೋಕ್ತತ್ವಾತ್ ।ತತಃ ಶನೈಶ್ಚರೋಽಧಿಕಃ ಸ್ಥಿತಿ

ವ್ಯಾತ್ಮಾ ಶನೇಶ್ಚೇತಿ ವಚನಾತ್|ತತ ಉಷಾ|ತತೋ ಬುಧಃ||ಉದಕಾತ್ಮಕೋ ಬುಧಶ್ಚೇತಿ ವಚನಾತ್ | ತತಃ ಸ್ವಾಹಾ | ತತಃ ಪರ್ಜನ್ಯೋ | ವಾರುಣೀ | ಸಂಜ್ಞಾ|ರೋಹಿಣೀ|ಧಾರ್ಮಿ ವಿರಾಟ್|ತತ|ಏಕಾದಶ ಮನವಶ್ಚವನೋ ಚಥ್ಥ್ಯಿ ವೈನ್ಯ ಶಶಿಬಿಂಧು ಹೈಹಯ ಪ್ರಿಯ ವ್ರತ ಗಯಾ ಅನುಕ್ತದೇವಾಶ್ಚ| "ಪ್ರಿಯವ್ರತೋ ಗಯಶ್ಚೈವ ಕರ್ಮ ದೇವಸಮೋ ಮತಃ" ಇತ್ಯನ್ಯ ತ್ರೋಕ್ತತ್ವಾತ್ | ತತೋಽಶ್ವಿನೌ || ವಿಘ್ನೇಶವಿತ್ತಪೌ | ವಿಷ್ವಕ್‌ಸೇನಶ್ಚ| "ವಿಷ್ವಕ್‌ಸೇನೋ ವಾಯುಜಃ|ಖೇನ ತುಲ್ಯ|ಇತಿ ವಚನಾತ್|"ತತೋ ಮಿತ್ರೋ ನಿಋತಿಸ್ತಾರಾ ಪ್ರಾವಹೀತಿ ಚ|ತತೋ ಮರೀಚಿರತ್ರ್ಯಂಗಿರಾಃ ಪುಲಸ್ತ್ಯಃ ಪುಲಹಃ ಕ್ರತುಃ|ವಶಿಷ್ಟೋ ವಿಶ್ವಾಮಿತ್ರೋ ವೈವಸ್ವತ ಮನುಶ್ಚ| ತತೋಽಗ್ನಿಃ ಭೃಗುಃ ಪ್ರಸೂತಿಶ್ಚ|ತತೋ ನಾರದಃ|ತತೋ ವರುಣಃ|ತತ ಶ್ಚಂದ್ರಸೂರ್ಯಧರ್ಮಾಃ|ಶತರೂಪಾ ಚ|ತತಃ ಪ್ರವಹಃ|ತತಃ ಅನಿರುದ್ಧ ಸ್ವಾಯಂಭುವಬೃಹಸ್ಪತಿ ದಕ್ಷಾಃ ಶಚೀ ರತಿಶ್ಚ|ತತಃ ಆಹಂಕಾರಿಕ ಪ್ರಾಣಃ ತತಃ ಇಂದ್ರಕಾಮೌ | ತತ ಉಮಾ | ಸುಪರ್ಣೀ | ಉಮಾತ್ಮಕತ್ವಾಚ್ಛೇಷ ಭಾರ್ಯಾ ಚ|ತತೋ ಜಾಂಬವತ್ಯಾದ್ಯಾ ಭಗವನ್ಮಹಿಷ್ಯಷ್ಟಕ್"|ಅನ್ಯತ್ರೋಕ್ತ ತ್ವಾತ್|ತತೋ ರುದ್ರಗರುಡೌ|ರುದ್ರಾತ್ಮಕತ್ವಾಚ್ಛೇಷಶ್ಚ|ತತೋ ಭಾರತೀ| ತದಾತ್ಮಕತ್ವಾತ್ಸರಸ್ವತೀ ಚ ತತೋ ಮುಖ್ಯ ವಾಯುಸ್ತದಾತ್ಮಕತ್ವಾ ದ್ಬ್ರಹ್ಮಾ ಚ|ತತೋ ಮಹಾಲಕ್ಷ್ಮೀಃ|ತತೋ ಭಗವಾನಿತಿ||**ಸುಧಾಯಾಂ** (೩-೩-೨೧) ಎಲ್ಲ ಶಾಸ್ತ್ರಾರ್ಥ ವಿಚಾರ ವಿಶದವಾಗಿದೆ. ಕೇವಲ ನಿರ್ಣಾಯಕ ಪ್ರಮಾಣಗಳನ್ನು ಕೊಟ್ಟಿದೆ.

ಇಂತು ಛಾಂದೋಗ್ಯ ಉಪನಿಷತ್ತಿನಲ್ಲಿ ವಿವರಿಸಿದ ಪ್ರಾಣಾದ್ಭೂಯಃ| ಪ್ರಾಣಾದ್ವಾವ ಭೂಯೋಽಸ್ತಿ ತಸ್ಮೇ ಭವಾನ್ ಬ್ರವೀತು|ಸತ್ಯಂ ವಾವ ಪ್ರಾಣಾದ್ಭೂಯಃ|| ಇತ್ಯಾದಿ ವಚನಗಳಿಂದ "**ಓಂ ಸ ವೈ ಹಿ ಸತ್ಯಾದಯಃ ಓಂ||** ಎಂಬ ಸೂತ್ರದಲ್ಲಿಯೂ, ಸತ್ಯ-ವಿಜ್ಞಾನ-ಶ್ರದ್ಧಾ-ನಿಷ್ಠಾ-ಕೃತಿ ಸುಖಾದಿ ಗಳು ಪ್ರಾಣದ್ವಾರಾ **ಸತ್ಯಾಖ್ಯ ಪರದೇವತೆಯಿಂ** ಲಭಿಸುವವೋ ಪ್ರಾಣ ನಿಗಿಂತಲೂ ವಿಷ್ಣುವೇ (ಸತ್ಯನು) ಉತ್ತಮನು. ಸತ್ಯನನ್ನೇ ಉಪಾಸಿಸು ವದು. ಇಂತು ಸೂತ್ರ ಪ್ರಸ್ಥಾನದಲ್ಲಿ ತಾರತಮ್ಯ ಉಪಾಸನೆ ಮುಖ್ಯವೆಂದು **ವಿವರಿಸಿ,**

(೩) **ಭಾರತ (ಗೀತಾ) ಪ್ರಸ್ಥಾನದಲ್ಲಿಯೂ** ತಾರತಮ್ಯ ಉಪಾಸನೆಯೇ ಮುಖ್ಯವೆಂದು **ಗೀತಾ ತಾತ್ಪರ್ಯ**. ೧೩ನೇ ಅಧ್ಯಾಯದಲ್ಲಿ "ಕ್ಷೇತ್ರಜ್ಞ" ಎಂಬ ಆದಿ ಶ್ಲೋಕದಲ್ಲಿ ಶ್ರೀ ಸರ್ವಜ್ಞರು ಬಹು ವಿಸ್ತಾರವಾದ ತಾರತಮ್ಯ ಪೇಳಿದ್ದಾರೆ. ಅಲ್ಲದೆ **ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ** ಪ್ರಥಮಾಧ್ಯಾಯ ಶ್ಲೋಕ ೬೮ ಆರಭ್ಯ ೯೬ನೇ ಶ್ಲೋಕ ಪರಿಯಂತ ವಿಶದವಾಗಿ ಆಜ್ಞೆ ಕೊಡಿಸಿದ್ದಾರೆ. ಅಲ್ಲಿ ನೋಡುವುದು. ಇಲ್ಲಿ ಗ್ರಂಥ ವಿಸ್ತಾರ ಬಹಳ ಆಗಿದೆ. ಕ್ಷಮಿಸಲು ವಿನಂತಿ.

ಶ್ರೀ ಸರ್ವಜ್ಞರು ಪ್ರಸ್ಥಾನತ್ರಯದಲ್ಲಿಯೂ ತಾರತಮ್ಯೋಪಾಸನೆಯೇ ಮುಖ್ಯ ಮಾಡುವದೆಂದು ಆಜ್ಞೆ ಇತ್ತ ಮೇಲೆ ಸಂಶಯಪಡುವ ಕಾರಣವಿಲ್ಲ. ಶ್ರೀ ವಿಜಯದಾಸಾರ್ಯರು ಇವೆಲ್ಲ ಶ್ರುತಿ ಉಪನಿಷತ್ ಭಾಷ್ಯ ಅನುವ್ಯಾಖ್ಯಾನ, ಸುಧಾ ವಾಕ್ಯಗಳ ಅನುಸರಿಸಿಯೇ **ಶ್ರೀ ವಿಜಯದಾಸ ಸುಳಾದಿ** ಉಪಾಸನಾ ಭಾಗ ಸು||೧೨—ಮಾನಸಪೂಜೆ ಮಾಡು ಧ್ಯಾನ ಪೂರ್ವಕದಿಂದ ಎಂಬ ಸುಳಾದಿ **ಮಟ್ಟತಾಳ "ತತ್ವ ತಾರತಮ್ಯ ತಾತ್ಪರ್ಯವು ತಿಳಿದು**|ಸತ್ವಗುಣದಲ್ಲಿ ಸತ್ಯ ನಡೆದು|ನಿತ್ಯವಧಿಕ ಜ್ಞಾನ ಭಕ್ತಿ ವೈರಾಗ್ಯದ|ಉತ್ತಮೋತ್ತಮನಾಗಿ ಉತ್ತರೋತ್ತರದಲ್ಲಿ|ಚಿತ್ತದ ಮಧ್ಯದಲ್ಲಿ ಚಿತ್ತಜ ಪಿತನನ್ನ|ಸ್ತೋತ್ರನೆಸಗುತ್ತ ಆತ್ಮ ನಿರ್ಮಳನಾಗು|ಸಾತ್ವಿಕ ದೈವವೆ ವಿಜಯ ವಿಠ್ಠಲ ಸ|ರ್ವೋತ್ತಮನೆಂದು ಸಾರುತ್ತ ಸಂತತದಲ್ಲಿ||೨|| ಮತ್ತು ಸುಳಾದಿ ೪ "ಅರ್ಚಿಸು ಮನವೆ ನಿತ್ಯ ಅನಾದಿ ಮೂರುತಿಯ|ನಿಚ್ಚಳವಾಗಿ ನಿ• ಸಂಗದಲ್ಲಿ|ಅಚ್ಚ ಭಕುತಿಯಲ್ಲಿ ಪಂಚಭೇದಜ್ಞಾನ|ಬೊಮ್ಮಾದ್ಯರ ತಾರತಮ್ಯ ತಿಳಿದು ಸಚ್ಚಿದಾನಂದಾತ್ಮಕ ಗುಣಗಳಿಂದ||" ಎಂದು ಹೇಳಿ, ಮತ್ತು ಸುಳಾದಿ ೨೮ ("ಹರಿಯಾ ಅರ್ಚನೆ ಮಾಡು ಹರುಷದಿಂದಲಿ ಮನವೆ" ಈ ಸುಳಾದಿ) **ಅಟ್ಟತಾಳದಲ್ಲಿ** "ಪದೋಪದಿಗೆ ನಿನ್ನ ಹೃದಯದೊಳಗೆ ಧ್ಯಾನ ಮುದದಿಂದ ಮಾಡೋದು|ಪದುಮನಾಭನ ವ್ಯಾಪ್ತಿ ಅಖಂಡದಲಿ ಉಂಟು|ಅದರ ತರುವಾಯ **ಸಿರಿ ಅಜ ಭವ ಇಂದ್ರ | ಮದನನಿಡಿದು ಶನೈಶ್ಚರ ವ್ಯಾಪ್ತಿ ತಿಳಿದು** ನಿ|ಲ್ಲದೆ ಇವರ ಪೂಜೆ ಆವಾವ ಬಗೆಯಿಂದ|ಉದಯಾಸ್ತಮಾನ ಪರಿಯಂತ ರಚಿಸಲು|ಇದೆ ಇದೆ **ತತ್ವೇಶರ ವ್ಯಾಪ್ತಿ** ಪರಿಯಂತ|ಸದಮಲ **ವಾಗಿ ಮುಟ್ಟುವದೆಂದು ಧ್ಯಾನಿಸೆ**|ಪದವಿಗೆ **ಸೋಪಾನ** ವೇಗದಿಂ

ದಾಗೋದು|ಚದುರಮೂರುತಿ ನಮ್ಮ ವಿಜಯ ವಿಠಲರೇಯಾ|ಇದನೆನೆದರೆ ಕೈಕೊಂಡು ಸರ್ವರಿಗೀವ||೪|| ಕಾರಣ ಹಿಂದಿನ ಬಿಂಬಾಪರೋಕ್ಷ ಸಂಧಿಯಲ್ಲಿ ಬಿಂಬ ಬಿಂಬರೊಳಗೆ ಕೇವಲ ಬಿಂಬಹರಿಯೆಂದು ಬಿಂಬ ಲಕ್ಷಣ. "ಪುಷ್ಕರನೆ ಸರ್ವರ ಬಿಂಬ. ಪುಷ್ಕರಾರಂಭಿಸಿ ಶನೈಶ್ಚರ ಮುಂತಾದ ಉತ್ತಮೋತ್ತಮ ವಾಯು ಪರಿಯಂತ ಬಿಂಬರೆಂದು ಚಿಂತಿಸಿ ಧ್ಯಾನಿಸುತ್ತ ಇವರೆಲ್ಲರಿಗೆ ಬಿಂಬನು ಕೇವಲ ಹರಿಯೆಂದು ಧ್ಯಾನಿಸಬೇಕು. ಪುಷ್ಕರ, ಶನೈಶ್ಚರ ಉಷಾದಿ ಎಲ್ಲರ ಪ್ರಸಾದದಿಂದ ಆಯಾ ಶಕ್ತಿ ಗುಣ ಧರ್ಮ ಸ್ಥೈರ್ಯ ಧೈರ್ಯ ಉಪಾಸನಕ್ಕೆ ಅನುಕೂಲವಾಗಿ ಶ್ರೀಹರಿಯು ಒಲಿವನು. **"ಗುರೋರ್ವಿದ್ಯಾಹೃತಿರ್ಯಾ ತು ಸ ಆಹಾರ ಇತಿ ಸ್ಮೃತಃ||ತಚ್ಛುದ್ಧೌ ಜ್ಞಾನಶುದ್ಧಿಃ ಸ್ಯಾಜ್ಜ್ಞಾನಶುದ್ಧೌ ಸ್ಥಿರಾ ಸ್ಮೃತಿಃ|ಸ್ಮೃತಿಸ್ಥೈರ್ಯೇ ತ್ವಾಪರೋಕ್ಷ್ಯಂ ಹರೇರ್ಮೋಕ್ಷಸ್ತತೋ ಭವೇತ್|| ಇತಿ ಸಾಧನ ನಿರ್ಣಯೇ||ಛಾಂದೋಗ್ಯ ಭಾಷ್ಯ ೨೬ನೇ ಖಂಡ||** ಇದರ ಅರ್ಥವೇನೆಂದರೆ **ಆಹಾರಶುದ್ಧೌ ಸತ್ವ ಶುದ್ಧಿಃ||** ಇತ್ಯಾದಿ ರಸ ಸ್ನೇಹವಿರುವ ಆಹಾರ ಶುದ್ಧಿಯಿಂದ ಅಂತಃಕರಣಶುದ್ಧಿಯಾದರೂ ಸ್ಮೃತಿ ಸ್ಥೈರ್ಯರೂಪವಾದ ಧ್ಯಾನವು ಸಿದ್ಧವಾಗಲಾರದು. ಎಂದರೆ **ಆಹಾರ ಶುದ್ಧಿ**ಯೆಂದರೆ, ಆಹಾರ (ಅನ್ನ=ಅನ್ನನಾಮಕ ಅನಿರುದ್ಧಾಂತರ್ಗತ ಭಗವಂತನು) ಗುರುಗಳಿಂದ ಉಪದೇಶಿಸಲ್ಪಟ್ಟ ಶಾಸ್ತ್ರ ಶ್ರವಣವು (ಅನ್ನ) ಆಹಾರವೆನಿಸುತ್ತದೆ. ಸದ್ಗುರುಗಳಿಂದ ಸತ್‌ಶಾಸ್ತ್ರ ಉಪದೇಶದಿಂದ ಮನಶ್ಶುದ್ಧಿ ಜ್ಞಾನಶುದ್ಧಿಯಾದರೆ ಧ್ಯಾನವು ಶುದ್ಧವಾಗುತ್ತದೆ. ಧ್ಯಾನವು ಶುದ್ಧವಾದರೆ ಸ್ಥಿರಸ್ಮೃತಿ ಸ್ಥೈರ್ಯದಿಂದ ಭಗವಂತನ ಅಪರೋಕ್ಷ ಆತನ ಉತ್ತಮ ಪ್ರಸಾದದಿಂದ ಮೋಕ್ಷವಾಗುತ್ತದೆಂದು ಸಾಧನ ನಿರ್ಣಯದಲ್ಲಿ ಹೇಳಿದೆಂದು ಶ್ರೀ ಸರ್ವಜ್ಞರು ಅಪ್ಪಣೆ ಕೊಡಿಸಿದಂತೆ ಆಯಾ ದೇವತೆಗಳ ತಾರತಮ್ಯ ಉಪಾಸನೆಯಿಂದ ಮೇಲೆ ವಿವರಿಸಿದಂತೆ ಆಯಾ ಗುಣಗಳು ಒದಗಿಸಿ ಶ್ರೀಹರಿಯು ಪ್ರತ್ಯಕ್ಷನಾಗುತ್ತಾನೆ. ಆದಕಾರಣ ತಾರತಮ್ಯ ಉಪಾಸನೆಯೇ ಮುಖ್ಯವೆಂದು ಶ್ರೀ ಅಪರೋಕ್ಷಜ್ಞಾನಿಗಳಾದ ದಾಸಾರ್ಯರು ಅವರೋಹಣ ಆರೋಹಣಾದಿ ತಾರತಮ್ಯ ಸಂಧಿಗಳನ್ನು ಪ್ರಾರಂಭಿಸಿ ಸಜ್ಜನರ ಉದ್ಧರಿಸಿದ್ದಾರೆ. ಈ ರಹಸ್ಯವನ್ನರಿತು ತಾರತಮ್ಯದಿಂದ ಶ್ರೀ ಹರಿಯ ಧ್ಯಾನವೇ ಮುಖ್ಯವಾದುದೆಂದು

**ಶ್ರೀ ವಿಜಯದಾಸಾರ್ಯರು ಉ.ಭಾಗ ಸುಳಾದಿ ೩೬** ಆಪ್ತ ಅಖಿಳ ಮುಕ್ತಿಯೋಗ್ಯ ಎಂಬ ಸುಳಾದಿ **ಅಟ್ಟತಾಳದಲ್ಲಿ "ಪರಮೇಷ್ಠಿ ಪವಮಾನ ಗರುಡಾಹಿ ಶಿವ ಇಂದ್ರ|ಸ್ಮರಪ್ರಾಣ** ಅನಿರುದ್ಧ ರವಿ-ಚಂದ್ರ ಮೊದ **ಲಾದ**|ಸುರರು ತಾತ್ವಿಕರು ಚತುರವಿಂಶತಿ ತತ್ವ|ಧರಿಸಿ ಇದ್ದವರು ಮಿಕ್ಕಾದ ಜೀವರಾಶಿ|ಪರಿಯಂತ ನೆನೆನೆನೆದು ಒಂದೊಂದಧಿಷ್ಠಾನದಲ್ಲಿ **ಹರಿಯ ಧ್ಯಾನವ ಮಾಡೆ ತತ್ಕಾರ್ಯವ|ಅರುಹಿ ಕೊಡುವನಯ್ಯಾ** ಕ್ರಮದಿಂದ ನೇಮಿಸಿ|ಮರಿಯಾದೆ ತಪ್ಪದು ತಮ್ಮ ಯೋಗ್ಯತದಷ್ಟು ಕಿರಿಯಜನಕೆ ಶಕ್ತಿ ಉತ್ತ|ಮರಿಗೆ ಸರ್ವಸಾಧ್ಯವಾಗಿಪ್ಪದು ಕೇಳಿ|ಸರಸಿಜ ಗರ್ಭಂಗೆ ಇತರ ಸಂ ಶಯವಿಲ್ಲ|ಹರಿಕರುಣವಂದೆ ಪ್ರಧಾನ ಸಾಧನ|ಪರಮ ಪಾವನ ಸಿರಿ ವಿಜಯ ವಿಠ್ಠಲ ತನ್ನ|ಶರಣರಿಗೊಂದೊಂದು ಕ್ಲಿಪ್ತಿ ಮಾಡಿ ಇಪ್ಪ||೪|| ಇವೆಲ್ಲ ಶಾಸ್ತ್ರ ವರಿತು ತಾರತಮ್ಯ ಉಪಾಸನೆಯೇ ಮುಖ್ಯವೆಂದು ದಾಸಾರ್ಯರಂತರ್ಗತ ಹರಿವಾಯುಗಳು ಸ್ವಪ್ನದಲ್ಲಿ ಪ್ರೇರಿಸಿ ಬರೆಸಿದು ಶ್ರೀ ವಿಜಯರ ಅನುಗ್ರಹ.



---

ಶ್ರೀ ಗುರುರಾಜೋ ವಿಜಯತೇ

# ೧೯ನೆಯ ಗುಣತಾರತಮ್ಯಾದಿ ಸಂಧಿಗಳ ಸಂಬಂಧ ವಿವರಣೆ

ಶ್ರೀ ಅಪರೋಕ್ಷ ಜ್ಞಾನಿಗಳು ದೇವಾಂಶರಾದ ದಾಸವರ್ಯರು ಹಿಂದೆ ೧೮ನೇ ಸಂಧಿಯಲ್ಲಿ ಬಿಂಬೋಪಾಸನೆ ಸಂಧಿಯನ್ನು ವಿಸ್ತಾರವಾಗಿ ಹೇಳಿ ಈಗ ಈ ೧೯ನೇ ಸಂಧಿಯಲ್ಲಿ ಅವರೋಹಣ ಕ್ರಮವಾಗಿ ದೇವರು ಸರ್ವೋತ್ತಮ. ರಮಾಬ್ರಹ್ಮಾದಿಗಳು ತದವರರು ಎಂದು ಗುಣ ತಾರತಮ್ಯ ಸಂಧಿಯನ್ನು ಪ್ರಾರಂಭಿಸಿದ್ದಾರೆ.

ಬಿಂಬೋಪಾಸನೆ ಸಂಧಿಗೂ ಈ ಗುಣತಾರತಮ್ಯಕ್ಕೂ ಸಂಬಂಧವೇನೆಂಬುವ ವಿಚಾರವೂ ಬಂದೆ ಬರುತ್ತದೆ. ಮೊದಲನೆ ಸಂಧಿಯಲ್ಲಿ ದಾಸಾರ್ಯರು ಅಪ್ಪಣೆ ಕೊಡಿಸಿದಂತೆ ಶ್ರೀಹರಿಕಥಾಮೃತಸಾರವು ಕೇವಲ ಬಿಂಬೋಪಾಸನ, ಬಿಂಬನಾದ ಶ್ರೀ ಹರಿಯ ಲೀಲೆಯ ಸರ್ವೋತ್ಕರ್ಷ ಗುಣಗಾನವೇ ಅಮೃತಸಾರ. ಕಾರಣ ೧೮ನೇ ಸಂಧಿಯವರೆಗೆ ಪರಸ್ಪರ ಸಂಧಿಗಳ ಸಂಬಂಧ ಹಿಂದೆ ವಿಸ್ತಾರವಾಗಿ ಅರಿಕೆ ಮಾಡಿದೆ.

**ಈಗ ೧೯ನೇ ಸಂಧಿಯಿಂದ ೩೨ನೇ ಸಂಧಿ ಪೂರ್ತಿಯಾಗಿ ಕೇವಲ ಬಿಂಬೋಪಾಸನ ಕ್ರಮವನ್ನು ಸಕಲ ಶಾಸ್ತ್ರಾರ್ಥ ಮಥಿಸಿ ಒಂದೆಡೆಗೆ ಹೇಳಿದ್ದಾರೆ.** ಪರಮ ಕಾರುಣಿಕರಾದ ದಾಸರ ದಯೆ. ಛಾಂದೋಗ್ಯ, ಬೃಹದಾರಣ್ಯಕ, ಶೌನಕ ಸ್ಮೃತಿ, ಶಾಂಡಿಲ್ಯ ತತ್ವ, ಬೃಹದ್ಭಾಷ್ಯ, ಮಾನಸ ಸ್ಮೃತಿ, ಶ್ರೀ ವಿಜಯದಾಸಾರ್ಯರ ತಾರತಮ್ಯ ಸೃಷ್ಟಿ, ಉಪಾಸನಾ ಭಾಗ ಸುಳಾದಿಯಲ್ಲಿ ಇದರ ವಿಸ್ತಾರ ಬಂದಿದೆ. ಗುರುಗಳಿಂದ ಅರಿತು ಚೆನ್ನಾಗಿ ಮೊದಲಿಗೆ ಶ್ರವಣ ಮನನ ಮಾಡಬೇಕು. ಬಿಂಬೋಪಾಸನೆ ಏನು, ಬಿಂಬೋಪಾಸನೆ ಕ್ರಮ ಹೇಗೆ? ಎಂಬುದನ್ನು, ದಾಸಾರ್ಯರ ಗುರುಗಳಾದ ಶ್ರೀ ಗೋಪಾಲ ದಾಸ ರಾಜರು (ಉಪಾಸನಾ ಭಾಗ ಸು. ಪದ

೧೬ ಪುಟ ೨೦೧) "ಧ್ಯಾನವೇ ಮಾಡು ಬಿಂಬ ಮೂರುತಿಯ||ಪ|| ಆನಂದ ದಲಿ ಕುಳಿತು ಅಂತರಂಗದಲಿ ||ಅ.ಪ.|| ಸದಾಚಾರನಾಗಿ ದ್ವಾದಶ ಗುರು ಗಳಿಗೆರಗಿ|ಮೊದಲಿಂದ ಮೂಲಮಂತ್ರವನು ಜಪಿಸಿ|ಸದಮಲ ಭಕುತಿಯಲಿ ದೇಹಸ್ಥನ ತಿಳಿದು|ಪದುಮಾಸನ ಹಾಕಿ ಪರಮ ವಿಶ್ವಾಸದಲಿ ||೧|| ಅಂಗ ವನು ಚಲಿಸದೇ ಚನ್ನಾಗಿ ದೃಢದಿಂದ|ಕಂಗಳನು ಮುಚ್ಚಿ ಇಂದ್ರಿಯಗಳ ತೊರೆದು|ಮಂಗಳ ಶೋಭಿತದಿ ಅಖಂಡ ಧ್ಯಾನವನು ಅಂತ|ರಂಗದಿ ನಿಲಿಸಿ ಎಲ್ಲವನು ಕಾಣೋ ||೨|| **ಭಗವದ್ರೂಪಗಳೆಲ್ಲ ಒಂದು ಸಾರಿ ಸ್ಮರಿಸಿ| ಮರುಳೆ ಪರಮ ಗುರುವಿನ ಮೂರ್ತಿಯಸು||ತೆಗೆದು ಆಹ್ವಾನೆ ಮಾಡಿ|ಅಲ್ಲಿಂದಲೇ ಸ್ವಗುರು ಬಿಂಬಮೂರುತಿಯಲಿ ಐಕ್ಯವನೆ ಮಾಡೋ||೩||** ತಿರುಗಿ ಮೆಲ್ಲನೆ ಮೂರು ವೇಗದಿಂದಲಿ **ನಿನ್ನ|ವರ ಮೂರುತಿಯಲಿ ಚಿಂತನೆಯ** ಮಾಡೊ||ಭರದಿಂದ ಎಲ್ಲವನು ತಂದು ಹೃದಯದಲ್ಲಿ|ಸ್ಥಿರವಾಗಿ ಇಪ್ಪ ಮೂರುತಿಯಲ್ಲಿ ಕೂಡಿಕೋ ಆತನೆ ಬಿಂಬ ಮೂರುತಿಯೆಂದು ತಿಳಿದುಕೊ ಆ ತರುವಾಯ ನಾಡಿಗಳ ಗ್ರಹಿಸಿ|ಆ ತೈಜಸನ ತಂದು ವಿಶ್ವ ಮೂರುತಿಯಲ್ಲಿ|ಪ್ರೀತಿಯುಳ್ಳವನಾಗಿ ಪತಿಕರಿಸು ಮರುಳೆ ||೪|| ಗುಣ ನಾಲ್ಕರಿಂದ ಉಪಾಸನೆ ಮಾಡು (ಇತ್ಯಾದಿ)........ಈ ಪರಿ ಧೇನಿಸಲು ದೇವ ಕರುಣವ ಮಾಳ್ಪ|**ಪಾಪಸಂಚಿತವು ಆಗಾಮಿ ನಾಶ||ಆಪರೋಕ್ಷಿತನಾಗಿ ನಿನ ಯೋಗ್ಯತೆ ಇದ್ದಷ್ಟು|ಗೋಪಾಲ ವಿಠ್ಠಲನೊಲಿವ ನಾಗ||೯||** ಎಂದು ಅಪ್ಪಣೆ ಕೊಡಿಸಿದ್ದಾರೆ.

ಇದನ್ನೇ ವಿಸ್ತಾರವಾಗಿ ಶ್ರೀ ವಿಜಯದಾಸಾರ್ಯರು ವರ್ಣಿಸಿದ್ದಾರೆ. ಅದೇ ಕ್ರಮವನ್ನೇ (೯) ತಾರತಮ್ಯ ಸಂಧಿಗಳಲ್ಲಿ ದಾಸಾರ್ಯರು ಕ್ರೋಢೀಕರಿಸಿದ್ದಾರೆ. ಇದರ ಮರ್ಮ ತಿಳಿಯುವುದೇ ಕಷ್ಟ. ತಿಳಿಸಿದಷ್ಟು ತಿಳಿದರೂ ದಾರ್ಢ್ಯವಾಗಿ ಜ್ಞಾನವಾಗುವದು ದುರ್ಲಭ, ಜ್ಞಾನವಾದರೂ ಮನದಲ್ಲಿ ನಿಲ್ಲುವದು ಪರಮ ದುರ್ಲಭ. ಸಾಧನ ಬೇಕು. ಗುರ್ವನುಗ್ರಹ ಬೇಕು.

ಮೊದಲಿಗೆ ಶ್ರೀ ವಿಜಯದಾಸರ ಉಪಾಸನಾ ಭಾಗ ಸುಳಾದಿ (೪) ಅರ್ಚಿಸುವೆ ಮನವೆ ನಿತ್ಯ ಅನಾದಿ ಮೂರ್ತಿಯ|ನಿಚ್ಚಳವಾಗಿ ನಿಸ್ಸಂಗದಲ್ಲಿ| ಅಚ್ಚ ಭಕುತಿ ಪಂಚಭೇದ ಜ್ಞಾನ|ಎಚ್ಚತ್ತು ದಿವಾರಾತ್ರಿ ದೈನ್ಯವೃತ್ತಿ|ಯಾಚಕ

**ನಾಗು ಚೊವಮ್ಮಾದ್ಯರ ತಾರತಮ್ಯ ತಿಳಿದು।ಸಚ್ಚಿದಾನಂದಾತ್ಮಕ ಗುಣ ಗಳಿಂದ॥**

ಮುಂದೆ ಸುಳಾದಿ (೬) ಪುಟ ೧೪ **ಶ್ವೇತದ್ವೀಪವಾಸಿ ವಾಸುದೇವ ಮುಖ್ಯವಾತ ಖದ್ಯೋತಗುರು** ಇವರಲ್ಲಿಟ್ಟು।ಆ ತರುವಾಯ **ತನ್ನ ಹೃತ್ಕಮಲದಲ್ಲಿದ್ದ**।ಶ್ರೀತರುಣೀಶನ್ನ ಧ್ಯಾನಗೈದು।ಈತನು ಮಧ್ಯದಲ್ಲಿ ಅನಂತ ಅಂಶಾತ್ಮಕ।ಆತನ್ನ ತಂದು ಏಕ ಚಿಂತನ ಗೈದು

ಮುಂದೆ ಸುಳಾದಿ (೧೦) **ಸಪ್ತಾವರಣವಾದ ಸ್ಥೂಲದೇಹದಲ್ಲಿ ಇದ್ದ** ಎಲ್ಲ ತತ್ವ ತತ್ವಾಭಿಮಾನಿಗಳ ಭಗವದ್ರೂಪಗಳ ನೆನೆಯುವ ಕ್ರಮುವೇ ತಾರ ತಮ್ಯ ದ್ಯೋತಕವು ಇದೆ ಅವರೋಹಣ ಗುಣತಾರತಮ್ಯ.

ಮುಂದೆ ಸುಳಾದಿ (೧೧) ಪುಟ ೧೧ರಲ್ಲಿ ಬಹು ವಿಸ್ತಾರವಾಗಿ ಹೇಳಿದ್ದಾರೆ. ಇದನ್ನು ಅತ್ಯಾವಶ್ಯ ಪೂರ್ತಿ ಸುಳಾದಿಯ ಅರ್ಥವನ್ನು ಗುರುಗಳಿಂದ ಚನ್ನಾಗಿ ತಿಳಿಯಬೇಕು. ಧ್ರುವ ತಾಳ (೧)ರಿಂದ ೭ ತಾಳ ಪೂರ್ತಿ ಬಿಂಬಾ ರಂಭಿಸಿ ಸ್ವರೂಪಗತ ಭಗವದ್ರೂಪ ಲಿಂಗೋಪಾದಾನ-ಅನಿರುದ್ಧ-ದೇಹಗತ ರೂಪಗಳು. ತತ್ತದ್ದೇವತೆಗಳ ಇರುವಿಕೆ, ತಾರತಮ್ಯ, ಸಪ್ತಕಮಲಗತ ರೂಪಗಳು, ಸ್ಥೂಲದೇಹದಲ್ಲಿದ್ದ ಗುಣತಾರತಮ್ಯವನ್ನುಳ್ಳ ದೇವತೆಗಳ ನೆನಸುವ ಕ್ರಮುವೇ ಈ ೧೯ನೇ ಗುಣತಾರತಮ್ಯ ಸಂಧಿಯಲ್ಲಿ ಪೇಳಿದ್ದಾರೆ. **೨೦ನೇ ಸಂಧಿ ಮುಂದೆ ಆರೋಹಣ ಕ್ರಮ** ಅನೇ ತಾಳದಲ್ಲಿ ಬಾಹಿರ ಉಪಾಸನಾ ಬಿಂಬೈಕ್ಯ ಚಿಂತನ ಕ್ರಮ "**ನಿನ್ನ ಬಿಂಬನೇ ಸ್ಥಾವರಾದಿ ಜೀವಿಗಳು ಮೊದಲು ಮಾಡಿ**।ಈರೆರಡು ಲಕ್ಷ ಮಾನವರು ಇವರ ವರ್ಣಾಶ್ರಮಾಚಾರ।ಧಾರುಣಿ ಮೇಲಿಪ್ಪ ಎಲ್ಲ ಜೀವರ।**ತಾರತಮ್ಯ ಆರೋಹಣ ಕ್ರಮುದಿಂದ ಚಿಂತಿಸುತ್ತ ಆರೊಂದು ಏಳು ಅಧೋಭುವನ॥ಅತಳಾದಿ ಪೆಸರುಂಟು** ವಾರುತಿಯನು ತಿಳಿ ಅಲ್ಲೆಲ್ಲಿಯ।ವಾರುಣಿಪತಿ ಶೇಷ ಮಾರುತ ಕೂರ್ಮನು ನಾರಾಯಣ ವರಹ ಹರಿ ಕೂರ್ಮ।ಭಾರ ಪೊತ್ತಿಹರು ಚತುರ್ದಶ ಲೋಕಕ್ಕೆ ಆ।ಧಾರಭೂತರಾಗಿ ಶಕ್ತಿಸಹಿತ।ಘೋರ ಉಪನಾಯಕ ನರಕಾ ನರಕಾವಕ್ಕು ಭಾರಣೆಯಾಗಿದೆ ಪಾಪಿಗಳಿಗೆ।(ಇದೇ ದೈತ್ಯಾದಿಗಳ ತರತಮ ವಿವರ ಅವರ ಆವಾಸಸ್ಥಾನ ಅವರವರ ಗುಣಾಧಮತ್ವ) **ಚಿಂತನೆ ಕ್ರಮ ಕಾರಣ**

ಕರ್ಮಭೂಮಿಗೆ ಬಂದು ಚಿಂತಿಸು|ಭಾರತವರ್ಷದೊಳಗೆ ಇದ್ದ ಕ್ಷೇತ್ರ|ನಾರಾಯಣಾಶ್ರಮ ಮೊದಲಾದವು ಮತ್ತೆ | ವಾರಿಸುಪೂರಿತವಾದ ನದಿಕಾಸಾರಾ |ಮೇರುನಂದನ ಮಿಕ್ಕಪರ್ವತಗಳುಚ್ಚರಿಸೆ | ಧೀರನಾಗಿ ಮುಂದೆ ಮನವೆ ನಡಿಸು|ಮೇರುಪರ್ವತ ನಾನಾ ನವ ಖಂಡ ನವ ದ್ವೀಪ|ವಾರಿಧಿಗಳು ಶ್ವೇತ ದ್ವೀಪಾನೇಕರೂಪ|ಧಾರುಣಿ ಲೋಕ ಲೋಕಾದ್ರಿ ತಮಸು ಗಂ|ಭೀರ ಭುವನಂತಾಸನ, ಕುಂಡಲಾಕಾರ| ವಾರಣಗಳು ಉಂಟು ಎಂಟು ಸುತ್ತಲು ವಡಬಾ| ವಾರುಧಿಯೊಳಿಪ್ಪರು. ಸುರರಿಗೆ ಮಹಿಮೆಯ| ತೋರುತ್ತ, ಕಾರುಣ್ಯವನೆ ಬೀರುತ್ತ"| (ಇಲ್ಲಿಗೆ ಭೂತಳಾದಿ ಸಪ್ತ ದ್ವೀಪ ಸಪ್ತ ಸಮುದ್ರ ಶ್ವೇತ ದ್ವೀಪಾನಂತಸನಾದಿಯಲ್ಲಿಪ್ಪ ಸುರರು ತದುಪಾಸ್ಯ ಭಗವದ್ರೂಪ ಬಿಂಬೈಕ್ಯ ಚಿಂತಿಸಿ ಮುಂದೆ, ಊರ್ಧ್ವಲೋಕ ಅಲ್ಲಿಪ್ಪ ದೇವತೆಗಳ **ಉಪಾಸ್ಯ ಭಗವದ್ರೂಪಗಳಿಗೆ ಆರೋಹಣಕ್ರಮದಿಂದ ಐಕ್ಯ ಚಿಂತಿಸುವಕ್ರಮ.** ಊರ್ಧ್ವಲೋಕಗಳ ವಿಸ್ತಾರ ಹೇಳುತ್ತಾರೆ). ಮೇಘಮಂಡಲಾರಂಭಿಸಿ **"ವಾರಿದ ಸ್ವರ್ಭಾನು ದಿವಾಕರ ಚಂದ್ರಮ| ತಾರಾಮಂಗಳ ಸೌಮ್ಯ ಬೃಹಸ್ಪತಿ ಭಾರ್ಗವ|ಸೌರಿ ಸಪುತಋಷಿಧ್ರುವಮಂಡಲ ವಿ|ಚಾರಣೆ ಮಾಡುವದು ಅವರ ನೀತಿ| ಮೂರು ದಾರಿಯು ತಿಳಿ ಪಿತೃ ದೇವ ಬ್ರಹ್ಮ| ಸಾರಿ ಸಾರಿಗೆ ಸ್ಥಾನ ಸ್ಥಳದವರಾ| ಪಾರ ಸುಂದರ ಸಾರ ವಿಜಯ ವಿಠ್ಠಲರೇಯನ** ಚಾರಿತ್ರವನೆ ಗುಣಿಸು ಸರ್ವ ಠಾವಿನಲ್ಲಿ||೮||

ಇಲ್ಲಿಯವರೆಗೆ ಭುವರ್ಲೋಕವಿರುವ ಅಲ್ಲೆಲ್ಲಿಪ್ಪ ದೇವತೆಗಳ ತರತಮ ತದಂತಸ್ಥ ಪ್ರಾಣಾಂತರ್ಯಾಮಿ ರೂಪಗಳಿಗೂ, ಬಿಂಬೈಕ್ಯ ಚಿಂತಿಸುತ್ತಾ ಮುಂದೆ **ಸ್ವರ್ಗಾದಿಸಪ್ತಊರ್ಧ್ವ** ಲೋಕಗಳಲ್ಲಿರುವ ದೇವತೆಗಳ ತರತಮಾದಿಗಳನ್ನು (೯) ನೇ ತಾಳದಲ್ಲಿ ಪೇಳುತ್ತಾರೆ||.

"ಸುರಪತಿ ಇಲ್ಲಿಪ್ಪ ಪರಿವಾರದೊಡನೆ ಸಾ| ಧ್ಯರು ಉಭಯಗಂಧರ್ವರು ಯಕ್ಷಕಿನ್ನರಾದ್ಯರು| ತರುವಾಯ ಸ್ವರ್ಲೋಕ ಸ್ವರ್ಗಲೋಕವೆನಿಸುತಿದಕೊ| ವರಮಹರ್ಲೋಕ ಜನೋ ತಪ ಸತ್ಯದಲ್ಲಿ ವಿ| ಸ್ತರಿಸುವೆ ಬ್ರಹ್ಮ ರುದ್ರ ಕಾಮ ಸನಕಾದಿಗಳು| ಭರದಿಂದ ತಿರಗುವ ನಾಟ್ಯಾಲಂಕಾರ ಜನ| ಸ್ವರವೆತ್ತಿ ಪಾಡುವ ಪರಿಪರಿಸೇವೆಯ| ಭರಿತವಾಗಿಪ್ಪರು ಅಲ್ಲಲ್ಲಿ ತುಂಬಿಕೊಂಡು| ತರತಮದಿಂದ ವಾಲಗ ಮಾಡುತ್ತ| ವರ ಅನಿರುದ್ಧ ಪ್ರದ್ಯುಮ್ನ ಸಂಕರುಷಣ ಹರಿಕೃಷ್ಣ|

ನಾರಾಯಣ ವಾಸುದೇವಾ। ಎಂಟೈದು ಮೇಲು ಲೋಕಾದಲ್ಲಿ ಭಗವದ್ರೂಪ। ಧೊರೆತನದಲ್ಲಿ ಪೂಜೆ ಗೊಳುತಿಪ್ಪವು । ಪರಮೇಷ್ಠಿ ಲೋಕದಿಂದಿತ್ತಲು ಮೇಲ್ಭಾಗದಲ್ಲಿ। ದುರಿತವಿದೂರ ವೈಕುಂಠವೆನ್ನಿ। ಧರೆಯೊಳಗಿಲ್ಲದ **ವಿಚಿತ್ರ ತಾರತಮ್ಯ**। ನಿರೀಕ್ಷಿಸುವ ಮುಕ್ತರ ಸಂದಣಿ। ಬರಹದಲ್ಲಿ ಪೇಳುವೆ ಇದರ ವರ್ಣನೆ ಮುಂದೆ। ಅರುಹು ಸಜ್ಜನರ ಚಿತ್ತಕ್ಕೆ ಆಗುವದು। ಚಿರ ಜ್ಞಾನಾನಂದ ಮೂರ್ತಿ ವಿಜಯವಿಠ್ಠಲನ್ನ ಕರುಣದಿಂದಲಿ ಕೇಳಿ ಕರಣಶುದ್ಧಿಯಲಿ।। ೯ ।।

ಮುಂದೆ ೧೦ನೇ ತಾಳದಲ್ಲಿ **ಬ್ರಹ್ಮಾಂಡಾವರಣ ಇದರ ಮೇಲಿಪ್ಪ ಅವ್ಯಕ್ತಾವರಣವರೆಗೆ ೭ ಆವರಣಗಳಲ್ಲಿ ತರತಮದಿಂದ ಆರೋಹಣ** ಕ್ರಮದಿಂದ ಉಪಾಸನೆ ವಿಭಾಗ ಹೇಳುತ್ತಾರೆ.

**"ಹತ್ತೈದುಕೋಟಿ ಬೊಮ್ಮಾಂಡವು।**ಎತ್ತನೋಡಿದರತ್ತ ಅವಕಾಶ ವಾಗಿದೆ । ಮತ್ತೆ ಇದರ ಇಮ್ಮಡಿ ಬ್ರಹ್ಮಾಂಡ ಖರ್ಪರ । ಹತ್ತಿಕೊಂಡಿದೆ ನೋಡಿ ಸುತ್ತಲು ತೊಲಗದಲೆ। ಇತ್ತಂಡ ವಿರಾಟಮೂರ್ತಿಗಳುಂಟು । ಸತ್ಯ ಲೋಕವೆ ಶಿರಸು ಒಂದಕೆ ಇಲ್ಲಿತನಕ। ತತ್ತ್ವಳಿಸುವ ಉದಕ ತೇಜೋವಾಯು ಗಗನ। ಜತ್ತಾದಾಹಂಕಾರ ಮಹಾ ಅವ್ಯಕ್ತಾವರಣಾ।ಪ್ರತ್ಯೇಕ ಪ್ರತ್ಯೇಕವಾಗಿವೆ ಇವು ಏಳು। ಸತ್ಯವಾಗಿಪ್ಪವು ಅನಿತ್ಯ ಎಂದಿಗೂ ತತ್ವ ಒಂದೊಂದಕ್ಕೆ ಹತ್ತು ಮಡಿವೆಗ್ಗಳಿಸಿ **ಸತ್ವಜೀವಿಗಳು ಬೊಮ್ಮಾದಿ ಸರ್ವದೇ। ವತ್ತಿಗಳಲ್ಲಲ್ಲಿ ತಮ ತಮ ಸ್ಥಾನದಲ್ಲಿ । ಕರ್ತ** ರಾಗಿಪ್ಪರು ತಮಗಿಂದ ನೀಚರಿಗೆ **ಉತ್ತಮ ಮತಿಯಲ್ಲಿ ಉಪದೇಶ ಮಾಡುತ್ತ। ವೃತ್ತಿರೂಪದಲ್ಲಿ ಅಂಶಿ ಅಂಶವ ಧರಿಸಿ ಅತ್ಯಂತ ಹರುಷದಲ್ಲಿ ಬಾಳುತಲಿಪ್ಪರು।** ಚಿತ್ತಜ ಪಿತ ನಮ್ಮ ವಿಜಯವಿಠ್ಠಲರೇಯ ನಿತ್ಯದಲ್ಲಿ ನೆನಸೆ ಮುಕ್ತಿಯ ಕೊಡುವನು ।।೧೦।। ಹೀಗೆ ಸ್ಥಾವರ ಜೀವಿಗಳಿಂದ ಶ್ರೀಹರಿಯವರೆಗೆ ಆರೋಹಣ ತಾರತಮ್ಯ ಉಪಾಸನಾಕ್ರಮ ೨೦ನೇ ಸಂಧಿಯಲ್ಲಿ ಪೇಳಿದ್ದಾರೆ. ಇದು ಎನ್ನ ಸ್ವಮತಿಯಿಂದ ಬರೆದುದಲ್ಲ. ಜ್ಞಾನಿಗಳಾದ ಶ್ರೀ ವಿಜಯದಾಸಾರ್ಯರೆ ಮುಂದಿನ ೧೧ನೇ ತಾಳದಲ್ಲಿ ಅವರೋಹಣ ಆರೋಹಣ ಕ್ರಮವೆಂದು ಪೇಳಿದ್ದಾರೆ. ಸಂತರು ಆದರದಿಂದ ಆಲಿಸುವದು. **೧೧ನೇ ಮಟ್ಟತಾಳ** ಪುಟ ೩೯ "ಬುದ್ಧಿಯಲ್ಲಿ ಮನಸು ಪೊಗಿಸಿ ಪೊಂದಿಸಿ ಚಿತ್ತ ಶುದ್ಧನಾಗಿ

ನಿಂತು ತತ್ವ ವಿಚಾರಿಸಿ । ಬದ್ಧವಾದ ಪ್ರಕೃತಿ ಹಾರಿ ಪೋಗುವಂತೆ। ಸಿದ್ಧಾಂತವ ತಿಳಿದು ಭಕುತಿ ವೈರಾಗ್ಯದಲಿ ಮಧ್ವಮತವ ಪೊಂದಿ ಮುದದಿಂದಲಿ ಧ್ಯಾನ। **ಪದ್ಧತಿ ತಪ್ಪದಲೆ ಪಾವನ್ನ ನೀ ಸಾಗೊ।** ಸಿದ್ಧಿಸುವದು ನಿನಗೆ ಈ ಪರಿ **ಆರೋಹಣ । ಇದ್ದದೆ ಚನ್ನಾಗಿ** ಉಪಕ್ರಮಿಸಿ ಮಾಡು ಸದ್ಭಾವದಿಂದ ಉಪಸಂಹಾರಣೆಯನು । ನಿರ್ಧಾರಗೈಸಿ ಪೋಗಿದ್ದ ನಿತ್ಯ । ಬುದ್ಧಿಯ ಮಧ್ಯ ದಲ್ಲಿ ಧ್ಯಾನರೂಪವಲಿಟ್ಟು । ನಿರ್ದ್ವಂಪನಾಹರ್ **ಇದೆ ಲಯಚಿಂತನೆಯೋ। ಇದೇ ಅವರೋಹಣವೊ । ಪದ್ಮವಲ್ಲಭ ನಮ್ಮ ವಿಜಯವಿಠ್ಠಲನಂಘ್ರಿ** ಪದ್ಮಕಾಂಬುವುದಕ್ಕೆ ಇವೆ ಉಪಾಯಗಳು ॥೧೧॥

ಮುಂದೆ ೧೨-೧೩-೧೪-೧೫ ತಾಳದಲ್ಲಿ ಕೆಲವು ಧ್ಯಾನೋಪಾಯಗಳನ್ನೂ ಪೇಳುತ್ತಾ ಮುಂದೆ ಜತೆಯಲ್ಲಿ **ಆರೋಹಣ**–ಅವರೋಹಣದಿಂದ ಹರಿಯ ಧ್ಯಾನಿಸಿ । ದಾರ್ಢ್ಯವಾಹದು ವಿಜಯ ವಿಜಯ ವಿಠ್ಠಲ ಪೊಳೆವಾ ॥ ೧೬ ॥ **ಎಂದು ಆಜ್ಞಾ ಕೊಡಿಸಿದ್ದಾರೆ.**

ಇದೇ ಅವರೋಹಣ ಆರೋಹಣ ತಾರತಮ್ಯಸಂಧಿಗಳ ಮುಖ್ಯವಾದ ಸಾರ. ಅಮುಕ್ತ, ಮುಕ್ತಾವಸ್ಥೆಯಲ್ಲಿ ನಿಜವಾದದು. ಇದೇ ತಾರತಮ್ಯ. ಮುಂದೆ ಶ್ರೀ ವಿಜಯದಾಸಾರ್ಯರು ಅಧಿಕಾರಭೇದ, ವಿವಕ್ಷಾ—ಅನೇಕ ಸೂಕ್ಷ್ಮವಾದ ಧ್ಯಾನೋಪಾಸನೆ ವಿವರಿಸುತ್ತ, ಹೀಗೆ ಧ್ಯಾನೋಪಾಸನೆ ಮಾಡಲು " **ಸಂಚಿತಾಗಾಮಿನಾಶ ಪ್ರಾರಬ್ಧ ಉಪಮರ್ದ** । ಪಂಚಪ್ರಾಣೇಶ ಶ್ರೀ ವಿಜಯವಿಠ್ಠಲ ಸಮ್ಮುಗ ॥೬॥ ನೆಂದು ಉಪಾಸನಾ ಸು. ಪುಟ ೮೮ರಲ್ಲಿ ಪೇಳಿದಂತೆ ಜ್ಞಾನಿಗಳಾದ ಶ್ರೀ ಜಗನ್ನಾಥದಾಸಾರ್ಯರು ಇಲ್ಲಿ ಪ್ರಸಂಗಾನುಸರಿಸಿ, **೨೧ ನೇ ಸಂಧಿಯಲ್ಲಿ ಶ್ರೀಹರಿಯು ಸಂಚಿತಾಗಾಮಿ ಕರ್ಮವಿಮೋಚನ ಹೇಗೆ ಮಾಡುವನು ?** ಎಂಬ ವಿಷಯವನ್ನು ವಿಸ್ತರಿಸಿ **೨೨ನೇ ಸಂಧಿಯಲ್ಲಿ** ಅಪರೋಕ್ಷಾನಂತರ ಪ್ರಾರಬ್ಧ ಉಪಭೋಗ ಕಾಲದಲ್ಲಿ ತನ್ನ ಭಕ್ತರು, ಕಿಂಚಿತ್ ಅಪರಾಧ ಮಾಡಿದರೂ ಅದನ್ನು ಲಕ್ಷಿಸನು. ಭಕ್ತಾಪರಾಧಸಹಿಷ್ಣುಯೆಂದು. "ಭಕ್ತಾಪರಾಧಸಹಿಷ್ಣುಸಂಧಿ **ಯನ್ನು ಹೇಳಿದ್ದಾರೆ.** ಇದು ಬಹು ರಹಸ್ಯವಾದುದು.

**ಮುಂದೆ** ಬೃಹದ್ಭಾಷ್ಯಾನುಸರಿಸಿ **೨೩ ನೇ ಸಂಧಿ** ಬೃಹತ್ತಾರತಮ್ಯ **ಸಂಧಿಯನ್ನು** ಏಕೆ ಉಪಕ್ರಮಿಸಿದರೆಂದರೆ, ಮೇಲೆ ವಿವರಿಸಿದಂತೆ ಹಿಂದೆ ೧೯ನೆ

ಸು. ೧೦ ತಾಳದಲ್ಲಿ "ಸತ್ವಜೀವಿಗಳು ಬೊಮ್ಮಾದಿಸರ್ವರೇ | ಪಾತ್ರಗಳಲ್ಲಿ **ತಮ ತಮ ಸ್ಥಾನದಲ್ಲಿ** | ಕರ್ತರಾಗಿಪ್ಪರು ತಮಗಿಂದ ನೀಚರಿಗೆ | ಉತ್ತಮ ಮತಿಯಲ್ಲಿ ಉಪದೇಶ ಮಾಡುತ್ತ ವೃತ್ತಿರೂಪದಲ್ಲಿ - ಅಂತಿ ಅಂತರ ಧರಿಸಿ ಅತ್ಯಂತ ಹರುಷದಲಿ ಬಾಳುತಲಿಪ್ಪರು ಎಂದು ಹೇಳಿದಂತೆ ಭೂಃ, ಭುವಃ, ಸ್ವರ್ಗಾದಿ ಸಪ್ತ ಲೋಕಗಳಲ್ಲಿ ನಿಯಮ್ಯ ನಿಯಾಮಕರಾಗಿಪ್ಪ ದೇವತೆಗಳ ಅಂಶಾದಿಗಳು ಪ್ರತ್ಯೇಕವಾಗಿಪ್ಪವು ಈ ದೇವತೆಗಳ ಅಂಶಿ-ಮೂಲದಲ್ಲಿ, ಅಂಶ-ಅವತಾರಾದಿಗಳಲ್ಲಿ ಇರುವ ಭೇದ-ಅಭೇದ ಅಲ್ಲಿ ಹರಿಯು ಅವರ ಯೋಗ್ಯತೆ ಯಂತೆ ವಿಹಾರ ಮಾಡುವ ಕ್ರಮ, ಧ್ಯಾನೋಪಾಸನೆಯು ಮುಖ್ಯವೆಂದು ತಿಳಿಸಲು ಮುಂದೆ ೨೩ ನೆಯ ಸುಳಾದಿ "ಧಾರಣ ಧ್ಯಾನಯೋಗ ಮಾಡು ಮನವೆ" ಎಂಬ ಸುಳಾದಿ-ಧ್ರುವತಾಳದಲ್ಲಿ-ಧಾರಣ ಧ್ಯಾನಯೋಗ ಮಾಡು ಮನವೆ ಅಸಾ | ಧಾರಣ ಹರಿಯ ಮಹಿಮೆ ಪೂರ್ಣ ತಿಳಿದು | **ತಾರತಮ್ಯಾನುಸಾರ ತಾತ್ವಿಕ ಜನರ ವಿಸ್ತಾರವಾದ ರೂಪಾಂತರವ ಗ್ರಹಿಸಿ | ಆರೇಳೆಂದು ಭುವನ ಅಲ್ಲೆಲ್ಲಿ ಇದ್ದ (ವಾಸ) |ವಿರಾಟ ವೈಕುಂಠನಗರ| ವಾರಿಜಜಾಂಡ ಖರ್ಪರ ಸಮಸ್ತಾವರಣ** | ಸಾರಾಸಾರವನ್ನು ನೋಡು ಅಧಿಕವಾಗಿ | ಮೂರುಗುಣದಿಂದ ಆಗುವ ಕಾರ್ಯ ತಿಳಿದು | ಸಾರಿಸಾರಿಗೆ ಹಿಗ್ಗಿ ಕೊಂಡಾಡುತ್ತ | ನಾರಾಯಣನೆ ಮುಖ್ಯ ಸಮಸ್ತರೊಡನೆ ಮಹಾ | ಧೀರನೆ ಅಪ್ರಮೇಯ ನಿತ್ಯಸುಲಭ | ಆರಾಧನೆ ಮಾಡುವುದು ಹೃತ್ಪ್ರದೇಶ ರಲ್ಲಿ ನಿಲಿಸಿ | ಬೇರೆ ಬೇರೆ ಬುದ್ಧಿಯಿಂದ ತಿಳಿದು | **ಮೀರಿ ಇಲ್ಲದೆ ದೇವತೆ ಗಳ ಅಂಶ ಅವ | ತಾರ ಯೋಚಿಸಿ ಇವರ ಪ್ರಸಾದವ | ಮೂರು ಬಗೆ ಯಿಂದ ಸಂಪಾದಿಸಿ ಲಕುಮಿ | ನಾರಾಯಣನನ್ನು ಧ್ಯಾನಗೈದು ಮುಕ್ತಿ** | ಸೂರೆಗೊಂಡು ಸುಖಿಸೋದು ಅಲ್ಲಿಗಲ್ಲಿ | ಕಾರಣರೂಪಗಳು ಮಾನಿಗಳೇ ಸರ್ವ|ಕಾರಣವಾಗಿಪ್ಪರೆಂದು ಚಿಂತಿಸಿ ನಿತ್ಯ |ವಾರವಾರಕ್ಕೆ ಪ್ರಾಣ ನಿರೋಧ ಮಾಡಿ ಧ್ಯಾನ | ಧಾರಣದಿಂದಲಿ ಮನ ನಿಲಿಸು | ಕಾರಣ ಕಾರ್ಯ ರೂಪ ಒಂದೊಂದು ನೆನೆದು ಉಪಸಂಹಾರದಿಂದಲಿ ಸರ್ವಮಿಳಿತ **ಗೈಯ್ಯೋ** | ಚಾರು ಚರಿತ್ರ ನಮ್ಮ ವಿಜಯ ವಿಠ್ಠಲನಂಘ್ರಿ ವಾರಿಜವ ವನ್ನು ಭಕ್ತಿಯಿಂದಲಿ ನೋಡು ||೧||

ಮುಂದೆ ತಾಳ ೨, ೩, ೪, ೫ರಲ್ಲಿ ದೇವತೆಗಳ ವಿಸ್ತಾರವನ್ನು ಹೇಳುತ್ತ ಮುಂದೆ ಅಟ್ಟತಾಳ ಪುಟ ೭೧ರಲ್ಲಿಯೂ "ದೇವತೆಗಳು ಸಿದ್ಧಸಾಧ್ಯರು ಇಪ್ಪತ್ತು ನಾಲ್ಕು ಕೋಟಿ ಋಷಿಗಳು ನೂರು ಕೋಟಿ ಅಂತು ನೂರಾ ಮುವತ್ತು ಮೂರು ಕೋಟಿ । ವಿಶಿತವಾಯಿತು ಕೇಳಿ ಮಹತ್ಮರ ಲೀಲೆ । ಕೆಲ ಕಾಲ ವುಂಟು ಇವರಿಗೆ ಹರಿಕೃಪೆ । ಕಳಾಕಾಷ್ಠ ಮೊದಲಾದ ಕಾಲ ದೇಶ ಕರ್ಮಾ। ವಳಿ **ಗುಣ** । ಭೂತ ಪಂಚಕ ದಶೇಂದ್ರಿಯ । **ಬಲು ವೈರಾಗ್ಯ ಭಕುತಿ ಸಾಧನ ನಾನಾ**। ಕುಲ ಯಾಗ ಯೋಗ ಭೋಗ ಭೋಜನಾಜನ। ಶಿಲಿ ನದಿ ಪರ್ವತ ಸಪ್ತ ದ್ವೀಪಾಂಬುಧಿ। ಸ್ತ್ರೋಳಿವ ಪಾತಾಳಾದಿ ಚತುರ್ದಶ ಭುವನ । ಆಶಾ ರೂಪ........ಜಲಜ ಭವಾಂಡ ವಿರಾಡ್ರೂಪ ಖೇಚರ । ವಲಯಾಕಾರ ಸಪ್ತ ಪ್ರಾಕಾರ ತತ್ವವು । ಫಲ ಪರಮಾಣು ಲಿಂಗದೇಹದಲಿ ಇದ್ದ । ಕಳೆ ಸಹಿತವಾಗಿ ಸರ್ವದಾ ಸಮಸ್ತ । ಸ್ಥಳದಲ್ಲಿ ಪೊಂದಿದ ಅಭಿಮತದಿ ದಿವಿಜರ ಬಳಿವಿಡಿದು ಅವತಾರಾವೇಶಗಳವು ಚಿಂತಿಸಿ ಓರ್ಪೋರ್ವರ ಪ್ರತಾಪ । ವೊಲುಮೆಯಿಂದಲಿ ತುತಿಸುತ ಹಿಗ್ಗುತಲಿ । ಚಂಚಲತನವನೆ ಬಿಟ್ಟು ಸರ್ವ ಏಕೀ ಭೂತ ತಿಳಿದು ಆಮೇಲೆ ಉತ್ತಮರ ಆಧೀನ ಚಿಂತೆ ನಲಿಸಲಿದು ಮಾಡು"। ಬೃಹದ್ಭಾಷ್ಯದಂತೆ ಶ್ರೀಮದಾಚಾರ್ಯರ ವಚನದಂತೆ ದೇವತೆಗಳ ಅಂಶ ಅವತಾರಾವೇಶ ೨೩ನೇ ಬೃಹತ್ತಾರತಮ್ಯ ಸಂಧಿಯನ್ನು ಹೇಳಿರುವುದು ಬಹು ಸಾರ್ಥಕ್ಯ.

ಮುಂದೆ ಹೇಳಿ ವಿವರಿಸಿದಂತೆ ಇವರ **ಬಲು ವೈರಾಗ್ಯ ಭಕುತಿ ಸಾಧನ ನಾನಾ** ಚಿಂತನೆ ಮಾಡೆಂದು ಆಜ್ಞಾಪಿಸಿದಂತೆ **೨೪ನೇ ಸಾಧನಕಲ್ಪ ಸಂಧಿಯಲ್ಲಿ** ವಿವರಿಸಿದ್ದು ಬಹು ಅರ್ಥಗರ್ಭಿತವೂ ಸಾರ್ಥಕವೂ ಆಗಿರು ವುದು. ಸುಜ್ಞಾನಿಗಳ ಅಂತರಂಗವನ್ನು ಅವರ ನಿಜಭಕ್ತರಾದ ಜ್ಞಾನಿಗಳೇ ಬಲ್ಲರು. ಜ್ಞಾನಿಗಳ ಪದಕಂಜರೇಣುಸೇವಿಸದವರಾ ಈ ಮರ್ಮವನ್ನು ತಿಳಿಯುವುದು ಬಹು ಕಷ್ಟ. ತಿಳಿದರೂ ಸಮನ್ವಯಿಸಿ ಆಚರಿಸುವಂತೂ ಅತಿ ದೂರ. ದಾಸರೇ ಅನುಗ್ರಹಿಸಿ ಸಾಧಕರಾದ ಭಕ್ತರಿಗೆ ಜ್ಞಾನದಾಯಕರು. ಅವರು ತಿಳಿಸಿದಷ್ಟು ತಿಳಿದು ಬರೆಸಿದಷ್ಟು ಬರೆದುದು. ಸಂಧಿಗಳ ಕ್ರಮ— ಸಂಬಂಧ ವಿಷಯವೂ ಬಹು ಹೊಸ ಪರಿಯು. ಇದನ್ನು ಅರಿಯದ ಜನರು ಹಾಸ್ಯ ನಿಂದಾ ಮಾಡಿದರೂ ಹರಿ ಪ್ರೀತಿ. ಅವರವರಿಗೆ ಆಗುವ ಸಾಧನ.

ತ್ರಿವಿಧರಿಗೆ ತ್ರಿವಿಧಗತಿಯೆಂದು ಶಾಸ್ತ್ರಸಮ್ಮತವಾದದ್ದು. ವಿವೇಚನವೇತಕ್ಕೆ? ಸುಜ್ಞಾನಿಗಳ ವಚನಗಳಲ್ಲಿ ಸದ್ಭಕ್ತರು ಸಮ್ಮತಿಯಿಂದ ತಿಳಿದು ಆನಂದಪಟ್ಟು ಆಶೀರ್ವದಿಸಿರೆಂದು ಬಿನ್ನಹ.

**ಮುಂದೆ ೨೫ನೇ ಕ್ರೀಡಾವಿಲಾಸ ಸಂಧಿಯಲ್ಲಿ** ಇಂತು ಅವತಾರಾವೇಶ ಅವರವರ ಸಾಧನ ಬಗೆ ಅರಿತು ಧ್ಯಾನೋಪಾಸನೆಗೈವ ಜೀವನ್ಮುಕ್ತದಶೆಯಲ್ಲಿ ಮುಕ್ತ ದಶೆಯಂತೆ ಸರ್ವ ಕ್ರಿಯಾದಿಗಳು ಶ್ರೀಹರಿಯ ಅಧೀನವೆಂಬುದು ದೃಢವಾಗಿ ಮನದಲ್ಲಿ ನಿಂದು ಶ್ರೀಹರಿಯೇ ಸರ್ವಸ್ವತಂತ್ರ ಸಕಲವೂ ಶ್ರೀಹರಿಯ **ಕ್ರೀಡಾ ವಿಲಾಸ** "ಹರಿಯಿಂದ ಕೇಳ್ವರು. ಹರಿಯಿಂದ ನೋಡ್ವರು. ಹರಿಯಿಂದ ನಡೆವರು ಎಂಬ ದೃಢ ಜ್ಞಾನದಿಂದ ಶ್ರೀಹರಿಯ ಮಹಿಮೆ ಸ್ತೋತ್ರವನ್ನು ಮಾಡುತ್ತ ಸದಾ ಆನಂದಚಿತ್ತರಾಗುವರು. ಸಕಲವೂ ಬಿಂಬಗೆ ಅರ್ಪಿಸುತ್ತ ಬಿಂಬಾಧೀನ ಚಿಂತನೆ. ಈ ಮುಕ್ತರ ಕ್ರೀಡೆಯೇ ಕ್ರೀಡಾ ವಿಲಾಸ ಸಂಧಿ.

## ೨೬ನೇ ಅವರೋಹಣ ಸಂಧಿ

ಇಂತಹ ಮುಕ್ತದಶಾ ಪರಮಾನಂದವನ್ನು ಹದಿನಾರು ಪೂಜೆಯಿಂದ ಹರಿಗರ್ಪಿಸುತ್ತ ಮುಂದೆ ಉಪಸಂಹಾರ ಕ್ರಮದಿಂದ ಅಂದರೆ ಹರಿಯಿಂದಾರಂಭಿಸಿ ಅವರೋಹಕ್ರಮದಿಂದ ಬರುತ್ತಾ "ಶ್ವೇತದ್ವೀಪಗತೋ ಧ್ಯಾತ್ವಾ ಜೀವಹೃನ್ಮಧ್ಯಸಂಸ್ಥಿತಃ । ತಯೋರೈಕ್ಯಂ ವಿಜಾನೀಯಾತ್ ಜೀವಹೃನ್ಮಧ್ಯಗಸ್ಯ ಚ ॥" ಎಂಬುವಂತೆ ಸಪ್ತಾವರಣ ಬ್ರಹ್ಮಾಂಡ ಬರ್ಹಿರ ವೈಕುಂಠ ಸತ್ಯಲೋಕಾದಿ ಸ್ವರ್ಗಪರಿಯಂತರ ಅಲ್ಲಲ್ಲಿದ್ದ ದೇವತೆಗಳ ಅಂತರೂಪಗಳಿಗೆ ಭಗವಂತನ ರೂಪಕ್ಕೆ ಶ್ವೇತದ್ವೀಪಗತನಾದ ಭಗವಂತನ ರೂಪಕ್ಕೆ ಐಕ್ಯ ಚಿಂತಿಸಲು ಪೇಳಿಸಿದ ಪಾವಟಿಗೆ ಇಳಿಯೋ ಕ್ರಮದಂತೆ ದೇವರಿಂದ ಆರಂಭಿಸಿ ಮಾನುಷೋತ್ತಮರವರೆಗೆ ಪುನಃ ಅವರೋಹಣ ಸಂಧಿ ೨೬ನೇ ಸಂಧಿ ಪೇಳಿದ್ದು ಬಹು ಸಾರ್ಥಕ್ಯ. ಮುಂದೆ ವಾಯು, ಸೂರ್ಯ ಮಂಡಲದಲ್ಲಿ ಪರಮ ಗುರುವಿನ ಮೂರ್ತಿಯಲ್ಲಿ ಎಲ್ಲ ಅಂಶಗಳನ್ನು ಏಕೀಭೂತ ಮಾಡುವುದೆಂದು ಸುಳಾದಿ ೧೨ ಅಟ್ಟತಾಳ ಪುಟ ೧೩ರಲ್ಲಿ "**ಪರಮ ಗುರುವಿನ ಮೂರುತಿಯನ್ನು ಸ್ಮರಿಸಿ** । ಇರದೆ ವಿಗ್ರಹಗಳಾವ್ಹಾನಿಸಿ । ಶುದ್ಧಿ ತೆರೆ

ಯಂತೆ ಐಕ್ಯವ ಚಿಂತಿಸಿ|ಕರೆದು ತನ್ನಯ **ಗುರುವಿನ ಮೂರುತಿಯೊಳು** |
ಪರಮಗುರುವಿನ ಮೂರುತಿಯನ್ನು ಪೊಗಿಸಿ | ಪರಮಹಂಸಪದಲಿಂದ ಹಾರಿ
ಹಿಗ್ಗುತಲಿನ್ನು ಮರಿಯಾದೆ ನಿನ್ನಯ ವರ ಮೂರ್ತಿಯೊಳು ಪರಿಚಿಂತಿಸು
ಆ ಮೂರುತಿಯ ರೂಪ | ಪರಮಪುರುಷ ಹರಿ ವಿಜಯ ವಿಠಲನ್ನ ತ್ರಿ|ಕರಣ
ವೊಂದಾಗಿ ಬಿಂಬ ಮೂರುತಿಯ ಮಾಡೊ ॥ ಎಂದು ಪೇಳುತ್ತಾ ಮತ್ತೂ
ಮುಂದೆ ಸುಳಾದಿ ೧೩ ತ್ರಿವಿಡಿ ತಾಳದಲ್ಲಿ " ಸಿರಿದೇವಿ ರಮಣ ಭಕ್ತರ ಶರಣ|
ಶರನಿಧಿ ಶಯನ ಶ್ರುತಿ ಶಿರೋ ರನ್ನ | ಮೊರೆ ಪೊಕ್ಕೆನೋ ಜೀಯ ಮರುತನ
ಅಯ್ಯಾ | ಅರಿಪವರಿಗೆ ಹೊಣೆಯೆ ಸದಾ ಚಿಂತಾಮಣಿಯೇ | ಸ್ಮರಿಸಿವೆ
ಬಹು ಮೂರ್ತಿ ಒಂದು ಮಟ್ಟಕೆ ನಿಲಿಸಿ | **ಪರಮ ಗುರುವಿನ ಮೂರ್ತಿ
ವೊಳಗೆ ತಂದು | ಇರಿಸುಪೆಸಲ್ಲಿಂದ ಸ್ವಗುರು ಮೂರುತಿಯೊಳಗಿಟ್ಟು
ಭರದಿಂದ ಪ್ರಾಜ್ಞನೇ ನಿನ್ನಲ್ಲಿ ಚಿಂತಸುವೆ** ಸರಿ ಪೇಳು ಇಲ್ಲಿಗೆ ಮುಂದಿ
ನಾಲೋಚನೆ | ಅರವಿಂದಾಕ್ಷನಾಮ ವಿಜಯ ವಿಠಲ ನೀನೇ ॥ ೫ ॥

**೨೭ನೆಯ ಅನುಕ್ರಮಣಿಕಾ ಸಂಧಿ**ಯಲ್ಲಿ ಇಂತು ವಿವರಗೈಸುವ ಬಗೆ ತಿಳಿದ ಮಹಾತ್ಮರಾದ ದಾಸವರ್ಯರು ಆಶ್ವೇತಗತ ಮೂರ್ತಿಯೇ ವಾಯು ಸೂರ್ಯ ಮಂಡಲಸ್ಥ, ಸೂರ್ಯಾಂತರ್ಗತ ವಾಯ್ವಂತಸ್ಥ ನಾರಾಯಣ ಮೂರ್ತಿಯಲ್ಲಿ ಮೇಲಿನ ಅವರೋಹಣ ಕ್ರಮದಿಂದ ಆವ್ಹಾನಿಸಿದ ಮೂರ್ತಿಗಳನೆಲ್ಲ ಏಕೀಭಾವ ಚಿಂತಿಸಲು, ಇಪ್ಪತ್ತೇಳನೇ ಅನುಕ್ರಮಣಿಕಾ ತಾರತಮ್ಯ ಸಂಧಿಯನ್ನು ರಚಿಸಿ, **"ಶ್ರೀಮದಾಚಾರ್ಯರ** ಮತಾನುಯಾಯಿಗಳಾರಂಭಿಸಿ ಶ್ರೀಲಕ್ಷ್ಮೀನಾರಾಯಣರ ಪರಿಯಂತ ಒಂದೇ ಪದ್ಯದಲ್ಲಿ ಹೇಳಿ ಮುಂದೆ ೪ ಪದ್ಯಗಳಿಂದ ವಾಯ್ವಂತರ್ಯಾಮಿ ಶ್ರೀಹರಿ ಗುಣಸ್ತೋತ್ರಗೈದು ಸೂರ್ಯಾಂತಸ್ಥ ವಾಯ್ವಂತರ್ಯಾಮಿ ಆನಂದತೀರ್ಥರ ಬಿಂಬವನ್ನು ನಿಯತಸ್ವಗುರುಗಳಾದ ಗಣೇಶಾಂಶರಾದ ಶ್ರೀ ಗೋಪಾಲದಾಸರ ಬಿಂಬನಲ್ಲಿ ಐಕ್ಯ ಚಿಂತಿಸಲು ಸ್ವಗುರುಮೂರ್ತಿಯಲ್ಲಿ ಸಕಲ ರೂಪ ಏಕೀಭಾವ ಚಿಂತಿಸಲು, ಈ ಗಣೇಶನ ಸಂಧಿಯನ್ನು ಉಪಕ್ರಮಿಸಿರುವರು. (ಹಲವರು ತಿಳಿಯುವೇ ಗ್ರಂಥಕ್ಕೆ ವಿಘ್ನ ಬರಲು ಗಣೇಶನ ಸ್ತೋತ್ರವನ್ನು ಮಾಡಿದ್ದಾರೆಂದು ಬರೆದಿರುವರು. ಗ್ರಂಥಾರಂಭಕ್ಕೆ ಸಕಲ ವರ್ಣಾಭಿಮಾನಿಗಳೇ "ನಾ ಮುಂಚೆ ನೀ ಮುಂಚೆ" ಎಂದು ಬರುತ್ತಿರಲಾಗಿ ಗ್ರಂಥಕ್ಕೆ ವಿಘ್ನವೆಲ್ಲಿಂದ ಬಂದಿತು.

ಸ್ವಲ್ಪ ವಿಚಾರಿಸಿರಿ) ಅಲ್ಲದೆ ಈ ೧೯ನೇ ಸಂಧಿಯಲ್ಲಿಯೇ ಗಣಪ ಧನಪ ವಿಷ್ವಕ್ ಸೇನ ಮೊದಲಾದವರ ಸ್ತೋತ್ರ ಮಾಡಿದ್ದಾರೆ.

ಶ್ರೀ ವಿಜಯದಾಸರು ಭಗವದುಪಾಸನೆಕ್ರಮ ಹೇಳಿ ಸೂಚಿಸಿರುವ ಆಜ್ಞೆ, ಶ್ರೀ ಗೋಪಾಲದಾಸಾರ್ಯರ ವಚನದಂತೆ ತಮ್ಮ ನಿಯತ ಗುರುಗಳೂ, ಗಣೇಶಾಂಶರೂ, ತಮಗಿಂತಲೂ ೧೦೦ ಗುಣ ಅಧಿಕರೂ, ಆದುದರಿಂದ **"ನಮೋ ನಮೋ ಗುರುವರ್ಯ"** ಎಂದು ಗಣೇಶ ಸಂಧಿಯಲ್ಲಿ ಸ್ತೋತ್ರ ಮಾಡಿದ್ದಾರೆ. ಇದಲ್ಲದೆ ಮಾನಸಸ್ಮೃತಿಯ ಆಧಾರವೂ ಉಂಟು.

ಹೀಗೆ ಸ್ವಗುರುಮೂರುತಿಯಲ್ಲಿ ಏಕೀ ಭಾವ ಚಿಂತಿಸುತ್ತಾ ಮುಂದೆ ತನ್ನ ಹೃದಯಾಷ್ಟದಳಬಿಂಬನಲ್ಲಿ ಐಕ್ಯಚಿಂತಿಸಬೇಕೆಂದು

## ೨೯ನೇ ಸಂಧಿಯು

ಸುಳಾದಿ ೧೩ ಅಟ್ಟತಾಳದಲ್ಲಿ ಇರುವಂತೆ ವರಮೂರ್ತಿಯೊಳಗೆ ನಿನ್ನ ಚಿಂತನೆ ಪತಿ | ಕರಿಸುವೆನೆಂದಲ್ಲಿ ಪುಷ್ಪಸಂಕಾಶಾಂಬರ | ಧರನೆ ಮೇಣು ಅಂತರಂಗದೊಳು ತರುವಾಯ ವರಣ | **ಸರಸಿಜದಳವಷ್ಟಕರ್ಣಿಕೆ ಪೀಠದ ಮೇಲೆ ಶೋಭಿತನಾಗಿ** | ಹರಿಪಾಲಕರು ಪರಿವಾರ ಸುತ್ತಲು ಕರಗಳು ಮುಗಿದು ಪರಾಕು ಪೇಳುತಿರೆ | ದೊರೆಯಾಗಿ ಸ್ವಮೂರ್ತಿ ಗಣಮಧ್ಯದಲ್ಲಿ | ಮಿರಗುವ ಪ್ರಕಾಶ ವಿಜಯ ವಿಠಲ ದೇವರ ದೇವ ಸಂಜೀವ ಅಘವನ ದಾವಾ ||೬|| "ಹೃತ್ಕಮಲದಲ್ಲಿಪ್ಪ ಹರಿಯು ನಿರ್ದುಷ್ಟವಾದಂಥ ಮನಸ್ಸಿನಿಂದ ಲೌಕಿಕಅಲೌಕಿಕವಾದಂಥ ಮಹಾರಾಜೋಪಚಾರಗಳಿಂದ ಭಕ್ತಿಯಿಂದ ಅನನ್ಯ ಮನಸ್ಕನಾಗದೇ ಪೂಜಿಸಬೇಕು. ಇದರಂತೆ ಬಹಿರದಲ್ಲಾದರೂ ಅರ್ಚಿಸಬೇಕು. ಪ್ರಣವಕಲ್ಪದಲ್ಲಿ ಹೇಳಿದೆ. ಎಂದು ಮಾನಸಸ್ಮೃತಿ ಉಪಾಸನಾ ಸು|| ಪುಟ ೨೬೫. ಈ ಮರ್ಮವನ್ನರಿತ ಮರ್ಮಜ್ಞರಾದ ದಾಸಾರ್ಯರು ಇಂತಹ ಸ್ವಗುರುಗತನಾದ ಬಿಂಬನನ್ನು ತನ್ನ ಸ್ಥೂಲ ಹೃತ್ಕಮಲ ಮಧ್ಯಗತನಾದ ಸ್ವಬಿಂಬನಲ್ಲಿ ಐಕ್ಯ ಚಿಂತನ ಮಾಡಿ ಶ್ರೀವಿಷ್ಣುಸರ್ವೋತ್ತಮನಾರಂಭಿಸಿ ಕಲಿವರ ಪಾಲಿಪ ಸಮಸ್ತ ದೇವತೆಗಳ ಅಂಶದಲ್ಲಿ ಪ್ರೋಗಿಸಿ **ಅಣುತಾರತಮ್ಯವನ್ನರಿತು ಶ್ರೀ ಹರಿಯನ್ನು ಷೋಡಶೋಪಚಾರ ಪೂಜೆಯಿಂದ ಪೂಜಿಸಬೇಕೆಂದು ೨೯ನೇ ಅಣುತಾರತಮ್ಯ ಸಂಧಿಯನ್ನು ಹೇಳಿರುವರು.** ಮತ್ತು ಸಂಕ್ಷೇಪದಿಂದ ಸ್ಥೂಲದೇಹದಲ್ಲಿಪ್ಪ ಪಾದನ್ಯಸ್ತ್ರೀಕರಾದ

ಕಲಿ ಮೊದಲಾದ ದಾನವ ದೈತ್ಯರ ಸಂಕ್ಷಿಪ್ತ ತಾರತಮ್ಯ ತಿಳಿದು ಈ ದೈತ್ಯರಿಗೆಲ್ಲ ನಿಯಾಮಕ ಪ್ರೇರಕರು, ತತ್ಪ್ರೇರರು ವಾಯುಹರಿಗಳೆಂದು ಅಣುತಾರತಮ್ಯದಲ್ಲಿ ಹೇಳಿದ್ದನ್ನು ತಿಳಿಯಬೇಕೇ ಹೊರ್ತು ನೀಚಾಧಿಷ್ಠಾನದಲ್ಲಿ ಹರಿಯ ಚಿಂತಿಸಬಾರದು.

## ಮುಂದೆ ೩೦ನೇ ಸಂಧಿಯಲ್ಲಿ

ಹೇಗೆ ದೇವತೆಗಳು ತತ್ವಾಭಿಮಾನಿಗಳಾಗಿ ಸ್ಥೂಲಾಂಗದಲ್ಲಿ ಇರುವರೋ, ಹೊಲ್ಲೆ ಕಾರ್ಯಕ್ಕೆ ಅಭಿಮಾನಿಗಳಾದ ದೈತ್ಯರೂ ಇದ್ದು ಅವರು ತಮ್ಮ ತಮ್ಮ ಕುತತ್ವದಲ್ಲಿ ಉಚ್ಚನೀಚಭಾವದಿಂದಿದ್ದು ಕುಕರ್ಮ ಮಾಡಿಸುತ್ತಾರೆ. ಅಲ್ಲದೆ ಅಂತರ ಬ್ರಹ್ಮಾಂಡದಲ್ಲಿಪ್ಪ ಸಕಲ ವಸ್ತುಗಳಲ್ಲಿ ವ್ಯಾಪ್ತರಾಗಿದ್ದಾರೆ. ತಮ್ಮ ಅಧಿಕಾರದಂತೆ ಸಾಂಶ ದೈತ್ಯರು ಕೆಲಸ ಮಾಡುತ್ತಾರೆ. ಈ ಎರಡು ವಿವಕ್ಷೆಯಿಂದಲೂ, ಆ ದೈತ್ಯಾದಿಗಳ ಸ್ವಭಾವ-ಸ್ವರೂಪ ಅವರ ಕಾರ್ಯ ತಿಳಿದು, ಅವರ ವ್ಯಾಪಾರಗಳು ಹರಿಯಾಧೀನವೆಂದು ಚಿಂತಿಸಿದರೆ ಪಾಪ ಲೇಪವಿಲ್ಲ. ಅವರ ಸ್ವಭಾವ ಗುಣತಾರತಮ್ಯ ತಿಳಿಯುವುದು ಅತ್ಯಾವಶ್ಯಕ. ಧ್ಯಾನೋಪಾಸನ ಪದ ೧೦ ಉ. ಭಾಗ ಸು. ಪುಟ ೧೯೦ರಲ್ಲಿ ಶ್ರೀಗೋಪಾಲ ದಾಸಾರ್ಯರು ಪೂಜಿಸು ಪೂರ್ಣಾನಂದನ್ನ ಎಂಬುವ ಪದ ನುಡಿ ೧೧ರಲ್ಲಿ

"ಆಗಮ ಸೂಕ್ತ ಮಂತ್ರದಲಿ । ದೇವತೆಗಳ ಪೂಜಾನಂತರದಿ ದೈತ್ಯ। ಭಾಗ ಬ್ಯಾರೆಂಬ ಜ್ಞಾನದಲಿ । ಸ್ಮೃತಿ ನೀಗದಿರೀ ಸಮಯದಲಿ । ಹಾಹಾ । ಶ್ರೀಗುರು ಮೂಲ ಮುಖ್ಯ ಪ್ರಾಣಾಂತರ್ಗತನ್ನಾಗ ಚಿಂತಿಸಿ **ಅಹಂ ಮಮ ತ್ಯಾಗ ಮಾಡಿ** ಬಿಡದೆ ॥ ೧೧ ॥ ಎಂದು ಅಪ್ಪಣೆ ಕೊಡಿಸಿದ್ದಕ್ಕೆ ಶ್ರೀ ವಿಜಯದಾಸಾರ್ಯರ ತಮೋಯೋಗ್ಯರ ಪ್ರಕರಣ ಸುಳಾದಿಯೇ ಆಧಾರವಾಗಿದೆ. ಇದಕ್ಕೆ ಬ್ರಹ್ಮಕಾಂಡದಲ್ಲಿ ದೈತ್ಯ ಸ್ವಭಾವ ಗುಣತಾರತಮ್ಯ ಹೇಳಿದಂತೆ ಶ್ರೀ ದಾಸರಾಯರು ದೈವೇದ್ಯ ಪ್ರಕ್ರಿಯಾ ಸಂಧಿಯಕಿಂತಲೂ ಮೊದಲಿಗೆ ದೈತ್ಯ ತಾರತಮ್ಯ ಹೇಳಿದ್ದು ಬಹು ಅರ್ಥಗರ್ಭಿತವಾಗಿದೆ. ಇಂತು ಬ್ರಹ್ಮಾಂಡಗತ ಅಹಂಕಾರತತ್ವ ಸ್ಥೂಲ ಶರೀರಾದಿಗಳಲ್ಲಿ ದೈತ್ಯಾದಿಗಳ ವ್ಯಾಪ್ತಿ ತರತಮ ಮುಖ್ಯವಾಗಿ ತಿಳಿದು ಅಹಂಭಾವ ದುಷ್ಟಮತಿ ತ್ಯಾಗ ಮಾಡುವದೆಂದು ಫಲಿತಾರ್ಥ.

ಇಂತಹ ಅಹಂಮತಿ ತ್ಯಾಗಪೂರ್ವಕ ದುಷ್ಟಬಾಧೆ ಪರಿಹರಿಸೆಂದು ಬಿಂಬನ ಪ್ರಾರ್ಥಿಸುವದು.

## ೩೧ನೇ ಸಂಧಿ ನೈವೇದ್ಯ ಪ್ರಕರಣ

ಮುಂದೆ ಬ್ರಹ್ಮಾಂಡದಲ್ಲಿಪ್ಪ ಎಲ್ಲ ಭಗವದ್ರೂಪ ಸ್ವಬಿಂಬನಲ್ಲಿ ಐಕ್ಯ ಚಿಂತಿಸಿ ಧ್ಯಾನದಿಂದ ನಿಲ್ಲಿಸಿ ಷೋಡಶೋಪಚಾರ ಪೂಜಾಮಾಡವುದೆಂದು ಶ್ರೀ ವಿಜಯಾರ್ಯರು "ಸಮರ್ಪಣೆ ಪ್ರಕಾರ ತಿಳಿವದು ಚನ್ನಾಗಿ" ಉಪಾಸನಾ ಸುಳಾದಿ ಳಳ ಪುಟ ೧೪೨-೧೪೩ರಲ್ಲಿ ಧ್ರುವತಾಳದಲ್ಲಿ "ಅಮಲವಾದ ಪೂಜೆ ಹದಿನಾರು ದಿಕ್ಕಿನಿಂದ । ಕ್ರಮ ತಿಳಿದು ಆವ್ಹಾನ ಧ್ಯಾನ ಮಾಡಿ । ಅಮಿತ ಪ್ರತಾಪ ಹರಿ ನಿಸ್ಪೃಹ ನಿತ್ಯ ತೃಪ್ತ । ........... ತಿಮಿರ ಭಾನುಭವಾರ್ಣವ ತಾರಕ ಉತ್ತಮವಾದ ಯೋಗ್ಯರಸ ತತ್ಪದಾರ್ಥದಲಿ । ಸಮತಿಳಿಸಿಕೊಂಡರೆ ಯೋಗವಾಯಾ। ಅಮರರಿಗೆ ಉಣಿಸುವ ತಾನು ಕೈಕೊಂಬುವದು । ಗಮ ಕಾಣೋ ದುಃಖ ದೂರ ಮಹಾಪ್ರಭುವೋ । ಉಮೆಯರಸ ಪರಿಯಂತ ಈ ರಸ ಸಲ್ಲುವದು । ಕಮಲಭವಗೆ ಲಕುಮಿಗೆ ಇಲ್ಲವ್ರೋ । ಸುಮನಸ ಗಣಕೆ ಲೇಪನವಿಲ್ಲ ಅವರ ಆ । ತುಮುದೊಳಗಿದ್ದ ಖಳರಲ್ಲಿ ಐಕ್ಯ । ........ ಮಮತಾ ರಹಿತ ಪರಾಯು ಆರಂಭಿಸಿ । ನಮಿಪ ಜನರು ಇತ್ತ ಭೋಗ್ಯ ವಸ್ತು ಕ್ರಮದಲಿ ಆವ ತತ್ವಾತ್ಮಕ ರಸಂಗಳು। ಸಮಸ್ತ ಜೀವಿಗಳಿಗೆ ಏಕ ಮಾಳ್ಪ ।" ನೆಂದು ಹೇಳುತ್ತಾ ಮಟ್ಟ, ತ್ರಿವಿಡಿ ತಾಳಗಳಲ್ಲಿ ಬಿಂಬನಾದ ಹರಿಗೆ ನೈವೇದ್ಯ ಸಮರ್ಪಣೆ ಮಾಡುವ ವಿಚಾರ ಹೇಳಿದ್ದಾರೆ. ಮತ್ತು ಸುಳಾದಿ ೨೩ ತ್ರಿವಿಡಿ ತಾಳ ಆರಂಭಿಸಿ ಅಟ್ಟತಾಳದ ವರೆಗೆ, ನೈವೇದ್ಯ ಬಗೆ ಹೇಳಿ, ಅಟ್ಟತಾಳದಲ್ಲಿ "ಇಂತು ನೈವೇದ್ಯ ತಾತ್ವಿಕ ಜನರೆಲ್ಲ ನಿ।ರಂತರ ತದಾಕಾರ ತನ್ನಾಮಕರಾಗಿ । ಅಂತರಂಗದಲ್ಲಿ ಜನ್ಯರಾಗುವತ್ಯೆಯ್ಯಾ ಎಂತು ಪೇಳಲಿ ಇವದ ಅಷ್ಟಾಂಗ ಯೋಗ ಚಿಂತಿಸಿದಂತೆ ಕಾಮ ಧರಿಸುವರು। ಇತ್ಯಾದಿ ಪ್ರಮೇಯಗಳನ್ನು ವಿವರಿಸಿದಂತೆ ಬಿಂಬನಾದ ಶ್ರೀಹರಿಗೆ ನೈವೇದ್ಯ ಸಮರ್ಪಣೆ, ಅಂತರಂಗ ಬಹಿರಂಗದಿ ಮಾಡಬೇಕೆಂದು ತಿಳಿಸಲು ೩೧ನೇ ನೈವೇದ್ಯ ಪ್ರಕರಣ ಸಂಧಿಯನ್ನು ಹೇಳಿದ್ದಾರೆ.

## ೩೨ನೇ ಕಕ್ಷಾ ತಾರತಮ್ಯ ಸಂಧಿ

ಶ್ರೀಬಿಂಬನಿಗೆ ನೈವೇದ್ಯ ಸಮರ್ಪಣೆ ಆದನಂತರ ಏನು ಮಾಡುವುದು-ಮಂಗಳಾರುತಿ-ಪುಷ್ಪಾಂಜಲಿ-ಪ್ರದಕ್ಷಿಣ-ನಮಸ್ಕಾರ - **ಪ್ರಾರ್ಥನಾಕ್ರಮವು** ಧ್ಯಾನೋಪಾಸನೆಯಲ್ಲಿ ಹೇಗೆ ಮಾಡಬೇಕೆಂಬುದನ್ನು ಸುಳಾದಿ ೨೨ ಆದಿತಾಳ ಪುಟ ೭೨ರಲ್ಲಿ ಶ್ರೀ ವಿಜಯದಾಸರಾಯರು ಅಪ್ಪಣೆ ಕೊಡಿಸಿದ್ದೇನವಂದರೆ

### ಆದಿತಾಳ

ಎಲ್ಲೆಲ್ಲಿ ತತ್ತ್ವತನು ಧರಿಸಿದ ದೇವಾಂಶಿಗಳು । ಅಲ್ಲಿಗಲ್ಲಿ ಚಿಂತಿಸಿ ಅವರವರ ನಿರ್ದೇಶವನು । ಮೆಲ್ಲಮೆಲ್ಲನೆ ತಿಳಿದು ಲಿಂಗಗಳು ರೂಪ । ಎಲ್ಲ ಉಪಸಂಹಾರದಿಂದ ವಾರಿಜಜಾಂಡ। ಪೆಲ್ಲ ಏಕಾಕಾರ ಮಾಡಿ ಮಾಡುತ್ತ ಬಂದು । **ಸಲ್ಲಲಿತ ದೇಹದಲ್ಲಿದ್ದವರ ಜ್ಞಾನ । ದಲ್ಲಿ ಕೂಡಿಸು ಮಹಾಯೋಗಾಭ್ಯಾಸದಿಂದ** ಬಲ್ಲವನಾಗು ಹೃತ್ಕಮಲ ಪರಿಯಂತ। **ಅಲ್ಲಿದ್ದ ಚೇತನಾವರಣ ತ್ರಿಬಗೆಯಲ್ಲಿ । ಸಲ್ಲಿದವರ ನೋಡು ಕ್ರಮಾನುಸಾರದಿಂದ ।** ನಿಲ್ಲಿಸು ಹದಿನಾರು ಕಳೆಗಳು ವಿಧಾನದಲ್ಲಿ। ಗೆಲ್ಲು ಒಬ್ಬಾರೊಬ್ಬರನ್ನ ಮಾಡಿ, ಮನುಜೋತ್ತಮ ವಿಡಿದು ಮಾ। ವಲ್ಲಭ ಪರಿಯಂತ ಆಧೀನಾಧೀನ ನೆನಮು । ಹೊಲ್ಲೆ ಚಿತ್ತ ಮಾಡದೆ ಹರುಷದಿಂದಲಿ ನಿತ್ಯ । ದಲ್ಲಿ ಈ ಪರಿ ಧ್ಯಾನಿಸು । ಅಂಗಬದ್ಧ ಮಾರ್ಗ । ವಲ್ಲೆನೆಂಬೆನದಿರು ಇದರೊಳಗವರ। **ಸಲ್ಲುವಾಭಿಮಾನಿಗಳು ತದ್ಗತರಾಗಿಹರು । ಎಲ್ಲ ಕರುಣವ ಪಡೆದು ಭಕುತಿಯಿಂದ** । ಇಲ್ಲಿ ನಲಿವ ವಾಯುಪ್ರತೀಕ ಮಧ್ಯದಲ್ಲಿ । ಪುಳ್ಳ ದೇವತೆಗಳನ ಸ್ಥಾನದಲ್ಲಿಟ್ಟು । ತಲ್ಲಣಗೊಳ್ಳದಲೆ ಅಂತರ ಪೂಜೆಯ । ಒಳ್ಳಿತಾಗಿ ರಚಿಸು ಪ್ರಾರ್ಥನೆ ಪೂರ್ವಕ। **ಬಳ್ಳಿಯ ಕುಡಿ ಒಂದೊಂದು ದಿವಸಕ್ಕೆ ಬಿಡದೆ ಪಲ್ಲೈಸಿದಂತೆ ಮನಸು ಸಾಗಿ ಸಾಗಿಸಬೇಕು ।** ಸಲ್ಲದು ಸಲ್ಲದಯ್ಯಾ ಸುಮ್ಮನಿದ್ದಡೆ ಗತಿ। ಇಲ್ಲವೊ ಇಲ್ಲವೋ ಹರಿಗುರುಗಳ ಕೃಪೆ । ಎಳ್ಳಿನಿತಾದರೆ ಇದನೆ ಕೈಕೊಂಡರೆ ಪೊಳ್ಳಾಗದು ಕಾಣೊ ಮಾನವ ಸತ್ಕರ್ಮ।ಕ್ಷುಲ್ಲಕಬುದ್ಧಿ ಬಿಟ್ಟು ಚತುರತನದಿಂದಲಿ । ಬಲ್ಲಿದ ಜನರ ಪೊಲಿಸಿಕೊಂಡು ನಲಿದಾಡು । ಎಲ್ಲಿ ನಿನಗೆ ಇಷ್ಟವಾದ ಸ್ಥಾನದಲ್ಲಿ । ಎಲ್ಲ ಧ್ಯಾನವ ಮಾಡು ಸಾಧಿಸು ಹರಿಪಾದ । ಮಲ್ಲಮರ್ದನ ನಮ್ಮ ವಿಜಯ ವಿಠಲರೇಯ । ಚಿಲ್ಲರ

ಸಂಗತಿ ಬಿಡಿಸಿ ಶುದ್ಧನ ಮಾಳ್ಪ॥೭॥ ಎಂದು ಆಜ್ಞಾ ಕೊಡಿಸಿದಂತೆ ಶ್ರೀಹರಿ ಯಾರಂಭಿಸಿ-ರಮಾಬ್ರಹ್ಮಾದಿ-ಮಾನುಷೋತ್ತಮಾದಿಗಳ ಸ್ತೋತ್ರ ಪ್ರಾರ್ಥನಾ ರೂಪವಾಗಿ, ಕಕ್ಷಾ ತಾರತಮ್ಯ ಸಂಧಿಯಲ್ಲಿ ಹೇಳುತ್ತಾ ಗ್ರಂಥ ಉಪಸಂಹಾರ ಮಾಡಿದ್ದಾರೆ.

ಇದೇ ಮುಖ್ಯವಾಗಿ ನಾನಾ ವಿಧ ತಾರತಮ್ಯ ಸಂಧಿಗಳ-ಸಂಬಂಧ ಧ್ಯಾನೋಪಾಸನೆಗೆ ಅನುಕೂಲವಾಗಿದೆಂಬುದು ಆದ್ಯ ಮಂಗಲಾಚರಣ ಸಂಧಿ ಯಲ್ಲೇ ಬಿಂಬೋಪಾಸನಾ ಕ್ರಮವಿದೆಂದು ಜ್ಞಾನಿಗಳಾದ ಶ್ರೀ ತಾಮ್ರಪರಣೀ ಆಚಾರ್ಯರೇ ಮೊದಲಾದ ಜ್ಞಾನಿಗಳೇ ಉದಾಹರಿಸಿದಂತೆ ಬಿಂಬೋಪಾಸನೆಗೆ ಕ್ರಮವಾಗಿ ತಾರತಮ್ಯಸಂಧಿಗಳನ್ನು ದಾಸಾರ್ಯರು ರಚಿಸಿರುವರು. ಇದೇ ಸಂಧಿಗಳ ಸಂಬಂಧ. ಶ್ರೀ ವಿಜಯದಾಸರ ವಾಕ್ಯದಂತೆ ಸಂಧಿ ವಿವರ ಬರೆಯಲಾಗಿದೆ. ತಪ್ಪೊಪ್ಪೇ ಒಪ್ಪೇ ಜ್ಞಾನಿಗಳು ತಿದ್ದುವುದು. ಬಹು ರಹಸ್ಯವಾದ ಹೊಸ ಹೊಸ ವಿಷಯಗಳು ಈ ಗ್ರಂಥದಲ್ಲಿ ಅಲ್ಲಲ್ಲೆ ವಿವರಿಸಿದೆ. ಕೆಲ ಜನರು ತಿಳಿಯದೇ ಸಮ್ಮತಿಸದೇ ಹಳಿಯುತ್ತಾರೆ "ಆರಾದರು ಹಳಿ ಯಲಿ ಆರಾದರೂ ಛೀ ಎನಲಿ" ಎಂಬ ದಾಸರ ವಾಕ್ಯವನನುಸರಿಸಿ ಶ್ರೀ ಗೋಪಾಲದಾಸರು ತಿಳಿಸಿದಂತೆ "ತಿಳಿಸು ಎನಗೆ ನೀ ತಿಳಿದು ತಿಳಿಯುವಂತೆ। ತಿಳಿದೆನೆಂಬುವ ತಿಳುವಳಿಕೆ ಬ್ಯಾಡ। ತಿಳಿದರೂ ಪೂರ್ಣ ತಿಳಿದಿಲ್ಲನೆಂಬು ವಂಥ ತಿಳಿವಳಿಕೆ ಕೊಡುವದು ತಿಳಿವಲ್ಲಿ। **ತಿಳಿದು ತಾರತಮ್ಯ** ತಿಳಿವಲ್ಲಿ ತಿಳಿವಲ್ಲಿ। ತಿಳಿವಷ್ಟೆ ಪುನಹ ತಿಳಿಪುವದು। ತಿಳಿದಷ್ಟು ಎನ್ನಿಂದ ತಿಳಿಯದಾ ಜನರಿಗೆ ತಿಳಿದು ತಿಳಿಸುವಂಥ ತಿಳಿವಿಕೆಯಾ ॥೧॥ ಅಭಿವಂದಿಸೆ ಎನಗಭಿ ಮುಖನಾಗಿತೆ॥ ಎಂಬ ಶ್ರೀ ಗೋಪಾಲದಾಸಾರ್ಯರ ವಚನದಂತೆ ಶ್ರೀ ಬಿಂಬನಾದ ಹರಿಯನ್ನು ಪ್ರಾರ್ಥಿಸಿ ತಾರತಮ್ಯ ಸಂಧಿಗಳ ಸಂಬಂಧವನ್ನು ಅಂಬುಜದಳಾಕ್ಷನಾದ ಬಿಂಬನಾದ ಹರಿಗೆ ಅರ್ಪಿಸುವ ಪ್ರಥಮಾಂಗ ಹನುಮ ದಾಸ.

॥ ಶ್ರೀ ಗುರುರಾಜೋ ವಿಜಯತೇ ॥

# ೧೯ನೆಯ ಗುಣತಾರತಮ್ಯ ಸಂಧಿಯ ಸಾರ

## ಇನ್ನು ತಾರತಮ್ಯ ವಿಚಾರ

ಈ ಮಹತ್ತರವಾದ ಸದ್ಗ್ರಂಥದಲ್ಲಿ ಮೊದಲಿಗೆ

೧ ಮಂಗಳಾಚರಣ ರೂಪ ೧ನೇ ಸಂಧಿಯಲ್ಲಿ ತಾರತಮ್ಯ
೨ ೧೯ನೇ ಸಂಧಿಯಲ್ಲಿ ಗುಣತಾರತಮ್ಯ
೩ ೨೦ನೇ ಸಂಧಿಯಲ್ಲಿ ಆರೋಹಣ ತಾರತಮ್ಯ
೪ ೨೩ನೇ ಸಂಧಿಯಲ್ಲಿ ಬೃಹತ್ತಾರತಮ್ಯ
೫ ೨೪ನೇ ಸಂಧಿಯಲ್ಲಿ ಸಾಧನಕಲ್ಪ-ಅಪರೋಕ್ಷಾದಿ ತಾರತಮ್ಯ
೬ ೨೬ನೇ ಸಂಧಿಯಲ್ಲಿ ಆರೋಹಣ ತಾರತಮ್ಯ
೭ ೨೭ನೇ ಸಂಧಿಯಲ್ಲಿ ಅನುಕ್ರಮಣಿಕಾ ತಾರತಮ್ಯ
೮ ೨೯ನೇ ಸಂಧಿಯಲ್ಲಿ ಅಣುತಾರತಮ್ಯ
೯ ೩೦ನೇ ಸಂಧಿಯಲ್ಲಿ ದೈತ್ಯ ತಾರತಮ್ಯ
೧೦ ೩೨ನೇ ಸಂಧಿಯಲ್ಲಿ ಕಕ್ಷಾತಾರತಮ್ಯವೆಂದು ಹತ್ತು ಸಂಧಿಗಳನ್ನು ರಚಿಸಿದ್ದಾರೆ. ಇವುಗಳ ನಾಮ ಸಾರ್ಥಕ್ಯವೇನು ? ಮುಂದೆ ಆಯಾ ಸಂಧಿಗಳಲ್ಲಿ ವಿವರಿಸುವುದು.

ಶಾಸ್ತ್ರದಲ್ಲಿ ಈ ತಾರತಮ್ಯ ಘಟ್ಟವು ಬಹು ಕಠಿಣವಾದ ವಿಷಯ. ಅನೇಕ ಗ್ರಂಥಗಳಲ್ಲಿ ತಾರತಮ್ಯ ವಿಷಯ ಬಂದಿದೆ. ಕೆಲಕಡೆಗೆ ಕೆಲವು ವಿಷಯ ವಿರೋಧ ಕಾಣುತ್ತವೆ. ಅವು ನಿಜವಾಗಿಯೂ ವಿರೋಧವಲ್ಲ. ದಾಸರಾಯರು ಈ ತಾರತಮ್ಯ ಮಾಹಾತ್ಮ್ಯೆಯನ್ನು ೧೨-೧೪ ಪದ್ಯಗಳಲ್ಲಿ ಬೇರೆ ಬೇರೆ ಸಂಧಿಗಳಲ್ಲಿ ವರ್ಣಿಸಿದ್ದಾರೆ. ಅವರಲ್ಲಿ ಸಂಧಿ ೨೩ ಪದ್ಯ ೫೦ರಲ್ಲಿ ಬೃಹದ್ಭಾಷ್ಯದಂತೆ

"ಬಾದರಾಯಣ ಭಾಗವತ ಮೊದ ।
ಲಾದ ಶಾಸ್ತ್ರಗಳಲ್ಲಿ ಬಹು ವಿಧ ।
ದ್ವಾದಶ ದಶ ಸುಪಂಚ ವಿಂಶತಿ ಶತ ಸಹಸ್ರಯುತ ॥

**ಭೇದಗಳ ಪೇಳಿದನು ಸ್ತೋತ್ರನು ।**
**ಆದಿತೇಯಾವೇಶ ಬಲಗಿ ವಿ ।**
**ರೋಧ ಚಿಂತಿಸಬಾರದಿವು ಸಾಧುಜನ ಸಮ್ಮತವು ॥೫೦॥**

ಎಂದು ಆಜ್ಞಾ ಕೊಡಿಸಿದಂತೆ ಛಾಂದೋಗ್ಯ ತೈತ್ತಿರೀಯ ಬೃಹದಾರಣ್ಯಕ ಮುಂತಾದ ಗ್ರಂಥಗಳಲ್ಲದೇ ಸುಮಾರು ೪೧-೪೨ ಗ್ರಂಥಗಳಲ್ಲಿ ತಾರತಮ್ಯ ವಿವರಣೆಯು ಕಂಡುಬರುತ್ತದೆ. ಅದರ ಅನುಕ್ರಮಣಿಕಾ ತಾರತಮ್ಯ ಸುಳಾದಿ ಪ್ರಕಟನೆ (೨)ರಲ್ಲಿ ಕೊಟ್ಟಿದೆ. ಅನಂತ ವಿಧ ತಾರತಮ್ಯವಿದ್ದರೂ, ಮುಖ್ಯವಾಗಿ ೧೪ ವಿಧ ತಾರತಮ್ಯವು ಇರುವುದು. ಈ ೧೪ ವಿಧ ತಾರತಮ್ಯದಲ್ಲಿಯೇ ಎಲ್ಲವೂ ಅಡಕವಾಗಿವೆ.

ಪ್ರಕಾಶ ಸಂಹಿತೆ ಪ್ರಥಮ ಪರಿಚ್ಛೇದ ಅಧ್ಯಾಯ ೧೦-೧೧ರಲ್ಲಿ ಈ ೧೪ ವಿಧ ತಾರತಮ್ಯ ವಿವರ ಶ್ರೀ ವ್ಯಾಸರೇ ಹೇಳಿದ್ದಾರೆ. "ಅಂಡೋರ್ಧ್ವವೇಶ ತತ್ವೇಶಾ ಅತ್ರ ಪೂರ್ವಂ ಪ್ರಕೀರ್ತಿತಾಃ ॥ ಸುಪ್ರಾರಬ್ಧಾ ಬಹುವಿಧಾ ದೋಷ ಸಂಬಂಧವರ್ಜಿತಾಃ ॥ ಯೇ ಯೇ ಯಥಾ ಯಥಾ ಜಾತಾಃ ಸೃಷ್ಟಿಕಾಲೇ ಭವಂತಿ ಹಿ ॥ ಗುಣಸೃಷ್ಟ್ಯುತ್ತರಂ ಜಾತಾಃ ಸರ್ವೇ ಸ್ಥೂಲಶರೀರಿಣಃ ॥

೧ ೨ ೩ ೪ ೫ ೬ ೭ ೮ ೯
ಅಂಶಾನಂದ ಬಲ ಜ್ಞಾನ ದೇಶ ಕಾಲ ಪರೋಕ್ಷಕಾಃ ॥ ಲಯ ಸೃಷ್ಟಿ

೧೦ ೧೧ ೧೨ ೧೩ ೧೪
ಪದಾವೇಶ ಗುಣ ಲಕ್ಷಣ ಕಾಂತಯಃ ॥ ಏವಂ ಚತುರ್ದಶಮಹಾತಾರತಮ್ಯಂ ಪ್ರಕೀರ್ತಿತಂ ॥ ಎಂದು ಹೇಳಿದಂತೆ ಶ್ರೀ ವಿಜಯದಾಸಾರ್ಯರು ತಾರತಮ್ಯ ಸುಳಾದಿ ಪುಟ ೪೭ ರಲ್ಲಿ ("ಸ್ವರಮಣ ಸ್ವಾತಂತ್ರ" ಎಂಬುವ ಸುಳಾದಿಲಿ ವಿಜಯಾರ್ಯರು) "ಇಂದಿರೆಯರಸ ಪರತತ್ವ ನಾನಾರೂಪ ಸುಪ್ರತಾಪ ........ ಎರಡೊಂದು ಯೋಗ್ಯರನ್ನು ನೋಡಿ ಮುಕ್ತಿ ಜೀವರ ತರತಮ್ಯ ಚತುರ್ದಶ ಬಗೆ ನೇಮಿಸಿ। ಹಿರಿದಾಗಿ ಅಂಶಾನಂದ ಬಲ ಜ್ಞಾನ ದೇಶ ಕಾಲ । ಮರಳೆ ಅಪರೋಕ್ಷಲಯ ಸೃಷ್ಟಿ ಪದ । ತರುವಾಯ ಆವೇಶ ಗುಣ ಲಕ್ಷಣ ಕಾಂತಿ ಇಂತು ಮಾಡಿದ ಸಾಂಶ ಜನಕೆ । ನರಗಾಯಕ ವಿವಿದು ತೃಣಾಂತ ಗುಣಿಸುವದೀ ಪರಿಯಾಗಿಪ್ಪದು ಗ್ರಹಿಸಬೇಕು । ಸರುವ ಜೀವರನ್ನು ಸೃಜಿಸಿ ತತ್ ಸಾಧನವ । ಪರಿಮಿತಿ ಮಾಡಿ ಇಪ್ಪ ಸ್ವಾಭಾವಿಕಾ।" ಎಂದು

ವರ್ಣಿಸಿದ್ದಾರೆ. ೧೪ ವಿಧ ಅಂಶಬಲಾದಿ ತಾರತಮ್ಯ ವಿಚಾರವೇನು, ದೇವತೆಗಳ ಸೃಷ್ಟಿ ಅಂಶ ಕಕ್ಷಗಳು ಗುಣ ಕಾಂತಿ ಲಕ್ಷಣ ಸಾಧನ ಅಪರೋಕ್ಷ ಮುಂತಾದುವುಗಳ ಕೋಷ್ಟಕ. ಮುಂದೆ ಸಾಧನಕಲ್ಪ ಸಂಧಿ ಮುಗಿದ ನಂತರ ಏಕತ್ರ ಕ್ರೋಡೀಕರಿಸಿ ಕೊಡುವದೆಂದು ಗುರುಗಳು ಪ್ರೇರಿಸಿದ್ದಾರೆ. ಇಲ್ಲಿ ಬಹು ವಿಸ್ತಾರವಾಗುತ್ತದೆ. ಈ ಎಲ್ಲ ತಾರತಮ್ಯ ತಿಳಿದುಕೊಳ್ಳುವದು ಮುಖ್ಯವಾದುದು. ತಾರತಮ್ಯ ಸುಳಾದಿಗಳನೆಲ್ಲ ಪಠಿಸಿ ಪಾರಾಯಣ ಮಾಡಿದರೆ ಮುಂದಿನ ಸಾಧನಕ್ಕೆ ಮಾರ್ಗ.

ಈಗ್ಗೆ ಈ ಸಂಧಿಯಲ್ಲಿ ಸ್ವರೂಪ-ಬಲ-ಜ್ಞಾನ-ಆನಂದಾದಿ ಗುಣಗಳಿಂದ ಬ್ರಹ್ಮಾದಿ ತೃಣಾಂತ ಜೀವಿಗಳವರಿಗೆ ಅವರವರು ಎಷ್ಟು ಗುಣ ಅವರರೆಂಬುದನ್ನು ಸವಿಸ್ತರ ಪೇಳಿದ್ದಾರೆ. ಈ ಸಂಧಿಯ ಸಾರರೂಪವಾಗಿ ಶ್ರೀಗುರು ಶ್ರೀಶರಾಯರ ಶಿಷ್ಯರ ಒಂದು ಪುಸ್ತಕವಲ್ಲಿ ಬರೆದಿರುವುದು ದೊರೆತದೆ. ಅದನ್ನೇ ಜ್ಞಾನಿಗಳ ಅವಲೋಕನಾರ್ಥ ಇಲ್ಲಿ ಕೊಟ್ಟದೆ.

## ಶ್ರೀ ಗುರು ಶ್ರೀಶವಿಠಲರ ಶಿಷ್ಯರು ಜ್ಞಾನಿಗಳು ಬರೆದ ೧೯ನೇ ಗುಣತಾರತಮ್ಯದ ಸಂಧಿಯು ಸಾರ

ಇದು ಬೃಹದ್ಭಾಷ್ಯದ ಅರ್ಥವೇ ಇರುವುದು.

ಶ್ರೀ ಲಕ್ಷ್ಮೀನರಸಿಂಹ ಪ್ರಸನ್ನ ॥ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಗುರುಭ್ಯೋ ನಮಃ ॥ ಶ್ರೀಮದ್ಗುರುವರ ಗುರುಜಗನ್ನಾಥದಾಸರಾಯ ಗುರುಭ್ಯೋ ನಮಃ॥ ಅಸ್ಮದ್ಗುರು ಚರಣಾರವಿಂದಾಭ್ಯಾಂ ನಮಃ॥
ತಾರತಮ್ಯಜ್ಞಾನ ವಿವರ ಅವರೋಹಣ ಗುಣತಾರತಮ್ಯ
ಶ್ರೀ ಹರಿಕಥಾಮೃತ ಸಾರ ಸಂಧಿ ೧೯ನೆಯ
ಶ್ರೀಧರಾ ದುರ್ಗಾ ಮನೋರಮ ವೇದಮುಖ—
ಶ್ರೀ ಲಕ್ಷ್ಮೀಪತಿ ಆದಿನಾರಾಯಣ ಸರ್ವೋತ್ತಮ ಶ್ರೀರಮಾ
ನಿತ್ಯಮುಕ್ತಳು, ಬ್ರಹ್ಮಾದಿಗಳು ಮುಕ್ತಿಯೋಗ್ಯರು ॥ ಪುರಂಜನಾದಿ
ನಿತ್ಯಸಂಸಾರಿಗಳು ॥ ಕಲ್ಯಾದಿ ತಮೋಯೋಗ್ಯರ ತರತಮಾನುಸಾರ ವಿವರ

೧ ಶ್ರೀ ರಮಾ-ಭೂ-ದುರ್ಗಾ-ರಮಣ- ಬ್ರಹ್ಮಾದಿಗಳಿಂದ ವಂದ್ಯನಾದ ಆದಿನಾರಾಯಣ ಸರ್ವೋತ್ತಮ.

೨ ಶ್ರೀ ತರುಣಿ ನಿತ್ಯಮುಕ್ತಳು, ಅಕ್ಷರಳು ಶ್ರೀರಮಾದೇವಿ ಪರಮಾತ್ಮನಕಿಂತಲೂ ಅನಂತಾನಂತಗುಣ ಕಡಿಮೆ.

೩ ಕಮಲಸಂಭವನಾದ ಬ್ರಹ್ಮ ಪವಮಾನ ಸಮರು. ಶ್ರೀರಮಾದೇವಿಗೆ ೧ ಕೋಟಿ ಗುಣದಿಂದ ಅಧಮರು. ಕೋಟಿಶಬ್ದ ಅನಂತ ವಾಚಿ, ಬ್ರಹ್ಮನಕಿಂತಲೂ ಪವಮಾನ ಪದಪ್ರಯುಕ್ತ ಕಡಿಮೆ.

೪ ಬ್ರಹ್ಮಪತ್ನಿ ಸರಸ್ವತಿ, ವಾಯುಪತ್ನಿ ಭಾರತೀ ದೇವಿಯರು ಬ್ರಹ್ಮ ವಾಯುಗಳಿಗೆ ನೂರು ಗುಣ ಕಡಿಮೆ. ಸರಸ್ವತಿಗೆ ಭಾರತಿ ದೇವಿಯು ಪದಪ್ರಯುಕ್ತ ಕಡಿಮೆ. ೧೦೦

೫ ಗರುಡ ಶೇಷ ರುದ್ರರು ಸಮರು. ವಾಣಿ ಭಾರತಿಗೆ, ಶತ ಗುಣ ಅಧಮರು. ಶೇಷ ತ್ರಿಯಂಬಕೆ ಮಿಗಿಲೆನಿಸುವನು. ೧೦೦

೬ ಷಣ್ಮಹಿಷಿಯರು ಗರುಡಾದಿಗಳಿಗಿಂತಲೂ, ಪಂಚ ಗುಣ ಕಡಿಮೆ. ಜಾಂಬವತಿ ಇವರಲ್ಲಿ ಕಿಂಚಿದಧಿಕಳು. ರಮಾವೇಶ ಯುಕ್ತಳು. ೫

೭ ಷಣ್ಮಹಿಷಿಯರಿಗಿಂತ ಸೌಪರಣಿ-ವಾರುಣಿ-ಪಾರ್ವತಿ ಎರಡು ಗುಣ ಕಡಿಮೆ. ೨

೮ ಇಂದ್ರಕಾಮರು ಸೌಪರಣ್ಯಾದಿಗಳಿಂದ ಹತ್ತು ಗುಣ ಕಡಿಮೆ. ೧೦

೯ ಅಹಂಕಾರಿಕ ಪ್ರಾಣ ಇಂದ್ರಕಾಮರಿಗೆ ಹತ್ತು ಗುಣ ಕಡಿಮೆ. ೧೦

೧೦ ಕಾಮಪುತ್ರ, ಅನಿರುದ್ಧ, ಸ್ವಾಯಂಭುವ ಮನು, ಗುರು, ದಕ್ಷ ಪ್ರಜೇಶ್ವರ, ಶಚಿ, ರತಿದೇವಿ ಅಹಂಕಾರಿಕ ಪ್ರಾಣನಿಂದ ಹತ್ತು ಗುಣ ಕಡಿಮೆ. ೧೦

೧೧ ಪ್ರವಾಹ ವಾಯು ಅನಿರುದ್ಧಾದಿಗಳಿಂದ ಪಂಚ ಗುಣ ಕಡಿಮೆ ೫

೧೨ ಸೂರ್ಯ, ಚಂದ್ರ, ಯಮ, ಸ್ವಾಯಂಭು ಮನುಪತ್ನಿ ಶತರೂಪಾದೇವಿ ನಾಲ್ವರು ಸಮರು. ಪ್ರವಾಹ ವಾಯುವಿಗೆ ಎರಡು ಗುಣದಿಂದ ಕಡಿಮೆ. ೨

೧೩ ವರುಣ ದೇವರು ಸೂರ್ಯ ಚಂದ್ರಾದಿಗಳಿಗೆ ಪಾದ .|. ಪಾದಾರ್ಧ·=·|·+=)|=ಗುಣ ಕಡಿಮೆ. ·|=

೧೪ ನಾರದ ಋಷಿಗಳು ವರುಣದೇವರಿಗೆ ಪಾದಾರ್ಧ ಗುಣ ಕಡಿಮೆ. ‘=೧/೮

೧೫ ಭೃಗುಋಷಿಗಳು ಅಗ್ನಿದೇವರು ಪ್ರಸೂತಿ ದೇವಿ ದಕ್ಷಪ್ರಜೇಶ್ವರ ಪತ್ನಿ ನಾರದರಿಂದ ಪಾದಾರ್ಧ ಗುಣ ಕಡಿಮೆ. ‘=೧/೮

೧೬ ಅಗ್ನ್ಯಾದಿಗಳಿಗೆ ದ್ವಿಗುಣಾಧಮರು ಮರೀಚ್ಯಾದಿ ಸಪ್ತ ಋಷಿಗಳು, ವಿಶ್ವಾಮಿತ್ರ, ವೈವಸ್ವತ ಮನು ೨

೧೭ ಮಿತ್ರನಾಮಕ ಸೂರ್ಯ, ನಿಋತಿ, ಪ್ರಾವಹಿ, ತಾರಾ ಮರೀಚ್ಯಾದಿಗಳಿಂದ ಕಿಂಚಿನ್ನ್ಯೂನಾಧಮರು ಕಿಂಚಿತ್ ೧/೧೬

೧೮ ಕುಬೇರ, ವಿಷ್ವಕ್ಸೇನ, ಗಣೇಶ ಮತ್ತು ಅಶ್ವಿನಿ ದೇವತೆಗಳು ೮೫ ಶೇಷಶತಸ್ಥರು ಸಮರು. ಕಿಂಚಿತು ಗುಣ ಕಡಿಮೆ (ಪಾದದಲ್ಲಿ ಚತುರ್ಥಾಂಶ) ಕಿಂಚಿತ್ ೧/೧೬

೮೫ ಜನಗಳಿಗೆ ವಿವರ :

೬ ಜನ ಸೂರ್ಯರು, ೪೭ ಮರುತಗಳು, ೭ ವಸುಗಳು, ೧೦ ರುದ್ರರು, ೧೦ ವಿಶ್ವೇದೇವತೆಗಳು, ೨ ಅಶ್ವಿನೀ ದೇವತೆಗಳು, ೧ ಋಭು ಗಣ, ೧ ದ್ಯಾವಾ, ೧ ಪೃಥಿವೀ=ಹೀಗೆ ೮೫ ಜನರು ಶೇಷಶತಸ್ಥರು.

೧೯ ಕರ್ಮಜ ದೇವತೆಗಳ ಕಕ್ಷ—ಇವರಲ್ಲಿ ಚ್ಯವನ ಋಷಿ, ಸನಕಾದಿಗಳು, ಪಾವಕ, ಉಚಿಥ್ಯ ಋಷಿ, ಕಶ್ಯಪ ಋಷಿ, ಜಯಂತ, ಏಕಾದಶ ಮನುಗಳು, ಕುಬೇರಾದಿಗಳಿಗೆ ಕೊರತೆ ಎನಿಸುವರು ಶತ ಪುಣ್ಯ ಶ್ಲೋಕರಾಯರಿಗೆ ಕಿಂಚಿತ್ತು ಅಧಿಕರು. ಧ್ರುವ, ನಹುಷ ರಾಯ, ಪರೀಕ್ಷಿತ, ಅಂಬರೀಷ ರಾಯ, ಉತ್ತಾನಪಾದ ರಾಯ, ಶತಪುಣ್ಯ ಶ್ಲೋಕರಾಯರು ಕರ್ಮಜ ದೇವತೆಗಳು ಕಿಂಚಿತ್ ೧/೧೬

೨೦ ಭಾಗೀರಥಿ, ಪರ್ಜನ್ಯ, ರೋಹಿಣಿ, ಶಾಮಲಾ, ಸಂಜ್ಞಾ, ವಿರಾಟಾಭಿಮಾನಿ, ಅನಿರುದ್ಧ ಪತ್ನಿ ಉಷಾ ಕರ್ಮಜ ದೇವತೆಗಳಿಗೆ ಕಿಂಚಿತು ಅಧಮರು ಕಿಂಚಿತ್ ೧/೧೬

೨೧ ಅನಾಖ್ಯಾತ, ಅಪ್ರಸಿದ್ಧ ದೇವತೆಗಳು ಕಿಂಚಿನ್ನ್ಯೂನಾಧಮರು ೧/೧೬

| | | |
|---|---|---|
| ೨೨ | ಅಗ್ನಿಪತ್ನಿ ಸ್ವಾಹಾದೇವಿ ಭಾಗೀರಥಿದೇವಿಗೆ ೨ ಗುಣ ಕಡಿಮೆ. | ೨ |
| ೨೩ | ಬುಧನು ಸ್ವಾಹಾದೇವಿಗೆ ೨ ಗುಣ ಕಡಿಮೆ. | ೨ |
| ೨೪ | ಅಶ್ವಿನಿ ಭಾರ್ಯಾ ಉಷಾದೇವಿ ಬುಧಗೆ ೨ ಗುಣ ಕಡಿಮೆ. | ೨ |
| ೨೫ | ಶನೈಶ್ಚರ ಧರಣಿ ಉಷಾದೇವಿಗೆ ೨ ಗುಣ ಕಡಿಮೆ. | ೨ |
| ೨೬ | ಕರ್ಮಾಧಿಪತಿ ಪುಷ್ಕರ ಶನೈಶ್ಚರ ಧರಣಿಗೆ ೨ ಗುಣ ಕಡಿಮೆ | ೨ |
| ೨೭ | ಆಜಾನುಜ ದೇವತೆಗಳು ಪುಷ್ಕರನಿಂದ „ | ಕಿಂಚಿತ್ ೧/೧೬ |
| ೨೮ | ಚಿರ ಪಿತೃಗಳು ಕಿಂಚಿತ್ ಕಡಿಮೆ. | ಕಿಂಚಿತ್ ೧/೧೬ |
| ೨೯ | ನವಕೋಟಿ ಋಷಿಗಳು ಅಪ್ಸರರು ಗಂಧರ್ವರು ಸಮಾನರು ........ಆಜಾನುಜರಿಗೆ ಗುಣ ಹತ್ತು ಕಡಿಮೆ. | ೧೦ |
| ೩೦ | ಮನುಜ ಗಂಧರ್ವ ಮೇಲಿನವರಿಂದ ೧೦೦ ಗುಣ ಕಡಿಮೆ. | ೧೦೦ |
| ೩೧ | ಅವನಿಪ ರಾಜರು ತತ್ ಪತ್ನಿಯರು ೧೦೦ ಗುಣ ಕಡಿಮೆ. | ೧೦೦ |
| ೩೨ | ಮಾನುಷೋತ್ತಮರು ರಾಜರಿಂದ ನೂರು ಗುಣ ಕಡಿಮೆ. ಇವರಲ್ಲಿ ತೃಣಾಂತ ಸ್ಥಾವರ ಜೀವರು ಮುಕ್ತಿಯೋಗ್ಯರು. | ೧೦೦ |

ನಿತ್ಯಸಂಸಾರಿಗಳು ಮೂರು ವಿಧ. ತಮೋಧಿಕಾರಿಗಳು ನಾಲ್ಕು ವಿಧ. ಕೇವಲ ನೀಚ ಕಲಿ, ಕಲಿಭಾರ್ಯಾ ಪುರಂಧ್ರಿ.

॥ ಶ್ರೀ ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶಪ್ರಸನ್ನಃ ॥
॥ ಶ್ರೀ ಗುರುರಾಜೋ ವಿಜಯತೇ ॥

# ೧೯. ಗುಣತಾರತಮ್ಯ ಸಂಧಿ

ಶ್ರೀ ರಾಘವೇಂದ್ರ ಗುರು ಶ್ರೀ ವರದೇಂದ್ರ ಗುರು

ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ಪಲ್ಲವಿ॥

**ಶ್ರೀಧರಾದುರ್ಗಾಮನೋರಮ ।**
**ವೇಧಮುಖ ಸುಮನಸಗಣ ಸಮಾ ।**
**ರಾಧಿತಪದಾಂಭೋಜ ಜಗದಂತರ್ಬಹಿರ್ವ್ಯಾಪ್ತ ॥**
**ಗೋಧರ ಫಣಿಪ ವರಾತಪತ್ರ ನಿ ।**
**ಷೇಧ ಶೇಷ ವಿಚಿತ್ರಕರ್ಮ ಸು ।**
**ಬೋಧ ಸುಖಮಯಗಾತ್ರ ಪರಮಪವಿತ್ರ ಸುಚರಿತ್ರ ॥ ೧ ॥**

**ಅವತರಣಿಕಾ :—** ಹಿಂದೆ ೧೮ನೇ ಬಿಂಬಾಪರೋಕ್ಷ ಸಂಧಿಯಲ್ಲಿ ಸೃಷ್ಟಿ ಪ್ರಾರಂಭಿಸಿ ಮೋಕ್ಷ ಪರಿಯಂತವಾಗಿ ಬಿಂಬರೂಪಿ ಹರಿಯು ನಾನಾ ವಿಧ ಗುಣ ರೂಪ ಕ್ರಿಯೋಪಾಸನೆ ಹೇಳಿ ಹೃತ್ಕಮಲ ಕರ್ಣಿಕಾಸ್ಥಿತ ಬಿಂಬನ ಅಂಶಗಳೇ ಸ್ವದೇಹದಲ್ಲಿರತಕ್ಕ ಸಮಸ್ತ ಹರಿಯ ರೂಪಗಳಿಗೂ, ಶ್ರೀಹರಿಯ ನಂತರ ತಾರತಮ್ಯದಿಂದ ಶ್ರೀಲಕ್ಷ್ಮೀದೇವಿಯರಾರಂಭಿಸಿ ಅವರೋಹಣ ಕ್ರಮದಿಂದ ಸಮಸ್ತ ಜೀವರ ಗುಣತಾರತಮ್ಯವನ್ನು ಚಿಂತಿಸಬೇಕು. ಅಂದರೆ ಸ್ವದೇಹಸ್ಥ ಸಕಲ ತತ್ವೇಶರು ಅತಾತ್ವಿಕ ಕಲಾಭಿಮಾನಿ ದೇವತೆಗಳಲ್ಲಿ ನಿಯಮನ ಮಾಡತಕ್ಕ ರೂಪಗಳಿಗೂ, ಬಿಂಬೈಕ್ಯ ಚಿಂತಿಸಬೇಕು. ಗುಣ ತಾರತಮ್ಯವು ಜೀವರ ಸ್ವರೂಪಾನಂದ ಜ್ಞಾನ ತಾರತಮ್ಯಕ್ಕೆ ಅನುಸಾರಿ ಯಾಗಿದೆ.

ಪ್ರಾಮುಖ್ಯವಾಗಿ ಶ್ರೀ ವಿಜಯದಾಸರು ಪ್ರಮೇಯಮಾಲಾ ಸುಳಾದಿ "ಜೀವ ಅಚ್ಛೇದ್ಯ ಅಭೇದ್ಯ ತೋಯಗರಳಶಸ್ತ್ರ" ಎಂಬ ಸುಳಾದಿ (...)

ಉಪಾಸನಾಭಾಗದಲ್ಲಿ ಉಪಾಸನಾ ಕ್ರಮ ವರ್ಣಿಸಿರುವರು. ೧೦ ತಾಳ ಪರಿಯಂತ ಬಹು ವಿಸ್ತಾರವಾಗಿದೆ. ೧೦ನೇ ಮಟ್ಟತಾಳ ಪುಟ ೩೯ರಲ್ಲಿ "ಮಧ್ವಮತದ ಪ್ರೌಂದಿ ಮುದದಿಂದಲಿ ಧ್ಯಾನ | ಪದ್ಧತಿ ತಪ್ಪದೆ ಪಾವನ್ನ ನೀನಾಗೋ | ಸಿದ್ಧಿಸುವದು ನಿನಗೆ ಈ ಪರಿ ಆರೋಹಣ | ಇಪ್ಪದೆ ಜನ್ಮಾಗಿ ಉಪಕ್ರಮಿಸಿ ಮಾಡು | ಸದ್ಭಾವದಿಂದ ಉಪಸಂಹಾರಣೆಯನ್ನು ನಿರ್ವಾಹಗೈಸಿ ಪ್ರೊಳಗಿಪ್ಪ ನಿತ್ಯ | ಬುದ್ಧಿಯು ಮಧ್ಯದಲಿ ಧ್ಯಾನರೂಪದಲಿಟ್ಟು | ನಿರ್ದ್ವಂದ್ವ **ನಾಹದೇ ಇದೇ ಲಯ ಚಿಂತನೆಯೊ ಇದೇ ಅವರೋಹಣವೋ** ಪದ್ಮವಲ್ಲಭ ನಮ್ಮ ವಿಜಯ ವಿಠ್ಠಲನಂಘ್ರಿ | ಪದ್ಮಕಾಂಬುವದಕ್ಕೆ ಇದೆ ಉಪಾಯಗಳು || ೧೧ || ಮತ್ತು ಮುಂದೆ ೧೨ನೇ

**ಝಂಪಿ ತಾಳದಲ್ಲಿ** (ಪುಟ ೪೦)

ಅಧಿಕಾರತನಭೇದ ಇದರೊಳಗೆ ತಿಳಿವುದು | ಅಧಿಷ್ಠೈವ ಮೊದಲಾದ ಮುಕ್ತಜನರ | ಆದಿ ತನ್ನ ಸ್ವರೂಪ ಅವಲಂಬಿಸಿ ಲಿಂಗ ಹೃದಯದಲ್ಲಿ ಕಂಡ **ವಿಶಿಷ್ಟ ಮತ್ತೆ** | ಮುದದಿ ಅನಿರುದ್ಧ ಸ್ಥೂಲದೇಹ ಆದಾವ | ಅನುಭವಿಸಿದ **ಕಳೇವರದ ತೆರದಿ** | ಇದರಂತೆ ಚತುರಸ್ರ ವಲಯಕಾರಧಿಕಧಿಕ | ವಿಧಿಪರಿಯಂತ ವ್ಯಾಪ್ತಸಿದ್ಧಿಯೋ ||" ಎಂದು ಉಪಾಸನಾಕ್ರಮ ನಿರ್ವರ್ಣನಗೈದಿರುವರು. ತೈತ್ತಿರೀಯ ಬೃಹದಾರಣ್ಯಕದಲ್ಲಿಯೂ ಅನೇಕ ವಿಧವಾಗಿ ಆನಂದ ಗುಣ ತಾರತಮ್ಯ ವಿವರಿಸಿದಂತೆ ಶ್ರೀದಾಸಾರ್ಯರು ಶ್ರೀವಿಜಯರ ನುಡಿಗನುಸರಿಸಿ **ಕೊನೆಗೆ ಜತೆಯಲ್ಲಿ**

"ಆರೋಹಣ ಅವರೋಹಣದಿಂದ ಹರಿಯ ಧ್ಯಾನಿಸಿ | ದಾರಿದ್ರ್ಯನಾಶಕ ವಿಜಯವಿಠ್ಠಲ ಪ್ರೊಳೆದಾ ||" ಎಂದು ಆಜ್ಞಾಪಿಸಿದಂತೆ ಮೊದಲಿಗೆ, ಸ್ವರೂಪಾರಂಭಿಸಿ ಲಿಂಗ ಅನಿರುದ್ಧ ಸ್ಥೂಲ ಕಾಯದಲ್ಲಿಪ್ಪ ವಿಧಿಭವಾದಿ ಸಮಸ್ತ ತತ್ವೇಶಾದಿಗಳಲ್ಲಿ ನಿಲಿಸಿ ಕಾರ್ಯ ಮಾಡುತಲಿಪ್ಪ ಶ್ರೀ ಹರಿಯ ರೂಪಗಳನ್ನೆಲ್ಲ ಬಿಂಬೈಕ್ಯ ಚಿಂತಿಸುವದೆಂದು ಈ ಗುಣತಾರತಮ್ಯಸಂಧಿಯಲ್ಲಿ ಹೇಳಿದ್ದಾರೆ.

ಮುಂದೆ ಈ ದೇಹದಲ್ಲಿಪ್ಪ ಎಲ್ಲ ತತ್ವಾದಿ ದೇವತೆಗಳೇ ಬಾಹಿರ ಬ್ರಹ್ಮಾಂಡದಲ್ಲಿಪ್ಪ ಸ್ಥೂಲ ಪದಾರ್ಥ ಆರಂಭಿಸಿ, ತೃಣ ಜೀವರು ಮೊದಲು ಮಾಡಿ ಈರ ವಿಧಿ ಪರಿಯಂತವಾಗಿ ಉತ್ತರೋತ್ತರ ಆರೋಹಣ ತಾರತಮ್ಯ

ವನ್ನು ಗೈದು, ಧ್ಯಾನದಿಂದ ಬಿಂಬೈಕ್ಯ ಚಿಂತಿಸಿದರೆ ಸಂಚಿತಾಗಾಮಿ ನಾಶವಾಗಿ ಬಿಂಬಾಪರೋಕ್ಷನಾಗುವುದೆಂದು ಗುಣತಾರತಮ್ಯ ರೂಪವಾದ ಅವರೋಹಣ ತಾರತಮ್ಯ ಸಂಧಿ ಉಪಕ್ರಮಿಸಿದ್ದು ಬಹು ಸಾರ್ಥಕ್ಯ. ಇದೇ ಸಂಕ್ಷಿಪ್ತವಾಗಿ ಗುಣ ತಾರತಮ್ಯ ಸಂಧಿಯ ಅವತರಣಿಕಾ. ಈ ಮೊದಲನೇ ಪದ್ಯದಲ್ಲಿ ಶ್ರೀಹರಿಯು ಗುಣತ್ರಯ ನಿಯಾಮಕನೂ, ಸಕಲ ಬ್ರಹ್ಮಾದಿ ದೇವತೆಗಳಿಂದ ಪೂಜಿತನೂ, ಜಗದಂತಸ್ಥ ಬಹಿರಧಿವ್ಯಾಪ್ತನೂ ಎಂದು ಅನೇಕ ವಿಧವಾಗಿ ಸ್ತೋತ್ರಗೈಯ್ಯುತ್ತಾರೆ.

**ಪದ್ಯಾರ್ಥ :—** ಶ್ರೀ ಧರಾ ದುರ್ಗಾ ಮನೋರಮ= ಶ್ರೀ= ಶ್ರೀದೇವಿ, ಧರಾ=ಭೂದೇವಿ, ದುರ್ಗಾ=ದುರ್ಗಾದೇವಿ, ಸತ್ವ ರಜ ತಮೋಗುಣಗಳಿಗೆ ನಿಯಾಮಕಳಾದ ಶ್ರೀರಮೆಯ ಮೂರು ರೂಪಗಳಿಗೂ, ಮನೋರಮ= ಮನದಲ್ಲಿ ಕ್ರೀಡಿಸಿ ಆನಂದವನ್ನು ಕೊಡುವ, ವೇಧಮುಖ ಸುಮನಸಗಣ= ಬ್ರಹ್ಮ ದೇವರೇ ಮೊದಲು ಮಾಡಿ ಸಕಲ ದೇವತೆಗಳ ಸಮೂಹಗಳಿಂದ, ಸಮಾರಾಧಿತ ಪದಾಂಭೋಜ=ಸಮಿಾಚೀನವಾಗಿ ಪೂಜೆಗೊಳ್ಳುವ ಪಾದಕಮಲಗಳುಳ್ಳ, ಶ್ರೀಬಿಂಬನಾದ ಶ್ರೀಹರಿಯು ಜಗದಂತರ್ಬಹಿರ್ವ್ಯಾಪ್ತ=ಜಗತ್ತು ಇಲ್ಲಿ ಜೀವಪರ. ಸಕಲ ಜೀವರಂತರಂಗ ಸ್ವರೂಪದಿ ಬಹಿರದಿ, ಸ್ವರೂಪಕ್ಕೆ ಹೊರಗಿರುವ ಲಿಂಗಾದಿ ಸ್ಥೂಲದೇಹದಲ್ಲಿ ಅಥವಾ, ಪ್ರಸಿದ್ಧವಾದ ೧೪ ಲೋಕಗಳ ಒಳಗೂ, ಬಹಿರದಿ=ಬ್ರಹ್ಮಾಂಡ ಆವರಣದ ಹೊರಗೂ, ಒಂದೇ ಪ್ರಕಾರವಾಗಿ, ವ್ಯಾಪ್ತ=ವ್ಯಾಪಿಸಿರುವನು, ಹರಡಿರುವನು, ಮತ್ತು ಹರಿಯು ಎಂಥವನೆಂದರೆ:—ತಾನು ಸಮಸ್ತ ಜಗತ್ತಿನಲ್ಲಿ ವ್ಯಾಪಿಸಿದ್ದಾಗ್ಯೂ, ಗೋಧರಫಣಿಪ= ಸಕಲ ಪೃಥ್ವಿಯನ್ನು ಸಾಸಿವೆ ಕಾಳಿನ ಪ್ರಮಾಣವಾಗಿ ತನ್ನ ಶಿರಸ್ಸಿನಲ್ಲಿ ಧರಿಸಿದ, ಫಣಿಪ=ಶೇಷದೇವರನ್ನೇ, ವರಾತಪತ್ರ ವರ=ಶ್ರೇಷ್ಠವಾದ ಆತಪತ್ರ=ಛತ್ರರಿಕೆ ರೂಪವಾದ ಹೆಡೆಗಳ ನೆರಳಲ್ಲಿ ಸಂಕರುಷಣ ರೂಪಿ ಹರಿಯು ತನಗೆ ತಾನೆ ಆತಪತ್ರನಾಗಿರುವನು. ಅಂದರೆ ತನಗೆ ತಾನೆ ಆಶ್ರಯ ತನಗೆ ತಾನೇ ವ್ಯಾಪ್ಯವ್ಯಾಪಕನಾದರೂ, ನಿಷೇಧಶೇಷ= ಶ್ರೀಹರಿಯು ತನ್ನ ಅವತಾರಗಳನ್ನು ನಿಷೇಧ=ಬಿಟ್ಟು ಸರ್ವರೂಪಗಳಿಂದ ಮೂಲರೂಪದಲ್ಲಿ ಐಕ್ಯ ಹೊಂದಿದ ಮೂಲನು, ಅಥವಾ ನಿಷೇಧಶೇಷ=ತಾನು ಜೀವಾಂತರ್ಯಾಮಿ ನಿರಂತರ ಇರುವನು, ಈ ಅಂಶದಿಂದ ಮೂಲರೂಪದಲ್ಲಿ ಐಕ್ಯವಾಗದಿಲ್ಲವ

ನಾದವರೂ, ಸಕಲ ಜೀವರನ್ನು ಪ್ರಳಯದಲ್ಲಿ ತನ್ನ ಉದರದಿ ಧರಿಸಿ ಸಕಲವನ್ನು ನಿಷೇಧಗೈಸಿ ತಾನೊಬ್ಬನೇ ಇರುವನಾದುದರಿಂದಲೇ, ವಿಚಿತ್ರಕರ್ಮ= ಅನ್ಯರಿಂದ ತಿಳಿಯಲಶಕ್ಯವಾದ ನಾನಾತರದ ಚಿತ್ರವಿಚಿತ್ರ ವ್ಯಾಪಾರ ಉಳ್ಳವನು. ಆದರೂ, ಸುಬೋಧ=ಭಕ್ತಜನರ ಯೋಗ್ಯತೆಯಂತೆ ಅವರ ತಿಳುವಳಿಕೆಗೆ, ಸು=ಸಮೀಚೀನವಾಗಿ ಕಾಣಿಸಿಕೊಂಡು ತಿಳಿಯಲಿಕ್ಕೆ ಯೋಗ್ಯನಾದವನು. ಸುಖಮಯಗಾತ್ರ=ಸಚ್ಚಿನ್ಮಯ ಆನಂದಮಯ ದೇಹವುಳ್ಳವನು. ಪರಮಪವಿತ್ರ=ನಿರ್ದೋಷಿಯಾಗಿ ಉತ್ತಮನಾದ ಶುಚಿಯಾದವನು. ಸುಚರಿತ್ರ=ಸಮ್ಯಕ್ ನಾನಾ ಅವತಾರಾದಿಗಳಲ್ಲಿ ಶಕ್ತ್ಯುದ್ರೇಕ ಪ್ರಕಾಶವಾದ ಕ್ರಿಯಾ ಉಳ್ಳವನಾದರೂ ಶ್ರೀಹರಿಯ ಅನಂತ ಚರಿತ್ರ ಕ್ರಿಯೆಗಳೆಲ್ಲ ಆನಂದಮಯವಾದುವು ಎಂದು ಶ್ರೀ ಹರಿಯ ಸ್ತೋತ್ರಗೈದಿದ್ದಾರೆ.

**ಭಾವಸೂಚನ :—** ಮಂಜೂಷಾಯಾಂ ಚ ॥ ಭಾಮಿನಿ

ತೃಣಮೊದಲು ಬ್ರಹ್ಮಾಂಡ ಚೇತನ ।
ಗಣದೊಳಗೆ ನೀಚಾಧಿಕಂಗಳ ।
ಗುಣವನರಿಯುತ ಭಜಿಸೆ ಹರಿ ತನ್ನಣುಗನೆಂದೆನುತಾ ॥
ದಣಿವಿಕಿಲ್ಲದೆ ಕಾವಿ ವನಮಲ ।
ಗುಣಮಣಿಯುನೆನಿಪೆಂತ ದಾಸರು ।
ಗುಣ ಗಣಿಸಿ ಪೇಳಿಹರು ಗುಣ ತರತಮದ ಸಂಧಿಯಲಿ ॥೧॥

ಶ್ರೀ ॥ ವೇಧ=ಬ್ರಹ್ಮ. ಸುಮನಸ=ದೇವತೆಗಳು. ಗೋಧರ= ಭೂಧರ ॥೧॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

## ಗುಣತಾರತಮ್ಯ ಸಂಧಿಃ

ಶ್ರೀವ್ಯಾಸ ಕರಣಂ । ಕೈವಲ್ಯಾರ್ಹ ಜೀವಗಣಸ್ಯ ತ್ರಿವಿಧ ಚೇತನ ತಾರತಮ್ಯಂ ಪೌರಾಣಿಕಸಂಗ್ರಹರೂಪಂ ಉಪನ್ಯಸ್ಯಂತಿ ॥ "ಅಥಾತಃ ಸಂಭೂತಿಃ ॥ ಪರಮಾತ್ ವಿದ್ಯಾ ॥ ವಿದ್ಯಾಯಾಃ ಪ್ರಾಣಃ ॥ ಪ್ರಾಣಾತ್ ಶ್ರದ್ಧಾ ॥ ಶ್ರದ್ಧಾಯಾಃ ಶಿವಃ ॥ ಶಿವಾತ್ ಬುದ್ಧಿಃ ॥ ಬುದ್ಧೇಃ ಇಂದ್ರಃ ॥ ಇಂದ್ರಾತ್ ತೈಜಸಃ ಪ್ರಾಣಃ ॥ ತೈಜಸಾತ್ ಅನಿರುದ್ಧಃ ॥ ಅನಿರುದ್ಧಾತ್ ಸ್ಪರ್ಶಮಾತ್ರಃ ॥ ಸ್ಪರ್ಶ

ವಾತಾತ್ ಸೋಮಃ ॥ ಸೋಮಾತ್ ವರುಣಃ ॥ ವರುಣಾತ್ ಅಗ್ನಿಃ ॥ ಅಗ್ನೇರ್ಮಿತ್ರಃ ॥ ಮಿತ್ರಾತ್ ಪರ್ಜನ್ಯಃ ॥ ಪರ್ಜನ್ಯಾತ್ ಸ್ವಾಹಾ ॥ ಸ್ವಾಹಾಯಾಃ ಉಷಾ ಜಾಯತೇ ॥ ತೇಷಾಂ ಪರಃ ಪರಃ ಜ್ಯಾಯಾನ್ ಗುಣೈಃ ॥ ಉತ್ತರಃ ಉತ್ತರಃ ಪ್ರತ್ಯವರಃ ॥ ತಸ್ಮಾತ್ ಪರಸ್ಮಾತ್ ಪರಸ್ಮಾತ್ ಉತ್ತರಃ ಉತ್ತರಃ ಮುಚ್ಯತೇ ಸ್ವಂ ಸ್ವಂ ಭಾವಮಾಪದ್ಯತೇ ॥ ನೈಷಾಂ ಪಾರಾವರ್ಯ ಮುಚ್ಛಿದ್ಯತೇ ಕದಾಚನ ನೈಷಾಂ ಪಾರಾವರ್ಯಂ ಉಚ್ಛಿದ್ಯತೇ ಕುತಶ್ಚನ ॥ ಪಾರಾವರ್ಯೇಣ ಬ್ರಹ್ಮೋಪಯಂತಿ ಪಾರಾವರ್ಯೇಣೈವ (ಪಾರಂಪರ್ಯೇಣೈವ) ಮುಕ್ತಾಃ ಸಂಚರಂತಿ ॥" ಇತ್ಯಾದಿಶ್ರುತೇಶ್ಚ ॥

"ನಾಮಾದಿಮಾರುತಾಂತೇಷು ಜೀವೇಷ್ವೇಷ್ವೇಷು ಭೇದತಃ ॥ ಉಪಾಸಿತಃ ಹರಿಃ ಮುಕ್ತಿಂ ದದ್ಯಾತ್ ನಾಸ್ತ್ಯತ್ರ ಸಂಶಯಃ ॥" ಇತಿ ಸತ್ತ್ರಶ್ರೇ ॥ ಇತಿ ಛಾಂದೋಗ್ಯೇ ॥ "**ತಾರತಮ್ಯಪರಿಜ್ಞಾನಾತ್ ತೇಷು ಧ್ಯಾತಃ ವಿಮುಕ್ತಿದಃ** ॥ ಪ್ರೀತಿಂ ನ ಚಾನ್ಯಥಾ ಯಾಯಾತ್ ಇತಿ ಶಾಸ್ತ್ರಸ್ಯ ನಿರ್ಣಯಃ ॥" ಇತಿ ತತ್ತ್ವ ವಿವೇಕೇ ॥

ಕಿಂ ಚ ಏತದಜ್ಞಾನೇ ಅನರ್ಥ ಏವ ಶ್ರೂಯತೇ ॥ **ತಾರತಮ್ಯಾಪರಿಜ್ಞಾನಾತ್ ಅನುತ್ಥಾಸಂ ತಮೋ ವ್ರಜೇತ್** ॥" ಇತಿ ಮಹಾಭಾರತ ತಾತ್ಪರ್ಯನಿರ್ಣಯೇ ॥ ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಃ ತಥಾ ॥ ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ ॥" ಇತಿ ಚ ॥ ಅತಃ ಭಗವಾನ್ ದಾಸರಾಜಃ ಸಂಕ್ಷೇಪತಃ ವಾಙ್ಮಯೇನ ಸರ್ವ ತಾರತಮ್ಯಂ ಪ್ರತಿಪಿಪಾದಯಿಷುಃ ಆದೌ ಗುಣಾಧಮ್ಯಪಾರಮ್ಯವದೀಶಾದಿ ಸ್ತೋತ್ರಮಾಸ್ (ಮುಖಾನ್) ಅಭಿಪ್ಸಾತಿ —"ಶ್ರೀಧರ" ಇತಿ ॥

ಸರ್ವಮುಕ್ತಾಮುಕ್ತನಿಯಂತಾ ಸ್ವತಂತ್ರಃ ಸರ್ವಗುಣಪೂರ್ಣಃ ಶ್ರೀನಾರಾಯಣಃ ಸರ್ವೋತ್ತಮಃ ಇತಿ ಸಾಧ್ಯಾರ್ಥಃ ॥ ಪ್ರಕರಣಾತ್ ವಾಕ್ಯದ್ವಯಮಪಿ ತಾರತಮ್ಯೇನ ಉದಾಹ್ರಿಯತೇ ॥ "ತತೋಽನಂತಗುಣೋ ವಿಷ್ಣುಃ" (ಹರಿಃ) "ತತಃ ಶ್ರೇಷ್ಠತಮೋ ವಿಷ್ಣುಃ" ಶ್ರೇಷ್ಠಃ ಶ್ರೇಷ್ಠತಮಃ ಸ ಚ" ಇತಿ ॥ "ವಿಷ್ಣುಃ ಸರ್ವೋತ್ತಮಃ ಇತಿ ಚ ॥ "ವೇಧಾಃ" ಬ್ರಹ್ಮಾ ॥ ಸುಮನಸಃ ದೇವಾಃ ॥ 'ವ್ಯಾಪ್ತ' ಇತಿ ॥ ಏಕಸ್ಯ ಜೀವಗಸ್ಯ ಹರೇಃ ಅಣುತ್ವಂ

ತಸ್ಯೈವ ಮಹತ್ವಂ ಅನ್ಯತ್ರ ಅದೃಷ್ಟಂ ಕಥಂ ಶಕ್ಯಾಧಿಗಮಮ್ ? ಇತಿ ಚೇತ್ ಅನ್ಯತ್ರ ಇತ್ಯಸ್ಯ ಅನ್ಯಪುರುಷೇ ಪಾದ್ಮೇ ಸೋಽಭವಂ, ಹರೌ ನ ದೃಷ್ಟಂ ಇತಿ ವಾ ॥ ನಾದ್ಯಃ ಅನವಸ್ಥಿತ್ಯಸಂಭವಾಭ್ಯಾಂ ಸೂತ್ರನಿರ್ಮಾತ್ರೈವ ನಿರಾಕೃತತ್ವಾತ್ (ಅಪಾಕೃತತ್ವಾತ್) ॥ ನ ದ್ವಿತೀಯಃ (ಇತ್ಯಾಹ) "ಯಥಾ ಬಾಲತನೌ ವಿಷ್ಣೋಃ ಮಾರ್ಕಂಡೇಯೇನ ಧೀಮತಾ। ಪ್ರವಿಶ್ಯ ನಾಂತೋಽಧಿಗತಃ ಏವಂ ವ್ಯಾಪ್ತಃ ಹರಿಃ ಸದಾ ॥" ಇತಿ ಪರಮಸಾರಂ ಉದಾಜಹಾರ ಆಚಾರ್ಯವರ್ಯಃ ॥ ಅತಃ "ವ್ಯಾಪ್ತ" ಇತಿ ಸಾಧೂಕ್ತಮ್ ॥ "ಗೌಃ" ಪೃಥಿವೀ ॥ ಶ್ವೇತಾತಪತ್ರಃ ॥ "ನಿಷೇಧೇತಿ" "ನೇತಿನೇತಿ" ಇತ್ಯಾದೇಃ ॥ 'ನಿಷೇಧ ಶೇಷ' ಇತಿ ಚ ॥ "ಕರ್ಮ"—ಸೃಷ್ಟ್ಯಾದಿಃ ॥ 'ಚರಿತಮ್'—ಭಕ್ತಪೋಷಣಾದಿ ॥

"ಪವಿತ್ರ"—॥ ಓಂ ॥ * ನಮುಜಃ ಪರ್ವತೇಷ್ಟಾಃ ಪ್ರತಿವಾಪ್ಯುಜೀಷಿ ಇಂದ್ರಃ ಶಶ್ವದ್ಭಿರ್ಜೋಹೂತ್ರ (ಜಹ್ಯತ್ರ) ಏಷೈಃ ತಾ ಅಸ್ಯ ಸೂದದೋಹಸಃ ಸೋಮಂ ಶ್ರೀಣಂತಿ (ಪ್ರೀಣಂತಿ) * ॥ ಓಂ ॥ ಪಾಪಸಂಘರಹಿತತ್ವಾತ್ ಪವಿತ್ರಮ್ ॥ ೧ ॥

## ಕನ್ನಡಾರ್ಥ

ಮುಕ್ತಿಯೋಗ್ಯಜೀವರಾಶಿಯು ಮೂರು ತರಹದ ಚೇತನಗಳಲ್ಲಿ ಇರುವ ತಾರತಮ್ಯವನ್ನು ಇವರು ಪೂರ್ವ (ಮೊದಲು) ಇವರು ಅನಂತರ ಎಂದು ಅವಶ್ಯವಾಗಿ ತಿಳಿಯಲೇಬೇಕು.

"ಪರಮನಿಂದ (ಹರಿಯಿಂದ) ವಿದ್ಯೆಯು (ರಮಾ). ವಿದ್ಯೆಯಲ್ಲಿ ಪ್ರಾಣನು; ಪ್ರಾಣನಿಂದ ಶ್ರದ್ಧಾ. ಶ್ರದ್ಧಾಳಪತಿಯಿಂದ ಶಿವನು. ಶಿವನಿಂದ ಬುದ್ಧಿ (ಉಮಾ). ಬುದ್ಧಿಯಿಂದ ಇಂದ್ರನು. ಇಂದ್ರನಿಂದ ತೈಜಸ ಪ್ರಾಣನು. ತೈಜಸ ಪ್ರಾಣನಿಂದ ಅನಿರುದ್ಧನು. ಅನಿರುದ್ಧನಿಂದ ಸ್ಪರ್ಶ (ವಾತನು) ವಾಯುವು. ಸ್ಪರ್ಶವಾಯುವಿನಿಂದ ಸೋಮನು. ಸೋಮನಿಂದ ವರುಣನು. ವರುಣನಿಂದ ಅಗ್ನಿಯು. ಅಗ್ನಿಯಿಂದ ಮಿತ್ರನು. ಮಿತ್ರನಿಂದ ಪರ್ಜನ್ಯನು. ಪರ್ಜನ್ಯನಿಂದ ಸ್ವಾರಾ ಸ್ವಾರಾಳಿಂದ ಉಷಾ." ಹೀಗೆ ಸಂಭೂತರಾದವರು. ಇವರಲ್ಲಿ ಪೂರ್ವಪೂರ್ವದವರು ಗುಣಗಳಿಂದ ಅಧಿಕರು. ಅನಂತರದವರು ಉತ್ತರೋತ್ತರದವರು ಗುಣಗಳಿಂದ ಕಡಿಮೆಯುವರು. ಆದುದರಿಂದ ಪೂರ್ವ

ಪೂರ್ವದವರಿಂದ ಉತ್ತರ-ಉತ್ತರದವರಿಗೆ (ಮುಂದಿನವರಿಗೆ) ತಮ್ಮ ತಮ್ಮ ಸ್ವರೂಪದ ಪ್ರಾದುರ್ಭಾವವು ಆಗುತ್ತದೆ; ಮುಕ್ತಿಯಾಗುತ್ತದೆ. ಈ ದೇವತೆಗಳ ಪೌರ್ವಾಪರ್ಯವು ಯಾರಿಂದಲೂ ಎಂದಿಗೂ ನಾಶವನ್ನು ಹೊಂದುವುದಿಲ್ಲ. ಪೌರ್ವಾಪರ್ಯ ತಾರತಮ್ಯದಿಂದ ಯುಕ್ತರಾಗಿಯೇ ಪರಬ್ರಹ್ಮನನ್ನು ಹೊಂದುತ್ತಾರೆ. ತಾರತಮ್ಯದಿಂದ ಯುಕ್ತರಾಗಿಯೇ ಮುಕ್ತಿಯಲ್ಲಿ ಸಂಚರಿಸುತ್ತಾರೆ. (ಹಾಗೂ ತಾರತಮ್ಯ ಜ್ಞಾನದಿಂದಲೇ ಮುಕ್ತರಾಗುತ್ತಾರೆ.) ಎಂದು ತಾರತಮ್ಯ (ಸಂಭೂತಿ) ಶ್ರುತಿಯು ಸಾರುತ್ತದೆ. (ಛಾಂದೋಗ್ಯಭಾಷ್ಯದಲ್ಲಿ ಶ್ರೀಮದಾಚಾರ್ಯರಿಂದ ಉದಾಹೃತವಾದುದು)

"ನಾಮಾಭಿಮಾನಿ ಉಷಾ ಮುಂತಾದ ಪ್ರಾಣನವರೆಗೆ ಇರುವ ಎಲ್ಲ ದೇವತೆಗಳಲ್ಲಿ ತಾರತಮ್ಯದಿಂದ (ಗುಣಾನುಸಾರವಾಗಿ) ಭೇದದಿಂದ ಪರಮಾತ್ಮನನ್ನು ಉಪಾಸಿಸಬೇಕು. ಹರಿಯು (ಪರಮಾತ್ಮನು) ಅದರಿಂದ ಪ್ರಸನ್ನನಾಗಿ ಮುಕ್ತಿಯನ್ನು ಕೊಡುತ್ತಾನೆ." ಎಂದು "ಸತ್ತತ್ವ"ದ ವಚನವನ್ನು ಶ್ರೀಮದಾಚಾರ್ಯರು ಛಾಂದೋಗ್ಯ ಭಾಷ್ಯದಲ್ಲಿ ಉದಾಹರಿಸಿರುತ್ತಾರೆ. (ಛಾ. ಅ. ೭-೪-೧೪) ಮತ್ತು "ತಾರತಮ್ಯ ವಿವೇಕ ಪುರಸ್ಸರವಾಗಿಯೇ ಆ ದೇವತೆಗಳಲ್ಲಿ ಪರಮಾತ್ಮನನ್ನು ಧ್ಯಾನಿಸಲು, ಪರಮಾತ್ಮನು ಮುಕ್ತಿಯನ್ನು ಕೊಡುತ್ತಾನೆ. ತಾರತಮ್ಯಜ್ಞಾನರಹಿತನಾಗಿ ದೇವತೆಗಳಲ್ಲಿ ಹರಿಯನ್ನು ಉಪಾಸಿಸಿದರೆ ಶ್ರೀಹರಿಯು ಆ ಉಪಾಸನೆಯಿಂದ ಪ್ರೀತನಾಗುವುದಿಲ್ಲ." ಎಂದು "ತತ್ವವಿವೇಕ"ದ ವಾಕ್ಯವನ್ನೂ ಉದಾಹರಿಸಿರುತ್ತಾರೆ.

**ತಾರತಮ್ಯ ಜ್ಞಾನವಿರದಿದ್ದರೆ ಮಹಾ ಅನರ್ಥವಾಗುತ್ತದೆ.** ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ "ತಾರತಮ್ಯದ ಪರಿಜ್ಞಾನವಿರದವರು ಮೇಲೆ ಏಳಲು ಬಾರದಂತಹ (ಪುನಹ ಅಲ್ಲಿಂದ ತಿರುಗಲು ಅಸಾಧ್ಯವಾದಂಥ) ಅಂಧಂತಮಸ್ಸಿನಲ್ಲಿ ಬೀಳುತ್ತಾರೆ." ಎಂದು ಶ್ರೀಮದಾಚಾರ್ಯರ ವಚನವಿದೆ. "ಆದುದರಿಂದ ತಾರತಮ್ಯವಿಲ್ಲದಿದ್ದರೆ ಯಾವನಿಗೂ ಮುಕ್ತಿಯಾಗುವುದಿಲ್ಲ. ಆದುದರಿಂದ ತಾರತಮ್ಯವನ್ನೂ ಶ್ರೀಹರಿಯ ಸರ್ವೋತ್ತಮತ್ವವನ್ನೂ ಅವಶ್ಯವಾಗಿ ಸಕಲರೂ ತಿಳಿಯಲೇಬೇಕು." ಎಂದೂ ಶ್ರೀಮದಾಚಾರ್ಯರು ಉಪದೇಶಿಸಿದ್ದಾರೆ.

ಆದುದರಿಂದ ದಾಸರಾಜರು ಸಂಕ್ಷೇಪದಿಂದ ಉಪನ್ಯಾಸರೂಪವಾಗಿ ಸರ್ವರಲ್ಲಿರುವ ತಾರತಮ್ಯವನ್ನು ನಿರೂಪಿಸಬಯಸುವವರಾಗಿ ಸಂಧ್ಯಾರಂಭ ದಲ್ಲಿ ಗುಣೋಚ್ಚನೀಚ ಭಾವಯುಕ್ತರಾದ, ಸ್ತೋತ್ರದಿಂದ ಸಹಿತರಾದ ದೇವತೆಗಳಿಂದ ಈತನು ಆರಾಧಿತನು" ಎಂಬುದಾಗಿ ಶ್ರೀಹರಿಯನ್ನು ಸ್ತುತಿಸು ತ್ತಾರೆ—"ಶ್ರೀ ಧರಾ" ಎಂಬ ಪದ್ಯದಿಂದ.

"ಸರ್ವಮುಕ್ತ ಹಾಗೂ ಅಮುಕ್ತರುಗಳಿಗೆ ನಿಯಾಮಕನು, ಸ್ವತಂತ್ರನು, ಸರ್ವಗುಣ ಸಂಪೂರ್ಣನು, ಶ್ರೀನಾರಾಯಣನು ಸರ್ವೋತ್ತಮನು." ಎಂದು ವಿಶಿಷ್ಟ ಅಭಿಪ್ರಾಯ.

ಒಂದೇ ಸಂದರ್ಭವಾದುದರಿಂದ, ಈ ಎರಡೂ ಪದ್ಯಗಳು ತಾರತಮ್ಯೋಪ ಯುಕ್ತವಾದುದರಿಂದ ಈ ಸಂಧ್ಯಾದಿಯಲ್ಲಿ ನಿವೇಶಿಸಿರುತ್ತವೆ. "ಅನಂತ ಗುಣ ಪೂರ್ಣನು ವಿಷ್ಣುವು;" "ಆದುದರಿಂದ ಶ್ರೀ ವಿಷ್ಣುವು ಶ್ರೇಷ್ಠತಮನು;" "ಶ್ರೇಷ್ಠನೂ, ಶ್ರೇಷ್ಠತಮನೂ ಆಗಿರುತ್ತಾನೆ ಅವನು." "ವಿಷ್ಣುವು ಸರ್ವೋ ತ್ತಮನು;" ಎಂದು ಮುಂತಾದ ವಚನಗಳಿಗನುಸಾರವಾಗಿ ಈ ಎರಡು ಪದ್ಯ ಗಳನ್ನು ಇಲ್ಲಿ ಸೇರಿಸಿರುತ್ತಾರೆ.

"ವೇದ"-ಚತುರ್ಮುಖಬ್ರಹ್ಮ. "ಸುಮನಸರು"-ದೇವತೆಗಳು. "ಅಂತರ್ಬ ಹಿರ್ವ್ಯಾಪ್ತ"-ಇಲ್ಲಿ ವಿಶೇಷ ವಿಚಾರ :—

"ಜೀವರು–ಅಣುಗಳು. ಪರಮಾತ್ಮನು ಒಬ್ಬನು (ಏಕನು). ಒಬ್ಬ ಜೀವನಲ್ಲಿ ಇರುವ ಹರಿಯು ಅಣುವಾಗಿಯೇ (ಅಣುರೂಪದಿಂದಲೇ) ಇರು ತ್ತಾನೆ. ಜೀವನಲ್ಲಿ ಅಣುವಿನರೂಪದಿಂದ ಇರುವ ಅದೇ ಹರಿಯು ಮಹತ್ತ ವನ್ನು ಹೇಗೆ ಹೊಂದುತ್ತಾನೆ? ಹೊರಗೆ ಮಹತ್ತಾದ ಪ್ರಪಂಚವನ್ನು ಹೇಗೆ ವ್ಯಾಪಿಸುತ್ತಾನೆ? ಒಂದೇ ವಸ್ತುವು ಅಣುವಾಗಿರುವುದೂ ಮಹತ್ತಮವಾಗಿ ಇರುವುದೂ ಬೇರೆ ಎಲ್ಲಿಯೂ ಕಂಡುಬಂದಿಲ್ಲ." ಎಂದು ಪೂರ್ವಪಕ್ಷವು ಉದಯಿಸುತ್ತದೆ.

ಉತ್ತರ—"ಬೇರೆ ಎಲ್ಲಿಯೂ ಹೀಗೆ ಕಂಡುಬಂದಿಲ್ಲ"ವೆಂದರೆ "ಬೇರೊಬ್ಬ ನಲ್ಲಿ ಹೀಗಿರುವುದು ಕಂಡುಬರಬೇಕು." ಹೀಗೆ ನಿಮ್ಮ ಅಭಿಪ್ರಾಯವೋ? ಅಥವಾ ಒಂದೇ ಪರಮಾತ್ಮನ ರೂಪದಲ್ಲಿ–ಇವೆರಡೂ ವಿರುದ್ಧ ಧರ್ಮಗಳು

ಎಲ್ಲಿಯೂ ಕಂಡುಬಂದಿಲ್ಲವೆಂದು ಅಭಿಪ್ರಾಯವೋ? ಮೊದಲನೆಯ ಪಕ್ಷವು ಸರಿಯಲ್ಲ. "ಅನವಸ್ಥಿತೇಃ ಅಸಂಭವಾಚ್ಚ ನೇತರಃ" ಎಂಬ ಸೂತ್ರದಲ್ಲಿ "ಮಿಕ್ಕ ಯಾವ ಜೀವನಿಗೂ ಜೀವಾಂತರ ನಿಯಾಮಕತ್ವವು ಇರಲು ಸಂಭವವೂ ಇರುವುದಿಲ್ಲ." ಎಂದು ಮುಂತಾಗಿ ನಿರಾಕೃತವಾಗಿರುತ್ತದೆ. ಆದುದರಿಂದ ಜೀವಾಂತರ್ಬಹಿರ್ವ್ಯಾಪ್ತಿಯು ಮಿಕ್ಕವರಿಗೂ ಇರಬೇಕು" ಎಂದು ಊಹಿಸುವುದು ಸರಿಯಲ್ಲ.

ಇನ್ನು ಪರಮಾತ್ಮನಲ್ಲಿಯೇ ಹೀಗೆ ಕಂಡಿಲ್ಲವೆಂಬ ಎರಡನೆಯ ಆಕ್ಷೇಪ ಸರಿಯಲ್ಲ. ಯಾಕೆಂದರೆ ಮಾರ್ಕಂಡೇಯ ಮುನಿಗಳು ಪರಮಾತ್ಮನ (ವಿಷ್ಣುವಿನ) ಬಾಲರೂಪದಲ್ಲಿ ಒಳಗೆ ಹೊಕ್ಕು ಅನಂತಾನಂತ ಬ್ರಹ್ಮಾಂಡಗಳನ್ನೂ ಅಲ್ಲಿರುವ ಭಗವದ್ರೂಪಗಳನ್ನೂ–ಅವನ ಅಣುವಿಗಿಂತ ಅಣುವಾಗಿರುವ–ಮಹತ್ತಿಗಿಂತ ಮಹತ್ತಮವಾಗಿರುವ ಗುಣಗಳನ್ನೂ ಕಂಡುಕೊಂಡಿರುತ್ತಾರೆ. ಇದು ಪರಮ ಸಾರವಾದುದು. ಈ ಸಂಗತಿಯನ್ನು ಶ್ರೀಮದಾಚಾರ್ಯರು ಹೇಳಿರುತ್ತಾರೆ. ಆದುದರಿಂದ ದಾಸರಾಯರು "ಜಗದಂತರ್ಬಹಿರ್ವ್ಯಾಪ್ತ" ಎಂದು ಪದ್ಯದಲ್ಲಿ ನಿಬಂಧಿಸಿದುದು ಅತ್ಯಂತ ಸಮಂಜಸವಾಗಿದೆ. "ಗೋಧರಫಣಿವರಾತಪತ್ರ"—"ಗೋ-ಭೂಮಿ, ಅದನ್ನು ಧರಿಸುವವನು ಶೇಷ. ಅವನ ಹೆಡೆಯೇ ಕೊಡೆಯಾಗಿ (ಛತ್ರವಾಗಿ) ಉಳ್ಳವನು" ಎಂದು ಅರ್ಥ.

'ನಿಷೇಧಶೇಷ'ವೆಂದು ಪಾಠವು ಸಮೀಚೀನವಾದುದು. "ಸ ಏಷ ನೇತಿ ನೇತಿ" ಎಂಬ ಶ್ರುತಿಯಲ್ಲಿ "ನಿಷೇಧಶೇಷೋ ಜಯತಾತ್ ಅಶೇಷಃ" ಎಂಬಲ್ಲಿಯೂ ಪರಮಾತ್ಮನು 'ನಿಷೇಧಶೇಷನು' ಎಂದು ಉಕ್ತನಾಗಿರುತ್ತಾನೆ. ಪ್ರಲಯದಲ್ಲಿ ಎಲ್ಲರೂ ಅನ್ಯರಲ್ಲಿ ಲಯವನ್ನು ಹೊಂದುವುದರಿಂದ, ಅವರಾರೂ ಪರಮಾತ್ಮನೆನಿಸಲು ಅರ್ಹರಲ್ಲ. ಆದುದರಿಂದ ಅವರೆಲ್ಲರನ್ನೂ ನಿಷೇಧಿಸಿ ಪ್ರಳಯದಲ್ಲಿಯೂ ಸಹ ಇರುವುದರಿಂದ ಅವನೇ ಪರಮಾತ್ಮನು." ಎಂದು ಹೇಳಿರುವುದರಿಂದ 'ನಿಷೇಧಶೇಷ' ಎಂಬುವುದು ಪರಮಾತ್ಮನಿಗೆ ವಿಶೇಷಣವಾಗಿರುತ್ತದೆ.

ಅವನ ವಿಚಿತ್ರ ಕರ್ಮಗಳೆಂದರೆ ಜಗತ್ಸೃಷ್ಟ್ಯಾದಿಗಳು, ಚರಿತ್ರಗಳೆಂದರೆ ಭಕ್ತಪೋಷಣ ಮುಂತಾದವುಗಳು ಎಂದು ತಿಳಿಯಬೇಕು.

"ಪವಿತ್ರ'—ಪಾಪಗಳಿಂದ ರಹಿತನಾದುದರಿಂದ ಪವಿತ್ರನೆನ್ನುತ್ತಾರೆ. ಇದು ಬೃಹತೀ ಮಂತ್ರಾನುಗುಣವಾದ ಅರ್ಥ [illegible]।

**ಅವತರಣಿಕಾ :**—ಬಿಂಬರೂಪಿ ಹರಿಯು ಸರ್ವೋತ್ತಮನೂ, ಸಕಲರಿಂದ ಪೂಜ್ಯನೂ, ಮುಕ್ತಾಮುಕ್ತಗಣ ಸೇವ್ಯನೂ ಆಗಿರುತ್ತಾನೆ. ಭೃತ್ಯವತ್ಸಲಾದಿ ಅನಂತಗುಣೋತ್ಕರ್ಷಣಪೂರ್ವಕ ಶ್ರೀಹರಿಯ ಸ್ತೋತ್ರ ಮಾಡುತ್ತಾರೆ.

**ನಿತ್ಯ ನಿರ್ಮಲ ನಿಗಮವೇದ್ಯೋ।**
**ತ್ಪತ್ತಿ ಸ್ಥಿತಿಲಯ ದೂರವರ್ಜಿತ।**
**ಸ್ತುತ್ಯ ಪೂಜ್ಯ (ಪ್ರತ್ಯಗಾತ್ಮ) ಪ್ರಸಿದ್ಧ ಮುಕ್ತಾಮುಕ್ತ [ಗಣಸೇವ್ಯ॥**
**ಸತ್ಯ ಕಾಮ ಶರಣ್ಯ ಶಾಶ್ವಿತ (ಶಾಶ್ವತ)।**
**ಭೃತ್ಯವತ್ಸಲ ಭಯ ನಿವಾರಣ।**
**ಅತ್ಯಧಿಕ ಸಂಪ್ರಿಯತಮ ಜಗನ್ನಾಥ ಮಾಂ ಪಾಹಿ ॥೨॥**

**ಪದ್ಯಾರ್ಥ :**—ನಿತ್ಯ=ನಿತ್ಯೋ ನಿತ್ಯಾನಾಂ, ಸದಾಕಾಲದಲ್ಲಿ ಸ್ವದೇಶಪ್ರಕಾಶನಾಗಿರುವನು ಮತ್ತು ನಿರ್ಮಲ=ಅತಿ ಶುಚಿಯಾಗಿರುವನು, ನಿರ್ದೋಷನು, ನಿಗಮ ವೇದ್ಯ=ನಿತ್ಯವಾದ ವೇದರಾಶಿರಾಶಿಗಳಿಂದ ಸ್ತುತ್ಯನಾದವನು. "ಸರ್ವೇ ವೇದಾ ಯತ್ಪದಮಾಮನಂತಿ" ಎಂಬುವಂತೆ ಸಕಲ ವೇದಗಳು "ಪರಮ ಮುಖ್ಯ ವೃತ್ತಿಯಿಂದ ಮಹಾ ಪ್ರಳಯಕಾಲದಲ್ಲೂ ನಿತ್ಯನಾದ ಶ್ರೀಹರಿಯನ್ನೇ ಸ್ತೋತ್ರ ಮಾಡುತ್ತವೆ. ಉತ್ಪತ್ತಿ=ಜನನ, ಸ್ಥಿತಿ=ಅವಸ್ಥಾತ್ರಯ ಬಾಲ್ಯಯೌವನವೃದ್ಧಾಪ್ಯದಿಂದ, ಮತ್ತು ಲಯ=ದೇಹ ಹಾನಿ ಆದಿ ದುಃಖ್ಯಗಳಿಂದ, ದೂರ=ಜನನ ಮರಣಾದಿ ಭಯಗಳಿಂದ ದೂರನಾದವನು, ಈ ಮೂರರಿಂದ ವರ್ಜಿತ=ಇಲ್ಲದೇ ಇರುವವನು, ಸ್ತುತ್ಯ=ರಮಾಬ್ರಹ್ಮಾದಿ ಸಕಲರಿಂದ ಸ್ತೋತ್ರ ಮಾಡಿಸಿಕೊಳ್ಳುವವನು, ಪೂಜ್ಯ=ಪೂಜಾ ಮಾಡಿಸಿಕೊಳ್ಳುವವನು, ಪ್ರತ್ಯಗಾತ್ಮ=ಅಂತರ್ಯಾಮಿಯು, ಪ್ರಸಿದ್ಧ=ಸಕಲ ವೇದಗಳಲ್ಲಿ ಸಕಲ ಕಾಲಗಳಲ್ಲಿ ಶ್ರೀಹರಿಯೇ ಸರ್ವೋತ್ತಮನೆಂದು ಸುಪ್ರಸಿದ್ಧಿಯುಳ್ಳವನು, ಖ್ಯಾತಿಯುಳ್ಳವನು, ಮುಕ್ತಾಮುಕ್ತ ಗಣ ಸೇವ್ಯ=ಒಂದೇ ಕಾಲದಲ್ಲಿ, ಒಂದೇ ರೂಪದಿಂದ, ನಿತ್ಯವಾದ ಧಾಮತ್ರಯ

ದಲ್ಲಿ, ನಿಲಿಂಗರಾದ ಮುಕ್ತಜನರಿಂದಲೂ, ಮತ್ತು ಅಮುಕ್ತಸ್ಥಾನದಲ್ಲಿಪ್ಪ ಸಲಿಂಗರಾದ ಅಮುಕ್ತಗಣ ಸಮೂಹದಿಂದಲೂ ಸೇವಿತನಾದವನು. ಸತ್ಯ, ಕಾಮ=ಉತ್ತಮಾನಂದಭವತ್ವಾತ್ ಸತ್ಯ, ಭಕ್ತಾನಾಮ್ ಕಾಮಾನ್ ಪ್ರಕರ್ಷೇಣ ದದಾತೀತಿ ಕಾಮದಃ=ಭಕ್ತರುಗಳಿಗೆ ಮೋಕ್ಷರೂಪವಾದ ಕಾಮ ವನ್ನು, ಆನಂದವನ್ನು ಕೊಡುವನಾದುದರಿಂದ ಸತ್ಯಕಾಮನು, ಶರಣ್ಯ= ಭೀತಾನಾಂ ಭಯಹಂತೃತ್ವಾದಭಯತ್ವಾಚ್ಛರಣಮ್, ಪರರಿಂದ ಭೀತರಾಗಿ ತನ್ನನ್ನು ಮರೆಹೊಕ್ಕವರ ಭಯವನ್ನು ದೂರು ಮಾಡಿ ಕಾಯ್ವನಾದುದರಿಂದ ಶರಣ್ಯನೆಂದೂ, ಶಾಶ್ವತ=ಮುಕ್ತೇಷು ನಿಯಾಮಕತಯಾ ತಿಷ್ಠತೀತಿ ಶಾಶ್ವಿತ ನಿತ್ಯಮುಕ್ತ, ಭೃತ್ಯವತ್ಸಲ=ದಾಸ್ಯಭಾವವುಳ್ಳ ಮುಕ್ತಿಯೋಗ್ಯರನ್ನು ರಕ್ಷಿ ಸುವ, ಭಯನಿವಾರಣ=ಭಕ್ತರ ಭಯಗಳನ್ನು ದೂರಗೈಸುವ, ಅತ್ಯಧಿಕ ಸಂಪ್ರಿಯತಮ=ಸಕಲ ವಸ್ತುಗಳಿಂದಲೂ ಹೆಚ್ಚಿನ ಪ್ರಿಯವಸ್ತು ಪರ ಮಾತ್ಮನು, ಇಂತಹ ಪರಮಾತ್ಮನೇ, ಜಗನ್ನಾಥ=ಸ್ವಬಿಂಬನಾದ ಶ್ರೀಜಗ ನ್ನಾಥ ವಿಠಲನೇ ಸಮಸ್ತ ಜಡಜಂಗಮದಲ್ಲಿ ನಿಯಾಮಕನಾದ ಮುಬ್ಬಿಂಬನಾದ ಶ್ರೀಹರಿಯೇ ಮಾಂ ಪಾಹಿ=ನನ್ನನ್ನು ರಕ್ಷಿಸು.

**ಭಾವಸೂಚನ :—**ನಿತ್ಯೇತಿ ॥ ಪ್ರತ್ಯಗಾತ್ಮ=ಅಂತರ್ಯಾಮಿ ॥ ೨ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಪುನಾ ರಕ್ಷಣಮಾಶಾಸ್ತೇ ತಮೇವ—'ನಿತ್ಯ' ಇತಿ ॥೨॥

**ಕನ್ನಡಾರ್ಥ**

ಮತ್ತೂ ಸಂರಕ್ಷಣವನ್ನು ಬೇಡಿಕೊಳ್ಳುತ್ತ ಆ ಪರಮಾತ್ಮನನ್ನೇ ಜಗ ನ್ನಾಥ ವಿಠ್ಠಲನನ್ನೇ ಸ್ತುತಿಸುತ್ತಾರೆ 'ನಿತ್ಯ' ಎಂಬ ಪದ್ಯದಿಂದ. ॥೨॥

**ಅವತರಣಿಕಾ :—**ಇನ್ನು ತಾರತಮ್ಯಾನುಸಾರವಾಗಿ, ದೇಶ ಕಾಲ ಸಮಳಾದ ಗುಣದಿಂದ ಅಸಮಳಾದ ಸದಾ ಅಧೀನಳಾಗಿ ಶ್ರೀಹರಿ ಇಚ್ಛೆ ಯಂತೆ ನಡೆವ ಶ್ರೀರಮಾದೇವಿಯ ಸ್ತೋತ್ರ ಗೈಯ್ಯುತ್ತಾರೆ.

**ಪರಮಪುರುಷನ ರೂಪ ಗುಣವನು ।**
**ಸರಸಿಕಾಂಬಳು ಪ್ರವಹದಂದದಿ ।**
**ನಿರುಪಮಳು ನಿರ್ದುಷ್ಟಸುಖಸಂಪೂರ್ಣಳೆನಿಸುವಳು ॥**

ಹರಿಗೆ ಧಾಮತ್ರಯವೆನಿಸಿ ಆ।
ಭರಣ ವಸನಾಯುಧಗಳಾಗಿ।
ದ್ದರಿಗಳನೆ ಸಂಹರಿಸುವಳು ಅಕ್ಷರಳೆನಿಸಿಕೊಂಡು ॥ ೩ ॥

**ಪದ್ಯಾರ್ಥ** :—ಪರಮಪುರುಷನ=ಉತ್ತಮ ಪುರುಷನ, ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ॥ ಭಗವದ್ಗೀತಾ ಅಥವಾ, ಪ್ರಕೃತೇಃ ಪರಃ=ಶ್ರೀ ಲಕ್ಷ್ಮೀದೇವಿಗೆ ಬಿಂಬನಾದ ವಿಜ್ಞಾನಮಯನಾದ ಶ್ರೀ ಹರಿಯು ಶ್ರೀಲಕ್ಷ್ಮಿಗಿಂತಲೂ ಉತ್ತಮನು. ಇಂತಹ ಶ್ರೀನಾಮಬಿಂಬನಾದ ಹರಿಯು ವಿಜ್ಞಾನಮಯನು, ತಾನೆ ಆನಂದಮಯ ಪುರುಷರೂಪನು, ಈ ಎರಡೂ ವಿಧವಾದ ಶ್ರೀಹರಿಯ ಸ್ತ್ರೀಪುರುಷರೂಪ=ಅನಂತಾನಂತ ರೂಪ ಗಳನ್ನೂ, ಜ್ಞಾನಾನಂದಾದಿ ಅನಂತ ಗುಣಗಳನ್ನೂ, ಶ್ರೀಹರಿಯ ಅನುಸರಿಸಿ =ಅಂದರೆ ಶ್ರೀಹರಿಯ ಅನಂತ ಪ್ರಾದುರ್ಭೂತ ರೂಪಗಳಿಗೆ ಶ್ರೀಹರಿಯ ಅಧೀನಳಾಗಿ ಶ್ರೀಹರಿಯ ಇಚ್ಛೆಯಂತೆ ಅನಂತರೂಪಗಳನ್ನು ಶ್ರೀಲಕ್ಷ್ಮೀ ದೇವಿಯು ತಾನು ಧರಿಸುತ್ತ ಅನಂತರೂಪ ಅನಂತಗುಣಗಳನ್ನೂ, ನಿತ್ಯನಿತ್ಯ ಶ್ರೀ ಹರಿಯ ನೂತನವಾದ ರೂಪಲಾವಣ್ಯ, ನಿತ್ಯನಿತ್ಯ ಹೊಸಹೊಸದಾಗಿ ತೋರ್ಪ ಶ್ರೀಹರಿಯ ಅನಂತಗುಣಗಳನ್ನು ಪ್ರಮದಾನಂದದಿ ಕಾಂಬಳು=ಅವಿ ಚ್ಛಿನ್ನವಾಗಿ ಎಡಬಿಡದೆ ಅನಂತ ಕಾಲದೇಶಗಳಲ್ಲಿ ಪ್ರವಾಹ ನೀರು ಹರಿಯು ವಂತೆ ನೂತನ ರೂಪ ನೂತನ ಗುಣ ಕಾಂಬುವಳಾದ ಕಾರಣ, ನಿರುಪಮಳು= ಶ್ರೀಹರಿಯ ವ್ಯತಿರಿಕ್ತವಾಗಿ, ಬ್ರಹ್ಮಾದಿಗಳಿಂದ ಕಾಣದ ಅನಂತ ಗುಣರೂಪ ಕಾಂಬುವಳಾದುದರಿಂದ ಉಪಮಾರಹಿತಳೆನಿಸುವಳು, ನಿರ್ದುಷ್ಟ=ಪರಾಧೀನತೆ ಎಂಬ ದೋಷವಿದ್ದರೂ, ದೇಶಕಾಲದಿಂದ ಹರಿಗೆ ಸಮಳಾಗಿ ವರ್ತಿಸುವ, ನಿತ್ಯ ಮುಕ್ತಳಾದ ರಮೆಗೆ ದೋಷವೆತ್ತಣದು? ಕಾರಣ ನಿರ್ದೋಷಳು, ಸುಖ ಸಂಪೂರ್ಣಳೆನಿಸುವಳು=ಜೀವರಂತೆ ಶ್ರೀರಮೆಗೆ ಸಾಧನವಿಲ್ಲ. ಸದಾ ಹರಿಯ ಗುಣರೂಪಾನಂತ್ಯ ನೋಡಿ ಸುಖಿಸುವ ಜ್ಞಾನಾನಂದಾದಿ ಸುಖಪೂರ್ಣಳೆನಿಸು ತ್ತಾಳೆ. ಶ್ರೀಲಕ್ಷ್ಮೀದೇವಿಯು ಜ್ಞಾನ ಆನಂದ ಸುಖಾದಿಗಳು ನಿರಂತರ ಭಗವ ದಧೀನವಾಗಿ ಪೂರ್ಣವಾಗಿಯೇ ಇರುವವು. ವೃದ್ಧಿಹ್ರಾಸಗಳಿಲ್ಲ. ಹರಿಗೆ ಧಾಮ ತ್ರಯವೆನಿಸಿ=ಬಿಂಬರೂಪಿಯಾದ ಶ್ರೀಪರಮಾತ್ಮನಿಗೆ, ನಿತ್ಯವಾದ ಶ್ವೇತ ದ್ವೀಪ ಅನಂತಾಸನ ವೈಕುಂಠ ಶ್ರೀಧಾಮಗಳಲ್ಲಿ ಶ್ರೀರಮಾರೂಪಗಳೇ ಹೊರತಾಗಿ

ಬೇರೊಂದಲ್ಲ. ಆಭರಣ ವಸನ ಆಯುಧಗಳಾಗಿ=ಶ್ರೀಹರಿಗೆ ಶಂಖಚಕ್ರಾದ್ಯಾಯುಧ, ಅಲಂಕಾರಕ್ಕೆ ಅನೇಕ ವಸ್ತುಗಳು, ಶ್ರೀಹರಿಗೆ ಪೀತಾಂಬರಾದಿ ಅನೇಕ ವಸ್ತ್ರರೂಪಳಾಗಿ ಶ್ರೀಹರಿಯ ಸೇವಿಸುವಳು (ಆದಿತ್ಯಪುರಾಣ ಶ್ರೀವೆಂಕಟೇಶಮಾಹಾತ್ಮ್ಯೆಯಲ್ಲಿ ವಿಶದವಾಗಿದೆ) ಮತ್ತು ಶ್ರೀಹರಿಗೆ ಆಯುಧರೂಪಳಾಗಿ ಇದ್ದು, ಅರಿಗಳನೇ ಸಂಹರಿಸುವಳು=ವಿಷ್ಣು ವೈಷ್ಣವ ದ್ವೇಷಿಗಳೂ ನಿಂದಕರೂ, ದ್ರೋಹಿಗಳೂ ಆದ, ತಮೋಗುಣದವರಾದ ದೈತ್ಯಾದಿಗಳನ್ನು ಸಂಹರಿಸುವಳು. "ಯಂ ಕಾಮಯೇ ತಮ್ ತಂ" ಇತ್ಯಾದಿ ಶ್ರುತ್ಯರ್ಥಬೋಧಕವಾಗಿರುವುದು. ಅಕ್ಷರಳೆನಿಸಿಕೊಂಡು=ಸದಾ ಸರ್ವಕಾಲ ನಾಶವಾಗದೇ ಶಶ್ವದೇಕಪ್ರಕಾರವಾಗಿ ಇರುವಳಾದುದರಿಂದ ಅಕ್ಷರಳೆಂದು ರಮೆಗೆ ಹೆಸರು ಬಂದಿದೆ.

**ಭಾವಸೂಚನ :—**ಪರಮಿತಿ ‖ ಅಕ್ಷರೇತಿ ‖ ಶ್ರೀ ಪರಾಪ್ರಕೃತಿಃ ಪ್ರೋಕ್ತೇತಿ ವಚನಾತ್ ‖ ೩ ‖

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶ್ರೀಮನೋಹರ ಪರಮ ಪ್ರೇಮ ನಿತಂಬಿನೀಂ ಇಂದಿರಾಂ ಪದ್ಯದ್ವಯೇನ ಸ್ತೌತಿ "ಪರಮ" ಇತಿ ‖

ರೂಪಗುಣಾನ್ ಅಪ್ಯನುಸ್ಯೂತಾನ್ ಪ್ರವಾಹವತ್ ಪ್ರಕ್ಷ್ಯತಿ ಇತಿ ಯಾವತ್ ‖ 'ಹರಿಗೆ' ಇತ್ಯನೇನ ತದ್ರಮಣಪ್ರವೇಶ ಏವ ರಮಾತ್ಮಾ ನೇತರಃ ಇತಿ ಕೇಚಿತ್ ‖ ಅಸ್ಯತ್ರಾಪಿ ಏವಮೇವ ‖ "ಶ್ರೀರೇವ ಲೋಕರೂಪೇಣ ವಿಷ್ಣೋಃ" ಇತ್ಯುಕ್ತಮ್ ‖*‖ 'ಅರಿ' ಇತಿ ‖ ಹರ್ಯಾಯುಧಾನಾಂ ರಮಾತ್ಮಕತ್ವಾತ್ ಹನನಂ ಯುಕ್ತಮೇವ ‖ ಸ್ವಯಮವಿನಾಶಿತ್ವೇ ಚ ಏತತ್ ಇತ್ಯತ ಆಹ 'ಅಕ್ಷರ' ಇತಿ ‖ ೩ ‖

## ಕನ್ನಡಾರ್ಥ

ನಾರಾಯಣನ ಪರಮಪ್ರಿಯಳಾದ ಇಂದಿರಾದೇವಿಯನ್ನು ಈ ಎರಡು ಪದ್ಯಗಳಿಂದ ಸ್ತುತಿಸುತ್ತಾರೆ. ಪರಮಾತ್ಮನ ರೂಪ ಹಾಗೂ ಗುಣಗಳು

---

* "ಪ್ರೋತಹಸ್ತಸ್ವೀಕೃತಹೃದ್ಭಾರವದ್ರಿ(ದಿ)ತಿ ಸಾಂಪ್ರತಂ ‖" ಎಂದು ಕೆಲವು ಪ್ರತಿಗಳಲ್ಲಿ ಅಧಿಕ ಪಾಠವಿದೆ.‖

ಓತಪ್ರೋತವಾಗಿ ತುಂಬಿ ಇರುವವು. ಪ್ರೋಣಿಸಲ್ಪಟ್ಟಂತೆ ವ್ಯಾಪ್ತದ ಅಸಂಖ್ಯಾನಂತಗುಣಗಳನ್ನು ಪ್ರವಾಹಗಳ ಪರಂಪರೆಯ ರೂಪದಿಂದ ನೋಡುತ್ತಾಳೆ. ಎಂದು ತಿಳಿಯಬೇಕು.

'ಹರಿಗೆ ಧಾಮತ್ರಯ'—ಪರಮಾತ್ಮನ ರಮಣಪ್ರದೇಶರೂಪಳು ರಮಾ ಎಂದೂ ಅಭಿಪ್ರಾಯ. "ಶ್ರೀಮಹಾಲಕ್ಷ್ಮೀದೇವಿಯೇ ವಿಷ್ಣುವಿನ ಲೋಕ ರೂಪಗಳಿಂದ ಅವನನ್ನು ಆನಂದ ಪಡಿಸುವಳು" ಎಂದು ಪ್ರಮಾಣಗಳಿರುತ್ತವೆ. ಹರಿಯ ಚಕ್ರ ಮುಂತಾದ ಆಯುಧಗಳು ರಮಾರೂಪವಾದುದರಿಂದ 'ಅರಿಗಳನೆ ಸಂಹರಿಸಳು' ಎಂಬುದು ಯುಕ್ತವೇ ಆಗಿರುತ್ತದೆ. ತಾನು ಸ್ವತಃ ನಾಶರಹಿತಳಾಗಿದ್ದರೆ ಇದು ಸಲ್ಲುತ್ತದೆ ಆದುದರಿಂದ 'ಅಕ್ಷರ' ಎಂದು ಹೇಳಿರುತ್ತಾರೆ. ||೩||

ಅವತರಣಿಕಾ :—ಶ್ರೀಹರಿಗೆ ಅನಂತಾನಂತಗುಣಗಳಿಂದ ಶ್ರೀಲಕ್ಷ್ಮೀದೇವಿಯರು ಕಡಿಮೆಯಾದರೂ ನಿತ್ಯಮುಕ್ತಳು, ನಿರ್ವಿಕಾರಳು. ತ್ರಿಗುಣಾಭಿಮಾನಿಯಾದರೂ ತ್ರಿಗುಣ ಬದ್ಧಳಲ್ಲ. ದೋಷ ದೂರಳು. ವಿರಿಂಚ್ಯಾದಿಗಳನ್ನು ಸೃಷ್ಟಿಸಿದ, ಶ್ರುತಿ ಪ್ರಸಿದ್ಧಳೆಂದು ರಮಾಸ್ತೋತ್ರಗೈಯುತ್ತಾರೆ.

**ಈತಗಿಂ(ನಿಂ) ತಾನಂತಗುಣದಲಿ |**
**ಶ್ರೀತರುಣಿ ತಾ ಕಡಿಮೆಯೆನಿಪಳು |**
**ನೀತ(ತ್ಯ) ಮುಕ್ತಳು ನಿರ್ವಿಕಾರೀ(ರಳು) ತ್ರಿಗುಣವರ್ಜಿತಳು |**
**ಧೌತಪಾಪ ವಿರಿಂಚಿ ಪವನರ |**
**ಮಾತೆಯೆನಿಪ ಮಹಾಲಕುಮಿ ವಿ |**
**ಖ್ಯಾತಳಾಗಿಹಳೆಲ್ಲ ಕಾಲದಿ ಶ್ರುತಿ ಪುರಾಣದೊಳು ||೪||**

**ಪದ್ಯಾರ್ಥ** :—ಈತಗಿಂತ = ಈತನಿಗಿಂತ = ಈತನು ಶಬ್ದ ಪ್ರಯೋಗವು ಸಾಕ್ಷಾತ್ಕಾರನಾದ ಬಿಂಬನು. ಎದುರಿಗೆ ದಾಸರಿಗೆ ಪ್ರತ್ಯಕ್ಷ ತೋರುವ ಬಿಂಬನಾದ ಹರಿಗೆ ದಾಸಾರ್ಯರು ತಂದೆ ಎಂಬ ಸಥೆಯಿಂದ ಈತನೆಂದು ಕರೆದುದು ಬಹು ಪ್ರೀತಿಯ ವಾಕ್ಯ. ಶ್ರೀ ಸಕಲರ ಬಿಂಬನೆ ಸ್ವಬಿಂಬನಾದ ಈ ಹರಿಯೇ ಎಂದರ್ಥ, ಅನಂತಾನಂತ ಗುಣದಲಿ, ಶ್ರೀತರುಣಿ ತಾ ಕಡಿಮೆ ಎನಿಪಳು = ಜ್ಞಾನಾನಂದಬಲಾದಿ ಗುಣಪೂರ್ಣನಾದ ವಿಷ್ಣುವಿಗೆ ಅನಂತ

ಎಂದು ಬಹು ಸಂಖ್ಯಾ ಗುಣದಿಂದ ಶ್ರೀತರುಣಿ=ಸದಾಸರ್ವಕಾಲ-ಪ್ರಾಯಾವಸ್ಥೆಯಲ್ಲಿ ಇರುವ ಶ್ರೀ ಲಕ್ಷ್ಮೀದೇವಿಯರು ಅನಂತಗುಣ ಕಡಿಮೆ ಎನಿಸುತ್ತಾಳೆ. ನೀತಮುಕ್ತಳು=ನಿತ್ಯಮುಕ್ತಳು. ಶ್ರೀಲಕ್ಷ್ಮೀದೇವಿಗೆ ಜೀವರಂತೆ ಸಾಧನವಿಲ್ಲ. ನಿರ್ವಿಕಾರಳು=ಮೂಲದಲ್ಲಿಯೂ ಅವತಾರದಲ್ಲೂ ಕಿಂಚಿತು ಭೇದವಿಲ್ಲ, ತ್ರಿಗುಣವರ್ಜಿತಳು=ಸತ್ವರಜತಮ ಪ್ರಕೃತಿ ಗುಣಬದ್ಧಳಲ್ಲ, ಜಡ ಗುಣಗಳಿಂದ ದೂರಳಾದ ಕಾರಣ ವಿಕಾರಶೂನ್ಯಳು, ತ್ರಿಗುಣಗಳಿಂದಲೇ ದೋಷ, ಯಾವಾಗ್ಗೆ ತ್ರಿಗುಣಗಳೇ ಇಲ್ಲದ ಕಾರಣ, ಧೌತಪಾಪಳು=ತೊಳೆದ ಹೋಗಲ್ಪಟ್ಟ ಪಾಪ ಉಳ್ಳವಳೆಂದು ಭಾವ, ಇದಲ್ಲದೇ ವಿರಿಂಚಿ ಪವನರ ಮಾತೆ=ಬ್ರಹ್ಮ ವಾಯುದೇವರನ್ನು ಹಡೆದ ತಾಯಿ ಎಂದಮೇಲೆ, ಸಕಲ ಜಗತ್ತು ಸೃಷ್ಟಿ, ಶ್ರೀಹರಿಯ ಅಧೀನಳಾಗಿ ಶ್ರೀಹರಿಯಾಜ್ಞೆಯಂತೆ ಮಾಡುವಳೆಂದು ಸೂಚಿತವಾಯಿತು. ಮಹಾಲಕುಮಿ=ಮಹತ್ ಶಬ್ದವು ಪೂರ್ಣ "ಯಮ್ ಕಾಮಯೇ ತಂ ತಂ" ಎಂದು ಮಹತ್ ಶಬ್ದ ಲಕುಮಿಗೆ ಪ್ರಯೋಗಿಸಿದ್ದಾರೆ. ಈ ಮಹಾಲಕುಮಿ ನಾಮದಿಂದಲೇ, ವಿಖ್ಯಾತಳಾಗಿಹಳೆಲ್ಲ ಕಾಲದಿ ಶ್ರುತಿಪುರಾಣದೊಳು=ಸಕಲ ವೇದಗಳಲ್ಲಿ, ಸಕಲ ಪುರಾಣಗಳಲ್ಲಿ, ಶ್ರೀ ಹರಿಯ ತರುವಾಯ ಮುಖ್ಯ ವೃತ್ತಿಯಿಂದ ಪ್ರಸಿದ್ಧಳಾಗಿಹಳು.

**ಭಾವಸೂಚನ :—**ಈತೇತಿ ॥ ಅತ್ರ ಪ್ರಮಾಣಂ ಶ್ರೀಮಚ್ಛಲಾರಿ ನೃಸಿಂಹಾಚಾರ್ಯಕೃತ ತಾರತಮ್ಯೋಕ್ತಿಕೌಸ್ತುಭಃ ॥ ಉಚ್ಯತೇ ॥ "ನಿತ್ಯಾವಿಯೋಗಿನೀ ಲಕ್ಷ್ಮೀಸ್ತದನಂತಗುಣಾಧಮೇತಿ "। ಧೌತ=ನಿರಸ್ತ । ಶ್ರುತಿಃ ಪ್ರಕೃತಿಃ ಪರಮಶ್ಚ ನಿತ್ಯಮುಕ್ತೌ ನಿತ್ಯೇ ಚ ಸರ್ವಗತಾವಿತಿ ಬೃಹಚ್ಛ್ರುತಿಃ॥ ಯಥಾ ಶ್ರೀ ನಿತ್ಯಮುಕ್ತಾಪೀತಿ ಬ್ರಹ್ಮಾಂಡಪುರಾಣ ॥ ೩ ॥

(ಶ್ರುತಿಪುರಾಣಗಳ ಆಧಾರವೂ ಸಹ ಜ್ಞಾನಿಗಳು ಕೊಟ್ಟಿದ್ದಾರೆ.)

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಈತ' ಇತಿ॥'ಈತ'—ಇವನ ॥ "ತತೋಽನಂತಾಂಶಹೀನಾ ಚ ಬಲ ಜ್ಞಾನಸುಖಾದಿಭಿಃ" ॥ ತಸ್ಮಾದನಂತಾಂಶಾ(ಽವರಾ) ರಮಾ ॥ 'ನೀತ' ನಿತ್ಯ ॥ 'ಧೌತ' (ಧೂತ) ನಿರಸ್ತ ॥ ಶ್ರುತೌ "ಅಹಂ ಸುವೇ ಪಿತರಮ್" ಇತಿ ಸ್ಮೋಕ್ತೇಃ ॥ "ತ್ವಂ ದೇವ ಶಕ್ತ್ಯಾ" ಇತಿ ಸ್ಮೃತೇಶ್ಚ ॥ ೪ ॥

## ಕನ್ನಡಾರ್ಥ

"ಬಲ ಜ್ಞಾನ ಸುಖ ಮುಂತಾದ ಒಂದೊಂದು ಗುಣದಲ್ಲಿಯೂ ಅಸಂ ತಾನಂತ ಅಂಶಗಳಿಗಿಂತಲೂ ಕಡಿಮೆಯವಳು." ಎಂದು ವಚನವಿರುವದರಿಂದ "ಶ್ರೀತರುಣಿ ತಾ ಕಡಿಮೆಯೆನಿಸಳು" ಎಂದು ಹೇಳಿರುತ್ತಾರೆ. 'ನೀತ' ಎಂಬ ಪದಕ್ಕೆ ನಿತ್ಯವೆಂದು ಅರ್ಥವನ್ನು ತಿಳಿದು 'ನೀತಮುಕ್ತಳು' ಎಂದರೆ ನಿತ್ಯಮುಕ್ತಳು ಎಂದು ಅರ್ಥವನ್ನು ತಿಳಿಯಬೇಕು. ಧೌತ ಶಬ್ದಕ್ಕೆ 'ನಾಶ ಮಾಡಲ್ಪಟ್ಟ' ಎಂದು ಅರ್ಥವನ್ನು ತಿಳಿಯಬೇಕು. ಅಂದರೆ "ನಾಶಮಾಡ ಲ್ಪಟ್ಟ ಪಾಪಗಳುಳ್ಳವರು ಅಥವಾ ಪಾಪನಾಶವುಳ್ಳವರು" ಎಂದು ಅರ್ಥವನ್ನು ಭಾವಿಸಬೇಕು. ಶ್ರುತಿಯಲ್ಲಿ "ನಾನು ಈ ಜಗತ್ತಿನ ಜನಕನೆನಿಸಿದ ಹಿರಣ್ಯ ಗರ್ಭ(ಚತುರ್ಮುಖ)ನನ್ನು ಪ್ರಸವಿಸುತ್ತೇನೆ" ಎಂಬುದಾಗಿ ಶ್ರೀಲಕ್ಷ್ಮೀ ದೇವಿಯವರ ಸ್ವಂತ ವಚನವಿರುವುದರಿಂದ "ವಿರಿಂಚಿ ಪವನರ ಮಾತೆಯೆನಿಪ" ಎಂದು ದಾಸರಾಯರು ಹೇಳಿದುದು ಅತ್ಯಂತ ಶ್ರುತಿ ಸಮ್ಮತವೆಂದು ತಿಳಿಯ ಬೇಕು. ಅಲ್ಲದೇ "ತ್ವಂ ದೇವ ಶಕ್ತ್ಯಾ" ಎಂಬ ಸ್ಮೃತಿವಾಕ್ಯವೂ ಇರುತ್ತದೆ ॥ ೪ ॥

ಅವತರಣಿಕಾ :—ಇನ್ನು ಬ್ರಹ್ಮವಾಯುದೇವರು ತಮ್ಮೊಳು ಸಮ ರಾದರೂ, ಶ್ರೀ ಲಕುಮಿ ದೇವಿಯಗಿಂತಲೂ, ಒಂದು ಕೋಟಿ ಸಜಾತಿ ಗುಣ ದಿಂದಲೂ, ವಿಜಾತಿ ಗುಣದಿಂದ ಅನಂತಾನಂತ ಗುಣ ಕಡಿಮೆ ಎಂದು ಬ್ರಹ್ಮ ವಾಯುಗಳ ಮಹಿಮೆ ವರ್ಣಿಸುತ್ತಾರೆ.

ಕಮಲಸಂಭವ ಪವನರೀರ್ವರು ।
ಸಮರು ಸಮವರ್ತಿಗಳು ರುದ್ರಾ ।
ದ್ಯಮರಗಣಸೇವಿತರು ಅಪರಬ್ರಹ್ಮನಾಮಕರು ॥
ಯಮಳರಿಗೆ ಮಹಲಕ್ಷ್ಮಿ ತಾನು ।
ತ್ತಮಳು ಕೋಟಿ ಸಜಾತಿ ಗುಣದಿಂ ।
ದಮಿತ ಸುವಿಜಾತ್ಯಧಮರೆನಿಪರು ಬ್ರಹ್ಮವಾಯುಗಳು ॥೫॥

ಪದ್ಯಾರ್ಥ :—ಕಮಲಸಂಭವ=ಪದ್ಮಕಲ್ಪದಲ್ಲಿ ಪದ್ಮನಾಭರೂಪಿ ಹರಿಯ ನಾಭಿಯ ಕಮಲದಿಂದ ಹುಟ್ಟಿದ, ಚತುರ್ಮುಖ ಬ್ರಹ್ಮದೇವರು;

ಪವನಃ=(ಪುನಾತೀತಿ ಪವನಃ) ಪವಿತ್ರವನ್ನಾಗಿ ಮಾಡುವ ವಾಯುದೇವರು, ಈರ್ವರು=ಇಬ್ಬರು, ಸಮರು=ಜ್ಞಾನಭಕ್ತ್ಯಾದಿಗಳಲ್ಲಿ ಸಮರು=ಸಮಾನರು, ಸಮವರ್ತಿಗಳು=ಸಮವರ್ತಿತುಂ ಶೀಲಮಸ್ಯ ಸಮವರ್ತೀ=ಈ ಉಭಯರು ಶ್ರೀಹರಿಯ ಜ್ಞಾನಾನಂದಾದಿ ಗುಣಕೀರ್ತನೆ ಮಾಡುವಲ್ಲಿ, ಶ್ರೀಹರಿಗೆ ಸಹಾಯಭೂತರಾಗಿ ಸೃಷ್ಟ್ಯಾದಿ ವ್ಯಾಪಾರಗಳಲ್ಲಿ, ಸಮಾನ ಒಂದೇ ಪ್ರಕಾರ ಚರಿಸುವ ಸ್ವಭಾವ ಉಳ್ಳವರು, ಸಮವರ್ತಿಗಳು, "ಎನಗೆ ನಿನ್ನಲಿ ಭಕ್ತಿ ಜ್ಞಾನವು ನಿನಿತಿಹವು ಪ್ರಾಣನಲಿ" ಎಂದು ದಾಸಾರ್ಯರ ಉಕ್ತಿ (ಬ್ರಹ್ಮ ಕಾಂಡವಚನ) ರುದ್ರಾದ್ಯಮರಗಣಸೇವಿತರು=ತಮಗಿಂತಲೂ ಅವರರಾದ ರುದ್ರಾದಿ ದೇವತೆಗಳ ಸಮೂಹದಿಂದ ಸಮೀಚೀನವಾಗಿ ಸೇವೆಗೊಳ್ಳುವರು. ಅಪರಬ್ರಹ್ಮನಾಮಕರು=ಪರಬ್ರಹ್ಮ ಶ್ರೀಹರಿ, ಅಪರಬ್ರಹ್ಮ=ಅಮುಖ್ಯವೃತ್ತಿಯಿಂದ ಶ್ರೀಹರಿಯಾಜ್ಞೆಯಿಂದ ಸೃಷ್ಟ್ಯಾದಿಗಳನ್ನು ಮಾಡುವರಾದುದರಿಂದ, ಅಪರ=ಪರ ಇತಿ ವಾ ಅಪರ ಎರಡನೇ ಬ್ರಹ್ಮ-ದ್ವಿತೀಯ ಈಶ್ವರರು, ಯಮಳರಿಗೆ=ಈ ಜೊತೆ ಜೋಡಿ ಪುರುಷರಿಗೆ, (ಯಮಳ ಶಬ್ದ ಅವಳಿ ಜವಳಿ ಎಂತ ಆಗುತ್ತದೆ) ಈ ಉಭಯರು ಜ್ಞಾನ ಭಕ್ತಿ ಬಲಾದಿಗುಣಗಳಿಂದ ಸಮವರ್ತಿಗಳಾದುದರಿಂದ ಈ ಉಭಯರು ಜತೆ ಸಮಾನ ಜೋಡಿ ಪುರುಷರೆಂದು ಭಾವ, ಮಹಲಕ್ಷ್ಮಿ=ಮಹತ್ತಾದ ಗುಣಗಳುಳ್ಳ ಶ್ರೀಲಕ್ಷ್ಮೀದೇವಿಯರು ಕೋಟಿ ಸಜಾತಿ ಗುಣದಿಂದ ತಾನುತ್ತಮಳು=ಸಜಾತೀಯ ಗುಣವೆಂದರೆ, ಬ್ರಹ್ಮ ವಾಯುಗಳಲ್ಲಿರತಕ್ಕ, ಒಂದೇ ವರ್ಗಕ್ಕೆ ಸೇರಿದ ಗುಣಗಳಿಂದ-ಒಂದು ಕೋಟಿ ಗುಣಗಳಿಂದ ಶ್ರೀಲಕ್ಷ್ಮೀದೇವಿಯರು ಉತ್ತಮರು, ಮತ್ತು ಲಕುಮಿ ದೇವಿಯರಿಗಿಂತ, ಅಮಿತಸುವಿಜಾತ್ಯಧಮರೆನಿಸುವರು ಬ್ರಹ್ಮ ವಾಯುಗಳು= ಬ್ರಹ್ಮದೇವರು, ವಾಯುದೇವರು ಶ್ರೀಮಹಾಲಕುಮಿಗಿಂತಲೂ, ಅಮಿತ= ಬಹಳ ಅನಂತ ಸು ವಿಜಾತಿ ಗುಣಗಳಿಂದ, ಬ್ರಹ್ಮ ವಾಯುಗಳಲ್ಲಿರದೇ ಇದ್ದ, ಒಂದೇ ವರ್ಗಕ್ಕೆ ಸೇರದ ಬೇರೆ ಜಾತಿಯ ಗುಣಗಳಿಂದ ಅನಂತ ಗುಣಗಳಿಂದ ಅಧಮರೆನಿಸುವರು.

ಇದಕ್ಕೆ ಸಜಾತೀಯ ವಿಜಾತಿ ವಿಷಯಕ್ಕೆ ಪ್ರಕಾಶ ಸಂಹಿತೆ ಪ್ರಮಾಣ (ಪ್ರ. ಸ. ಪ್ರಥಮ ಪರಿಚ್ಛೇದ ೧೧ನೇ ಅಧ್ಯಾಯ. ಗುಣತಾರತಮ್ಯ ವಿಭಾಗ) "ಜ್ಞಾನಾನಂದ ಬಲಾದ್ಯಾ ಯೇ ಗುಣಾಃ ಸಾಧರಣಾ ಮತಾಃ॥ ತೃಣಾದಿಬ್ರಹ್ಮ

ಪರ್ಯಂತೇಷ್ವಪಿ ಸಾಯೂಕರಾವಪಿ || ತಥಾಪಿ ನೀಚನೀಚೇಷು ಗುಣಾದೀಪ್ರೋಪಮಾಸ್ಮೃತಾಃ ||"

"ಸಾಧಾರಣಾ ಸಜಾತೀಯಾಃ" "ವಿಜಾತೀಯಾ ವಿಲಕ್ಷಣಾಃ" ಸ್ವತಂತ್ರತ್ವಂ ಸ್ವರಮಣತ್ವಂ ಸುಗುಣವ್ಯಾಪ್ತಿತಾ ತಥಾ || ಪರಾಪೇಕ್ಷಾದಿ ರಾಹಿತ್ಯಂ ನಿತ್ಯತೃಪ್ತಂ ಜಗದ್ಗುರೋಃ || ಸೃಷ್ಟ್ಯಾದಿಕರ್ತೃತಾದ್ಯಾಸ್ತು ವಿಜಾತೀಯಾ ಹರೌ ಮತಾಃ || ಅಕ್ಷರತ್ವಾದಯೋ ಮಾಯಾಂ ನೈವ ತೇ ಬ್ರಹ್ಮಣಿ ಸ್ಫುಟಿಷ್ | ಋಜುತ್ವಂ ಪ್ರಾಕೃತೋಚ್ಛಜಂ ನಿತ್ಯಾರ್ಥೇಷ್ವಭಿಮಾನಿತಾ| ಸರ್ವಾದಿಸತ್ಯತಾ ಲಿಂಗದೇಹೇ ಕಾರ್ಯಪತಿತ್ವತಾ || ನಿಷ್ಕಾಮ್ಯಯೋಗ್ಯತಾ ಪೂರ್ವಾಃ ವಿಜಾತೀಯಾ ಇತಿ ಸ್ಮೃತಾಃ || ಏತೇ ಹರೀರಯೋಃ ಪ್ರೋಕ್ತಾ ನೈವ ತೇ ವಿಶೇಷಯೋಃ || ಏವಮೇಷೂತ್ತಮೇ ಪ್ರೋಕ್ತಾಃ ವಿಜಾತೀಯಾ ನ ನೀಚಗಾಃ || ಸ ಹ್ಯನಂತತ್ವತಃ ತೇಷಾಂ ಮುಕ್ತಿರ್ನೈವ ಹಿ ಶಕ್ಯತೇ ||

**ಭಾವಸೂಚನ :**—ಕಮಲೇತಿ || ಅಪರೇತಿ || ಅಬ್ರಹ್ಮಣಃ ಪರೇ ಸರ್ವ ಇತ್ಯುಕ್ತೇಃ || ಕೋಟೀತಿ || ಮುಖ್ಯಪ್ರಾಣಾತ್ಮಕೋ ಬ್ರಹ್ಮಾ ಶ್ರಿಯಃ ಕೋಟಿಗುಣಾಧಮ ಇತಿ ವಚನಾತ್ || ೫ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಕಮಲ' ಇತಿ || "ಸಮಾನೌ ಬ್ರಹ್ಮಮಾರುತೌ || " ಸಮೇತಿ || ಬ್ರಹ್ಮಣಃ ವಾಯೌ, ತಸ್ಯ ತಸ್ಮಿನ್, ಇತಿ ಅನ್ಯೋನ್ಯಾನುಪ್ರವಿಷ್ಟೌ ತೌ|| 'ಅಪರಬ್ರಹ್ಮ' ಇತಿ || "ಬ್ರಹ್ಮಣೋ ದ್ವೇ ಶತಾಧಿಕೇ" ಇತ್ಯಸ್ಯ 'ಪರಾಪರ ಬ್ರಹ್ಮಣೀ' ಇತಿ ಪ್ರತ್ಯರ್ಥರತ್ನಮಾಲಾ || 'ಯಮಳ' ಯುಗ್ಮ || **'ಸಜಾತಿ'** ಜ್ಞಾನತ್ವೇನ, ಭಕ್ತಿತ್ವೇನ || **'ವಿಜಾತಿ'** ತಜ್ಜ್ಞಾನ. ತದ್ಭಕ್ತಿನಿಯಾಮಕತ್ವಂ ಚ ಇತಿ || ಯದ್ವಾ ಸಜಾತೀಯಾಃ ಜ್ಞಾನಾದಯಃ ವಿಜಾತೀಯಾಃ ಹರಿಗುಣಾಃ|| ಏತೇಭ್ಯಃ ಶ್ರೀಸ್ತು ಮುಕ್ತೇಭ್ಯಃ ಗುಣೈಃ ಕೋಟಿಗುಣೋತ್ತರಾ || ತತಃ ಕೋಟ್ಯಂಶೌ ಬ್ರಹ್ಮವಾಯೂ ||

ಅತ್ರ ಇಯಾನ್ ವಿಶೇಷಃ || ಅತ್ರ "ಉರಾಜಾಭ್ಯಾಂ ಕೋಟಿಗುಣೈಃ ಸಜಾತೀಯೈಃ ಉಚ್ಚಾ ಅಪಿ ತಜ್ಜನನೀ ವಿಜಾತೀಯಾಪರೋಕ್ಷೇ ಅಮಿತ

ತಯಾ ಪರಮಾ" ಇತಿ ಮತಮೇಕಮ್ ॥ ಅಪರಂ "ಕೋಟಿ ಶತಾದಿ ಪರಮ್ ನ ಅನಂತಪರಮ್ ॥ ಯೇನ ವಿಜಾತೀಯಕಲ್ಪನಾ ॥ ಕಿಂ ತು ಜ್ಞಾನಮಪಿ ಕೋಟಿಗುಣೋನ್ನತಮೇವ ॥ ನ ಚೈವಂ ಸತಿ "ಉಮಾ ಯಾವದನಂತಾಂಶಾನ್ ॥ ಇತಿ ಮೂಲೇನ ಲಕ್ಷ್ಮೀಃ ಭಗವತಃ ವಾಸುದೇವಸ್ಯ ಯಾವತಃ ಗುಣಾನ್ ಪಶ್ಯತಿ ತಾವತಾಂ ಅನಂತಧಾ ವಿಭಕ್ತಾನಾಂ ಏಕಮೇವ ವಿಭಾಗಂ ಬ್ರಹ್ಮಾ ಪಶ್ಯತಿ ॥ ತಸ್ಯಾಪಿ ಭಾಗಸ್ಯ ಅನಂತಧಾ ವಿಭಕ್ತಸ್ಯ ಏಕಮೇವ ಭಾಗಂ ಸರಸ್ವತೀ ಪಶ್ಯತಿ ॥ ಏವಂ ರುದ್ರೋಮಯೋಃ ಭಗವದ್ಗುಣದರ್ಶನೇ ತಾರತಮ್ಯಂ ಅವಗಂತವ್ಯಮ್ ಇತಿ ಸಮುದಾಹೃತಮೂಲೇನ ಸನ್ಯಾಯರತ್ನಾವಲ್ಯಾ ಚ ವಿರೋಧಃ ಇತಿ ವಾಚ್ಯಮ್ ॥ ತದುಭಯಂ ಸ್ಫುಟತಾಭಿಪ್ರಾಯಕಮ್ ॥ "ಪರಿಮಾಣೇ ಶತಗುಣೋಽಪಿ" ಇತ್ಯುಕ್ತ್ವಾ "ಅಗ್ನಿಜ್ವಾಲಾ ನ ದೀಪವತ್" ಇತ್ಯುಕ್ತೇಃ ॥ "ಯಾವತ್ ಜ್ಞಾನಂ ತಾವತೀ ಭಕ್ತಿಃ, ತಾವಾನ್ ಅನುಗ್ರಹಃ, ಯಾವಾನ್ ಅನುಗ್ರಹಃ ತಾವಾನ್ ಮೌಕ್ತಿಕಾನಂದಃ" ಇತಿ ಶ್ರುತಿಃ ಅಪಿ ಅನುಕೂಲಾ ಅಸ್ಮಾಕಂ" ಇತ್ಯುಕ್ತ್ವಾ ನೌ(ನ್ಯೋ)ಚಿತ್ಯಂ ಚಾದ್ಯಪಕ್ಷಸ್ಯ ವ್ಯುತ್ಪಾದ್ಯಾಪಿ ಪುನರಭ್ಯುಪಗಮಃ ತತ್ಪಕ್ಷಸ್ಯ ಪ್ರತೀಯತೇ ವಿವೃತೌ ॥ ಸಜಾತೀಯವಿಜಾತೀಯಾಪೇಕ್ಷಯಾ ಅನಂತಗುಣತಾರತಮ್ಯಮ್ ಕೇಚಿತ್ ಸಾಂಪ್ರದಾಯಿಕಾಃ" ಇತ್ಯುದಾಹೃತ್ಯ, ಅನಂತಗುಣವತ್ವಂ ಚ ಮಹಾಕಾಲ ಸಂವತ್ಸರ ಘಟಿಕಾ ಕ್ಷಣ ಲವಾದ್ಯಾನಂತ್ಯವತ್ ಸಂಭಾವನಾಭಿಪ್ರಾಯೇಣ" ಇತಿ ತದೀಯವಚನಾತ್ ॥ ಏತತ್ ಕಿಂನಿಬಂಧನಮ್ ? ಪಿ ಹಿ ತ ನ ಯನೋಽಹಂ ನ ಜಾನೇ ॥ ಪರಂ ತು ಗ್ರಂಥೇಽಸ್ಮಿನ್ ಗೂಹಿತಂ ಯದ್ಯತ್ ಆಕೃಷ್ಯ ಅಹಂ ಯಥಾಮತಿ ಗುರುರಾಜಸುಸುಧ್ವಾರ್ಯಕರುಣಾಲವಮಾತ್ರತಃ ವೀಣಾ ಇವ ಪ್ರತಿಸ್ಯ ಬಿಂಬಸ್ಯ ಕ್ರಿಯಾಂ ಸಂಪೂಜಯಾಮಿ ಇಹ ॥ ಯಥಾಹುಃ ಭಾವಪ್ರಕಾಶಿಕಾಚಾರ್ಯಾಃ "ವಾದೀ ಮಧ್ವಃ ಯಸ್ಯ ರಾಜಾ ಸೋಽಹಂ ತಸ್ಯ ಕೃಪಾಬಲಾತ್ ॥ ವಾದಿರಾಜೋ ನ ಸ್ವಶಕ್ತ್ಯಾ ವೀಣೇವ ರಚಯಾಮ್ಯಹಮ್" ಇತಿ ॥ ೫ ॥

## ಕನ್ನಡಾರ್ಥ

ಬ್ರಹ್ಮ ಹಾಗೂ ವಾಯುದೇವರು ಸಮಾನರು ; ಬ್ರಹ್ಮದೇವರು ವಾಯುದೇವರಲ್ಲ; ವಾಯುದೇವರು ಬ್ರಹ್ಮದೇವರಲ್ಲ; ಹೀಗೆ ಪರಸ್ಪರರಿಗೆ ಪರಸ್ಪರ

ದಲ್ಲಿ ಪ್ರತೀಕವಿರುವುದರಿಂದ ಸಮರು ಎಂದು ಸಿದ್ಧವಾಗುತ್ತದೆ. ಬ್ರಹ್ಮಸೂತ್ರದ ೩ನೇ ಅಧ್ಯಾಯದ ೪ನೇ ಪಾದದ ೧೧ನೆಯ ಸೂತ್ರದ ಭಾಷ್ಯದಲ್ಲಿ ("ವಿಭಾಗಃ ಶತವತ್" ಎಂಬ ಸೂತ್ರ ವ್ಯಾಖ್ಯಾನದಲ್ಲಿ) ಸೋಮಪಾನಾರ್ಹದೇವತೆಗಳನ್ನು ಹೇಳುತ್ತ "೯ ಕೋಟಿ ದೇವತೆಗಳಲ್ಲಿ ೧೦೦ ದೇವತೆಗಳು ಸೋಮಪಾನಾರ್ಹರು; ಅಲ್ಲದೇ ಇಬ್ಬರು ಬ್ರಹ್ಮರು ಸೋಮಪಾನವುಳ್ಳವರು;" ಎಂದು ನಿರೂಪಿಸಿರುತ್ತಾರೆ.

"ಇಬ್ಬರು ಬ್ರಹ್ಮರು" ಎಂಬುದಕ್ಕೆ 'ಪರ-ಅಪರ' ಎಂಬುದಾಗಿ ಪ್ರತ್ಯರ್ಥ ರತ್ನಮಾಲೆಯಲ್ಲಿ ವಿವರಿಸಿರುತ್ತಾರೆ. ಪರಬ್ರಹ್ಮನು ನಾರಾಯಣನೆಂದೂ ಅಪರಬ್ರಹ್ಮನು ಚತುರ್ಮುಖನೆಂದೂ ತಿಳಿಯಬೇಕು. ಆದುದರಿಂದ "ಬ್ರಹ್ಮ ವಾಯುದೇವರು" ಅಪರಬ್ರಹ್ಮರೆಂದು ಹೇಳಿರುತ್ತಾರೆ. 'ಯಮಳ' ಎಂಬ ಪದಕ್ಕೆ 'ಜೋಡಿ, ಎರಡು' ಎಂದು ಅರ್ಥ.

ಶ್ರೀಮಹಾಲಕ್ಷ್ಮೀದೇವಿಯ ಗುಣಗಳಿಗೂ, ವಾಯುಬ್ರಹ್ಮರ ಗುಣಗಳಿಗೂ ಸಾಜಾತ್ಯವು ಹೇಗೆ ಎಂದರೆ ಜ್ಞಾನಸ್ವರೂಪವಾದುದರಿಂದಲೂ, ಭಕ್ತಿಸ್ವರೂಪವಾದುದರಿಂದಲೂ ಲಕ್ಷ್ಮೀ ಬ್ರಹ್ಮರ ಜ್ಞಾನ ಭಕ್ತಿ ಮುಂತಾದ ಗುಣಗಳಿಗೆ ಸಾಜಾತ್ಯವಿರುತ್ತದೆ. ಎಂದು ತಿಳಿಯಬೇಕು.

ಶ್ರೀ ಮಹಾಲಕ್ಷ್ಮಿಯ ಗುಣಗಳಲ್ಲಿ ವಿಜಾತೀಯತೆಯು ಹೇಗೆಂದರೆ ಬ್ರಹ್ಮವಾಯುಗಳ ಜ್ಞಾನ, ಭಕ್ತಿ ಮುಂತಾದುವುಗಳನ್ನು ನಿಯಮಿಸುವುದು ಎಂದು ತಿಳಿಯಬೇಕು.

ಅಥವಾ ಸಜಾತೀಯ ಗುಣಗಳೆಂದರೆ ಜ್ಞಾನ ಮುಂತಾದುವುಗಳು ; ವಿಜಾತೀಯ ಗುಣಗಳೆಂದರೆ ಹರಿ ಗುಣಗಳು. ಶ್ರೀಯು ಕೋಟಿ (ಅನಂತ) ಗುಣಗಳಿಂದ ಮುಕ್ತರಿಂದಲೂ ಅಧಿಕಳು. ಬ್ರಹ್ಮವಾಯುಗಳು ರಮಾದೇವಿಗಿಂತ ಕೋಟ್ಯಂತರ ಕಡಿಮೆ ಗುಣವುಳ್ಳವರು." ಎಂದೂ ತಿಳಿಯಬೇಕು.

## ಇಲ್ಲಿ ವಿಶೇಷಾಂಶವಿರುತ್ತದೆ

"ಬ್ರಹ್ಮವಾಯುಗಳಿಂದ ಸಜಾತೀಯ ಕೋಟಿಗುಣಗಳಿಂದ ಶ್ರೀಮಹಾಲಕ್ಷ್ಮೀದೇವಿಯು ಅಧಿಕಳಾಗಿದ್ದರೂ, ಅವರು ವಿಜಾತೀಯವಾದ ಹರ್ಯಪರೋಕ್ಷಜ್ಞಾನದಲ್ಲಿ ವಿಶೇಷವಿಲ್ಲದಷ್ಟು ಕಟ್ಟು ಅಧಿಕರು" ಎಂದು ಒಂದು ಮತ.

"ಕೋಟಿ ಪದವು ಶತಮುಂತಾದವುಗಳಂತೆ ಸಂಖ್ಯಾಪರವು; ಅನಂತವೆಂದು ಅರ್ಥವಲ್ಲ. ಅನಂತಪರವಾದರೆ ಈ ವಿಜಾತೀಯ ಕಲ್ಪನೆಯನ್ನು ಮಾಡ ಬಹುದಾಗಿತ್ತು. ಜ್ಞಾನವೂ ಸಹ ಕೋಟಿಪಟ್ಟು ಅಧಿಕವೆಂದೇ ತಿಳಿಯ ಬೇಕು." ಎಂದು ಮತ್ತೊಂದು ಮತ.

ಹಾಗಾದರೆ—'ಉಮಾ ಯಾವದನಂತಾಂಶಾನ್' ಎಂಬುದಾಗಿ "ಪರ ಮಾತ್ಮನ ಎಷ್ಟು ಗುಣಗಳನ್ನು ಮಹಾಲಕ್ಷ್ಮಿಯು ನೋಡುತ್ತಾಳೋ, ಅವೆಲ್ಲ ಗುಣಗಳನ್ನು ಅನಂತವಾಗಿ ವಿಭಾಗಿಸಿದರೆ ಆಗುವ ಒಂದು ಅಂಶವನ್ನು ಮಾತ್ರ ಬ್ರಹ್ಮದೇವರು ನೋಡುತ್ತಾರೆ. ಬ್ರಹ್ಮದೇವರು ನೋಡಿದ ಆ ಭಾಗದ ಅನಂತ ಭಾಗಗಳಲ್ಲಿ ಒಂದು ಭಾಗವನ್ನು ಸರಸ್ವತೀದೇವಿಯರು ನೋಡುತ್ತಾರೆ. ಇದೇ ರೀತಿಯಾಗಿ ರುದ್ರ, ಉಮಾ, ಇವರುಗಳ ಜ್ಞಾನ ದಲ್ಲಿ ಇರುವ ತಾರತಮ್ಯವನ್ನು ತಿಳಿದುಕೊಳ್ಳಬೇಕು." ಎಂದು ಹೇಳುವ ಮೂಲ ಅನುವ್ಯಾಖ್ಯಾನ ನ್ಯಾಯರತ್ನಾವಳಿಗಳಿಂದ ವಿರೋಧ ಬರುವ ದೆಂದು ಹೇಳಬಹುದು. ಆದರೆ ಸ್ಪಷ್ಟತೆಯನ್ನು ತಿಳಿಸಿಕೊಡುವದರಲ್ಲಿ ತಾತ್ಪರ್ಯವಿದೆಯೆಂದು ಉತ್ತರಿಸಲಾಗುತ್ತದೆ. 'ಆನಂದಾದಿಗಳ ಪರಿಮಾಣ ದಲ್ಲಿ ಶತಗುಣ ಅಧಿಕವಾಗಿದ್ದರೂ' ಎಂದು ಮುಂತಾಗಿ ಹೇಳಿ, 'ಅಗ್ನಿ ಜ್ವಾಲೆಯು ದೀಪದಂತೆ ಇರುವದಿಲ್ಲ; ಎಂದು ಹೇಳಿರುವದರಿಂದ ಜ್ಞಾನದಷ್ಟು ಭಕ್ತಿ, ಭಕ್ತಿಯಷ್ಟು ಅನುಗ್ರಹ; ಅನುಗ್ರಹದಷ್ಟು ಮುಕ್ತಿಯಲ್ಲಿ ಸುಖ' ಎಂದು ಹೇಳುವ ಶ್ರುತಿಯೂ ನಮಗೆ ಅನುಕೂಲವಾಗುತ್ತದೆ ಎಂದೂ ಹೇಳಿ, ಮೊದಲನೆಯ ಪಕ್ಷಕ್ಕೆ ಅನೌಚಿತ್ಯವನ್ನು ತೋರಿಸಿದ್ದರೂ ಸಹ ಅದೇ ಪಕ್ಷವನ್ನೇ ಅಂಗೀಕರಿಸುವದು ಅಲ್ಲಿಯ ವಿವೃತಿಯಲ್ಲಿ ಕಂಡುಬರುತ್ತದೆ.

"ಸಜಾತೀಯ ಹಾಗೂ ವಿಜಾತೀಯ ಗುಣಗಳಲ್ಲಿಯೂ ಅನಂತ ಗುಣಾಧಿಕಳು" ಎಂದು ಕೆಲವರು ಸಾಂಪ್ರದಾಯಿಕರು ಹೇಳುತ್ತಾರೆ." ಎಂದು ಉದಾಹರಿಸಿ-"ಮಹಾಕಾಲ, ಸಂವತ್ಸರ, ಘಳಿಗೆ, ಕ್ಷಣ, ಲವ ಮುಂತಾದವು ಗಳಿಗೆ ಇರುವಂತೆ ಆನಂತ್ಯವು ಸಂಭಾವನೆಯ ಅಭಿಪ್ರಾಯದಿಂದ ಇರುತ್ತದೆ" ಎಂದು ಅಲ್ಲಿಯೇ ವಚನವಿದೆ. ಆದುದರಿಂದ ವಿರೋಧವಿಲ್ಲ.

ಹೀಗೆ ಕಲ್ಪಿಸುವದು ಏಕೆ? ಎಂದು ಪ್ರಶ್ನಿಸಿದರೆ ಕಣ್ಣುಮುಚ್ಚಿರುವ ನಮಗೆ ತಿಳಿಯದು ಎಂದು ಉತ್ತರಕೊಡುತ್ತೇನೆ. ಆದರೆ ಈ ಗ್ರಂಥದಲ್ಲಿ

೨೦೦ನೇ ಬ್ರಹ್ಮಕಲ್ಪಕ್ಕೆ ಸರಸ್ವತೀ ಪದಕ್ಕೆ ಬರುವರಾದ ಕಾರಣ ಪದ= ಅಧಿಕಾರಸ್ಥಾನ ನಿಮಿತ್ತಮಾತ್ರ ಹೆಚ್ಚಿನವಳು, ಹೇಗೆಂದರೆ, ವಿಧಿಮಾರುತರ ಓಲ್ ಚಿಂತಿಪದು=ಹೇಗೆ ಬ್ರಹ್ಮದೇವರು ವಾಯುದೇವರಿಗಿಂತಲೂ ಬ್ರಹ್ಮ ಪದದಿಂದ ಮಾತ್ರ ಹೆಚ್ಚಿನವರೋ, ಅವರಂತೆ ಸರಸ್ವತೀದೇವಿಯು ಭಾರತೀ ದೇವಿಗಿಂತ ಪದ ನಿಮಿತ್ತ ಹೆಚ್ಚಿನಾಕೆಯು, ಬಲ ಜ್ಞಾನ ಆನಂದ ಭಕ್ತ್ಯಾದಿ ಗಳಲ್ಲಿ ಬ್ರಹ್ಮ ವಾಯುಗಳಂತೆ ಈ ಇಬ್ಬರೂ ಸಮಾನರು ಈ ಸುಜ್ಞಾನದಿಂದ, ಕೋವಿದರು=ತಿಳಿದವರು, ಜ್ಞಾನಿಗಳು, ಸದ್ಭಕ್ತಿಯಲಿ=ಸಮೀಚೀನವಾದ ಒಳ್ಳೇ ಸುದೃಢ ಸ್ನೇಹದಿಂದ ಚಿಂತನೆ ಮಾಡುವದೆಂದು ಉಪದೇಶಿಸಿದ್ದಾರೆ.

**ಭಾವಸೂಚನ ||** ಪತೀತಿ || ವಾಣೀ ಹಿ ಭಾರತೀರೂಪಾ ವಿಧೇಶ್ವತ **ಗುಣಾಧಮೇತ್ಯುಕ್ತೇಃ || ೬ ||**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಪತಿ' ಇತಿ || 'ಬಲ' ಇತಿ | ಹರಿಸ್ವರೂಪಭೂತತದಪರೋಕ್ಷೇ || "ಶಿವಾದಾಶಾ ಶತೈರ್ಮಾಸ್ಯಾಃ ಮುಖ್ಯವಾಯುಃ ಶತೋತ್ತರಾ" || ಇತಿ ಛಾಂದೋಗ್ಯೇ || ಹರೇ ಅಪರೋಕ್ಷಜ್ಞಾನವಿಷಯೇ ತ್ವನಂತಾಂಶನ್ಯೂನೇ "ಉಮಾ ಯಾವದಿತ್ಯುಕ್ತೇಃ ಕ್ಷೈತತ್ ಕೇಚಿದಿತ್ಯುಕ್ತ್ಯಾ "ಸಂಪದ್ರಾಯ ವಿದಸ್ತು" ಇತ್ಯಾದಿನಾ ಜ್ಞಾನೇ ಆನಂದೇ ಚ ಈರಾಜಾಭ್ಯಾಂ ತಪ್ರಮುಖ್ಯೋಃ ಶತಾಂಶನ್ಯಾನ್ಯಮೇವ || "ಚಂದ್ರೇತ್ಯಾದಿ ಸ್ವರೂಪಾಯಾಃ ತೇಭ್ಯಃ ಶತ ಗುಣಾವರಾಃ || ವಿಷ್ಣುಭಕ್ತಾ ಚ ತತ್ಪ್ರೀತಾ ಜ್ಞಾನಾನಂದಾದಿಕೇಷ್ವಪಿ || ಮುಕ್ತೇಃ ಪಶ್ಚಾದಪಿ ಗುಣೈಃ ಸರ್ವಂ ಬ್ರಹ್ಮಭ್ಯ ಈರಿತಾಃ || " ಇತಿ ಬೃಹ ದ್ಭಾಷ್ಯಾತ್. ಇತಿ ತಾರತಮ್ಯವಿವೃತಿಃ ಕೃತಾ || "ತತ್ಪತ್ನ್ಯೌ ತಚ್ಛತಾವರೇ|| ಪದೇತಿ || ಕಿಂಚಿದೂನತೇತ್ಯುಕ್ತೇಃ || ಗಾಯತ್ರೀವದ್ ಭಾರತೀಮ್" ಇತಿ ಚ || ೬ ||

## ಕನ್ನಡಾರ್ಥ

ಛಾಂದೋಗ್ಯೋಪನಿಷದ್ಭಾಷ್ಯದಲ್ಲಿ "ರುದ್ರನಿಗಿಂತ ಭಾರತೀ (ವಿದಾ) ದೇವಿಯು ನೂರು ಗುಣದಿಂದ ಅಧಿಕಳು. ಭಾರತೀದೇವಿಗಿಂತಲೂ ನೂರು ಗುಣಗಳಿಂದ ಮುಖ್ಯ ಪ್ರಾಣದೇವರು ಅಧಿಕರು." ಎಂಬುದಾಗಿ ಹೇಳಿರುವ

ಲಿಂದ "ಪತಿಗಳಿಂದ ಭಾರತೀ ಸರಸ್ವತಿಗಳು ಅಧಮರು ನೂರು ಗುಣ" ಎಂದು ವಾಸರಾಯರು ನಿರೂಪಿಸಿರುತ್ತಾರೆ. "ಅಂದು ಪಿಪೀಲಿಕ ಅಂತರಾತ್ಮ ಜ್ಞಾನದಲ್ಲಿ ಅನಂತಾಂಶಗಳಿಂದ ಕಡಿಮೆಯವರು"; "ಉಮಾ ಯಾವದನು ತಾಂಶಾನ್' ಎಂದು ಹೇಳಲಾಗಿದೆ" ಎಂದು ಕೆಲವರು ಹೇಳುತ್ತಾರೆ" ಎಂದು ಮೇಲೆ "ಸಂಪ್ರದಾಯ ಬಲ್ಲವರು ಜ್ಞಾನ ಹಾಗೂ ಆನಂದಗಳಲ್ಲಿ ಬ್ರಹ್ಮವಾಯು ಗಳ ದೆಸೆಯಿಂದ ಸರಸ್ವತೀ ಭಾರತೀ ದೇವಿಯರು ಶತಾಂಶ (ನೂರುಗುಣ) ಗಳಿಂದಲೇ ಕಡಿಮೆಯವರು." ಯಾಕೆಂದರೆ—"ದ್ರೌಪದೀ ಚಂದ್ರಾ ಇತ್ಯಾದಿ ಸ್ವರೂಪರಾದ ಶ್ರೀ ಸರಸ್ವತಿ ಹಾಗೂ ಭಾರತೀದೇವಿಯರು ವಿಷ್ಣುಭಕ್ತಿ, ಪ್ರೀತಿ, ಜ್ಞಾನ, ಆನಂದ ಮುಂತಾದ ಸಕಲ ಗುಣಗಳಲ್ಲಿಯೂ ನೂರು ಗುಣ ಗಳಿಂದ ಹೀನರು. ಮುಕ್ತಿಯನಂತರದಲ್ಲಿಯೂ ಇದು (ಈ ನ್ಯೂನತೆಯು) ಇರುತ್ತದೆ." ಎಂದು ಬೃಹದಾರಣ್ಯಕಭಾಷ್ಯದಲ್ಲಿ ವಚನವಿರುತ್ತದೆ. ಎಂದು ತಾರತಮ್ಯ ನಿರ್ಣಯದಲ್ಲಿ ಹೇಳಲಾಗಿರುತ್ತದೆ. ಬ್ರಹ್ಮವಾಯುಗಳ ಪತ್ನಿಯರು ಅವರಿಂದ ನೂರು ಗುಣಗಳಿಂದ ಕಡಿಮೆಯವರು.

ವಾಯುಪದ ಬ್ರಹ್ಮಪದಗಳಲ್ಲಿ ಪೂರ್ವಾಪರಭಾವವಿದ್ದು, ಅನ್ಯೋನ್ಯ ನ್ಯೂನಾಧಿಕ್ಯವಿರುವಂತೆ ಭಾರತೀ ಸರಸ್ವತಿಯರಲ್ಲೂ ಪದವಿಯಲ್ಲಿ ನ್ಯೂನಾಧಿಕ್ಯ ವಿರುವದೆಂದು ತಿಳಿಯಬೇಕು. ಸರಸ್ವತಿ ಭಾರತಿಯರು ಯೋಗ್ಯತೆಯಲ್ಲಿ ಸಮರೆಂದು ತಿಳಿಯಬೇಕು. ||೬||

ಅವತರಣಿಕಾ:—ಇನ್ನು ಗರುಡ, ಶೇಷ, ರುದ್ರರು ತಮ್ಮೊಳಗೆ ಸಮ ರಾದವರು. ವಾಣೀದೇವಿಗೆ ಶತ ಗುಣ ಕಡಿಮೆ. ಮತ್ತು ಶ್ರೀವಿಷ್ಣುವಿನ ಆರು ಜನ ಹೆಂಡರು ಜಾಂಬವತ್ಯಾದಿಗಳು ಶೇಷಾದಿಗಳಿಗೆ ಐದು ಗುಣ ಕಡಿಮೆ ಎಂದು ಉಪದೇಶಿಸುತ್ತಾರೆ.

ಖಗಪ ಫಣಿಪತಿ ಮೃಡರು ಸಮ ವಾ |
ಣಿಗೆ ಶತ ಗುಣಾವರರು ಮೂವರು |
ಮಿಗಿಲೆನಿಸುವನು ಶೇಷ ಷಡುವಿಂಗಳಿ ತ್ರಿಯಂಬಕಗೆ ||

**ನಗಧರನ ಷಣ್ಮಹಿಷಿಯರು ಪ।**
**ನ್ನಗ ವಿಭೂಷಣಗೈದು ಮೇನಕಿ ।**
**ಮಗಳು ವಾರುಣಿ ಸೌಪರಣಿಗಳಿಗಧಿಕ(ರಿ)ವೆರಡು ಗುಣ॥೭॥**

**ಪದ್ಯಾರ್ಥ:**—ಖಗಪ=ಆಕಾಶದಲ್ಲಿ ಚರಿಸುವ ಪಕ್ಷಿ ಶ್ರೇಷ್ಠ ಗರುಡ ದೇವರು, ಫಣಿಪತಿ=ಸರ್ಪಗಳಿಗೆ ಶ್ರೇಷ್ಠ ಒಡೆಯನಾದ ಶೇಷದೇವರು, ಮೃಡರು=ಮೃಡಯತಿ ಸುಖಯತೀತಿ ಮೃಡಃ=ಲೋಕಕ್ಕೆ ಸುಖವನ್ನು ಕೊಡುತ್ತಾನಾದುದರಿಂದ ಮೃಡನೆಂದು ಶಿವ, ರುದ್ರರಿಗೆ ಹೆಸರು. ಗರುಡ-ಶೇಷರುದ್ರರು ಮೂವರು ತಮ್ಮೊಳಗೆ ಸಮರಾಗಿರುವರು. ವಾಣಿಗೆ ಶತಗುಣಾ ವರರು=ಶ್ರೀಸರಸ್ವತೀದೇವಿಯರಿಗೆ ಮೂವರು ಒಂದು ನೂರು ಗುಣದಿಂದ ಕಡಿಮೆ ಎನಿಸುವರು. ತ್ರಿ ಅಂಬಕಗೆ=ಮೂರು ನೇತ್ರವುಳ್ಳ ರುದ್ರದೇವರಿಗೆ, ಶೇಷನು=ಶೇಷದೇವರು, ಪದದಿಂದ ಮಿಗಿಲೆನಿಸುವನು=ರುದ್ರನೇ ಶೇಷ ಪದ=ಅಧಿಕಾರಸ್ಥಾನಕ್ಕೆ ಬಂದು ಮುಕ್ತನಾಗುವ ಕಾರಣ ಶೇಷದೇವರು ರುದ್ರನಿಂದ ಪದಪ್ರಯುಕ್ತ ಮಾತ್ರ ಅಧಿಕರು. ನಗಧರನ ಷಣ್ಮಹಿಷಿಯರು= ಗೋವರ್ಧನ ಪರ್ವತವನ್ನು ಎತ್ತಿದ ಶ್ರೀಕೃಷ್ಣಪರಮಾತ್ಮನ ಆರು ಮಂದಿ ಹೆಂಡರು, ನೀಲಾ-ಭದ್ರಾ-ಮಿತ್ರವಿಂದಾ-ಜಾಂಬವತಿ-ಕಾಳಿಂದಿ-ಲಕ್ಷಣಾ ಈ ಆರು ಜನರು, ಪನ್ನಗವಿಭೂಷಣ=ಶೇಷನೇ ಅಲಂಕಾರವಾಗಿ ಉಳ್ಳ ರುದ್ರ ದೇವರಿಗೆ ಐದುಗುಣ, ಅವರಿಂದು ಆವರ್ತನ ಮಾಡಿಕೊಳ್ಳಬೇಕು, ಮೇನಕಿ ಮಗಳು=ಹಿಮವತ್ಪರ್ವತನ ಹೆಂಡತಿ ಮೇನಕಿಯ ಮಗಳು ಪಾರ್ವತೀದೇವಿ (ರುದ್ರಪತ್ನಿ) ವಾರುಣಿ (ಶೇಷಪತ್ನಿ) ಸೌಪರಣಿ (ಗರುಡಪತ್ನಿ) ಯರಿಗೆ ಈ ಆರು ಜನರು ೨ (ಎರಡು) ಗುಣ ಹೆಚ್ಚಿನವರೆಂದು ಹೇಳಿದ್ದಾರೆ. (ಜಾಂಬವತಿ ಯಲ್ಲಿ ಸಂತತಲಕ್ಷ್ಮೀ ಆವೇಶವಿದ್ದಕಾರಣ ಕಿಂಚಿತ್ ಅಧಿಕಳೆಂದು ಪ್ರಮಾಣ)

**ಭಾವಸೂಚನ** ॥ ಖಗೇತಿ ॥ ರುದ್ರಾತ್ಮಶೇಷತಾರ್ಕ್ಷ್ಯಾಸ್ತ್ವ ವಾಣ್ಯಾಃ ಶತಗುಣಾಧಮಾಃ ॥ ಇತಿ ॥ ಮಿಗೆ ಹೆಚ್ಚು ನಗ ಗೋವರ್ಧನ ॥ ಷಣ್ಣಸ್ತ್ರಿಯೋ ಜಾಂಬವತೀ ನೀಲಾ ಭದ್ರಾ ಚ ಲಕ್ಷಣಾ ॥ ಕಾಳಿಂದೀ ಮಿತ್ರವಿಂದಾ ಚ ಶೇಷಾತ್ ಪಂಚಗುಣಾಧಮಾ ಇತಿ ವಚನಾತ್ ॥ ಉಮಾತ್ಮವಾರುಣೀ ತಾರ್ಕ್ಷ್ಯ ಸೌಪರ್ಣ್ಯಾದೇಃ ಷಟ್‌ಸ್ತ್ರಿಯೋ ದ್ವಿಗುಣಾಧಿಕಾಃ ॥ ೭ ॥

## ವ್ಯಾಸದಾಸ ಸಿದ್ಧಾಂತ ಕೌಮುದೀ

'ಖಗ' ಇತಿ । 'ಸಮ' ಪರಸ್ಪರಮ್ ॥ ಶೇಷ ಇತ್ಯಸ್ಯಾನಂತರಂ ಶ್ರೀಪ್ರಾಣೇಶ್ವರ್ಯೌ ಗುಣ್ಯೈಃ ಸರ್ವೈಃ ತಾಭ್ಯಾಂ ಶತಗುಣಾವರಾಃ ॥ ತಜ್ಜ್ಞ ತಾಂ ಬಾ ಶೇಷರುದ್ರವೀಂದ್ರಾಃ ॥ 'ಮಿಗಿಲು' ಅಧಿಕ ॥ ನಗಃ ಗೋವರ್ಧನ ॥ ಷಟ್ ಸ್ತ್ರಿಯಃ ಗರುಡಾದಿಭ್ಯಃ ಪಂಚಗುಣಾಧಮಾಃ ಸೌಪರ್ಣ್ಯಾದೇಃ ದ್ವಿಗುಣಾಧಿಕಾಃ ॥ ಅಧಿಕಂ ಚ ವಿವೃತೌ ಜ್ಞೇಯಮ್ ॥ "ಮೇನಕಾ ಹಿಮವದ್ಭಾರ್ಯಾ ಸರ್ವ ಏತೇ ದಶೋತ್ತರಾಃ ॥ ತತ್ಪಂಚಮಾಂಶಕಾಃ" । ಕೃಷ್ಣಸ್ಯ ಜಾಂಬವತ್ಯಾದ್ಯಾಃ ಷಟ್ ಸ್ತ್ರಿಯೋಥ ತದರ್ಧಕಾಃ । ಉಮಾದ್ಯಾಃ ॥೭॥

## ಕನ್ನಡಾರ್ಥ

ಗರುಡ, ಶೇಷ, ರುದ್ರ ಇವರು ಪರಸ್ಪರ ಸಮಾನರು. ಇವರು ಸರಸ್ವತಿ ಹಾಗು ಭಾರತೀದೇವಿಯರಿಂದ ನೂರು ಗುಣ ಕಡಿಮೆಯವರು. ಭಾರತಿ ಸರಸ್ವತಿಯರ ನೂರನೆಯ ಭಾಗಕ್ಕೆ ಜ್ಞಾನ ಮುಂತಾದ ಗುಣದಿಂದ ರುದ್ರ ಶೇಷ ಗರುಡರು ಸಮಾನರಾಗುತ್ತಾರೆ. 'ನಗಧರನ ಷಣ್ಮಹಿಷಿಯರು' ಎಂಬಲ್ಲಿ 'ನಗಧರ' ಎಂದರೆ ಗೋವರ್ಧನ ಬೆಟ್ಟವನ್ನು ಧರಿಸಿದ ಶ್ರೀಕೃಷ್ಣನು, ಅವನ 'ಷಣ್ಮಹಿಷಿಯರು' ಎಂದರೆ ಜಾಂಬವತಿ, ನೀಲಾ, ಲಕ್ಷ್ಮಣಾ, ಮಿತ್ರವಿಂದಾ, ಕಾಳಿಂದೀ ಇವರುಗಳು ಎಂದು ಅರ್ಥವನ್ನು ತಿಳಿಯಬೇಕು. ಶ್ರೀಕೃಷ್ಣನ ಜಾಂಬವತಿ ಮುಂತಾದ ೬ ಮಂದಿ ಹೆಂಡತಿಯರು (ರುಕ್ಮಿಣೀ ಸತ್ಯಭಾಮೆಯರನ್ನು ಬಿಟ್ಟು ಉಳಿದವರು) ಗರುಡ ಶೇಷ ರುದ್ರರಿಂದ ಐದು ಗುಣಗಳಿಂದ ಕಡಿಮೆಯವರು ಮತ್ತು ಸೌಪರ್ಣಿ ವಾರುಣೀ ಉಮಾ ಇವರುಗಳಿಂದ ಎರಡು ಗುಣ ಅಧಿಕರು. ಎಂದು ಅಭಿಪ್ರಾಯವನ್ನು ತಿಳಿಯಬೇಕು.

ಹೆಚ್ಚಿನ ಸಂಗತಿಯನ್ನು ವಿವೃತಿಯಲ್ಲಿ ತಿಳಿಯಬೇಕು. ಹಿಮವಂತನ ಮಡದಿ (ಹೆಂಡತಿ) ಮೇನಕೆ, ಮೇನಕೆಯ ಮಗಳು ಉಮಾ (ಪಾರ್ವತಿ) ಎಂದು ತಿಳಿಯತಕ್ಕದ್ದು.

ಕೃಷ್ಣಪತ್ನಿಯರು ಜಾಂಬವತಿ ಮುಂತಾದವರು ಐದು ಗುಣಗಳಿಂದ ಶೇಷಾದಿಗಳಿಗೆ ಕಡಿಮೆಯವರೂ, ಉಮಾ ವಾರುಣೀ ಸೌಪರ್ಣಿಯರಿಗೆ ಎರಡು ಗುಣಗಳಿಂದ ಹೆಚ್ಚಿನವರೂ ಎಂದು ಪ್ರಮಾಣಗಳಿರುತ್ತವೆ. ||೭||

**ಅವತರಣಿಕಾ :**—ಈ ಪದ್ಯದಲ್ಲಿ ಗರುಡಾದಿಗಳ ಪತ್ನಿಯರು ಸೌಪರ ಣ್ಯಾದಿ ಮೂರು ಜನರು ತಮ್ಮ ಪತಿಗಳಿಂದ ಹತ್ತು ಗುಣ ಕಡಿಮೆ, ಮತ್ತು ಸೌಪರಣ್ಯಾದಿಗಳಿಂದ ಇಂದ್ರಕಾಮರು ಹತ್ತು ಗುಣ ಕಡಿಮೆಯೆಂದು ಹೇಳು ತ್ತಾರೆ.

**ಗರುಡಶೇಷ ಮಹೇಶರಿಗೆ ಸೌ।**
**ಪರಣಿ ವಾರುಣಿ ಪಾರ್ವತಿ ಮೂ।**
**ವರು ದಶಾಧಮ ವಾರುಣಿಗೆ ಕಡಿಮೆನಿಸುವಳು ಗೌರೀ॥**
**ಹರನ ಮಡದಿಗೆ ಹತ್ತು ಗುಣದಲಿ।**
**ಸುರಪ ಕಾಮರು ಕಡಿಮೆ ಇಂದ್ರಗೆ।**
**ಕೊರತೆಯೆನಿಸುವ ಮನ್ಮಥನು ಪದದಿಂದಲಾವಾಗ॥ ೮॥**

**ಪದ್ಯಾರ್ಥ :**—ಗರುಡ=ಗರುಡದೇವರು, ದೇವರ ವಾಹನ, ಶೇಷ= ಶೇಷದೇವರು, ದೇವರ ಹಾಸಿಗೆ, ಮಹೇಶರಿಗೆ=ರುದ್ರದೇವರು, ಈ ಮೂವ ರಿಗೆ, ಸೌಪರಣಿ=ಗರುಡ ಪತ್ನಿ, ಸೌಪರಣಿದೇವಿ, ವಾರುಣೀ=ಶೇಷಪತ್ನಿ ವಾರುಣೀದೇವಿ, ಪಾರ್ವತೀ=ರುದ್ರದೇವರ ಪತ್ನಿ ಪಾರ್ವತೀದೇವಿಯು ಈ ಮೂವರು, ದಶಾಧಮ=ಈ ಮೂರು ಜನರು ಹತ್ತು ಗುಣ ಕಡಿಮೆ, ಇದರಲ್ಲಿ ವಾರುಣೀದೇವಿಗೆ, ಗೌರೀ=ರುದ್ರಪತ್ನಿ ಪಾರ್ವತೀದೇವಿಯು ಕಿಂಚಿತು ಕಡಿಮೆ ಎನಿಸುತ್ತಾಳೆ. ಈ ರುದ್ರದೇವರು ಮುಂದಿನ ಕಲ್ಪ ಶೇಷ ಪದವಿಗೆ ಬಂದಾಗ್ಗೆ ಗೌರೀಪಾರ್ವತೀದೇವಿಯು ವಾರುಣಿಯಾಗುತ್ತಾಳೆ. ಕಾರಣ ಕಿಂಚಿತ್ತು ಕಡಿಮೆ. ಹರನ ಮಡದಿಗೆ=ರುದ್ರದೇವರ ಹೆಂಡತಿ ಉಮಾದೇವಿ ಯರಿಗೆ, ಸುರಪ=ದೇವತೆಗಳ ಒಡೆಯ ಇಂದ್ರ ದೇವರು ಮತ್ತು ಕಾಮ ದೇವರಿಬ್ಬರು ಹತ್ತು ಗುಣದಲಿ ಕಡಿಮೆ=ಹತ್ತು ಗುಣದಿಂದ ಅವರರು ಎಂದು ಕರೆಸುತ್ತಾರೆ. ಇಂದ್ರಗೆ=ಸ್ವರ್ಗಾಧಿಪತಿಯಾದ ಇಂದ್ರ ದೇವರಿಗೆ, ಮನ್ಮಥನು=ಕಾಮದೇವರು, ಪದದಿಂದ=ಪದಪ್ರಯುಕ್ತ ಅಧಿಕಾರವಿದ್ದ ಕ್ಷಯಾ, ಕೊರತೆಯೆನಿಸುವನಾವಾಗ=ಇಂದ್ರಪದ ಕಾಮಪದಕಿಂತಲೂ ಸ್ವಲ್ಪ ಹೆಚ್ಚಿನದು ಕಾರಣ, ಪದದಿಂದ ಕಡಿಮೆ ಎನಿಸುತ್ತಾನೆ.

ಭಾವಸೂಚನ ||ಗರುಡೇತಿ ||ಸ್ವಭರ್ತೃಭ್ಯಾಂ ದಶನೂನ ಇತ್ಯುಕ್ತೇಃ || ಸುಪರ್ಣೇತಿ || ಇಂದ್ರೋನಃ ಕಾಮ ಇಂದ್ರಪ್ರಷ್ಟ ಸೌಪರ್ಣ್ಯಾದ್ಯಾಸ್ತು ದಶಾಧಮ ಇತ್ಯುಕ್ತೇಃ || ೮ ||

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

'ಗರುಡ' ಇತಿ || ಮಾನಮುಕ್ತಮ್ || "ಕರೋತಿ ಪ್ರಾಯಃ ಇಂದ್ರವತ್ ಕಾಮಃ" ಇತಿ ಪ್ರಾಯಗ್ರಹಣೇನ ಏಷು ನ್ಯೂನಃ ಇತಿ ಚ ಉಕ್ತೇಃ|| ಕಾಮಾವತಾರಃ ಕುಮಾರಃ "ಸನತ್ಕುಮಾರಃ ತು ಸದಾ ಪುರಂದರಸಮೋ ಮತಃ ||" ಇತಿ ಚೋಕ್ತೇಃ || ವಿಶೇಷಸ್ತು ಅನ್ಯತ್ರ ಜ್ಞೇಯಃ || ತಾಭ್ಯ ಇಂದ್ರಸ್ತು ದಶಮಾಂಶಃ | ತತಃ ಸ್ಮರಃ ಕಿಂಚಿತ್ ನ್ಯೂನಃ ||೮||

## ಕನ್ನಡಾರ್ಥ

"ಗರುಡ ಶೇಷ ರುದ್ರರುಗಳಿಗೆ ಸೌಪರ್ಣಿ ವಾರುಣಿ ಉಮಾ ಇವರು ೧೦ (ಹತ್ತು) ಗುಣಗಳಿಂದ ಕಡಿಮೆಯವರು", ಈ ವಿಷಯದಲ್ಲಿ ಹಿಂದಿನ ಪದ್ಯವ್ಯಾಖ್ಯಾನದಲ್ಲಿ ಪ್ರಮಾಣವನ್ನು ಉದಾಹರಿಸಿರುತ್ತಾರೆ. "ಇಂದ್ರನಂತೆ ಪ್ರಾಯಃ ಕಾಮನು ಕಾರ್ಯ ಮಾಡುತ್ತಾನೆ" ಎಂಬಲ್ಲಿ "ಪ್ರಾಯಃ ಬಹುಶಃ" ಎಂದು ಹೇಳುವುದರಿಂದ ಕಾಮನು ಇಂದ್ರನಿಗಿಂತ ಕಡಿಮೆಯವನು (ಪದ ನಿಮಿತ್ತವಾಗಿ) ಎಂದು ಪ್ರಮಾಣಗಳು ಹೇಳುತ್ತವೆ.

ಇನ್ನೊಂದು ಸಂದರ್ಭದಲ್ಲಿ "ಕಾಮಾವತಾರನಾದ ಸನತ್ಕುಮಾರನು ಸದಾ ಪುರಂದರನಿಗೆ (ಇಂದ್ರನಿಗೆ) ಸಮಾನನು" ಎಂದೂ ಹೇಳಲಾಗಿರುತ್ತದೆ.

ಸೌಪರ್ಣಿ ಮುಂತಾದವರಿಂದ ಇಂದ್ರನು ಹತ್ತು ಗುಣಗಳಿಂದ ಕಡಿಮೆಯವನು. ಆ ಇಂದ್ರನಿಗಿಂತ ಕಾಮನು ಸ್ವಲ್ಪ ನ್ಯೂನ–ಕಡಿಮೆಯವನು. ಎಂದೂ ಪ್ರಮಾಣಗಳು ಹೇಳುತ್ತವೆ.

ಹೆಚ್ಚಿನ ತಾರತಮ್ಯ ವಿವರಣೆಯನ್ನು ಬೇರೆ ಗ್ರಂಥಗಳಲ್ಲಿ ನೋಡಬೇಕು || ೮ ||

ಅವತರಣಿಕಾ :— ಇನ್ನು ಇಂದ್ರಕಾಮರಿಗಿಂತಲೂ, ಅನಿರುದ್ಧನಿಗಿಂತ ತನ್ನ [illegible] ಪ್ರಾಣರನ್ನು ಹತ್ತು ಗುಣ ಕಡಿಮೆ [illegible] ಕಾರಕ

ಪ್ರಾಣದೇವರಿಗಿಂತಲೂ ೧೦ನೇ ಕಕ್ಷದಲ್ಲಿರತಕ್ಕ ಅನಿರುದ್ಧಾದಿ ೬ ಜನರು ಹತ್ತು ಗುಣದಿಂದ, ಈ ಆರು ಜನರಿಂದ ಪ್ರವಾಹ ವಾಯುದೇವರು ಐದು ಗುಣ ಕಡಿಮೆಯೆಂದು ಹೇಳುತ್ತಾರೆ.

**ಈರಯಿದು ಗುಣ ಕಡಿಮಿ ಅಹಂ।**
**ಕಾರಿಕ ಪ್ರಾಣನು ಮನೋಜ ನ।**
**ಗಾರಿಗಳಿಗನಿರುದ್ಧ ರತಿ ಮನು ದಕ್ಷ ಗುರು ಶಚಿಯು॥**
**ಆರು ಜನ ಸಮ ಪ್ರಾಣನಿಂದಲಿ।**
**ಹೌರಗೆನಿಪರು ಹತ್ತು ಗುಣದಲಿ।**
**ಮಾರಜಾದ್ಯರಿಗೈದುಗುಣದಿಂದಧಮ ಪ್ರವಹಾಖ್ಯ ॥ ೯ ॥**

**ಪದ್ಯಾರ್ಥ :—**ಅಹಂಕಾರಿಕ ಪ್ರಾಣ=ತ್ವಗಭಿಮಾನಿ ಅಹಂಕಾರಿಕ ಪ್ರಾಣದೇವರು, ಮನೋಜ=ಕಾಮ, ನಗಾರಿ=ನಗ ಪರ್ವತಗಳ ವೈರಿ ಇಂದ್ರದೇವರು ಇಬ್ಬರಿಗಿಂತಲೂ, ಈರಯಿದು ಗುಣ ಕಡಿಮೆ=ಹತ್ತು ಗುಣ ಕಡಿಮೆ, ಪ್ರಾಣನಿಂದಲಿ=ಈ ಅಹಂಕಾರಿಕ ಪ್ರಾಣದೇವರಿಂದ ೧೦ನೇ ಕಕ್ಷದಲ್ಲಿರುವ, ಅನಿರುದ್ಧ=ಕಾಮದೇವರ ಮಗ, ರತಿ=ಕಾಮಪತ್ನಿ, ಮನು=ಸ್ವಾಯಂಭುವ ಮನು, ಗುರು=ದೇವತೆಗಳ ಗುರು ಬೃಹಸ್ಪತ್ಯಾಚಾರ್ಯರು, ಶಚಿಯು=ಇಂದ್ರ ಪತ್ನಿ ಶಚಿದೇವಿಯರು, ಆರು ಜನರು (ಸಮರು) ಇವರಾರ್ವರು ಅಹಂಕಾರಿಕ ಪ್ರಾಣನಿಂದ, ಹತ್ತು ಗುಣದಲಿ=ಹತ್ತು ಗುಣದಿಂದ, ಹೌರಗೆನಿಪರು=ಕಡಿಮೆ ಎನಿಸುವರು, ಈ ಮಾರಜಾದ್ಯರಿಗೆ=ಈ ಕಾಮ ಪುತ್ರ ಅನಿರುದ್ಧಾದಿ ಆರುಜನಕ್ಕೆ, ಪ್ರವಹಾಖ್ಯ=ಪ್ರವಹ ನಾಮಕ ವಾಯುದೇವರು (೧೧ನೇ ಕಕ್ಷದಲ್ಲಿರುವರು) ಐದು ಗುಣದಿಂದ ಅಧಮ=ಐದು (೫) ಗುಣಗಳಿಂದ ಅವರನೆನಿಸುತ್ತಾನೆ.

**ಭಾವಸೂಚನ॥** ಈರೈದೇತಿ ॥ಹತ್ತು॥ ಮನೋಜ=ಕಾಮ॥ನಗಾರಿ-ಇಂದ್ರ॥ "ತತ ಅಹಂಕಾರಿಕಃ ಪ್ರಾಣಃ ಕಾಮಾತ್ ದಶಗುಣಾಧಮಃ॥ ತತ ಸ್ವಾಯಂಭುವೋ ಹ್ಯನಿರುದ್ಧೋ ಬೃಹಸ್ಪತಿಃ॥ ಶಚೀರತಿಸ್ತಥಾ ಪ್ರಾಣಾನ್ಮತಾ ದಶ ಗುಣಾಧಮಾಃ॥ಮಾರಜ ಅನಿರುದ್ಧಃ। ಪ್ರವಹೋ ಮುಖ್ಯದಾರುಜಃ॥ ಆತಿವಾಹಿಕ ಇತ್ಯುಕ್ತೋ ಗುರೋಃ ಪಂಚಗುಣಾಧಮಃ।ಇತಿ ಲೌಸ್ತುಭೇ ॥೯॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಉದ್ಧೃತು' ಇತಿ ॥ 'ಹತ್ತು' 'ಸರ್ವ' (ದರ್ಪ) ಇತ್ಯುಕ್ತೇಃ ॥ ಮನೋಜ ನಗಾರಿ'—ಕಾಮೇಂದ್ರೌ ॥ ಮನುರ್ದಕ್ಷೋ ಬೃಹಸ್ಪತಿಃ ॥ ಶಚಿ ರತಿಶ್ಚಾನಿರುದ್ಧ ಸಮಾಃ" ॥ ಇತ್ಯನುಭಾಷ್ಯೇ ॥ 'ಹೌರ' ಕಡಿಮೆ ॥ 'ಸರ್ವ' ಇತಿ ರತಿಪುತ್ರ ಪ್ರಾಣೇ ಅನಿರುದ್ಧಸ್ಯ ಶವಾಪ್ರಯೋತ್ಪತ್ತಿಃ ಯುಕ್ತಾ ಇತಿ ಉಕ್ತಂ ಛಾಂದ ಬೋಧೇ ॥ 'ಮಾರಜಃ' ಅನಿರುದ್ಧಃ ॥ ಅನಿರುದ್ಧಃ ಅನಿಲಾತ್ ಪಂಚಗುಣಾಧಿಕಃ ॥" ಇತಿ ಛಾಂದೋಗ್ಯೇ ॥ "ಶಕ್ರಾತ್ ಸ್ಯಾತ್ ಅಹಂಕಾರಿಕ ಪ್ರಾಣತಃ ॥ ದಶಮಾಂಶಃ ತತೋ ದಕ್ಷಃ ಶಚೀಗುರ್ವನಿರುದ್ಧಕಾಃ ॥ ರತೀ ಸ್ವಾಯಂಭುವ ಮನುಃ ಷಡೇತೇ ದಶಮಾಂಶಕಾಃ ॥ ಪ್ರವಹಃ ತತ್ಪಂಚಮಾಂಶಃ ॥" ॥೯॥

## ಕನ್ನಡಾರ್ಥ

ಮನೋಜಃ-ಕಾಮ ; ನಗಾರಿ=ಪರ್ವತ ಶತ್ರು-ಇಂದ್ರ. "ಮನು, ದಕ್ಷ, ಬೃಹಸ್ಪತಿ, ಶಚಿ, ರತಿ, ಅನಿರುದ್ಧ ಇವರುಗಳು ಪರಸ್ಪರ ಸಮರು" ಎಂದು ಅನುವ್ಯಾಖ್ಯಾನದಲ್ಲಿ ಹೇಳಲಾಗಿರುತ್ತದೆ. ಮಾರಜ-ಕಾಮಪುತ್ರ ನಾದ ಅನಿರುದ್ಧ, ಅನಿರುದ್ಧ ಮುಂತಾದವರು "ಪ್ರಾಣನಿಂದಲಿ ಹೊರಗೆನಿಪರು" ಎಂದರೆ "ಹತ್ತು ಗುಣಗಳಿಂದ ಕಡಿಮೆಯುಳ್ಳವರು ಎಂದು ಹೇಳಿಸಿಕೊಳ್ಳುತ್ತಾರೆ." ಎಂದು ಅರ್ಥ. "ಅನಿರುದ್ಧನು ಪ್ರವಹವಾಯುವಿಗೆ ಐದು ಗುಣಗಳಿಂದ ಅಧಿಕನು." ಎಂದು ಛಾಂದೋಗ್ಯ ಭಾಷ್ಯದಲ್ಲಿ ಹೇಳಲಾಗಿರುತ್ತದೆ. "ಇಂದ್ರ ನಿಗಿಂತ ಅಹಂಕಾರಿಕ ಪ್ರಾಣನು ಹತ್ತು ಗುಣಗಳಿಂದ ಕಡಿಮೆಯವನು. ಆ ಅಹಂಕಾರಿಕ ಪ್ರಾಣನಿಗೆ ದಕ್ಷ, ಶಚಿ, ಗುರು, ಅನಿರುದ್ಧ, ರತಿ, ಸ್ವಾಯಂ ಭುವ ಮನು, ಇವರು ಹತ್ತು ಗುಣಗಳಿಂದ ಕಡಿಮೆಯವರು. ಇವರುಗಳಿಗೆ ಐದು ಗುಣಗಳಿಂದ ಪ್ರವಹನು ಕಡಿಮೆಯವನು." ಎಂದು ಪ್ರಮಾಣಗಳಿರು ವದರಿಂದ ಈ ಅಭಿಪ್ರಾಯವನ್ನು ತಿಳಿಯಬೇಕು. ॥೯॥

**ಅವತರಣಿಕಾ:**—ಇನ್ನು ಪ್ರವಹವಾಯುವಿಗೆ, ಸೂರ್ಯ ಚಂದ್ರ ಯಮ ದೇವರು ಮತ್ತು ಸ್ವಾಯಂಭುವ ಮನು ಪತ್ನಿ ಶತರೂಪಾದೇವಿ ನಾಲ್ವರು ಐದು ಗುಣ ಕಡಿಮೆ, ಈ ನಾಲ್ವರಿಂದ ವರುಣದೇವರು ಅರಾಣೆ

ಭಾಗ, ವರುಣನಿಂದ ನಾರದ ಮುನಿಗಳು ಒಂದು ಕಾಲುಭಾಗ ಗುಣ, ನಾರದ ರಿಂದ ಭೃಗ್ವಾದಿಗಳು ಅರ್ಧ ಪಾದ ಗುಣದಿಂದ ಕಡಿಮೆಯೆಂದು ಹೇಳುತ್ತಾರೆ.

**ಗುಣದ್ವಯದಿಂ ಕಡಿಮೆ(ಮಿ) ಪ್ರವಹಗೆ।**
**ಇನ ಶಶಾಂಕ ಯಮಸ್ವಯಂಭುವ।**
**ಮನು ಮಡದಿ ಶತರೂಪ ನಾಲ್ವರು ಪಾದ ಪಾದಾರ್ಧ॥**
**ವನಧಿ ನೀಚ ಪದಾರ್ಧ ನಾರದ।**
**ಮುನಿಗೆ ಭೃಗ್ವಗ್ನಿ ಪ್ರಸೂತಿಗ।**
**ಳೆನಿಸುವರು ಪಾದಾರ್ಧ ಗುಣದಿಂದಧಮರಹುದೆಂದು ॥೧೦॥**

**ಪದ್ಯಾರ್ಥ :**—ಗುಣದ್ವಯದಿಂ ಕಡಿಮೆ ಪ್ರವಹಗೆ=ಮರುತ ಪುತ್ರ ನಾದ ಪ್ರವಹ ವಾಯುದೇವರಿಗೆ, ಇನ=ವಿವಸ್ವಾನ್ ನಾಮಕ ಸೂರ್ಯ, ಶಶಾಂಕ=ಮೊಲದ ಚಿಹ್ನೆಯುಳ್ಳ ಚಂದ್ರಮ, ಯಮ=ಯಮದೇವರು, ಸ್ವಾಯಂಭುವ ಮನು ಮಡದಿ=ಸ್ವಾಯಂಭುವ ಮನುವಿನ ಹೆಂಡತಿ ಶತ ರೂಪಾದೇವಿಯರು ನಾಲ್ವರು ೧೩ನೇ ಕಕ್ಷದಲ್ಲಿ ಇರುವರು, ಪ್ರವಹಗೆ ಎರಡು ಗುಣದಿಂದ ಕಡಿಮೆ ಇರುವರು. ಈ ನಾಲ್ವರಿಂದ, ವನಧಿ=ಸಮುದ್ರಾಧಿ ಪತಿ ವರುಣದೇವರು, ಪಾದ=ಒಂದು ಗುಣದಲ್ಲಿ ನಾಲ್ಕು ಭಾಗಕ್ಕೆ ೪ ಆಣೆ ಭಾಗಕ್ಕೆ ಪಾದ, ಮತ್ತು ಪಾದಾರ್ಧಃ=ನಾಲ್ಕಾಣೆಯಲ್ಲಿ ಅರ್ಧ ಎರಡಾಣೆ ಒಟ್ಟಿಗೆ ಆರು ಆಣೆ ಭಾಗ ಗುಣದಿಂದ ನೀಚ=ಅವರ ಕಡಿಮೆ, ಮತ್ತು ವರುಣದೇವರಿಂದ ೧೪ನೇ ಕಕ್ಷದಲ್ಲಿದ್ದ ನಾರದ ಮಹರ್ಷಿಗಳು ಪದಾರ್ಧ= ಎರಡಾಣೆ ೧/೮ ಗುಣದಿಂದ, ಮತ್ತು ಈ ನಾರದರಿಗೆ ೧೫ನೇ ಕಕ್ಷದಲ್ಲಿರುವ, ಭೃಗ್ವಗ್ನಿ ಪ್ರಸೂತಿಗಳೆನಿಸುವರು ಪಾದಾರ್ಧಗುಣದಿಂದಧಮರಹುದೆಂದು= ಭೃಗು ಋಷಿಗಳು, ಅಗ್ನಿದೇವರು, ದಕ್ಷಪ್ರಜೇಶ್ವರ ಪತ್ನಿ ಪ್ರಸೂತಿ ದೇವಿಯರು, ಮೂರು ಜನ ಪಾದಾರ್ಧ=೧|೮ ಭಾಗ ಗುಣದಿಂದ ಎಂದೆಂದಿಗೂ, ಮುಕ್ತಿ ಯಲ್ಲಿ ಸಹ, ಅಧಮರು=ಅವರರೆಂದು ಶಾಸ್ತ್ರಸಮ್ಮತವೆಂದು ಹೇಳಿದ್ದಾರೆ.

**ಭಾವಸೂಚನ** ॥ ಗುಣದ್ವಯೇತಿ ॥ ವಿವಸ್ವಾಂಶ್ಚ ಯಮಶ್ಚಂದ್ರಃ ಶತ ರೂಪಾ ಚ ಮಾನವೀ । ಗುರೋರ್ದಶಾಧಮಾ ಪ್ರೋಕ್ತಾಃ ಪ್ರವಹ ದ್ವಿಗುಣಾ ಧಮಾ ಇತಿ ವಚನಾತ್ ॥ ಪಾದಪಾದಾರ್ಧಾ ವನಧಿ ವರುಣ ನೀಚ

ಕಡಿಮೆಯವನು ಎಂದು ಅರ್ಥವಾಗುತ್ತದೆ. ನಾರದನು ವರುಣನಿಗೆ ಸ್ವಲ್ಪ ಕಡಿಮೆಯವನೂ, ಅಗ್ನಿಗೆ ಸ್ವಲ್ಪ ಹೆಚ್ಚಿನವನೂ ಇರುತ್ತಾನೆ. ಭೃಗು ಪ್ರಸೂತಿಯರು ಅಗ್ನಿಗೆ ಸಮರು." ಎಂದು ಪ್ರಮಾಣಗಳು ಹೇಳುತ್ತವೆ.॥೧೦॥

**ಅವತರಣಿಕಾ :—** ಅಗ್ನಿದೇವರಿಗೆ ಬ್ರಹ್ಮಪುತ್ರ ಮರೀಚ್ಯಾದಿ ಸಪ್ತ ಋಷಿಗಳು, ವಿಶ್ವಾಮಿತ್ರ, ವೈವಸ್ವತ ಮನು ೨ ಗುಣ ಕಡಿಮೆ. ಇದರಲ್ಲಿ ವೈವಸ್ವತ ಮನು ವಿಶ್ವಾಮಿತ್ರಗೆ ಕಿಂಚಿತ್ ಗುಣಾಧಮ. ಇವರೆಲ್ಲರಕಿಂತಲೂ ನಿಋತಿ, ತಾರಾ, ಪ್ರಾವಹಿ ಕಿಂಚಿತ್ ಗುಣ ಕಡಿಮೆ, ಈ ಮೂವರಿಗೆ ಗಣೇಶ ವಿಷ್ವಕ್‌ಸೇನಾದಿಗಳು ಕಿಂಚಿತು ಗುಣಾಧಮರೆಂದು ಹೇಳುತ್ತಾರೆ.

**ಹುತವಹಗೆ ದ್ವಿಗುಣಾಧಮರು ವಿಧಿ।**
**ಸುತ ಮರೀಚ್ಯಾದಿಗಳು ವೈವ।**
**ಸ್ವತನು ವಿಶ್ವಾಮಿತ್ರನಿ(ರಿ)ಗೆ ಕಿಂಚಿದ್ಗುಣಾಧಮನು॥**
**ವ್ರತಿವರ ಜಗನ್ಮಿತ್ರವರ ನಿರು।**
**ಋತಿ ಪ್ರಾವಹಿ ತಾರರಿಗೆ ಕಿಂ।**
**ಚಿತು ಗುಣಾಧಮ ಧನಪವಿಷ್ವಕ್ಸೇನರೆನಿಸುವರು ॥೧೧॥**

**ಪದ್ಯಾರ್ಥ:—** ಹುತವಹಗೆ = ಅಗ್ನಿದೇವರಿಗೆ, ವಿಧಿಸುತ ಮರೀಚ್ಯಾದಿಗಳು = ಬ್ರಹ್ಮಪುತ್ರರಾದ, ಮರೀಚಿ, ಅತ್ರಿ, ಅಂಗಿರ, ಪುಲಸ್ತ್ಯ, ಪುಲಹ, ಕ್ರತು, ವಶಿಷ್ಠ ಈ ೭ ಜನ ಋಷಿಗಳು, ವೈವಸ್ವತ ಮನು, ವಿಶ್ವಾಮಿತ್ರ ಋಷಿಗಳು, ಈ ೯ ಜನರು ಎರಡು ಗುಣಗಳಿಂದ ಕಡಿಮೆ ಎನಿಸುತ್ತಾರೆ. ವ್ರತಿವರ = ವಿಷ್ಣುವ್ರತದಲ್ಲಿ ಹೆಚ್ಚಿಗೆ ನಿರತರಾದ ಮರೀಚ್ಯಾದಿಗಳಿಗಿಂತಲೂ, ಜಗನ್ಮಿತ್ರವರ = ಮಿತ್ರನಾಮಕ ಸೂರ್ಯ ಜಗತ್ತನ್ನು ಪ್ರಕಾಶ ಮಾಡುವವನು. ನಿರುಋತಿ = ನಿರುಋತಿಕೋಣಕ್ಕೆ ಅಧಿಪತಿ; ಪ್ರಾವಹಿ = ಪ್ರವಾಹ ವಾಯುದೇವರ ಪತ್ನಿ, ತಾರಾ = ಬೃಹಸ್ಪತ್ಯಾಚಾರ್ಯರ ಪತ್ನಿ, ಇವರು ನಾಲ್ವರು, ಮರೀಚ್ಯಾದಿಗಳಿಗೆ ಕಿಂಚಿತು ಕಡಿಮೆ, ಈ ನಾಲ್ವರಾದ ೧೭ನೇ ಕಕ್ಷದಲ್ಲಿ ಪೇಳಿದ ಮಿತ್ರ, ನಿಋತಿ, ತಾರಾದೇವಿ ಪ್ರಾವಹಿಗಿಂತಲೂ, ಧನಪ = ಕುಬೇರ, ವಿಷ್ವಕ್‌ಸೇನ = ವಾಯುಪುತ್ರ, ಗಣೇಶಾದಿಗಳು ೧೮ನೇ ಕಕ್ಷದವರು ಮಿತ್ರಾದಿ ನಾಲ್ವರಿಗೆ ಕಿಂಚಿತು ಗುಣ ಅವರರೆಂದು ಕರೆಸುತ್ತಾರೆ.

**ಭಾವಸೂಚನ** ॥ ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ॥ ವಸಿಷ್ಠಶ್ಚೈತ್ಯಜಸುತಾ ವೈವಸ್ವತಮನುಸ್ತಥಾ ॥ ವಿಶ್ವಾಮಿತ್ರೋ ವಹ್ನಿನೀಚಾ ಮಿತ್ರಾತ್ಕಿಂಚಿದ್ಗುಣಾಧಿಕಾಃ ॥೧೧॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

'ಹುತವಹ' ಇತಿ ॥ 'ಹುತವಹಃ' ಅಗ್ನಿಃ॥ಮರೀಚ್ಯತ್ರ್ಯಂಗಿರಃ ಪುಲಸ್ತ್ಯ ಪುಲಹ ಕ್ರತು ವಸಿಷ್ಠ ವೈವಸ್ವತವಿಶ್ವಾಮಿತ್ರಾಖ್ಯಾಃ ನವ ವಹ್ನೇಃ ದ್ವಿಗುಣಾವರಾಃ॥ಇವರಿಗೆ ಕಿಂಚಿದವರಾಃ ಋಷಿ, ಜಗನ್ಮಿತ್ರ ನಿಋತಿ ಪ್ರಾವಹಿ ತಾರಾಃ ಚತಸ್ರಃ॥ (ವಹ್ನೇಃ ದ್ವಿಗುಣಾವರಾಃ॥) (ಇವರಿಗೆ) ಕಿಂಚಿತ್ ನ್ಯೂನೌ ಧನಾಧಿಪವಿಘ್ನೇಶೌ ॥ ವಿಶ್ವಾಮಿತ್ರಮನ್ವೋಃ ಸಪ್ತಸಾಮ್ಯೇ—ವಿಶ್ವಾಮಿತ್ರಃ ಕಸೂರುವತ್ ॥ ವೈವಸ್ವತೋ ಮನುಶ್ಚೇತಿ" ಇತಿ ಭಾಷ್ಯಮ್ ॥ "ವಿಶ್ವಾಮಿತ್ರಃ ಬ್ರಹ್ಮಪುತ್ರೈಃ ಸಮೋ ಮುನಿಃ ಉದಾಹೃತಃ॥ ನಿಋತಿಃ ಮಿತ್ರ ಸದೃಶಃ ॥ ಋಷಿಸಪ್ತಕಸ್ಯ ಮಿತ್ರೋತ್ತಮತ್ವೇ ಅಗ್ನೇಃ ಅಧಮ್ಯೇ ಮಿತ್ರ ತನ್ಮಧ್ಯೇ ಬ್ರಹ್ಮಪುತ್ರಕಾಃ॥ಭೃಗುಃ ಅಗ್ನಿಸಮಃ ಇತ್ಯುಕ್ತಾಗ್ನಿಃ ತತ್ವದಾರ್ಢ್ಯಃ॥ ಬ್ರಹ್ಮಪುತ್ರಕಾಃ ಮರೀಚ್ಯಾದ್ಯಾಃ ಮಿತ್ರ ತನ್ಮಧ್ಯೇ ಮಿತ್ರಾಗ್ನ್ಯೋಃ ಮಧ್ಯೇ ಪರಸ್ಪರಂ ಸಮಾಃ॥ಮಿತ್ರೋತ್ತಮಾಃ ಅಗ್ನ್ಯವರಾಃ ಪರ್ಜನ್ಯಮಿತ್ರಶಿಖಿನಃ॥ ದ್ವಿಗುಣಾ ಏವ ಇತ್ಯುಕ್ತೇಃ॥ ದ್ವಿಗುಣಾ ಏವೇತಿ ಅಗ್ನೇಃ ದ್ವಿಗುಣಾಧಮಾಃ॥ ಚತಸೃಣಾಂ ಸಾಮ್ಯೇ ನವಭ್ಯಃ ಕಿಂಚಿತ್ ಅಧಮ್ಯೇ ಅಗ್ನೇಃ (ದ್ವಿ)ಗುಣ ದ್ವಯಾಧಮ್ಯೇ ಚ ಸಾರಸಂಗ್ರಹೇ "ಮರೀಚ್ಯಾದಿನವಭ್ಯಸ್ತು ಆದಿತ್ಯಃ ಮಿತ್ರ ನಾಮಕಃ॥ ಪತ್ನೀ ಸುರಗುರೋಃ ತಾರಾ ನಿಋತಿಃ ಪ್ರಾವಹೇತಿ ಚ॥ ಕಿಂಚಿ ದೂನಾಃ" ಇತ್ಯನಂತರಂ ವಹ್ನೇಃ ದ್ವಿಗುಣತಃ ನೀಚಾಃ ಚತ್ವಾರೋನ್ಯೋ ನ್ಯತಃ ಸಮಾಃ"॥ಇತಿ॥ಅಥಾಗ್ನಿತಃ ಮರೀಚ್ಯತ್ರ್ಯಂಗಿರಸೌ(ಸಃ) ಪುಲಸ್ತ್ಯಃ ಪುಲಹಃ ಕ್ರತುಃ॥ ವಿಶ್ವಾಮಿತ್ರವಸಿಷ್ಠೌ ತೌ ವೈವಸ್ವತಮನುಃ ತಥಾ॥ ನ್ಯೂನಾಃ ನವೇಮೇ ಮಿತ್ರಾತ್ತು ಕಿಂಚಿದೇವ ಗುಣಾಧಿಕಾಃ॥ಮಿತ್ರ ತಾರಾ ನಿಋತಯಃ ಪ್ರಾವಹೀ ಚಾಗ್ನಿತೋರ್ಧಕಾಃ"॥ಇತಿ॥೧೧॥

## ಕನ್ನಡಾರ್ಥ

ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ವೈವಸ್ವತಮನು, ವಿಶ್ವಾಮಿತ್ರ, ಇವರು ಅಗ್ನಿಗೆ ಎರಡು ಗುಣಗಳಿಂದ

ಕಡಿಮೆಯವರು. ಇವರಿಗೆ ಮಿತ್ರ (ನಾಮಕ ಆದಿತ್ಯ), ನಿಋತಿ, ಪ್ರಾವಹಿ ತಾರಾ ಇವರು ಸ್ವಲ್ಪ ಕಡಿಮೆಯವರು. ಈ ನಾಲ್ವರಿಗೆ ಕುಬೇರ ಹಾಗೂ ಗಣಪತಿಗಳು(ವಿಘ್ನೇಶ) ಸ್ವಲ್ಪ ಕಡಿಮೆಯವರು.

ವಿಶ್ವಾಮಿತ್ರ ಹಾಗೂ ವೈವಸ್ವತಮನು ಇವರಲ್ಲಿ ಪರಸ್ಪರ ಸಾಮ್ಯವಿರುವದರ ಬಗ್ಗೆ "ವಿಶ್ವಾಮಿತ್ರನು ಬ್ರಹ್ಮಪುತ್ರ ವಸಿಷ್ಠನಿಗೆ ಸಮನು. ಅದರಂತೆ ವೈವಸ್ವತ ಮನುವು" ಎಂದು ಭಾಷ್ಯವಚನವಿರುತ್ತದೆ. "ವಿಶ್ವಾಮಿತ್ರನು ಬ್ರಹ್ಮಪುತ್ರರಾದ ವಸಿಷ್ಠಾದಿಗಳಿಗೆ ಸಮಾನನಾದ ಮುನಿಯೆಂದು ಪ್ರಸಿದ್ಧನಾಗಿರುತ್ತಾನೆ. ನಿಋತಿಯು ಮಿತ್ರನಿಗೆ ಸಮಾನನು." ಸಪ್ತರ್ಷಿಗಳು ಮಿತ್ರನಿಗಿಂತ ಅಧಿಕರು; ಅಗ್ನಿಗಿಂತ ಕಡಮೆಯವರು; ಈ ವಿಷಯದಲ್ಲಿ-"ತನ್ಮಧ್ಯೇ ಬ್ರಹ್ಮಪುತ್ರಕಾಃ" "ಭೃಗುರಗ್ನಿಸಮಃ" ಎಂಬ ವಚನಗಳು ಆಧಾರವಾಗಿರುತ್ತವೆ.

"ಬ್ರಹ್ಮಪುತ್ರರಾದ ಮರೀಚಿ ಮುಂತಾದವರು ಮಿತ್ರ ಹಾಗೂ ಅಗ್ನಿ ಇವರ ಮಧ್ಯದಲ್ಲಿ ನಡುವೆ (ಮೇಲೆ ಅಗ್ನಿ ಕೆಳಗೆ ಮಿತ್ರ ಹೀಗೆ) ಇಪ್ಪು, ಪರಸ್ಪರ ಸಮಾನರಾಗಿರುತ್ತಾರೆ. ಅಂದರೆ ಅಗ್ನಿಗಿಂತ ಕಡಿಮೆಯವರೂ ಮಿತ್ರನಿಗಿಂತ ಹೆಚ್ಚಿನವರೂ ಆಗಿರುತ್ತಾರೆ." ಎಂದು ಈ ವಾಕ್ಯಗಳ ಅರ್ಥ.

ಮಿತ್ರಾದಿ ನಾಲ್ವರು ಅಗ್ನಿಗಿಂತ ೪ ಗುಣದಿಂದ ಕಡಿಮೆಯವರೂ ಪರಸ್ಪರ ಸಮರೂ ಎಂಬ ವಿಷಯದಲ್ಲಿ—"ಮರೀಚಿ ಮುಂತಾದ ಒಂಭತ್ತು ಜನರಿಂದ ಆದಿತ್ಯನಾಮಕ ಮಿತ್ರ, ಸುರಗುರು ಪತ್ನಿ ತಾರಾ, ನಿಋತಿ ಹಾಗೂ ಪ್ರಾವಹಿ ಇವರು ಸ್ವಲ್ಪ ಕಡಿಮೆಯವರು;" ಎಂದು ಹೇಳಿ, "ಅಗ್ನಿಗಿಂತ ಈ ಮರೀಚ್ಯಾದಿಗಳು ಎರಡು ಗುಣ ಕಡಿಮೆಯವರು; ಅವರಿಗಿಂತ ಮಿತ್ರ ಮುಂತಾದವರು ಕಿಂಚಿತ್ ನ್ಯೂನರು." ಎಂದೂ ಹೇಳಿರುತ್ತಾರೆ ಅಲ್ಲದೇ— "ಅಗ್ನಿಗಿಂತ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ವಿಶ್ವಾಮಿತ್ರ, ವೈವಸ್ವತಮನು ಇವರುಗಳು ಸ್ವಲ್ಪದರಲ್ಲಿಯೇ ಮಿತ್ರನಿಂದ ಅಧಿಕರು. ಮಿತ್ರ ಮುಂತಾದವರು ಅಗ್ನಿಗಿಂತ ಅರ್ಧ ಕಡಮೆಯವರು," ಎಂದೂ ತಾರತಮ್ಯ ಸಂಗ್ರಹದಲ್ಲಿ ಹೇಳಲಾಗಿರುತ್ತದೆ. ||೧೧||

**ಅವತರಣಿಕಾ:—**ಇನ್ನು ೧೮ನೇ ಕಕ್ಷದಲ್ಲಿಪ್ಪ ಕುಬೇರ, ವಿಷ್ವಕ್ಸೇನ ಗಣೇಶಾದಿಗಳಿಗೆ, ಸಮಾನರು ಯಾರೆಂಬುದನ್ನು ಮತ್ತು ಈ ಸಮಾನರಾದ

೮೫ ಜನ ಶೇಷ ಶತಸ್ಥರನ್ನೂ ವಿವರಿಸುತ್ತಾ ಸ್ತೋತ್ರ ಮಾಡುತ್ತಾರೆ. ಇಲ್ಲಿಯ ವರೆಗೆ ತತ್ತ್ವಾಭಿಮಾನಿ ದೇವತೆಗಳ ಕಕ್ಷ್ಯ ಮುಗಿಯಿತು.

**ಧನಪ ವಿಷ್ವಕ್ಸೇನ ಗೌರೀ ।**
**ತನಯರಿಗೆ ಉಕ್ತೇತರರು ಸಮ ।**
**ರೆನಿಸುವರು ಯೆಂಭತ್ತಯಿದು ಜನ ಶೇಷಶತರೆಂದು ।**
**ದಿನಪರಾರೇಳಧಿಕ ನಾಲ್ವ ।**
**ತ್ತನಿಳರೇಳ್ವಸು ರುದ್ರರೀರೈ ।**
**ದನಿತು ವಿಶ್ವೇದೇವ ಋಭು ಅಶ್ವಿನೀ ಪಿತೃ ಧರಣೀ ॥೧೨॥**

**ಪದ್ಯಾರ್ಥ** :—ಧನಪ=ಕುಬೇರ, ವಿಷ್ವಕ್ಸೇನ=ನಾರಾಯಣಪುತ್ರನೇ ದೇವತೆಗಳ ಸೇನಾಧಿಪತಿ, ಗೌರೀತನಯ=ಉಮಾದೇವಿ ಪಾರ್ವತೀದೇವಿಯರ ಪುತ್ರ ಗಣೇಶ ಈ ಮೂವರಿಗೆ, ಉಕ್ತೇತರರು=ಹಿಂದೆ ಹೇಳಿದ ೧೫ ಜನ ಉತ್ತಮರನ್ನು ಬಿಟ್ಟು ಎಂಭತ್ತಯಿದು ಜನ=೮೫ ಜನರು, ೧೦೦ ಜನ ಸೋಮಪಾನಾರ್ಹ ದೇವತೆಗಳಲ್ಲಿ ಉಳಿದವರು. ಶೇಷಶತರೆಂದು ೮೫ ಜನ ಕರೆಸುತ್ತಾರೆ. ಇವರೆಲ್ಲರೂ ಕುಬೇರಾದಿಗಳಿಗೆ ಸಮಾನರು. ಈ ೮೫ ಜನರಾರು ಎಂದರೆ ಅದರ ವಿವರ ಹೇಳುತ್ತಾರೆ.

ದಿನಪರು ಆರು=ಉಕ್ತೇತರರು ೬ ಜನ ಸೂರ್ಯರು.
ಏಳಧಿಕ ನಾಲ್ವತ್ತನಿಳ = ೪೯ ಜನ ಮರುತ್ತುಗಳು.
ಏಳ್ ವಸು = ೭ ಜನ ವಸುಗಳು.
ರುದ್ರರೀರೈದು = ೧೦ ಜನ ರುದ್ರರು.
ಅನಿತು ವಿಶ್ವೇದೇವ = ಅಷ್ಟೇ ೧೦ ಜನ ವಿಶ್ವೇದೇವತೆಗಳು.
ಋಭುಗಣ = ೧
ಅಶ್ವಿನಿಗಳು = ೨ ಜನ
ಪಿತೃಗಣ =೧
ಧರಣಿ =೧

———

೮೫ ಹೀಗೆ ೮೫ ಜನಗಳು ಶೇಷಶತರೆಂದು ಕರೆಸುತ್ತಾರೆ.

**ಭಾವಸೂಚನ** ॥ ತೇಷಾಂ ಮಧ್ಯೇ ಶತಸ್ಯ ತು ॥ ಸೋಮಾಧಿಕಾರ ಇತ್ಯುಕ್ತ ಶತದೇವತಾಸು-ಪಂಚದಶ ಉಕ್ತಾಃ ತದನ್ಯೇ ಪಂಚಾಶೀತಿಜನಾಃ ಪರಸ್ಪರಂ ಸಮಾಃ ॥ ಮಿತ್ರಾತ್ ಕಿಂಚಿನ್ನ್ಯೂನಾಃ ತಾನ್ ವಿಭಜತಿ ॥ ಯಷ್ಟೇತಿ ॥ತದುಕ್ತಂ ॥ "ಉರುಕ್ರಮೋ ವಾಯುರುದ್ರೌ ಶಕ್ರೋऽಹಂ ಕಾರಿಕೋ ಗುರುಃ ॥ ವಿವಸ್ವಾನ್ ಮಿತ್ರಪರ್ಜನ್ಯೌ ಪ್ರವಹೋऽಗ್ನಿರಪಾಂ ಪತಿಃ॥ಋಭುತ್ರಯಂ ಹ್ಯೇಕಮೇವ, ವಿಶ್ವೇದೇವಾ ದಶ ಸ್ಮೃತಾಃ॥ ವಸವಃ ಸಪ್ತರುದ್ರಾಶ್ಚ ದಶಾದಿತ್ಯಾಃ ಷಡೇವ ತು ॥ ಚತ್ವಾರಿಂಶತ್ತಥಾ ಸಪ್ತ ಮರುತಃ ಪಿತರಸ್ತ್ರಯಃ ॥ ದ್ಯಾವಾಭೂಮಿ ಚ ನಾಸತ್ಯೌ ಶತಸ್ಥಾ ದೇವತಾಃ ಮತಾಃ॥ ಬ್ರಹ್ಮಾ ಪರಬ್ರಹ್ಮ ನಾಮ ವಿಷ್ಣುಶ್ಚ ದ್ವೌ ಶತಾಧಿಕೌ ॥ ಉರುಕ್ರಮಾದಿ ವರುಣಪರ್ಯಂತಾ ದೇವತಾ ವಿನಾ ॥ ಶತಸ್ಥದೇವಾ ಧನಪೋ ವಿಷ್ವಕ್ ಸೇನೋ ಗಣಾಧಿಪಃ ॥ ಏತೇ ಮಿತ್ರಾತ್ ಕಿಂಚಿದೂನಾಃ ಪರಸ್ಪರಸಮಾ ಮತಾ ಇತಿ ॥೧೨॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಧನಪ' ಇತಿ॥ "ಪ್ರಧಾನವಾಯುಃ ವಸವಃ ರುದ್ರಾದಿತ್ಯಾಃ ಮರುದ್ಗಣಾಃ ॥ ಬೃಹಸ್ಪತಿ ಋಭುದ್ಯಾವಾಪೃಥಿವ್ಯಾವಶ್ವಿನೌ ತಥಾ ॥ ವಿಶ್ವೇ ದೇವಾಶ್ಚ ಪಿತರಃ ಶತಸ್ಥಾಃ ದೇವತಾಃ ಮತಾಃ" ॥ ಇತಿ ತತ್ವಪ್ರದೀಪೋಕ್ತಾಃ ಶತಸ್ಥಾಃ ॥ಧನಪಾದಿತ್ರೀನ್ ಗೃಹೀತ್ವಾ ಅಷ್ಟಾಶೀತಿ ದೇವಾನಾಂ ಶಿಷ್ಟತಾಂ ಬ್ರುವತೇ ಕೇಚಿತ್ ॥ ಅಪರೇ ಉಕ್ತತಾಂ ಪಂಚದಶದೇವಾನಾಂ ಮನ್ಯಂತೇ ॥ ವಿವಕ್ಷಾಭೇದೇನ ಅವಿರೋಧಃ ಸರ್ವತ್ರ ॥ ಪ್ರಕೃತೇ ತು ಪ್ರಧಾನ ವಾಯ್ವಗ್ನಿ ರುದ್ರ ವಿವಸ್ವದ್ವರುಣ ಮಿತ್ರ ಶಕ್ರೋರುಕ್ರಮಾಹಂ (ಕಾರಿಕ) ಪ್ರವಹ ಗುರವಃ ಇತಿ ಏಕಾದಶೋಕ್ತಾಃ ॥ಪರ್ಜನ್ಯಃ ಏತದ್ವಾನ್ ॥ ಶತಾದಿತರೇ ಪಂಚಾಶೀತಿದೇವಾಃ ತ್ರಯಾಣಾಂ ಸಮಾಃ ಇತ್ಯರ್ಥಃ ॥ ಅಥಾದಿತ್ಯಾಃ ಋತೇ ಶಕ್ರಾತ್ ವರುಣಾತ್ ಮಿತ್ರತೋऽರ್ಕತಃ॥ವಿನಾ ವಿಷ್ಣುಂ ಚ ಪರ್ಜನ್ಯಃ ಷಡಥೋ ಋಭವಸ್ತ್ರಯಃ ॥ ಮಹೇಶ್ವರಂ ವಿನಾ ರುದ್ರಾಃ ವಸವಃ ವಹ್ನಿವರ್ಜಿತಾಃ ॥ ಪ್ರವಹಾಂಕೃತಿಪ್ರಾಣೌ ವಿನಾನ್ಯೇ ಮರುತೋऽಖಿಲಾಃ ॥ ವಿಶ್ವೇದೇವಾ ದಶ ದ್ಯಾವಾಪೃಥಿವ್ಯೌ ಪಿತೃಪತ್ರಯಮ್ ॥ ಗಣಪೋ ಧನದೋ

ದಸ್ರೌ ವಿಷ್ವಕ್ಸೇನ ಇತಿ ಕ್ರಮಃ || ಮಿತ್ರಾತ್ ಕಿಂಚಿತ್ ಗುಣನ್ಯೂನಾಃ ||೧೨||

## ಕನ್ನಡಾರ್ಥ

ಪ್ರಧಾನವಾಯು, ವಸುಗಳು (೮), (ಏಕಾದಶ) ರುದ್ರರು, (ದ್ವಾದಶ) ಆದಿತ್ಯರು, ಮರುದ್ಗಣದವರು, ಬೃಹಸ್ಪತಿ, ಋಭು, ದ್ಯಾವಾಪೃಥಿವೀ, ಅಶ್ವಿನಿಗಳು, ವಿಶ್ವೇದೇವತೆಗಳು, ಪಿತೃಗಳು, ಇವರಿಗೆ ಶತಸ್ಥದೇವತೆಗಳೆಂದು ಪ್ರಸಿದ್ಧಿ ಇದೆ" ಎಂದು ತತ್ವಪ್ರದೀಪದಲ್ಲಿ ಹೇಳಲಾಗಿರುತ್ತದೆ.

ಕುಬೇರ- ವಿಷ್ವಕ್ಸೇನ ವಿಘ್ನೇಶರುಗಳನ್ನು ಪರಿಗ್ರಹಿಸಿ (ಹೆಚ್ಚಿಗೆ ಸೇರಿಸಿ) ೮೮ ದೇವತೆಗಳು ಅವಶಿಷ್ಟದೇವತೆಗಳು ಎಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು ಉಕ್ತೇತರರು ಎಂಬಲ್ಲಿ ಹದಿನೈದು ದೇವತೆಗಳಿಗೆ ಉಕ್ತರೆಂದು ಅಭಿಪ್ರಾಯವನ್ನು ಹೇಳುತ್ತಾರೆ. ಎಲ್ಲ ಕಡೆಯಲ್ಲಿಯೂ ವಿವಕ್ಷಾಭೇದಗಳಿರುವುದರಿಂದ ಅಂದರೆ ಹೇಳುವ ತಾತ್ಪರ್ಯವು ಬೇರೆ ಬೇರೆಯಾಗಿರುವದರಿಂದ ವಿರೋಧವಿರುವದಿಲ್ಲ. ಪ್ರಕೃತದಲ್ಲಿ–೧ ಪ್ರಧಾನವಾಯು ೨ ಅಗ್ನಿ, ೩ ರುದ್ರ, ೪ ವಿವಸ್ವತ್ ೫ ವರುಣ, ೬ ಮಿತ್ರ, ೭ ಶಕ್ರ, ೮ ವಿಷ್ಣು, ೯ ಅಹಂಕಾರಿಕ ಪ್ರಾಣ, ೧೦ ಪ್ರವಹ, ೧೧ ಗುರು ಇವರು ಹನ್ನೊಂದು ದೇವತೆಗಳು ಉಕ್ತರೆಂದು ತಿಳಿಯಬೇಕು. ೧೨ ಪರ್ಜನ್ಯನು ಇವರಲ್ಲಿಯೇ ಅಂತರ್ಗತನು. ಶತಸ್ಥ ದೇವತೆಗಳಲ್ಲಿ ಉಕ್ತರನ್ನು ಬಿಟ್ಟು ಉಳಿದ ೮೫ ದೇವತೆಗಳು ಈ ಮೂರು ದೇವತೆಗಳಿಗೆ (೧ ಧನದ ೨ ವಿಷ್ವಕ್ಸೇನ ೩ ವಿಘ್ನೇಶರಿಗೆ) ಸಮಾನರು" ಎಂದು ವಿಶಿಷ್ಟ ತಾತ್ಪರ್ಯವು.

ಇಂದ್ರ, ವರುಣ, ಮಿತ್ರ, ಅರ್ಕ, ವಿಷ್ಣು, ಪರ್ಜನ್ಯರುಗಳನ್ನು ಬಿಟ್ಟು ಉಳಿದವರು ಆರು ಆದಿತ್ಯರು. ಮೂರು ಋಭುದೇವತೆಗಳು ಮಹೇಶ್ವರನನ್ನು ಬಿಟ್ಟು ಉಳಿದ ೧೦ ರುದ್ರರು, ಅಗ್ನಿಯನ್ನು ಬಿಟ್ಟು ಉಳಿದ ೭ ವಸುಗಳು, ಪ್ರವಹಾಹಂಕಾರಿಕ ಪ್ರಾಣರನ್ನುಳಿದು, ೪೭ ಮರುತ್ತರು ವಿಶ್ವೇದೇವತೆಗಳು ೧೦. ದ್ಯಾವಾಪೃಥಿವೀ (ಪಿತೃಗಳು ೩) ಅಶ್ವಿನೀದೇವತೆಗಳು, ಕುಬೇರ, ವಿಷ್ವಕ್ಸೇನ, ವಿಘ್ನೇಶರು. ಇವರು ಮಿತ್ರನಿಗಿಂತಲೂ ಸ್ವಲ್ಪ ಗುಣಾಧಮರು 'ಕಡಿಮೆಗುಣವುಳ್ಳವರು.' ಎಂದು ಹೇಳಿಸಿಕೊಳ್ಳುತ್ತಾರೆ. || ೧೨ ||

**ಅವತರಣಿಕಾ:**—ಇನ್ನು ೧೯ನೇ ಕಕ್ಷದವರಾದ ಕರ್ಮಜ ದೇವತೆಗಳ ವಿವರವನ್ನು ಹೇಳುತ್ತಾರೆ.

**ಇವರಿಗಿಂದಲಿ ಕೊರತಿ ಯೆನಿಪರು |**
**ಚ್ಯವನ ಸನಕಾದಿಗಳು ಪಾವಕ |**
**ಕವಿ ಉಚಿಥ್ಯಜಯಂತ ಕಶ್ಯಪ ಮನುಗಳೇಕದಶ ||**
**ಧ್ರುವ ನಹುಷ ಶಶಿಬಿಂದು ಹೈಹಯ |**
**ದೌವುಷ್ಯಂತಿ ವಿರೋಚನನ ನಿಜ |**
**ಕುವರ ಬಲಿ ಮೊದಲಾದ ಸಪ್ತೇಂದ್ರರು ಕಕುತ್ಸ್ಥಗಯ ||೧೩||**

**ಪದ್ಯಾರ್ಥ:**—ಇವರಿಗಿಂದಲಿ=ಹಿಂದೆ ಹೇಳಿದ ೧೮ನೇ ಕಕ್ಷದವರಾದ ಗಣೇಶಾದಿಗಳಿಗಿಂತಲೂ, ಚವನ=ಚವನಋಷಿಗಳು, ಸನಕಾದಿ=೩ ಜನ ಋಷಿಗಳು, ಪಾವಕ=ಅಗ್ನಿಪುತ್ರ ಪಾವಕನು, ಕವಿ=ಜ್ಞಾನಿಗಳಾದ, ಉಚಿಥ್ಯರು=ಉಚಿಥ್ಯಋಷಿಗಳು, ಜಯಂತ=ಇಂದ್ರಪುತ್ರ ಪಾದಾಭಿಮಾನಿಯಾದ ಜಯಂತನು, ಕಶ್ಯಪ=ಕಶ್ಯಪ ಋಷಿಗಳು, ಮನುಗಳೇಕದಶ=ಏಕಾದಶ ಹನ್ನೊಂದು ಜನ ಮನುಗಳು, ಕೊರತೆ-ಕಡಿಮೆ ಎನಿಸುವರು.

ಇದರೊಳಗೆ ಅಗ್ನಿಪುತ್ರ ಪಾವಕ, ಜಯಂತ, ಉಚಿಥ್ಯಋಷಿ, ಸನಕಾದಿಗಳು ಇವರಲ್ಲಿ ಸನತ್ಕುಮಾರನು (ಕಾಮಾಂಶನನ್ನು ಬಿಟ್ಟು) ಈ ಎಲ್ಲ ಜನರು ಸಾಧನ ನಿಮಿತ್ಯ ಕಿಂಚಿತ್ ಅಧಿಕರೆಂದು ಪ್ರಮಾಣಗಳಿವೆ. ಕಶ್ಯಪಾದಿ(೯೦) ನವತಿ ಋಷಿಗಳು ಕರ್ಮಜದೇವತೆಗಳ ಕಕ್ಷದಲ್ಲಿ ಇರುವರು.

ಇಲ್ಲಿ ಕರ್ಮಜ ದೇವತೆಗಳ ಕಕ್ಷದಲ್ಲಿ ಜಯಂತನ ಗಣನೆ ಇದೆ. ಪಾದಾಭಿಮಾನಿ ಜಯಂತಾಯ ನಮಃ ಎಂದು, ತತ್ವಾಭಿಮಾನಿ ದೇವತೆಗಳಲ್ಲಿ ತತ್ವನ್ಯಾಸದಲ್ಲಿ ಹೇಳಿದ್ದಾರೆ. ಇದು ಹೇಗೆ? ಎಂದರೆ ಕೆಲವರು ಪಾದಕಲಾಭಿಮಾನಿಯೆಂದು ಹೇಳುತ್ತಾರೆ. ಇದಕ್ಕೆ ಪ್ರಮಾಣವಿಲ್ಲ. ಆದರೆ ಶ್ರೀಮಂತ್ರಾಲಯ ಗುರುಸಾರ್ವಭೌಮರು ಪ್ರಮೇಯ ಸಂಗ್ರಹದಲ್ಲಿ "ಪಾದಾಭಿಮಾನೀ ಜಯಂತಃ ಉಕ್ತಶೇಷ ಸಮಃ ||" ಎಂದು ಅಪ್ಪಣೆ ಕೊಡಿಸಿದ್ದಾರೆ. ಏಕಂದರೆ ಯಜ್ಞನಾಮಕ ಹರಿಯ ವಿಶೇಷ ಆವೇಶಬಲದಿಂದ ಕರ್ಮಜ ದೇವತೆಗಳ ಕಕ್ಷದಲ್ಲಿದ್ದರೂ, ತತ್ವಾಭಿಮಾನಿ ದೇವತೆಗಳಲ್ಲಿ ಗಣನೆ ಮಾಡ

ಬೇಕು. ಮತ್ತು ಜ್ಞಾನಿಗಳಾದ ವೆಂಕಟೇಶಾರ್ಯ ಕೃತ ತಾರತಮ್ಯ ಭಾವ ಪ್ರಕಾಶಿಕೆಯಲ್ಲಿ "ಪಾದಾಭಿಮಾನಿನೌ ಶಂಭು ಜಯಂತೌ ತತ್ಸದೇವತೇ। ಮರೀಚಿ ಪಾವಕೌ ಭೂತ ವಾಯ್ವಗ್ನ್ಯುಕ್ತ್ಯ ಗಳಾಸ್ಥಿತಾ" ಎಂದು ಹೇಳಿದ್ದಾರೆ. ಇನ್ನು ಕರ್ಮಜದೇವತೆಗಳಾದ ೧೦೦ ಜನ ರಾಜರಲ್ಲಿ ಕೆಲ ರಾಜರ ಪ್ರಾಮುಖ್ಯ ಹೆಸರು ಹೇಳುತ್ತಾರೆ. ಧ್ರುವರಾಜ, ನಹುಷರಾಜ, ಶಶಿಬಿಂದು ರಾಜ, ಹೈಹಯರಾಜ, ದೌಷ್ಯಂತಿ=ದುಷ್ಯಂತರಾಜನ ಮಗ ಭರತರಾಜ, ಕುಕುತ್ಸ್ಥರಾಜ, ಗಯರಾಜ, ವಿರೋಚನನ ನಿಜಕುವರ=ವಿರೋಚನನ ಮಗನಾದ ಹರಿಭಕ್ತನಾದ ಬಲಿರಾಜನು. ಈ ಬಲಿರಾಜಗೆ ಸಪ್ತೇಂದ್ರರು= ಏಳು ಮಂದಿ ಇಂದ್ರರು ಸಮಾನರು. ಬಲಿ, ಅದ್ಭುತ, ಶಂಭು, ವಿಧೃತ, ಸ್ವಧೃತಿ, ದಿವಸ್ಪತಿ, ರುಚಿ ಹೀಗೆ ಏಳು ಜನ ಇಂದ್ರ ಪದವಿಗೆ ಬರುವರು ಕರ್ಮಜ ದೇವತೆಗಳಲ್ಲಿರುವರು.

ಮುಂದಿನ ಪದ್ಯದಲ್ಲಿ ಉಳಿದ ಕೆಲ ಜನ ರಾಜರನ್ನು ಸ್ತೋತ್ರಿಸುತ್ತಿದ್ದಾರೆ.

**ಭಾವಸೂಚಕ** ೧೩-೧೪ ಪದ್ಯ ಕೂಡಿಸಿ ಮುಂದೆ ಬರೆದಿರುವರು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಇವರಿಗಿಂದಲಿ' ಇತಿ॥ ಆದಿ ಪದಂ ಕುಮಾರಭಿನ್ನಾನಾಂ॥ ತೇನ ಚ ಸಪ್ತನಾರಾಣಾಚಾರ್ಯಾದಯಃ ಅಪಿ ಗೃಹೀತಾಃ॥ ತೇನ ದಶೇಂದ್ರೋ ಸವತಿಃ ವ್ಯಾಪ್ತವರ್ತಿನಃ ಉಚ್ಯಂತೇ ವೈವಸ್ವತಾಧಿಕ್ಯೇ(ಕ್ಯಂ) ತಯೋರಾದೀಶೇನ ಉಕ್ತಂ ಬೃಹದ್ಭಾಷ್ಯೇ॥"ವೈವಸ್ವತಃ ಮನುಃ ಸಿಕ್ಯಂ ವಿಷ್ಣು ದೇವೀ ತತೋಽಧಿಕಃ"॥ ಇತಿ॥"ತದನ್ಯೇ ತು ತತೋಽವರಾ" ಇತ್ಯಸ್ಯ ಸುಧಾಯಾಂ "ಅನ್ಯೇ ಸ್ವಾಯಂಭುವತಾಪಸೌ ಅನ್ಯೇ॥(ತತಃ) ವೈವಸ್ವತಮನೋಃ ಅವರಾ॥" ಇತಿ ಉಕ್ತವಾ॥

'ಹೈಹಯ':' ಕಾರ್ತವೀರ್ಯಃ॥'ದೌಷ್ಯಂತಿಃ' ಭರತಃ॥'ಕುವರ' ಪುತ್ರಃ॥'ಸಪ್ತ' ಬಲಿರದ್ಭುತಶಂಭೂ ಚ ವಿಧೃತ ಸ್ವ(ಸ್ವ)ಧಾಮಾ॥ ದಿವಸ್ಪತಿಃ ರುಚಿಶ್ಚೇಂದ್ರಾಃ॥ ("ಯಜ್ಞ ರೋಚನ ಸತ್ರಜಿತ್ ತ್ರಿಶಿಖ ವಿಕ್ರಮ ಇಂದ್ರದ್ಯುಮ್ನ ಪುರಂದರಾಣಾಂ ವಿಷ್ಣು ನಾಯು ಯಮ ಅಶ್ವಿ

ಪುರಂದರತ್ವಾತ್ ಅಧಮಾಃ ಆವೇಶವಿಶೇಷಾತ್)॥ಅಥೋಚಥ್ಯಶ್ಚ ಪಾವಕಃ॥ "ಸ್ವಾಯಂಭುವಂ ತಾಪಸಂ ಚ ವೈವಸ್ವತಮೃತೇಽಖಿಲಾಃ॥ಮನವಃ ಕಾರ್ತವೀರ್ಯಾದ್ಯಾಃ ಬಲ್ಯಾದ್ಯಾಃ ಯೇ ಚ ಕರ್ಮಜಾಃ॥ ಜಯಂತಃ ಚ್ಯವನೋಽಷ್ಟೌ ಚ ಗಂಧರ್ವಾಃ ಪಿತೃಸಪ್ತಕಮ್ ॥ ಅಶ್ವಿನ್ಯೂನಾಶ್ಚ" ॥೧೩॥

## ಕನ್ನಡಾರ್ಥ

"ಸನಕಾದಿಗಳು" ಎಂಬಲ್ಲಿರುವ ಆದಿಪದದಿಂದ ಕುಮಾರ(ಸನತ್ಕುಮಾರ) ನನ್ನು ಪರಿಗ್ರಹಿಸಬಾರದು. ಅವನನ್ನು ಉಳಿದು ಮಿಕ್ಕವರನ್ನು ಸ್ವೀಕರಿಸಿದರೆ ಅರ್ಚಿ ಮುಂತಾದವರೂ ಇವರಲ್ಲಿ ಸೇರುವರು. ಹೀಗೆ ಹೇಳುವದರಿಂದ "ದಶಾನ್ಯೇ ವ್ಯಾಪ್ತದರ್ಶಿನಃ" ಎಂಬ ಪ್ರಮಾಣಗಳಿಗೆ ಅನುಗುಣವಾಗುತ್ತದೆ.

ವೈವಸ್ವತಮನುವು ಶ್ರೇಷ್ಠನೆಂಬುವದರಲ್ಲಿ ಬೃಹದ್ಭಾಷ್ಯದ ವಚನವು ಆಧಾರವಿರುತ್ತದೆ. "ವೈವಸ್ವತ ಮನುವು ನಿತ್ಯದಲ್ಲಿಯೂ ವಿಷ್ಣ್ವಾವೇಶವಿರುವದರಿಂದ ಉಳಿದವರಿಂದಲೂ ಶ್ರೇಷ್ಠನು," ಎಂದು ಬೃಹದ್ ಭಾಷ್ಯ ವಚನದ ಅರ್ಥ. "ಉಳಿದವರು ಅವನಿಂದ ಕಡಿಮೆಯುವರು" ಎಂದು ಹೇಳುವ "ತದನ್ಯೇ ತು" ಎಂಬ ವಾಕ್ಯವನ್ನು ವಿವರಿಸುತ್ತ ಶ್ರೀಮನ್ನ್ಯಾಯ ಸುಧೆಯಲ್ಲಿ "ಸ್ವಾಯಂಭುವ ಹಾಗೂ ತಾಪಸ ಮನುಗಳನ್ನು ಬಿಟ್ಟು ಉಳಿದ ಮನುಗಳು ವೈವಸ್ವತ ಮನುವಿಗಿಂತ ಕಡಿಮೆಯುವರು" ಎಂದು ನಿರೂಪಿಸಲಾಗಿರುತ್ತದೆ.

"ಹೈಹಯ" ಕಾರ್ತವೀರ್ಯರಾಜನು. "ದೌಷ್ಯಂತಿ" ದುಷ್ಯಂತ ರಾಜನ ಮಗ ಭರತ. "ಸಪ್ತೇಂದ್ರರು" "ಬಲಿ, ಅದ್ಭುತ, ಶಂಭು, ವಿಧೃತ, ಸ್ವಲ್ತಧಾಮಕ, ದಿವಸ್ಪತಿ, ಶುಚಿ" ಇವರುಗಳು.

ಉಚಥ್ಯ, ಪಾವಕ, ಸ್ವಾಯಂಭುವ, ತಾಪಸ, ವೈವಸ್ವತರನ್ನುಳಿದು ಮಿಕ್ಕ ಮನುಗಳು, ಕಾರ್ತವೀರ್ಯ ಮುತಾಂದವರು, ಬಲಿರಾಜ ಮುಂತಾದ ಕರ್ಮಜದೇವತೆಗಳು, ಜಯಂತ, ಚ್ಯವನ, ಎಂಟು ಗಂಧರ್ವರು, ಏಳು ಪಿತೃಗಳು, ಇವರು ಅಶ್ವಿನೀದೇವತೆಗಳಿಗೆ ಕಡಮೆಯುವರು. ॥೧೩॥

**ಅವತರಣಿಕಾ :—**ಕರ್ಮಜ ದೇವತೆಗಳಲ್ಲಿಪ್ಪ ಕೆಲ ರಾಜರನ್ನು ಸ್ತೋತ್ರಗೈಯ್ಯುತ್ತಾರೆ.

**ಪೃಥು ಭರತ ಮಾಂಧಾತ ಪ್ರಿಯ ।**
**ವ್ರತ ಮರುತು(ತ) ಪ್ರಲ್ಹಾದ ಸುಪರೀ ।**
**ಕ್ಷಿತ ಹರಿಶ್ಚಂದ್ರಾಂಬರೀಷೋತ್ತಾನಪಾದಮುಖ ॥**
**ಶತಸುಪುಣ್ಯಶ್ಲೋಕರು ಗದಾ ।**
**ಭೃತಗಧಿಷ್ಠಾನರು ಸುಪ್ರಿಯ್ಯ ।**
**ವ್ರತಗೆ ದ್ವಿಗುಣಾಧಮರು ಕರ್ಮಜರೆಂದು ಕರೆಸುವರು॥೧೪॥**

**ಪದ್ಯಾರ್ಥ :—**ಪೃಥು ರಾಜ=ಭರತ (ಜಡಭರತರಾಜ), ಮಾಂಧಾತ ರಾಜ, ಪ್ರಿಯವ್ರತರಾಜ, ಮರುತ್ ರಾಜ=ಪಾಂಡುವರ ತಂದೆ, ಪ್ರಹ್ಲಾದ ರಾಜ, ಪರೀಕ್ಷಿತರಾಜ ಇವರಿಬ್ಬರು ಹರಿಭಕ್ತರಲ್ಲಿ ಶ್ರೇಷ್ಠರು. ಹರಿಶ್ಚಂದ್ರ ರಾಜ, ಅಂಬರೀಷರಾಜ, ಉತ್ತಾನಪಾದಮುಖ=ಉತ್ತಾನಪಾದರಾಜನೇ ಮೊದಲಾಗಿ, ಶತಸುಪುಣ್ಯಶ್ಲೋಕರು=ನೂರು ಜನ ಪುಣ್ಯಶಾಲಿ ಕೀರ್ತಿ ವಂತರು, ಗದಾಭೃತಗೆ ಅಧಿಷ್ಠಾನರು=ಕಾವಮೌದಕಿ ಗದಾ ಧರಿಸಿದ ಶ್ರೀ ವಿಷ್ಣುವಿನ ಆವೇಶ ಉಳ್ಳವರು, ಕರ್ಮಜರೆಂದು ಕರೆಸುವರು. ಸುಪ್ರಿಯ್ಯ ವ್ರತಗೆ ದ್ವಿಗುಣಾಧಮರು=ನಳಿನಿ ಸಂಜ್ಞಾದಿ ೬ ಜನರು ಎರಡು ಗುಣ ಕಡಿಮೆ ಎಂದು ಮುಂದಿನ ಪದ್ಯದಲ್ಲಿ ಹೇಳುತ್ತಾರೆ.

**ಭಾವಸೂಚನ**॥(೧೩ನೇ ೧೪ನೇ ಪದ್ಯ ಕೂಡಿಸಿ ಪ್ರಮಾಣ ಕೆಳಗಿನಂತೆ ಬರೆದಿರುವರು) ಇತರೇತಿ॥ಪಂಚಾಶೀತಿ ಜನ್ಯೈಃ॥ಕೋರತಿ ಕಡಿಮೆ॥ಚ್ಯವನೇತಿ॥ ವಿಪ್ರತ್ವಾಚ್ಚ್ಯವನೋಽಚಿಕ್ಷ್ಯಾತ್ ತನ್ಮಧ್ಯೇ ಕಿಂಚಿದುತ್ತಮಾವಿತ್ಯುಕ್ತೇಃ॥ ಶ್ಯೇಯೇತಿ॥ಕರ್ಮಜಾ ಇಮೇ ಯಥೋಕ್ತಾ॥ಕಾರ್ತ್ಯವೀರ್ಯಶ್ಚ ದೌಷ್ಯಂತಿಃ ಭರತಃ ಶಶಿಬಿಂದುಕಃ॥ ಕಕುತ್ಸ್ಥ ಮಾಂಧಾತೃ ಪೃಥುಮುಖ್ಯಾಃ ಕರ್ಮಜದೇವ ತಾಃ ಇತಿ॥ಬಲೀತಿ॥ಬಲಿರಪ್ಯತ್ರ ಸಂಘೋ ಚ ವಿಧೃತಃ ಸ್ವಪ್ರತಧಾಮಕಃ॥ ದಿನಸ್ಪತಿ ಸಂಜ್ಞಿತೀತಿ ಟೀಕಾ ಇತಿ ॥ ಗದು ಇತಿ ಸೋಽಪಿ ಕರ್ಮಜನಃ ॥ ರ್ಯಾಪರ್ಥಾ ಭರತೋಽ ಗದು ಪ್ರಿಯವ್ರತಾದ್ಯಾ ಪ್ರಹ್ಲಾದ ಇತಿ ॥೧೪॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಪೃಥು" ಇತಿ ॥೧೪॥

## ಕನ್ನಡಾರ್ಥ

ಕರ್ಮಜದೇವತೆಗಳನ್ನು ಇನ್ನೂ ವಿಶದಪಡಿಸುತ್ತಾರೆ. "ಪೃಥು" ಎಂಬ ಪದ್ಯದಿಂದ.

(ಪದ್ಯಾರ್ಥವು ಸ್ಪಷ್ಟವಿರುತ್ತದೆ) ||೧೪||

ಅವತರಣಿಕಾ:—ಈ ಪದ್ಯವಲ್ಲಿ ೨೦ನೇ ಕಕ್ಷವಲ್ಲಿ ಗಂಗಾದೇವಿ ಮೊದಲು ಮಾಡಿ ೨೫ನೇ ಕಕ್ಷವಲ್ಲಿಪ್ಪ ಧರಾಶನೈಶ್ಚರರವರೆಗೆ ಗುಣತಾರತಮ್ಯ ವನ್ನು ನಿರೂಪಿಸಿರುತ್ತಾರೆ.

**ನಳಿನಿ ಸಂಜ್ಞಾ ರೋಹಿಣೀ ಶಾ ।**
**ಮಲ ವಿರಾಟ್ ಪರ್ಜನ್ಯರಧಮರು ।**
**ಯಲರು ಮಿತ್ರನ ಮಡದಿ ದ್ವಿಗುಣಾಧಮಳು ಬಾಂಬೊಳಗೆ ॥**
**ಜಲಮಯ ಬುಧಾಧಮನು ದ್ವಿಗುಣದಿ ।**
**ಕೆಳಗೆನಿಸುವಳುಷಾ ಶನೈಶ್ಚರ ।**
**ಇಳಿಗೆ ಈರು ಗುಣಾಧಮರುಷಾದೇವಿವ್ಯಸಿಯಿಂದಾ ॥ ೧೫ ॥**

**ಪದ್ಯಾರ್ಥ:**—ನಳಿನಿ=ಗಂಗಾದೇವಿ ವರುಣಪತ್ನಿ, ಸಂಜ್ಞಾ= ಸಂಜ್ಞಾದೇವಿ ವಿವಸ್ವನ್ನಾಮಕ ಸೂರ್ಯಪತ್ನಿ, ರೋಹಿಣೀ=ರೋಹಿಣೀ ದೇವಿ ಚಂದ್ರಪತ್ನಿ, ಶಾಮಲಾ=ಶಾಮಲಾದೇವಿ ಯಮಪತ್ನಿ, ವಿರಾಟ್= ವಿರಾಡಭಿಮಾನಿ ಉಷಾ ಅನಿರುದ್ಧ ಪತ್ನಿ, ಪರ್ಜನ್ಯನಾಮಕ ಸೂರ್ಯ ಆರು ಜನ ೨೦ನೇ ಕಕ್ಷವಲ್ಲಿಪ್ಪರು ಸಮಾನರು. ಕರ್ಮಜ ದೇವತೆ ಗಳಾದ ಪ್ರಿಯವ್ರತಾದಿಗಳಿಗೆ, ದ್ವಿಗುಣಾಧಮರು=ಎರಡು ಗುಣ ಅಧಮರೆಂದು ಹಿಂದಿನ ಪದ್ಯದಿಂದ ಅಧ್ಯಾಹಾರ ಮಾಡಬೇಕು. ಯಲರು ಮಿತ್ರನ ಮಡದಿ= ಗಾಳಿಯ ಗೆಳೆಯನಾದ ಅಗ್ನಿದೇವರ ಹೆಂಡತಿ ಸ್ವಾಹಾದೇವಿ, ಬಾಂಬೊಳಗೆ= ಬಾನ್ ಜೊತೆ ಆಕಾಶದೊಳಿ ಗಂಗಾದೇವಿಗೆ, ದ್ವಿಗುಣಾಧಮಳು. ಸ್ವಾಹಾ ದೇವಿಗೆ ಜಲಮಯ=ಜಲ ನೀರಿಗೆ ಅವಾಂತರಾಭಿಮಾನಿ ಬುಧನು, ಸ್ವಾದೋದಕಾಭಿಮಾನಿ ಬುಧನು=ಚಂದ್ರಪುತ್ರ ಬುಧನು, ದ್ವಿಗುಣದಿ ಕೆಳ ಗೆನಿಸುವನು=ಎರಡು ಗುಣ ಕಡಿಮೆ ಎನಿಸುವನು. ಈ ಬುಧದೇವನಿಗೆ ಉಷಾದೇವಿ=ನಾಮಾಭಿಮಾನಿ ಉಷಾದೇವಿ ಅಶ್ವಿನಿ ಹೆಂಡತಿ, ದ್ವಿಗುಣದಿ=

ಎರಡು ಗುಣದಿಂದ, ಕೆಳಗೆನಿಸುವಳು=ಕಡಿಮೆ, ನೀಚಳೆನಿಸುವಳು, ಈ ಉಷಾದೇವಿಗಿಂತ ಶನೈಶ್ಚರ=ಸೂರ್ಯಪುತ್ರ ಶನಿದೇವ, ಇಳೆಗೆ=ಧರಾಭಿಮಾನಿ ಇಪ್ಪರು, ಉಷಾದೇವಿಯು ಮೇಲಿಂದ ಎರಡು ಗುಣ ಅಧಮರೆಂದು ಕರೆಸುವರು.

**ಭಾವಸೂಚನ** || ನಳಿನೀತಿ || ಗಂಗಾ || ಸಂಜ್ಞಾ ಸೂರ್ಯಭಾರ್ಯಾ || ರೋಹಿಣೀ ಚಂದ್ರ ಜಾಯಾ || ಶಾಮಲಾ ಯಮಪ್ರಿಯಾ || ವಿರಾಟ್=ಅನಿರುದ್ಧಲಲನಾ || ಪರ್ಜನ್ಯ=ವರ್ಷಮಾನೀ || ಉಕ್ತಂ ಚ || ಸಂಜ್ಞಾ ಗಂಗಾ ಚ ಪರ್ಜನ್ಯೋ ಭಾರ್ಯೇ ಸ್ತೈ ಚಂದ್ರಸೂರ್ಯಯೋಃ||ಅನಿರುದ್ಧಪ್ರಿಯೋಷಾ ಚ ಮಿತ್ರಾತ್ತು ದ್ವಿಗುಣಾಧಮಾ ಇತಿ||ಯಮಲರ್ ಮಿತ್ರ ವಾಯುಮಿತ್ರ ಅಗ್ನಿ|| ಸ್ವಾಹಾದೇವೀ ವಹ್ನಿಭಾರ್ಯಾ ಪರ್ಜನ್ಯಾದ್ದ್ವಿಗುಣಾಧಮೇತ್ಯುಕ್ತೇಃ || ಮಡದಿ=ಹೆಂಡತಿ || ಜಲಮಯ=ಜಲಮಾನೀ || ಉಕ್ತಂ ಚ || ಬುಧೋ ನೀಚೋಂಬುಷಃ ತಸ್ಯಾ ಇತಿ || ಉಷೇತಿ || ತದುಕ್ತಂ || ಉಷಾ ಸಾವಮಾಭಿ ಮಾನಿನೀ||ಅಶ್ವಿಭಾರ್ಯಾ ಬುಧಾ ನ್ನ್ಯೂನೇತಿ||ಶನೈಶ್ಚರ ಇತಿ||ಉಕ್ತಂ ಚ|| ಧರಾಮಾನೀ ಶನಿಸ್ತಸ್ಯಾಃ ಉಷಾಯಾ ಹ್ಯಧಮಃ ಸ್ಮೃತ ಇತಿ||೧೫||

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

'ನಳಿನ' ಇತಿ || ಗಂಗಾ || ಸಂಜ್ಞಾ ರೋಹಿಣ್ಯೌ ಇತೀಂದು ಜಾಯೇ || ಶಾಮಲಾ ಯಮಭಾರ್ಯಾ||ವಿರಾಟ್ ಅನಿರುದ್ಧಭಾರ್ಯಾ||ಏತಾಃ ಸರ್ವಾಃ ಸಮಾಃ ಇತ್ಯತ್ರ ವಿರಾಟ್ ಪರ್ಜನ್ಯವತ್ ಗಾಯತ್ರೀ ಚ ತಥಾ ಸಂಜ್ಞಾ ಚ ರೋಹಿಣೀ ಧಾಮಿನೀ ಚ" ಇತಿ ಮಾನಸಮ್ || ಮಿತ್ರಾತ್ತು ದ್ವಿಗುಣಾಧಮಾಃ" ಇತ್ಯುಕ್ತೇಃ||ಪರ್ಜನ್ಯಾದಧಿಕಾಃ ಇತಿ ಕೀರ್ತಿತಾಃ || "ಪರ್ಜನ್ಯಃ ಶಾಮಲಾ ಗಂಗಾ ಉಷಾ ಸಂಜ್ಞಾ ಚ ರೋಹಿಣೀ || ಮಿತ್ರಾದ್ಧರ್ಮಾಃ ಷಡೇತಾಸ್ತ್ವಪಿ ಕಿಂಚಿತ್ ಪರ್ಜನ್ಯತೋಽಧಮಾಃ||ತೇ(ತಾ)ಭ್ಯಃ ಸ್ವಾಹಾಽಧಮಾ ಜ್ಞೇಯಾ ಪರ್ಜನ್ಯಾದರ್ಧಸನ್ಮಿತಾ||ಸ್ವಾಹಾದಶಮಭಾಗೋಷಾ ತತ್ಸ್ವಾಹಾ ಮಧ್ಯಗೋ ಬುಧಃ || ಪುಷ್ಕರಃ ಕರ್ಮದೇವಃ ಸ್ಯಾತ್ ಉಷಸಃ ದಶಮಾಂಶಕಃ || ಉಷಃ ಪುಷ್ಕರಯೋಃ ಮಧ್ಯೇ ಜ್ಞೇಯಃ ರವಿ ಸುತಃ ಶನಿಃ||ಧರಾಮಃ ಸ್ಯಾತ್ ಉಷಸಃ ಕಿಂಚಿತ್ ನ್ಯೂನಃ ಶನ್ಯಧಿಕಃ ತಥಾ || ಉಷಾ ಸ್ವಾಹಾ ಚ ಪರ್ಜನ್ಯಃ||" ಸ್ವಾಹಾ ಗಂಗಾಧಮಕೂರ್ಮಾದ್ಯಪೇಕ್ಷಯಾ ಕಿಂಚಿತ್ ನೀಚಾ

ಪರ್ಜನ್ಯಾತ್ ದ್ವಿಗುಣಾಧಮಾ ॥ ಬುಧಃ ಅಧಮಃ ಕಿಂಚಿತ್ ದ್ವಿಗುಣ ಸ್ವಾಹಾಯಾಃ ॥ ಇತ್ಯರ್ಥಃ ॥ ದಶಗುಣಾವರೇತ್ಯರ್ಥಃ ॥ ಉಷೇತ್ಯನೇನ ಅನ್ವಯಃ ॥ ಶನೈಶ್ಚರಃ ಉಷಾಯಾಃ ಕಿಂಚಿತ್ ನ್ಯೂನಃ ಇತಿ ಚ ॥ ಈಳಿಗು = ಭೂಮಾ॥ ತತಾತ್ಮ್ಯಮಾನೀ ಇತಿ ಯಾವತ್ ॥ ಈರು ಎರಡು ಶನಿ ಪೃಥಿವ್ಯಾ ಚ ॥ ತಥಾ ಚ ಶನೇಃ ಕಿಂಚಿನ್ನ್ಯೂನಃ ಪುಷ್ಕರಃ ಉಷಾಯಾಃ ದಶಾಧಮಃ ॥೧೫॥

## ಕನ್ನಡಾರ್ಥ

ಸಂಜ್ಞಾ ರೋಹಿಣಿ ಇವರೀರ್ವರೂ ಅನುಕ್ರಮವಾಗಿ ಸೂರ್ಯ ಹಾಗೂ ಚಂದ್ರನ ಹೆಂಡತಿಯರು. ಶಾಮಲಾದೇವಿಯು ಯಮಪತ್ನಿಯು. ಅನಿರುದ್ಧನ ಪತ್ನಿಗೆ 'ವಿರಾಟ್' ಎಂದು ಹೆಸರು. ಇವರು ಪರಸ್ಪರ ಸಮಾನರು. ಈ ವಿಷಯದಲ್ಲಿ "ವಿರಾಟ್ ಪರ್ಜನ್ಯವತ್ ವಾರುಣೀ ಚ ತಥಾ ಸಂಜ್ಞಾ ಚ ರೋಹಿಣೀ ಧಾರ್ಮಿಣೀ ಚ" ಎಂಬ ಅನುವ್ಯಾಖ್ಯಾನವು ಪ್ರಮಾಣವಾಗಿರುತ್ತದೆ. "ಮಿತ್ರನಿಗೆ ಎರಡು ಗುಣಗಳಿಂದ ಕಡಿಮೆಯುವರು" ಎಂದು ಹೇಳಿರುತ್ತಾರೆ. ಪರ್ಜನ್ಯನಿಗಿಂತ ಅಧಿಕರೆಂದೂ ಪ್ರಸಿದ್ಧರು. ಪರ್ಜನ್ಯ, ಶಾಮಲಾ, ಗಂಗಾ, ಉಷಾ, ಸಂಜ್ಞಾ, ರೋಹಿಣಿ ಇವರು (ಆರು ಜನರು) ಮಿತ್ರನಿಗೆ ಅರ್ಧ ಕಡಿಮೆಯುವರು ಮತ್ತು ಕೆಲವರು ಪರ್ಜನ್ಯನಿಗೂ ಕಡಿಮೆಯುವರು, ಇವರಿಂದ ಅಗ್ನಿಪತ್ನಿಯಾದ ಸ್ವಾಹಾದೇವಿಯು ಪರ್ಜನ್ಯನಿಗೆ ಅರ್ಧ (೨ ಗುಣದಿಂದ) ಕಡಿಮೆಯುವಳೂ, ಅವರಿಗೆ ಕಡಿಮೆಯುವಳೂ ಆಗಿರುತ್ತಾಳೆ" ಎಂದು ತಿಳಿಯಬೇಕು. ಸ್ವಾಹಾದೇವಿಗಿಂತಲೂ ಉಷಾದೇವಿಯು ಹತ್ತು ಗುಣ ಕಡಿಮೆಯುವಳು. ಬುಧನು ಸ್ವಾಹಾದೇವಿಯಿಂದ ಕಡಿಮೆಯುವನೂ ಉಷಾದೇವಿಗೆ ಹೆಚ್ಚಿನವನೂ ಆಗಿರುತ್ತಾನೆ. ಪುಷ್ಕರನು ಕರ್ಮಜದೇವತೆಗಳಿಗೆ ಸಮಾನನು. ಉಷಾದೇವಿಗೆ ಹತ್ತು ಗುಣಗಳಿಂದ ಕಡಮೆಯುವನು. ಉಷಾದೇವಿಯಿಂದ ಕಡಮೆಯುವನೂ, ಪುಷ್ಕರನಿಗಿಂತ ಅಧಿಕನೂ ಆದ ರವಿಸುತ ಶನಿಯು ಉಷಾ ಪುಷ್ಕರ ನಡುವೆ ಇರುವನೆಂಬುದಾಗಿ ತಿಳಿಯಬೇಕು. ಭೌಮನು (ಮಂಗಳನು) ಉಷಾದೇವಿಗಿಂತ ಕಡಮೆಯುವನೂ, ಶನಿಗಿಂತ ಅಧಿಕನೂ ಆಗಿರುತ್ತಾನೆ. ಉಷಾ, ಸ್ವಾಹಾ, ಪರ್ಜನ್ಯ, ಮಿತ್ರ, ಅಗ್ನಿ ಇವರಲ್ಲಿ ಪೂರ್ವ ಪೂರ್ವದವರು ಉತ್ತರೋತ್ತರದಲ್ಲಿ ಇರುವವರಿಗೆ ಕೆಳಗಿನವರು. ಸ್ವಾಹಾ ಗಂಗಾದೇವಿಗಿಂತ ೨ ಗುಣಗಳಿಗೆ ಕಡಿಮೆಯುವಳು ಮತ್ತು

ಗಂಗಾ ಸಮಾನನಾದ ಪರ್ಜನ್ಯನಿಗಿಂತಲೂ ಎರಡು ಗುಣ ಕಡಿಮೆಯುಳ್ಳವಳು. ಜಲಮಯಬುಧನು ಸ್ವಾಹಾದೇವಿಗೆ ಎರಡು ಗುಣಗಳಿಂದ ಕಡಿಮೆಯೆನಿಸುತ್ತಾನೆ. ಎಂದು "ಉಷಾ ಸ್ವಾಹಾ ಚ ಪರ್ಜನ್ಯಃ" ಎಂಬ ವಾಕ್ಯಗಳಿಗೆ ಅರ್ಥವನ್ನು ತಿಳಿಯಬೇಕು. 'ಉಷಾ'ಇವರ ಮುಂದೆ 'ದಶಗುಣೋತ್ತರಾಃ' ಎಂದು ಅನ್ವಯಿಸಬೇಕು. ಶನೈಶ್ಚರನು ಭೂಮಿಯು ೨ ಗುಣಗಳಿಂದ ಉಷಾ ದೇವಿಗಿಂತ ಕಡಿಮೆಯುಳ್ಳವನು" ಎಂದು ಈ ಪದ್ಯದ ಅರ್ಥ.

"ಪುಷ್ಕರನು ಶನೈಶ್ಚರನಿಗಿಂತಲೂ ಕಡಿಮೆಯುಳ್ಳವನು ಹಾಗೂ ಉಷಾ ದೇವಿಗಿಂತ ಹತ್ತು ಗುಣದಿಂದ ಅಧಮನು." ||೧೫||

**ಅವತರಣಿಕಾ :**— ಈ ಪದ್ಯದಲ್ಲಿ ೨೬ನೇ ಕಕ್ಷದಲ್ಲಿಪ್ಪ ಸುಕರ್ಮಾಭಿಮಾನಿ ಪುಷ್ಕರನ ಆರಂಭಿಸಿ ೨೯ನೇ ಕಕ್ಷದಲ್ಲಿದ್ದ ದೇವಗಂಧರ್ವರವರೆಗೆ ಇರುವ ಗುಣತಾರತಮ್ಯವನ್ನು ಹೇಳುತ್ತಾರೆ.

**ಎರಡು ಗುಣ ಕರ್ಮಾಧಿಪತಿ ಪು ।**
**ಷ್ಕರ ಕಡಿಮೆ ಆಜಾನು ದಿವಿಜರು ।**
**ಚಿರಪಿತೃಗಳಿಂದುತ್ತಮರು ಕಿಂಕರರು ಪುಷ್ಕರಗೆ ॥**
**ಸುರಪನಾಲಯ ಗಾಯಕೋತ್ತಮ ।**
**ಎರಡಯಿದು ಗುಣದಿಂದಧಮ ತುಂ ।** ||೧೬||
**ಬುರುಗೆ ಸಮ ನವಕೋಟಿಋಷಿಗಳು ನೂರುಜನರುಳಿದು**

**ಪದ್ಯಾರ್ಥ :**— ಸುಕರ್ಮಾಧಿಪತಿ = ಸಮೀಚೀನ ಕರ್ಮಾಭಿಮಾನಿ ಪುಷ್ಕರನು, ಧರಾಶನೈಶ್ಚರಾದಿಗಳಿಗಿಂತಲೂ, ಎರಡು ಗುಣ ಕಡಿಮೆ. ಆಜಾನುಜದಿವಿಜರು = ದೇವಭೃತ್ಯರಾದ ಆಜಾನಜ ದೇವತೆಗಳು ಪುಷ್ಕರನಿಂದ ಎರಡು ಗುಣ ಕಡಿಮೆ. ಈ ಆಜಾನಜರಿಂದ, ಶತೋನ ಶತ ಕೋಟಿ ಋಷಿಗಳು, ಇವರಿಂದ ಚಿರ ಪಿತೃಗಳು ಕಡಿಮೆ, ಇವರೆಲ್ಲರೂ, ಪುಷ್ಕರಗೆ ಕಿಂಕರರು = ಪುಷ್ಕರನಾಮಕ ದೇವಗೆ ಸೇವಕರೆನಿಸುತ್ತಾರೆ. ಚಿರಪಿತೃಗಳಿಂದ ಸುರಪನಾಲಯ ಗಾಯಕೋತ್ತಮನಾದ ತುಂಬುರನು, ಎರಡಯಿದು ಗುಣದಿಂದಧಮ = ಹತ್ತು ಗುಣದಿಂದ ಕಡಿಮೆ ಎನಿಸುತ್ತಾರೆ. ತುಂಬುರುಗೆ ಸಮ ನವಕೋಟಿ ಋಷಿಗಳು ನೂರು ಜನರುಳಿದು = ಮೇಲೆ ಹೇಳಿದ ಭೃಗ್ವಾದಿ

೧೦ ಜನರು, ಕರ್ಮಜ ದೇವತೆಗಳ ಕಕ್ಷದಲ್ಲಿ ಹೇಳಿದ ನವತಿ (೯೦) ಹೀಗೆ ನೂರು ಜನರನ್ನು ಬಿಟ್ಟು, ನವಕೋಟಿ ಋಷಿಗಳು=೯ ಕೋಟಿ ಋಷಿಗಳು ಸಮಾನರು. ಈ ವಿಷಯ ವಿಚಾರಾಂಶವಿದೆ, ಇನ್ನೊಂದೆಡೆ ಶತೋನ ಶತ ಕೋಟಿ ಋಷಿಗಳೆಂದು ಹೇಳಿದ್ದಾರೆ.

**ಭಾವಸೂಚನ** || ಎರಡೇತಿ ಯಥೋಕ್ತಂ || ಶನೈಶ್ಚರಾತ್ ಕರ್ಮ ಮಾನೀ ಪುಷ್ಕರೋಽಶ್ಯವಃ ಸ್ಮೃತ ಇತಿ || ಆಜಾನಜಾ ಇತಿ||ತೇ ಕ ಇತಿ ಚೇ ದುಚ್ಯತೇ || "ಅನಾಖ್ಯಾತಾ ದೇವತಾಸ್ತು ಜಾತಾ ದೇವಕುಲೇ ಚ ಯಃ || ಗಂಧರ್ವಾಸ್ತುಂಬುರುಮುಖಾಃ ಶತಮಪ್ಸರಸಾಂ ಶತಂ || ನಾರದಾದೀನುಚಿ ತ್ವಾಥ್ಯಂತಾನ್ವಿನೋಕ್ತಾ ಋಷಯೋಽಖಿಲಾಃ || ಆಜಾನದೇವಾಸ್ತೇ ಜ್ಞೇಯಾ ಇತಿ ||೧೬||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಎರಡು" ಇತಿ|| " ಕರ್ಮಜೇಭ್ಯಃ ಶತಾವರಾಃ||ಆಜಾನಾಃ"||ತೇಭ್ಯಃ ಋಷಯಃ||ಅನಂತರಂ ಚಿರ ಪಿತರಃ||ತೇಭ್ಯಃ ಗಂಧರ್ವಾಃ||ಶತಾವರಾಃ|| ತುಂಬುರೋಃ ಶತಂ ವಿನಾ ಶತಕೋಟ್ಯಃ ಋಷೀಣಾಂ ಸಮಾಃ ಇತ್ಯರ್ಥಃ|| ತೇಭ್ಯಃ ಶತಾವರಾಃ ದೇವಗಂಧರ್ವಾಃ ಪರಿಕೀರ್ತಿತಾಃ || ಮುನಯೋಽತ್ರ ಪರಿಗ್ರಾಹ್ಯಾಃ **ಶತೋನಶತಕೋಟಯಃ** || ಋಷಯೋ ದೇವಗಂಧರ್ವ ಸಮಾಃ"||ಇತಿ ಕೇಷಾಂಚಿತ್ ಪಕ್ಷಃ||ಏತದೇವ ಆಜಾನೇಯಸಾಮ್ಯೇ "ದೇವೈಃ ಸಹಿತಗಂಧರ್ವಾಃ ಋಷಯೋ ದೇವತಾಃ ತಥಾ||" ಇತಿ ಬೃಹತ್ ತೇಷಾಂ ಮಾನಮ್ || ತತ್ ಅನ್ಯಥಾ ವಿವೃತಾ ವಿವೃತಮ್ || ತದ್ವಿವಕ್ಷಯಾ ಇದಮ್ || ಅಜಾನದೇವಾಃ ಇತ್ಯುಕ್ತ್ವಾ "ಆಜಾನಜೇಭ್ಯಸ್ತು ಪಿತರಃ ಸಪ್ತಭ್ಯೋಽನ್ಯೇ ಶತಾವರಾಃ||ಪಿತೃಭ್ಯಃ ದೇವಗಂಧರ್ವಾಃ ತೇಭ್ಯಃ ಸ್ಯುಃ ಚಕ್ರವರ್ತಿನಃ || ತೇಭ್ಯಸ್ತು ಮಾನುಷಾಃ ಶ್ರೇಷ್ಠಾಃ ಕ್ರಮಾತ್ ಶತ ಗುಣಾಧಮಾಃ ||೧೬||

## ಕನ್ನಡಾರ್ಥ

ಆಜಾನಜದೇವತೆಗಳು ಕರ್ಮಜದೇವತೆಗಳಿಗೆ ನೂರು ಗುಣಗಳಿಂದ ಕಡಿಮೆಯವರು. ಆಜಾನಜದೇವತೆಗಳಿಗೆ ಋಷಿಗಳು ಕಡಿಮೆಯವರು, ಋಷಿ

ಗಳಿಗೆ ಚಿರಪಿತೃಗಳು ಕಡಿಮೆಯವರು, ಚಿರಪಿತೃಗಳಿಗೆ ಗಂಧರ್ವರು ಕಡಿಮೆ ಯವರು, ದೇವಗಂಧರ್ವರಲ್ಲಿರುವ ತುಂಬುರುನಾಮಕ ಗಂಧರ್ವನಿಗೆ ನೂರು ಕಡಿಮೆ ಒಂಭತ್ತು ಕೋಟಿ (೮೯೯೯೯೯೦೦) ಋಷಿಗಳು ಸಮಾನರು" ಎಂದು ಅರ್ಥವನ್ನು ತಿಳಿಯಬೇಕು ಮೂಲದಲ್ಲಿ ಹೇಳಿದ್ದಾರೆ. "ತೇಭ್ಯಃ ಶತಾ ವರಾಃ" ಇತ್ಯಾದಿ ವಾಕ್ಯಗಳು ಈ ವಿಷಯದಲ್ಲಿ ಆಧಾರಗಳಾಗಿರುತ್ತವೆ.

"ಋಷಿಗಳೂ ದೇವಗಂಧರ್ವರೂ ಸಮರು" ಕೆಲವರ ಅಭಿಪ್ರಾಯ ವಿರುತ್ತದೆ. (ಹೀಗೆ ಹೇಳುವವರದೊಂದು ಗುಂಪು ಇರುತ್ತದೆ.) "ದೇವೈಃ ಸಹಿತ ಗಂಧರ್ವಾಃ ಋಷಯಃ ದೇವತಾಃ ತಥಾ" (ದೇವತೆಗಳಿಂದ ಯುಕ್ತರಾದ ಗಂಧರ್ವರು ದೇವ ಗಂಧರ್ವರು ಹಾಗೂ ಅವರಂತೆ ಋಷಿಗಳು) ಎಂದು ಹೇಳುವ ಬೃಹದ್ವಚನವು ಅವರಿಗೆ ಆಧಾರವಾಗಿರುತ್ತದೆ. ಆದರೆ ಈ ವಚನ ವನ್ನು ತಾರತಮ್ಯ ವಿವೃತಿಯಲ್ಲಿ ಬೇರೆ ರೀತಿಯಿಂದ ವಿವರಿಸಿರುತ್ತಾರೆ. ಇದೇ ಅಭಿಪ್ರಾಯದಿಂದಲೇ ಈ ಗುಂಪಿನವರ ಮತದಲ್ಲಿ ಸಮ್ಮತಿಯಿಲ್ಲದಿರುವದ ರಿಂದಲೇ ಆಜಾನಜ ದೇವತೆಗಳೆಂದು ಹೇಳಿ "ಆಜಾನ ದೇವತೆಗಳು" ಎಂದು ಪದವನ್ನು ಪ್ರಯೋಗಿಸಿರುತ್ತಾರೆ. "ಅಜಾನಜ ದೇವತೆಗಳ ದಶಿಯಿಂದ ಸಪ್ತರ್ಷಿ (ವಿಶ್ವಾಮಿತ್ರ ಸಹಿತ ಎಂಟು) ಗಳನ್ನು ಬಿಟ್ಟು ಉಳಿದ ಪಿತೃಗಳು ನೂರು ಗುಣದಿಂದ ಕಡಿಮೆಯವರು." ಪಿತೃಗಳಿಗಿಂತಲೂ ದೇವ ಗಂಧರ್ವರು ಕೆಳಗಿನವರು. ಅವರಿಗಿಂತಲೂ ಚಕ್ರವರ್ತಿಗಳು ಕಡಮೆಯವರು. ಚಕ್ರವರ್ತಿ ಗಳಿಗಿಂತ ಮನುಷ್ಯಗಂಧರ್ವರು ಶ್ರೇಷ್ಠರು. ಮನುಷ್ಯಗಂಧರ್ವರಿಗಿಂತ ನೂರು ಗುಣದಿಂದ ಉತ್ತಮರು ದೇವಗಂಧರ್ವರು. "ದೇವಗಂಧರ್ವರು ಪಿತೃದೇವತೆ ಗಳಿಂದ ನೂರು ಗುಣಗಳಿಂದ ಅಧಮರು" ಎಂದು ತಿಳಿಯಬೇಕು ||೧೬||

**ಅವತರಣಿಕಾ :—**ಋಷಿ ಪತ್ನಿಯರು, ಚಿರ ಪಿತೃಗಳ ಪತ್ನಿಯರು, ಅಪ್ಸರೆಯರು ಸಮಾನರು. ಇವರಿಂದ ೧೨ ಗುಣದಿಂದ ಮನುಜ ಗಂಧರ್ವರು ಅಧಮರು, ಮನುಜ ಗಂಧರ್ವರಿಂದ ಮನುಷ್ಯರಾಜರು ಅವರ ಸ್ತ್ರೀಯರು ಹತ್ತು ಗುಣದಿಂದ ಕಡಿಮೆ, ಮನುಜರಾಜರಿಂದ ಮಾನುಷೋತ್ತಮರು ನೂರು ಗುಣದಿಂದ ಅಧಮರೆಂದು ಹೇಳುತ್ತಾರೆ.

**ಅವರವರ ಪತ್ನಿಯರು ಅಪ್ಸರ ।**
**ಯುವತಿಯರು ಸಮ ಉತ್ತಮರನುಳಿ ।**
**ದವರರೆನಿಪರು ಮನುಜಗಂಧರ್ವರು ದ್ವಿಷಡ್ಗುಣದಿ ॥**
**ಕುವಲಯಾಧಿಪರೀರಯಿದು ಗುಣ ।**
**ಅವನಿಪ ಸ್ತ್ರೀಯರು ದಶೋತ್ತರ ।**
**ನವತಿ ಗುಣದಿಂದಧಮರೆನಿಪರು ಮಾನುಷೋತ್ತಮರು ॥೧೭॥**

**ಪದ್ಯಾರ್ಥ :**—ಅವರವರ ಪತ್ನಿಯರು= ಮೇಲೆ ಹೇಳಿದ ಋಷಿ ಪತ್ನಿಯರು ಚಿರಪಿತೃಗಳ ಪತ್ನಿಯರು, ಅಪ್ಸರ ಸ್ತ್ರೀಯರು, ಎಲ್ಲರು ಸಮಾನರು, ಈ ಉತ್ತಮರನುಳಿದವರರೆನಿಪರು, ಮನುಜ ಗಂಧರ್ವರು ದ್ವಿಷಡ್ಗುಣದಿ= ಈ ಉತ್ತಮರನ್ನು ಬಿಟ್ಟು ಮಾನುಷ ಗಂಧರ್ವರು ಹನ್ನೆರಡು ಗುಣದಿಂದ ಕಡಿಮೆ ಎನಿಸುತ್ತಾರೆ. ಈ ಮನುಜ ಗಂಧರ್ವರಿಂದ ಕುವಲಯಾಧಿಪ ಅವನಿಪ ಸ್ತ್ರೀಯರು= ಪೃಥ್ವೀಪತಿಗಳಾದ ಮಾನುಷರಾಜರು, ಅವರ ಹೆಂಡರು ಈರೈದು ಗುಣ= ಹತ್ತು ಗುಣಗಳಿಂದ ಕಡಿಮೆ. ನರಚಕ್ರವರ್ತಿಗಳಿಂದ, ದಶೋತ್ತರ ನವತಿ ಗುಣದಿಂ= ನವತಿ ೯೦ಕ್ಕೆ ಹೆಚ್ಚು ೧೦, ೯೦+೧೦=೧೦೦ ಗುಣಗಳಿಂದ ಅಧಮರೆನಿಪರು ಮಾನುಷೋತ್ತಮರು= ಮನುಜ ಶ್ರೇಷ್ಠರು, ನೂರು ಗುಣಗಳಿಂದ ಕಡಿಮೆ ಎನಿಸುತ್ತಾರೆ.

**ಭಾವಸೂಚನ॥** ಅವರೇತಿ ॥೧೭॥

**ವಿಶೇಷ ಸೂಚನೆ॥** ಈ ಗುಣ ತಾರತಮ್ಯ ಸಂಧಿಯಲ್ಲಿ ಕರ್ಮಜ ದೇವತೆಗಳ ಕಕ್ಷ, ಅಜಾನಜ ದೇವತೆಗಳ ಕಕ್ಷ, ಚಿರಪಿತೃ, ಋಷಿಗಳು ಇವರೆಲ್ಲ ಕಕ್ಷದಲ್ಲಿರುವ ದೇವತೆಗಳನ್ನು ಬಹು ಸಂಕ್ಷಿಪ್ತವಾಗಿ ವರ್ಣಿಸಿದ್ದಾರೆ. ಬೃಹತ್ತಾರತಮ್ಯ, ಕಕ್ಷಾತಾರತಮ್ಯದಲ್ಲಿ ಸವಿಸ್ತರ ವರ್ಣಿಸಿದ್ದಾರೆ. ಕೆಲವು ವಿರೋಧ ಸಾಮಾನ್ಯ ಕಾಣುತ್ತವೆ. ಮುಂದೆ ವಿರೋಧ ಬಾರದಂತೆ ೨೪ನೇ ಸಂಧಿಯ ಸಾರದಲ್ಲಿ ವಿವರಿಸುತ್ತದೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಅವರವರು' ಇತಿ ॥ ತೇಭ್ಯಃ ಮನುಷ್ಯಗಂಧರ್ವಾಃ ಸಾರ್ಧದ್ವಾದಶತಃ ಅಧಮಾಃ ॥ ಯದ್ವಾ ಅಷ್ಟಭಿಃ ಸ್ತ್ರಿಯಃ ಪತಿಭಿಃ "ದೇವಗಂಧರ್ವ

ಪತ್ನ್ಯಶ್ಚ ಮುನಿಪತ್ನ್ಯಃ ತಥೈವ ಚ॥ ಭರ್ತೃಭ್ಯೋಽಷ್ಟಗುಣಾಃ ಪರಿಜ್ಞೇಯಾಃ ಯಾಸಾಂ ಮುಕ್ತೌ ಸಹ ಸ್ಥಿತಿಃ"॥ ಇತಿ. ತಾರತಮ್ಯ ರತ್ನಮಾಲಾಯಾಮ್॥ ಅವಮಾಃ ಶತಗುಣೈಃ ಉತ್ತರಾರ್ಧೋಕ್ತೈಃ॥ ಕುವಲಯಾಧಿಪಾಃ ರಾಜಾನಃ॥ ತಾಭ್ಯಃ ನರಗಂಧರ್ವಾಣಾಂ ದ್ವಿಷಡ್ಗುಣೋನತ್ವಾತ್ ಕ್ವಚಿತ್‌ಕ್ವಚಿತ್‌ಸ್ಥಲೇ ತಥೋಕ್ತೇಃ ಏವಂ ಉಕ್ತಾವಪಿ ಬಲವತ್ಪ್ರಮಾಣಾದೇವಮೇವ ಮಂತವ್ಯಮ್। ತದ್ಭಾರ್ಯಾಃ ಪತಿಭ್ಯಃ ಅಷ್ಟಗುಣಾಽವರಾಃ॥"ದಶಂ ಶತಂ ಸಹಸ್ರಂ ಚ ಸ್ವೈವ ತನ್ಮಾತ್ರವಾಚಕಮ್॥ ಅವಿರೋಧಃ ತತೋ ಜ್ಞೇಯಃ ನಾನಾ ವಾಕ್ಯೇಷು ಸರ್ವಶಃ॥" ಇತ್ಯುಕ್ತೇಃ॥೧೭॥

## ಕನ್ನಡಾರ್ಥ

ಅವರಿಂದ-ನೂರುಳಿದ ನವಕೋಟಿ ಋಷಿಗಳಿಂದ ಮನುಷ್ಯ ಗಂಧರ್ವರು ೧೨॥ ಗುಣಗಳಿಂದ ಅಧಮರು ಎಂದು ಅರ್ಥ. ಅಥವಾ ದ್ವಿಷಡ್ ಗುಣ ಶಬ್ದಕ್ಕೆ ಎಂಟು ಗುಣಗಳೆಂದು ಅರ್ಥವನ್ನು ತಿಳಿಯಬೇಕು. "ದೇವಗಂಧರ್ವ ಪತ್ನಿಯರು ಹಾಗೂ ಋಷಿಪತ್ನಿಯರು ತಮ್ಮ ತಮ್ಮ ಪತಿಗಳಿಂದ ಎಂಟು ಗುಣಗಳಿಂದ ಕಡಮೆಯವರೆಂದು ತಿಳಿಯಬೇಕು; ಅವರು ಮುಕ್ತಿಯಲ್ಲಿ ತಮ್ಮ ಪತಿಗಳೊಡನೆಯೇ ಇರುತ್ತಾರೆ;" ಎಂದು ತಾರತಮ್ಯ ರತ್ನಮಾಲೆಯಲ್ಲಿ ಹೇಳಲಾಗಿದೆ. 'ಅವಮಾಃ (ಅವರರು)' ಎಂದರೆ ನೂರು ಗುಣಗಳಿಂದ ಕಡಮೆಯವರು ಎಂದು ಉತ್ತರಾರ್ಧದಲ್ಲಿ ಹೇಳಿದ್ದಕ್ಕನುಗುಣವಾಗಿ ತಿಳಿಯಬೇಕು.

"ಕುವಲಯಾಧಿಪರು=ರಾಜರುಗಳು. ದೇವ ಋಷಿಪತ್ನಿಯರಿಂದ ಮನುಷ್ಯಗಂಧರ್ವರು ೧೨ ಗುಣಗಳಿಂದ ಕಡಿಮೆಯುವರು," ಎಂದು ಕೆಲ ಕೆಲವು ಗ್ರಂಥಗಳಲ್ಲಿ ಹೇಳಿದುದಾದರೂ ಬಲಯುಕ್ತ, ನಿರವಕಾಶವಾದ ಪ್ರಮಾಣಗಳಿರುವದರಿಂದ ಅವರವರ ಪತ್ನಿಯರಿಗೂ ಋಷಿ ದೇವತೆಗಳಿಗೂ ಎಂಟು ಗುಣಗಳ ಅಂತರವಿರುವದಾಗಿಯೂ ಆ ದೇವಗಂಧರ್ವರಿಗೂ ತತ್ಸಮರಾದ ನೂರು ಕಡಿಮೆ ನವಕೋಟಿ ಋಷಿಗಳಿಗೂ ಮನುಷ್ಯಗಂಧರ್ವರು ನೂರು ಗುಣಗಳಿಂದ ಕಡಮೆಯುವರೆಂದೂ ಅರ್ಥವನ್ನು ತಿಳಿಯಬೇಕು.

"ದಶ, ಶತ, ಸಹಸ್ರ" ಮುಂತಾದ ಶಬ್ದಗಳಿಗೆ, ಹತ್ತು, ೧೦೦, ೧೦೦೦, ಎಂದು ಅಷ್ಟೇ ಸಂಖ್ಯೆಗಳೆಂದು ಅರ್ಥವಲ್ಲ. ಹೆಚ್ಚಿನ ಸಂಖ್ಯೆಗಳೂ

ಅರ್ಥವಾಗುವವು" ಎಂದು ಪ್ರಮಾಣಗಳಿರುವದರಿಂದ ಅನೇಕ ವಾಕ್ಯಗಳಿಗೆ ಪರಸ್ಪರ ವಿರೋಧವಿರುವದಿಲ್ಲ. ||೧೭||

**ಅವತರಣಿಕಾ :—**ಹಿಂದೆ ಮಾನುಷೋತ್ತಮರವರೆಗೆ ಗುಣತಾರ ತಮ್ಯ ಪೇಳಿ ಈಗ ತ್ರಿವಿಧ ಗುಣಸ್ವಭಾವಉಳ್ಳವರು ಯಾವ ಗುಣದವರು ಎಂಬುದನ್ನು ಈ ೧೮, ೧೯, ಎರಡು ಪದ್ಯಗಳಿಂದ ವಿವರಿಸುತ್ತಾರೆ.

**ಸತ್ವ ಸತ್ವರು ಸತ್ವರಾಜಸ।**
**ಸತ್ವ ತಾಮಸ ಮೂವರು ರಜ।**
**ಸ್ಸತ್ವರಧಿಕಾರಿಗಳು ಭಗವದ್ಭಕ್ತರೆನಿಸುವರು॥**
**ನಿತ್ಯ ಬದ್ಧರು ರಜರಜೋರಜರು।**
**ಸ್ಪತ್ತಿ ಭೂಸ್ವರ್ಗದೊಳು ನರಕದಿ।**
**ಪೃಥ್ವಿಯೊಳುಸಂಚರಿಸುತಿಪ್ಪರು ರಜಸ್ತಾಮಸರು ||೧೮||**

**ಪದ್ಯಾರ್ಥ:—**ಸತ್ವ ಸತ್ವರು ಮೂಲದಲ್ಲಿ ಸ್ವಭಾವತಃ ಸತ್ವಜೀವರು, ರಜೋಜೀವರು ತಮೋಜೀವರೆಂದು ಜೀವನತ್ರೈವಿಧ್ಯ ಅನಾದಿನಿತ್ಯವಾದುದು. ಈ ಸತ್ವಾದಿ ಗುಣಸ್ವಭಾವದಲ್ಲಿ ಒಂದೊಂದುಗುಣದಲ್ಲಿ ಮೂರುವಿಧ ೧ ಸತ್ವ ಸತ್ವ ಸತ್ವ ೨ ಸತ್ವ ಸತ್ವ ರಜ ೩ ಸತ್ವ ಸತ್ವ ತಮ ಇತ್ಯಾದಿ. ಹೀಗೆ ಒಂದು ಗುಣದಲ್ಲಿ ೯ ವಿಭಾಗದಂತೆ ೩ ಗುಣದಲ್ಲಿ ೨೭ ವಿಭಾಗ ಮಾಡಿದ್ದಾರೆ. ಸೃಷ್ಟಿ ಪ್ರಕರಣ ಸುಳಾದಿ ಹಿನ್ನುಡಿ ಪುಟ ೪೧ ಮತ್ತು ಅಧ್ಯಾತ್ಮಮಾಲಾದಲ್ಲಿ ನೋಡಿ ಇದನ್ನು ಚೆನ್ನಾಗಿ ತಿಳಿಯುವದು. ಇಲ್ಲಿ ವಿವರಿಸಲು ಬಹು ವಿಸ್ತಾರ ಭಯ. ಇಲ್ಲಿ ದಾಸಾರ್ಯರು ಸಂಕ್ಷಿಪ್ತವಾಗಿ ಪೇಳಿದ್ದಾರೆ. ಸತ್ವ-ಸತ್ವ ಗುಣದವರು, ಸತ್ವ ರಾಜಸ ಗುಣದವರು, ಸತ್ವ ತಾಮಸ ಗುಣದವರು, ರಜ ಸತ್ವ ಗುಣ ದವರು, ಅಧಿಕಾರಿಗಳು=ಅಂದರೆ ಮುಕ್ತಿಯೋಗ್ಯ ಅಧಿಕಾರಿಗಳು, ಭಗವದ್ಭಕ್ತ ರೆನಿಸುವರು=ಭಗವಂತನಲ್ಲಿ ಪೂರ್ಣೈಶ್ವರ್ಯ ಸಂಪನ್ನನಾದ ಹರಿಯಲ್ಲಿ ನೈಜ ಭಕ್ತಿಯುಳ್ಳವರೆನಿಸುತ್ತಾರೆ. ರಜೋ ರಜೋ ಗುಣ ಪ್ರಾಚುರ್ಯರು, ನಿತ್ಯ ಬದ್ಧರು, ನಿತ್ಯಸಂಸಾರಿಗಳು, ತ್ರಿವಿಧರು, ನಿರಯ ಪ್ರಚುರರು, ಭೂಪ್ರಚುರರು, ಸ್ವರ್ಗಪ್ರಚುರರು, ಉಪ್ಪತ್ತಿ ಭೂಸ್ವರ್ಗದೊಳು ನರಕದಿ ಪೃಥ್ವಿಯೊಳು ಸಂಚರಿ ಸುತಿಪ್ಪರು=ಇವರೆಲ್ಲ ಪೃಥ್ವಿಯೊಳು ಸಂಚಾರ ಮಾಡುವರಲ್ಲದೇ, ರಜ

ಸ್ತ್ರಾಮಸರು = ಮಾನುಷಾಧಮರು, ಇವರು ಪೃಥ್ವಿಯಲ್ಲಿ ಸಂಚಾರ ಮಾಡುವರು.

**ಭಾವಸೂಚನಕಾರರು** ಬ್ರಹ್ಮಾದಿ ಜೀವರೆಲ್ಲರು ಯಾವಾವ ಗುಣದವರೆಂಬುವದನ್ನು ಸವಿಸ್ತರ ಪ್ರಮಾಣಗಳೊಂದಿಗೆ ಬರೆದಿರುವರು.

**ಭಾವಸೂಚನ :—**ಸತ್ವೇತಿ ॥ ಸತ್ವಸ್ಥರು । ಶುದ್ಧಸತ್ವರೂಪಾಃ ತಾತ್ವಿಕಾ ಬ್ರಹ್ಮಾದ್ಯಾಃ ॥ ವಾಯುಪುರಾಣೇ ಚ । ಅಪರೋಕ್ಷ್ಯಾತ್ ಹರೌ ಯೇ ತು ನಾನ್ಯಭಾವಸಮಾಶ್ರಯಾಃ ॥ ಯೋಗಾದ್ಭಾವಂ ಪರ್ಥಯಂತಃ ಶುದ್ಧಸತ್ವಾ ಇಮೇ ಮತಾಃ ॥ ೪೪ ॥ ತತ್ವಾಭಿಮಾನಿನೋ ದೇವಾ ಬ್ರಹ್ಮಾದ್ಯಾ ಪರಿಕೀರ್ತಿತಾಃ ॥ **ಸತ್ವರಾಜಸೇತಿ** ॥ ಸಾತ್ವಿಕಾ ಮುಕ್ತಿಯೋಗ್ಯಾಃ ಕ್ಷಿತಿಪಾದಯಃ ॥ ತೇಷಾಂ ಲಕ್ಷಣಂ ॥ ಶುದ್ಧಸಾತ್ವಿಕದ್ವಾರೋಪದಿಷ್ಟ ಜ್ಞಾನತ್ವೇ ಸತಿ ಶ್ರೀಹರಿಸರ್ವೋತ್ತಮತ್ವದಾರ್ಢ್ಯ(ರ್ಢ್ಯ) ವತ್ವಂ ॥ ತದುಕ್ತಂ ॥ ಭಾವಾದನ್ಯಾದ್ಭಿನ್ನರೂಪಾತ್ಸಂಗಾತ್ ಸತ್ವಂ ಸಮಭ್ಯಸೇತ್ ॥ ಯೋ ನಿಜಾಂ ಪ್ರಕೃತಿಂ ಯಾಯಾತ್ ಸ ಸತ್ವಸತ್ವೋ ಜೀವ ಉಚ್ಯತ ಇತಿ ॥ ಭಾವದೀಪಿಕಾ ತು ॥ ಚತುರ್ಥ ಷಷ್ಠ್ಯೌ ಇತಿ ನ್ಯಾಯಾದ್ಭಾವಾದಿತಿ ಪಂಚಮೀ ಷಷ್ಠ್ಯರ್ಥೇ ॥ ಭಾವಸ್ಯ ಶುದ್ಧಸ್ವಭಾವಸ್ಯ ಅಭ್ಯಸ್ಯಜನವಿಲಕ್ಷಣಸ್ಯ ಭಿನ್ನರೂಪಸ್ಯ । ಜಡೋನ್ಮತ್ತಪಿಶಾಚಕಲ್ಪಸ್ಯ ಶುದ್ಧಸಾತ್ವಿಕಸ್ಯ ಪುಂಸಃ ಸಂಗಾತ್ ಸತ್ವಂ ಜ್ಞಾನಂ ಅಭ್ಯಸೇತಿ । ಯಃ ನಿಜಾಂ ಪ್ರಕೃತಿಂ । ಹರೇಃ ಸರ್ವೋತ್ತಮತ್ವಸ್ವಭಾವಂ ಯಾಯಾತ್ ಯಾತೇರ್ಗತ್ಯರ್ಥತ್ವಾಜ್ಜಾನೀಯಾತ್ ॥ ಸ ಸತ್ವ ಇತ್ಯನ್ವಯಃ ॥ ತೇ ಕ ಇತಿ ಆಹ ॥ ಕ್ಷಿತಿಪಾ ಇತಿ ॥ ಕ್ಷಿತಿಪಾ ಮನುಷ್ಯಗಂಧರ್ವಾ ದೇವಾಶ್ಚ ಪಿತರಶ್ಚಿರಾಃ ॥ ಆಜಾನಜಾ ಕರ್ಮಜಾಶ್ಚ ದೇವಾ ಯೇ ಸಾತ್ವಿಕಾ ಮತಾಃ ॥ **ಸತ್ವತಾಮಸೇತಿ** ॥ ತಾಮಸಾ ಇತ್ಯರ್ಥಃ ॥ ತಲ್ಲಕ್ಷಣಂ ಚ ॥ ಸತ್ಯಾದಿವರ್ಜಿತತ್ವೇ ಸತಿ ಮಿಶ್ರಬುದ್ಧಿಮತ್ವೇ ಸತಿ ಉಚ್ಚಾವಚಲೋಕಭ್ರಮಣಕರ್ತೃತ್ವ ಆವೋಹಃ । ತಲ್ಲಕ್ಷಣಂ ಚ ॥ ಸತ್ಯಶೌಚದಯಾಹೀನಾಃ ಸದಾ ಯೇ ಮಿಶ್ರಬುದ್ಧಯಃ ॥ ಉಚ್ಚಾವಚೇಷು ಲೋಕೇಷು ಭ್ರಮಂತಸ್ತಾಮಸಾಸ್ತ್ವಿತಾ ಇತಿ ॥ ಭಾವಸತ್ವಂ ಭೂತಹಿತಂ ॥ ಮಿಶ್ರಬುದ್ಧಯಃ ರಜಸ್ತಮೋಮಿಶ್ರಬುದ್ಧಯಃ । ತೇ ಇಮ ಏವೇತ್ಯಾಹ ॥ **ನಿತ್ಯೇತಿ** ॥ ನಿತ್ಯಸಂಸೃತಿಬದ್ಧಾಸ್ತೇ ಜೀವಾ ಮಾನುಷಸಂಜ್ಞಿನ ಇತಿ ॥ ನಿತ್ಯಸಂಸಾರಿಣ ಇತಿ ಹೃದಯಂ ॥ **ರಜಃ**

**ಸತ್ವೇತಿ** || ರಾಜಸಾ ಇತ್ಯರ್ಥಃ || ತೇ ಮಾನುಷೋತ್ತಮಾಃ |ತಲ್ಲಕ್ಷಣಂ ಚ|| ರಜೋಮಿಶ್ರಸ್ವಭಾವತ್ವೇ ಸತಿ ಪ್ರಥಮತೋಽನ್ಯತ್ರೋಚ್ಛಲಿತತ್ವೇ ಸತಿ ಪಶ್ಚಾದ್ಗುರೂಪ್ರೋಚ್ಛಲಿತಂ. ಶುದ್ಧಭಾವವತ್ವಂ || ಭಾವರಾಜಸಲಕ್ಷಣಮಾಹ || **ರಜಇತಿ**|| ರಜೋಮಿಶ್ರಸ್ವಭಾವಾ ಯೇ ಭಜಂತ್ಯನ್ಯಾಂಶ್ಚ ಕರ್ಮಭಿಃ|| ಪಶ್ಚಾದ್ಗುರುಪ್ರಸಾದೇನ ಶುದ್ಧಭಾವಮುಪೇಯುಷಃ|| ಜೀವಾಸ್ತೇ ರಾಜಸಾಃ ಪ್ರೋಕ್ತಾ ಮುಕ್ತಿಗಾ ಮಾನುಷೋತ್ತಮಾ ಇತಿ ||ಅನ್ಯಾನ್ ಹರೇರನ್ಯಾನ್| ಶುದ್ಧಭಾವಂ ನಿರ್ದೋಷಪರಮಾತ್ಮಸ್ವರೂಪಂ ಉಪೇಯುಷಃ=ಪ್ರಾಪ್ತುಮಿಚ್ಛವಃ || ಭಜಂತೀತ್ಯರ್ಥಃ || ತಾನ್ನಿರ್ದಿಶತಿ ಮುಕ್ತಿಗಾ ಇತಿ || ೧೮ ||

**ಶ್ರೀ ಗುರುಶ್ರೀಶ ವಿಠಲರ ಶಿಷ್ಯರು ಈ ಪದ್ಯಕ್ಕೆ ಮಾತ್ರ ಒಂದೆಡೆ** ಟಿಪ್ಪಣಿರೂಪವಾಗಿ ಬರೆದಿರುತ್ತಾರೆ. ಅಷ್ಟೇ ಈ ಪದ್ಯದಡಿ ಕೊಡಲಾಗಿದೆ. **ಜ್ಞಾನಿಗಳು ಚೆನ್ನಾಗಿ ತಿಳಿವುದು.**

ಶ್ರೀ ಮದಾನಂದತೀರ್ಥಭಗವತ್ಪಾದಾಚಾರ್ಯ ಗುರುಭ್ಯೋ ನಮಃ|| ಶ್ರೀ ಆದಿನಾರಾಯಣನ ಸರ್ವೋತ್ತಮತ್ವ, ಶ್ರೀ ರಮಾಬ್ರಹ್ಮಾದಿಗಳಿಗೆ **ಗುಣ ತಾರತಮ್ಯ ವಿವರ.**

ಶ್ರೀ ಗುರುಜಗನ್ನಾಥದಾಸರಾಯಗುರುಭ್ಯೋ ನಮಃ || ಶ್ರೀ ಗುರು ಶ್ರೀಶವಿಠಲದಾಸರಾಯಗುರುಭ್ಯೋ ನಮಃ|| ಶ್ರೀ ಆದಿನಾರಾಯಣ ಸರ್ವೋತ್ತಮ. ಶ್ರೀ ರಮಾ ಆದಿನಾರಾಯಣನಿಂದ ಅನಂತ ಗುಣ ನ್ಯೂನಳು. ನ್ಯೂನಳು, ತ್ರಿಗುಣವರ್ಜಿತಳು. ಸತ್ವರಜ, ತಮತ್ರಿಗುಣಾಭಿಮಾನಿ. ರಮಾ ದೇವಿಯರು, ನಿತ್ಯಮುಕ್ತರು.

೧ ಶುದ್ಧಸತ್ವ ಸತ್ವ ಮಹಾಸತ್ವ ಸೃಷ್ಟಿಗೆ ಉಪಾದಾನವಿಲ್ಲ. ಇದು ಕೇವಲ ಮುಕ್ತರ ಭೋಗಕ್ಕೆ ಕಾರಣವಾದುದು.

೨ ಸತ್ವಗುಣದೊಳಗೆ ಎರಡು ಭಾಗ.

೧ ಸತ್ವರೂಢವರು ನಾಲ್ವರು. ಇವರ ವಿವರ.

೧ ಬ್ರಹ್ಮ ೨ ವಾಯುಗಳು ೩ ಸರಸ್ವತೀ ೪ ಭಾರತೀ ದೇವಿಯರು. ಈ ನಾಲ್ಕುಜನ ಮಹತ್ತತ್ವಾಭಿಮಾನಿಗಳು.

೩ ಸತ್ವಸತ್ವ ತಮದವರು ಆರು ಜನರ ವಿವರ.

೧ ಗರುಡ ೨ ಶೇಷ ೩ ರುದ್ರರು ೩ ಜನರು.

೧ ಸೌಪರ್ಣೀ ೨ ವಾರುಣೀ ೩ ಪಾರ್ವತೀ ೩ ಜನರು.

೪ ರಜೋ ಸತ್ವ ಸತ್ವದವರು. ೧೨ ಜನರು. ರಜೋ ಸತ್ವದವರು ಮೂರುವಿಧ.

೧ ಇಂದ್ರಕಾಮಾದಿಗಳು ರಜಃ ಸತ್ವ ಸತ್ವ.

೧ ಅಹಂಕಾರಿಕ ಪ್ರಾಣ ರಜಃ ಸತ್ವ ರಜಃ.

೧ ಅನಿರುದ್ಧ ಬೃಹಸ್ಪತ್ಯಾದಿ ೬ ಜನರು. ರಜಸ್ಸತ್ವತಮ ಈ ಮೂವರು ಮನೋಭಿಮಾನಿಗಳು.

೫ ಇನ್ನು (೯) ಒಂಭತ್ತು ವಿಧ ರಜೋಗುಣದವರು.

೧ ಪ್ರವಾಹವಾಯುದೇವರು. ರಜೋರಜಃ ಸತ್ವ

೫ ರಜೋರಜಃ ರಜಃ ಗುಣದವರು ೫ ಪ್ರಕಾರ.

೧ ರಜೋರಜ ಸ್ಸತ್ವದಶೇಂದ್ರಿಯಗಳಿಗೆ ಅಭಿಮಾನಿಗಳು

೧ ಗಂಗಾಪರ್ಜನ್ಯಾದಿಗಳು ರಜೋರಜಸ್ಸತ್ವದವರು.

೩ ರಜೋ ರಜಸತ್ವದವರು.

೧ ಉಷಾದೇವರು.

೧ ಚಿರ ಪಿತೃಗಳು.

೧ ಮನುಷ್ಯಗಂಧರ್ವರು.

---

೩

೬ (೩) ರಜೋರಜಃ ಸತ್ವದವರು ಮೂರುವಿಧ.

೧ ಕ್ಷುದ್ರರಾಯರುಗಳು.

೧ ಮನುಷ್ಯೋತ್ತಮರು.

೧ ಮೋಕ್ಷಾಧಿಕಾರಿಗಳು.

---

೩–ತೃಣಕೃಮಿ, ದ್ವಿಜ, ಪಶು, ನರೋತ್ತಮ. ಜನಪ ನರ

— ಗಂಧರ್ವಗಣ [illegible] ಪಿತೃನ [illegible]

೧೨ ಗಳು [illegible] || ಹರಿಕಥಾಮೃತಸಾರ.

೭ ರಜೋಗುಣದವರು ಮೂರು ಭಾಗ. ರಜೋ ರಜಃ ರಜಃ

೧ ಸ್ವರ್ಗಪ್ರಚುರರು.

೧ ಭೂಪ್ರಚುರರು.

೧ ನಿರಯಪ್ರಚುರರು.

---

೩ ವಿಧನಿತ್ಯಸಂಸಾರಿಗಳು.

೮ ತಮೋಗುಣದವರು. ತಮೋ ರಜಃ ತಮ.

೧ ನೀಚದೈತ್ಯರು.

೧ ಕೇವಲ ನೀಚ ರಾಕ್ಷಸರು.

೧ ಪರಮ ಕೇವಲ ನೀಚರು, ॥ ಕಲಿ ತತ್ಪತ್ನಿ ಪುರಂಧ್ರಿ.

ಒಟ್ಟಿಗೆ ೨೦ ಗುಣಗಳಿಗೆ ವಿವರ.

೨ ಸತ್ವಗುಣದೊಳಗೆ ಎರಡು ವಿಧ.

ಸತ್ವರಜಃ ಬ್ರಹ್ಮ ವಾಯು ತತ್ಪತ್ನಿಯರು.

ಸತ್ವತಮ ಗರುಡ, ಶೇಷ, ರುದ್ರ ತತ್ಪತ್ನಿಯರು.

೧೨ ರಜೋಗುಣದೊಳಗೆ ೧೨ ಭಾಗ. ರಜಸ್ಸತ್ವ, ಸತ್ವ

೩ ನಿತ್ಯ ಸಂಸಾರಿಗಳು.

೩ ತಮೋಧಿಕಾರಿಗಳು.

---

೨೦ ಗುಣ ಒಟ್ಟಿಗೆ

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸತ್ವ" ಇತಿ ॥ ಸಾತ್ವಿಕ ಸಾತ್ವಿಕಾಃ ತಾತ್ವಿಕಾಃ ॥ ಅತಾತ್ವಿಕಾಃ ಸಾತ್ವಿಕ ರಾಜಸಾಃ ॥ ಅನಾಖ್ಯಾತಾಃ ಸಾತ್ವಿಕತಾಮಸಾಃ ॥ ರಾಜಸಸಾತ್ವಿಕಾಃ ॥ ಮಾನುಷೇಷು ಉತ್ತಮಾಃ ॥ ಗಣಾಃ ॥ ಮಧ್ಯಾಃ (ಮಾಃ) ರಾಜಸರಾಜಸಾಃ ಮಾನುಷಾಃ ದುಷ್ಟಚಾರಿಣಃ ರಾಜಸತಾಮಸಾಃ ಜ್ಞೈವ ॥ ೧೮ ॥

### ಕನ್ನಡಾರ್ಥ

ತಾತ್ವಿಕ (ತತ್ವಾಭಿಮಾನಿ) ದೇವತೆಗಳು ಸಾತ್ವಿಕ ಸಾತ್ವಿಕರು. ಅತಾತ್ವಿಕ ದೇವತೆಗಳು ಸಾತ್ವಿಕ ರಾಜಸ ದೇವತೆಗಳು. ಅನಾಖ್ಯಾತರಾದ ದೇವತೆಗಳು

ಸಾತ್ವಿಕ ತಾಮಸರು. ಮಾನುಷೋತ್ತಮಗಣದವರು ರಾಜಸ ಸಾತ್ವಿಕರು. ಮಧ್ಯಮರು ರಜೋರಜಗುಣದವರು (ರಾಜಸ ರಾಜಸರು). ಮಾನುಷಾಧಮರು ಮಾನುಷ್ಯರಲ್ಲಿ ದುಷ್ಟಕರ್ಮಾಚರಣೆ ನಿರತರು (ತತ್ಸ್ವಭಾವದವರು) ರಾಜಸ ತಾಮಸರು ಎಂದು ಅಭಿಪ್ರಾಯವನ್ನು ತಿಳಿಯಬೇಕು. || ೧೮ ||

ಅವತರಣಿಕಾ :—ಇನ್ನು ಈ ಪದ್ಯದಲ್ಲಿ ತಮಃಸಾತ್ವಿಕರು ತಮೋ ರಾಜಸರು, ತಮಃತಾಮಸರಾರು ಎಂಬುದನ್ನು ಹೇಳುತ್ತಾರೆ.

**ತಮಸು ಸಾತ್ವಿಕರೆನಿಸಿಕೊಂಬರು।**
**ಅಮಿತನಾಖ್ಯಾತಾಸುರರಗಣ ।**
**ತಮಸು ರಾಜಸರೆನಿಸಿಕೊಂಬರು ದೈತ್ಯಸಮುದಾಯ॥**
**ತಮಸು ತಾಮಸಕಲಿಪುರಂಧ್ರಿಯು ।**
**ಅಮಿತ ದುರ್ಗುಣಪೂರ್ಣಸರ್ವಾ।**
**ಧಮರೊಳಧಮಾಧಮ ದುರಾತ್ಮನು ಕಲಿಯೆನಿಸಿಕೊಂಬ॥೧೯॥**

**ಪದ್ಯಾರ್ಥ:**—ತಮಸು ಸಾತ್ವಿಕರೆನಿಸಿಕೊಂಬರು ಅಮಿತ ಅನಾಖ್ಯಾತಾಸುರರಗಣ=ಅನಾಖ್ಯಾತ ಅಸುರರು ಅಂದರೆ ಅಪ್ರಸಿದ್ಧ ಅಸುರರ ಸಮೂಹವೂ, ಅನಾಖ್ಯಾತ ದೇವಗಣದಂತೆ ಇರುವುದು. ಇವರು ತಮಃಸಾತ್ವಿಕ ಗುಣದವರೆನಿಸುತ್ತಾರೆ. ಇನ್ನು ದೈತ್ಯಸಮುದಾಯ=ದಿತಿದೇವಿ ಮಕ್ಕಳಾದ ದೈತ್ಯಸಮೂಹವು, ತಮಸು ರಾಜಸರೆನಿಸಿಕೊಂಬುವರು. ಇದರಲ್ಲಿ ಪ್ರಾಮುಖ್ಯವಾಗಿ ತಮಸು ತಾಮಸರು, ಕಲಿಮಹಾದೈತ್ಯ, ಅವನ ಹೆಂಡತಿ ಪುರಂಧ್ರಿಯು ಇಬ್ಬರು. ಈ ಉಭಯರು. ಅಮಿತದುರ್ಗುಣಪೂರ್ಣ=ಬಹಳವಾದ ಕೆಟ್ಟ ಗುಣಗಳಿಂದ ಪೂರ್ಣನಾದವನು. ಸರ್ವಾಧಮರೊಳಧಮ=ಸರ್ವ ಎಲ್ಲ ನೀಚಕೀಳು ಜನರಲ್ಲಿ ಬಹುನೀಚ, ದುರಾತ್ಮ=ಕೆಟ್ಟಬುದ್ಧಿಯುಳ್ಳವ ಅಥವಾ ದುಷ್ಟ ಅವಲಕ್ಷಣಉಳ್ಳ ದೇಹ ಉಳ್ಳವನು. ಕಲಿಯೆನಿಸಿಕೊಂಬ=ಕಲನಂ ಕಲಯತಿ ವಾ ಕಲಿಃ=ದುಃಖದೊಳಗೆ ಮುಳುಗಿ ಪರರನ್ನು ದುಃಖದೊಳಗೆ ಹಾಕುವನು. ಕಲಯತಿ ಕಲ್ಪ್ಯತೇ ವಾ ಕಲಿಃ=ದುಃಖದಿಂದೇ ಸಂಸ್ಕೃತನಾಗಿರುವನು. ಕಲಹಪುರುಷನು, ಕಲಿ ಎಂದೆನಿಸುತ್ತಾನೆ.

**ಭಾವಸೂಚನ॥** ತಮ ಇತಿ ॥ತಮಃತಾಮಸೇತಿ ಶುದ್ಧತಾಮಸಾ ಇತ್ಯರ್ಥಃ॥ ತಲ್ಲಕ್ಷಣಂ ॥ ಕ್ರೂರಾಚಾರಭರಿತತ್ವೇ ಸತಿ ಭಕ್ತಿಗಂಧಶೂನ್ಯತ್ವೇ ಸತಿ ಅನೂರ್ಧ್ವ ಲೋಕಗತ್ವಂ ॥ಉಕ್ತಂ ಚ ॥ ಕ್ರೂರಾಚಾರಾ ದಯಾಹೀನಾ ಭಕ್ತಿಲೇಶ ವಿವರ್ಜಿತಾಃ॥ ಅನೂರ್ಧ್ವಲೋಕಗಾಃ ಕ್ವಾಽಪಿ ತೇ ಜೀವಾಶ್ಶುದ್ಧ ತಾಮಸಾ ಇತಿ॥ತಾನಾಹ ॥ ತೇ ಜೀವಾ ಇತಿ ತತ್ವಪಂಚಕರಂಜನೀ॥ತೇ ಜೀವಾ ಯಾತು ಧಾನಾದ್ಯಾಃ ದೈತ್ಯದಾನವರಾಕ್ಷಸಾಃ॥ತೇಷ್ವಗ್ರಗಣ್ಯಸ್ತು ಕಲಿರಿತಿ॥೧೯॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತಮ" ಇತಿ ॥ ತೇಷು ಸಾತ್ವಿಕಾಃ ಅನಾಖ್ಯಾತಾಸ್ಸುರಾಃ ॥ ತಾಮಸ ರಾಜಸಾಃ ॥ ತೇಷಾಂ ಅನುಗಾಃ ತಾತ್ವಿಕದೈತ್ಯಾನಾಂ ತಾಮಸತಾಮಸಾಃ ದೈತ್ಯಪ್ರಧಾನಾಃ ಕಲಿಭಾರ್ಯಾಂತಾಃ [ತಾಮಸ ತಾಮಸಾಃ ॥] "ಪುರಂಧ್ರಿ" ಜಾಯಾ॥ಅಮಿತದುರ್ಗುಣಪೂರ್ಣತ್ವಾದೇವ ದುರ್ಲಕ್ಷಣಯುತಃ ಕಲಿಃ॥೧೯॥

## ಕನ್ನಡಾರ್ಥ

ತಾಮಸರಲ್ಲಿ-ಅನಾಖ್ಯಾತರಾದ ಅಸುರರು ಸಾತ್ವಿಕರು [ತಾಮಸ ಸಾತ್ವಿಕರು] ಅವರಿಗೆ-ತಾತ್ವಿಕದೈತ್ಯರಿಗೆ ಅನುಸರಿಸಿ ನಡೆಯುವ ದೈತ್ಯರು ತಾಮಸ ರಾಜಸರು. ಕಲಿ ಪತ್ನಿಯವರೆಗಿನ ಪ್ರಧಾನದೈತ್ಯರು ತಾಮಸತಾಮಸರು॥ "ಪುರಂಧ್ರಿ" ಅಂದರೆ ಕಲಿ ಹೆಂಡತಿ ಎಂಬ ಅರ್ಥ. ಕಲಿಯು ಅನಂತ ದುರ್ಗುಣಗಳುಳ್ಳವನಾದುದರಿಂದ ದುರ್ಲಕ್ಷಣಗಳಿಂದ ಯುಕ್ತನಾಗಿರುತ್ತಾನೆ.॥೧೯॥

**ಅವತರಣಿಕಾ :**–ಈ ಪದ್ಯದಿಂದ ಕಲಿಯಲ್ಲಿರುವ ದುಷ್ಟ ಸ್ವಭಾವನ್ನು ಹೇಳುತ್ತಾರೆ. ಮತ್ತು ಅವನು ಇರುವಿಕೆಯ ಸ್ಥಾನವನ್ನೂ ಹೇಳಿ ಆ ಪದಾರ್ಥಗಳನ್ನು ಸರ್ವಥಾ ಬಿಡಬೇಕೆಂದು ಉಪದೇಶಿಸುತ್ತಾರೆ.

**ಇವನ ಪೋಲುವ ಪಾಪಿ ಜೀವರು ।**
**ಭುವನ ಮೂರರೊಳಿಲ್ಲ ನೋಡಲು ।**
**ನವವಿಧದ್ವೇಷಿಗಳಿಗಾಕರನೆನಸಿಕೊಳುತಿಪ್ಪ ॥**
**ಬವರದೊಳು ಬಂಗಾರದೊಳು ನಟ ।**
**ಯುವತಿ ದ್ಯೂತಾಪೇಯ ಪ್ರಾಣಿಷದೊಳು ॥ ॥೨೦॥**
**ಕವಿಸಿ ಮೋಹವ ಕೆಡಿಸುವನು ಯೆಂದರಿದು ತ್ಯಜಿಸುವದು**

**ಪದ್ಯಾರ್ಥ:**—ಇವನ=ಈ ಕಲಿಪುರುಷನ, ಪೋಲುವ=ಹೋಲುವ, ಪಾಪಿ ಜೀವರು=ಪಾಪಿಷ್ಠ ಜೀವರು, ಭುವನ ಮೂರರೊಳಿಲ್ಲ=ಮೂರು ಲೋಕದಲ್ಲಿಯೂ ಇಲ್ಲ. ಇವನ ನೋಡಲು, ಇವನನ್ನು ನೋಡಿದರೆ ಯಾಕೆ ಪಾಪಿಯೆಂದರೆ, ನವ ವಿಧದ್ವೇಷಿಗಳಿಗಾಕರನೆನಿಸುತಿಪ್ಪ=ಒಂಭತ್ತು ವಿಧ ದ್ವೇಷಕ್ಕೆ ಗಣಿ ಸದೃಶನು, ಒಂಭತ್ತು ವಿಧವಾದ ದ್ವೇಷದಿಂದ ತುಂಬಿದವನು, ಮಹಾದ್ವೇಷಿಯು ಅಥವಾ ದ್ವೇಷಿಗಳಿಗಾಕಾರನೆನಿಸುತಿಪ್ಪ=ದೋಷ ರೂಪನಾಗಿಯೇ ಇರುವನು. [ಇವನ ದೋಷರೂಪದ ಆಕಾರವನ್ನು ಮುಂದೆ ವ್ಯಾಸದಾಸ ಸಿದ್ಧಾಂತಕೌಮುದಿ ಟೀಕಾಕಾರರು ವಿಶದವಾಗಿ ವರ್ಣಿಸುವರು. ನೋಡುವದು] ನವವಿಧ ದ್ವೇಷಗಳು ಯಾವುವು ಎಂಬುದನ್ನು ಭಾವಸೂಚನೆಯಲ್ಲಿ ಸವಿಸ್ತರ ಹೇಳಿದ್ದಾರೆ. ಗಾರುಡ ಬ್ರಹ್ಮಕಾಂಡದಲ್ಲಿ ನವವಿಧದ್ವೇಷ ಹೇಳಿದೆ ೧ ಜೀವಜೀವರ ಅಭೇದ, ಹರಿಯು ಪ್ರಾಕೃತ ಮನುಜಾಕಾರ, ಸ್ವತಂತ್ರ ಹರಿಗೆ ಅಸ್ವತಂತ್ರನೆಂದು ೨ ಜ್ಞಾನಾನಂದ ಗುಣಉಳ್ಳವ ಶ್ರೀಹರಿಗೆ ನಿರ್ಗುಣನೆಂದು ಹೇಳೋಣ ೩ ಸದಾಕಾಮಪೂರ್ಣ-ಗುಣ ಪೂರ್ಣನಾದ ಹರಿಗೆ ಅಪೂರ್ಣನೆಂದು ಚಿಂತನೆಮಾಡುವಿಕೆ, ೪ ಬ್ರಹ್ಮಾದಿದೇವತೆಗಳಿಗೆ ದ್ವಿಜರಿಗೆ ಸಮತ್ವ ಚಿಂತನ, ೫ ವಿಷ್ಣುವಿಗಿಂತಲೂ, ಬ್ರಹ್ಮರುದ್ರಾದಿಗಳಿಗೆ ಆಧಿಕ್ಯ ಚಿಂತನ, ೬ ಶ್ರೀವಿಷ್ಣುವಿನ ದೇಹ ಹಸ್ತ ಪಾದಾದಿ ಅವಯವಗಳಲ್ಲಿ ಭೇದ ಜ್ಞಾನವು ಮಹಾದ್ವೇಷವೆನಿಸುತ್ತದೆ. ೭ ಶ್ರೀಹರಿಯ ಅವತಾರಾದಿಗಳಿಗೆ ಭೇದಭೇದ ಹೇಳೋಣ, ೮ ಶ್ರೀಹರಿಗೆ ಜನನ ಮರಣಾದಿಗಳು ಹೇಳುವದು. ೯ ಶ್ರೀಹರಿಭಕ್ತರ ದೂಷಣ, ಶ್ರೀಹರಿಯ ಮತ್ತು ಹರಿ ಭಕ್ತರ ವಾಕ್ಯಗಳಿಗೆ ದೂಷಣವೇ ನವವಿಧ ದ್ವೇಷವೆಂದು ಕರೆಸುತ್ತವೆ. ಇಂಥ ನವವಿಧದ್ವೇಷ ಯುಕ್ತರಾದವರು ಕಲಿಯುಗದಲ್ಲಿ ಬಹಳ, ಕಾರಣ ಈ ಒಂಭತ್ತು ವಿಧ ದ್ವೇಷ ರಹಿತವಾದ ಭಕ್ತಿಯನ್ನು ಮಾಡಬೇಕು. "ಭಕ್ತೇಃ ಸ್ವರೂಪಂ ತವ ವಕ್ಷ್ಯೇ ಖಗೇಂದ್ರ ಯೋ ಜ್ಞಾನಪೂರ್ವಂ ಪರಮಸ್ನೇಹ ಏವ ॥ ನವದ್ವೇಷೈರ್ವಿಧುರಾ ಭಕ್ತಿರುಕ್ತಾ" ಎಂದು ಬ್ರಹ್ಮಕಾಂಡ ವಚನವಿದೆ. ಇಂಥ ಮಹಾ ದೋಷ ಯುಕ್ತನಾದ ಕಲಿಯು, ಬವರ=ಯುದ್ಧದಲ್ಲಿ, ಬಂಗಾರ=ಚಿನ್ನ, ಅಪರಂಜಿ ಬಂಗಾರವು ಎಲ್ಲರಿಗೂ ಮೋಹ ಹುಟ್ಟಿಸುವದು. ಇಂತಹ ಬಂಗಾರದಲ್ಲಿ, ನಟಯುವತಿ=ನಾಟ್ಯ ಕುಣಿದು ಹಾವಭಾವದಿಂದ ಮೋಹಗೊಳಿಸುವ ವೇಶ್ಯಾ

ಸ್ತ್ರೀಯರಲ್ಲಿ, ದ್ಯೂತ=ಪಗಡಿ ಆಟ ಜೂಜಾಟದಲ್ಲಿ, ಅಪೇಯ=ಮದ್ಯದಲ್ಲಿ, ಮೃಷದೊಳು=ಸುಳ್ಳು ಮಾತಿನಲ್ಲಿ, ಕವಿಸಿ=ವ್ಯಾಪ್ತನಾಗಿ ಮೋಹವನ್ನು ಹೊಂದಿಸಿ ಕೆಡಿಸುತ್ತಾನೆ. ಯೆಂದರಿದು=ಎಂದು ತಿಳಿದು, ತ್ಯಜಿಸುವುದು=ಮೇಲೆ ಹೇಳಿದ ಪದಾರ್ಥಗಳನ್ನೆಲ್ಲ ಬಿಡುವದೆಂದು ಉಪದೇಶಿಸುತ್ತಾರೆ.

**ಭಾವಸೂಚನ॥** ಇವನೇತಿ॥ನವದ್ವೇಷಾಕರಾಃ ತದಾಶ್ರಯಾಃ॥ಉಕ್ತಂ ಚ ಗಾರುಡೇ ಬ್ರಹ್ಮಕಾಂಡೇ ತೃತೀಯಾಂಶೇ ಜಾಂಬವತೀ ತೀರ್ಥಯಾತ್ರಾ ಪ್ರಕರಣೇ ಪಂಚ ವಿಂಶಾಧ್ಯಾಯೇ॥ "ಭಕ್ತಿ ಸ್ವರೂಪಂ ತವ ವಕ್ಷ್ಯೇ ಖಗೇಂದ್ರ ಯೋ ಜ್ಞಾನಪೂರ್ವಃ ಪರಮಸ್ನೇಹ ಏವ ॥ ನವದ್ವೇಷೈರ್ವಿಧುರಾ ಭಕ್ತಿ ರುಕ್ತಾ ನವದ್ವೇಷಾನ್ ಶೃಣು ಭದ್ರೇ ಚ ಸಮ್ಯಕ್ ॥

೧ ಜೀವಾಭೇದೋ ಹರಿಣಾ ಪ್ರಾಕೃತೇನ ಸ್ವತಂತ್ರೇಣ ಹ್ಯಸ್ವತಂತ್ರೇಣ ನಿತ್ಯಮ್॥

೨ ಜ್ಞಾನಾನಂದ್ಯೈಃ ಪರಿಪೂರ್ಣೇ ಹರೌ ಚ ಸದಾ ಶೂನ್ಯೇ ಪ್ರಾಕೃತೈರ್ವಾ ಗುಣೈಶ್ಚ॥ಜ್ಞಾನಾನಂದ್ಯೈರ್ವಿಧುರತ್ವಾಚ್ಚ ವಿಷ್ಣುಃ ಸದಾ ಹರಿಃ ನಿರ್ಗುಣಶ್ಚೇತಿ ಚಿಂತಾ॥

೩ ಸದಾ ಕಾಮ್ಯೈಃ ಪರಿಪೂರ್ಣೇ ಹರೌ ಚ ಗುಣೈರಪೂರ್ಣೋ ಹರಿರಿತ್ಯೇವ ಚಿಂತಾ॥

೪ ಶ್ರೀ ಬ್ರಹ್ಮಾದಿಸಕಲದಿವೌಕಸಾಂ ಸದಾ ತಥಾ ದ್ವಿಜಾನಾಂ ಸಾಮ್ಯತಾಯಾಶ್ಚ ಚಿಂತಾ॥

೫ ವಿಷ್ಣೋಃ ಸಕಾಶಾತ್ ಬ್ರಹ್ಮರುದ್ರಾದಿಕಾನಾಂ ಸದಾಧಿಕ್ಯಾದೇಃ ಚಿಂತನಂ ದ್ವೇಷ ಏವ॥

೬ ವಿಷ್ಣೋರ್ದೇಹೇ ಹಸ್ತಪಾದಾದಿಕಾನಾಂ ಭೇದಜ್ಞಾನಂ ದ್ವೇಷಮಾಹುರ್ಮಹಾಂತಃ ॥

೭ ಅವತಾರಾಣಾಂ ಭೇದ ಭೇದಾದಿಕಂ ಚ ॥

೮ ತಥೋತ್ಪತ್ತೇರ್ಮರಣಸ್ಯಾಪಿ ಚಿಂತಾ॥

೯ ತದ್ಭಕ್ತಾನಾಂ ದೂಷಣಂ ಚಾಹುರಾರ್ಯಾಃ ತದ್ವಾಕ್ಯಾನಾಂ ದೂಷಣಂ ದ್ವೇಷ ಏವ ॥

ನಮಸ್ತ್ವೇಷಸಂಯುತಾ ಏವ ಲೋಕೇ ಕನ್ಯೇ ಪ್ರತ್ಯಂತೇ ನ ತು ಭಕ್ತಾಃ ಕಲೌ ಚೇತಿ॥

ಬವರ=ಯುದ್ಧ, ಕವಿಸಿ=ವ್ಯಾಪಿಸಿ ॥೨೦॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

ವಕ್ಷ್ಯಮಾಣಸ್ಥಲೇಷು ಚಿಂತನೀಯತ್ವೋಪಯೋಗಿ ದುರ್ಲಕ್ಷಣಾನಿ "ಹ್ರಸ್ವೋದರಃ ಲಂಬೀ[ತ್ಸ್ಕ] ನಾಭಿಃ[ರೇ] ಏಷಾಮಾತ್ರೈಸ್ತೀಕ್ಷ್ಣದಂಷ್ಟ್ರಕಃ। ಅಂಧಕೂಪಗಭೀರಾಕ್ಷಃ ಲಂಬಕರ್ಣೋಽಸ್ಥನಾಸಿಕಃ॥ದೀರ್ಘಜಂಘಃ ದೀರ್ಘಶಿಶ್ನಃ ಏಕಾಂಡೀ ವಕ್ರಸಂಯುತಃ ॥ ರಕ್ತರೋಮಾ ರಕ್ತನೇತ್ರಃ ಪಕ್ವಾಸ್ಯಃ ಪಂಚನಾಸಿಕಃ ॥ದಗ್ಧಪರ್ವತಸಂಕಾಶಃ ವಕ್ರಸ್ಪೃಷ್ಠಃ ಕಲಿಃ ಸ್ಮೃತಃ।ಅತಿರೋಮಮಸ್ತಕಃ ಪ್ರೋಕ್ತಃ ಗಂಡಸ್ಥೈಲಕಪೋಲಕಃ॥ಲಲಾಟೇ ಪಾಂಡುರಃ ನಿತ್ಯಂ ವಾಮಸ್ಕಂಧೇ ಕರೀರವಃ।ಕೂರ್ಮದೃಷ್ಟಿಃ ದೋಷವಾದೀ ತಥಾ ನ್ಯೈ ಘರ್ಘರಸ್ವನಃ। ಅತ್ಯಾರನೋಽತಿಪಾನಸ್ಥ ಸ್ತನೌ ಶಿಗ್ರುಫಲೇ ಯಥಾ॥ವಕ್ಷೋ ನಾನಾಂಕಿತೋ ರೋಮ್ಣಿ ತಥಾ ಪೃಷ್ಠೇ ಚ ಮಸ್ತಕೇ।ಲಲಾಟೇ ತ್ರೀಣಿ ದಂಷ್ಟ್ರಿಕಾ ನಮೌ ದ್ವೌ ಸಂಪ್ರಕೀರ್ತಿತೌ ॥ ಶೂರ್ಪಾಕಾರಃ ಸ್ತನೇ ಮಚ್ಛಃ ತಥಾ ಶಿಶ್ನೇ ಪ್ರಕೀರ್ತಿತಃ॥ಪಾದತ್ರಾಣಸಮೋ ಮಚ್ಛಃ ರಸನಾಗ್ರೇ ಪ್ರಕೀರ್ತಿತಃ।ಶಿಶ್ನಾಕಾರಸ್ತು ಮಚ್ಛಸ್ಯ ಗುದೇ ತಸ್ಯ ಪ್ರದೃಶ್ಯತೇ ॥ ವೃಶ್ಚಿಕಾಕಾರಮಚ್ಛಸ್ತು ಪಾರ್ಶ್ವೇ ತಸ್ಯ ಪ್ರದೃಶ್ಯತೇ॥ಶ್ವಾನಾಕಾರಸ್ತು ಮಚ್ಛಶ್ಚ ಗುದೇ ತಸ್ಯ ಪ್ರದೃಶ್ಯತೇ॥ಹಸ್ತೇ ತು ಬಹುರೇಖಾಸ್ತು ನಾಸಿಕೇ ದೀರ್ಘಲೋಮಕಃ॥ಅತಿದೀರ್ಘಂ ತು ಚಾಮುಂಡಂ ಕನಿಷ್ಠಂ ಚಾತಿದೀರ್ಘಕಮ್ ॥ ದುರ್ಲಕ್ಷಣಾನ್ಯೇವಮಾದ್ಯಾಃ ಕಲೌ ಸಂತಿ ನ ಸಂಶಯಃ॥ ಇತಿ ಗಾರುಡೇ ಚೋಕ್ತಾನಿ॥"ಬವರ"=ಯುದ್ಧಂ॥ದ್ಯೂತಂ॥ ಅಪೇಯ=ಮದ್ಯಂ॥ಶ್ರೇಯಸ್ಕಾಮಃ ನ ಸೇವೇತ ನಿತರಾಂ ಅಕ್ರಮೋತ್ತಮಿ॥ (ಮಃ) ಇತ್ಯುಕ್ತೇಃ ॥೨೦॥

## ಕನ್ನಡಾರ್ಥ

ಮುಂದೆ ಹೇಳಲ್ಪಡುವ ಸ್ಥಳಗಳಲ್ಲಿ ಚಿಂತನ ಮಾಡುವದಕ್ಕೆ ಕಲಿಯ ದುರ್ಲಕ್ಷಣಗಳನ್ನು ವಿಶದೀಕರಿಸುತ್ತಾರೆ.

ಸರೋವರದಂತೆ ಪೃಥು ಲಂಬೋದರ. ಬಹು ಉದ್ದವಾದ ನಾಭಿ.

ಅತಿ ದೀರ್ಘವಾದ ಕೋರೆ ಹಲ್ಲುಗಳು. ಹಾಳು ಬಾವಿಯಂತೆ ಗಭೀರವಾದ ಕಣ್ಣುಗಳು. ಉದ್ದ ಕಿವಿ, ಲಂಬವಾದ ತುಟಿ ಹಾಗೂ ಮೂಗುಗಳು. ಉದ್ದವಾದ ಮೊಣಕಾಲಿನ ಪ್ರದೇಶಗಳು. ದೀರ್ಘವಾದ ಶಿಶ್ನ, ಒಂದೇ ಅಂಡ, ಕೆಂಪು ಕೂದಲುಗಳು, ಕೆಂಪು ಮೀಸೆಗಳು, ವಕ್ರ ಮುಖ; ಅಗಲವಾದ (ಚಪ್ಪಟೆಯಾಕಾರದ) ಮೂಗು; ಸುಟ್ಟ ಬೆಟ್ಟದಂತೆ ತೋರುವುದು. ವಕ್ರವಾದ ಪೃಷ್ಠಭಾಗ. ಮಸ್ತಕದಲ್ಲಿ ಕೂದಲುಗಳೇ ಇಲ್ಲದಿರುವುದು; ಗಂಡಶೈಲದಂತೆ ಕಪೋಲಗಳು. ಲಲಾಟದಲ್ಲಿ ಪಾಂಡುರ ವರ್ಣ ಬಿಳಿಯ ಬಣ್ಣ ಆನೆಯಂತೆ ನೋಡುವುದು, ದೋಷೋದ್ಘಾಟನ ಮಾಡುವುದು, ಘರ್ಘರ ಧ್ವನಿ, ಅತಿ ಭೋಜನ, ಅತಿ ಪಾನ, ಶಿಗ್ರು ಫಲದಂತೆ ಸ್ತನಗಳು, ಶೂರ್ಪಾಕಾರ [ಮೊರದಂತೆ]ವಾದ ಮಚ್ಚವು ಸ್ತನದಲ್ಲಿ ಅದರಂತೆ ಶಿಶ್ನದಲ್ಲಿ. ಪಾದರಕ್ಷೆ [ಮಚ್ಚೆ ಅಥವಾ ಚಪ್ಪಲಿಯ] ಆಕಾರದ ಮಚ್ಚವು ನಾಲಿಗೆಯ ಮೇಲೆ; ಶಿಶ್ನಾಕಾರದ ಮಚ್ಚವು ಗುದದಲ್ಲಿ; ಚೇಳಿನ ಆಕಾರದ ಮಚ್ಚವು ಪಾದದಲ್ಲಿ; ಗುದದಲ್ಲಿ ಶ್ವಾನ [ನಾಯಿ] ಆಕಾರದ ಮಚ್ಚೆ; ಅಂಗೈಯಲ್ಲಿ ಬಹಳ ರೇಖೆಗಳು; ಮೂಗಿನಲ್ಲಿ ಉದ್ದವಾದ ಕೂದಲುಗಳು; ಇವೇ ಮುಂತಾದ ದುರ್ಲಕ್ಷಣಗಳನ್ನು ಗಾರುಡ ಪುರಾಣದಲ್ಲಿ ಹೇಳಲಾಗಿರುತ್ತದೆ.

"ಬವರ"—ಯುದ್ಧ. "ಮದ್ಯ=ದ್ಯೂತಗಳನ್ನು ಶ್ರೇಯೋಭಿಲಾಷೆಯುಳ್ಳವರು ಸರ್ವದಾ ಬಿಡಬೇಕು." ಎಂದು ಪುರಾಣಗಳಲ್ಲಿ ಉಕ್ತನಾಗಿರುವುದರಿಂದ ಕಲಿ ನಿವಾಸಗಳಾದ ಈ ಸ್ಥಳಗಳನ್ನು ಬಿಡಬೇಕು.॥೨೦॥

**ಅವತರಣಿಕಾ:—**ಹಿಂದೆ ಹೇಳಿದಂತೆ ಸತ್ವ, ರಜ, ತಮೋ ತ್ರಿವಿಧ ಸ್ವಭಾವ ಜೀವರನ್ನು ಪ್ರತಿ ಸೃಷ್ಟಿಗೆ ತಂದು ಕ್ರೀಡಿಸುತ್ತಾ ಅವರ ಸಾಧನ ಮಾಡಿಸಿ ಅವರವರ ನಿಜಗತಿ ಈವನೆಂದು ಈ ತಾರತಮ್ಯವನ್ನು ತಿಳಿದವರನ್ನು ಉದ್ಧರಿಸುವನೆಂದು ಉಪದೇಶಿಸುತ್ತಾರೆ.

**ತ್ರಿವಿಧ ಜೀವಪ್ರತತಿಗಳ ಸ।**
**ಗ್ಗವೊಳೆಯಾಣ್ಮಾಲಯನು ನಿರ್ಮಿಸಿ।**
**ಯುವತಿಯರ ವಡಗೂಡಿ ಕ್ರೀಡಿಸುವನು ಕೃಪಾಸಾಂದ್ರ॥**

**ದಿವಿಜ ದಾನವ ತಾರತಮ್ಯದ।**
**ವಿವರ ತಿಳಿವ ಮಹಾತ್ಮರಿಗೆ ಬಾ।**
**ನ್ನವಿರಸಖ ತಾನೊಲಿದು ಉದ್ಧರಿಸುವನು ದಯದಿಂದ॥೨೧॥**

**ಪದ್ಯಾರ್ಥ:**—ತ್ರಿವಿಧ ಜೀವಪ್ರತತಿಗಳ=ಮೂರು ವಿಧರಾದ ಸಾತ್ವಿಕ ರಾಜಸ-ತಾಮಸಸ್ವಭಾವವುಳ್ಳ ಜೀವರುಗಳ, ಪ್ರತತಿಗಳ=ಸಮೂಹಗಳನ್ನು, ಸಗ್ಗಪೊಳೆ=ಸ್ವರ್ಗದ ನದಿ ಆಕಾಶ ಗಂಗಾ, ದೇವಿ ಅಣ್ಮ=ಪತಿವರುಣದೇವರೆ ಸಮುದ್ರ ಇಂಥ ವರುಣದೇವರ ಆಲಯ, ಪಾಲ್ಗಡಲನ್ನುಮನೆಮಾಡಿಕೊಂಡ ಶ್ವೇತದ್ವೀಪನಾದ ಶ್ರೀ ಹರಿಯೇ ಬಿಂಬರೂಪಿ ಪರಮಾತ್ಮನು, ತ್ರಿವಿಧ ಜೀವರ ಸಮೂಹವನ್ನು ನಿರ್ಮಿಸಿ=ಸೃಷ್ಟಿಗೆ ತಂದು ಅವರ ಲಿಂಗಉಪಚಯದ್ವಾರಾ, ಅವ್ಯಕ್ತ ಅನಿರುದ್ಧ-ಸ್ಥೂಲದೇಹಾದಿಗಳನ್ನು ಕೊಟ್ಟು (ಇಲ್ಲಿ ಅನಾದಿನಿತ್ಯರಾದ ಜೀವರನ್ನು ನಿರ್ಮಾಣ ಮಾಡಿ ಎಂದು ಅರ್ಥಮಾಡಬಾರದು. ಯೆಂದು ಪ್ರಕಾಶ ಸಂಹಿತೆಯಲ್ಲಿ ಹೇಳಿದೆ)

ಯುವತಿಯರ ಒಡಗೂಡಿ=ಶ್ರೀ ಹರಿಯು ತನ್ನ ನಿಜ ಪತ್ನಿಯರಾದ ಶ್ರೀ ಭೂ ದುರ್ಗಾದೇವಿಯರಿಂದ ಕೂಡಿಕೊಂಡು, ಕ್ರೀಡಿಸುವನು ಕೃಪಾ ಸಾಂದ್ರ=ವಿಹಾರ ಮಾಡುವನು, ದಯಾಪಟ್ಟಣಿಯುಳ್ಳವನೆಂಬರೆ ದಯಾ ಸಮುದ್ರನು. ದಿವಿಜ=ದೇವತೆಗಳ, ದಾನವ=ದನುಪುತ್ರರು ದಾನವರು ದೈತ್ಯಾದಿಗಳ ತಾರತಮ್ಯದ=ನೀಚಉಚ್ಚ ಭಾವದ, ವಿವರ=ವಿಸ್ತಾರವನ್ನು ತಿಳಿವ ಮಹಾತ್ಮರಿಗೆ=ಗುರುದ್ವಾರಾ ತಿಳಿದು ಜ್ಞಾನಸಂಪನ್ನರಾದವರಿಗೆ, ಜ್ಞಾನಿಗಳಿಗೆ, ಬಾನ್ನವಿರಸಖ=ವ್ಯೋಮಕೇಶನಾದ ರುದ್ರದೇವರಿಗೆ ಮಿತ್ರ ನಾದ ಶ್ರೀ ಹರಿಯು, ತಾನೊಲಿದು=ತಾನೇ ಕೃಪೆಯಿಂದ ಪ್ರಸನ್ನನಾಗಿ ಹೃದಯದಿ ಹೊಳೆದು, ದಯದಿಂದ ಉದ್ಧರಿಸುವನು=ಸಂಸಾರದಿಂದ ತರಣ ಮಾಡಿ ಅನುಗ್ರಹಿಸಿ-ಮುಕ್ತಿಯನ್ನು ಕೊಡುವನು. ಸಗ್ಗಪೊಳೆ=ಸರಸ್ವತೀನದಿ ಅಣ್ಮ ಬ್ರಹ್ಮಾಂಡಬಿಲಯನೆಂದು ವ್ಯಾಸದಾಸಸಿದ್ಧಾಂತ ಕೌಮುದಿಯಲ್ಲಿ ಬಹು ರಹಸ್ಯವಾಗಿ ಬರೆದಿದ್ದಾರೆ.

ಭಾವಸೂಚನ॥ ತ್ರಿವಿಧೇತಿ॥ ಬಾನ್ನವಿರಸಖ ಮಿತ್ರನಾದ ಶ್ರೀಪರ ಮಾತ್ಮ ॥೨೧॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತ್ರಿವಿಧ" ಇತಿ-||"ಸಗ್ಗವ್ರೊಳೆ"-ಸರಸ್ವತೀ||ಆಣ್ಮಾ-ಬ್ರಹ್ಮಾ |"ಆಲಯ"-ಬ್ರಹ್ಮಾಂಡ|| ಬಾನ್ನವಿರ-ವ್ಯೋಮಕೇಶಃ ||೨೧||

## ಕನ್ನಡಾರ್ಥ

"ಸಗ್ಗವ್ರೊಳೆಯಾಣ್ಮಾಲಯ"—ಸಗ್ಗವ್ರೊಳೆ-ಸರಸ್ವತಿ. ಆಣ್ಮಾ-ಅವಳಿಗೆ ಪತಿಯಾದ ಚತುರ್ಮುಖ. ಅವನ ಆಲಯ-ಬ್ರಹ್ಮಾಂಡ. "ಬಾನ್ನವಿರ"–ಆಕಾಶಕೇಶನಾದ ರುದ್ರದೇವನು ಎಂದು ಅರ್ಥ. ದೇವದೈತ್ಯರ ತಾರತಮ್ಯದ ಜ್ಞಾನವು ಅತ್ಯಾವಶ್ಯಕವೆಂದು ಫಲನಿರೂಪಣೆಯೊಡನೇ ನಿರೂಪಿಸುತ್ತಾರೆ. ||೨೧||

**ಅವತರಣಿಕಾ :—**ದೇವ ದೈತ್ಯರ ತಾರತಮ್ಯವು ತಿಳಿವುದು ಅತ್ಯಾವಶ್ಯಕವೆಂದು ನಿರೂಪಿಸುತ್ತಾರೆ.

**ದೇವ ದೈತ್ಯರ ತಾರತಮ್ಯವು ।**
**ಪಾವಮಾನಿ ಮತಾನುಗರಿಗಿದು ।**
**ಕೇವಲಾವಶ್ಯಕವು ತಿಳಿವುದು(ವರೆ) ಸರ್ವಕಾಲದಲಿ ॥**
**ದಾವಶಿಖಿ ಪಾಪಾಟವಿಗೆ ನವ ।**
**ನಾವಿಯೆನಿಪದು ಭವಸಮುದ್ರಕೆ ।**
**ಪಾವಟಿಗೆ ವೈಕುಂಠ ಲೋಕಕಿದೆಂದು ಕರೆಸುವದು ॥೨೨॥**

**ಪದ್ಯಾರ್ಥ :—**ದೇವ=ಕ್ರೀಡಾದಿ ಗುಣವಿಶಿಷ್ಟನಾದ ಶ್ರೀಹರಿಯಲ್ಲಿ ಸದಾರತರಾದ ದೇವತೆಗಳ, ಮತ್ತು ದೈತ್ಯರ ದೈತ್ಯಾದಿಗಳ, ಇವರು ದೇವತೆಗಳಂತೆ ಸ್ಥೂಲ ದೇಹದಲ್ಲಿದ್ದು ಕುತತ್ವಗಳಿಗೆ ಸಾಂಶದೈತ್ಯರು ನಿಯಾಮಕರಾಗಿರುವರು. ಈ ಉಭಯರ, ತಾರತಮ್ಯವು=ಊಚನೀಚ ಭಾವವು, ಪಾವಮಾನಿ ಮತಾನುಗರಿಗಿದು=ಪವನ ಸಂಬಂಧಿ ವಾಯು=ಮಧ್ವಮತಾವಲಂಬಿಗಳಿಗೆ, ಕೇವಲಾವಶ್ಯಕವು=ಪೂರ್ಣವಾಗಿ ಮುಖ್ಯವಾಗಿ ಬೇಕಾದದ್ದು, ಯೆಂದುತಿಳಿಯುವದು. ಸರ್ವ ಕಾಲದಲಿ=ನಿರಂತರದಲ್ಲಿ ತಾರತಮ್ಯ ತಿಳಿವುದು ಬೇಕಾದದ್ದು. ಈ ತಾರತಮ್ಯ ಜ್ಞಾನವು, ಅಜ್ಞಾನವೆಂಬುವಂಥ ಪಾಪಾಟವಿಗೆ=ಪಾಪವೆಂಬ ಅಡವಿಗೆ, ದಾವಶಿಖಿ=ಕಾಡಗಿಚ್ಚು ಮತ್ತು ಭವ

ಸಮುದ್ರಕೆ=ಸಂಸಾರವೆಂಬ ಸಮುದ್ರಕ್ಕೆ ನೂತನವಾದ ಹೊಸ ನಾವೆಯು, ಸಂಸಾರ ಸಮುದ್ರ ತರಣ ಮಾಡಲು, ತಾರತಮ್ಯ ಜ್ಞಾನವೇ ಮುಖ್ಯ ವಾದುದು. ವೈಕುಂಠ ಲೋಕಕೆ=ಮುಕ್ತಿಸ್ಥಾನವಾದ ವೈಕುಂಠ ಲೋಕಕ್ಕೆ ಏರಲಿಕ್ಕೆ ಪಾವಟಿಗೆ=ಮೆಟ್ಟಲುಯೆಂದು ಕರೆಸುವದು=ಕರೆಸುತ್ತದೆ. ಸಾರಾಂಶವೇನೆಂದರೆ, ಅಜ್ಞಾನವೆಂಬ ಕಾಡನ್ನು ಸುಟ್ಟು, ಸುಜ್ಞಾನವೆಂಬ ನಾವಿಯನ್ನೇರಿಸಿ=ಜ್ಞಾನಾನಂದ ಅಭಿವೃದ್ಧಿಗೈಸಿ ಮುಕ್ತಿ ಕೊಡುತ್ತದೆ. ೨೨-೨೩ ಪದ್ಯವ್ಯಾಖ್ಯಾನ ವ್ಯಾ. ದಾ ಕೂಡಿಸಿಬರೆದಿರುವದು.

ಭಾವಸೂಚನ :— ॥ದೇವೇತಿ॥ ಪಾವಮಾನಿ=ವಾಯುಸಂಬಂಧಿ॥ ದಾವಶಿಖಿ=ಕಾಡಗಿಚ್ಚು ॥ ತದುಕ್ತಂ ಕೌಸ್ತುಭೇ ॥ ಅವಶ್ಯಕೀ ವಿಷ್ಣು ಭಕ್ತಿಃದೇವಾನಾಂ ಚ ಸುಬುದ್ಧಿನಾಮ್ ॥ ತಾರತಮ್ಯಂ ಪಾವಮಾನೇಃ ಮತಸಾಗರ ಮಾಪ್ಲುತಃ॥ಸದಾ ವೈ ಶ್ಲಾಘನೀಯಾನಾಂ ತಾರತಮ್ಯಂ ದವಾ ನಳಃ॥ಅಯಂ ತರತಮೋ ಭಾವೋನೂತನೋ ಸೌರ್ಭವಾರ್ಣವಃ॥ವೈಕುಂಠಾ ದೇಶ್ಯಸೋಪಾನಂ ಇತಿ ಜ್ಞಾನೀ ವಿಮುಚ್ಯತೇ ಇತಿ ॥

ಅವತರಣಿಕಾ :—ತಾರತಮ್ಯಜ್ಞಾನವು ಮುಕ್ತಿಗೆ ಮುಖ್ಯ ಆವಶ್ಯಕ ವೆಂದು ಪುನಃ ಪುನಃ ದಾರ್ಢ್ಯಾರ್ಥವಾಗಿ ಹೇಳುತ್ತಾರೆ.

**ತಾರತಮ್ಯಜ್ಞಾನ ಮುಕ್ತಿ।**
**ದ್ವಾರವೆನಿಪದು ಭಕ್ತ ಜನರಿಗೆ।**
**ತೋರಿ ಪೇಳಿ ಸುಖಾಬ್ಧಿಯೊಳು ಲೋಲ್ಯಾಡುವುದು ಬುಧರು ॥**
**ಕ್ರೂರಮಾನವರಿಗಿದು ಕರ್ನ ಕ।**
**ಠೋರವೆನಿಪದು ನಿತ್ಯದಲಿ ಅಧಿ।**
**ಕಾರಿಗಳಿಗಿದನರಿಪುವದು ದುಸ್ತರ್ಕಿಗಳ ಬಿಟ್ಟು ॥೨೪॥**

ಪದ್ಯಾರ್ಥ :—ಭಕ್ತಜನರಿಗೆ=ಮುಕ್ತಿಯೋಗ್ಯರಾದ ಶ್ರೀ ಹರಿಯ ಭಕ್ತರಾದವರಿಗೆ, ತಾರತಮ್ಯಜ್ಞಾನ=ದೇವತ್ಯಾದಿಗಳ ಊಚ-ನೀಚ-ಭಾವ ತಿಳಿವುದೇ, ಮುಕ್ತಿಗೆ ದ್ವಾರವೆನಿಪದು=ಸ್ವರೂಪಾನಂದಾವಿರ್ಭಾವಲಕ್ಷಣ ವಾದ ಮುಕ್ತಿಗೆ ಬಾಗಿಲು ಎನಿಸುತ್ತದೆ. ಕಾರಣ ಮೊದಲು ತಾವು ಗುರು ಗಳಿಂದ ಚನ್ನಾಗಿ ತಿಳಿಯಬೇಕು. ಅಲ್ಲದೇ, ಭಕ್ತಜನರಿಗೆ=ಪರಮಾತ್ಮನಲ್ಲಿ

ಸುದೃಢ ಸ್ನೇಹವುಳ್ಳವರಿಗೆ, ಈ ತಾರತಮ್ಯಜ್ಞಾನದ ಮಾರ್ಗ ದಾರಿ ತೋರಿ ಕೊಡಬೇಕು, ಪೇಳಿ=ಹೇಳಲಿಬೇಕು. ಹೀಗೆ ಪುನಃ ಪುನಃ ಪೇಳುತ್ತಾ, ಬುಧರು=ಜ್ಞಾನಿಗಳು, ಸುಖಾಬ್ಧಿಯೊಳು ಲೋಲ್ಯಾಡುವುದು=ಸುಖಸಮು ದ್ರದಲ್ಲಿ ವಿಹಾರಮಾಡುತ್ತಲಿರಬೇಕು. ಕ್ರೂರಮಾನವರಿಗಿದು=ಕಠಿಣ ಕೆಟ್ಟ ಮನಸ್ಸು ಉಳ್ಳ ರಜತಮೋಮಿಶ್ರಜೀವರಿಗೆ, ಈ ತಾರತಮ್ಯ ಜ್ಞಾನವು ನಿತ್ಯದಲ್ಲಿ=ನಿರಂತರ ಸತತದಲ್ಲಿ, ಕರ್ಣಕಠೋರವೆನಿಸುವುದು=ಕಿವಿಗೆ ಕೇಳ ಲಿಕ್ಕೆ ಸಹ, ಅಸಹ್ಯವಾಗಿ ಕಠಿನವೆನಿಸುತ್ತದೆ. ಕಾರಣ ದುಸ್ತರ್ಕಿಗಳ ಬಿಟ್ಟು= ಕಠೋರತನ ನಿಷ್ಠುರತೆಯಿಂದ ಕೆಟ್ಟ ಕೆಟ್ಟತರ್ಕಯುಕ್ತಿ ಸಾಧಿಸುವ ಹಟವಾ ದಿಗಳನ್ನು ಬಿಟ್ಟು, ಅಧಿಕಾರಿಗಳಿಗೆ ಇದನು ಅರುಪುವದು=ಶಮದಮಾದಿಸ ಪನ್ನ ಉಳ್ಳ ಭಗವದ್ಭಕ್ತರೇ, ಇದಕ್ಕೆ ಅಧಿಕಾರಿಗಳು=ಯೋಗ್ಯರು ಇಂತಹ ಯೋಗ್ಯರಿಗೆ ತಾರತಮ್ಯ ಜ್ಞಾನ ಉಪದೇಶ ಮಾಡಬೇಕು.

**ಭಾವಸೂಚನ** ॥ ತಾರತಮ್ಯೇತಿ ॥ ಅರಿಪುದು, ತಿಳಿಸುವುದು ॥೨೩॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೇವ" ಇತಿ ॥ ನನು ಕೇವಲಾವಶ್ಯಕತ್ವಂ ಕಥಂ ಅಸ್ಯ ಜ್ಞಾನಸ್ಯ ? ಇತರ ಶಾಸ್ತ್ರಾಧ್ಯಯನೇನ ವಾ ಪವನನಯಪ್ರವಚನೇನ ವಾ ಅವಚ್ಛೇದಕತ್ವವ್ಯ ವಹಾರಾತ್ ಕಿಮ್ ಏತದ್ಬುದ್ಧ್ಯಧಿಗಮ ತಾರತಮ್ಯ ವಿಚಾರೇಣ ಆತ್ಯಂತಿಕವಾ ದಾನುಪಯೋಗಿನಾ ? ಇತಿ ಚೇತ್ ನ ॥ ಏತದ್ಧೀವಿರಹೇಽತ್ಯಪವಿತ್ರತಾ ॥ ಕುಪುರುಷವತ್ ನ ಸ್ಪೃಶ್ಯ ಏವ ಇತಿ ॥ ಯಥಾ ನೈಯಾಯಿಕೇ ಶಾಸ್ತ್ರೇ ಶಬ್ದಶಾಸ್ತ್ರೇ ತಥೈವ ಚ ॥ ಆದರಃ ಹ್ಯಸ್ತಿ ಪಕ್ಷೀಂದ್ರ ! ತಥಾ ನಾಸ್ತ್ಯತ್ರ ಚಾದರಃ ॥ ಯಥಾ ಕೌಶಲ್ಯ [ತಾ] [ಕುಶಲತಾ] ಹ್ಯಸ್ತಿ ವ್ಯಾಖ್ಯಾನೇ ಖಗ ಸತ್ತಮ! ॥ ತಥಾ ತರತಮಜ್ಞಾನೇ ಕೌಶಲ್ಯಂ ನಾಸ್ತಿ ಸರ್ವಥಾ ॥ ವ್ಯಾಖ್ಯಾನ ಕುಶಲಾಃ ತೇಽಪಿ ಸ್ವಸಿದ್ಧಾಂತ ವಿಚಾರಣೇ ॥ ನ ವೈಷ್ಣವಾಃ ತೇ ವಿಜ್ಞೇಯಾಃ ಕ್ರಮಜ್ಞಾನೇ ಹ್ಯನಾದರಾಃ ॥ ಇದಂ ತರತಮಜ್ಞಾನಂ ದುರ್ಲಭಂ ವೈ ಕಲೌ ನೃಣಾಮ್ ॥ ದ್ವಿಷಡ್ಗುಣಯುತೋ ವಾಪಿ ಚತುರ್ವೇದಯುತೋಽಪಿ ವಾ ॥ ತಾರತಮ್ಯಜ್ಞಾನಶೂನ್ಯಃ ಸದಾ ಶೂದ್ರಸಮಃ ಮತಃ ॥ ತಾರತಮ್ಯವಿಹೀನಃ ಯಃ ವಿಷ್ಣುಃ ಸರ್ವೋತ್ತಮೇತಿ ಚ ॥ ವದನ್ನಪಿ ಸ ವೈ ಪಾಪೀ ನ ಪ್ರೀಣಾತಿ

ಹರೇಃ ಸ್ವಯಮ್ ॥ ತಾರತಮ್ಯವಿಹೀನಸ್ಯ ವೇದಾನಾಂ ಪಠನಾದಪಿ । ಫಲಂ ನಾಸ್ತ್ಯೇವ ನಾಸ್ತ್ಯೇವ ಯಥಾ ಸೂತಕಿನಃ ಹರೇ ॥ ವೇದಪಠನಪುಣ್ಯಂ ಪಾಪಸ್ಯೈವ ಭವತಃ ಏವ ನಾನ್ಯಸ್ಯ ॥ ಇತಿ ಗಾರುಡೇ ಚೋಕ್ತಮ್ ॥ ನವವಿಧ ದ್ವೇಷಾಃ ॥ [೧] ಜೀವಾಭೇದಃ ॥ [೨] ಹರೇಃ ನಿರ್ಗುಣತ್ವಃ । [೩] ಗುಣಾಪೂರ್ಣಃ ॥ [೪] ಶ್ರೀ ಬ್ರಹ್ಮಾದಿಸಾಮ್ಯಮ್ ॥ [೫] ತೇಷಾಂ ಆಧಿಕ್ಯಮ್ । [೬] ಹಸ್ತಪಾದಾದಿ ಭೇದಃ ॥ [೭] ಅವತಾರೇ ಭೇದಾಭೇದಾದಿಃ ॥ [೮] ತದ್ಭಕ್ತನಿಂದನಮ್ ॥ [೯] ತಚ್ಛಾಸ್ತ್ರದೂಷಣಮ್ ॥೨೨-೨೩॥

## ಕನ್ನಡಾರ್ಥ

ಜೀವಸ್ತೋಮದ ತಾರತಮ್ಯಜ್ಞಾನದ ಫಲವನ್ನು ಹೇಳಿ-ಅದರ ಯೋಗ್ಯ ಅಧಿಕಾರಿಗಳನ್ನು ನಿರೂಪಿಸುತ್ತ-ತಾರತಮ್ಯವನ್ನು ತಿಳಿದುಕೊಳ್ಳಬೇಕೆಂದು ವಿಧಿಸುತ್ತಾರೆ. ಈ ಎರಡು ಪದ್ಯಗಳಿಂದ.

ತಾರತಮ್ಯಜ್ಞಾನವು ಕೇವಲ ಆವಶ್ಯಕವೆಂದು ಮೂಲ ಪದ್ಯದಲ್ಲಿ (೨೨ರಲ್ಲಿ) ಹೇಳಲಾಗಿರುತ್ತದೆ. ಆದರೆ ಇದರ ಬಗ್ಗೆ ಕೆಲವು ಸಂದೇಹಗಳು ಉದಯಿಸುತ್ತವೆ.

"ಇತರ ಶಾಸ್ತ್ರಗಳನ್ನು ಓದುವದು-ಹೇಳುವದರಿಂದಾಗಲೀ-ಅಥವಾ ಶ್ರೀಮನ್ಮಧ್ವಸಿದ್ಧಾಂತ ಪ್ರವಚನದಿಂದಲೇ ಆಗಲೀ ಪಾರಿಭಾಷಿಕ-ಶಬ್ದಗಳನ್ನು (ಅವಚ್ಛೇದಕ ಮುಂತಾದ ಪದಗಳನ್ನು) ಪ್ರಯೋಗಿಸಬಹುದು. ಅಂದರೆ ಶ್ರೀಮನ್ಮಧ್ವಶಾಸ್ತ್ರೋಕ್ತವಾದ ಅಧಿಕರಣ ಮುಂತಾದವುಗಳ ಪಾಠ ಪ್ರವಚನಕ್ಕಾಗಿ ಇತರ ತರ್ಕಾದಿ ಶಾಸ್ತ್ರಗಳ ಪಾರಿಭಾಷಿಕ-ಶಬ್ದಗಳನ್ನು ಸಂಗ್ರಹಿಸಬಹುದು. ಅದು ದೋಷವೆನಿಸಲಿಕ್ಕಿಲ್ಲ. ಆದುದರಿಂದ ಇಂಥ ಸಿದ್ಧಾಂತದಲ್ಲಿರುವ ಅಧಿಕರಣದ ವಿಷಯವನ್ನಾಗಲೀ-ಅದಕ್ಕೆ ಉಪಯೋಗ ಮಾಡುವ ದರ್ಶನಾಂತರಗಳ ರಹಸ್ಯಗಳನ್ನಾಗಲೀ ಪ್ರವಚನ ಮಾಡಿದರೆ ಸ್ವಮತಸ್ಥಾಪನ ಮಾಡರೂ ಆದೀತು. ತಿಳಿಯಲು ದುಃಸಾಧ್ಯವಾದ ಈ ತಾರತಮ್ಯ ಪ್ರಕ್ರಿಯೆಯು-ಪರವಾದಿಗಳೊಡನೆ ನಡೆಯುವ ವಾದಾದಿಗಳಲ್ಲಿ ಅಷ್ಟೊಂದು ಉಪಯುಕ್ತವಾಗುವದಿಲ್ಲವಾದುದರಿಂದ ಯಾಕೆ ಈ ತಾರತಮ್ಯ ವಿಚಾರವು ಅವಶ್ಯಬೇಕು? ಆದುದರಿಂದ ಕೇವಲಾವಶ್ಯಕವೆಂದು ದಾಸರಾಯರು ಹೇಳಿದುದು ಸರಿಯೆನಿಸಲಿಕ್ಕಿಲ್ಲ;" ಎಂದು ಸಂಶಯವು ಬರುವದು.

"ಆದರೆ ಇದು ಸರಿಯಲ್ಲ. ತಾರತಮ್ಯವನ್ನು ತಿಳಿದುಕೊಳ್ಳದಿದ್ದರೆ ಮಹಾ ಅನರ್ಥ ಬರುವದೆಂದು ಪುರಾಣಾದಿ ಶಾಸ್ತ್ರಗಳಲ್ಲಿ ನಿರೂಪಿಸಲಾಗಿರುತ್ತದೆ. ಅಷ್ಟೇ ಅಲ್ಲದೇ ತಾರತಮ್ಯಜ್ಞಾನವಿಲ್ಲದವನು ಕುಪುರುಷ (ಚಾಂಡಾಲ) ನಂತೆ ಅಸ್ಪೃಶ್ಯನೆಂದೂ ಹೇಳಲಾಗಿರುತ್ತದೆ. ನೈಯಾಯಿಕ-ಶಬ್ದಶಾಸ್ತ್ರಗಳಲ್ಲಿ ಆದರವಿರುವಂತೆ ಶ್ರೀಮಧ್ವಶಾಸ್ತ್ರದ-ತಾರತಮ್ಯದಲ್ಲಿ ಆದರವಿರುವದಿಲ್ಲ. ಆ ಶಾಸ್ತ್ರಗಳಲ್ಲಿರುವಷ್ಟು ಕೌಶಲ್ಯವನ್ನು ಈ ತಾರತಮ್ಯ ಪ್ರಕ್ರಿಯೆಯಲ್ಲಿ ಹೊಂದಲೂ ಇಚ್ಛಿಸುವದಿಲ್ಲ. ಇಂಥವರು ಶಾಸ್ತ್ರಾರ್ಥಕುಶಲರಾಗಿದ್ದರೂ ಸಿದ್ಧಾಂತದ ಪ್ರಮಾಣ ವಿಚಾರದಲ್ಲಿ ಮುಂದುವರೆದಿದ್ದರೂ-ತಾರತಮ್ಯ ಪ್ರಕ್ರಿಯೆಯಲ್ಲಿ ಅನಾದರವುಳ್ಳವರು ವೈಷ್ಣವರೆಂಬ ಹೆಸರಿಗೂ ಅನರ್ಹರು. ಹೇ ಗರುಡ! ಈ ತಾರತಮ್ಯಜ್ಞಾನವು ಎಲ್ಲ ಮನುಷ್ಯರಿಗೂ ಸುಲಭವಲ್ಲ; ಬಹಳ ದುರ್ಲಭವಾದುದು. ಹನ್ನೆರಡು ಗುಣವುಳ್ಳವನೂ ನಾಲ್ಕು ವೇದ ಪಾರಂಗತನೂ ಆದ ಬ್ರಾಹ್ಮಣನೂ ಸಹ ತಾರತಮ್ಯಜ್ಞಾನರಹಿತನಾದರೆ ಶೂದ್ರಸಮನೆಂದು ಜ್ಞಾನಿಗಳ ಅಭಿಪ್ರಾಯವಿರುತ್ತದೆ. ತಾರತಮ್ಯ ಪ್ರಕ್ರಿಯಾ ಜ್ಞಾನವಿಲ್ಲದೆ ಕೇವಲ ವಿಷ್ಣು ಸರ್ವೋತ್ತಮತ್ವವನ್ನು ಹೇಳುವವನೂ ಪಾಪಿಯು; ಅವನಿಗೆ ಶ್ರೀ ಹರಿಯು ಪ್ರಸನ್ನನಾಗುವದಿಲ್ಲ. ತಾರತಮ್ಯ ಜ್ಞಾನ ವಿಹೀನನಿಗೆ ವೇದಪಠನದಿಂದಲೂ ಸಹ ಸೂತಕವಿದ್ದವರಿಗೆ ಹೇಗೋ ಹಾಗೆ ಫಲವು ದೊರೆಯುವದಿಲ್ಲ. ತಾರತಮ್ಯಜ್ಞಾನವುಳ್ಳವನಿಗೇ ವೇದ ಪಠನ ಪಾರಾಯಣದ ಫಲವು ಬರುವದು; ಮಿಕ್ಕವನಿಗೆ ಬರುವದಿಲ್ಲ;" ಎಂದು ಗರುಡ ಪುರಾಣದಲ್ಲಿ ಹೇಳಲಾಗಿರುತ್ತದೆ.

ಕಲಿಯು ಸ್ವಭಾವವನ್ನು ವರ್ಣಿಸುವಾಗ ನವವಿಧ ದ್ವೇಷಗಳಿಗಾಕರ ನೆಂದು ದಾಸರು ನಿರೂಪಿಸಿರುತ್ತಾರೆ.

ಆ ನವವಿಧ ದ್ವೇಷಗಳನ್ನು ಪ್ರಾಸಂಗಿಕವಾಗಿ ಇಲ್ಲಿ ನಿರೂಪಿಸುತ್ತಾರೆ ಯಾಕೆಂದರೆ ಈ ಕ್ರಮದಿಂದ ತಾರತಮ್ಯಜ್ಞಾನವಿಲ್ಲದಿರುವದೂ ಒಂದು ದ್ವೇಷ ದಲ್ಲಿ ಅಂತರ್ಗತವಾಗುವದು. ಆದುದರಿಂದ ಈ ಪದ್ಯದಲ್ಲಿ ಇವರ ಪ್ರಸಂಗವು ಸ್ಫುಟವಾಗಿರದಿದ್ದರೂ ಪ್ರಸಂಗವಿರುವದರಿಂದ ಇಲ್ಲಿ ವ್ಯಾಖ್ಯಾನಕಾರರು ನವ ವಿಧ ದ್ವೇಷಗಳನ್ನು ವಿಶದಪಡಿಸುತ್ತಾರೆ. (೧) ಜೀವ ಜೀವರಿಗೂ, ಜೀವ ಪರ ಮಾತ್ಮನಿಗೂ ಅಭೇದ. (೨) ಹರಿಯು ಗುಣರಹಿತನು. (೩) ಗುಣಗಳಿ

ನುವನೆಂದು ತಿಳಿವರೂ ಅಲ್ಪ-ಸ್ವಲ್ಪ ಗುಣಗಳಿರುವವು; ಸಕಲ ಗುಣ ಪೂರ್ಣನಲ್ಲ ಎಂದು ತಿಳಿಸುವದು. (೪) ಬ್ರಹ್ಮಾದಿಗಳಿಂದ ಪರಮಾತ್ಮನು ಸಮನೆಂದು ತಿಳಿಯುವದು. (೫) ಬ್ರಹ್ಮಾದಿಗಳಿಂದ ಪರಮಾತ್ಮನು ಕಡಿಮೆಯವನೆಂದು ತಿಳಿಯುವದು. (೬) ಪರಮಾತ್ಮನಿಗೂ-ಅವನ ಜ್ಞಾನಾನಂದಾತ್ಮಕ ಅವಯವಗಳಿಗೂ-ಗುಣಕ್ರಿಯಾಗಳಿಗೂ ಭೇದವನ್ನು ತಿಳಿಯುವದು. (೭) ಹರಿಯು ಅವತಾರಗಳಲ್ಲಿ—ಭೇದವಾಯಿತು, ಅಂಗ ಭೇದವಾಯಿತು; ದೇಹಯೋಗದಿಂದ ದುಃಖಾದಿಗಳಾಗುವವು; ಎಂದು ತಿಳಿಯುವದು. (೮) ಭಗವದ್ಭಕ್ತರನ್ನು ನಿಂದಿಸುವದು. (೯) ಶ್ರೀ ಹರಿಯ ಆಜ್ಞಾರೂಪವಾದ ಶಾಸ್ತ್ರಗಳನ್ನು ದೂಷಿಸುವದು.” ಹೀಗೆ ಒಂಭತ್ತು ದ್ವೇಷಗಳನ್ನು ತಿಳಿಯಬೇಕು. ॥ ೨೩ ॥

ಅವತರಣಿಕಾ :—ಹಿಂದೆ ಹೇಳಿದ ವಿಸ್ತಾರ ತಾರತಮ್ಯವನ್ನು ಬುದ್ಧ್ಯಾರೋಹಣವಾಗುವಂತೆ ಸಂಕ್ಷೇಪದಿಂದ ಪುನಃ ಧಾರ್ಢ್ಯಾರ್ಥವಾಗಿ, ಅವರೋಹಣ ಕ್ರಮದಿಂದ ಭೃಗುಋಷಿಗಳವರೆಗೆ ಸ್ತೋತ್ರಗೈಯ್ಯುತ್ತಾರೆ. ಈ ಪದ್ಯಾರಂಭಿಸಿ ೨೮ನೇ ಪದ್ಯ ಪೂರ್ಣ.

**ಹರಿ ಸಿರಿ ವಿರಂಚೀರ ಭಾರತಿ ।**
**ಗರುಡ ಫಣಿಪತಿ ಷಣ್ಮಹಿಷಿಯರು ।**
**ಗಿರಿಜ ನಾಕೇಶ ಸ್ಮರ ಪ್ರಾಣನಿರುದ್ಧ ಶಚಿದೇವಿ ॥**
**ಗುರು ರತೀಮನು ದಕ್ಷ ಪ್ರವಹಾ ।**
**ಮರುತ ಮಾನವಿ ಯಮ ಶಶಿ ದಿವಾ ।**
**ಕರ ವರುಣ ನಾರದ ಸುರಾಸ್ಯ ಪ್ರಸೂತಿ ಭೃಗು ಮುನಿಪಾ**
**॥ ೨೪ ॥**

**ಪದ್ಯಾರ್ಥ** :—ಹರಿ=ಬಿಂಬನಾದ ಹರಿನಾಮಕ ಪರಮಾತ್ಮ, ಸಿರಿ=ಅನಂತಕೋಟಿ ಗುಣ ಕಡಿಮೆಯಾದ ಮುಕ್ತಿಯೆಂಬ ಸುಖ ಸಂಪತ್ತು ಕೊಡುವ ಲಕುಮಿ ದೇವಿಯು, ವಿರಂಚಿ=ಬ್ರಹ್ಮದೇವರು, ಈರ=ವಾಯು ದೇವರು, ಭಾರತಿ=ಪರಮಾತ್ಮನಲ್ಲಿ ವಿಶೇಷವಾಗಿ ಭಾ=ಪ್ರಕಾಶಮಾನವಾದ ಭಕ್ತಿ ರತಿಯುಳ್ಳ ಭಾರತೀ ಪ್ರಾಣ ಪತ್ನಿಯರನ್ನು ಹೇಳುವದರಿಂದ ಸರಸ್ವತೀ ದೇವಿಯರು ಬಂದಂತಾಯಿತು. ಗರುಡ=ಕಾಲಾಭಿಮಾನಿ ಗರುಡ ದೇವರು

ಫಣಿಪತಿ=ಶೇಷದೇವರು ಜೀವಾಭಿಮಾನಿಗಳು ಶೇಷದೇವರಲ್ಲಿ, ರುದ್ರ ದೇವರು ಬಂದಂತಾಯಿತು, ಷಣ್ಮಹಿಷಿಯರು=ಶ್ರೀ ವಿಷ್ಣುವಿನ ಸದಾಸೀತ ಪತ್ನಿಯರು ಆರು ಜನರು. ಹೆಸರು ಹಿಂದೆ ಹೇಳಿದೆ. ಗಿರಿಜ=ಗಿರಿರಾಜಪುತ್ರಿ ಉಮಾದೇವಿಯರು ಹೇಳುವದರಿಂದ ಅವರ ಸಮಾನರಾದ ಸೌಪರ್ಣೀವಾರುಣೀ ದೇವಿಯರು ಬಂದರು, ನಾಕೇಶ=ಸ್ವರ್ಗಾಧಿಪತಿ ಇಂದ್ರ ದೇವರು, ಸ್ಮರ=ಮನ್ಮಥ ಕಾಮದೇವರು, ಪ್ರಾಣ=ನಾಸಿಕ್ಯಾಹಂಕಾರಿಕ ಪ್ರಾಣದೇವರು ಅನಿರುದ್ಧ=ಕಾಮ ದೇವರ ಮಗ, ಶಚಿ=ಇಂದ್ರಪತ್ನಿ, ಗುರು=ಬೃಹಸ್ಪತ್ಯಾಚಾರ್ಯರು, ರತೀ=ಕಾಮಭಾರ್ಯಾ, ಮನು=ಸ್ವಾಯಂಭುವಮನು, ದಕ್ಷ=ದಕ್ಷಪ್ರಜೇಶ್ವರ, ಪ್ರವಹ ಮರುತ=ಕೋಣಾಧಿಪತಿ ಪ್ರವಹ ವಾಯು ದೇವರು, ಮಾನವಿ=ಸ್ವಾಯಂಭುಮನುಪತ್ನಿ ಶತರೂಪಾದೇವಿ, ಯಮ=ಯಮದೇವರು, ಶಶಿ=ಚಂದ್ರ, ದಿವಾಕರ=ಸೂರ್ಯ, ವರುಣ=ಗಂಗಾಪತಿ-ಸಮುದ್ರಾಧಿಪತಿ-ವರುಣ ದೇವರು, ನಾರದರು ದೇವ ಋಷಿಗಳು, ಸುರಾಸ್ಯ=ದೇವತೆಗಳಿಗೆ ಮುಖರೂಪನಾಗಿರುವ ಅಗ್ನಿದೇವರು, ಪ್ರಸೂತಿ=ದಕ್ಷ ಪ್ರಜೇಶ್ವರನ ಪತ್ನಿ, ಭೃಗುಋಷಿಗಳಿಗೆ, ನಮಿಸುವೆನೆಂದು ಮುಂದಿನ ಪದ್ಯದ ಅನ್ವಯ.

**ಭಾವಸೂಚನ** ॥ ಹರಿರಿತಿ ॥ ನಾಕೇಶ ಇಂದ್ರ, ಸ್ಮರ ಕಾಮ, । ಮಾನವೀ ಶತರೂಪಾ । ಸುರಾಸ್ಯ ಅಗ್ನಿ ॥ ೨೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಕ್ತಂ ಅರ್ಥಂ ಬುಧ್ಯಾರೋಹಾಯ ಕ್ರೋಡೀಕರೋತಿ—"ಹರಿ" ಇತಿ ॥ ಪ್ರಾಣಃ ಆಹಂಕಾರಿಕಃ ॥ "ಸುರಾಸ್ಯಃ"—ಅಗ್ನಿಃ ॥ ೨೪ ॥

## ಕನ್ನಡಾರ್ಥ

ವಿಸ್ತಾರದಿಂದ ಹೇಳಲಾಗಿರುವ ಹಿಂದಿನ ಪ್ರಮೇಯಗಳನ್ನೇ ಸುಲಭವಾಗಿ ಸರ್ವರ ಬುದ್ಧಿಯಲ್ಲಿ ನಿವೇಶಿಸುವಂತೆ ಸಂಕ್ಷೇಪದಿಂದ ಸಂಗ್ರಹಿಸಿ ತಿಳಿಸುತ್ತಾರೆ. —"ಹರಿ" ಎಂದು ಮುಂತಾದ ಪದ್ಯಗಳಿಂದ "ಪ್ರಾಣ" ಎಂದರೆ "ಆಹಂಕಾರಿಕ ಪ್ರಾಣ" ಎಂದು ಭಾವಿಸಬೇಕು. "ಸುರಾಸ್ಯ"—ದೇವತೆಗಳಿಗೆ ಮುಖನಾದ ಅಗ್ನಿ. ಅಗ್ನಿಯು ಮುಖಾಂತರವಾಗಿ ದೇವತೆಗಳು ಸ್ವಾಹಾ

ಆಹುತಿಯನ್ನು ಸ್ವೀಕರಿಸುವುದರಿಂದ ಅಗ್ನಿಯು ದೇವಮುಖನೆನಿಸಿಕೊಳ್ಳು ತ್ತಾನೆ.

ಅವತರಣಿಕಾ :—ಇನ್ನು ಈ ಪದ್ಯದಿಂದ ೧೬ನೇ ಕಕ್ಷ ಮರೀಚ್ಯಾದಿ ಗಳಿಂದ ಶೇಷಶತಸ್ಥರವರೆಗೆ ತತ್ತ್ವಾಭಿಮಾನಿ ದೇವತೆಗಳನ್ನು ಸಂಕ್ಷೇಪವಾಗಿ ನಮಿಸುತ್ತಾರೆ.

ವ್ರತತಿಜಾಸನ ಪುತ್ರರೆನಿಸುವ ।
ವ್ರತಿವರ ಮರೀಚಾತ್ರಿ ವೈವ ।
ಸ್ವತನು ತಾರಾಮಿತ್ರ ನಿಋತಿ ಪ್ರವಹ ಮಾರುತನ ॥
ಸತಿಧನೇಶಾಶ್ವಿನಿಗಳಿರ್ಗಣ ।
ಪತಿಯು ವಿಷ್ವಕ್ಸೇನ ಶೇಷಸು ।
ಶತರು ಮನುಗಳುಚಥ್ಯಚಾವನ ಮುನಿಗಳಿಗೆ ನಮಿಪೆ ॥೨೫॥

ಪದ್ಯಾರ್ಥ :—ವ್ರತತಿಜಾಸನ=ಲತೆಯಲ್ಲಿ ಹುಟ್ಟಿದ ಪದ್ಮವೇ ಆಸನ ಆಗಿ ವುಳ್ಳ ಬ್ರಹ್ಮದೇವರ, ಪುತ್ರರೆನಿಸುವ=ಮಕ್ಕಳೆಂದೆನಿಸುವ, ವ್ರತಿವರ=ವ್ರತ ನಿಯಮಾದಿಗಳಲ್ಲಿ ಶ್ರೇಷ್ಠ ವ್ರತಾದಿಗಳನ್ನು ಮಾಡುವರು, ಮರೀಚಾತ್ರಿ= ಮರೀಚಿ ಋಷಿ ಅತ್ರಿ ಋಷಿ ಮೊದಲಾದ ಏಳು ಜನ ಋಷಿಗಳು, ಇವರನ್ನು ಹೇಳುವದರಿಂದ ಇವರ ಸಮಾನರಾದ ವಿಶ್ವಾಮಿತ್ರ ಋಷಿಗಳು ಇವರಲ್ಲೇ ಬಂದರು. ವೈವಸ್ವತಮನು, ತಾರಾ=ಬೃಹಸ್ಪತ್ಯಾಚಾರ್ಯರ ಪತ್ನಿ, ಮಿತ್ರ= ಮಿತ್ರನಾಮಕ ಸೂರ್ಯ, ನಿಋತಿ=ನರಣಂ ನಿಪ್ರೆ, ಜ್ಞಾನ, ರತಿ=ಜ್ಞಾನ ವುಳ್ಳವ, ಕೋಣಾಧಿಪತಿ ನಿಋತಿದೇವ, ಪ್ರವಹ ವಾಯುಸತಿ=ಪ್ರಾವಹಿ ದೇವಿ, ಧನೇಶ=ಧನಾಧಿಪತಿ ಕುಬೇರ, ಅಶ್ವಿನಿಗಳು=ನಾಸತ್ಯದಸ್ರ ಸ್ವರ್ಗ ವೈದ್ಯರು ಅಶ್ವಿನಿದೇವತೆಗಳು, ಗಣಪತಿ=ವಿಘ್ನೇಶ, ವಿಷ್ವಕ್ಸೇನ=ವಾಯು ಪುತ್ರ, ಶೇಷಸುಶತರು=೧೦೦ ಜನ ಸೋಮಪಾನಾರ್ಹ ದೇವತೆಗಳಲ್ಲಿ ಮೇಲೆ ಹೇಳಿದ ಕಕ್ಷದಲ್ಲಿ ಹೇಳದೇ ಇದ್ದ ಶೇಷಶತರು=ಉಳಿದ ೮೫ ಜನ ದೇವತೆಗಳು ಮನುಗಳು=ಉತ್ತಮಮನು ಹರಿ ಅವತಾರ. ಸ್ವಾಯಂಭುವ, ವೈವಸ್ವತ ಮನು ಈ ಮೂರು ಜನ ಮನುಗಳನ್ನು ಬಿಟ್ಟು ಉಳಿದ ೧೧ ಜನ ಮನುಗಳಿಗೆ ಉಚಥ್ಯ ಋಷಿ, ಚಾವನ ಮುನಿಗಳಿಗೆ ನಮಿಸುವೆ=ವಂದಿಸುತ್ತೇನೆ.

**ಭಾವಸೂಚನ** ॥ ಪ್ರತತಿ=ಬ್ರಹ್ಮಾ ॥ "ಸ್ವಾರೋಚಿಷೋತ್ತಮಶ್ಚ ತಾಪಸೋ ರೈವತಸ್ತಥಾ ॥ ಚಾಕ್ಷುಷೋ ವೈವಸ್ವತಶ್ಚ ಸಾವರ್ಣಿಃ ಬ್ರಹ್ಮ ಪೂರ್ವಕಃ ॥ ಸಾವರ್ಣೀ ರುದ್ರಸಾವರ್ಣಿರ್ದೇವಸಾವರ್ಣಿರೇವ ಚ ತಥಾ ವಾ ಇಂದ್ರಸಾವರ್ಣಿಃ ದಕ್ಷಸಾವರ್ಣಿರೇವ ಚ ॥ ಧರ್ಮಸಾವರ್ಣಿರಿತ್ಯೇವಂ ಮನವಶ್ಚ ಚತುರ್ದಶೇತಿ ॥ ಶಾಸ್ತ್ರಭೇ ॥ ೨೫ ॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಪ್ರತತಿಜಾಸನ" ಇತಿ ॥ ಲತಾಜಂ-ಪದ್ಮಮ್ ॥
ಶೇಷ-ಪಂಚಾಶೀತಿ ॥ ಮನುಗಳು-ಏಕಾದಶ ॥ ೨೫ ॥

## ಕನ್ನಡಾರ್ಥ

"ಪ್ರತತಿಜಾಸನ"—ಪ್ರತತಿ ಎಂದರೆ ಲತಾ-ಲತೆಯಲ್ಲಿ ಹುಟ್ಟಿದುದು ಪದ್ಮ. "ಪದ್ಮಾಸನ".ಎಂದರೆ ಚತುರ್ಮುಖ ಬ್ರಹ್ಮನೆಂದು ಅರ್ಥ ಅವನ ಪುತ್ರರು ಮರೀಚಿ ಮುಂತಾದವರು " ಎಂದು ತಿಳಿಯಬೇಕು.

ಶೇಷಶತರು ಎಂದರೆ ೮೫ ದೇವತೆಗಳೆಂದು ತಿಳಿಯಬೇಕು. ಹಿಂದೆ "ಉಕ್ತಶೇಷರು" ಎಂಬಲ್ಲಿ ಈ ವಿಷಯವು ವಿಶದವಾಗಿ ನಿರೂಪಿತವಾಗಿರುತ್ತದೆ.

ಮನುಗಳು-ಹನ್ನೊಂದು ಎಂದು ತಿಳಿಯಬೇಕು- ಸ್ವಾಯಂಭವ, ಸ್ವಾರೋಚಿಷ-ವೈವಸ್ವತರನ್ನು ಈ ಕ್ರಮದಲ್ಲಿ ಪರಿಗಣಿಸಬಾರದು. ॥೨೫॥

**ಅವತರಣಿಕಾ :**—ಈ ಪದ್ಯದಲ್ಲಿ, ಕರ್ಮಜದೇವತೆಗಳಾರಂಭಿಸಿ ಶನೈಶ್ಚರ ಪುಷ್ಕರರವರೆಗೆ ಸಂಕ್ಷಿಪ್ತವಾಗಿ ಸಾಮೂಹಿಕ ದೇವತೆಗಳಿಗೆ ನಮಿಸಿ ಭಕ್ತಿ ಜ್ಞಾನ ಕೊಡಲೆಂದು ಪ್ರಾರ್ಥಿಸುತ್ತಾರೆ.

**ಶತಸು ಪುಣ್ಯ ಶ್ಲೋಕರೆನಿಸುವ ।**
**ಕ್ಷಿತಿಪರಿಗೆ ನಮಿಸುವೆನು ಭಾಗೀ ।**
**ರಥಿ ವಿರಾಟ್ಪರ್ಜನ್ಯರೋಹಿಣಿ ಶ್ಯಾಮಲಾ ಸಂಜ್ಞಾ ॥**
**ಹುತವಹನ ಮಹಿಳಾ ಬುಧೋಷಾ ।**
**ಕ್ಷಿತಿ ಶನೈಶ್ಚರ ಪುಷ್ಕರರಿಗಾ ।**
**ನತಿಸಿ ಬಿನ್ನವಿಸುವೆನು ಭಕ್ತಿ ಜ್ಞಾನ ಕೊಡಲೆಂದು ॥ ೨೬ ॥**

**ಪದ್ಯಾರ್ಥ** :—ಶತಸುಪುಣ್ಯಶ್ಲೋಕರೆನಿಸುವ ಕ್ಷಿತಿಪರಿಗೆ = ನೂರು ಜನರು ಇವರು ರಾಜರು, ಪುಣ್ಯಶ್ಲೋಕರು=ಪುಣ್ಯ ಶುಭಂ ಕರೋತಿ ಪುಣ್ಯಂ, ಶುಭಕರ್ಮ ಯಜ್ಞಾದಿಗಳನ್ನು ಮಾಡಿ, ಜ್ಞಾನ ಸಂಪಾದನೆ ಮಾಡುವ ಕರ್ಮಜ ದೇವತೆಗಳು ನೂರು ಜನ ಕ್ಷಿತಿಪರು. ಪುಣ್ಯ ಕೀರ್ತಿವಂತ ರಿಗೆ ನಮಿಸುವೆನು=ನಮಸ್ಕಾರ ಮಾಡುವೆನು, ಭಾಗೀರಥಿ=ವರುಣ ಪತ್ನಿ ಗಂಗಾದೇವಿ, ವಿರಾಡಭಿಮಾನಿ ಅನಿರುದ್ಧ ಪತ್ನಿ ಉಷಾ, ಮೇಘಾಭಿಮಾನಿ ಪರ್ಜನ್ಯ, ರೋಹಿಣಿ=ಚಂದ್ರ ಪತ್ನಿ, ಶಾಮಲಾ=ಯಮ ಪತ್ನಿ, ಸಂಜ್ಞಾ= ಸೂರ್ಯ ಪತ್ನಿ, ಹುತವಹನ ಮಹಿಳಾ=ಅಗ್ನಿ ಪತ್ನಿ ಸ್ವಾಹಾದೇವಿ, ಬುಧ= ಜಲಾಭಿಮಾನಿ, ಉಷಾದೇವಿ=ಅಶ್ವಿನಿ ಭಾರ್ಯ. ಕ್ಷಿತಿ=ಧರಣಿ, ಶನೈಶ್ಚರ= ಸೂರ್ಯ ಪುತ್ರ ಶನಿದೇವ, ಪುಷ್ಕರರಿಗೆ=ಪರಮಾತ್ಮನಿಗೆ ಸಕಲನ ಸುಕರ್ಮ ವನ್ನು ಪುಷ್ಕರ ನಾಮಕ ದೇವನೇ ಸಮರ್ಪಿಸುವನಾದುದರಿಂದ ಇಂತಹ ಪುಷ್ಕರ ದೇವನೇ ಮೊದಲಾದವರಿಗೆ, ನತಿಸಿ=ನಮಸ್ಕರಿಸಿ, ಭಕ್ತಿ ಜ್ಞಾನ ಕೊಡಲೆಂದು ಬಿನ್ನೈಸುವೆನು=ಪರಮಾತ್ಮನೇ ಸರ್ವೋತ್ತಮನೆಂಬುವ ದೃಢ ವಾದ ಸ್ನೇಹ, ಸುಜ್ಞಾನ ಸಮೀಚೀನವಾದ ತಿಳುವಳಿಕೆ ಕೊಡಬೇಕೆಂದು ಅರಿಕೆ ಮಾಡುವೆನು=ಪ್ರಾರ್ಥಿಸುವೆನು.

**ಭಾಸವಬೋಧನ ॥ ಶತೇತಿ ॥ ಈಯಲಿ ಕೊಡಲಿ ॥ ೨೬ ॥**

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

" ಶತ " ಇತಿ ॥ " ಈಯಲಿ "-ಕೊಡಲಿ ॥ ॥ ೨೬ ॥

## ಕನ್ನಡಾರ್ಥ

ಈ ಪದ್ಯಾರ್ಥವು ಸುಗಮವಿರುವುದರಿಂದ ವ್ಯಾಖ್ಯಾನಿಸಿರುವದಿಲ್ಲ. "ಈಯಲಿ"—ಕೊಡಲಿ" ॥ ೨೬ ॥

**ಅವತರಣಿಕಾ** :—ಈ ೨೭-೨೮ನೇ ಪದ್ಯದಿಂದ ೨೬ನೇ ಕಕ್ಷದಿಂದ ೩೨ ಕಕ್ಷದವರಿಗೆ ಸಾಮೂಹಿಕವಾಗಿರುವ ಗಣವನ್ನು ಸ್ತೋತ್ರ ಮಾಡುತ್ತಾರೆ.

**ನೂರಧಿಕವಾಗಿಪ್ಪ ಮತ್ಸ್ಯದಿ ।**
**ನಾರು ಸಾವಿರ ನಂದಗೋಪ ಕು ।**
**ಮಾರನರ್ಧಾಂಗಿಯರಗಸ್ತ್ಯಾದೀ ಮುನೀಶ್ವರರು ॥**




**ಉರ್ವಶೀ ಮೊದಲಾದ ಅಪ್ಸರ ।**
**ನಾರಿಯರು ಶತ ತುಂಬುರುರು ಕಂ ।**
**ಸಾರಿ ಗುಣಗಳ ಕೀರ್ತನೆಯ ಮಾಡಿಸಲಿ ಎನ್ನಿಂದ ॥ ೨೭ ॥**

**ಪದ್ಯಾರ್ಥ :**—ನೂರಧಿಕವಾಗಿಪ್ಪ=ಒಂದು ನೂರು ಹೆಚ್ಚಾಗಿರುವ ಮತ್ತಧಿನಾರು ಸಾವಿರ=ಮತ್ತೆ ಹದಿನಾರು ಸಾವಿರ, ಅಂದರೆ ೧೬-೧೦೦ ನಂದಗೋಪ ಕುಮಾರನರ್ಧಾಂಗಿಯರು=ನಂದಗೋಪನ ಮಗನಾದ ಶ್ರೀ ಕೃಷ್ಣನ ಪತ್ನಿಯರು, ಅಗಸ್ತ್ಯಾದಿ ಮುನೀಶ್ವರರು=ಅಗಸ್ತ್ಯರೇ ಮೊದಲಾದ ಶತೋನಸಪ್ತಕೋಟಿ ಋಷಿಗಳು, ಮತ್ತು ಉರ್ವಶೀ ಮೊದಲಾದ ಅಪ್ಸರ ನಾರಿಯರು ಶತ=ಊರ್ವಶಿಯೇ ಮೊದಲಾಗಿ ಉಳ್ಳ ನೂರು ಜನ ಅಪ್ಸರ ಸ್ತ್ರೀಯರು, ದೇವತೆಗಳಿಂದ ಭೋಗ ಉಳ್ಳವರು, ಶತ ತುಂಬುರುರು=೧೦೦ ಜನ ತುಂಬುರುನೇ ಮೊದಲಾದ ಗಂಧರ್ವರು, ಕಂಸಾರಿ ಗುಣಗಳ=ಕಂಸನ ವೈರಿಯಾದ ಶ್ರೀ ಕೃಷ್ಣ ಪರಮಾತ್ಮನ, ಶ್ರೀ ಕೃಷ್ಣನೆ ಪ್ರಾಜ್ಞ, ಪ್ರಾಜ್ಞನೇ ಬಿಂಬ, ಈ ಬಿಂಬರೂಪಿ ಶ್ರೀ ಹರಿಯ, ಜ್ಞಾನಾನಂದಾದಿ ಗುಣಗಳನ್ನು, ಎನ್ನಿಂದ=ಎನ್ನ ಕಡೆಯಿಂದ, ಅಂದರೆ ಎನ್ನಲ್ಲಿ ಸಕಲ ತತ್ವೇಶರೆ ಮೊದ ಲಾದ, ಸಕಲ ಸಾಂಶ ದೇವತೆಗಳು ನಿಂತು, ಶ್ರೀ ಹರಿಯ ಗುಣಗಳನ್ನು ಕೀರ್ತನೆ ಮಾಡಿಸಲಿ=ಗಾನ ಮಾಡಿ ಹೊಗಳಿಸಲಿ, ಸ್ತೋತ್ರ ಮಾಡಿಸಲೆಂದು ಪ್ರಾರ್ಥಿಸುತ್ತಾರೆ.

**ಭಾವಸೂಚನ** ॥ನೂರೇತಿ॥ ನಂದಗೋಪ ಕುಮಾರ ಶ್ರೀ ಕೃಷ್ಣ॥೨೭॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನೂರು" ಇತಿ ॥ "ತುಂಬುರುರು" ಇತ್ಯನೇನ ಏತೇಷಾಂ ಆಜಾನತ್ವಂ ಕೇಷಾಂಚಿತ್ ಪಕ್ಷ ಮಭಿಪ್ರೈತಿ ॥ ೨೭ ॥

## ಕನ್ನಡಾರ್ಥ

"ತುಂಬುರುರು" ಎಂಬ ಪದಪ್ರಯೋಗದಿಂದ ಈ ತುಂಬುರುವಿಗೆ ಆಜಾನದೇವತೆಗಳೆಂದು ಹೇಳುವ ಕೆಲವರ ಪಕ್ಷವೊಂದು ಇರುತ್ತದೆ ಎಂದು ಸೂಚಿತವಾಗುತ್ತದೆ ॥ ೨೭ ॥

ಅವತರಣಿಕಾ :—ಇನ್ನು ಅಜಾನಜದೇವತೆಗಳು, ಚಿರಪಿತೃಗಳು ದೇವಗಂಧರ್ವರು, ಮನುಜ ಗಂಧರ್ವರು, ಮಾನವರಾಜರು, ಮಾನುಷೋತ್ತಮರು, ಭೂದಿವಿಜರಾದ ವೈಷ್ಣವಸಮೂಹದವರೆಲ್ಲ ಶ್ರೀ ಹರಿಯ ಭಕ್ತರೆಂದು ಸ್ತೋತ್ರ ಗೈಯ್ಯುತ್ತಾರೆ.

**ಪಾವನರು ಶುಚಿ ಶುದ್ಧನಾಮಕ ।**
**ದೇವತೆಗಳಾಜಾನ ಚಿರಪಿತೃ ।**
**ದೇವನರಗಂಧರ್ವರವನಿಪ ಮಾನುಷೋತ್ತಮರು ॥**
**ಈ ವಸುಮತಿಯೊಳುಳ್ಳ ವೈಷ್ಣವ ।**
**ರಾವಳಿಯೊಳಿಹರೆಂದು ನಿತ್ಯದಿ ।**
**ಸೇವಿಪದು ಸಂತೋಷದಿಂ ಸರ್ವಪ್ರಕಾರದಲಿ ॥ ೨೮ ॥**

**ಪದ್ಯಾರ್ಥ** :—ಪಾವನರು=ಪವಿತ್ರವಾಗಿ ಉಳ್ಳ=ಅಜಾನಜದೇವತೆಗಳು, ದೇವಭೃತ್ಯರು, ಶುಚಿ=ನಿರ್ಮಲರಾದ ಚಿರಪಿತೃಗಳು, ಶುದ್ಧನಾಮಕ=ಚೊಕ್ಕ, ಸ್ವಚ್ಛರಾದ ದೇವಗಂಧರ್ವರು, ಇಲ್ಲಿವರೆಗೆ ಸಾಂಶದೇವತೆಗಳಾದ ಕಾರಣ ಪಾವನರು-ಶುದ್ಧರು ಶುಚಿಗಳೆಂದು ಮೂರು ಪದಪ್ರಯೋಗ ಮಾಡಿದ್ದು ಬಹು ಸಾರ್ಥಕ್ಯವೆನಿಸಿದೆ, ನಂತರ ನಿರಂಶರಾದ ನರ ಗಂಧರ್ವರು=ಮನುಷ್ಯ ಗಂಧರ್ವರು, ಅವನಿಪರು=ಮನುಷ್ಯರಾಜರು, ಮತ್ತು ಮಾನುಷೋತ್ತಮರು=ಮನುಜ ಶ್ರೇಷ್ಠರು, ಇವರೆಲ್ಲರೂ, ಈ ವಸುಮತಿಯೊಳುಳ್ಳ=ಈ ಪೃಥ್ವಿಯಲ್ಲಿರುವ, ವೈಷ್ಣವರಾವಳಿಯೊಳಿಹರೆಂದು ನಿತ್ಯದಿ=ವಿಷ್ಣು ಭಕ್ತರ ಸಮೂಹದಲ್ಲಿ ಇರುವರೆಂದು, ಪ್ರತಿ ದಿನವೂ, ಸಂತೋಷದಿಂದ=ಮನಸ್ಸಿನ ಆನಂದಭರಿತರಾಗಿ, ಸರ್ವಪ್ರಕಾರದಲ್ಲಿ=ಎಲ್ಲ ವಿಧದಿಂದಲೂ, ಸೇವಿಪದು=ಸೇವೆ ಮಾಡುವದು.

**ಭಾವಸೂಚನ** ॥ ಪಾವನೇತಿ ॥ ವಸುಮತಿ ಭೂಮಿ ಇಹರು=ಇರುವರು ॥ ೨೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪಾವನ" ಇತಿ ॥ ಏತೇ ಆಜಾನಜಾಃ ॥ ಅಥಾಗ್ನಿಜಾಃ—"ಶುಚಿಃ ಶುಂಧ್ಯುಃ ಪವಮಾನಃ" ಇತಿ ತ್ರಯಃ ॥ ಅನ್ಯೇ ಷೋಡಶಸಾಹಸ್ರಾಃ ದೇ

ಕೃಷ್ಣ ಸ್ತ್ರೀತ್ವಮಾಪಿರೇ || ತುಂಬುರು ಪ್ರಮುಖಂ ಯಚ್ಚ ಗಂಧರ್ವಾಣಾಂ ಶತಂ ತಥಾ || ವಿದ್ಯಾಧರಾಃ ಅಪ್ಸರಸಃ ಊರ್ವಶ್ಯಾದ್ಯಾಃ ತಥಾರ್ಷಯಃ || ವಸಿಷ್ಠಾದೀನ್ ವಿನಾ ಯೇ ಯೇ ರಾಜಾನಃ ||ಇತಿ ಚೋಕ್ತೇಃ || ವಿಸ್ತೃತಿ ಭಯಂ ಕುಕ್ಷಿ ಗತಮಪಿ ಪ್ರತಿಜ್ಞಾಯ (ಜ್ಞಯಾ) ಉಕ್ತ್ವಾ ಪ್ರದೋಷಭಾಗಿನಃ ದೂರೀ ಕುರ್ವಂತಿ || ತಸ್ಮಾದುದಾಹೃತಮೇತತ್ || ೨೮ ||

## ಕನ್ನಡಾರ್ಥ

"ಶುಚಿ, ಶುಂಧ್ಯ (ಶುದ್ಧ) **ಪವಮಾನನಾಮಕ ಅಗ್ನಿಪುತ್ರರು**-ಆಜಾನಜ ದೇವತೆಗಳು. ಉಳಿದ ಅಗ್ನಿ ಪುತ್ರರು-೧೬ ಸಾಹಸ್ರ ಶ್ರೀಕೃಷ್ಣ ಪತ್ನಿತ್ವವನ್ನು ತಪಸ್ಸಿನಿಂದ ಹೊಂದಿದರು. ತುಂಬುರುನೇ ಪ್ರಧಾನವಾಗಿವುಳ್ಳ ನೂರು ಮಂದಿ ಗಂಧರ್ವರು, ವಿದ್ಯಾಧರರು, ಊರ್ವಶೀ ಮುಂತಾದ ಅಪ್ಸರೆಯರು, ವಸಿಷ್ಠಾದಿಗಳನ್ನು ಬಿಟ್ಟು ಮಿಕ್ಕ ಋಷಿಗಳು, ಹಾಗೂ ರಾಜರುಗಳು," ಇವರೆಲ್ಲರೂ ತಾರತಮ್ಯದಿಂದ ಇರುವರು. ಎಂದು ಹೇಳಲಾಗಿರುತ್ತದೆ.

ಇವೆಲ್ಲವನ್ನೂ ಇಲ್ಲಿ ವಿವರವಾಗಿ ತಿಳಿಸದೆ ಕೇವಲ ಪ್ರತಿಜ್ಞಾ ರೂಪವಾಗಿ ಹೇಳಿದರೆ ದೋಷೈಕ ದೃಷ್ಟಿಗಳಾದ ಬುಧರು ನಿಂದಿಸುವರು-ಆದುದರಿಂದ ಈಗ ಸಂಕ್ಷೇಪವಾಗಿ ನಿರೂಪಿಸುವದಿದ್ದರೂ ವಿಸ್ತಾರದಿಂದ ಇವೆಲ್ಲವನ್ನು ವಿಶದೀಕರಿಸಲಾಗಿರುತ್ತದೆ || ೨೮ ||

**ಅವತರಣಿಕಾ :**—ಈ ಪದ್ಯದಲ್ಲಿ ಮಾನುಷೋತ್ತಮರಿಂದ ಬ್ರಹ್ಮದೇವರವರೆಗೆ ಶತೋತ್ತರುತ್ವ ಚಿಂತನೆ ಮಾಡುವ ಕ್ರಮ ಹೇಳುತ್ತಾ ಈ ಸಂಧಿಯನ್ನು ಮುಗಿಸುತ್ತಾ ಸಂತತ ಪಠಿಸುವದೆಂದು ಉಪದೇಶಿಸುತ್ತಾರೆ.

**ಮಾನುಷೋತ್ತಮರನ (ನು) ವಿಡಿದು ಚತು |**
**ರಾನನಾಂತ ಶತೋತ್ತರುತ್ವ ಕ್ರ |**
**ಮೇಣ ಚಿಂತಿಪ ಭಕ್ತರಿಗೆ ಚತುರವಿಧ ಪುರುಷಾರ್ಥಃ ||**
**ಶ್ರೀ ನಿಧಿ ಜಗನ್ನಾಥ ವಿಟ್ಠಲ |**
**ತಾನೆ ವೊಲಿದೀವನು ನಿರಂತರ |**
**ಸಾನುರಾಗದಿ ಪಠಿಸುವುದು ಸಂತರಿದ ಮರೆಯುವಲಿ || ೨೯ ||**

ಅಂತು ಸಂಧಿ ೧೯-ಪದ ೫೪ಕ್ಕೆ ಗುಣ ತಾರತಮ್ಯ
**ಸಂಧಿ ಸಮಾಪ್ತ ಮಂಗಳ ಮಹ**
॥ ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :**—ಮಾನುಷೋತ್ತಮರ ಪಿಡಿದು=ಮನುಷ್ಯೋತ್ತಮರ ಆರಂಭ ಮಾಡಿ, ಚತುರಾನನಾಂತ=ಚತುರ್ಮುಖ ಬ್ರಹ್ಮ ದೇವರ ಪರಿಯಂತವಾಗಿ, ಶತೋತ್ತಮತ್ವ ಕ್ರಮೇಣ ಚಿಂತಿಪ ಭಕ್ತರಿಗೆ=ಶತೋತ್ತಮತ್ವ ಹೇಗೆ ಚಿಂತಿಸಬೇಕೆಂಬ ಕ್ರಮ, ತೈತ್ತಿರೀಯ ಉಪನಿಷತ್ತಿನಲ್ಲಿ ೨ ಮಂತ್ರ ೧೭ ರಾರಂಭಿಸಿ ಮಂತ್ರ ೨೦ರವರೆಗೆ ಖಂಡಾರ್ಥದಲ್ಲಿಯೂ, ಉಪನಿಷತ್ತಿನಲ್ಲಿಯೂ, ಸಮಸ್ತ ಪೃಥ್ವಿಪಾಲನ ಏಕಚಕ್ರಾಧಿಪತಿ-ಮನುಷ್ಯರಾಜರ ರಾಜನಿಗೆ ಆಗುವ ಆನಂದವು, ಕಿಂಚಿತ ಮನುಜೋತ್ತಮನಾದ ಮುಕ್ತಿಯೋಗ್ಯನಿಗೆ ಆಗುತ್ತದೆ.

"ಸೈಷಾನಂದಸ್ಯ ಮೀಮಾಂಸಾ ಭವತಿ । ಯುವಾ ಸ್ಯಾತ್ ಸಾಧು ಯುವಾ ಧ್ಯಾಯಕಃ ॥ ಆಶಿಷ್ಠೋ ಧೃಢಿಷ್ಠೋ ಬಲಿಷ್ಠಃ । ತಸ್ಯೇಯಂ । ಪೃಥಿವೀ ಸರ್ವವಿತ್ತಸ್ಯ ಪೂರ್ಣಾ ಸ್ಯಾತ್ । **ಸ ಏಕೋ ಮಾನುಷ ಆನಂದಃ** । ತೇ ಯೇ ಶತಂ ಮಾನುಷಾ ಆನಂದಾಃ । ಸ ಏಕೋ ಮನುಷ್ಯ ಗಂಧರ್ವಾಣಾಮಾನಂದಃ ॥ ತೇ ಯೇ ಶತಂ ಮನುಷ್ಯಗಂಧರ್ವಾಣಾಮಾನಂದಃ । ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ ॥ ೧೭ ॥ ಇತ್ಯಾದಿ ಉತ್ತರೋತ್ತರ, ತೇ ಯೇ ಶತಂ ಬೃಹಸ್ಪತೇರಾನಂದಾಃ । ಸ ಏಕಃ ಪ್ರಜಾಪತೇರಾನಂದಃ ॥ ಹೀಗೆ ಉಪನಿಷತ್ತಿನಲ್ಲಿ, ತಾರತಮ್ಯ ಕ್ರಮವಾಗಿ ಒಬ್ಬರಿಂದೊಬ್ಬರು ಕ್ರಮವಾಗಿ ನೂರುಮಡಿ ಹೆಚ್ಚಿನಾನಂದ ಮುಕ್ತಿಯಲ್ಲಿ ಹೊಂದುವರೆಂದು ಹೇಳಿದ್ದಾರೆ "ಇದನ್ನೇ ಶ್ರೀ ಗುರುರಾಜರು ಖಂಡಾರ್ಥದಲ್ಲಿ "ಯೇ ಸಾಕ್ಷಾದ್ದೇವಪ್ರೇಷ್ಯಾಃ ತೇ ದೇವಗಂಧರ್ವಾಃ ತೇಷಾಂ ಮನುಷ್ಯ ಗಂಧರ್ವಾಪೇಕ್ಷಯಾ ಶತಗುಣೋತ್ಕೃಷ್ಟ ಆನಂದ ಇತ್ಯರ್ಥಃ । **ಏವಮಗ್ರೇಪಿ ಪೂರ್ವಪೂರ್ವೇಭ್ಯಃ ಉತ್ತರೋತ್ತರಂ ಶತಗುಣೋತ್ಕರ್ಷೋ ಧ್ಯೇಯಃ**" ಎಂದು ಶತೋತ್ತಮತ್ವಕ್ರಮವೆಂದು ಆಜ್ಞಾ ಕೊಡಿಸಿದಂತೆ, ದಾಸರಾಯರು ಮನುಜೋತ್ತಮರ ಪಿಡಿದು ಚತುರ್ಮುಖನವರೆಗೆ ಶತೋತ್ತಮತ್ವ ಕ್ರಮವಾಗಿ ಚಿಂತಿಸುವ ಭಕ್ತರಿಗೆ, ಚತುರವಿಧ ಪುರುಷಾರ್ಥವನ್ನು=ಅಂದರೆ, ಧರ್ಮ-ಅರ್ಥ-ಕಾಮ-ಮೋಕ್ಷ-ಇದರಲ್ಲಿ ಮೋಕ್ಷವೆಂಬ ಮುಖ್ಯ ಪುರುಷಾರ್ಥ

ಹೊಂದಿದ ಮೇಲೆ ಮೊದಲನೆಯ ಮೂರು ಪುರುಷಾರ್ಥ ತನ್ನಿಂದ ತಾನೆ ಬರುವವೆಂದು ಅಭಿಪ್ರಾಯ. ಇಂತಹ ಮೋಕ್ಷಾಖ್ಯ ಪುರುಷಾರ್ಥವನ್ನು ಶ್ರೀ ನಿಧಿ=ಶ್ರಿಯಃ ಸರ್ವಶಕ್ತ್ಯೋ ನಿಧೀಯಂತೇಸ್ಮಿನ್ನಿತಿ ಶ್ರೀನಿಧಿಃ || (ವಿದ್ಯಾಧಿರಾಜೀಯ) ಶ್ರೀ ದೇವಿಯಲ್ಲಿ ಸರ್ವ ಶಕ್ತಿಯನ್ನು ಇಡುವನಾದುದ ರಿಂದ ಶ್ರೀ ನಿಧಿಯೆಂದು ಕರೆಸುತ್ತಾನೆ. ಇಂತಹ ಶ್ರೀ ನಿಧಿಯಾದ, ಜಗನ್ನಾಥವಿಠಲ=ಜಗತ್ತಿಗೆ ಸ್ವಾಮಿಯಾದ ಒಡೆಯ ವಿಠಲ ನಾಮಕ ಹರಿಯು ಅಜ್ಞಾನವನ್ನು ಕಳೆದು ಸುಜ್ಞಾನ ಪ್ರದನು, ತಾನೆ ಪೊಲಿದು="ವಿಸಂ ಮೋಚಯಾಮಿ" ಎಂಬ ಅತ್ಯರ್ಥ ಪ್ರಸಾದ ರೂಪನಾಗಿ ತಾನೆ=ಸ್ವಯಂ, ಒಲಿದು=ಪ್ರತ್ಯಕ್ಷನಾಗಿ ನಿರಂತರ ಮೋಕ್ಷಾನಂದ ಸುಖವನ್ನೀವನು-ಕಾರಣ ಸಂತರು ಇದನ್ನು ಮರೆಯದಲೆ=ಜ್ಞಾನಿ, ಭಕ್ತ ಜನರು ಈ ತಾರತಮ್ಯ ಸಂಧಿಯನ್ನು ಬಿಡದೇ, ಸಾನುರಾಗದಿ ಪಠಿಸುವುದು=ಪರಮಭಕ್ತಿ ವಿಶ್ವಾಸ ಪೂರ್ವಕ ಪಾರಾಯಣ ಮಾಡುವದೆಂದು ಉಪದೇಶಿಸುತ್ತಾರೆ. ಇತಿ ೧೯ನೇ ಗುಣತಾರತಮ್ಯ ಸಂಧಿ ಪದ್ಯಾರ್ಥ ಶ್ರೀ ವರದೇಂದ್ರರು ಬೆನ್ನಾತು ಬರೆಸಿದಂತೆ ಬರೆದುದು ಶ್ರೀಮಧ್ವೇಶ ಶ್ರೀ ಕೃಷ್ಣಾರ್ಪಿತವು.

**ಭಾವಸೂಚನ** || ಮಾನುಷೇತಿ || ಓಂ ಇತಿ ಶ್ರೀಮದ್ ಹರಿಕಥಾಮೃತಸಾರ ಭಾವಸೂಚನ ಗುಣ ತಾರತಮ್ಯ ಸಂಧಿಃ ಸಮಾಪ್ತಃ || ಶ್ರೀಕೃಷ್ಣಾರ್ಪಣಮಸ್ತು ||೨೯||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ—"ಮಾನುಷೋತ್ತಮರು" ಇತಿ || ಶ್ರೀನಿಧಿಃ ||ಓಂ||
* ಕ್ರತುಂ ಪುನತ ಆನುಷಕ್ ಯಸ್ಮೇ ಸಾಧಿಷ್ಠೋವಸೇ ತೇ ಸ್ಯಾಮ ಭರೇಷು ತೇ ತೇ ವಯಂ ಹೋತ್ರಾಭಿರುತ ದೇವಹೂತಿಭಿಃ || * || ಓಂ || ಶ್ರಯತೇ ಇತಿ ಶ್ರೀಃ || ಅನನಮ್ || ತತ್ ನಿಧಾಪಯತಿ ಭಕ್ತೇಷು ಸ್ಥಾಪಯತಿ ಇತಿ ತಥೋಕ್ತಃ || ೨೯ ||

ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ಗುಣ ತಾರತಮ್ಯ ಸಂಧಿಃ ಸಮಾಪ್ತಃ || ಶ್ರೀರಸ್ತು ||
||೧೯||

## ಕನ್ನಡಾರ್ಥ

ಸಂಧಿಯನ್ನು ಉಪಸಂಹರಿಸುತ್ತಾರೆ–"ಪರಮಸುಮೋತ್ತಮನ" ಎಂಬ ಪದ್ಯದಿಂದ.

"ಶ್ರೀ ನಿಧಿಃ"-"ಭಕ್ತವಲ್ಲಿ-ಸಂರಕ್ಷಣ ಸಂಪತ್ತನ್ನು ಸ್ಥಾಪಿಸುವವನು." ಎಂದು ಬೃಹತೀ ಮಂತ್ರಾನುಗುಣವಾದ ಅರ್ಥ ||೨೯||

ಇಲ್ಲಿಗೆ-ಶ್ರೀ ಹರಿಕಥಾಮೃತಸಾರ ಟೀಕಾ-ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಯ ಕನ್ನಡ ಅರ್ಥಾನುವಾದದಲ್ಲಿ ಗುಣ ತಾರತಮ್ಯ ಸಂಧಿಯು (೧೯ನೆಯದು) ಮುಗಿದುದು.

|| ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ ||

———

॥ ಶ್ರೀ ಗುರುರಾಜೋ ವಿಜಯತೇ ॥

# ೨೧ನೆಯ ಆರೋಹಣ ತಾರತಮ್ಯ ಸಂಧಿಯ ಸಾರ

ಹಿಂದೆ ೧೮ನೇ ಬಿಂಬೋಪಾಸನಾ ಸಂಧಿಯ ವಿಚಾರವೇ ವಾಯು ಪುರಾಣ ಮಾಘಮಾಸ ಮಾಹಾತ್ಮ್ಯ ಅ. ೧೭ರಲ್ಲಿ "ಅಂತರ್ಯಾಮಿ ಸ್ವರೂಪೇಣ ಬಿಂಬನಾಮಾ ಹ್ಯಸೌ ಹರಿಃ ॥ ಸ್ಥೂಲಾಂಗುಷ್ಠಪ್ರಮಾಣೇನ ಹೃತ್ಪದ್ಮೇಷು ವಸತ್ಯಯಮ್ ॥ ದೇಹೇ ಪುರುಷನಾಮಾಸೌ ಸ್ಥಿತ್ವಾ ಪ್ರೇರಯತಿ ಪ್ರಭುಃ । ತಸ್ಮಾತ್ ಸ ಏವ ಜಿಜ್ಞಾಸ್ಯಃ ಪರಮಂ ಮೋಕ್ಷಮಿಚ್ಛತಾ ॥ ೧೯-೨೦ ಸಂಧಿ ಅವರೋಹಣ ಆರೋಹಣ ಸಂಧಿಗಳಲ್ಲಿ ಶಾಂಡಿಲ್ಯ ಋಷಿಗಳು ಪಿಶಾಚ ಕೂಷ್ಮಾಂಡಾದಿ ದೇಹದಿಂದ ಮುಕ್ತರಾಗಿ, ದಿವ್ಯ ದೇಹವನ್ನು ಧರಿಸಿದ-ದಿವ್ಯ ಪುರುಷರಿಗೆ ಅಧ್ಯಾಯ ೧೭ರಲ್ಲಿ ಉಪದೇಶ ಮಾಡಿದ ಕ್ರಮವೇ- ಶ್ರೀ ವಿಜಯ ದಾಸರ ಉಪಾಸನಾಭಾಗಸುಳಾದಿಗಳಿವೆ ॥ ಭಕ್ತರೆನಿಸುವ ದಿವ್ಯ ಪುರುಷರ । ಉಕ್ತಿ ಲಾಲಿಸಿ ಪೇಳ್ದ ಮುಕ್ತಾ । ಮುಕ್ತಜೀವರ ತಾರತಮ್ಯವ ಮುನಿಪ ಶಾಂಡಿಲ್ಯನೆಂದು ಶ್ರೀ ದಾಸಾರ್ಯರು ಹೇಳಿದ್ದಾರೆ. ವಾಯು ಪುರಾಣ ಮಾಘಮಾಹಾತ್ಮ್ಯ ಅಧ್ಯಾಯ ೯ ರಿಂದ ೧೯ನೇ ಅಧ್ಯಾಯ ಪೂರ್ತಿ (೧೧) ಅಧ್ಯಾಯ ವಿಸ್ತಾರ ಧ್ಯಾನೋಪಾಸನೆ ವಿಷಯವೇ ಇದೆ.

ಭಗವಂತನ ಗುಣೋತ್ಕರ್ಷವೇ ಮೋಕ್ಷಕ್ಕೆ ಕಾರಣವಾಗುವದೆಂದು, ಮುಂದೆ ಅಧ್ಯಾಯ ೧೭, ೫೮ನೇ ಶ್ಲೋಕದಿಂದ ತಾರತಮ್ಯ ಜ್ಞಾನಪೂರ್ವಕ ಧ್ಯಾನೋಪಾಸನೆ ಮಾಡುವದೆಂದು ಹೇಳಿದ್ದಾರೆ. (ಈವಿ॥ ತೈತ್ತಿರೀಯ ದಲ್ಲಿಯೂ ಇದೆ.)

"ಉತ್ತಮಾನ್ ಮೋಕ್ಷಮಾಪ್ನೋತಿ ಪ್ರಸಾದಾಚ್ಚಕ್ರಪಾಣಿನಃ॥ ಗುಣೋತ್ಕರ್ಷಂ ಹರೇರ್ಜ್ಞಾತುರಪರೋಕ್ಷಂ ಭವೇದ್ಧ್ರುವಮ್ ॥ ೫೮ ॥ ಸ ಜ್ಞಾಯತೇ ಗುಣೋತ್ಕರ್ಷೋ ವಿನಾ ಶಬ್ದಸಮನ್ವಯಮ್ ॥ ತತ್ಸಮನ್ವಯ ವಿಜ್ಞಪ್ತಿರ್ಬಹುಧಾ ಶ್ರವಣೇನ ಚ ॥ ೫೯ ॥ ಮನನೇನ ಭವತ್ಯದ್ಧಾ ಶೃಣುಯಾತ್ ಸತತಂ ತತಃ ॥ **ಬ್ರಹ್ಮಾದಿಮಾನುಷಾಂತಾಶ್ಚ ಜ್ಞೇಯಾಸ್ತಾರತಮಾಃ ಕ್ರಮಾತ್** ॥ ೬೦ ॥ ಜ್ಞಾತೇ ತರತಮೇ ಭಾವೇ ವಿಷ್ಣೋ

ಮಾರ್ಗಮಾತ್ಮನ್ಯಮಂಜಸಾ ॥ ನ ಜ್ಞಾಯತೇ ವಿಷ್ಣುಲಿಂಗಂ ತತ್ತ್ವಸ್ಥಾನೇತರಸ್ ನಿಶ್ಚಯ್ಯತಾಮ್ ॥೬೧॥ ಅಂದರೆ ಈ ತರತಮ ಭಾವವರಿತು ಬಿಂಬೋಪಾಸನೆ ಮಾಡಲು ಮುಖ್ಯ ಕಾರಣವೇನೆಂದರೆ, ಈ ತರತಮ ಭಾವದಿಂದ ಶ್ರೀ ವಿಷ್ಣುವಿನ ಮಾಹಾತ್ಮ್ಯ ಚೆನ್ನಾಗಿ ತಿಳಿದು ಈ ವಿಷ್ಣುವೇ ಸರ್ವೋತ್ತಮತ್ವೇನ ಉಪಾಸ್ಯನಾಗಿದ್ದಾನೆ. ಕಾರಣ ಇಂಥ ತರತಮವನ್ನು ಹೇಳುತ್ತೇನೆ ಕೇಳೆಂದು ಶಾಂಡಿಲ್ಯರು ಉಪದೇಶಿಸುತ್ತಾರೆ. ಸ್ವತಂತ್ರನಾದ ಬಿಂಬನೇ ಸರ್ವತತ್ತ್ವಾಭಿಮಾನಿ ನವಕೋಟಿ ದೇವತೆಗಳಲ್ಲಿ ವಿಶೇಷತಃ ೨೪ ಜನ ಸಾಮುಚಿಕ ತತ್ತ್ವಾಭಿಮಾನಿಗಳಾದ ಪದ ೩೩೦೦ ದೇವತೆಗಳಂತರ್ಗತನಾದ ಬಿಂಬನೇ ಮದ್ ಹೃದಯಸ್ಥ ಬಿಂಬನೆಂದುಪಾಸ್ಯನೆ ಮುಖ್ಯ. ಇದರಿಂದ ಮುಖ್ಯ ತತ್ತ್ವಾಭಿಮಾನಿದೇವತೆಗಳ ಪ್ರಸಾದದಿಂದ ಬಿಂಬಾಪರೋಕ್ಷನಾಗುತ್ತದೆ. ದೇವತೆಗಳ ತಾರತಮ್ಯವನ್ನು ಮುಂದೆ (ಅಧ್ಯಾಯ ೧೭ ಶ್ಲೋಕ ೬೧) ರಿಂದ ಹೇಳುತ್ತಾರೆ.

ಸಾಮಾನ್ಯ ಅದರ ಸಾರಾಂಶವನ್ನೆ ಕೊಡುತ್ತದೆ. ಐಶ್ವರ್ಯ, ಶೌರ್ಯ, ವಯಸ್ಸು, ಸಂತತಿ ದೇಹದಾರ್ಢ್ಯಯುಕ್ತನಾದ ಸಪ್ತ ದ್ವೀಪಾಧಿಪತಿಯಾದ ಏಕಚಕ್ರವರ್ತಿಗೆ ಏನು ಸುಖವಾಗುತ್ತದೋ (ಇದು ಬಾಹ್ಯ ಸುಖವು. ಮೋಕ್ಷ ಸುಖಕ್ಕೆ ಏಕದೇಶೀಯ ದೃಷ್ಟಾಂತ) ಇಂಥ ಚಕ್ರವರ್ತಿಗೆ ಆಗುವ ಸುಖವು ಮನುಷ್ಯೋತ್ತಮರಿಗೆ ಒಂದು ಮೋಕ್ಷಾನಂದವೆಂದು ಕರೆಸುತ್ತದೆ ಹೇಗಂದರೆ ;—

“ಸ ಏಕೋ ಮಾನುಷಾನಂದೋ ಮೋಕ್ಷೇ ತು ಪ್ರತಿಪದ್ಯತೇ ॥ ತಸ್ಮಾಚ್ಛತಗುಣಾನಂದೋ ಮಹೀಶಾನಾಂ ನಿಗದ್ಯತೇ ॥೬೩॥ ತಸ್ಮಾಚ್ಛತ ಗುಣಾನಂದಾ ಗಂಧರ್ವಾ ಮಾನುಷಾತ್ಮಕಾಃ ॥ ತಸ್ಮಾಚ್ಛತಗುಣಾನಂದಾ ಗಂಧರ್ವಾ ದೇವಸಂಜ್ಞಕಾಃ ॥೬೪॥ ತಸ್ಮಾಚ್ಛತಗುಣಾನಂದೋ ಭವೇತ್ಪಿತೃ ಗಣಸ್ಯ ಚ ॥ ಪಿತೃಭ್ಯಶ್ಚ ಶತಾನಂದಃ ಆಜಾನಜ ಇತೀರಿತಮ್ ॥೬೫॥ ಆಜಾನೇಭ್ಯಃ ಶತಾನಂದಾ ವಿಮುಕ್ತಾ ಕರ್ಮಜಾಃ ಸುರಾಃ॥ಕರ್ಮಜೇಭ್ಯೋ ಧನಪನಿಷ್ಪ್ರಕ್‌ಸೇನಗಣಾಧಿಪಾಃ ॥ ಶತಾನಂದೈಸ್ತತಸ್ತೇಭ್ಯ ಋಷಯಸ್ತೇಭ್ಯ ಏವ ಚ ॥೬೬॥ ಶತಾನಂದಾಸ್ತು ನಿರ್ದಿಷ್ಟಾ ಭೃಗುವಸಿಷ್ಠಪ್ರಸೂತಯಃ ॥ ತೇಭ್ಯಸ್ತು ನಾರದೋ ಹ್ಯಬ್ಧಿಃ ಶತಾನಂದಸ್ತತೋಽಪಿ ಚ ॥೬೭॥ ಚಂದ್ರ

ಸೂರ್ಯೌ ಮಾನವೀ ಚ ಯಮುನಾಯೂ ತಥೈವ ಚ॥ ಶತಾನಂದಾಸ್ತತೋ ದಕ್ಷೋ ಧಿಷಣೋ (ಗುರು) ಮನುರೇವ ಚ ॥ ೧೮ ॥ ರತಿಶಚ್ಯ್ಯನಿರುದ್ಧಾಶ್ಚ ಶತಾನಂದಾಸ್ತತಃ ಪರಮ್ ॥ ಶತಾನಂದಾವಿಂದ್ರಕಾಮೌ ತತಸ್ತ್ರಮಾ ಚ ವಾರುಣೀ ॥೧೯॥ ಸೌಪರ್ಣೀ ಚ ಶತಾನಂದಾವಿಂದ್ರಹೀಂದ್ರಮೃಡಾಸ್ತತಃ ॥ ಶತಾನಂದಾಸ್ತತೋ ಬುದ್ಧಿರ್ಗಿರ್ರೈತಾಭ್ಯಾಂ (ಸರಸ್ವತೀರ್ರೈ ಭಾರತೀ) ತತಃ ಪರಮ್ ॥೨೦॥ ವಿಧಿಸೂತ್ರೌ ಶತಾನಂದೌ ಲಕ್ಷ್ಮ್ಯಾಃ ಕೋಟಿಗುಣಾಧಿಕಾಃ ॥ ಏತೇಭ್ಯೋ ಭಗವಾನ್ ವಿಷ್ಣುರನಂತಗುಣವಾನ್ ವಿಭುಃ ॥ ೨೧ ॥ ಅನಂತ ಶಕ್ತಿರ್ಭಗವಾನನಂತಗುಣೈಃ ಹ್ಯನಂತೋಮಿತರೂಪಧಾಮಾ ॥ ಸರ್ವೇಷು ರೂಪೇಷು ಸಮಾನಶಕ್ತೇರ್ಗುಣೈಃ ಸಮಾಸೋಽಖಿಲಲೋಕಕರ್ತಾ ॥ ೨೨ ॥ ಪ್ರತ್ಯೇಕಶೋ ಗುಣಾ ವ್ಯಾಪ್ತಾಸ್ತಥೈವಾಂಗಾನಿ ಸರ್ವಶಃ ॥ ಜ್ಞಾನಾನಿ ಶಕ್ತ ಯಶ್ಚಾಪಿ ತೇನಂತಾಶ್ಚ ನ ಸಂಶಯಃ ॥ ೨೩ ॥ ಸತ್ವಾದಿಗುಣಹೀನತ್ವಾನ್ನಿ ರ್ಗುಣೋ ಹರಿರೀಶ್ವರಃ ॥ ಅಪ್ರಾಕೃತಶರೀರತ್ವಾದರೂಪೋ ಭಗವಾನ್ ಪ್ರಭುಃ ॥೨೪॥ ಅಸಂಖ್ಯಾವಯವೈರ್ಯೋಗಾನ್ನಿರಂಗಂ ತಂ ವಿದುರ್ಜನಾಃ ॥ ಅಕ್ಲಿಷ್ಟಕರಣಾದ್ವಿಷ್ಣುರಕರ್ತೇತ್ಯಭಿಧೀಯತೇ ॥ ೨೫ ॥........ ಸರ್ವವೇದೇಷು ಯೇ ಚೋಕ್ತಾ ಗುಣಾಃ ವಿಷ್ಣೋಸ್ಸುಮಂಗಲಾಃ ॥ ತಾನೇವ ಭಗವಾನ್ ಬ್ರಹ್ಮಾ ವೇತ್ತಿ ಲಕ್ಷ್ಮ್ಯಾಸ್ತತೋಧಿಕಾನ್ ॥೨೮॥ ಅಜ್ಞಾತಾಶ್ಚ ತಥಾ ಲಕ್ಷ್ಮ್ಯಾಃ ಕೋಟಿಶಃ ಸಂತಿ ತೇ ಗುಣಾಃ ॥ ನಾನೇನ ಸದೃಶಃ ಕ್ವಾಪಿ ನಾನೇನಾಭ್ಯಧಿ ಕೋಽಪಿ ವಾ ॥ ೨೯ ॥ ಭೂತೋ ಭವಿಷ್ಯದ್ವರ್ತಮಾನೋ ದೃಶ್ಯತೇ ಶ್ರೂಯತೇಪಿ ವಾ ॥ ಬಿಭರ್ತಿ ರೂಪಾಣಿ ಸಹಸ್ರಶೋಽಯಂ ಕ್ಷೇಮಾಯ ಲೋಕಸ್ಯ ಚರಾಚರಸ್ಯ ॥ ೩೦ ॥ ಅಭಿನ್ನಶಕ್ತ್ಯಾಂಗಗುಣಾನಿ ವಿಷ್ಣೋಃ ನಿತ್ಯಾನಿ ದೋಷೈ ರಹಿತಾನಿ ಶಶ್ವತ್ ॥ ಅವಿದ್ಯಯಾ ಸಂವೃತಚೇತಸೋ ಯೇ ಪಶ್ಯಂತಿ ನಾನಾ ಹ್ಯವತಾರರೂಪಮ್ ॥೩೧॥ ವಿಪಶ್ಚಿತಸ್ತಂ ಜಗದೀಶಮಚ್ಯುತಂ ಪಶ್ಯಂತಿ ನಿರ್ಭೇದಮನಂತರೂಪಮ್ ॥ ಭೂತೇಷು ದೇಹೇಷು ತಥೇಂದ್ರಿ ಯೇಷು ಚಿತ್ತೇಷು ಜೀವೇಷು ಚ ಶೇಮುಷೀಷು ॥೩೨॥ ತಥೈವ ದೇವೇಷು ಚ ವಸ್ತುಜಾತೇ ಸತ್ತಾದಿಹೇತುರ್ಭಗವಾನನಂತಃ ॥ ಅಂತರ್ಯಾಮಿಸ್ವರೂ ಪೇಣ ಬಿಂಬನಾಮಾ ಹ್ಯಸೌ ಹರಿಃ ॥ ೩೩ ॥ ಸ್ಥೂಲಾಂಗುಷ್ಠ ಪ್ರಮಾ ಣೇನ ಹೃತ್ಪದ್ಮೇಷು ವಸತ್ಯಯಂ ॥ ದೇಹೇ ಪುರುಷನಾಮಾಸೌ

ಸ್ಥಿತ್ವಾ ಪ್ರೇರಯತಿ ಪ್ರಭುಃ ॥ ೮೪ ॥ ತಸ್ಮಾತ್ ಸ ಏವ ಜ್ಞಾತವ್ಯಃ ಪರಮಂ ಮೋಕ್ಷಮಿಚ್ಛತಾ ॥........

ಇಂಥ ತಾರತಮ್ಯ ಜ್ಞಾನ ಲಭಿಸಬೇಕಾದರೆ

“ನಿಸ್ಸಂಶಯಂ ಗುರುಂ ಪ್ರಾಪ್ಯ ಶ್ರುತ್ವಾ ಶಾಸ್ತ್ರೇಣ ಚೋದಿತಾನ್ ॥ ವಿಧಾನ್ ಕರ್ಮಣೋ ಜ್ಞಾತ್ವಾ ತತಃ ಸಮ್ಯಕ್ ಸಮಾಚರೇತ್ ॥ ಕುರ್ವನ್ ಕರ್ಮಫಲತ್ಯಾಗಂ ಕುರ್ವನ್ ವಿಷ್ಣ್ವರ್ಪಣಂ ತಥಾ । ತತಃ ಕರಣಶುದ್ಧಿಂ ಚ ತದ್ದ್ವಾರಾ ಜ್ಞಾನಮಾಪ್ನುಯಾತ್”॥ ಎಂದು ಹೇಳಿದಂತೆ ನಿಸ್ಸಂಶರಾದ ಗುರು ಪ್ರಾಪ್ತಿಯಾಗಲು, ಶಾಸ್ತ್ರಸಮ್ಮತವಾದ ಕರ್ಮ ವಿಧಾನಗಳನ್ನು ಶಾಸ್ತ್ರ ಮುಖದಿಂದ ಕೇಳಿ, ಆ ವಿಧಾನದಂತೆ, ಫಲತ್ಯಾಗಪೂರ್ವಕವಾಗಿ, ನಿಷ್ಕಾಮ ಕರ್ಮ ಮಾಡಿ ವಿಷ್ಣ್ವರ್ಪಣವನ್ನು ಮಾಡಿದರೆ, ಕರಣಶುದ್ಧಿಯಾಗಿ, ತದ್ದ್ವಾರಾ ಜ್ಞಾನ-ಪ್ರಾಪ್ತಿಯಾಗುವದು. ಮುಂದೆ ಇಂಥ ಸಮ್ಯಗ್ಜ್ಞಾನದಿಂದ ಧ್ಯಾನೋಪಾಸನೆ ಸಾಧನೆ ಬಗೆಯನ್ನು ೧೮ನೇ ಅಧ್ಯಾಯದಲ್ಲಿ ಹೇಳುತ್ತಾರೆ. ಸಾಧಕರು ಅತ್ಯಾವಶ್ಯವಾಗಿ ತಿಳಿಯಬೇಕಾದ ಕಾರಣ ವಿವರಿಸುತ್ತದೆ.

ಶಾಂಡಿಲ್ಯ ಮುನಿಗಳು ದಿವ್ಯ ಪುರುಷರಿಗೆ ಉಪದೇಶ ಮಾಡುತ್ತಾರೆ. ಮೋಕ್ಷೇಚ್ಛುಗಳಾದವರು.

೧. ಈ ಸೃಷ್ಟ್ಯಾದಿಗಳಿಗೆ ನಿಮಿತ್ತನಾದ ಜಗದೀಶನನ್ನು ತಿಳಿಯಬೇಕು. ಜಗತ್ತು ಜಂಗಮಸ್ಥಾವರರು, ಜಡತತ್ವಗಳನ್ನು ತಿಳಿಯಬೇಕು. ಬಧ್ಯನು ಬಂಧಕನು ಶ್ರೀ ಹರಿಯೇ ಮುಖ್ಯ ಕರ್ತಾರನೆಂದು ತಿಳಿದು ಮತ್ತು ಜೀವಜಡಗಳಿಗೂ ಭೇದ-ಜೀವ ಜೀವರಭೇದ-ಜಡಜಡಕ್ಕೂ ಭೇದ, ಜಡೇಶರಿಗೂ ಭೇದ-ಜೀವ ಈಶನಿಗೂ ಭೇದ ಹೀಗೆ ಐದು ಪ್ರಕಾರ ಪಂಚಭೇದವನ್ನು ಚನ್ನಾಗಿ ತಿಳಿಯಬೇಕು. ಈ ಭೇದವು “ತದ್ಭೇದ ಪ್ರತಿಯೋಗಿತ್ವಾತ್ ಜ್ಞಾತವ್ಯಂ ತತ್ವಮಂಜಸಾ”॥ ಹೀಗೆ ತತ್ವವಿಚಾರ ತಿಳಿದು

೨. ಸ್ವತಂತ್ರ ಅಸ್ವತಂತ್ರವೆಂದು ಎರಡು ವಿಧವಾದ ತತ್ವಗಳು. ರೂಪ ಜ್ಞಾನ ಪರಾಪೇಕ್ಷರಹಿತವಾದುದು. ಸ್ವತಂತ್ರ ತತ್ವವೆಂದು ಕರಿಸಿಕೊಳ್ಳುತ್ತದೆ. ಈ ಸ್ವತಂತ್ರ ತತ್ವರೂಪನು ಸಾಕ್ಷಾತ್ ಶ್ರೀ ಹರಿಯು ತಾನೇ ಆಗಿದ್ದಾನೆ. ಮತ್ತು, ಸ್ವರೂಪ ಜ್ಞಾನ ಪ್ರವೃತ್ತ್ಯಾದಿಗಳಲ್ಲಿ ಪರಾಪೇಕ್ಷ

ಉಳ್ಳದು ಅದು ಅಸ್ವತಂತ್ರತತ್ವ. ಈ ಅಸ್ವತಂತ್ರವು ಭಾವ-ಅಭಾವವೆಂತ ಎರಡು ವಿಧವಾಗಿದೆ.

"ವಿದ್ಧಿ ಪ್ರತೀತಿವಿಷಯೋ ಭಾವ ಇತ್ಯಭಿಧೀಯತೇ
ಅಭಾವಸ್ತು ನಿಷೇಧಾತ್ಮಾ ತತ್ರಾಭಾವಃ ತ್ರಿಧಾ ಸ್ಮೃತಃ ॥"

ಪ್ರತೀತಿಗೆ (ತಿಳುವಳಿಕೆಗೆ) ವಿಷಯವಾಗುವವೆಲ್ಲ ಭಾವರೂಪವೆನಿಸುತ್ತವೆ. ಇನ್ನು ಅಭಾವವೆಂದರೆ ನಿಷೇಧ ರೂಪವು. ಈ ಅಭಾವದಲ್ಲಿ ಮೂರು ಪ್ರಕಾರ—೧ ಪ್ರಾಗ್ ಸತ್ತಾಕಾರ್ಯನಾಶ-ಸದಾಭಾವ ಹೀಗೆ ಮೂರು ಪ್ರಕಾರ. ಇನ್ನು ಭಾವರೂಪದಲ್ಲಿ, ಚೇತನ ಅಚೇತನನೆಂದು ದ್ವಿವಿಧವಾಗಿವೆ ೧ ದುಃಖಸ್ಪೃಷ್ಟಚೇತನರು ಸಕಲಕ್ಷರ ಜೀವರು. ೨ ದುಃಖ ಅಸ್ಪೃಷ್ಟ ಚೇತನಳು ಅಕ್ಷರಳು, ಶ್ರೀ ಲಕ್ಷ್ಮೀದೇವಿಯು. ದುಃಖ ಸ್ಪೃಷ್ಟರಲ್ಲಿ ಮುಕ್ತಾ ಅಮುಕ್ತರೆಂದು ಎರಡು ವಿಧವು. ಈ ಮುಕ್ತರಲ್ಲಿಯೂ ಎರಡು ವಿಧ. ೧ ಮುಕ್ತರು ಸುಖಾನುಭವಿಗಳು, ೨ ಮುಕ್ತಿಗೆ ಅಯೋಗ್ಯರು, ತಮೋ ಯೋಗ್ಯರು ದುಃಖಾನುಭವಿಗಳು ಹೀಗೆ ಎರಡು ವಿಧ. ಮುಕ್ತಿಯೋಗ್ಯರು ಪಂಚವಿಧ. ದೇವ, ಋಷಿ, ಪಿತೃ, ಪ, ನರಃ (ಪಿತೃಗಳಲ್ಲಿ ಗಂಧರ್ವರೂ ಬಂದರು) ಇನ್ನು ಮುಕ್ತಿಗೆ ಅಯೋಗ್ಯರು. ತಮೋ ಯೋಗ್ಯರು. ನಿತ್ಯ ಸಂಸಾರಿಗಳೆಂದು ದ್ವಿವಿಧ. ತಮೋಯೋಗ್ಯರಲ್ಲಿ, ೧ ದೈತ್ಯರು ೨ ರಾಕ್ಷಸರು ೩ ಪಿಶಾಚರು ೪ ಮನುಜಾಧಮರು ನಾಲ್ಕುವಿಧ. ನಿತ್ಯ ಸಂಸಾರಿಗಳಲ್ಲಿ ಮೂರು ವಿಧ. ಸ್ವರ್ಗ ಪ್ರಚುರರು, ಭೂ ಪ್ರಚುರರು, ನಿರಯ ಪ್ರಚುರರು. ಇನ್ನು ಅಚೇತನ ಜಡ ನಿತ್ಯ ಅನಿತ್ಯವೆಂದು ಎರಡು ವಿಧ. ೧ ಸಮಸ್ತ ವೇದಗಳು ನಿತ್ಯ, ಸಕಲ ವರ್ಣಗಳು ನಿತ್ಯ, ಅವ್ಯಾಕೃತಾಕಾಶ ನಿತ್ಯ, ಮಹಾಕಾಲ ಮತ್ತು ಮೂಲ ಪ್ರಕೃತಿ ನಿತ್ಯವಾದ ಜಡಗಳು, ಲವತೃಟಿ, ಕ್ಷಣಾದಿ ಕಾಲ ೨೪ ಜಡ ತತ್ವ ಪ್ರಕೃತಿ ಅನಿತ್ಯಗಳು. ವೇದಕ್ಕೆ ಅನುಕೂಲವಾಗಿರುವ ಸ್ಮೃತಿ, ಇತಿಹಾಸ, ಪುರಾಣ, ಅರ್ಥಯಾವತ್ತುನಿತ್ಯ, ಶ್ಲೋಕರೂಪವಾದ್ದು ಅನಿತ್ಯ, ಅಂದರೆ ಕಾರಣ ಕಾರ್ಯರೂಪದಿಂದ ಕಾಲ ಮತ್ತು ಪ್ರಕೃತಿಗಳಾದರೂ ಅದರಂತೆಯೇ ಸ್ಮೃತ್ಯಾದಿಗಳು ಅರ್ಥತಃ ನಿತ್ಯವಾಗಿರುವವು. ವ್ಯತ್ಯಾಸದಿಂದ ಮೂಲರೂಪದಿಂದ ಅನಿತ್ಯವಾಗಿರುತ್ತವೆ. ಈ ಅನಿತ್ಯ ಸಂಸೃಷ್ಟ (ಕೂಡಿದ್ದು) ಅಸಂಸೃಷ್ಟ (ಕೂಡದಿರುವದು) ಎರಡು ವಿಧ. ಮಹತ್ತತ್ವ, ಅಹಂಕಾರ ತತ್ವ, ಬುದ್ಧಿ

ತತ್ವ, ಮನಸ್ ತತ್ವ, ದಶೇಂದ್ರಿಯಗಳು, ಪಂಚ ಮಹಾಭೂತ, ಪಂಚತನ್ಮಾತ್ರ ಹೀಗೆ ಬಹಿರ್ಬ್ರಹ್ಮಾಂಡದಲ್ಲಿ ಅಸಂಸೃಷ್ಟ ತತ್ವಗಳು, ಸಂಸೃಷ್ಟ ತತ್ವ ಬ್ರಹ್ಮಾಂತ ಬ್ರಹ್ಮಾಂಡಸ್ಥ ತತ್ವಗಳೆಂದು ಕರೆಸುತ್ತವೆ.

ಸೃಷ್ಟಿ, ಸ್ಥಿತಿ, ನಿಯಮ, ಜ್ಞಾನ, ಬೋಧನ, ಅಜ್ಞಾನ, [illegible], ಬಂಧನ, ಮೋಕ್ಷ, ಸಮಾಸವ್ಯಾಸಯೋಗದಿಂದ ಸಂಕ್ಷೇಪ ವಿಸ್ತಾರದಿಂದ ಅಸ್ವತಂತ್ರನಾದ ಜೀವನಿಗೆ ಸ್ವತಂತ್ರನಾದ ಪರಮಾತ್ಮನಿಂದ ಪ್ರಪಂಚಕ್ಕೆ ಕಾರಣವಾಗುತ್ತವೆ. ಇದನ್ನು ವೇದಶಾಸ್ತ್ರ ಮುಂತಾದ ಪ್ರಮಾಣಗಳಿಂದ ತಿಳಿಯಬೇಕು.

೨. ಇದನ್ನು "ಏತತ್ ಸರ್ವಂ ಮಾನಮೇಯ್ಯಂ ಮಾನಂ ತಚ್ಚ ಚತುರ್ವಿಧಮ್"

ವೇದಶಾಸ್ತ್ರ ಮುಂತಾದ ಪ್ರಮಾಣಗಳಿಂದಲೇ ಜ್ಞಾನವಾಗುತ್ತದೆ. "ತಚ್ಚ ಪ್ರತ್ಯಕ್ಷಮನುಮಾಗಮೋ ಜ್ಞಾನಂ ತಥೈವ ಚ ॥ ಜ್ಞಾನಂ ಚ ತ್ರಿವಿಧಂ ತತ್ರ ತತ್ರಾದ್ಯಂ ಪರಮೇಶ್ವರಮ್ ॥ ದ್ವಿತೀಯಮಕ್ಷರ ಜ್ಞಾನಂ ದುಃಖಸ್ಪೃಷ್ಟಂ ತೃತೀಯಕಂ ॥ ಯೋಗಿಜಾಯೋಗಿಜತ್ವೇನ ದುಃಖ ಸ್ಪೃಷ್ಟಂ ದ್ವಿಧಾ ಮತಮ್ ॥ ಇದರ ಸಾರಾಂಶವೇನೆಂದರೆ ವೇದ ಪ್ರಮಾಣಗಳಿಂದ ತಿಳಿಯಬೇಕು. ಪ್ರಮಾಣಗಳಾದರೂ ನಾಲ್ಕು ಪ್ರಕಾರ. ೧ ಪ್ರತ್ಯಕ್ಷ ೨ ಅನುಮಾನ ೩ ಆಗಮ ಮತ್ತು ೪ ಜ್ಞಾನ ಹೀಗೆ ನಾಲ್ಕು ಪ್ರಕಾರ.

ಈ ಜ್ಞಾನವಾದರೂ ಮೂರು ವಿಧವು. (೧) ಪರಮೇಶ್ವರ ಸಂಬಂಧಿ ಜ್ಞಾನ (೨) ಎರಡನೇದು ರಮಾ (ಅಕ್ಷರ) ಸಂಬಂಧಿ ಜ್ಞಾನ (೩) ದುಃಖ ಸ್ಪೃಷ್ಟ ಜೀವರ ಜ್ಞಾನ-ಇದರಲ್ಲಿ ಯೋಗಿಜ–ಅಯೋಗಿಜವೆಂದು ಎರಡು ವಿಧ ಈ ಮೂರು ವಿಧ ಜ್ಞಾನಗಳಲ್ಲಿ ೧ ಈಶ್ವರ ಜ್ಞಾನವು. ಸ್ವಪರ ಸರ್ವವಿಷಯಕ ಸ್ವಸತ್ತಾದಲ್ಲಿ ಸ್ವತಂತ್ರವು. ೨ ಎರಡನೇದು ಅಕ್ಷರ (ರಮಾ) ಜ್ಞಾನವು ಈಶ್ವರಾತಿರಿಕ್ತ ಸರ್ವ ವಿಷಯಕವಾದುದು. ಸ್ವಸತ್ತಾದಲ್ಲಿ ಈಶ್ವರಾಧೀನತ್ವ ಪಾರತಂತ್ರ್ಯವು ರಮೆಗೆ, (೩) ದುಃಖಸ್ಪೃಷ್ಟ ಜ್ಞಾನದಲ್ಲಿ ಮೂರು ಪ್ರಕಾರ. ೧ ಋಜುಗಳ ಜ್ಞಾನ, ೨ ತಾತ್ವಿಕ ದೇವತೆಗಳ ಜ್ಞಾನ ೩ ಅತಾತ್ವಿಕ ದೇವತೆಗಳ ಜ್ಞಾನ, ಅನಾಲೋಚನೆ ಸರ್ವ ವಿಷಯಕ ಜ್ಞಾನ, ರಮಾ ಜ್ಞಾನ,

ಇನ್ನು ಈಶ್ವರನನ್ನು ಬಿಟ್ಟು ಆಲೋಚನದಿಂದ ಸರ್ವ ವಿಷಯಕ ಜ್ಞಾನವು ಋಜುಗಳ ಜ್ಞಾನವು.

ಈ ಋಜುಜ್ಞಾನವು, ದ್ವಿವಿಧವು. ಸ್ವರೂಪ, ಬಾಹ್ಯ. ಸ್ವರೂಪ ಜ್ಞಾನವು ಅನಾದಿಯಾಗಿಯೂ, ನಿತ್ಯವಾಗಿಯೂ ಇರುವದು. ಈ ಸ್ವರೂಪ ಜ್ಞಾನವು "ಕ್ರಮಾದ್ಯೋಗಾದ್ವಿವರ್ಧನಂ" ಎರಡನೇದು ಬಾಹ್ಯಜ್ಞಾನ–ನಿತ್ಯ ಪ್ರವಾಹರೂಪವಾದುದು. "ನಿತ್ಯ ಪ್ರವಾಹ ರೂಪ ವೃತ್ತಿ ಜ್ಞಾನ ಸ್ವರೂಪ" ವೆಂದು ಶ್ರೀ ವಿಜಯದಾಸರ ವಚನ. ಅಂದರೆ ನೀರಿನ ಪ್ರವಾಹದಂತೆ ಈಗ ಹರಿಯುತ್ತಿರುವ ನೀರು ಈ ಮೊದಲನೇ ನೀರು ಹರಿದು ಹೋದಾಗ್ಯೂ, ಎರಡನೇ ನೀರು ಬರುತ್ತಿದ್ದರೂ ಪ್ರವಾಹವು ಹೇಗೆ ಹರಿಯುತ್ತದೆಯೋ ಅದ ರಂತೆ ಋಜುಬಾಹ್ಯಜ್ಞಾನ ನಿತ್ಯ ಪ್ರವಾಹರೂಪವಾದುದು.

ತಾತ್ವಿಕ ದೇವತೆಗಳ ಜ್ಞಾನವಾದರೂ, ಸ್ವರೂಪ ಬಾಹ್ಯವೆಂದು ಎರಡು ವಿಧ. ಸ್ವರೂಪ ಜ್ಞಾನವು ನಿತ್ಯವು. ಬಾಹ್ಯ ಜ್ಞಾನವು ಅನಾದಿ ಅನಿತ್ಯ ವಾಗಿರುವುದು. ಸಾಮಾನ್ಯ ಅಪರೋಕ್ಷಿಗಳೆಂದು ಕರೆಸುವರು.

ಅತಾತ್ವಿಕರ ಜ್ಞಾನವು ಸಾದಿಯಾಗಿಯೂ, ಅನಿತ್ಯವಾಗಿಯೂ ಇರುವದು. ಈ ಪ್ರಕಾರ ಚತುರ್ವಿಧ ಪ್ರಮಾಣದಿಂದ, ಈ ಜಗತ್ತು ಸತ್ಯ, ನಿಷ್ಟಿಯವಾಗಿ ಶ್ರೀ ವಿಷ್ಣುವಿನ ಅಧೀನದಲ್ಲಿರುತ್ತದೆಂದು ದಾರ್ಢ್ಯವುಳ್ಳ ಶಾಸ್ತ್ರ ಜ್ಞಾನವು ಬೇಕು. ಅರ್ಥಜ್ಞಾನವಿಲ್ಲದೇ ಬರಿ ಕನ್ನಡ ಪದ್ಯಗಳನ್ನು ಹರಿಕಥಾ ಮೃತಸಾರವನ್ನು ಓದಿದರೆ ಅಪರೋಕ್ಷವಾಗುವದಿಲ್ಲ. ದಾಸಾರ್ಯರು ಶಾಸ್ತ್ರದಲ್ಲಿ ಉಕ್ತವಾದುದೇ ಕಲಿಕಾಲದಲ್ಲಿ ಅಧಮಾಧಿಕಾರಿಗಳಾದ ಮುಕ್ತಿಯೋಗ್ಯರ ಸಾಧನಕ್ಕೆ ಗ್ರಂಥ ರಚಿಸಿರುವರು. ಗ್ರಂಥದ ಮೂಲವೇನು? ಶಾಸ್ತ್ರಾರ್ಥವೇನು? ಎಂಬುವ ವಿಚಾರಬೇಕು. ಶಾಸ್ತ್ರಾರ್ಥ ವಿಮರ್ಶದಿಂದ ಜ್ಞಾನ ಸಂಪಾದಿಸಬೇಕು. ಸುಜ್ಞಾನ ದಿಂದಲೇ ಮೋಕ್ಷ. ಆದರೆ

೪. ವಿಷಯದಲ್ಲಿ ವೈರಾಗ್ಯ, ಮಮತಾಹಂಕಾರ ವರ್ಜ ಮಾಡಬೇಕು. ಹೀಗೆ ವೈರಾಗ್ಯ ಹೊಂದಿ ವಿಶೇಷ ಜ್ಞಾನ ಭಕ್ತಿಯೆಂಬ ಶ್ರೀಹರಿಯು ಸರ್ವೋತ್ತಮನ ಧ್ಯಾನೋಪಾಸನೆಯಿಂದ ಮೋಕ್ಷವಾಗುತ್ತದೆ. "ವೈರಾಗ್ಯಾಯ ಪ್ರಭವತಿ ಯೇನ ಮೋಕ್ಷೋ ಭವತ್ಯಲಮ್" ಎಂದು

ಶಾಂಡಿಲ್ಯರ ವಚನ "ನಿತ್ಯಾನಿತ್ಯ ವಿವೇಕಜ್ಞೋ ಮಮತಾಂ ಪರಿತ್ಯಜೇತ್" ನಿತ್ಯಾನಿತ್ಯ ವಸ್ತುಗಳ ವಿವೇಕಜ್ಞನು, ನಾನು ನನ್ನದೆಂಬ ಮಮತಾ ಬಿಡಬೇಕು. ಏಕೆಂದರೆ ಈ ಮಮತಾ ಶ್ರೀಹರಿಯಲ್ಲಿ ಮಾಡಿದರೆ ಸುಖಕ್ಕೆ, ಇತರ ಅನಿತ್ಯ ವಸ್ತುಗಳಲ್ಲಿ ಮಮತೆಯು ದುಃಖಕ್ಕೆ ಕಾರಣವಾಗುತ್ತದೆ.

ಎಲ್ಲಿ ನನ್ನದೆಂದು ಪುಷ್ಕಳವಾಗಿ ದ್ರವ್ಯ ಸಂಪಾದಿಸಿ, ದ್ರವ್ಯ ಲಾಭದಿಂದ ಸಂತೋಷ, ದ್ರವ್ಯ ನಾಶವಾಗೆ ದುಃಖ, ಮತ್ತು ಸ್ವಪರಕೀಯಭಾವ, ನಾನು ಈ ಜನರು ನನ್ನ ಬಂಧುಗಳೆಂಬ ಸ್ನೇಹವು ದುಃಖಕ್ಕೆ ಕಾರಣವಾದ ಮಮತಾ ಬಿಡಬೇಕು. ಯೋಗಿಯು ಕೂಡ ಮಮತೆಯಿಂದ ಅನರ್ಥ ಹೊಂದುತ್ತಾನೆ. ಜಡಭರತನು ಜ್ಞಾನಿಯೋಗಿಯಾದಾಗ್ಯೂ ಚಿಗರೆ ಮರಿಯ ವ್ಯಾಮೋಹದಿಂದ ಚಿಗರೆ ಜನ್ಮ ತಾಳಿ ಅನುಭವಿಸಿ ಪುನಃ ಜ್ಞಾನಿ ಜನ್ಮ ಹೊಂದಿದನು.

ಕಾರಣ ಜ್ಞಾನಸಂಪನ್ನನಾದವನು ಕರ್ಮಪ್ರಾಪ್ತವಾದುದನ್ನು ಭಗವದಧೀನನಾಗಿ, ನಿಷಿದ್ಧ ಪದಾರ್ಥಗಳ ಉಪಭೋಗ ತ್ಯಜಿಸಿ ಮಮತಾ ಬಿಡಬೇಕು. ವಿಷಯವು ವಿಷ ಸಮಾನವಾದುದು. ಮಮತಾ ಎಲ್ಲಿಡಬೇಕೆಂದರೆ.

ವೇದ ಪ್ರಮಾಣಗಳಿಗೆ ಸಂಪೂರ್ಣ ಗೋಚರನಾಗದಷ್ಟು, ಮಹಾಕಾಂತಿಯುಳ್ಳ ಸಕಲ ಗುಣಗಳಿಗೆ ಆಕರನಾದ, ಶ್ರೀಹರಿಯು, ಹೃದ್ಗುಹೆಯಲ್ಲಿ ನಿತ್ಯನಾಗಿರಲು, ಸ್ವಾಮಿ ಭೃತ್ಯ ನ್ಯಾಯದಿಂದ, ಪ್ರೀತಿಗೆ ಭಕ್ತಿಗೆ ವಿಷಯವಾಗುತ್ತದೆ. ಈ ಸ್ಥೂಲ ದೇಹದಿಂದ ಜೀವಾಂತಸ್ಥನಾದ ಹರಿಯು ಜೀವನಿಂದ ಕೂಡಿಕೊಂಡು ಹೊರಗೆ ಹೊರಡಲು, ಸ್ಥೂಲದೇಹ ಅನಿತ್ಯವಾದದ್ದು ಬಿಟ್ಟರೆ ಮರಣ ಸಂಜ್ಞಾ ಹೊಂದುತ್ತದೆ. ಇದೇ ದುಃಖಕ್ಕೆ ವಿಷಯವು. ಸರ್ವಥಾ ದೇಹಾಭಿಮಾನ ಬಿಡಬೇಕು.

ಕೇವಲ ಪ್ರೀತಿಗೆ ವಿಷಯನೇ ಶ್ರೀಹರಿಯು, ಇವನ ಹೊರತು ಮತ್ತಾರಿಲ್ಲ. "ಸರ್ವಸ್ಮಾದಧಿಕಃ ಸ್ನೇಹೋ ಭಕ್ತಿರಿತ್ಯುಚ್ಯತೇ ಬುಧೈಃ॥ ಸಾ ಹ್ಯೇನಮೂರ್ಧ್ವಂ ನಯತಿ ಸಾಕ್ಷಾತ್ಕಾರಯತಿ ಹ್ಯಜಮ್ । ತಸ್ಮಾತ್ ಭೂಯಸೀ ಭಕ್ತಿಃ ಸೈಕಾ ನಿಃಶ್ರೇಯಸೇಽಸ್ತ್ವಿಹ ॥ ಭಕ್ತ್ಯಾ ಸುಮಹತಾ ಹಾನಿರ್ಜಾಯತೇ ನಾತ್ರ ಸಂಶಯಃ ॥೪೩॥ ಇದರ ಸಾರಾಂಶವೇನೆಂದರೆ, ಎಲ್ಲಕ್ಕೂ ಹೆಚ್ಚಿನದಾದ ಸ್ನೇಹಕ್ಕೆ ಜ್ಞಾನಿಗಳು ಭಕ್ತಿಯೆಂದೆನ್ನುವರು, ಅದು

ಭಕ್ತಿಯೇ ಜ್ಞಾನಿಯನ್ನು ಮೋಕ್ಷಸ್ಥಾನಕ್ಕೆ ಒಯ್ದು ಬಿಂಬದರ್ಶನವಾಗುತ್ತ ಜನನಾದ್ಯವಸ್ಥಾರಹಿತನನ್ನಾಗಿ ಮಾಡುತ್ತದೆ. ಕಾರಣ ಪೂರ್ಣವಾದ ಭಕ್ತಿ ಮಾಡಲು ಮೋಕ್ಷ ಪ್ರಾಪ್ತಿಗೆ ಮುಖ್ಯ ಮಾರ್ಗ ಮತ್ತು ಇಂತಹ ಭಕ್ತಿ ಮಾರ್ಗದಿಂದಲೇ **"ಮಮತಾ" ತಾನಾಗಿಯೇ ನಾಶ ಹೊಂದುತ್ತದೆ.** ಈ ಪ್ರಕಾರ ಶಾಂಡಿಲ್ಯರು ಮಮತಾ ದೂರ ಮಾಡಬೇಕೆಂದು ಹೇಳಿದರು. "ತಸ್ಮಾತ್ತು ಮಮತಾಹೀನೋ ಜ್ಞಾನೀ ಯೋಗಿತ್ವಮಾಪ್ನುಯಾತ್" ಎಂದು ೧೮ನೇ ಅಧ್ಯಾಯದಲ್ಲಿ ಹೇಳಿದ್ದಾರೆ. ಇದರಂತೆ ಶ್ರೀ ವಿಜಯದಾಸರ ಸುಳಾದಿ ಗಳಿವೆ.

ಮುಂದೆ ೧೯ನೇ ಅಧ್ಯಾಯದಲ್ಲಿ ಧ್ಯಾನವಿಧಾನ ಹೇಳುತ್ತಾರೆ "ಏವಂ ನಿಷ್ಪನ್ನಜ್ಞಾನಃ ಸನ್ ಯೋಗೀ ಧ್ಯಾನಂ ಸಮಾಚರೇತ್" ಹೀಗೆ ಜ್ಞಾನ ಪ್ರಾಪ್ತ ಮಾಡಿಕೊಂಡವನಾಗಿ ಜ್ಞಾನಿಯು ಧ್ಯಾನ ಮಾರ್ಗ ಸ್ವೀಕರಿಸಬೇಕು.

೫. ಧ್ಯಾನ ಹೇಗೆ ಮಾಡತಕ್ಕದೆಂದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಯೋಗ ಈ ಯೋಗಾಂಗ ಗಳಿಂದ ಯುಕ್ತವಾದ ಆ ಸಾಧನಗಳಿಂದ ಧ್ಯಾನ ಮಾರ್ಗವು ಅವನ ಸ್ವಾಧೀನ ವಾಗುವದು. ಇಂದ್ರಿಯಗಳು ಜಯಿಸಲು ಅಶಕ್ಯವಾದವು. ಇಂದ್ರಿಯಗಳನ್ನು ಬಲಾತ್ಕಾರದಿಂದ ಸ್ವಾಧೀನ ಮಾಡಿಕೊಳ್ಳಲಿಕ್ಕೆ **ಯಮ** ಎಂದೆನ್ನುವರು. ಮತ್ತು ಕ್ಷಮಾ, ಸತ್ಯ, ಶುದ್ಧಭಾವ, ಇಂದ್ರಿಯ ನಿಗ್ರಹ ಮನೋನಿಗ್ರಹ ಇವುಗಳಿಗೆ ಯಮವೆಂದು ಇತರರು ಹೇಳುತ್ತಾರೆ. ೨. ಈ ಎಲ್ಲ ಕಾರ್ಯಗಳಿಗೆ ಸಾಧನ ವ್ರತಾದಿಗಳನ್ನು ಮಾಡೋಣ. ಇದೆ ನಿಯಮವೆಂದೆನಿಸುತ್ತದೆ. ೩. ಪದ್ಮ, ಸ್ವಸ್ತಿಕ ಮೊದಲಾದವುಗಳೇ ಆಸನ ೪. ಪ್ರಾಣಾಯಾಮ ತ್ರಿವಿಧ ಪೂರಕ ರೇಚಕ ಕುಂಭಕ. ದಕ್ಷಿಣನಾಸಾರಂಧ್ರದಿಂದ ವಾಯು ನಿರೋಧಿಸಿ ವಾಮ ರಂಧ್ರದಿಂದ ಬಿಡೋಣ ರೇಚಕ. ದಕ್ಷಿಣ ರಂಧ್ರವನ್ನು ನಿರೋಧಿಸಿ. ವಾಮ ರಂಧ್ರದಿಂದ ಪೂರಣ ಮಾಡೋಣ, ಹೀಗೆ ಅಂಗುಷ್ಠದಿಂದ ಪೂರೈಸು ವದೇ ಪೂರಣವೆಂದೆನಿಸಿಕೊಳ್ಳುತ್ತದೆ. ರೇಚಕ, ಪೂರಕದಿಂದ ನಾಸಾ ಪುಟ ಗಳನ್ನು ನಿರೋಧಿಸಿ ಆ ವಾಯುವನ್ನು ಹೃದಯದಲ್ಲಿಟ್ಟುಕೊಳ್ಳುವದೇ ಕುಂಭಕವೆನಿಸುತ್ತದೆ. ಇನ್ನು ಪ್ರಾಣಾಯಾಮದಲ್ಲಿ ಅಗರ್ಭ ಸಗರ್ಭ [illegible] ಎರಡು ವಿಧ. ಧ್ಯಾನ ರಹಿತವಾದುದು ಅಗರ್ಭ [illegible], ಪ್ರಣವದಿಂದ

ಧ್ಯಾನಯುಕ್ತವಾದದ್ದು ಸಗರ್ಭವೆಂತಲೂ, ಅಗರ್ಭಕ್ಕಿಂತಲೂ ಸಗರ್ಭವು ಕೋಟಿ ಗುಣ ಶ್ರೇಷ್ಠ. ಇನ್ನು ಈ ಪ್ರಾಣಾಯಾಮದಲ್ಲಿ ಸೋಹಂ ಎಂಬ ಕನುಪಾಂಶು, ಎಂತಲೂ ಮತ್ತು ಎರಡು ವಿಧ ೫. ಪ್ರತ್ಯಾಹಾರ ಕುಂಭಕ ರೀತಿಯಿಂದ ವಾಯುವನ್ನು ತನ್ನ ಶಕ್ತ್ಯನುಸಾರವಾಗಿ ಹೃದಯದಲ್ಲಿ ಸ್ಥಾಪಿಸಿ, ನಾಸಾಗ್ರದಲ್ಲಿ ದೃಷ್ಟಿ ಇಟ್ಟವನಾಗಿ, ಮನಸಾ ಶ್ರೀವಿಷ್ಣುವಿನ ಧ್ಯಾನಮಾಡಬೇಕು. ಆದರೆ ಆಕಾಲಕ್ಕೆ ಇಂದ್ರಿಯ ಸ್ವಾಧೀನವಿಲ್ಲದೆ ವಿಷಯದಲ್ಲಿ ಧಾವಿಸಿ ಹೋಗುವದುಂಟು. ವಿಷಯಲಾಂಪಟ್ಯ ಇಂದ್ರಿಯಗಳ ಸ್ವಭಾವ ಇರುವ ಕಾರಣ, ಪುನಃ ಇಂದ್ರಿಯಗಳನ್ನು ತನ್ನ ಸ್ವಾಧೀನದಲ್ಲಿ ತೆಗೆದುಕೊಂಡು, ಧ್ಯೇಯ ವಸ್ತುವಾದ ಶ್ರೀವಿಷ್ಣುವಿನಲ್ಲಿ ಮನಸ್ಸಿಟ್ಟು ಪುನಃ ತನ್ನನ್ನು ಬಿಟ್ಟು ಹೋಗದಿರುವಿಕೆ **ಪ್ರತ್ಯಾಹಾರ**. ೬. ವಿಷ್ಣುವಿನ ಅನಂತರೂಪಗಳಲ್ಲಿ ತನಗೆ ಯಾವ ರೂಪವು ಇಷ್ಟವಿರುವುದೋ ಅದನ್ನೇ ಮನಸಾ ಚಿಂತಿಸಬೇಕು. ಇದೇ ಧ್ಯಾನವೆಂದೆನಿಸುತ್ತದೆ. ೭-ಹೃದಯದಲ್ಲಿ ಸ್ಥಾಪಿತವಾದಂಥಾ ಆರೂಪವು ಮನಸ್ಸಿನಿಂದ ಸಂಚಲಿಸಲು ಆರೂಪವನ್ನು ಪುನಃ ಯಥಾಸ್ಥಿತ ಮನಸಾ ಚಿಂತಿಸಿ ಹೃದಯದಲ್ಲಿ ದೃಢವಾಗಿ ನಿಲ್ಲಿಸುವದೇ ಧಾರಣ.

೮ ಯೋಗ=ಇದರ ವಿಚಾರ ಮುಂದೆ ವಿಸ್ತರಿಸುತ್ತಾರೆ.

**೬.** ಅನಂತಾನಂತ ರೂಪಗಳು ವಿಷ್ಣುವಿನ ಅಮಿತ ತೇಜಸ್ಸಿಗಳಾದವು. ತನಗೆ ಯಾವ ರೂಪವು ಅತ್ಯಂತ ಇಷ್ಟವಾಗಿರುವುದೋ ಶಾಸ್ತ್ರ ಸಮ್ಮತವಾದ ಪ್ರತಿಮಾ ಮಾಡಿಸಬೇಕು. ಆ ಪ್ರತಿಮೆಯು ಪುಷ್ಟವಾಗಿಯೂ, ಸುಲಕ್ಷಣ ಯುಕ್ತವಾಗಿ ಮನೋಹರವಾಗಿರಬೇಕು. ಆಪ್ರತಿಮಾದಲ್ಲಿ ಆವಾಹನಾದಿ ಪ್ರತಿಷ್ಠಾಪನ ಅರ್ಚನೆಮಾಡಿಸಿ, ತನ್ನೆದುರಿಗೆ ಇಟ್ಟು ಚೆನ್ನಾಗಿ ನೋಡಬೇಕು. ಅನಂತರ ಆ ಮೂರ್ತಿಯ ಸ್ವರೂಪ ಸಾಧನದಿಂದ ಹೃದಯದಲ್ಲಿ ನಿಲ್ಲಿಸಿ ಆಲಸ್ಯ ರಹಿತನಾಗಿ ಆ ಮೂರ್ತಿಯನ್ನು ಧ್ಯಾನಿಸಬೇಕು.

ಆ ಮೂರ್ತಿಯ ಧ್ಯಾನ ಮನಸ್ಸಿನಲ್ಲಿ ನಿಲ್ಲದೆ ಹೋಗಲು, ತನ್ನ ಮುಂದಿರುವ ಪ್ರತಿಮೆಯನ್ನು ಪುನಃ ಅವಲೋಕಿಸಬೇಕು. ನಾಸಾಗ್ರದಲ್ಲಿ ದೃಷ್ಟಿ ಇಟ್ಟು ಏಕಾಗ್ರ ಚಿತ್ತದಿಂದ ಆ ಮೂರ್ತಿಯನ್ನು ತನ್ನ ಹೃದಯದಲ್ಲಿ ಧ್ಯಾನ ಮಾಡಬೇಕು. "ಕಣ್ಣೊಳಗೆ ಇದ್ದ ಮೂರುತಿ ಕಣ್ಣೊಳಗೆ ತಂದು।

ಘನ್ನ ಪೂರ್ಣ ಪುರಂದರ ವಿಠಲನ್ನಕೊಂಡಾಡವೆ॥" ಎಂದು ದಾಸರ ವಚನವೂ ಇದೆ.

೭. ತನಗೆ ಆ ಮೂರ್ತಿಯ ಸರ್ವಾವಯಗಳನ್ನು ಧ್ಯಾನ ಮಾಡುವ ಶಕ್ತಿ ಇಲ್ಲದಿದ್ದರೆ, ಆ ಮೂರ್ತಿಯ ಅಂಗುಷ್ಠಾರಂಭಿಸಿ ಒಂದೊಂದು ಅವಯವ ಗಳ ಧ್ಯಾನ ಚೆನ್ನಾಗಿ ನಿಲ್ಲಿಸಿ, ಇದರಂತೆ ಕ್ರಮವಾಗಿ ಸರ್ವಾವಯವಗಳನ್ನು ಹೃದಯವಲ್ಲಿ ಧ್ಯಾನಿಸಬೇಕು. ಪುನಃ ಮನದಿಂದ ಚಲಿಸಿವರೆ ಎದುರಿಲಿಟ್ಟ ಮೂರ್ತಿಯನ್ನು ನೋಡಿ ನೋಡಿ ಧ್ಯಾನ ಮಾಡಬೇಕು. ಅನಂತರ ಪುನಃ ನಾಸಾಗ್ರದಲ್ಲಿ ದೃಷ್ಟಿ ಚೆನ್ನಾಗಿಟ್ಟು ಆ ಭಗವದ್ರೂಪವನ್ನು ಧ್ಯಾನಿಸಬೇಕು. ಇದೇ ಧಾರಣ ಧ್ಯಾನಯೋಗವೆಂದು ಕರೆಸುತ್ತಾರೆ. ಧಾರಣ ಯೋಗ ಶಕ್ತಿ ಯಿಂದ, ಸದಾರೂಪ ಧ್ಯಾನ ಮಾಡುವ ಅಭ್ಯಾಸಮಾಡಲು ಜನ್ಮಾಂತರದಲ್ಲಿ ಸಾಧನಕ್ಕೂ ಒದಗುತ್ತದೆ.

೮. ಇನ್ನು ಸದಾಚಾರ ಸತ್ಕರ್ಮ ಸದ್ವಿಚಾರಶಕ್ತಿ ಭಗವತ್ಕಥಾ ಶ್ರವಣ ಸರ್ವದಾ ಭಗವದ್ಗುಣಾಲೋಚನೆಯುಳ್ಳವನಾಗಿ, ಶಾಂತನಾದ ಗುರುವಿನ ಲಾಭದಿಂದ ಆ ಶಾಂತದಾಂತ ಗುರುವಿನ ಸದುಪದೇಶದಿಂದ ಧಾರಣಾಶಕ್ತಿ ಯಿಂದ ಸಿದ್ಧನಾಗುತ್ತಾನೆ.

ಧಾರಣಾಶಕ್ತಿ ಶೂನ್ಯನಾದವನು, ನೀಚ ಜನ್ಮ ಪೊಂದಿ ಕೇಡು ಹೊಂದು ವನು. ಕಾರಣ ಮೊದಲಿಗೆ ಶ್ರವಣ ಮನನಾದಿಗಳ ಅಭ್ಯಾಸ ಮಾಡಿ ಮಾಡಿ ಜ್ಞಾನೈಶ್ವರ್ಯ ಸಂಪಾದಿಸಿ **ಧಾರಣಾಶಕ್ತಿಯುಳ್ಳವನಾಗಲು,**

೯. ಮುಂದೆ ಶ್ರೀಹರಿಯು ಧಾರಣಾಭ್ಯಾಸದಲ್ಲಿ ಉದ್ಯುಕ್ತನಾದವನ ಹೃನ್ಮನಸ್ಸಿನಲ್ಲಿ ವಾಸನಾತ್ಮಕನಾಗಿ ವಾಸನಾರೂಪದಿಂದ ಬಂದು ನಿಲ್ಲುತ್ತಾನೆ. ಇಂತಹ ವಾಸನಾಮಯರೂಪನಾದ ಹರಿಯಲ್ಲೇ ಮನಸ್ಸಿಟ್ಟು ಸರ್ವಕಾಲವಲ್ಲಿ ಧ್ಯಾನ ಮಾಡುತ್ತಿರಲು,

೧೦. ಅಂತಃಕರಣದಿಂದ ಅವರವರ ಯೋಗ್ಯತೆಗೆ ಅನುಸರಿಸಿ ಆಹ್ಲಾದ ಕರವಾದದು, ಸರ್ವದೋಷದಿಂದ ಶೂನ್ಯನಾದದ್ದು ಸ್ವಪ್ರಕಾಶರೂಪವಾದಂಥ ಸಚ್ಚಿದಾನಂದರೂಪವು ಕೋಟಿಸೂರ್ಯ ಪ್ರಕಾಶಮಾನವಾದದ್ದು. ಮುಗುಳು ನಗೆಯಿಂದ ಬೀರುವ ರೂಪ, ಸರ್ವ ಸೌಂದರ್ಯಭರಿತವಾದಂಥ, ತನ್ನ

ಬಿಂಬರೂಪವನ್ನು ತೋರಿಸುತ್ತಾನೆ. ಇದೇ ಜೀವಾಂತರ್ಯಾಮಿ ಬಿಂಬ ರೂಪ.

೧೧. ಬಿಂಬರೂಪಿ ಹರಿಯಲ್ಲೇ ಪೂರ್ಣ ಲಕ್ಷ್ಯವಿಟ್ಟು ಚನ್ನಾಗಿ ಬಿಂಬ ಮೂರುತಿಯನ್ನು ಅವಲೋಕಿಸುತ್ತ, ಕಣ್ಣುಗಳಿಂದ ಆನಂದಬಾಷ್ಪಗಳನ್ನು ಸುರಿಸುತ್ತ, ಆ ಸಂತೋಷದಿಂದ ಪುಷ್ಟವಾದ ಶರೀರವುಳ್ಳವನಾಗಿ, ಸರ್ವಾಂಗಗಳಲ್ಲಿ ರೋಮಾಂಚಗಳುಳ್ಳವನಾಗಿಯೂ, ಬಾಹ್ಯಜ್ಞಾನಶೂನ್ಯನಾಗಿ, ಬಿಂಬಮೂರ್ತಿಯಲ್ಲೇ ಮನಸ್ಸು ಇಟ್ಟು ಸಂತೋಷಭರಿತನಾಗಿರಲು, ಆ ಕಾಲದಲ್ಲಿ ದೇಹಕ್ಕೆ ತಾಡನ ಛೇದಾದಿಗಳನ್ನು ಮಾಡಲು, ಬಾಹ್ಯ ಲಕ್ಷ್ಯವೇ ಇರುವದಿಲ್ಲ. ಸ್ಪರ್ಶ ಮಾಡಲು ಸ್ಪರ್ಶವೂ ಸಹ ತಿಳಿಯುವದಿಲ್ಲ. ಮಾತನಾಡಿಸಿದರೂ ಕೇಳಿಸುವದಿಲ್ಲ. ಬಿಂಬರೂಪದರ್ಶನ ವಿನಾ ಎರಡನೇದು ಏನೂ ಕಾಣುವದಿಲ್ಲ. ಹಸಿವೆ ನೀರಡಿಕೆ ದುಃಖ ಚಿಂತಾ ಸಂತಾಪರಹಿತನಾಗಿ ಗಾಳಿ ಸೋಕದ ದೀಪದಂತೆ ಅಚಂಚಲನಾಗಿ, ಎಷ್ಟು ಕಾಲ ಪರಿಯಂತ ಶ್ರೀಹರಿಯು ಈತನ ಹೃತ್ಕಮಲದಲ್ಲಿ ಬಿಂಬ ಸ್ವರೂಪದಿಂದ ಕಾಣಿಸುವನೋ ತಾವತ್ಕಾಲ ಪರಿಯಂತರ ಲೇಶಮಾತ್ರವಾದರೂ ಬಾಹ್ಯ ಸ್ಮೃತಿ ಶೂನ್ಯನಾಗಿರುವನು. ಇದೇ ಅಸಂಪ್ರಜ್ಞಾತ ಸಮಾಧಿ. ಹೀಗೆ ಬಿಂಬರೂಪಿ ಹರಿಯು ಸಾಕ್ಷಾತ್ಕಾರವಾಗಲು, ಜನ್ಮಜನ್ಮಾಂತರದಲ್ಲಿ ಮಾಡಿರುವ ಸಂಚಿತ ಕರ್ಮ ನಾಶ, ಮುಂದೆ ಆಗಾಮಿ ಕರ್ಮಕ್ಕೆ ಅಶ್ಲೇಷ ಲೇಪವಾಗದು "ಏವಂ ಸಾಕ್ಷಾತ್ಕೃತೇ ವಿಷ್ಣೌ ಸಂಚಿತಾಗಾಮಿ ಕರ್ಮಣಾಮ್ ॥ ಸದ್ಯ ಏವ ಭವೇನ್ನಾಶಃ ಪ್ರಾರಬ್ಧಮವಶಿಷ್ಯತೇ ॥

೧೨. ಈ ಬಿಂಬಾಪರೋಕ್ಷ ಜ್ಞಾನವಾಗಲು ಪ್ರಾರಬ್ಧ ಕರ್ಮ ವ್ಯತಿರಿಕ್ತ ಉಳಿದ ಯಾವತ್ತೂ ಕರ್ಮನಾಶವಾಗುವವು. ಪ್ರಾರಬ್ಧ ಕರ್ಮವು ಶುಭವಿರಲಿ, ಅಶುಭವಾಗಲಿ ಅವಶ್ಯವಾಗಿ ಅನುಭವಿಸಲೇಬೇಕು. ಶ್ರೀಹರಿಯು ಪ್ರೀತಿಯಿಂದ ಪ್ರಾರಬ್ಧಕರ್ಮ ಅನುಭೋಕ್ತವ್ಯ ಕಾಲದಲ್ಲಿ ಒದಗುವ ಅನೇಕ ಕರ್ಮಗಳನ್ನು ಉಪಮರ್ದನ ಮಾಡುತ್ತಾನೆ. ಈ ಅನುಭವ ತೀರಿದ ನಂತರ ಚರಮದೇಹವಾದ ಬ್ರಾಹ್ಮಣ ಜನ್ಮವನ್ನು ಕೊಟ್ಟು ಮೋಕ್ಷ ಕೊಡುತ್ತಾನೆ. "ಅವಸ್ಥಾನಾಂ ಹರಿಂ ದೃಷ್ಟ್ವಾ ಬಾಹ್ಯಜ್ಞಾನವಿವರ್ಜಿತಾ । ತದೇಕತಾನತಾ ಪ್ರಾಪ್ತಿಃ ಸ ಸಮಾಧಿರುದಾಹೃತಃ ॥ ಪ್ರಾರಬ್ಧಸ್ಯ ಕ್ಷಯೋ ಭೋಗಾತ್

ವಿರಜಾನಾಪ್ನೋತಿ ಮುನಿಃ" ॥ ಬಿಂಬರೂಪಿ ಹರಿಯನ್ನು ನೋಡುತ್ತಾ ಬಾಹ್ಯಸ್ಮೃತಿರಹಿತನಾಗಿ ಬಿಂಬರೂಪಿ ಹರಿಯಲ್ಲೇ ತನ್ನ ಮನಸ್ಸು ಸ್ಥಿರ ವಾಗಿರಿಸುವದೇ **ಸಮಾಧಿ ಯೋಗ** ॥ ಈ ಸಮಾಧಿ,

೧೩. ಯೋಗದಿಂದ ಮುಂದೆ ಪಿತೃಯಾನ, ದೇವಯಾನ, ಬ್ರಹ್ಮಯಾನ ಮಾರ್ಗದಿಂದ ಅರ್ಚಿರಾದಿ ಲೋಕಗಳ ದ್ವಾರಾ ಲಯ ಪ್ರಕಾರ ವಿಧಾನದಂತೆ ಸಮಸ್ತ ಜಡತತ್ವ ಪೃಥಿವ್ಯಾದಿ ಅವ್ಯಕ್ತಾಂತ ಲಯ ಚಿಂತಿಸಿ, ಗರುಡಶೇಷ ಮಾರ್ಗಲಯ ವಿಧಾನವನ್ನರಿತು ಮುಕ್ತರಾಗುವ ಸರ್ವಜೀವರು ಬ್ರಹ್ಮ ದೇವರನ್ನು ಹೊಂದಿ ಬ್ರಹ್ಮದೇವರ ಸಹಿತ ವಿರಜಾಸ್ನಾನದಿಂದ ಅನಿಷ್ಟವಾದ ಲಿಂಗದೇಹ ಭಂಗವಾಗಲು ಶ್ವೇತದ್ವೀಪಗತನಾದ ಶ್ರೀಹರಿಯ ದರ್ಶನದಿಂದ ಸ್ವರೂಪಾನಂದ ಸುಖವಾದ ಮೋಕ್ಷವನ್ನು ಹೊಂದುತ್ತಾನೆ. ಮೋಕ್ಷ ದಲ್ಲಿಯೂ ಸಹ ಭಗವತ್ಪ್ರೀತಿಗೋಸುಗವಾಗಿ ಭಗವತ್ಪೂಜಾತ್ಮಕ ಸತ್ಕರ್ಮ ಗಳನ್ನು ವಿಧಿಬದ್ಧವಿಲ್ಲದೇ ಮಾಡುತ್ತಾನೆ. "ಮರ್ಯಾದಾರ್ಥಂ ತು ಜಗತಃ ಕುರ್ಯಾದ್ವಿಷ್ಣೋರನುಜ್ಞಯಾ॥ ತೇನಾನಂದಸ್ಯ ವೃದ್ಧಿಃ ಸ್ಯಾನ್ಮೋಕ್ಷೇ ತಸ್ಯ ಮಹಾತ್ಮನಃ ॥ ತಸ್ಯಾಪಿ ಮಹತಾಂ ದ್ರೋಹೇ ಕುತಶ್ಚಿತ್ಕಾರಣಾಂತರಾತ್॥ ಆನಂದಸ್ಯ ಭವೇದ್ಧ್ರಾಸೋ ನಾನ್ಯತ್ಕರ್ಮ ವಿಲಿಪ್ಯತೇ ॥ ಹ್ರಾಸೋ ನಾಮಾ ನಭಿವ್ಯಕ್ತಿರ್ವಿದ್ಯಮಾನಸ್ಯ ತಸ್ಯ ತು ॥ ಅಭಿವ್ಯಕ್ತಿಸ್ತು ತಸ್ಯೈವ ವೃದ್ಧಿರಿತ್ಯಭಿ ಗೀಯತೇ ॥ ೫೫ ॥

ಇದರ ಸಾರಾಂಶವೇನೆಂದರೆ ಮೋಕ್ಷದಲ್ಲಿ ಭಗವತ್ಪೂಜಾತ್ಮಕಸತ್ಕರ್ಮ ಜಗತ್ತಿನ ಹಿತಾರ್ಥವಾಗಿ, ಭಗವದಾಜ್ಞೆಯಿಂದ ಸತ್ಕರ್ಮ ಮಾಡಲಿಕ್ಕೆ ಬೇಕು. ಆ ಜ್ಞಾನದಿಂದ ಮೋಕ್ಷದಲ್ಲಿ ಆನಂದ ಅಭಿವೃದ್ಧಿಯಾಗುವದು. ಯೋಗಿ ಯಾದರೂ, ಕದಾಚಿತ್ ಜ್ಞಾನಿಗಳಾದ ಉತ್ತಮರ ದ್ರೋಹ ಮಾಡಲು, ಅಪರೋಕ್ಷಿಗೆ ಯಾವ ತರದ ಕರ್ಮಲೇಪವಾಗದೇ ದೇವತೆಗಳಿಗೆ ಆನಂದ ಉನ್ನಾಹಕ್ಕೆಹ್ರಾಸ. ನಿರಂತರಾದ ಜೀವರಿಗೆ ಕ್ಲೃಪ್ತಾನಂದಕ್ಕೆ ಹ್ರಾಸ ಅದು ಹೇಗೆಂದರೆ ಆತನಿಗಾಗುವ ಆನಂದ ಅನಭಿವ್ಯಕ್ತಿಯೇ ಹ್ರಾಸ, ಮತ್ತು ಆನಂದದ ಅಭಿವ್ಯಕ್ತಿಯೇ ವೃದ್ಧಿ ಎಂದೆನಿಸಿ ಕೊಳ್ಳುತ್ತದೆ. ಮತ್ತು ಮೋಕ್ಷ ದಲ್ಲಾದರೂ, ಸಚ್ಚಿದಾನಂದ ಆತ್ಮೇತಿ ಎಂಬ ಚತುರ್ಗುಣಾರಂಭಿಸಿ ಯೋಗ್ಯತೆ ಯನುಸರಿಸಿ ಹೆಚ್ಚಿನ ಗುಣೋಪಾಸನೆ ಮಾಡುವದೆಂದು ಗೀತೆ ಅಭ್ಯಾಸ

೫೫ನೇ ಶ್ಲೋಕ ಪರಿಯಂತವಾಗಿ ಬಿಂಬೋಪಾಸನೆ ವಿಧಾನವನ್ನು ಮೇಲೆ ವಿವರಿಸಿದಂತೆ ಇಷ್ಟು ಸವಿಸ್ತಾರವಾಗಿ ಶಾಂಡಿಲ್ಯರು ಉಗ್ರಶ್ರವಸರಿಗೆ ಉಪದೇಶಿಸುತ್ತಾ ಇಲ್ಲಿಯಂತೇ.

೧೪. ಮುಂದೆ ಮೋಕ್ಷವಲ್ಲಾದರೂ, ಜೀವರ ತಾರತಮ್ಯವು ನಿಜವಾಗಿಯೂ ಇದ್ದು ಸ್ಥಾವರಾದಿ ಬ್ರಹ್ಮಾಂತ ಜೀವರು ಮುಕ್ತಿಯಲ್ಲಿ ತರತಮ ಭಾವದಿಂದ ಒಬ್ಬರಿಗೊಬ್ಬರು ತಮಗಿಂತ ಉತ್ತಮರಾಧೀನರಾಗಿ ಭಾವಧ್ಯಾನರರಾಗಿ ಸ್ವರೂಪಾನಂದ ಸುಖವನ್ನು ಅನುಭವಿಸುವರೆಂದು ಹೇಳಿದ್ದಾರೆ. ಕಾರಣ ಧ್ಯಾನೋಪಾಸನೆ ಕ್ರಮವನ್ನು ತಿಳಿಯಲು ಬೇಕು. ಈ ವಿವರ ತಿಳಿಯದೆ ಈ ೨೦ನೆಯ ಆರೋಹಣ ಸಂಧಿಯು ತರತಮಭಾವ ತಿಳಿಯಲಾರದು. ಇದಕ್ಕೆ ಧ್ಯಾನೋಪಾಸನೆಯಲ್ಲಿ ಲಯಚಿಂತನಾ ರೂಪವಾಗಿ ಆರೋಹಣ ತಾರತಮ್ಯ ಸಂಧಿ ಹೇಳಿದ್ದಾರೆ. ಈ ಸ್ಮೃತಿ ಶ್ರುತಿಗನುಕೂಲವಾಗಿಯೇ ಶ್ರೀ ವಿಜಯದಾಸರ ಸಾಧನ ಉಪಾಸನ ಭಾಗ ಸುಳಾದಿಗಳಿವೆ. ಬೇರೆ ಇಲ್ಲ. ಈ ಶಾಸ್ತ್ರಾರ್ಥಬಲ್ಲ ಅಪರೋಕ್ಷಿ ಜ್ಞಾನಿಗಳಾದ ಶ್ರೀ ಜಗನ್ನಾಥ ದಾಸರಾಯರು ಸಾಧನ ಜೀವಿಗಳಲ್ಲಿ ಕರುಣಿಸಿ, ಪಾರಾಯಣ ವಾದರೂ ಮಾಡಿದರೆ ಕಿಂಚಿತ್ ಪುಣ್ಯಲಭಿಸಿ, ಮುಂದೆ ಸದ್ಗುರು ದ್ವಾರಾ ವೇದ ಶಾಸ್ತ್ರ ವಿಚಾರದಿಂದ ಮೋಕ್ಷವನ್ನು ಹೊಂದಲಿಕ್ಕೆ ಒಂದೇ ಜನ್ಮ ಸಾಧನವಲ್ಲ. ಕೆಲಜನ್ಮ ಕರ್ಮ, ಕೆಲಜನ್ಮ ಜ್ಞಾನ, ಕೆಲಜನ್ಮ ಭಕ್ತಿ ಸಂಪಾದಿಸಿದರೆ ಮೋಕ್ಷ ಲಭಿಸದೆಂದು ಕೃಪೆ ಮಾಡಿರುವರು. ಕಾರಣ ಮೊದಲಿಗೆ ಸಂಧಿ ಸೂಚನೆಯಲ್ಲಿ.

> ಭಕ್ತರೆನಿಸುವ ದಿವ್ಯ ಪುರುಷರ ।
> ಉಕ್ತಿಲಾಲಿಸಿ ಪೇಳ್ದ ಮುಕ್ತಾ ।
> ಮುಕ್ತ ಜೀವರ ತಾರತಮ್ಯವ ಮುನಿಪ ಶಾಂಡಿಲ್ಯ ॥

ಎಂದು ಪೀಠಿಕಾರೂಪವಾಗಿ ಹೇಳಿ.

ಸ್ಥಾವರರ ನೋಡಲ್ಕೆ ತೃಣಕ್ರಿಮಿ ಜೀವರುತ್ತಮರೆಂದು ಹೇಳಿದ್ದು. ಇದೇ ವಾಯುಪುರಾಣ ಮಾಘ ಮಾಹಾತ್ಮ್ಯ ೧೯ನೇ ಅಧ್ಯಾಯ ಶ್ಲೋಕ ೫೬ ಆರಂಭಿಸಿ ೬೩ ಶ್ಲೋಕ ಪರ್ತಿ ಹೇಳಿದ್ದಾರೆ. ಆ ಶ್ಲೋಕಗಳನ್ನೇ ಪೂರ್ತಿಯಾಗಿ ಇಲ್ಲಿ ಕೊಡಲಾಗಿದೆ.

"ವೃಕ್ಷಾದಿಜಾತಿರ್ಜೀವಾನಾಂ ಸಾ ನಿತ್ಯೈವ ಯತಸ್ತತಃ
ಮುಕ್ತಿಂ ತೇನೈವ ರೂಪೇಣ ಯಾಂತಿ ತೇ * ಕಾಮರೂಪಿಣಃ ||೫೬||
ಸಂಸೃತಾವನ್ಯಥಾಭಾವಸ್ತೇಷಾಂ ತನುಭೃತಾಂ ಕಿಲ |
ತತ್ರ ಸ್ಥಾವರಮುಕ್ತೇಭ್ಯೋ ವರಾ ಜಂಗಮಮುಕ್ತಿಗಾಃ || ೫೭ ||
ತೇಭ್ಯೋ ಮಾನುಷಮುಕ್ತಾಶ್ಚ ತೇಭ್ಯೋ ಮುಕ್ತಾಃ ದ್ವಿಜಾಃ
ಪರಾಃ |
ತತೋಪದೇಶಕರ್ತಾರೋ ಮುಕ್ತಾಸ್ತೇಭ್ಯೋಽಧಿಕಾ
ಮತಾಃ ||೫೮||
ತೇಭ್ಯೋಧಿಕಾಸ್ತು ಭೂಪಾಲಾಃ ಮುಕ್ತಿಗಾಃ ಪರಿಕೀರ್ತಿತಾಃ ||
ಭೂಪೇಭ್ಯಃ ಪಿತರೋ ಜ್ಞೇಯಾ ಮುಕ್ತಿಗಾಸ್ತೇಭ್ಯ ಏವ ಚ ||೫೯||
ವಸವೋಭ್ಯಧಿಕಾಃ ಪ್ರೋಕ್ತಾಸ್ತೇಭ್ಯ ವೈ ಆಜಾನಜಃ ಪರಃ |
ತೇಭ್ಯಶ್ಚ ಕರ್ಮಜಾ ದೇವಾಃ ತೇಭ್ಯಸ್ಸಪ್ತರ್ಷಯಃ ಪರಾಃ ||೬೦||
ತೇಭ್ಯೋ ವಹ್ನಿಸ್ತತಃ ಸೂರ್ಯಸ್ತಸ್ಮಾದ್ವಾಚಸ್ಪತಿಃ ಪರಃ |
ತಸ್ಮಾದಿಂದ್ರಃ ಪರೋ ಮುಕ್ತೌ ತಸ್ಮಾದ್ಗೌರೀ ತತೋ ಹರಃ ||೬೧||
ಹರಾದ್ಬುದ್ಧಿಸ್ತತೋ ಬ್ರಹ್ಮಾ ಮುಕ್ತೌ ಜೀವಾಧಿಕೋ ಮತಃ |
ನ ತಸ್ಮಾದಧಿಕಃ ಕೋಪಿ ಮುಕ್ತೌ ಜೀವೇಷು ಚೋತ್ತಮಃ || ೬೨ ||
ಬ್ರಹ್ಮಣಃ ಪರಮವ್ಯಕ್ತಂ ತಸ್ಮಾದ್ವಿಷ್ಣುರ್ಮಹಾಪ್ರಭುಃ" || ಇತಿ
ಸತಾಂ ಮುಕ್ತಿಃ ಸುಲಭಾ ದುರ್ಲಭಾಹ್ಯಕೃತಾತ್ಮನಾಮ್ || ಇತ್ಯಾದಿ.

(ಭಾವಸೂಚನೆಯಲ್ಲಿ ಈ ಪ್ರಮಾಣ ಕೊಟ್ಟಿರುವರು.)

ಮೇಲೆ ವಿವರಿಸಿದ ಶ್ರೀ ವಾಯು ಪುರಾಣ ಶ್ಲೋಕಾರ್ಥಗಳೇ ಶ್ರೀ ದಾಸಾರ್ಯರು, ಈ ಆರೋಹಣ ಸಂಧಿ ಪದ್ಯ ೧ ರಿಂದ ಆರಂಭಿಸಿ ಪದ್ಯ ೧೧ ರವರಿಗೆ ಸ್ಥಾವರಾದಿ ಬ್ರಹ್ಮಾಂತ ಜೀವೋತ್ತಮರ ಆರೋಹಣ ತಾರತಮ್ಯವನ್ನು ಪೇಳಿ, "ಬ್ರಹ್ಮಣಃ ಪರಮವ್ಯಕ್ತಂ" ಎಂಬುವ ವಚನದಂತೆ ಪದ್ಯ ೧೨-೧೩-೧೪ ರಲ್ಲಿ ಅವ್ಯಕ್ತ ತತ್ವಾಭಿಮಾನಿಯಾದ ಶ್ರೀ ಮಹಾ ಲಕ್ಷ್ಮೀ ದೇವಿಯರ ಮಹಾ ಮಾಹಾತ್ಮ್ಯ ಬಣ್ಣಿಸುತ್ತ ಸ್ತೋತ್ರ ಮಾಡಿ ಮುಂದೆ "ತಸ್ಮಾದ್ವಿಷ್ಣುಃ ಮಹಾಪ್ರಭುಃ" ಎನ್ನುವಂತೆ ಶ್ರೀ ಲಕ್ಷ್ಮೀದೇವಿಯರಿಗಿಂತಲೂ

* ಕಾಮರೂಪ = ಮುಕ್ತಿಯಲ್ಲಿ ಬಯಸಿದ ರೂಪಗಳನ್ನು ಧರಿಸುವರು.

ಶ್ರೀ ವಿಷ್ಣುವೇ ಮಹಾ ಪ್ರಭುವೆಂದು ಪದ್ಯ ೧೫-೧೬-೧೭ರಲ್ಲಿ ಧೃವ ಸ್ತುತಿ ಹೇಳಿ ೧೮ ರಿಂದ ಪದ್ಯ ೧೯ ಸಂಪೂರ್ಣ ನಾಲ್ಕು ಪದ್ಯಗಳಿಂದ ಭಗವಂತನ ಅನೇಕ ಗುಣೋತ್ಕರ್ಷಣಪೂರ್ವಕ, ಮಹಾಮಹಿಮೆ, ಮನವರಿಸುವಂತೆ ನಿತ್ಯನೂತನ ಮಹಾ ಭಕ್ತ್ಯತಿಶಯದಿಂದ ಪೊಗಳಿ ಆರೋಹಣಾ ತಾರತಮ್ಯ ಸಂಧಿಯ ಮಂಗಳವನ್ನು ಮಾಡಿದ್ದಾರೆ.

ಪ್ರಿಯ ಭಕ್ತಬಾಂಧವರೆ ಈ ಅಲ್ಪನು ಸ್ವಮತಿಯಿಂದ ಸಂಧಿಗಳ ಪದ್ಯದ ಸಂಬಂಧ, ಸಂಧಿಗಳ ಸಾರ, ಬರೆದಿಲ್ಲ. ಧ್ಯಾನೋಪಾಸನೆ ಪ್ರಕ್ರಿಯಾ ವಿವರ ನಿಜವಾದ ಭಾವ ತಿಳಿಸಲು ದಾಸರು ತಾವೇ ಎನ್ನ ಬುದ್ಧಿಯಲ್ಲಿ ಪ್ರೇರಿಸಿದ ಕೆಲವು ಹೇಳಿ ಸ್ವಪ್ನದ್ವಾರಾ, ಕೆಲವು ಗ್ರಂಥದ್ವಾರಾ, ಕೆಲವು ಗುರು ಮುಖದಿಂದ ಹೀಗೆ ಮೂರು ವಿಧವಾಗಿ ಪ್ರೇರಿಸಿದ. ಶ್ರೀ ವಿಜಯದಾಸರ ಸುಳಾದಿಗಳು, ಕೇವಲ ಪುರಾಣ ಇತಿಹಾಸ ಆಗಮ, ಸಂಹಿತಾ ವೇದೋಪ ನಿಷತ್ತುಗಳ ಅರ್ಥಗಳಿವೆ. ಅದರಂತೆ ಬಿಂಬೋಪಾಸನೆ ವಿವರವನ್ನೇ ಸಂಕ್ಷಿಪ್ತವಾಗಿ ಪಾರಾಯಣ ಮಾಡಲಿಕ್ಕೆ ಶ್ರೀದಾಸಾರ್ಯರು ಸಕಲ ಪ್ರಮಾಣ ಶಾಸ್ತ್ರಾರ್ಥ ವಿಚಾರಪ್ರಮೇಯಗಳಿಂದ ತುಂಬಿದ ಗ್ರಂಥ ರಚಿಸಿದ್ದಾರೆ. ಇವರ ನಿಜ ಭಾವವನ್ನು ತಿಳಿಯದೇ ಕೆಲ ಜನರು ಅಪಹಾಸ್ಯಗೈಯ್ಯುತ್ತಾರೆಂಬುದನ್ನರಿತು ಅಪರೋಕ್ಷಿಗಳಾದ ದಾಸಾರ್ಯರ ವಚನಗಳಿಗೆ ಪುರಾಣ ಶ್ರುತಿಗಳ ಆಧಾರವೆಂದು ತೋರಿಸಲು ವಿಸ್ತಾರವಾಗಿ ೧೧ ಅಧ್ಯಾಯ ಶಾಂಡಿಲ್ಯ ತತ್ವಗಳ ಸಾರಾರ್ಥವನ್ನು ಸಂಧಿಯ ಸಾರರೂಪವಾಗಿ ಬರೆಸಿರುದು ಎಮ್ಮ ಗುರುಗಳು.

ಶ್ರೀ ಜಗನ್ನಾಥದಾಸರ ಅನುಗ್ರಹದಿಂದ ಶ್ರೀಶ ಪ್ರಾಣೇಶವಿಠಲರ ಹೆಣ್ಣು ಮೊಮ್ಮಕ್ಕಳಾದ ರಾಮದಾಸರು ದೇವಾಂಶ ಅವತರಿಸಿ ಶ್ರೀಶ ಪ್ರಾಣೇಶ ವಿಠಲರಿಂದು ಅಪರೋಕ್ಷ ಜ್ಞಾನಿಗಳು. ಅಪರೋಕ್ಷ ಜ್ಞಾನಿಗಳ ಕೇವಲ ಸಾಕ್ಷಾತ್ ಶಿಷ್ಯರು ತತ್ವಜ್ಞರಾದ ಗುರು ಶ್ರೀಶ ಪ್ರಾಣೇಶವಿಠಲರು. ಗೋರಾಬಾಳಕರಣಿಕ ವೆಂಕಣ್ಣನವರು ನಮ್ಮ ತಂದೆಗಳಿಗೆ ಬಹು ವರ್ಷದಿಂದ ಪುತ್ರ ಸಂತಾನವಿಲ್ಲದ ಕಾರಣ ಶ್ರೀಶ ಪ್ರಾಣೇಶ ವಿಠಲರನ್ನು ಸೇವಿಸಲು ಅವರ ಅನುಗ್ರಹದಿಂದಲೇ ಈ ಅಲ್ಪಗೆ ಬ್ರಾಹ್ಮಣ ಜನುಮ ಅದರಲ್ಲಿ ಸಾಧನ ಮಾಡಲು ಶ್ರೀ ವರದೇಂದ್ರರು ಹಿಂದಿನಂತೆ ತಮ್ಮ ಸನ್ನಿಧಾನದಲ್ಲಿಟ್ಟುಕೊಂಡು ಸಾಧನ ಮಾಡಿಸಿ, ಶ್ರೀ ಶ್ರೀಶ ಪ್ರಾಣೇಶ ವಿಠಲರೇ ಬಂದಂತಿದ್ದ ನಿಂತು

ಜ್ಞಾನ ಕೊಟ್ಟು ಬರೆಸುತ್ತಿದ್ದಾರೆ. ಇದು ಎನ್ನ ಮಾತಾಪಿತೃಗಳ ಸೇವೆಯ ಫಲವೆಂದು ಸಜ್ಜನರಿಗೆ ತಲೆಬಾಗಿ ಪ್ರಾರ್ಥಿಸುವೆ. ನನ್ನ ಮತಿಯಲ್ಲಿ. ತಪ್ಪಿದ್ದರೆ ಜ್ಞಾನಿಗಳು ತಿಳಿಸಿದಲ್ಲಿ ಮಹಾ ಜನರ ಪದವಡಿ ಶಿರಬಾಗುವೆ.

ಹಿಂದೆ ಅಪರೋಕ್ಷಾನಂತರದಲ್ಲಿ ಸಂಚಿತಾಗಾಮಿ ಕರ್ಮನಾಶವಾಗುತ್ತದೆಂದು ಹೇಳಿದಂತೆ ಮುಂದೆ ಪ್ರಸಂಗಾನುಸರಿಸಿ ೨೧ನೆಯ ಕರ್ಮ ವಿಮೋಚನ ಸಂಧಿಯನ್ನು ದಾಸಾರ್ಯರು ಪ್ರಾರಂಭಿಸುತ್ತಾರೆ.

ಇಂತು ವಿಸ್ತಾರವಾಗಿ ಬರೆಸಿದುದು ಬರಿದೆ. ಹಲಬರಿಗೆ ಒಣ ಹರಟೆ ಇದು ಎಂದು ತಲೆ ಬೇಸರಿಕೆ ತೋರಬಹುದು. ಬೇಡಲ್ಲೀ ಸಜ್ಜನರು ಸ್ವೀಕರಿಸಿ ಪರಮಾನುಗ್ರಹಿಸಲೆಂದು ಅಸ್ಮದ್ಗುರುವರಾಂತರ್ಯಾಮಿ ಶ್ರೀಮಧ್ವೇಶನನ್ನು ಪ್ರಾರ್ಥಿಸುವೆ,

ಶ್ರೀ ಗುರುಮಧ್ವೇಶ ಶ್ರೀ ಕೃಷ್ಣಾರ್ಪಿತವು.

॥ ಶ್ರೀಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ ॥

॥ ಶ್ರೀ ಗುರುರಾಜೋ ವಿಜಯತೇ ॥

# ೨೦ನೇ ಆರೋಹಣ ತಾರತಮ್ಯ ಸಂಧಿ

ಶ್ರೀ ರಾಘವೇಂದ್ರ ಗುರು ಶ್ರೀ ವರದೇಂದ್ರ ಗುರು

ಹರಿಕಥಾಮೃತಸಾರ ಗುರುಗಳ।
ಕರುಣದಿಂದಾಪನಿತು ಪೇಳುವೆ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ಪ॥

ಸಂಧಿಸೂಚನೆ :—ಭಕ್ತರೆನಿಸುವ ದಿವ್ಯಪುರುಷರ।
ಉಕ್ತಿ ಲಾಲಿಸಿ ಪೇಳ್ದ ಮುಕ್ತಾ।
ಮುಕ್ತಜೀವರ ತಾರತಮ್ಯವ ಮುನಿಸಿಪ ಶಾಂಡಿಲ್ಯ ॥ಪ॥

**ಸ್ಥಾವರರ ನೋಡಲ್ಕೆ ತೃಣಕ್ರಿಮಿ।**
**ಜೀವರುತ್ತಮ ಕ್ರಿಮಿಗಳಿಂದಲಿ।**
**ಆವಿಗೋಗಜ ವ್ಯಾಘ್ರಸಿಂಹಗಳಿಂದ ಶೂದ್ರಾದಿ॥**
**ಮೂವರುತ್ತಮ ಕರ್ಮಿಕರ ಭೂ।**
**ದೇವರುತ್ತಮ ಕರ್ಮಿ ನೋಡಲು।**
**ಕೋವಿದುತ್ತಮ ಕವಿಗಳಿಂದಲಿ ಕ್ಷಿತಿಪರುತ್ತಮರು ॥೧॥**

ಅವತರಣಿಕಾ :—ಹಿಂದೆ ೧೯ನೆ ಸಂಧಿಯ ಸಾರದಲ್ಲಿ ವಿವರಿಸಿದಂತೆ ದೇಹದಲ್ಲಿಪ್ಪ ತತ್ವಾಭಿಮಾನಿ ಸುರರ ತಾರತಮ್ಯ ಅವರೋಹ ಕ್ರಮದಿಂದ ಹೇಳಿ ಈ ಆರೋಹಣ ಕ್ರಮದಿಂದ ದೇಹಾತ್ ಬಹಿಃ ಬ್ರಹ್ಮಾಂಡದಲ್ಲಿರತಕ್ಕ ಮತ್ತು ಮುಕ್ತಿಯಲ್ಲಿ ನಿಜವಾಗಿ ತಾರತಮ್ಯದಿಂದಿರುವ ಸ್ಥಾವರ ಜೀವರು ಚಿತ್ರನಿಬಿಡೀನರಾದ ಜೀವರನ್ನು ಆರಂಭಿಸಿ, ಬ್ರಹ್ಮಪರಿಯಂತವಾಗಿ ಸೋಪಾನ ಏರುವ ಕ್ರಮದಂತೆ ಈ ಆರೋಹಣ ತಾರತಮ್ಯ ಸಂಧಿಯನ್ನು ದಾಸರಾಯರು ಪ್ರಾರಂಭಿಸಿದ್ದಾರೆ. ಈ ತಾರತಮ್ಯವು ವಾಯುಪುರಾಣಸ್ಥ ಮಾಘ ಮಾಸ

ಮಾಹಾತ್ಮ್ಯೆಯಲ್ಲಿ ಇದೆ. ಈ ಪೂರ್ವಾಪರ ಸಂಬಂಧ ವಿಚಾರ ಶ್ರೀ ವ್ಯಾಸ ದಾಸ ಸಿದ್ಧಾಂತ ಕೌಮುದಿ ಟೀಕಾಕಾರರಾದ ಶ್ರೀ ಜಂಬುಖಂಡಿ ವಾದಿ ರಾಜಾಚಾರ್ಯ ಜ್ಞಾನಿವರ್ಯರು ವಿಶದವಾಗಿ ಮುಂದೆ ಬರೆದಿದ್ದಾರೆ. ಅವಶ್ಯ ನೋಡುವುದು.

ಅನ್ ಇಲ್ಲಿ ಸಂಧಿ ಸೂಚನೆಯಲ್ಲಿ ಹೇಳಿದ ವಿಷಯವನ್ನೇ ಆ ಜ್ಞಾನಿಗಳು ಉದಾಹರಿಸಿರುವರು.

ಸಂಧಿ ಸೂಚನೆ=**ಪದ್ಯಾರ್ಥ :—**ಭಕ್ತರೆನಿಸುವ=ಭಗವಂತನಲ್ಲಿ ಆತ್ಯಂತಿಕ ಪರಮ ಪ್ರೀತಿ ಸುಸ್ಥಿರ ಸ್ನೇಹವುಳ್ಳವರು, ಭಗವತ್ಕಥಾ ಶ್ರವಣದಲ್ಲಿ ಮಹಾ ಆದರ ಆತುರತೆಯುಳ್ಳವರೆ ಭಕ್ತರು, ದಿವ್ಯಪುರುಷರ=ನೀಚ ಜನ ರಾಕ್ಷಸ ಪಿಶಾಚಾದಿ ಜನ್ಮಗಳಿಂದ ಉದ್ಧೃತರಾದ ದಿವ್ಯ ದೇವತಾ ದೇಹವನ್ನು ಧರಿಸಿದ ಪುರುಷರ=ಪುಂಶಬ್ದ ವಾಚ್ಯನಾದ ಶ್ರೀಹರಿಯು ಯಾರಲ್ಲಿ ಬಿಂಬನಾಗಿ ತನ್ನ ಮಾಹಾತ್ಮ್ಯ ಅವರಿಗೆ ತಿಳಿಸಿಕೊಡಬೇಕೆಂದು ಅನುಗ್ರಹ ಮಾಡಿರುವನೋ ಆ ಪುರುಷನಿಗೆ ಪ್ರತಿಬಿಂಬರಾದ ಪುರುಷಜೀವರುಗಳ, ಉಕ್ತಿ ಲಾಲಿಸಿ= ಅವರ ಪ್ರಾರ್ಥನೆಯನ್ನು ಮನ್ನಿಸಿ, ಮುಕ್ತಾಮುಕ್ತ ಜೀವರ ತಾರತಮ್ಯವ= ಮುಕ್ತರು ವಿಲಿಂಗರಾಗಿ ಸ್ವರೂಪಾನಂದವನ್ನು ನಿತ್ಯ ಅನು ಭವಿಸುವ ಮುಕ್ತ ಜನರು, ಅಮುಕ್ತರು=ಲಿಂಗದೇಹಯುಕ್ತರಾಗಿ ಸಂಸಾ ರಾವಸ್ಥೆಯಲ್ಲಿಯೂ, ಜೀವನ್ಮುಕ್ತ ದಿಶೆಯಲ್ಲಿ ಇರತಕ್ಕ ಜೀವರ=ಪಂಚ ವಿಧ ಮುಕ್ತಿ ಯೋಗ್ಯರ, ತಾರತಮ್ಯವ=ಉಚ್ಚನೀಚಭಾವವನ್ನು ಮುಕ್ತಿಗೆ ಸೋಪಾನವೆಂದು ತಿಳಿದು, ಶಾಂಡಿಲ್ಯ=ಶಾಂಡಿಲ್ಯಮುನಿಗಳು ದಿವ್ಯಪುರುಷ ರಿಗೆ ಉಪದೇಶ ಮಾಡಿದ್ದನ್ನೇ ನಾವು ಪೇಳುವೆವು ಎಂದು ದಾಸರು ಉಪ ದೇಶಿಸುತ್ತಾರೆ.

**ಪದ್ಯಾರ್ಥ :—**ಸ್ಥಾವರರ ನೋಡಲ್ಕೆ=ಜಡಗಳನ್ನು ಅಂದರೆ ಚಲಿಸ ದಿರುವ ಜೀವರು ತೃಣಾದಿಗಳನ್ನು ನೋಡಲಾಗಿ=ಸ್ಥಾವರ ಚಲಿಸದಿರುವ ಚಿತ್ತವಿಹೀನರಾದ ತೃಣ ಜೀವಿಗಳು, ತೃಣಾದಿ ಸ್ಥಾವರ ಜೀವರಕಿಂತಲು, ಕ್ರಿಮಿ=ಹುಳ ಜೀವಿಗಳು ಉತ್ತಮರು, ಇಲ್ಲಿ ಕ್ರಿಮಿ ಜೀವರನ್ನು ನಾನಾ ತರ ಯೋನಿ ಕ್ರಿಮಿ ಹಾವಿನ ವರೆಗೆ ಬರುವ ಕ್ರಿಮಿ ಸಮೂಹ, ಈ ಕ್ರಿಮಿ

ಗಳಿಂದಲಿ= ಈ ಹುಳುವು ಜಾತಿಯ ಜೀವರಿಗಿಂತಲೂ, ಅವಿ= ಅವಿ= ಕುರಿ, ಕುರಿಗಳಿಂದ, ಗೋ= ಆಕಳು, ಆಕಳಿಂದ ಗಜ= ಆನೆಗಳು, ಆನೆಗಳಿಂದ ವ್ಯಾಘ್ರ= ಹುಲಿ ಜೀವರು, ಹುಲಿಗಳಿಂದ, ಸಿಂಹ= ಸಿಂಹ ಯೋನಿಯುಳ್ಳಿಸ್ಪ ಜೀವರು, ಈ ಪ್ರಾಣಿಗಳಿಂದ ಧೀ= ಬುದ್ಧಿಯುಳ್ಳ ಮಾನುಷ ಜೀವರು ಶೂದ್ರಾದಿ ಮೂವರು= ಶೂದ್ರ ಜೀವರು, ವೈಶ್ಯಜೀವರು, ಕ್ಷತ್ರಿಯ ಜೀ ಮೂರು ಜಾತಿಯ ಸಂಗಡಗಳು ಒಬ್ಬರಿಂದೊಬ್ಬರು ಅಧಿಕರು, ಇವರಿಂದ ಕರ್ಮಿಕರ ಭೂದೇವರುತ್ತಮ= ನಿತ್ಯ ಕರ್ಮಾಚರಣೆ ಸ್ನಾನ ಸಂಧ್ಯಾ ವಂದ ಮಹಾ ಯಜ್ಞ ಪಾಠ ಪ್ರವಚನ ಕರ್ಮವನ್ನು ಮಾಡತಕ್ಕ ಭೂ ದೇವರು= ಈ ಇಳಿಯ ದೇವತೆಗಳು ಬ್ರಾಹ್ಮಣರು ಉತ್ತಮರು, ಕರ್ಮಿಗಳೊಳಗಲು= ಕರ್ಮಾಧಿಕಾರಿಗಳಾದ ಬ್ರಾಹ್ಮಣರಕಿಂತಲೂ, ಕೋವಿದುತ್ತಮ= ಜ್ಞಾನಿಯು ಶ್ರೇಷ್ಠನು. ಕವಿಗಳಿಂದಲಿ= ಈ ಜ್ಞಾನಿಗಳಿಗಿಂತಲು, ಕ್ಷಿತಿಪರುತ್ತಮರು, ಮನುಷ್ಯ ರಾಜರುಗಳು ಶ್ರೇಷ್ಠರು. ಎಂದು ತಾರತಮ್ಯ ವಿವರ ಹೇಳಿದ್ದಾರೆ. ಮತ್ತು ಹಿಂದೆ ೧೯ನೇ ಸಂಧಿಯಲ್ಲಿ ಮಾನುಷೋತ್ತಮರೆಂದು ಅಷ್ಟೆ ಹೇಳಿರು ವರು. ಇಲ್ಲಿ ಮಾನುಷೋತ್ತಮ ಗಣನೆಯಲ್ಲಿ ತೃಣಾಂತ ಜೀವರಿರುವರೆಂದು ಈ ಆರೋಹಣ ತಾರತಮ್ಯದಲ್ಲಿ ವಿವರ ಸೂಚಿಸಿದ್ದಾರೆ.

**ಭಾವಸೂಚನ** ॥ ಈಗ್ಗೆ ದಾಸರು ಬಹು ಶುದ್ಧರಾಗಿ, ಶ್ರೀ ಶಾಸ್ತ್ರೋಕ್ತ ವಾದ ಬೃಹದ್ಗುಣ ತಾರತಮ್ಯಾದ್ರಿಗಳೇರಿಳಿದು, ತಮ್ಮಾಪ್ತ ಜನ ಬಹು ಶ್ರಾಂತರಾಗಲು, ಅವರನ್ನ ಶ್ರೀ ಹರಿ ಕರುಣಾತೀರ್ಥ ಸ್ನಾನ ಮಾಡಿಸಿ, ಹತ್ತೊಂಭತ್ತೊಂದು ಸೋಪಾನವುಳ್ಳ ಸಣ್ಣ ಪರ್ವತಾರೋಹಣಕ್ಕೆ ಸೂಚನ॥

**ಹರೀತಿ** ॥ ಕಮಲಾಪತಿದಾಸರಾಜಾಸ್ತು ಇತ್ಥಮೇವಾಹುಃ ॥

**ಭಾಮಿನಿ** ॥ ತಾರತಮ್ಯಗಳೇಕದಾ ಗುನ ।
(ವಾ) ಚಾರದಾದ ಪ್ರಯುಕ್ತ ಮನಸಿಗೆ ।
ಚಾರುತರ ಆರೋಹಣಾಖ್ಯ ಸುಸಂಧಿಯನು ರಚಿಸಿ ॥
ಸಾರಹೃದಯರು ನುಡಿದ ವಿವರದ ।
ಸಾರವರಿತನುರಾಗದಿಂದಲಿ ।
ಭಾರಿಭಾರಿಗೆ ಪಠಿಸೆ ಭವದಿಂದೂರರಾದೀರಿ—
(ಗುವಿರಿ) ॥೨೦॥

ಇತಿ ಭಕ್ತೇತಿ ದಿವ್ಯ ಪುರುಷಾಃ ॥ ಭಗವದ್ಭಕ್ತಾಃ ॥ ಆ ದಿವ್ಯ ಪುರುಷರು ಶಾಂಡಿಲ್ಯ ಮುನಿಗಳನ್ನು ಪೂಜಾ ಮಾಡಿ ತತ್ತ್ವೋಪದೇಶ ವಿಷಯದಲ್ಲಿ ಪ್ರಾರ್ಥಿಸಲು, ಅವರು ಉಪದೇಶ ಮಾಡಿದ್ದಾರೆ. ವಾಯು ಪುರಾಣದಲ್ಲಿ ॥ ಆ ಅರ್ಥವೇ ನಾವು ಮಹಾ ಗಹನಾರ್ಥವನ್ನು, ಗುರುಗಳು ಶಿಷ್ಯರಿಗೆ ಅವಗಾಹನಕ್ಕೆ ಬರದಿದ್ದರೆ "ವಕ್ತವ್ಯಂ ಬ್ರಹ್ಮ ಗುರುಣಾ ಚತುರ್ವಾದ ಮಿತ್ಯಾದಿ" ಪ್ರಮಾಣಾಭಿಜ್ಞರು ಹ್ಯಾಂಗೆ ಪ್ರಾಕೃತದಿಂದ ಪಾಠ ಹೇಳುತ್ತಾರೋ ಹಾಂಗೆ ಹೇಳುತ್ತೇವೆ ಇದು ಪ್ರಾಕೃತ ಮನಸ್ಸಿಗೆ ಬಾರದಿದ್ದರೆ ಪಾಠ ತಿಳಿಯುವದೂ ಇಲ್ಲ. ಶುದ್ಧ ಅನಾಗರಿಕರು ಅಂತ ಅರ್ಥ. ಈ ಅಭಿಪ್ರಾಯದಿಂದಾದರೂ, ಶಾಂಡಿಲ್ಯ ಹೇಳಿದೇತಿ ॥ ಈ ಪ್ರಮೇಯವ ನಾವು ಹೇಳುತ್ತೇನೇತಿ ಶೇಷಃ ॥ ಸ್ಥಾವರೇತಿ ॥ ಜಡಾ ॥ ಯಥಾಹ ಭಗವಾನ್ ಶಾಂಡಿಲ್ಯಃ ॥ ಪ್ರಥಮತೋ ಮೂಲತಾರತಮ್ಯಂ ॥ "ತತ್ರ ಸ್ಥಾವರಮುಕ್ತೇಭ್ಯೋ ವರಾ ಜಂಗಮಮುಕ್ತಿಗಾಃ ॥ ತೇಭ್ಯೋ ಮಾನುಷಮುಕ್ತಾಸ್ತು ತೇಭ್ಯೋ ಮುಕ್ತಾಃ ದ್ವಿಜಾಃ ಪರೇ (ರಾಃ) ॥೧॥ ತತ್ತ್ವೋಪದೇಶಕರ್ತಾರೋ ಮುಕ್ತಾಸ್ತೇಭ್ಯೋಧಿಕಾ ಮತಾಃ । ತೇಭ್ಯೋಧಿಕಾಸ್ತು ಭೂಪಾಲಾಃ ಮುಕ್ತಿಗಾಃ ಪರಿಕೀರ್ತಿತಾಃ ॥೨॥ ಅಧಿಕಾ ಪಿತರೋ ಭೂಪೈಃ ಮುಕ್ತಿಗಾಸ್ತೇಭ್ಯ ಏವ ಚ॥ ಋಷಯೋಪ್ಯಧಿಕಾಃ ಪ್ರೋಕ್ತಾಸ್ತೇಭ್ಯೋಪಿ ಕರ್ಮಜಾಃ ಪರೇ॥ ತೇಭ್ಯ (ಭ್ಯೋ) ಆಜಾನಜಾ ದೇವಾಃ ತೇಭ್ಯಸ್ಸಪ್ತರ್ಷಯಃ ಪರೇ ॥ ತೇಭ್ಯೋ ವಹ್ನಿಸ್ತತಃ ಸೂರ್ಯಃ ತಸ್ಮಾದ್ವಾಚಸ್ಪತಿಃ ಪರಃ ॥೪॥ ತಸ್ಮಾದಿಂದ್ರಃ ಪರೋ ಮುಕ್ತೋ ತಸ್ಮಾದ್ಗೌರೀ ತತೋ ಹರಃ ॥ ಹರಾದ್ಬುದ್ಧಿಸ್ತತೋ ಬ್ರಹ್ಮಾ ಮುಕ್ತಾ ಜೀವಾಧಿಕೋ ಮತಃ ॥೫॥ ಬ್ರಹ್ಮಣಃ ಪರಮತ್ಯಕ್ತಂ ತಸ್ಮಾದ್ವಿಷ್ಣು ರ್ಮಹಾಪ್ರಭುರಿತಿ ॥ ಅತ್ರೈವ ಪ್ರಕರಣೇ ಮುಕ್ತತಾರತಮ್ಯಂ ಚ ಬ್ರಹ್ಮಾದಿ ಮಾನುಷಾಂತಾಶ್ಚ ಜ್ಞೇಯಾಸ್ತರತಮಾಃಕ್ರಮಾತ್ ॥ಜ್ಞಾತೇ ತರತಮೇ ಭಾವೇ ವಿಷ್ಣೋರ್ಮಾಹಾತ್ಮ್ಯಮಂಜಸಾ॥ಜ್ಞಾಯತೇ ನಿಷ್ಫಲಂ ನೋ ಚೇತ್ ಸರ್ವಮೇತನ್ನಿರರ್ಥಕಮಿತಿ ಪ್ರತಿಜ್ಞಾಯ ಕೋರಶಾರ್ಯೇತ್ಯಾದಿಭ್ಯ ಏತೇಭ್ಯೋ ಭಗವಾನ್ ವಿಷ್ಣುರಿತ್ಯಂತೇನೋಚಿವಾನ್ ॥ (ಇವು ವಾಯು ಪುರಾಣ ಶ್ಲೋಕಗಳು) ಮೂವರು ॥ ಕ್ಷತ್ರಿಯ-ವೈಶ್ಯ-ಶೂದ್ರರು ॥೧॥

**ವಿಶೇಷ ಸೂಚನೆ ॥** ಸ್ಥಾವರ-ಕೇವಲ ಜಡವಸ್ತುಗಳೆಂದು ಈ ಪದ್ಯ ದಿಂದ ಭಾಸವಾಗುತ್ತದೆ. ಕೇವಲ ಜಡಗಳಲ್ಲಿ ಆನಂದಾನುಭವ ಇಲ್ಲದ ಕಾರಣ ಜಡಗಳಲ್ಲಿ ತಾರತಮ್ಯ ಇಲ್ಲ. ಜಡಜಡಗಳಲ್ಲಿ ಭೇದ ಮಾತ್ರ ಉಂಟು. ಸ್ಥಾವರರ ನೋಡಲ್ಕೆ ತೃಣ=ಇಲ್ಲಿ ತೃಣಾದಿ-ಲತಾ-ವೃಕ್ಷಾದಿ-ಸ್ಥಾವರ ಜೀವ ರೆಂದು ಅರ್ಥ ಮಾಡಬೇಕು. ತೃಣ ಜೀವಿಕಿಂತಲೂ, ಕ್ರಿಮಿ ಜಾತಿ ಜೀವ ರೆಂದು ಮುಂದೆ ಸರಿಯಾದ ಅರ್ಥವಿದೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ತಾರತಮ್ಯ ಬುದ್ಧೇಃ ಮುಕ್ತ್ಯಂತರಂಗತ್ವಾತ್ ತಸ್ಯಾಃ ಜಿಜ್ಞಾಸಾ ಸಾಧ್ಯತ್ವಾತ್ ತಸ್ಯಾಃ "ಇದಂ ಇತ್ಥಂ" ಇತಿ ಜ್ಞಾನ ಪ್ರಯೋಜನತ್ವಾತ್ ತಸ್ಯ ಚ ಬಹು ಸಂಶಯಾಕಾರಪೂರ್ಣತ್ವಾತ್ ತದ್ವರ್ಣನಸ್ಯ ಬಹುಮತ ವೇದನಸಾಧ್ಯತ್ವಾತ್ ತದರ್ಥಂ ಶಾಂಡಿಲ್ಯ ದಿವ್ಯ ಪುರುಷ ಸಂವಾದಸ್ಥಂ ಆತ್ಮಪ್ರೇಕ್ಷಾಬಲೇನ ರಹಸ್ಯಾನುವಾದಕಂ ಮತಂ, ತತಃ ಅಧುನಿಕ ಕೃಷ್ಣಾರ್ಯಮತಂ ಚ ಸುಸ್ನೇಹಾನುಗುಣಿತಮಾನಸೌ ಸುಜನರಂಜನೌ ಧೂತಾಂಜನೌ ನಂದಜೌ ಆವ (ಅವ) ಬದ್ಧಕರೌಃ ಶ್ರೀ ಕರೌ ಆದುದುಹತುಃ ಗೋಮಂತಂ ಯಥಾ ತದ್ವತ್ ಇಮೇ ತಾರತಮ್ಯ ಗೋತ್ರಂ ಆದುಹ್ಯ ಅತಿ ಶುಶುಭಾತೇ ಇತಿ ತದುಭಯಂ ಸೌಹಾರ್ದಾನುವಾದಾಯ "ಪೃಷ್ಟ್ವಾಂ ಪ್ರಶ್ನ ಗುರುಣಾ ಚತುರ್ವಾರಂ ಅಥಾಪಿ ವಾ" । ಆಚಾರ್ಯ (ಆರ್ಯ) ಪ್ರಣಾದಿ ಕಯಾ ಸಂಧಿಂ ಆರಭತೇ ಪೂಜ್ಯಚರಣೋತ್ತಂಸಃ "ಹರಿ" ಇತಿ ॥

ನನು ಕ ಏತೇ ದಿವ್ಯಪುಮಾಂಸಃ? ದಿವ್ಯತ್ವವ್ಯಾವರ್ತ್ಯದಿವ್ಯತಾ ಚ ಅರ್ವಾಕ್ ಕಾ ಆಸೀತ್? ಕುತಸ್ತರಾಂ ಪರಸ್ತಾತ್? ಕುತಸ್ತರಾಂ ಸಮಾಗನುಃ ಭಗವತಃ ಮುನೇಃ ಶಾಂಡಿಲ್ಯಸ್ಯ? ಇತಿ ಚೇತ್—ಸಂವಾದ ಭೂಮಿಃ ಪ್ರದರ್ಶ್ಯತೇ ತಾವತ್ ಈಷತ್ ॥ ತಥಾ ಹಿ—ವಾಯುಪುರಾಣೇ ಮಾಘಮಾಹಾತ್ಮ್ಯೇ ನವಮಾಧ್ಯಾಯಾಂತೇ ಚ ।

"ಮಾಘೇ ಮಾಸಿ ಜಲಸ್ಪರ್ಶಾತ್ ಮುಚ್ಯಂತೇ ಗತಕಲ್ಮಷಾಃ ॥ ಯಥಾಽಪ್ಯಪಿರಂತಿಃ ಪುರಾ ಪಿಶಾಚಾಃ ಪುರೋಹಿತಾಃ" ॥ ಪುನಃ ನಾರದ

ಪ್ರಶ್ನೇ ಕಂಜಜಃ ಬಭಾಷೇ–"ಪ್ರಾ ತು ಚಾಕ್ಷುಷಾಂತರೇ ದ್ವಾಪರಾದೌ ವಿಶಾಲಾಯಾಂ ನಾರಾಯಣಾಶ್ರಮೇ ಜಾಬಾಲಿಸುಕುಮಾರೌ ನಾಮತಃ ಸುಯಜ್ಞಃ ವಿದ್ಯಾರ್ಥೀ ಸುಮನಾಃ ಅಷ್ಟವಾರ್ಷಿಕಃ ಶಾಂಡಿಲ್ಯಂ ಗುರುಂ ಉಪಸಸಾರ ॥ ತತ್ರ ದಶವರ್ಷಾಣಿ ಅವಾತ್ಸೀತ್ ॥ ಏಕದಾ ಸಮಿತ್ ಕುಶಾ ನಯನೇ ನಿಯುಕ್ತಃ ಗುರುಣಾ ಅಟವೀಂ ಯಯೌ ॥ ತತ್ರ ತಾವತ್ ಗಗನಚುಂಬಿನಂ ಅಶ್ವತ್ಥಂ ಅದ್ರಾಕ್ಷೀತ್ ॥ ತಸ್ಮಾತ್ ಸಪ್ತ ಬ್ರಹ್ಮರಾಕ್ಷಸಾಃ ಸಮುತ್ಪೇತುಃ ॥ ದೃಷ್ಟ್ವಾ ಪ್ರಾಚೀಂ ಮದ್ರುವೇ ॥ ಅನುಜಗ್ಮುಃ ತೇ ॥ ತತಃ ಮಾರ್ಗರೋಧೇ ದಕ್ಷಿಣಾಂ ಆಶಾಂ ಜಗಾಮ ॥ ತತ್ರ ವಟಾತ್ ಸಪ್ತ ಆಪೇತುಃ॥ ತತಃ ಪ್ರತೀಚೀ ಪಲಾಯನೇ ಯೋಜನಾಯಾಮಶಾಲ್ಮಲೀತಃ ಆಗತ ಸಪ್ತ ಕೂಷ್ಮಾಂಡಭೀತಃ ಸಪ್ತಡಾಕಿನೀವಶಂ ಪ್ರಪೇದೇ ॥ ತತಃ ಉದೀಚ್ಯಾಂ ॥ ತತ್ರ ವೃಕ್ಷಾತ್ ವಾಮಗತಾ ತತಃ ಈಶಾನ್ಯಾಂ ಶಾಕಿನೀಸ್ಥಾಃ ತ್ರಯಃ ಆಸೇದುಃ ॥ ಆಗ್ನೇಯ್ಯಾಂ ಔದುಂಬರಾತ್ ದ್ವೌ ಆಸೇದಿವಾನ್ ॥ ಸ್ವಂ ಬುಭುಕ್ಷೂನ್ ನಿರೀಕ್ಷ್ಯ ವ್ಯಥಯಾ ಕೃಪಾಲುಂ ಹರಿಂ ಈ(ಏ)ಯಿವಾನ್॥ ಶುಶ್ರುವೇ ಚ ಅಶರೀರವಾಚಮ್ । ಆಕರ್ಣ್ಯ ಚ ನದ್ಯಾಂ ನಿಮಜ್ಯ ಉಕ್ತ ರೀತ್ಯಾ ನೃಸಿಂಹಮಂತ್ರಂ ಜಜಾಪ । ನ್ಯಷಿಂಚಚ್ಚ ತೇಷು ಮಂತ್ರಿತಾಂಬು ॥ ತತಃ ಅಷ್ಟಾವಿಂಶತಿಗ್ರಹಾಃ ಸ್ವಾವಸ್ಥಾಂ ಆಪ್ಯ ಉದ್ಧಾರೇ ಕೃತಾಶ್ಯೋಚ್ಚಾ ರಾಃ ವಿಜ್ಞಾಪಯಾಂಚಕ್ರಿರೇ ॥ ತತಃ ಪೌರ್ಣಿಮಾಸ್ನಾನಫಲೇನ ಗೋತ್ರೋ ಚ್ಚಾರಪೂರ್ವಕಂ ದತ್ತೇನ ಪ್ರಾಕ್ತನಾನ್ ವಿಸೃಜ್ಯ ಅಷ್ಟವಿಂಶತಿ ದಿವ್ಯದೇಹಾಃ ಭೂತ್ವಾ ಉದ್ಧರ್ತ್ರಾ ಸಾಕಂ ಆಯಯುಃ ಶಾಂಡಿಲ್ಯಮ್ ॥ ತಂ ಮಹಾತ್ಮಾನಂ ಪಪ್ರಚ್ಛುಃ ಮುನಿಪುಂಗವಮ್ ॥ "ತದ್ವಚಃ ಸ ಸಮಾಕರ್ಣ್ಯ ತಾನ್ ಉವಾಚ ಮಹಾಮುನಿಃ ॥" ಇತಿ ಪ್ರಸಕ್ತಾ ಕಥಾ ॥

"ಮುಕ್ತ" ಇತಿ ॥ "ಬ್ರಹ್ಮಾದಿಮಾನುಷಾಂತಃ ಚ ಜ್ಞೇಯಃ ತರತಮಃ ಕ್ರಮಾತ್॥ ಜ್ಞಾತೇ ತರತಮೇ ಭಾವೇ ವಿಷ್ಣೋಃ ಮಾಹಾತ್ಮ್ಯಂ ಅಂಜಸಾ॥ ಜ್ಞಾಯತೇ ನಿಖಿಲಂ ವಕ್ತುಂ ತಸ್ಮಾತ್ ಏತತ್ ನಿಶಮ್ಯತಾಮ್ ॥ ಕೋಶಶೌರ್ಯಾನ್ವಯಃ ಪುತ್ರದೇಹದಾರ್ಢ್ಯಯುತಸ್ಯ ಚ । ಸಪ್ತ ದ್ವೀಪವತೀಭರ್ತುಃ ಯತ್ ಸುಖಂ ಜಾಯತೇಽತುಲಮ್ ॥ ಸ ಏಕಃ ಮಾನುಷಾನಂದಃ ಮೋಕ್ಷೇ ತು ಪ್ರತಿಪದ್ಯತೇ ॥ ತಸ್ಮಾತ್

ಶತಗುಣಾನಂದಃ ಮಹೀಶಾನಾಂ ನಿಗದ್ಯತೇ ॥ ತಸ್ಮಾತ್ ಶತಗುಣಾ ನಂದಃ ಗಂಧರ್ವಾಃ ಮಾನುಷಾತ್ಮಕಃ ॥ ತಸ್ಮಾತ್ ಶತಗುಣಾನಂದಃ ಗಂಧರ್ವಃ ದೇವಸಂಜ್ಞಕಃ ॥ ತಸ್ಮಾತ್ ಶತಗುಣಾನಂದಃ ಭವೇತ್ ಪಿತೃಗಣಸ್ಯ ತು ॥ ಪಿತೃಭ್ಯಶ್ಚ ಶತಾನಂದಃ ಕರ್ಮಜಾನಾಂ ಇತೀರಿತಮ್ ॥ ಕರ್ಮಜೇಭ್ಯಃ ಶತಾನಂದಾಃ ಮುಕ್ತಾಃ ಆಜಾನಜಾಃ ಸುರಾಃ ॥ ಆಜಾನಜೇಭ್ಯಃ ಧನಪ ವಿಷ್ವಕ್‌ಸೇನಗಣಾಧಿಪಾಃ ॥ ಶತಾನಂದಾಃ ತತಃ ತೇಭ್ಯಃ ಋಷಯಃ ತೇಭ್ಯ ಏವ ಚ ॥ ಶತಾನಂದಾಃ ತು ನಿರ್ದಿಷ್ಟಾಃ ಭೃಗುವಹ್ನಿಪ್ರಸೂತಯಃ॥ ತೇಭ್ಯಸ್ತು ನಾರದಃ [illegible] ಶತಾನಂದಃ ತಥೈವ ಚ ॥ ಚಂದ್ರಸೂರ್ಯೌ ಮಾನವೀ ಚ ಯಮವಾಯೂ ತಥೈವ ಚ ॥ ಶತಾನಂದಾಃ ತತಃ ದಕ್ಷ[illegible]ಣೌ ಮನುರೇವ ಚ ॥ ರತಿಶಚ್ಯನಿರುದ್ಧಾಶ್ಚ ಶತಾನಂದಾಃ ತತಃ ಪರಮ್ ॥ ಶತಾನಂದೌ ಇಂದ್ರಕಾಮೌ ತತಸ್ತ್ವುಮಾ ಚ ವಾರುಣೀ ॥ ಸೌಪರ್ಣೀ ಚ ಶತಾನಂದಾಃ ವೀಂದ್ರಾಹೀಂದ್ರಮೃಡಾಃ ತತಃ ॥ ಶತಾನಂದಾಃ ತತಃ ಬುದ್ಧಿಃ ಗೀಶ್ಚ ತಾಭ್ಯಾಂ ತತಃ ಪರೌ॥ ವಿಧಿಸೂತ್ರೌ ಶತಾನಂದೌ ಲಕ್ಷ್ಮೀಃ ಕೋಟಿಗುಣಾಧಿಕಾ ॥ ಏತೇಭ್ಯಃ ಭಗವಾನ್ ವಿಷ್ಣುಃ ಅನಂತಗುಣವಾನ್ ವಿಭುಃ॥“ ಇತಿ ॥

ಅಥ ಮುಕ್ತತಾರತಮ್ಯಂ ಭಿನ್ನಪ್ರಕರಣೇ (ಪ್ರಕರಣಾಂತರೇ) “ವೃಕ್ಷಾದಿ ಜಾತಿಃ ಜೀವಾನಾಂ ಸಾ ನಿತ್ಯೈವ ಯತಸ್ತತಃ ॥ ಮುಕ್ತಿಂ ತೇನೈವ ರೂಪೇಣ ಯಾಂತಿ ತೇ ಕಾಮರೂಪಿಣಃ ॥ ಸಂಸೃತಾ ಅನ್ಯಥಾಭಾವಃ ತೇಷಾಂ ತನುಭೃತಾಂ ಕಿಲ॥ ತತ್ರ ಸ್ಥಾವರಮುಕ್ತೇಭ್ಯಃ ಪರಾಃ ಜಂಗಮಮುಕ್ತಿಗಾಃ ॥ ತೇಭ್ಯಃ ಮಾನುಷಮುಕ್ತಾಶ್ಚ ತೇಭ್ಯಃ ಮುಕ್ತಾಃ ದ್ವಿಜಾಃ ಪರಾಃ । ತತ್ತ್ವ[illegible]ಕರ್ತಾರಃ ಮುಕ್ತಾಃ ತೇಭ್ಯಃ ಅಧಿಕಾಃ ಮತಾಃ । ತೇಭ್ಯೋಽಧಿಕಾಸ್ತು ಭೂಪಾಲಾಃ ಮುಕ್ತಿಗಾಃ ಪರಿಕೀರ್ತಿತಾಃ ॥ ಭೂಪೇಭ್ಯಃ ಪಿತರಃ ಮುಕ್ತಾಃ ಹ್ಯಧಿಕಾಃ ತೇಭ್ಯ ಏವ ಚ । ಋಷಯಃ ಅಭ್ಯಧಿಕಾಃ ಪ್ರೋಕ್ತಾಃ ತೇಭ್ಯಃ [illegible] ಕರ್ಮಜಾಃ ಪರೇ । ತೇಭ್ಯಃ ಆಜಾನಜಾಃ ದೇವಾಃ ತೇಭ್ಯಃ ಸಪ್ತರ್ಷಯಃ ಪರೇ ॥ ತೇಭ್ಯಃ ವಹ್ನಿಃ ತತಃ ಸೂರ್ಯಃ ತಸ್ಮಾತ್ ವಾಚಸ್ಪತಿಃ ಪರಃ । ತಸ್ಮಾದಿಂದ್ರಃ ಪರಃ ಮುಕ್ತಃ ತಸ್ಮಾತ್ ಗೌರೀ ತತಃ ಪರಃ ।

ಹರಾತ್ ಬುದ್ಧಿಃ ತತಃ ಬ್ರಹ್ಮಾ ಬ್ಯಕ್ತೌ ಜೀವಾಧಿಕೋ ಮತಃ ॥ ಬ್ರಹ್ಮತಃ ಪರಂ ಅವ್ಯಕ್ತಂ ತಸ್ಮಾತ್ ವಿಷ್ಣುಃ ಮಹಾ ಪ್ರಭುಃ ॥" ಇತಿ ಚ ॥

ಆಜಾನಜಕರ್ಮವಿಷಯೇ ವಿರೋಧೇ ಅಪಿ ತೈತ್ತಿರೀಯಭಾಷ್ಯರೀತ್ಯಾ ಯಥಾಯೋಗ್ಯಾನ್ವಯ ಇತಿ ತದ್ದೀಪಿಕೋಕ್ತಕ್ರಮಂ ಬ್ರೂತೇ–"ಮುಕ್ತಾ ಮುಕ್ತ" ಇತಿ ॥ ಆರೋಹಪೂರ್ವಕತ್ವಾತ್ ಅವರೋಹಸ್ಯ ಇತಿ ನಿರೂಪಾರ್ಹತ್ವೇಪಿ ವಿಶೇಷಃ ಉಕ್ತಃ ಕೃಷ್ಣಾಚಾರ್ಯೈಃ ॥

ಯತಃ ಸರ್ವಾಧಿಕತ್ವೇನ ಜ್ಞೇಯಃ ವಿಷ್ಣುಃ ಮುಮುಕ್ಷುಭಿಃ ॥ ಅತಃ ಸರ್ವಂ ನಿರೂಪ್ಯೈವ ಸರ್ವಾಧಿಕ್ಯಂ ಪ್ರಕಾಶ್ಯತೇ ॥

ಸರ್ವಾನಿಷ್ಟೈಕ ಪಾತ್ರತ್ವಾತ್ ಕಲಿಃ ಸರ್ವಾಧಮಾಧಮಃ ॥ ಯತಃ ಶುಭವಿರುದ್ಧೋಸೌ ಸ್ವಾಮೇಧ್ಯಾದಪ್ಯಧೋ ಮತಃ ॥ ತತಃ ಶುಭ ಫಲಾಲ್ಪತ್ವಾತ್ ಪ್ರೈತ್ಯಾಃ ಪ್ವಸ್ಯೇ ತತೋಽಧಿಕಾಃ ॥ ಇಷ್ಟಾನಿಷ್ಟವಿದೂರತ್ವಾತ್ ತತಃ ಶ್ರೇಷ್ಠಂ ಜಡಂ ಮತಮ್ ॥ ಇಷ್ಟಯೋಗಾತ್ ತತಃ ಶ್ರೇಷ್ಠಃ ನಿತ್ಯಸಂಸಾರಿಣಾಂ ಗಣಃ ॥ ಅನಿಷ್ಟಯೋಗಸ್ಯ ಭಾವಾತ್ (ಸದ್ಭಾವಾತ್) ಮುಕ್ತಿಯೋಗ್ಯಾತ್ ಅಧಶ್ಚರಃ ॥ ಮುಕ್ತಿಯೋಗ್ಯಾಃ ತತಃ ಶ್ರೇಷ್ಠಾಃ ಇತಿ ಕಿಂ ವಾಚ್ಯಂ ಅಂಜಸಾ॥ ಪೂರ್ಣಾಭಿಲಷಿತೇಷ್ಟತ್ವಾತ್ ಅನಿಷ್ಟಾತಿವಿದೂರತಃ ಮೋಕ್ಷಯೋಗ್ಯೇಷು ಜೀವೇಷು ತೃಣಜೀವೋಽಂತ್ಯ ಇತಿ ಇಷ್ಯತೇ" ॥ಇತಿ॥ ಅತ ಆಹ "ಸ್ಥಾವರರ" ಇತಿ ॥ "ಸ್ಥಾವರಂ" ಜಡಮ್ ॥ "ತತಃ ವೃಕ್ಷಾಃ ತತಃ ಲತಾಃ" ಇತಿ ॥ ತತಃ ವೃಕ್ಷಾದಯಃ ಶ್ರೇಷ್ಠಾಃ ಸ್ಥಾವರಾಃ ನಿಜ ತಾಪತಃ"॥ ಇತ್ಯುಕ್ತೇಃ ॥ ತತಃ ಜಂಗಮ ಜೀವಾಸ್ತು ಶ್ರೇಷ್ಠಾ । ಪಶ್ವಾದಯಃ ಮತಾಃ ॥ "ಗಳಿಂದ" ಇತ್ಯತ್ರ "ಗಳು" "ಇವುಗಳಿಂದ" ಇತಿ ವಿವೇಕೇನ ಯೋಜ್ಯಮ್ ॥ "ಮೂವರು" "ಶೂದ್ರ ವೈಶ್ಯಕ್ಷತ್ರಿಯಾ" ಇತಿ ಉತ್ತರ ಕ್ರಮಾತ್ ಪರಸ್ಪರಮ್ ॥ ತತಃ ಶ್ರೇಷ್ಠಾಃ ವರ್ಣಬಾಹ್ಯಾಃ ತತಃ ಶ್ರೇಷ್ಠಾಃ ನರೋತ್ತಮಾಃ ॥ ವರ್ಣಾಶ್ರಮ ವಿಭೇದೇನ ತೇ ಸರ್ವೇಪಿ ಚತುರ್ವಿಧಾಃ ॥" ಇತಿ ॥ ತತ್ರಾಪಿ ವಿಶೇಷಂ ಅಭ್ಯುಪೇತ್ಯ ಅತ್ರಾಪಿ ವೈಲಕ್ಷಣ್ಯಂ ಅಭ್ಯುಪೈತಿ ॥ ಶೂದ್ರೇಭ್ಯಃ ವೈಶ್ಯಜೀವಾಸ್ತು ಶ್ರೇಷ್ಠಾಃ ತೇಭ್ಯಃ ತಥೋತ್ತಮಾಃ ॥ ಕ್ಷತ್ರ ಜೀವಾಃ ತತಃ ಶ್ರೇಷ್ಠಾಃ ಬ್ರಾಹ್ಮಣಾಃ ಪರಿಕೀರ್ತಿತಾಃ ॥ "ಉತ್ತಮ"

ಇಸಿದಂದ ॥ "ನ ತಾದೃಶೀ(ಶಃ) ಸ್ಯಾತ್" ಇತ್ಯುಕ್ತೇಃ ಅತ—"ಕೋಟಿದಾ ಇತಿ ॥ "ಉತ್ತಮಃ" ಶತಗುಣೈಃ ॥ "ಏತೇಭ್ಯಃ ನೃಪಶ್ರೇಷ್ಠಾಸ್ತು ಭೂಪಾಃ ಶತಗುಣೋತ್ತಮಾಃ॥" ಇತಿ ॥ ೧ ॥

## ಕನ್ನಡಾರ್ಥ

ತಾರತಮ್ಯಜ್ಞಾನವು ಮೋಕ್ಷದ ಅಂತರಂಗ ಸಾಧನವಾಗಿರುತ್ತದೆ. ಅದು ವಿಚಾರದಿಂದ ಬರುತ್ತದೆ. ತಾರತಮ್ಯ ವಿಚಾರದಿಂದ "ಇದು ಇಂಥದು. ಇವರ ಯೋಗ್ಯತೆಯು ಇಷ್ಟು" ಎಂಬ ಜ್ಞಾನವು. ಗೆ ಉಚಿತವಾದ ಯೋಗ್ಯಸ್ವರೂಪದ ಜ್ಞಾನವು ಬರಬೇಕಾದರೆ ಆ ಬಗ್ಗೆ ಇರುವ ಸಂಶಯಗಳು ನಿರಾಸವಾಗಬೇಕು. ಮತ್ತು ಬಹಳ ಮತಗಳ ಜ್ಞಾನವಿದ್ದು ಯುಕ್ತಾಯುಕ್ತ ವಿಚಾರವಾದನಂತರ ಆ ಸಂಶಯಗಳು ಅಳಿಯುವವು. ಹೀಗೂ ತಾರತಮ್ಯ ಜ್ಞಾನವು ನಿಶ್ಚಯರೂಪವಾಗಿ ಹುಟ್ಟಿ ದೃಢವಾಗುತ್ತದೆ. ಇದರಿಂದ ತಾರತಮ್ಯದ ಬಗ್ಗೆ ದೃಢ ನಿಶ್ಚಯರೂಪವಾದ ಜ್ಞಾನವು ಅಧಿಕಾರಿಗಳಿಗೆ ಉದಯವಾಗಬೇಕೆಂಬ ಉದ್ದೇಶದಿಂದ ಶ್ರೀಮದಾಚಾರ್ಯರು "ಗುರುಗಳು ಯೋಗ್ಯ ಶಿಷ್ಯನಿಗೆ ವೇದಾದಿಶಾಸ್ತ್ರಗಳನ್ನು ನಾಲ್ಕು ಸಲ ಅಥವಾ ಅವರ ಯೋಗ್ಯತೆಗೆ ತಕ್ಕಂತೆ ಒಂದು ಸಲವಾದರೂ ಉಪದೇಶಿಸಬೇಕು." ಎಂದು ಹೇಳಿರುವದನ್ನು ಅನುಸರಿಸಿ ಈ ಸಂಧಿಯನ್ನು ಶ್ರೀ ಪೂಜ್ಯರಲ್ಲಿ ಶ್ರೇಷ್ಠರಾದ ಶ್ರೀದಾಸರಾಯರು ಪ್ರಾರಂಭಿಸಿರುತ್ತಾರೆ, "ಹರಿ" ಎಂಬ ಪಲ್ಲವಿಯಿಂದ. ಸುಜನ ರಂಜನರೂ, ಪಾಪರಹಿತರೂ ಆದ ಕೃಷ್ಣಬಲರಾಮರು ಸುಸ್ನೇಹಮಯ ಅಂತಃಕರಣದಿಂದ ಒಮ್ಮನಸ್ಸಿನವರಾಗಿ ಗೋಮಂತ ಪರ್ವತವನ್ನು ಆರೋಹಣ ಮಾಡಿ(ಹತ್ತಿ) ಮೆರೆಯುತ್ತಿರುವರು. ಶ್ರೀ ಶಾಂಡಿಲ್ಯ ದಿವ್ಯಪುರುಷ ಸಂವಾದದಲ್ಲಿರುವ ರಹಸ್ಯ ವಿಷಯಗಳನ್ನು ಅನುವದಿಸುವ ಅವರ ಅಭಿಪ್ರಾಯವೂ ಆಧುನಿಕರಾದ ಶ್ರೀ ಕೃಷ್ಣಾಚಾರ್ಯರ ಅಭಿಪ್ರಾಯವೂ ಸಮಾನ ವಿಷಯಕವಾಗಿರುತ್ತದೆ. ಭಿನ್ನಾಬಿಪ್ರಾಯವು ಅವರಲ್ಲಿ ಇರುವುದಿಲ್ಲ. ಒಮ್ಮತದಿಂದ ಉಭಯ ಮತಗಳು ತಾರತಮ್ಯ ಪರ್ವತವನ್ನು ಆರೋಹಣ ಮಾಡಿ ಮೆರೆಯುವವು. ಅಂದರೆ ಶ್ರೀಕೃಷ್ಣ ಬಲರಾಮರಲ್ಲಿ ಗೋಮಂತವನ್ನು ಆರೋಹಿಸಿದಾಗ ಒಮ್ಮನಸ್ಸಿನ ಅನುರಾಗ ಭಾವವಿರುವಂತೆ ಉಭಯ ಗ್ರಂಥಗಳಲ್ಲಿ

ಸಖ್ಯೈಕಮತ್ಯ-ಸೌಹಾರ್ದವಿರುವುದು." ಎಂದು ಭಾವ. ಈ ಸಂಧಿಯಲ್ಲಿ ಈ ಸೌಹಾರ್ದವನ್ನು ನೋಡಬಹುದು.

ಈ ದಿವ್ಯಪುರುಷರು ಯಾರು? ದೇವತಾಸ್ವಭಾವವು ಪ್ರಾದುರ್ಭಾವವಾಗುವ ಪೂರ್ವದಲ್ಲಿ ಅವರಿಗೆ ಇದ್ದ ಅವಸ್ಥೆಯು ಯಾವದು? ಮುಂದೆ ಆ ಅವಸ್ಥೆಯು ಬಂದುದು ಹೇಗೆ? ಭಗವಾನ್ ಶಾಂಡಿಲ್ಯ ಮುನಿಗಳ ಸಮಾಗಮವು ಅವರಿಗೆ ಹೇಗೆ ಆಯಿತು? ಈ ಸಂಶಯುಗಳು ಉದಯಿಸುವುವು. ಆದುದರಿಂದ ಇವುಗಳನ್ನು ನಿವಾರಿಸಲು ವಾಯು ಪುರಾಣದ ಮಾಘಮಾಸ ಮಾಹಾತ್ಮ್ಯೆಯಲ್ಲಿರುವ ಒಂಭತ್ತನೆಯ ಅಧ್ಯಾಯದ ಕೊನೆಯಲ್ಲಿರುವ ಈ ಸಂವಾದದ ಸಂದರ್ಭವನ್ನು ಸ್ವಲ್ಪಮಟ್ಟಿಗೆ ತೋರಿಸುತ್ತೇವೆ.

"ಮಾಘಮಾಸದಲ್ಲಿ ಜಲಸ್ಪರ್ಶದಿಂದ ಪಾಪಗಳನ್ನು ಕಳೆದುಕೊಂಡು ಮುಕ್ತರಾಗುತ್ತಾರೆ. ಇದರಲ್ಲಿ ಇಷ್ಟತ್ತೇಟು ಪಿಶಾಚಗಳು ದೃಷ್ಟಾಂತವಾಗಿರುತ್ತವೆ." ಎಂದು ಪ್ರಸಕ್ತವಾಗಲು ನಂತರ ನಾರದರು ಮತ್ತೆ ಪ್ರಶ್ನೆಯನ್ನು ಮಾಡಲು ಬ್ರಹ್ಮದೇವರು ಅದೆಲ್ಲವನ್ನೂ ಉತ್ತರಿಸುತ್ತಾರೆ. ಅದರ ಸಾರಾಂಶ:—

ಪೂರ್ವದಲ್ಲಿ ಚಾಕ್ಷುಷ ಮನ್ವಂತರದ ದ್ವಾಪರ ಯುಗದ ಆದಿಭಾಗದಲ್ಲಿ ವಿಶಾಲಾ (ಬದರೀ) ಕ್ಷೇತ್ರದಲ್ಲಿರುವ ನಾರಾಯಣಾಶ್ರಮದಲ್ಲಿ "ಸುಯಜ್ಞ" ಎಂಬ ಹೆಸರಿನ ಎಂಟುವರ್ಷದ ಒಳ್ಳೆಯ ಮನಸ್ಸಿನ ಬಾಲಕನಿದ್ದನು. ಅವನು ಜಾಬಾಲಿಯ ಮಗನು. ಅವನು ಅಲ್ಲಿ ಇರುವ ಶಾಂಡಿಲ್ಯ ಮುನಿಗಳ ಬಳಿಗೆ ಓದಲು ಬಂದನು. ಗುರುಸೇವೆಯೊಂದಿಗೆ ಶಾಸ್ತ್ರಾಭ್ಯಾಸಂಗವನ್ನು ಮಾಡುತ್ತ ಹತ್ತು ವರ್ಷಗಳವರೆಗೆ ಇರುವಾಗ ಒಂದು ದಿವಸ ಗುರುಗಳ ಅಪ್ಪಣೆಯ ಮೇರೆಗೆ ಸಮಿಧೆ ದರ್ಭೆ ಮುಂತಾದವುಗಳನ್ನು ತರಲು ಅಡವಿಗೆ ಹೋಗಿದ್ದನು. ಆ ಅಡವಿಯಲ್ಲಿ ಮುಗಿಲನ್ನು ಮುಟ್ಟುವ ಅತ್ಯುನ್ನತವಾದ ಅಶ್ವತ್ಥ(ಅರಳಿಯ) ಮರವನ್ನು ಅವನು ಕಂಡನು. ಕೂಡಲೇ ಆ ಮರದಿಂದ ಏಳು (೭) ಬ್ರಹ್ಮರಾಕ್ಷಸಗಳು ಹೊರಬಿದ್ದವು. ಅವುಗಳನ್ನು ನೋಡಿದೊಡನೆಯೇ ಆ ಬಾಲಕನು (ಸುಯಜ್ಞನು) ಪೂರ್ವ ದಿಕ್ಕಿಗೆ ಓಡತೊಡಗಿದನು. ಬ್ರಹ್ಮರಾಕ್ಷಸಗಳು ಅವನನ್ನು ಬೆನ್ನಟ್ಟಿ ಮಾರ್ಗವನ್ನು ನಿರೋಧಿ

[illegible] ಅವನು ದಕ್ಷಿಣದಿಕ್ಕಿಗೆ ಧಾವಿಸಿದನು. ಆಗ ಅಲ್ಲಿರುವ ಬಿಳಿಯ ಮರದ ಮೇಲಿರುವ ಮತ್ತೆ ಏಳು ರಾಕ್ಷಸಗಳು ಅವನಿಗೆ ಎದುರುಬಂದು ಭಯ ಗೊಳಿಸಿದವು. ನಂತರ ಬಾಲಕನು ಪಶ್ಚಿಮಕ್ಕೆ ಓಡುತ್ತಿರುವಾಗ ಯೋಜನಾ ಯಾಮವಾದ (ಅಷ್ಟು ದಪ್ಪ ಹಾಗೂ ಉನ್ನತ) ಶಾಲ್ಮಲೀ ಮರದಿಂದ ಏಳು ಕೂಷ್ಮಾಂಡ ಪಿಶಾಚಗಳಿಂದ ಹೆದರಿದನು. ಹಾಗು ಏಳು ಡಾಕಿನೀ ಎಂಬ ಪಿಶಾಚಗಳ ಕೈಯಲ್ಲಿ ಸಿಕ್ಕಿಬಿದ್ದನು ಉತ್ತರದಿಕ್ಕಿನಲ್ಲಿ ೨, ಈಶಾನ್ಯದಲ್ಲಿ ೩, ಔದುಂಬರ ಗಿಡದಿಂದ ಆಗ್ನೇಯದಲ್ಲಿ ೨ ಹೀಗೆ ಏಳು ಶಾಕಿನೀ ಪಿಶಾಚಗಳ ಕೈಯಲ್ಲಿ ಸಿಕ್ಕಿಬಿದ್ದನು. ಹೀಗೆ ೨೮ ರಾಕ್ಷಸಗಳು ತನ್ನನ್ನು ತಿನ್ನುವವೆಂಬ ಭೀತಿಯಿಂದ ಆ ಬಾಲಕನು ಶ್ರೀಹರಿಯನ್ನು ಮರೆಹೊಕ್ಕು ಭಕ್ತಿಯಿಂದ ಸ್ತುತಿಸಿದನು. ಆಗ ಆಕಾಶವಾಣಿಯಾಯಿತು. ಅದನ್ನು ಕೇಳಿ, ಅದರಂತೆ ನದಿಯಲ್ಲಿ ಸ್ನಾನ ಮಾಡಿ, ಉಪದೇಶಾನುಸಾರವಾಗಿ, ಶ್ರೀನೃಸಿಂಹ ಮಂತ್ರ ವನ್ನು ಜಪಿಸಿ, ಆ ಜಪಾಭಿಮಂತ್ರಿತವಾದ ಉದಕವನ್ನು ಅವುಗಳಿಗೆ ಸಿಂಪಡಿಸಿ ದನು. ಕೂಡಲೇ ಆ ೨೮ ಗ್ರಹಗಳು ತಮ್ಮ ನಿಜವಾದ ಸ್ಥಿತಿಯನ್ನು ಹೊಂದಿ ತಮ್ಮ ತಮ್ಮ ಹೆಸರು ಮುಂತಾದವುಗಳನ್ನು ಹೇಳಿ, ಉದ್ಧಾರ ಮಾಡ ಬೇಕೆಂದು ಆ ಬಾಲಕನನ್ನು ಬೇಡಿಕೊಂಡವು. ಆಗ ಪೌರ್ಣಿಮೆಯ ಸ್ನಾನದ ಫಲವನ್ನು ಅವುಗಳಿಗೆ ಗೋತ್ರ ಮುಂತಾದುವುಗಳ ಉಚ್ಚಾರ ಪೂರ್ವಕವಾಗಿ ಕೊಟ್ಟನು. ಆಗ ಆ ಫಲದಿಂದ ಅವರು ಹಿಂದಿನ ಪಿಶಾಚ ದೇಹಗಳನ್ನು ಕಳೆದುಕೊಂಡು, ದೇವ ಶರೀರಗಳನ್ನು ಧರಿಸಿ ಆ ಬಾಲಕ ನೊಡನೆ ಶಾಂಡಿಲ್ಯ ಮುನಿಗಳ ಬಳಿಗೆ ಬಂದರು. ಮತ್ತೆ ಅವರನ್ನು ಕೆಲವು ಪ್ರಶ್ನೆಗಳನ್ನು ಕೇಳಿದರು. ಆಗ ಶಾಂಡಿಲ್ಯ ಮುನಿಗಳು ಅವರಿಗೆ ಹೇಳಲು ಉಪಕ್ರಮಿಸಿದರು. ಇದು ಪೂರ್ವದಲ್ಲಿ ನಡೆದ ಕಥಾಸಂದರ್ಭ.



ಮುಕ್ತಾಮುಕ್ತ ತಾರತಮ್ಯ ಜ್ಞಾನದ ವಿಷಯದಲ್ಲಿ ಪ್ರಮಾಣಗಳನ್ನು ಉದಾಹರಿಸುತ್ತಾರೆ.

ಬ್ರಹ್ಮದೇವರನ್ನಾರಂಭಿಸಿ ಮಾನುಷರವರೆಗೆ ಇರುವ ತರತಮಭಾವ ವನ್ನು ಕ್ರಮದಿಂದ ತಿಳಿದುಕೊಳ್ಳಬೇಕು. ತರತಮ ಭಾವವನ್ನು ತಿಳಿದು ಕೊಂಡನಂತರ ವಿಷ್ಣುವಿನ ಸರ್ವೋತ್ತಮತ್ವವನ್ನು ತಿಳಿದುಕೊಳ್ಳುತ್ತಾನೆ. ಆದುದರಿಂದ ತಾರತಮ್ಯವನ್ನು ಹೇಳಲು ಉಪಕ್ರಮಿಸುತ್ತೇವೆ. ಇದನ್ನು

ಶ್ರವಣ ಮಾಡಬೇಕು. ಧನ ಸಂಪತ್ತಿ ಕೋಶ, ಶೌರ್ಯ, ವಯಸ್ಸು, ಮಕ್ಕಳು ದೇಹದಾರ್ಢ್ಯ ಮುಂತಾದ ಸಮಗ್ರ ಭೋಗಸಾಮಗ್ರೀ ಸಂಪನ್ನನಾದ ಸಪ್ತ ದ್ವೀಪ ಸಹಿತ ಭೂಮಿಯ ಸಾರ್ವಭೌಮ ಚಕ್ರವರ್ತಿಗೆ ಆಗುವ ಅಪರಿಮಿತ ಆನಂದಕ್ಕೆ ಮುಕ್ತಿಯಲ್ಲಿಯ ಮಾನುಷರ ಒಂದು ಆನಂದವು ಸಮಾನ ವಾಗಿರುತ್ತದೆ. ಈ ಮುಕ್ತಿಯಲ್ಲಿರುವ ಮಾನುಷರ ಒಂದು ನೂರು ಆನಂದ ಗಳಿಗೆ ಮಹೀಶರ (ರಾಜರ) ಒಂದು ಆನಂದವು ಸಮವಿರುತ್ತದೆ. ಅವರ ನೂರು ಆನಂದಗಳಿಗೆ ಮನುಷ್ಯ ಗಂಧರ್ವರ ಒಂದು ಆನಂದವು ಸಮ ವಿರುತ್ತದೆ. ಮನುಷ್ಯಗಂಧರ್ವರ ನೂರು ಆನಂದಗಳಿಗೆ ದೇವಗಂಧರ್ವರ ಒಂದು ಆನಂದವು ಸರಿ ಇರುತ್ತದೆ. ದೇವಗಂಧರ್ವರ ನೂರು ಆನಂದಗಳಿಗೆ ಪಿತೃಗಣದ ಒಂದು ಆನಂದವು ಸರಿಯಿರುತ್ತದೆ. ಪಿತೃಗಣದ ನೂರು ಆನಂದ ಗಳಿಗೆ ಆಜಾನಜ ದೇವತೆಗಳ ಆನಂದವು ಸರಿಯಿರುತ್ತದೆ.

ಆಜಾನಜ ದೇವತೆಗಳ ನೂರು ಆನಂದಗಳಿಗೆ ಕುಬೇರ, ವಿಷ್ವಕ್ಸೇನ ವಿಘ್ನೇಶ (ಗಣೇಶ) ರುಗಳ ಒಂದು ಆನಂದವು ಸರಿಯಿರುತ್ತದೆ. ಇವರ ನೂರು ಆನಂದಗಳಿಗೆ ಋಷಿಗಳ ಒಂದು ಆನಂದವು ಸರಿ ಯಿರುತ್ತದೆ. ಋಷಿಗಳ ನೂರು ಆನಂದಗಳಿಗೆ ಭೃಗು-ಅಗ್ನಿ ಪ್ರಸೂತಿಗಳ ಒಂದು ಆನಂದವು ಸರಿಯಿರುತ್ತದೆ. ಇವರ ನೂರು ಆನಂದಗಳಿಗೆ ನಾರದ-ವರುಣ ಚಂದ್ರ ಸೂರ್ಯ ಮಾನವೀ (ಶತರೂಪಾ) ಇವರುಗಳ ಒಂದು ಆನಂದವು ಸರಿ. ಇವರ ಆನಂದಗಳ ನೂರು ಪಟ್ಟು ಅಧಿಕ ಆನಂದವು ದಕ್ಷ-ಬೃಹಸ್ಪತಿ, ಸ್ವಾಯಂಭುವಮನು, ರತಿ, ಶಚಿ, ಅನಿರುದ್ಧ, ಇವರಿಗೆ ಇರುತ್ತದೆ. ಇವರ ನೂರು ಪಟ್ಟು ಅಧಿಕ ಆನಂದವುಳ್ಳವರು ಇಂದ್ರಕಾಮರು. ಇಂದ್ರ ಕಾಮರುಗಳಿಂದ ನೂರು ಪಟ್ಟು ಆನಂದವುಳ್ಳವರು ಉಮಾ ವಾರುಣೀ, ಸೌಪರ್ಣೀ, ದೇವಿಯರುಗಳು. ಇವರಿಂದ ನೂರು ಮಡಿ ಅಧಿಕ ಆನಂದ ವುಳ್ಳವರು ಗರುಡ, ಶೇಷ ರುದ್ರರು, ಇವರಿಂದ ನೂರು ಮಡಿ ಅಧಿಕ ಆನಂದವುಳ್ಳವರು ಭಾರತೀ ಸರಸ್ವತೀ ದೇವಿಯರು. ಅವರಿಗಿಂತ ನೂರು ಮಡಿ ಅಧಿಕಾನಂದವುಳ್ಳವರು ಬ್ರಹ್ಮವಾಯುದೇವರುಗಳು, ಬ್ರಹ್ಮವಾಯು ಗಳಿಂದ ಕೋಟಿ ಗುಣಗಳಿಂದ ಅಧಿಕಾನಂದವುಳ್ಳವರು ಶ್ರೀ ಮಹಾ ಲಕ್ಷ್ಮೀ ದೇವಿಯವರು. ಇವರೆಲ್ಲರಿಗಿಂತಲೂ ಅನಂತಾನಂತ ನಿರವಧಿಕ ಗುಣಗಳಿಂದ

ಅಧಿಕಾಧಿಕತಮನು ಶ್ರೀ ಹರಿಯು." ಎಂದು ಮುಕ್ತ ತಾರತಮ್ಯದಲ್ಲಿ ಪ್ರಮಾಣವಿರುತ್ತದೆ.

ಮತ್ತೊಂದು ಪ್ರಕರಣದಲ್ಲಿಯೂ ಮುಕ್ತತಾರತಮ್ಯವನ್ನು ಹೀಗೆ ನಿರೂಪಿಸಿರುತ್ತಾರೆ.

"ಜೀವರಿಗೆ ವೃಕ್ಷ ಮುಂತಾದ ಸ್ವಭಾವ ಸ್ವರೂಪ ಜಾತಿಗಳು ನಿತ್ಯವಾಗಿರುವದರಿಂದ ಆ ಸ್ವರೂಪ ಜಾತಿಗಳಿಂದ ಸಹಿತವಾಗಿಯೇ ಕಾಮರೂಪಿಗಳಾದರೂ ಮುಕ್ತಿಯನ್ನು ಹೊಂದುತ್ತಾರೆ. ಯಾಕಂದರೆ ಸಂಸಾರಾವಸ್ಥೆಯಲ್ಲಿ ಅವರಿಗೆ ಅನ್ಯಥಾರೂಪವು ಬಂದಿರುತ್ತದೆ. ಹೀಗಿರುವಾಗ—ಸ್ಥಾವರ ಮುಕ್ತರಿಗಿಂತ ಜಂಗಮ (ಸಂಚಾರವುಳ್ಳ) ಮುಕ್ತರು ಶ್ರೇಷ್ಠರು. ಅವರಿಂದ ಮುಕ್ತ ಮನುಷ್ಯ ಜೀವರು ಶ್ರೇಷ್ಠರು. ಇವರಿಂದ ಮುಕ್ತದ್ವಿಜರು ಶ್ರೇಷ್ಠರು. ಅವರಲ್ಲಿ ಮುಕ್ತರಾದ ತತ್ತ್ವೋಪದೇಶಕರು (ಬ್ರಾಹ್ಮಣರು) ಶ್ರೇಷ್ಠರು. ಇವರಿಗಿಂತ ಮುಕ್ತರಾಜಗಣ ಜೀವರು ಶ್ರೇಷ್ಠರು. ಮುಕ್ತರಾಜರಿಂದ ಮುಕ್ತ ಪಿತೃಗಳು ಶ್ರೇಷ್ಠರು. ಅವರಿಂದ ಋಷಿಗಳು ಶ್ರೇಷ್ಠರು. ಮುಕ್ತರ್ಷಿಗಳಿಂದ ಮುಕ್ತಕರ್ಮಜ ದೇವತೆಗಳು ಶ್ರೇಷ್ಠರು. ಅವರಿಂದ ಆಜಾನಜ ದೇವತೆಗಳು ಶ್ರೇಷ್ಠರು. ಅವರಿಂದ ಸಪ್ತರ್ಷಿಗಳು ಶ್ರೇಷ್ಠರು. ಅವರಿಗಿಂತ ಅಗ್ನಿ, ಅಗ್ನಿಗಿಂತ ಸೂರ್ಯ, ಸೂರ್ಯನಿಂದ ಬೃಹಸ್ಪತಿ ಶ್ರೇಷ್ಠ, ಬೃಹಸ್ಪತಿಯಿಂದ ಮುಕ್ತ ಇಂದ್ರ, ಮುಕ್ತ ಇಂದ್ರನಿಂದ ಮುಕ್ತ ಗೌರೀ, ಮುಕ್ತ ಗೌರಿಯಿಂದ ಮುಕ್ತ ಹರ. ಮುಕ್ತ ಹರನಿಂದ ಮುಕ್ತ ಸ್ವರಸ್ವತೀ, ಮುಕ್ತ ಸರಸ್ವತಿಯಿಂದ ಮುಕ್ತ ಚತುರ್ಮುಖನು ಶ್ರೇಷ್ಠನು. ಬ್ರಹ್ಮನಿಂದ ನಿತ್ಯ ಮುಕ್ತಳಾದ ರಮಾದೇವಿಯು ಶ್ರೇಷ್ಠಳು. ನಿತ್ಯ ಮುಕ್ತಳಾದ ರಮಾದೇವಿಗಿಂತ ಶ್ರೀ ಮಹಾನಾರಾಯಣನು ಅತ್ಯಂತ ಅಪರಿಮಿತ ಮಿಗಿಲೆನಿಸಿದವನು" ಎಂದು.

ಆಜಾನಜ ಕರ್ಮದೇವತೆಗಳ ವಿಷಯದಲ್ಲಿ ತುಸು ವಿರೋಧವು ತೋರಿ ಬರುತ್ತಿದ್ದರೂ ಅದನ್ನು ತೈತ್ತರೀಯ ಭಾಷ್ಯದಲ್ಲಿ ಹೇಳಿದಂತೆ ಯಥಾಯೋಗ್ಯವಾಗಿ ಅನ್ವಯಿಸಿ ಪರಿಹರಿಸಬೇಕು" ಎಂದು ದೀಪಿಕೆಯಲ್ಲಿ ಹೇಳಿದ ಕ್ರಮವನ್ನು ಹೇಳುತ್ತಾ "ಮುಕ್ತಾಮುಕ್ತ" ಎಂಬುದಾಗಿ.

"ಆರೋಹಣದ ಮೊದಲು ಅವರೋಹಣ;" ಹೀಗೆ ಇರುವದರಿಂದ ನಿರೂಪಣಕ್ರಮವಿದ್ದರೂ ಕೃಷ್ಣಾಚಾರ್ಯರು ವಿಶೇಷವನ್ನು ಇಲ್ಲಿ ನಿರೂಪಿಸಿದ್ದಾರೆ.

ಮುಮುಕ್ಷುಗಳು "ಸರ್ವರಿಂದಲೂ ಅತ್ಯಂತ ಅಧಿಕನು ನಾರಾಯಣನು" ಎಂದು ತಿಳಿಯಲೇಬೇಕು. ಆದುದರಿಂದ ಕೆಳಗಿನವರನ್ನಾರಂಭಿಸಿ, ಮೇಲೆ ಮೇಲಿನವರನ್ನು ನಿರೂಪಿಸಿ ಕೊಟ್ಟು ಕೊನೆಗೆ ವಿಷ್ಣುವನ್ನು ನಿರೂಪಿಸಿದರೆ ಶ್ರೀ ವಿಷ್ಣುವಿಗೆ ಸರ್ವೋತ್ತಮತ್ವವು.

ಕಲಿಯು ಸಕಲ ಅನಿಷ್ಟ (ದುಃಖ) ಗಳಿಗೆ ಮುಖ್ಯ ಪಾತ್ರನಾದುದರಿಂದ ಎಲ್ಲರಿಂದಲೂ ಅತ್ಯಂತ ಅಧಮಾಧಮನು. ಯಾಕಂದರೆ ಶುಭ ಫಲದಿಂದ ಸ್ವಭಾವದಿಂದಲೇ ಅವನಿಗೆ ವಿರೋಧವಿರುತ್ತದೆ. ಮತ್ತು ಅವನು ತನ್ನ ಪುರೀಷಕ್ಕಿಂತಲೂ ಅಧಮನು." ಎಂದು ಪ್ರಮಾಣ ಪ್ರಸಿದ್ಧಿಯಿರುತ್ತದೆ. ಅಶುಭ ಫಲವು ಸ್ವಲ್ಪ ಇರುವದರಿಂದ ಮಿಕ್ಕ ದೈತ್ಯರು ಅವನಿಗಿಂತ ಅಧಿಕರು, ಇಷ್ಟ–ಅನಿಷ್ಟಗಳೆರಡೂ ಇಲ್ಲದಿರುವದರಿಂದ ಜಡಗಳು ಈ ಕಲಿ ಮುಂತಾದ ದೈತ್ಯ ಜೀವರಿಗಿಂತ ಶ್ರೇಷ್ಠರು. ನಿತ್ಯ ಸಂಸಾರಿಗಳಿಗೆ ಮಿಶ್ರ ಸುಖವೆಂಬ ಇಷ್ಟವೂ ಇರುವದರಿಂದ ಅವರು ಜಡಗಳಿಗಿಂತ ಅಧಿಕರು. ಆದರೆ ನಿತ್ಯ ಸಂಸಾರವೆಂಬ ಅನಿಷ್ಟವಿರುವುದರಿಂದ ಅವರು ಮುಕ್ತಿಯೋಗ್ಯ ಸುಜೀವರಿಗಿಂತ ಕಡಮೆಯವರು. "ನಿತ್ಯ ಸಂಸಾರಿಗಳಿಗಿಂತ ಮುಕ್ತಿಯೋಗ್ಯರು ಅಧಿಕರು." ಎಂದು ಬೇರೆ ಹೇಳುವ ಕಾರಣವಿಲ್ಲ. ಮುಕ್ತಿಯೋಗ್ಯರಿಗೆ ಮುಕ್ತಿಯಲ್ಲಿ ಇಷ್ಟ ಪ್ರಾಪ್ತಿಯೂ, ಅನಿಷ್ಟ ನಿವೃತ್ತಿಯೂ ಆಗುತ್ತದೆ.

"ಮುಕ್ತಿಯೋಗ್ಯ ಜೀವರಲ್ಲಿ ತೃಣಜೀವರುಗಳು ಅತ್ಯಂತ ಕಡಮೆಯವರು." ಎಂದು ಹೇಳಲಾಗಿರುತ್ತದೆ.

ಈ ವಚನಗಳಿಗೆ ಅನುಸಾರವಾಗಿ ತಾರತಮ್ಯವನ್ನು ಆರೋಹಣಕ್ರಮದಿಂದ ನಿರೂಪಿಸುತ್ತಾರೆ—"ಸ್ಥಾವರ" ಎಂಬ ಪದ್ಯದಿಂದ.

"ಸ್ಥಾವರರು ನಿಂತಲ್ಲಿಯೇ ನಿಂತಿರುವದರಿಂದ ಅವರಿಗೆ ಸುಖಪ್ರಾಪ್ತಿಯು ಕಡಮೆ. ಹಾಗೂ ಸಂಸಾರದಲ್ಲಿ ದುಃಖವು ಹೆಚ್ಚಾಗುವುದರಿಂದ ಅವರು

ಕಡಮೆಯುವರು." ಎಂಬ ಪ್ರಮಾಣಗಳಿಗನುಸಾರವಾಗಿ "ಸ್ಥಾವರ" ಎಂಬು ದಾಗಿ ಹೇಳಿರುತ್ತಾರೆ.

"ಅವರಿಗಿಂತ ಪಶು ಮುಂತಾದ ಚರಜೀವರು ಶ್ರೇಷ್ಠರು." ಎಂಬ ವಚನಾನುಸಾರವಾಗಿ "ಅವಿಗೋಗಜ" ಎಂದು ಹೇಳಿದ್ದಾರೆ. "ಸಿಂಹಗಳು" "ಸಿಂಹಗಳಿಂದ" ಹೀಗೆ ಬೇರೆ ಬೇರೆಯಾಗಿ ಒಡೆದು ಪದಗಳನ್ನು ಅನ್ವಯಿಸ ಬೇಕು. "ಮೂವರು"–ಎಂದರೆ "ಶೂದ್ರ–ವೈಶ್ಯ ಕ್ಷತ್ರಿಯರು" ಎಂದು ಅರ್ಥ ವನ್ನು ಹಿಂದೆ ಹೇಳಿದಂತೆ ತಿಳಿಯಬೇಕು. ವರ್ಣಬಾಹ್ಯರು ಪಶ್ವಾದಿಗಳಿಂದ ಅಧಿಕರು ; ಅವರಿಂದ ಕಾರ್ಮಿಕರಾದ, ವರ್ಣಿಗಳಾದ ಶೂದ್ರ ಮುಂತಾದವರು ಕ್ರಮದಿಂದ ಅಧಿಕರಾಗಿರುತ್ತಾರೆ. ಅವರಿಂದ ಶ್ರೇಷ್ಠರು ಬ್ರಾಹ್ಮಣರು. ಬ್ರಾಹ್ಮಣರಲ್ಲಿ "ಕೋವಿದರು" ಶ್ರೇಷ್ಠರು ; "ಕೋವಿದರಿಗೆ ಸದೃಶರು ಸಿಗುವ ದಿಲ್ಲ" ಎಂದು ಉಕ್ತವಾಗಿರುತ್ತದೆ. "ಕೋವಿದ-ಕರಿಗಳಿಂದ ಕ್ಷಿತಿಪರು ನೂರು ಗುಣದಿಂದ ಉತ್ತಮರು" ಎಂದು ಈ ಪದ್ಯದ ಭಾವ ॥ ೧ ॥

ಅವತರಣಿಕಾ :— ಮನುಜರಾಜರಿಂದಾರಂಭಿಸಿ. ಚಿರಪಿತೃಗಳವರೆಗೆ ಉತ್ತಮತ್ವವೂ ತಾರತಮ್ಯವೂ ಹೇಳಲ್ಪಡುತ್ತದೆ. ಈ ಉತ್ತಮತ್ವವು ಹಿಂದಿನ ಸಂಧಿಯಲ್ಲಿ ಹೇಳಿದ ಗುಣತಾರತಮ್ಯ ಆರೋಹಣ ಕ್ರಮದಿಂದ ತಿಳಿಯುವದು.

**ಧರಣಿಪರ ನೋಡಲ್ಕೆ ನರ ಗಂ ।**
**ಧರುವರುತ್ತುಮ ದೇವ ಗಂಧ ।**
**ರ್ವರ ಗಣೋತ್ತಮರಿವರಿಗಿಂದ ಶತೋನ ಶತಕೋಟಿ ॥**
**ಪರಮ ಋಷಿಗಳು ಅಪ್ಸರ ಸ್ತ್ರೀ ।**
**ಯರು ಸಮಾನರು ಇವರಿಗಿಂದಲಿ ।**
**ಚಿರ ಪಿತೃಗಳುತ್ತಮರು ಚಿರನಾಮಕ ಪಿತೃಗಳಿಂದ ॥ ೨ ॥**

ಪದ್ಯಾರ್ಥ :— ಧರಣಿಪರ ನೋಡಲ್ಕೆ = ಮಾನುಷ ಚಕ್ರವರ್ತಿಗಳನ್ನು ನೋಡಲಿಕ್ಕಾಗಿ ಇವರಿಗಿಂತಲೂ ನರಗಂಧರ್ವರುತ್ತಮ = ಮನುಜ ಗಂಧ ರ್ವರು ಉತ್ತಮರು. ಇವರಿಗಿಂತಲೂ, ದೇವ ಗಂಧರ್ವರ ಗಣೋತ್ತಮ = ದೇವತೆಗಳ ಸಭೆಯಲ್ಲಿ ಗಾಯಕರಾದ ದೇವಗಂಧರ್ವರ ಸಮೂಹವು ಉತ್ತ ಮರು ಅಧಿಕರು. ಇವರಿಗಿಂದ = ದೇವ ಗಂಧರ್ವರಿಗಿಂತಲೂ, ಶತೋನ

ಶತಕೋಟಿ, ಪರಮ ಋಷಿಗಳು=ನೂರು ಕಡಮೆ ನೂರು ಕೋಟಿ ಋಷಿಗಳು, ಪರಮ ಉತ್ತಮರು, ಈ ಋಷಿಗಳಿಗೆ ಅಪ್ಸರಸ್ತ್ರೀಯರು ಸಮಾನರು=ಸಮವಾಗಿ ಸಾಧನವುಳ್ಳವರು, ಇವರಿಗಿಂದಲಿ ಈ ಋಷ್ಯಾದಿಗಳು ಅಪ್ಸರಸ್ತ್ರೀಯರಿಗೆ. ಚಿರಪಿತೃಗಳುತ್ತಮರು=ಚಿರಪಿತೃಗಳ ಗಣವೆಂದು ಇರುವವು ಈ ಚಿರಪಿತೃಗಳು, ಉತ್ತಮರು=ಅಧಿಕರು. "ಈ ಚಿರನಾಮಕ ಪಿತೃಗಳಿಂದ" ಈ ವಾಕ್ಯ ಮುಂದಿನ ಪದ್ಯದಲ್ಲಿ ಸಮನ್ವಯವಾಗಿದೆ.

**ಭಾವಸೂಚನ** ॥ ಧಂಣೀತಿ ॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಧರಣಿ" ಇತಿ ॥ "ಉತ್ತಮು"–ಇವರಿಂದ ॥ "ತೇಭ್ಯಃ ಮಾನುಷ ಗಂಧರ್ವಾಃ ಶ್ರೇಷ್ಠಾಃ ಶತಗುಣೇನ ತು ॥ ತೇಭ್ಯಃ ಶತಗುಣಾತ್ ಶ್ರೇಷ್ಠಾಃ ಗಂಧರ್ವಾ ದೇವಸಂಜ್ಞಕಾಃ ॥ ಅಷ್ಟೋತ್ತರಶತಾಸ್ತ್ಯೇ ಚ" ಇತಿ ॥ "ಶತೋನ" ಇತಿ ॥ "ಮುನಯೋಽತ್ರ ಪರಿಗ್ರಾಹ್ಯಾಃ ಶತೋನಶತಕೋಟಯಃ ॥" ಇತಿ "ಅಂತರ್ದರ್ಶಿನಃ ಶೇಷಾ ಋಷಯಃ ತು ಆಜಾನಾಪೇಕ್ಷಯಾ ಶತಗುಣಾಧಮಾಃ॥" ಇತಿ ಮತ್ಯೈಕದೇಶಾಭಿಪ್ರಾಯೇಣ ॥ ಯದ್ವಾ—ಮೂಲವತ್ ಯಥಾಯೋಗ್ಯಂ ಅನ್ವಯಃ ॥ ತಥೈವ ಉಪಸಂಹಾರಾತ್ ॥ ೨ ॥

## ಕನ್ನಡಾರ್ಥ

ರಾಜರುಗಳಿಂದ ಮನುಷ್ಯ ಗಂಧರ್ವರು ಶ್ರೇಷ್ಠರು; ಅವರಿಗಿಂತ ದೇವ ಗಂದರ್ವರು ನೂರು ಗುಣಗಳಿಂದ ಶ್ರೇಷ್ಠರು. ಮತ್ತು ನೂರೆಂಟು ಬೇರೆ ದೇವತೆಗಳು ಎಂದೂ ಹೇಳಲಾಗಿರುತ್ತದೆ. ನೂರು ಕಡಮೆ ಒಂಬತ್ತು ಕೋಟಿದೇವಋಷಿಗಳು. ಇವರಿಗಿಂತ (ದೇವ ಗಂಧರ್ವಗಣದಿಂದ) ಉತ್ತಮರು" ಎಂದು ಪ್ರಮಾಣವಿರುತ್ತದೆ. "ಅಂತರ್ದರ್ಶಿಗಳಾದ ಋಷಿಗಳು ಆಜಾನದೇವತೆಗಳಿಗಿಂತ ಶತಾಧಮರು; ಎಂಬ ಏಕದೇಶಿಮತವನ್ನು ಅನುಸರಿಸಿ ಹೀಗೆ ಹೇಳಿರುತ್ತಾರೆ. ಅಥವಾ ಮೂಲದಂತೆ ಇದ್ದಕ್ಕಿದ್ದಂತೆಯಾದರೂ ಯೋಚಿಸಬಹುದು ॥ ೨ ॥

ಅವತರಣಿಕಾ :—ಈ ಪದ್ಯದಲ್ಲಿ ಚಿರಪಿತೃಗಳಿಂದ ಋಷಿಗಳು ತುಂಬು ರಾದಿಗಂಧರ್ವರು ಅಪ್ಸರೆಯರು ಆಜಾನಜ ದೇವತೆಗಳು; ೧೬೦೦೦ ಗೋಪಿಕಾ ಸ್ತ್ರೀಯರು ಉತ್ತಮರೆಂದು ವಿವರಿಸುತ್ತಾರೆ (ಸಾಮೂಹಿಕತ್ವೇನ).

**ಎರಡಯಿದು ಯೆಂಭತ್ತು ಋಷಿ ತುಂ ।**
**ಬರಶತೋರ್ವಶಿ ಅಪ್ಸರ ಸ್ತ್ರೀ ।**
**ಯರು ಶತಾಜಾನಜರು ಉತ್ತಮರು ಚಿರಪಿತೃಗಳಿಂದ ॥**
**ವರರು ಊರ್ವಶಿಗಿಂದ ವೈಶ್ವಾ ।**
**ನರನ ಸುತರೀರೆಂಟು ಸಾವಿರ ।**
**ಹರದಿಯರೊಳುತ್ತಮ ಶತೇರೆಪ್ಪತ್ತುನಾಲ್ಕು ಜನ ॥೬॥**

**ಪದ್ಯಾರ್ಥ** :—ಚಿರನಾಮಕ ಪಿತೃಗಳಿಂದ, ಎರಡೈದು ಎಂಭತ್ತು ಋಷಿ=ಎರಡೈದು ೨×೫=೧೦ ಮತ್ತು ಎಂಭತ್ತು ಕೂಡಿದರೆ ತೊಂಭತ್ತು ಜನ ಋಷಿಗಳು. ಮೇಲೆ ೧೬, ೧೮ನೇ ಕಕ್ಷದಲ್ಲಿ ಬಂದವರು ಬಿಟ್ಟು ತುಂಬು ರಾದಿ ೧೦೦ ಜನ ಗಂಧರ್ವರು, ಅಪ್ಸರಸ್ತ್ರೀಯರು ಶತ=ಊರ್ವಶಿ ಮೊದ ಲಾದ ೧೦೦ ಜನ ಅಪ್ಸರ ಸ್ತ್ರೀಯರು, ಆಜಾನಜರು, ದೇವಕುಲದಲ್ಲಿ ಜಾತರಾದ ದೇವ ಭೃತ್ಯರು. ಊರ್ವಶಿಗಿಂದ=ಊರ್ವಶ್ಯಾದಿ ಅಪ್ಸರ ಸ್ತ್ರೀಯರಿಗಿಂತಲೂ, ವೈಶ್ವಾನರನ ಸುತರೀರೆಂಟುಸಾವಿರ=ಅಗ್ನಿಪುತ್ರರಾದ ಕೃಷ್ಣನಿಂದ ವಿವಾಹಿತರಾದ ಹದಿನಾರು ಸಾವಿರ ಸ್ತ್ರೀಯರು ಉತ್ತಮರು, ಹರದಿಯರೊಳುತ್ತಮ=ಈ ಕೃಷ್ಣಾಂಗ ಸಂಗಿಗಳಾದ ಅವಿವಾಹಿತ ಅನ್ಯ ಉದ್ವಾಹಿತ ಸ್ತ್ರೀಯರೊಳಗೆ, ಶತೇರೆಪ್ಪತ್ತುನಾಲ್ಕು ಜನ ಉತ್ತಮರು= ಶತೇರ್ವಾದಿ, ೭೪ ಜನರು, ಇವರಲ್ಲಿ ಉತ್ತಮರೆಂದು ಸಾಮೂಹಿಕವಾಗಿ ಹೇಳಿದ್ದಾರೆ,

**ಪ್ರಮಾಣ** ॥ ದೇವಗಂಧರ್ವಪ್ರೇಷ್ಯಾಃ । ದೇವರ್ಷಿ ಪುತ್ರಪೌತ್ರಾಶ್ಚ ಸಭಾರ್ಯಕಾಃ ಸದಾ ಸವರ್ಗಕಾಶ್ಚ ದೇವಋಷೀತ್ವೇನ ಸಮ್ಮತಾಃ । ಉಕ್ತಾ ನ್ವಿನಾ ಪಿತೃಭ್ಯೋ ಅಪರಾಃ ಸಾಂಶಾಃ ॥ ಶತೋನಶತಕೋಟಿ ಋಷಯಃ ಪ್ರತೀಕಾಲಂಬಾಃ (ಸ್ಕಾಂದತತ್ತ್ವನಿರ್ಣಯೇ)

**ಆಜಾನಜಾ** ॥ ದೇವಭೃತ್ಯಾಃ ನಾಮವಿಶೇಷೈಃ ವೇದೇ ಅನಾಖ್ಯಾತಾಃ ದೇವಕುಲೇ ಜಾತಾಶ್ಚ ದೇವಸರ್ಗಶ್ಚಾಷ್ಟವಿಧವಿಬುಧಾಃ (ವಿವಿರ ಹೇಳುತ್ತಾರೆ) ಪಿತರೋಽಸುರಾಃ ॥ ಗಂಧರ್ವಾಪ್ಸರಸಃ ಸಿದ್ಧಾಃ ಯಕ್ಷರಕ್ಷಾಂಸಿ ಚಾರಣಾಃ ॥ ಭೂತಪ್ರೇತಪಿಶಾಚಾಶ್ಚ ವಿದ್ಯಾಧ್ರಾಃ ಕಿನ್ನರಾ ಗುಹ್ಯಕಾದಯಃ॥ ಪಿತೄಣಾಂ ಶತಮೇವಾತ್ರ ಅಸುರಾಃ ತ್ರಿಂಶದೇವ ಚ ॥ ಗಂಧರ್ವಾಪ್ಸರಾಸಾಂ ಚೈವ ದ್ವಿಶತಂ ಪರಿಕೀರ್ತಿತಂ ॥ ಸಪ್ತತಿರ್ಯಕ್ಷರಕ್ಷಸ್ತು ತ್ರಿಂಶಚ್ಚಾರಣಜಾತಿಷು ॥ ಶತಂ ಸಿದ್ಧಾಸ್ತಥಾನ್ಯಾಸು ಸಪ್ತತಿಸ್ಸರ್ವಜಾತಿಷು ॥ ವೈಕಾರಿಕೇಷು ದೇವೇಷು ಏತೇ ವೈ ಮುಗ್ಧಯೋನಯಃ॥ (ಇದೆ ಆಜಾನಜ ದೇವತೆಗಳ ವಿವರ) ಪಾವಕ ವ್ಯತಿರಿಕ್ತ ಶತೋತ್ತರಷೋಡಶಸಂಖ್ಯಾಕಾ ಅಗ್ನಿಪುತ್ರಾಃ ಶ್ರೀಕೃಷ್ಣಪತ್ನ್ಯಃ ॥ ಕಶೇರುನಾಮ್ನಾ ಜಾತೋಽಗ್ನಿಪುತ್ರಃ ಪ್ರಧಾನಃ ಏತಾಭ್ಯಃ ಕೃಷ್ಣೋದ್ವಾಹಿತಗೋಪ್ಯಃ ಅನ್ಯೋದ್ವಾಹಿತಾ ಅಪಿ ಶ್ರೀ ಕೃಷ್ಣ ಭಕ್ತಾ ಗೋಪ್ಯಃ ೨ (ಅಂಶಾಗುಣಾಧಮಾಃ) ಇತಿ ॥ ತಾರತಮ್ಯ ಪ್ರಕಾಶಿಕಾ ॥ ಈ ಎಲ್ಲ ವಿವರ ವನ್ನು ಮುಂದೆ ೩೨ನೇ ಸಂಧಿ ಕಕ್ಷಾ ತಾರತಮ್ಯದಲ್ಲಿ ಪದ್ಯ ೪೬-೪೭-೪೮ ೪೯ರಲ್ಲಿ ದಾಸರಾಯರು ವಿಸ್ತಾರವಾಗಿ ಬಣ್ಣಿಸಿದ್ದಾರೆ. ಮೂಲ ಶ್ಲೋಕ ೩೨ನೇ ಸಂಧಿಯಲ್ಲಿ ನೋಡುವದು.

**ಭಾವಸೂಚನ** ॥ ಎರಡೇತಿ ॥೩॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

ಪಿತೃಭ್ಯಃ ಊರ್ವಶ್ಯಾದಿಭ್ಯಃ ಅಪಿ ರಮಾವೇಶೇತ್ ವರಾಃ॥ "ಹರದೀಸ್ತ್ರೀ" ॥ ನನು ಋಷಿಭ್ಯಃ ಉತ್ತಮತ್ವೇ ಚಿರಪಿತೄಣಾಂ ಕಿಂ ಮಾನಮ್ ? ಇತಿ ಚೇತ್ ನ ॥ ತೇಭ್ಯಸ್ತು ಚಿರಸಂಜ್ಞಕಾಃ ॥ ಪಿತರಃ ಶತತಃ ಶ್ರೇಷ್ಠಾಃ ಪಿತೄಣಾಂ ಸಪ್ತಕಂ ವಿನಾ ॥" ಇತ್ಯುಕ್ತೇಃ ॥

ನನು ತುಂಬುರಾದೇಃ ಆಜಾನಜತ್ವಂ ಕಥಂ ಚೇತ್? ಇತ್ಥಮ್-ಇದಮಪಿ ಏಕದೇಶಮತವಿವಕ್ಷಯಾ ॥ ಅತ್ರ ಕೇಚಿತ್–"ನಿರುಕ್ತಾಜಾನ ದೇವತಾಃ ॥ ತುಂಬುರ್ವಾಪಿ ಶತಂ ಚೈವ ಊರ್ವಶ್ಯಾದ್ಯಪ್ಸರಃಶತಮ್ ॥ ನಾರದಾದೀನ್ ಉಚಥ್ಯಾಂತಾನ್ ವಿನೋಕ್ತಾ ಋಷಯೋಽಖಿಲಾಃ ॥ ಆಜಾನಜದೇವಾಃ" ॥ ಇತಿ ॥ ವಿಶೇಷಸ್ತು ವಿವೃತೌ ॥ ಆಜಾನಾನಾಂ ಏತತ್ಸಮ್ ಕರ್ಮಜದೇವವತ್

ನಾಮಭಿಃ ಅನಾಖ್ಯಾತಾಃ ॥ ಜಾತಾಃ ದೇವಕುಲೇ ಭಿನ್ನಾಃ ವಿಬುಧಾದ್ಯಾಃ ॥ ತೃತೀಯ ಭಾಗವತಗಾಃ ॥ ವೈಶ್ವಾನರೋತ್ಪತ್ತಯಃ ಆಜಾನಸಮಾನಾಃ ಕುತಃ? ಚೇತ್—"ಅಗ್ನಿಪುತ್ರಾಃ ಪೂರ್ವಂ ತಪೋಬಲಾತ್ ಸ್ತ್ರೀತ್ವಂ ಸಮಾಗತಾಃ॥ಪಶ್ಚಾತ್ ಸಂಗಮಾಕಾಂಕ್ಷಯಾ ಹರೇಃ ಸಶತದ್ವ್ಯಷ್ಟಸಾಹಸ್ರ ಮಹಿಷ್ಯಃ ತಾಃ ಹರಿಪ್ರಿಯಾಃ ॥" ಇತಿ ॥ "ಕಸೇರು" "ತಾಸಾಂ ಪ್ರಧಾನಾಃ" ಇತಿ ವಚನಾತ್ ॥ "ನಾಲ್ಕು" ಇತ್ಯತ್ರರಾನ್ವಯಿ ॥೩॥

## ಕನ್ನಡಾರ್ಥ

ಕೃಷ್ಣಪತ್ನಿಯರಾದ ೧೬೦೦೦ ಸ್ತ್ರೀಯರು ಚಿರಪಿತೃಗಳಿಂದಲೂ ಊರ್ವಶೀ ಮುಂತಾದವರಿಗಿಂತಲೂ ರಮಾವೇಶವಿರುವದರಿಂದ ಅಧಿಕರು. ಋಷಿಗಳಿಗಿಂತ ಚಿರಪಿತೃಗಳು ಅಧಿಕರೆಂಬ ವಿಷಯದಲ್ಲಿ "ತೇಭ್ಯಸ್ತು ಚಿರ ಸಪ್ತಕಾಃ" ಎಂಬ ವಚನವು ಪ್ರಮಾಣವಾಗಿರುತ್ತದೆ.

ತುಂಬುರು ಮುಂತಾದವರು ಅಜಾನಜ ದೇವತೆಗಳು; ಎಂಬ ವಿಷ ಯವೂ ಸಹ ಏಕದೇಶಮತದ (ಅಭಿಪ್ರಾಯ) ದೃಷ್ಟಿಯಿಂದಲೇ ಒಪ್ಪುತ್ತದೆ. ಇಲ್ಲಿ ಕೆಲವರು—"ಹಿಂದೆ ನಿರೂಪಿಸಲಾದ, ಆಜಾನಜದೇವತೆಗಳು, ತುಂಬರು ಮುಂತಾದ ನೂರು ಗಂಧರ್ವರು, ಊರ್ವಶೀ ಮುಂತಾದ ಅಪ್ಸರೆಯರು, ನಾರದರನ್ನಾರಂಭಿಸಿ ಉಚಥ್ಯರವರೆಗಿರುವ ಋಷಿಗಳನ್ನು ಬಿಟ್ಟು ಉಳಿದ ಋಷಿಗಳು; ಇವರು ಆಜಾನಜದೇವತೆಗಳು" ಎಂದು ಹೇಳುವರು. ಹೆಚ್ಚಿನ ಸಂಗತಿಗಳನ್ನು ತಾರತಮ್ಯ ವಿವೃತಿಯಲ್ಲಿ ಕಾಣಬಹುದು.

ನಾಮನಿರ್ದೇಶಪೂರ್ವಕವಾಗಿ ವೇದಗಳಲ್ಲಿ ಹೇಳಲ್ಪಡದವರು ಹಾಗೂ ದೇವಕುಲದಲ್ಲಿ ಉತ್ಪನ್ನರಾದವರು; ಇಂಥ ದೇವತೆಗಳು "ಆಜಾನಜರು" ಎಂದು ಭಾಗವತ ತೃತೀಯ ಸ್ಕಂಧದಲ್ಲಿ ಹೇಳಲಾಗಿರುತ್ತದೆ. ಅಗ್ನಿಪುತ್ರರು (೧೬೦೦೦ ಕೃಷ್ಣ ಮಹಿಳೆಯರು) ಆಜಾನದೇವತೆಗಳಿಗೆ ಸಮಾನರು: ಯಾಕೆಂದರೆ "ಅಗ್ನಿ ಪುತ್ರರು ಪೂರ್ವದಲ್ಲಿ ತಪಸ್ಸನ್ನು ಆಚರಿಸಿ ಅದರಿಂದ ಸ್ತ್ರೀ ಭಾವವನ್ನು ಹೊಂದಿದರು. ಅನಂತರದಲ್ಲಿ ಅವರು ಹರಿಯ ಸಂಗಮ ಕಾಮನೆಯಿಂದ ಮಾಡಿದ ತಪೋಬಲದಿಂದ ಕೃಷ್ಣ ಸ್ತ್ರೀಯರಾಗಿ ಶ್ರೀ ಕೃಷ್ಣ ನಿಗೆ ಪ್ರಿಯರಾದರು" ಎಂದು ಪ್ರಮಾಣಗಳಿರುತ್ತವೆ.

"ಕಸೇರು" ಎಂಬುವಳು ಅವರಲ್ಲಿ ಪ್ರಧಾನಳು" ಎಂದೂ ವಚನ ವಿರುತ್ತದೆ ||೩||

**ಅವತರಣಿಕಾ** :—ಸುಕರ್ಮಾಭಿಮಾನಿ ಪುಷ್ಕರನಾರಂಭಿಸಿ ಸ್ವಾಹಾ ದೇವಿ ಪರಿಯಂತ ಉತ್ತಮೋತ್ತಮರ ಸ್ತೋತ್ರ ಗೈಯ್ಯುತ್ತಾರೆ.

**ಸರಿಯೆನಿಪರು ವ್ರಜೌಕಸ ಸ್ತ್ರೀ**
**ಯರು ಸುರಾಸ್ಯಾತ್ಮಜರಿಗಿಂ ಪು |**
**ಷ್ಕರನು ಕರ್ಮಪ ಪುಷ್ಕರನಿಗೆ ಶನೈಶ್ಚರೋತ್ತಮನು ||**
**ತರಣಿಜನಿಗುತ್ತಮಳುಷಾಶ್ವಿನಿ |**
**ಸುರರರಸಿಗುತ್ತಮ ಜಲಪ ಬುಧ |**
**ಶರಧಿಜಾತ್ಮಜಗುತ್ತಮ ಸ್ವಹದೇವಿಯೆನಿಸುವಳು ||೪||**

**ಪದ್ಯಾರ್ಥ** :—ವ್ರಜೌಕಸಸ್ತ್ರೀಯರು=ನಂದವ್ರಜದಲ್ಲಿರುವ ಅನ್ಯ ಉದ್ವಾಹಿತ ಗೋಪಿಕಾ ಸ್ತ್ರೀಯರು, ಸುರಾಸ್ಯಾತ್ಮಜರಿಗೆ=ದೇವತೆಗಳ ಮುಖ ನಾದ ಅಗ್ನಿಪುತ್ರರಾದ ೧೬೧೦೦ ಕೃಷ್ಣಪತ್ನಿಯರಾದ ಗೋಪಿಕಾ ಸ್ತ್ರೀಯರಿಗೆ, ಸರಿಯೆನಿಪರು=ಸಮಾನರು. ಇವರಿಗಿಂ=ಇವರಿಗಿಂತಲೂ, ಕರ್ಮಪ= ಸುಕರ್ಮಾಭಿಮಾನಿ, ಪುಷ್ಕರನೆಂಬ ದೇವತೆಯು ಉತ್ತಮನು=ಶ್ರೇಷ್ಠನು, ಪುಷ್ಕರನಿಗೆ, ಶನೈಶ್ಚರೋತ್ತಮನು, ಪೃಥ್ವಿಕಲಾಭಿಮಾನಿ ಸೂರ್ಯಪುತ್ರ ಶನೈಶ್ಚರದೇವನು ಅಧಿಕನು, ತರಣಿಜನಿಗುತ್ತಮಳು ಉಷಾ ಅಶ್ವಿನಿ ಸುರರರಸಿ =ಸೂರ್ಯ ಪುತ್ರನಾದ ಶನೈಶ್ಚರನಿಗೆ ಅಶ್ವಿನಿ ದೇವತೆಗಳ ಪತ್ನಿ ಉಷಾ ದೇವಿಯು, ಉತ್ತಮನು=ವರ ಶ್ರೇಷ್ಠಳು. ಈ ಉಷಾದೇವಿಗೆ. ಜಲಪ ಬುಧ =ಸುಸ್ನಾನೋದಕಾಭಿಮಾನಿಯಾದ ಬುಧನು ಉತ್ತಮನು. ಈ ಶರಧಿ ಜಾತ್ಮಜ=ಶರಧಿಜ ಕ್ಷೀರಸಮುದ್ರದಲ್ಲಿ ಪುಟ್ಟಿದ ಚಂದ್ರನ, ಆತ್ಮಜ=ಮಗ ನಾದ ಬುಧದೇವನಿಗೆ, ಸ್ವಹದೇವಿ=ಮಂತ್ರಾಭಿಮಾನಿಯಾದ ಅಗ್ನಿದೇವರ ಹೆಂಡತಿಯು, ಉತ್ತಮಳೆನಿಸುವಳು=ಶ್ರೇಷ್ಠಳೆಂದು ಕರೆಸುತ್ತಾಳೆ.

**ಭಾವಸೂಚನ** || ಸುರಾಸ್ಯಾತ್ಮಜರು=ಹದಿನಾರು ಸಾವಿರದ ನೂರು ಮಂದಿ, ಶರಧಿಜ=ಚಂದ್ರ ||೪||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪರಿ" ಇತಿ ॥ ಹಿಂದೆ ಉಕ್ತಸಂಖ್ಯೋಪೇತಾಃ ॥ "೧೦" ಅವರಿಂದ ॥ "ದ್ವಿಗುಣಾಧಮಾಃ" ಇತಿ ಚ ಜ್ಞೇಯಮ್ ॥ ಏಕಾದಶತಾತ್ಪರ್ಯೇ ಚ— "ಕೃಷ್ಣಪ್ರಿಯಾಭ್ಯಃ ಗೋಪೀಭ್ಯಃ ಭಕ್ತಿತಃ ದ್ವಿಗುಣಾಧಿಕಾಃ ॥" ಮಹಿಷ್ಯೋಷ್ಟೌ ವಿನಾ ಯಾಃ ತಾಃ ಕಥಿತಾಃ ಕೃಷ್ಣವಲ್ಲಭಾಃ" ॥ ಇತಿ ॥ ವ್ರಜೌಕಸ ವಿವೇಕಃ—ಗೋಪಾಂಗನಾಃ ದ್ವಿವಿಧಾಃ ॥ ಕೃಷ್ಣೋದ್ವಾಹಿತಾಃ ಕಾತ್ಯಾಯನೀವ್ರತಧರಾಃ ಸ್ವಪತಿತ್ವಹೇತೋಃ । ತದನ್ಯಾಃ ಅನ್ಯೋದ್ವಾಹಿತಾಃ ಶ್ರೀಕೃಷ್ಣಭಕ್ತಾಃ ॥ ಇತಿ ॥ "ಅನ್ಯೈಃ ಧೃತಾಃ ಅಯುಗಬಾಣಬಲಾಭಿಪನ್ನಾಃ" ಇತ್ಯುಕ್ತೇಃ ॥ "ಉಭೇ ಅಪಿ ಪರಮಾಪ್ಸರಸಃ ಪುರಾ ಯಾಃ" ॥ ಇತ್ಯುಕ್ತೇಃ ॥ ತತಃ ಯಶೋದಾ ನಂದಗೇಹಿನೀ ॥ ತತಃ ದೇವಕೀ ॥ ಕರ್ಮಪುಷ್ಕರಃ ತತಃ ದಶಗುಣೈಃ ನೀಚಃ ॥ "ಉತ್ತಮ"—ಏತ್ಯೇಭ್ಯಃ ಅಧಿಕಃ ಉದ್ದಿಷ್ಟಃ ಶನಿಃ ಪೃಥಿವ್ಯಭಿಮಾನವಾನ್ ॥ ತರಣಿಜಃ ಶನಿಃ ॥ "ಶನೇರಪ್ಯತ್ರಿಭಾರ್ಯೋಷಾ" ಇತ್ಯುಕ್ತೇಃ ಪ್ರವರಾ ॥ ಪುಷ್ಕರೇಣ ತು ಶ್ರೇಷ್ಠಾ ದಶಗುಣೈಃ ಪ್ರೋಕ್ತಾ ॥ ಉಷಸಸ್ತು ಬುಧಃ ಅಧಿಕಃ ॥ "ಶರಧಿಜ" ಚಂದ್ರಃ ॥ "ಬುಧಾದಪಿ ಅಧಿಕಾ ಸ್ವಾಹಾ ಉಷಸಸ್ತು ದಶಾಧಿಕಾ" ॥ ೪ ॥

## ಕನ್ನಡಾರ್ಥ

ಮೊದಲು ಅಗ್ನಿಪುತ್ರರಾಗಿದ್ದು ಅನಂತರ ತಪಸ್ಸಿನಿಂದ ಶ್ರೀಕೃಷ್ಣಪತ್ನಿಯರಾದ ೧೬೧೦೦ ಸ್ತ್ರೀಯರುಗಳಿಗಿಂತ ಶ್ರೀ ಕೃಷ್ಣನಿಂದ ಉಪಭುಕ್ತರಾದ ಗೋಪಿಕಾಸ್ತ್ರೀಯರು ಎರಡು ಗುಣಗಳಿಂದ ಕಡಮೆಯವರು. ಗೋಪಾಂಗನೆಯರಲ್ಲಿ ಎರಡು ಬಗೆಯವರಿರುತ್ತಾರೆ. ಶ್ರೀಕೃಷ್ಣನಿಂದ ಲಗ್ನವಾದವರು. ಕಾತ್ಯಾಯನೀ ವ್ರತವನ್ನು ಮಾಡಿರುವವರು ಕೆಲವರು. ಕೆಲವರು ಬೇರೆಯವರನ್ನು ಮದುವೆಯಾಗಿ ಶ್ರೀಕೃಷ್ಣನಿಂದ ಉಪಭೋಗವನ್ನು ಹೊಂದಿದವರು. "ಬೇರೆಯ ಪತಿಗಳಿದ್ದರೂ ಅನಂಗಬಾಣಗಳ ವಶದಿಂದ ಶ್ರೀಕೃಷ್ಣನಲ್ಲಿ ಬಂದರು" ಎಂದು ಹೇಳುವ ಭಾರತ ತಾತ್ಪರ್ಯ ನಿರ್ಣಯ ವಚನಗಳು ಆಧಾರವಿವೆ. ಇಬ್ಬರೂ ಶ್ರೇಷ್ಠ ಅಪ್ಸರೆಯರು. "ಪೂರ್ವದಲ್ಲಿ ತಪಸ್ಸನ್ನಾಚರಿಸಿದವರು" ಎಂದು ಹೇಳಲಾಗಿದೆ. (ಅನಂತರ ನಂದಪತ್ನಿ ಯಶೋದಾ.

ಅನಂತರ ದೇವಕೀ) ಅನಂತರ ಕರ್ಮ ಪುಷ್ಕರನು ಹತ್ತುಗುಣಗಳಿಂದ ಕಡಿಮೆ ಯವನು. ಇವರೆಲ್ಲರಿಂದ ಶನಿಯು ಅಧಿಕನು. ಶನಿಯು ಪೃಥಿವೀ ಕಲಿಗೆ ಅಭಿಮಾನಿಯು. "ತರಣಿಜ"—ಶನಿ. (ಸೂರ್ಯನ ಮಗ) "ಶನಿಗಿಂತ ಅಶ್ವಿನಿಪತ್ನಿಯಾದ ಉಷಾದೇವಿ" ಅಧಿಕಳು ಎಂದು ಹೇಳಲಾಗಿದೆ. ಪುಷ್ಕರನಿ ಗಿಂತ ಉಷಾ ಹತ್ತು ಗುಣಗಳಿಂದ ಹಿರಿಯಳು. ಬುಧನು ಉಷಾದೇವಿಗಿಂತ ಅಧಿಕನು. ಶರಧಿಜ=ಚಂದ್ರ, ಅವನ ಸುತ=ಬುಧ, ಬುಧನಿಗಿಂತ ಸ್ವಾಹಾ ಅಧಿಕಳು. ಉಷಾಗಿಂತ ಹತ್ತು ಗುಣಗಳಿಂದ ಉತ್ತಮಳು ||೪||

**ಅವತರಣಿಕಾ :**—ಈ ಪದ್ಯದಲ್ಲಿ ಸ್ವಾಹಾದೇವಿಗಿಂತಲೂ, ಅನಾಖ್ಯಾತ ದೇವತೆಗಳು, ಪರ್ಜನ್ಯ ಬ್ರಹ್ಮಾಂಡಾಭಿಮಾನಿ ಉಷಾ, ಗಂಗಾ ಮೊದಲಾದ ಆರು ಜನರು ಇವರಿಂದ ಕರ್ಮಜ ದೇವತೆಗಳು, ಕ್ರಮೇಣ ಉತ್ತಮರೆಂದು ಹೇಳುತ್ತಾರೆ.

**ಅನಳಭಾರ್ಯಳಿಗಿಂದನಾಖ್ಯಾ ।**
**ತನಿಮಿಷೋತ್ತಮರಿವರಿಗಿಂದಲಿ ।**
**ಘನಪ ಪರ್ಜನ್ಯಾನಿರುದ್ಧನ ಸ್ತ್ರೀ ಉಷಾದೇವಿ ॥**
**ದ್ಯುನದಿ ಸಂಜ್ಞಾ ಶಾಮಲಾ ರೋ ।**
**ಹಿಣಿಗಳಾರು ಸಮಾಸನಾಖ್ಯಾ ।**
**ತನಿಮಿಷೋತ್ತಮರಿವರಿಗಿಂದಲಿ ನೂರುಕರ್ಮಜರು ||೫||**

**ಪದ್ಯಾರ್ಥ :**—ಅನಳಭಾರ್ಯಳಿಗಿಂದ=ಅಗ್ನಿದೇವರ ಪತ್ನಿ ಸ್ವಾಹಾ ದೇವಿಗಿಂತಲೂ, ಅನಾಖ್ಯಾತನಿಮಿಷೋತ್ತಮ=ಅಪ್ರಸಿದ್ಧ ದೇವತೆಗಳು "ಅನತಿ ಪ್ರಸಿದ್ಧಾಧಿಕಾರಾಃ ದೇವಾಃ ಕೇಚಿತ್ ಅನುಕ್ತಾ ದೇವಾಃ" ಎಂದು ಸನ್ನ್ಯಾಯ ರತ್ನಾವಳಿ, ಮತ್ತು ಶ್ರೀ ಮುಷ್ಣ ಆಚಾರ್ಯರು ಸಹ ಹೇಳಿದ್ದಾರೆ. ಈ ಅಪ್ರಸಿದ್ಧ ದೇವತೆಗಳು ಉತ್ತಮರು, ಇವರಿಗಿಂದಲಿ=ಈ ಅನಾಖ್ಯಾತ ದೇವತೆಗಳಿಂದ, ಘನಪ=ಮೇಘಾಧಿಪತಿ ಪರ್ಜನ್ಯ ನಾಮಕದೇವ, ಅನಿರುದ್ಧನ ಸ್ತ್ರೀ ಉಷಾದೇವಿ=ಕಾಮಪುತ್ರ ಅನಿರುದ್ಧದೇವನ ಪತ್ನಿ, ಬ್ರಹ್ಮಾಂಡಾಭಿ ಮಾನಿ ಉಷಾದೇವಿ, ದ್ಯುನದಿ=ಆಕಾಶ ಹೊಳೆ=ಗಂಗಾದೇವಿ, ಸಂಜ್ಞಾ =ಸೂರ್ಯಪತ್ನಿ, ಶಾಮಲಾ=ಯಮಭಾರ್ಯಾ ರೋಹಿಣಿ=ಚಂದ್ರನ

ಹೆಂಡತಿ ಈ ಆರು ಜನರು ತಮ್ಮೊಳಗೆ ಸಮಾನ=ಸಮರು, ಈ ಆರು ಜನರು ಮತ್ತು ಅನಾಖ್ಯಾತ ನಿಮಿಷೋತ್ತಮ=ಅಪ್ರಸಿದ್ಧರಾದ ಅನಿಮಿಷರು, ಎವೆ ಹಾಕದಿರುವ ಎವೆ ಇಲ್ಲ ನಿದ್ರಾರಹಿತರಾದವರು ದೇವತೆಗಳು, ಇವರು ಅನಾಖ್ಯಾತ ಇವರಿಗಿಂತಲೂ, ನೂರು ಕರ್ಮಜರು=ನೂರು ಜನ ಕರ್ಮಜ ದೇವತೆಗಳು ಉತ್ತಮರು.

**ಭಾವಸೂಚನ ॥ ಅನಳೇತಿ ॥೫॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅನಲ" ಇತಿ ॥ "ಘನಪಃ-ಮೇಘಪಾತಾ ॥ ಸ್ವಾಹಾಯಾಃ ದ್ವಿಗುಣಾತ್ ಶ್ರೇಷ್ಠಾಃ ವಿರಾಟ್ ಸಂಜ್ಞಾ ಚ ರೋಹಿಣೀ॥"ಅನಾಖ್ಯಾತ"-ಇತಿ ॥ ಮಹಿಷೀಣಾಂ ಶ್ರೈಷ್ಠ್ಯಂ ಆವೇಶಾತ್ ॥ ಪರ್ಜನ್ಯಾದಿಭ್ಯಃ ಏತೇಭ್ಯಃ ಚ್ಯವನೋಚಥ್ಯ ಇತ್ಯಾದ್ಯುಕ್ತಾಃ ॥೫॥

## ಕನ್ನಡಾರ್ಥ

"ಘನಪಃ" ಮೇಘಪಾಲನಾದ ಪರ್ಜನ್ಯದೇವನು, ಸ್ವಾಹಾದೇವಿಗಿಂತ ವಿರಾಟ್, (ಉಷಾ) ಸಂಜ್ಞಾ, ರೋಹಿಣಿ. ಇವರು ಎರಡು ಗುಣಗಳಿಂದ ಅಧಿಕರು. ಇವರು ಅನಾಖ್ಯಾತ ದೇವತೆಗಳಿಗೆ ಸಮರು. ಇವರಿಂದ ಹರಿ ಮಹಿಷಿಯರು ಆವೇಶದಿಂದ ಮಾತ್ರ ಶ್ರೇಷ್ಠರು; ಸ್ವಾಭಾವಿಕವಾಗಿ ಅಲ್ಲ. ಇವರಿಗಿಂತ ಕರ್ಮಜ ದೇವತೆಗಳು ಉತ್ತಮರು.

ಈ ಪರ್ಜನ್ಯ ಮುಂತಾದವರಿಗಿಂತ ಚ್ಯವನ ಉಚಥ್ಯ ಮುಂತಾದವರು ಶ್ರೇಷ್ಠರೆಂದು ಪ್ರಮಾಣಗಳಲ್ಲಿ ಹೇಳಲಾಗಿರುತ್ತದೆ. ॥೫॥

**ಅವತರಣಿಕಾ :**—ನೂರು ಜನ ಕರ್ಮಜ ದೇವತೆಗಳಾದ ರಾಜರು ಬಲ್ಲ್ಯಾದಿ ೭ ಜನ ಇಂದ್ರರು, ಪಿತೃಗಳು, ಅಪ್ಸರೆಯರು, ಹನ್ನೊಂದು ಜನ ಮನುಗಳು ಶುಕ್ರಾಚಾರ್ಯರು ಚ್ಯವನ ಉಚಥ್ಯಾದಿ ಋಷಿಗಳು ಕರ್ಮಜರಿಗೆ ಸಮಾನರೆಂದು ಹೇಳುತ್ತಾರೆ.

**ಪೃಥು ನಹುಷ ಶಶಿಬಿಂದು ಪ್ರಿಯವ್ರ ।**
**ವ್ರತ ಪರಿಕ್ಷಿತ ನೃಪರು ಭಾಗೀ ।**
**ರಥಿಯು ನೋಡಲ್ಕಧಿಕ ಬಲ್ಲ್ಯಾದಿಂದ್ರ ಸಪ್ತಕರು ॥**

**ಪಿತೃಗಳೇಳೆಂಟಧಿಕ ಅಪ್ಸರ ।**
**ಸತಿಯರೀರೈದೊಂದು ಮನುಗಳು ।**
**ದಿತಿಜಗುರು ಚಾವನ ಉಚಿಥ್ಯರು ಕರ್ಮಜರು ಸಮರು ॥೬॥**

**ಪದ್ಯಾರ್ಥ** :—ಪೃಥು–ನಹುಷ=ಪೃಥುರಾಜ. ನಹುಷರಾಜ ಶಶಿ ಬಿಂದುರಾಜ, ಪ್ರೀಯವ್ರತರಾಜ, ಪರೀಕ್ಷಿತಾದಿ, ೧೦೦ ಜನ ಪುಣ್ಯಶ್ಲೋಕ ರಾಜರು, ಭಾಗೀರಥಿಯ ನೋಡಲ್ಕಧಿಕ=ಗಂಗಾದೇವಿಯನ್ನು ನೋಡಲಿಕ್ಕೆ ಉತ್ತಮರು ಮತ್ತು ಬಲ್ಯಾದಿಂದ್ರ ಸಪ್ತಕರು=೧ ಬಲಿ, ೨ ಅದ್ಭುತ ೩ ಶಂಭು. ೪ ವಿಧೃತಿ, ೫ ಸ್ವಧೃತಿ, ೬ ದಿವಸ್ಪತಿ, ೭ ಶುಚಿ ಈ ಏಳು ಜನ ಇಂದ್ರರು, ಇಂದ್ರ ಪದವಿ ಆಳುವವರು, ಈ ಏಳು ಜನ ಇಂದ್ರರು ಪಿತೃಗಳೇಳು =ಏಳು ಜನ ಪಿತೃಗಳು ಎಂಟು ಜನ ಗಂಧರ್ವರು ಎಂಟು ಜನ ಅಪ್ಸರ ಸ್ತ್ರೀಯರು, ಈರೈದೊಂದು ಮನುಗಳು. ೧೧ ಜನ ಮನುಗಳು, ದಿತಿಜಗುರು =ದೈತ್ಯರ ಗುರು ಶುಕ್ರಾಚಾರ್ಯರು, ಚಾವನ=ಚವನ ಋಷಿಗಳು, ಉಚಿಥ್ಯ ಋಷಿಗಳು, ಕರ್ಮಜರು ಸಮರು=ಕರ್ಮಜ ದೇವತೆಗಳಿಗೆ ಸಮಾನರೆಂದು ಕರೆಸುತ್ತಾರೆ. ಈ ಕರ್ಮಜ ದೇವತೆಗಳ ಕಕ್ಷದಲ್ಲಿ ಸಮಾನ ರಾದ ದೇವತೆಗಳ ವಿಸ್ತಾರವನ್ನು ಬೃಹದ್ಭಾಷ್ಯದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ. ಶೇಷಶತಸ್ಥರು ; ಕರ್ಮಜ ದೇವತೆಗಳ ಕಕ್ಷ, ಆಜಾನಜ ದೇವತೆಗಳ ಕಕ್ಷ ಬಹು ವಿಸ್ತಾರವಾಗಿದೆ.

**ಪ್ರಮಾಣ ತಾರತಮ್ಯ ಪ್ರಕಾಶಿಕಾ**=(ಕರ್ಮಜ ದೇವತೆ ಸಮಾನರು) ಚತುರ್ದಶ ಮನುಷು, ೧ ಸ್ವಾಯಂಭುವ, ೨ ತಾಪಸಮನು, (ವಿಷ್ಣು) ೩ ವೈವಸ್ವತಾ ಉಕ್ತಾ ॥ ೧ ಸ್ವಾರೋಚಿಷ, ೨ ಉತ್ತಮ, ೩ ರೈವತ ೪ ಚಾಕ್ಷುಷಃ, ೫ ಸಾವರ್ಣಿ, ೬ ದಕ್ಷ ಸಾವರ್ಣಿ, ೭ ದೇವಸಾವರ್ಣಿ, ೮ ರುದ್ರ ಸಾವರ್ಣಿ, ೯ ಬ್ರಹ್ಮ ಸಾವರ್ಣಿ, ೧೦ ಧರ್ಮ ಸಾವರ್ಣಿ, ೧೧ ಇಂದ್ರ ಸಾವರ್ಣಿ ಏತೇ ಏಕಾದಶ ಮನವಃ ॥

**ರಾಜಾನಃ** ॥ ಪೃಥುಶ್ಚೈವ....ದೌಷ್ಯಂತಿಃ ಭರತಸ್ತಥಾ ॥ ಶಶಿಬಿಂದುಶ್ಚ ಮಾಂಧಾತಾ, ಕಕುಸ್ಥಶ್ಚ ತಥಾಪರೇ ॥ ಪ್ರಿಯವ್ರತಗಯೌ ॥ ಆರ್ಷಭ ಭರತ ಧ್ರುವ ನಹುಷ ಹರಿಶ್ಚಂದ್ರ, ಪರೀಕ್ಷಿತ್ ಜನಮೇಜಯಾದ್ಯಾಃ ॥ ಪ್ರಹ್ಲಾದತ

ದ್ಭ್ರಾತರೋ ಸಪ್ತಾಪೋನುಪ್ತಾದಾದಿ॥ಸನತ್ಕುಮಾರಂ ವಿನಾ ಸನಕಾದ್ಯಾಃ॥ ಸಪ್ತಪಿತರಃ ॥ ಪಾವಕಃ ಅರ್ಚಿಃ (ಅಗ್ನಿ ಜ್ಯೇಷ್ಠಪುತ್ರಃ), ಮರೀಚಿಃ (ಭೂತ ವಾಯ್ವಭಿಮಾನಿವಾಯುಪುತ್ರಃ) ಮಂಗಳ ಶುಕ್ರಾಶ್ಚಾಶುಕೇತವಃ ದಿಗಭಿ ಮಾನಿನಃ (ಭೀಮಭಾರ್ಯಾ) ಚಿತ್ರಗುಪ್ತ ಅಹೋ ರಾತ್ರಿ ಪೂರ್ಣಮಾಸಾ ದ್ಯಭಿಮಾನಿದೇವತಾಃ ॥ ಅಭಿಜಿತ್ ವಿಷುವದ್ದೇವಃ ಕಲಾದೇವತಾಃ ॥ ತುಂಬುರು ಧೃತರಾಷ್ಟ್ರ ಚಿತ್ರರಥ, ಹಾ ಹಾ ಹೂ ಹೂ, ಇತ್ಯಾದ್ಯಷ್ಟ ಗಂಧರ್ವ ಮುಖ್ಯಾಃ ಪಾದಾಭಿಮಾನಿಜಯಂತಃ ನಿತ್ವಕರ್ಮ—ಚ್ಯಾವನ ಉಚಥ್ಯ ಇತ್ಯಾದಿ ಋಷಿಪ್ರವರಃ (೯೦ ನವತಿ ಸಂಖ್ಯಾಕಾಃ) ಔಷಧ್ಯಾಭಿಮಾನಿ ದೇವತಾಃ—ಪರ್ವತಾಃ ಸಿಕತಾ ನದೀಕೂಪ ಸರಾಂಸಿ ತದಭಿಮಾನಿನಃ ॥ ಹವಿ ಕಪಾಲಯೂಪಾದ್ಯಾಃ ದೇವತಾ ಏವ ಸರ್ವಶ ಇತಿ ಬೃಹದ್ಭಾಷ್ಯೋಕ್ತಾಃ ॥ ತ್ವಕ್ ಚರ್ಮ ಮಾಂಸ ನಾಮಾನೋ ವೃಕ್ಷನಾಮಾನ ಏವ ಚ ॥ ದ್ವಿವಿಧಾಃ ಪಾರಿಜಾತಾದ್ಯಾಃ ಬಭೂವುರ್ಬ್ರಹ್ಮದೇವತಾಃ ಇತಿ ಐತರೇಯ ಭಾಷ್ಯೋಕ್ತಾಃ ॥

ಅಪ್ರತೀಕಾ ದೇವತಾ ಹಿ ಋಷೀಣಾಂ ಶತಮೇವ ಚ ॥ ರಾಜ್ಞಾಂ ಚ ಶತಮುದ್ದಿಷ್ಟಂ ಗಂಧರ್ವಾಣಾಂ ಶತಂ ತಥಾ ॥ ಏತೇಧಿಕಾರಿಣೋ ಹ್ಯಾಪ್ತ ದರ್ಶಿನೋನ್ಯೇ ನ ತು ಕ್ವಚಿತ್ ॥ ಇತಿ ॥ ಇಷ್ಟು ಜನ ಸಾಮೂಹಿಕತ್ವೇನ ಕರ್ಮಜ ದೇವತೆಗಳಿಗೆ ಸಮರಲ್ಲದೇ ಜಯಾದಿ ದ್ವಾರಪಾಲಕರು, ನಂದಿ ಮೊದಲಾದ ಐರಾವತಾದಿ, ದೇವತೆಗಳ ವಾಹನಾದಿ ದಿವಿಜರು ಇನ್ನು ಧೂಮಾರ್ಚಿರೀಶ ದಿವಿಜರು ಮುಂತಾದವರು ಕರ್ಮಜದೇವತೆಗಳಿಗೆ ಸಮಾನ ರೆಂಮ ಬೇರೆ ಕಡೆಗೆ ಹೇಳಿದ್ದಾರೆ. ಈ ವಿಸ್ತಾರ ತಾರತಮ್ಯ ತಿಳಿಯುವದು ಬಹು ಕಷ್ಟವಾದರೂ ದಾಸರು ತಿಳಿಸಿದಷ್ಟು ಬೃಹತ್ತಾರತಮ್ಯ ಕಕ್ಷಾತಾರ ತಮ್ಯದಲ್ಲಿ ಹೆಚ್ಚಿಗೆ ವಿವರಿಸುವ.

**ಭಾವಸೂಚನ** ॥ ಏಳೆಂಟಧಿಕ=ಏಳು ಜನ ಪಿತೃಗಳು, ಎಂಟು ಜನ ಗಂಧರ್ವರು ಅಧಿಕರು. ಈರೈದೊಂದು=ಹನ್ನೊಂದು, ದಿತಿಜಗುರು ಶುಕ್ರ ॥ ೬ ॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಪೃಥು" ಇತಿ || ಅತ್ರ ವಿರೋಧ ಪರಿಹಾರಃ ತು ಅನ್ಯತ್ರ || "ಎಂಟು" ಗಂಧರ್ವಾಃ || ಕಾಶ್ಚನ ಅಪ್ಸರಸ್ತ್ರಿಯಃ || ೬ ||

## ಕನ್ನಡಾರ್ಥ

ತತ್ವಾಭಿಮಾನಿಗಳಂತೆ ನಾವು ನಿರ್ದೇಶಪೂರ್ವಕವಾಗಿ ದೇವಗಳಲ್ಲಿ ಹೇಳಲ್ಪಡದವರು ಹಾಗೂ ದೇವಕುಲೋತ್ಪನ್ನರಾದವರು ಅಜಾನಜ ದೇವತೆಗಳು. ಇವರಲ್ಲಿ ಸೇರಿದ ಅನಾಖ್ಯಾತ ದೇವತೆಗಳು ಕರ್ಮಜ ದೇವತೆಗಳಿಂದ ಉತ್ತಮರೆಂದು ವಾಜಸನೇಯ ಸಂಹಿತೆಯಲ್ಲಿ ತೋರಿಬರುತ್ತದೆ, ತೈತ್ತಿರೀಯ ಉಪನಿಷತ್ತಿನಲ್ಲಿ ಕರ್ಮಜ ದೇವತೆಗಳಿಂದ ಕಡಮೆಯವರು; ಎಂದು ಹೇಳಲಾಗಿರುತ್ತದೆ, ಇಲ್ಲಿ ಬರುವ ವಿರೋಧದ ಪರಿಹಾರ ರೀತಿಯನ್ನು ಬೇರೆ ಕಡೆಯಲ್ಲಿ ನೋಡಿ ತಿಳಿದುಕೊಳ್ಳಬೇಕು. ನಿಜವಾಗಿ ಎರಡೂ ವಾಕ್ಯಗಳಲ್ಲಿ ವಿರೋಧವಿಲ್ಲ "ಎಂಟು" ಗಂಧರ್ವರು; ಕೆಲವು ಅಪ್ಸರ ಸ್ತ್ರೀಯರು. ಹೀಗೆ "ಎಂಟಧಿಕವಪ್ಸರ ಸ್ತ್ರೀಯರು" ಎಂಬಲ್ಲಿ ಭಾವವನ್ನು ತಿಳಿಯಬೇಕು ||೬||

**ಅವತರಣಿಕಾ:**—ಈ ಪದ್ಯದಲ್ಲಿ ಗಣೇಶಾದಿ, ೧೮ನೇ ಕಕ್ಷವಾರಂಭಿಸಿ ಮರೀಚ್ಯಾದಿ ಋಷಿಗಳು ಬ್ರಹ್ಮ ಪುತ್ರರು ೧೬ನೇ ಕಕ್ಷ ಪರಿಯಂತವಾಗಿ ಉತ್ತರೋತ್ತರ ಉತ್ತಮರೆಂದು ಸ್ತೋತ್ರಗೈಯ್ಯುತ್ತಾರೆ.

**ಧನಪ ವಿಷ್ವಕ್ಸೇನಗಣಪಾ ।**
**ಶ್ವಿನಿಗಳೆಂಭತ್ತೈದು ಶೇಷರಿ ।**
**ಗೆಣೆಯೆನಿಸುವರು ಮಿತ್ರ ತಾರಾ ನಿಋತಿ ಪ್ರಾವಾಹಿ ॥**
**ಗುಣಗಳಿಂದ್ಯೈದಧಿಕಂಬೊಂಭ ।**
**ತ್ತೆನಿಪ ಶೇಷರಿಗುತ್ತು ಮರು ಸ।**
**ನ್ಮುನಿ ಮರೀಚಿ ಪುಲಸ್ತ್ಯ ಪುಲಹಾಕ್ರತು ವಸಿಷ್ಠಮುಖ ॥೭॥**

**ಪದ್ಯಾರ್ಥ:**—ಧನಪ=ಧನಾಧಿಪತಿಯಾದ ಕುಬೇರನು, ವಿಷ್ವಕ್ ಸೇನ=ವಾಯುಪುತ್ರನಾದ ವಿಷ್ವಕ್‌ಸೇನನನು, ಗಣಪ=ಗಣೇಶನು, ಅಶ್ವಿನಿಗಳು=ನಾಸತ್ಯದಸ್ರದೇವತೆಗಳ ವೈದ್ಯರು ಎಂಭತ್ತೈದು ಶೇಷರಿಗೆ=

೬೫ ಜನ ಶೇಷಶತಸ್ಥದೇವತೆಗಳಿಗೆ ಎಣೆ ಎನಿಸುವರು=ಸರಿಯೆನಿಸುವರು. ಧನಪಾದಿಗಳಿಗೆ ಇವರಿಂದ ೧೭ ಕಕ್ಷೆಯಲ್ಲಿಪ್ಪ, ಮಿತ್ರ=೧ ಮಿತ್ರ ನಾಮಕ ಸೂರ್ಯ, ೨ ತಾರಾ=ತಾರಾದೇವಿ ಬೃಹಸ್ಪತ್ಯಾಚಾರ್ಯರ ಹೆಂಡತಿ ೩ ನಿಋತಿ=ಕೋಣಾಧಿಪತಿಯಾದ ನಿಋತಿದೇವ, ೪ ಪ್ರಾವಹಿ=ಪ್ರವಾಹ ವಾಯುದೇವರ ಪತ್ನಿ ಈ ನಾಲ್ವರು, ಗುಣಗಳಿಂದ್ವೈದಧಿಕ=ಐದು ಹೆಚ್ಚಿನ ಗುಣಗಳಿಂದ ಅಂದರೆ ೫ ಗುಣಗಳಿಂದ, ಶೇಷಶತಸ್ಥರಿಗುತ್ತಮರು=ಶೇಷಶತಸ್ಥಾದಿ-ಗಣೇಶಾದಿಗಳಿಗೆ ಉತ್ತಮರು ಈ ಮಿತ್ರಾದಿ ನಾಲ್ವರಿಗಿಂತಲೂ, ಸನ್ಮುನಿ=ಸಮೀಚೀನವಾಗಿ ಉತ್ಕೃಷ್ಟವಾಗಿ ಭಗವದ್ಧ್ಯಾನ ಮನನಶೀಲರಾದ ಮುನಿಗಳು, ಋಷಿಗಳು ೧ ಮರೀಚಿ=ಮರೀಚ್ಯೃಷಿಗಳು, ೨ ಪುಲಸ್ತ್ಯ=೩ ಪುಲಸ್ತ್ಯ ನಾಮಕ ಋಷಿಗಳು, ೪ ಕೃತು ಋಷಿಗಳು, ೫ ವಸಿಷ್ಠಮುಖ=ವಸಿಷ್ಠ ಋಷಿಗಳೇ ಮೊದಲಾದ ೭ ಜನ ಇದನ್ನು ಮುಂದಿನ ಪದ್ಯದಿಂದ ವಿವರಿಸುತ್ತಾರೆ.

**ಭಾವಸೂಚನ** ॥ ಧನಪೇತಿ ॥ ಎಣೆ–ಸರಿ. ಮುಖ-ವಿಶ್ವಾಮಿತ್ರಃ ಅಂಗಿರಾಃ ॥೭॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಧನಪ" ಇತಿ ॥ "ಎಣೆ" ಸರಿ । ಮಿತ್ರತಾರೇ ನಿಋತಿಃ ಪ್ರಾವಹೀ ಚ ಸಮಾಃ ಮತಾಃ ॥ ಶತಸ್ಥಾತ್ ಅಧಿಕಾಃ ಪ್ರೋಕ್ತಾಃ ಪರ್ಜನ್ಯಾತ್ ದ್ವಿಗುಣಾಧಿಕಾಃ ॥ "ಸನ್ಮುನಿ" ಇತಿ ॥ ೭ ॥

## ಕನ್ನಡಾರ್ಥ

"ಎಣೆಯೆನಿಪರು" ಎಂದರೆ "ಸರಿಯೆನಿಸುವರು" ಎಂದು ಅರ್ಥ. ಮಿತ್ರ ತಾರಾ, ನಿಋತಿ, ಪ್ರಾವಹಿ ಇವರು ಸಮರು. ಶತಸ್ಥರಿಗಿಂತ ಅಧಿಕರು. ಹಾಗೂ ಪರ್ಜನ್ಯನಿಗಿಂತ ಎರಡು ಗುಣಗಳಿಂದ ಅಧಿಕರು ॥ ೭ ॥

**ಅವತರಣಿಕಾ** :—ಉಳಿದ-ಅತ್ರಿ ಅಂಗಿರಾದಿ ವಿಶ್ವಾಮಿತ್ರ ವೈವಸ್ವತ ಮನು ಮಿತ್ರಾದಿಗಳಿಂದ ಉತ್ತಮರು. ಈ ಮರೀಚ್ಯಾದಿಗಳಿಂದ ಅಗ್ನಿದೇವ

ಭೃಗುಋಷಿಪ್ರಸೂತಿ ದೇವಿಯರು ಮೂರು ಜನ ಉತ್ತಮರೆಂದು ಸ್ತೋತ್ರ ಮಾಡುತ್ತಾರೆ.

**ಅತ್ರಿ ಅಂಗಿರರೇಳು ಬ್ರಹ್ಮನ ।**
**ಪುತ್ರರಿವರಿಗೆ ಸಮರು ವಿಶ್ವಾ ।**
**ಮಿತ್ರ ವೈವಸ್ವತರು ಈಶಾವೇಶಬಲದಿಂದ ॥**
**ಮಿತ್ರಗಿಂದುತ್ತಮರು ಸ್ವಾಹಾ ।**
**ಭರ್ತೃ ಭೃಗುವು ಪ್ರಸೂತಿ ವಿಶ್ವಾ ।**
**ಮಿತ್ರ ಮೊದಲಾದವರಿಗಿಂದಲಿ ಮೂವರುತ್ತಮರು ॥ ೮ ॥**

—ಹಿಂದಿನ ಪದ್ಯದಿಂದ ಮುಂದೆ ಹೇಳುತ್ತಾರೆ.

**ಪದ್ಯಾರ್ಥ :—**೬ ಅತ್ರಿ=ಅತ್ರಿ ಋಷಿಗಳು, ೭ ಅಂಗಿರ=ಅಂಗಿರ ನಾಮ ಋಷಿಗಳು, ಏಳು ಬ್ರಹ್ಮನ ಪುತ್ರರು=ಈ ಏಳು ಜನ ಋಷಿಗಳು ಬ್ರಹ್ಮದೇವರ ಮಕ್ಕಳು, ಇವರಿಗೆ ಸಮರು=ಈ ಏಳು ಜನ ಋಷಿಗಳಿಗೆ ಸಮಾನರು, ಯಾರೆಂದರೆ ವಿಶ್ವಾಮಿತ್ರ=ವಿಶ್ವಾಮಿತ್ರ-ಋಷಿಗಳು. ವೈವಸ್ವತರು=ವೈವಸ್ವತ ಮನು ಇಬ್ಬರು, ಈಶಾವೇಶಬಲದಿಂದ="ವೈವಸ್ವತ ಮನುಃ ವಿಷ್ಣ್ವಾವೇಶಾತ್ ಸಪ್ತರ್ಷಿಸಮಃ" ॥ ಮಿತ್ರಗಿಂದುತ್ತಮರು=ಮಿತ್ರಾದಿಗಳಿಂದ ಉತ್ತಮರು, ಸ್ವಾಹಾಭರ್ತೃ=ಸ್ವಾಹಾದೇವಿಪತಿ ಅಗ್ನಿ ದೇವರು, ಭೃಗುವು=ಭೃಗುಋಷಿಗಳು, ಪ್ರಸೂತಿ=ದಕ್ಷಪ್ರಜೇಶ್ವರನ ಹೆಂಡತಿ, ವಿಶ್ವಾಮಿತ್ರ ಮೊದಲಾದವರಿಗಿಂದಲಿ ಮೂವರುತ್ತಮರು—ವಿಶ್ವಾಮಿತ್ರನೆ ಮೊದಲಾದ ೯ ಜನಗಳಿಗಿಂತಲೂ ಈ ಮೂರು ಜನರು, ಅಗ್ನಿ-ಭೃಗು, ಪ್ರಸೂತಿ ಉತ್ತಮರು ಶ್ರೇಷ್ಠರು.

**ಭಾವಸೂಚನ** ॥ ಅತ್ರೀತಿ ॥೮॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅತ್ರಿ" ಇತಿ ॥ ವಿಶ್ವಾಮಿತ್ರಃ ಬ್ರಹ್ಮಸುತಾಃ ಸಪ್ತ ವೈವಸ್ವತಃ ಮನುಃ॥ ಮಿತ್ರಾದಿಭ್ಯೋಽಧಿಕಾಃ ಏತೇ ನವಾನ್ಯೋನ್ಯಸಮಾಃ ಮತಾಃ ॥ ಏತೇಭ್ಯೋಗ್ನಿಃ ಭೃಗುಃ ದಕ್ಷಪತ್ನೀ ಚೇತಿತ್ರಯೋಽಧಿಕಾಃ ॥ ಪರಸ್ಪರ ಸಮಾಃ

ಪ್ರೋಕ್ತಾಃ ಮಿತ್ರತಃ ದ್ವಿಗುಣಾಧಿಕಾಃ । ಅಗ್ನಿತಃ ನಾರದಃ ಶ್ರೇಷ್ಠಃ ತತೋ ವರುಣಃ ಉತ್ತಮಃ ॥ ಅಗ್ನಿತಃ ಪಾದಮಾತ್ರೇಣ ವರುಣೋಽಧಿಕ ಈರಿತಃ ॥ ಚಂದ್ರಾದಯಃ ಪಾದೋತ್ತಮಾಃ ಇತ್ಯನುವೃತ್ತ್ಯ ಪಾದಪಾದೋತ್ತಮಾಃ ಇತಿ ಯೋಜ್ಯಮ್ ॥ ವರುಣಾತ್ ಪಾದ ಪಾದಾರ್ಧಮಾತ್ರತಃ ವಿಧುಃ ಉತ್ತಮಃ ॥ ವಿಧುಃ ಸೂರ್ಯಃ ಮನೋಃ ಭಾರ್ಯಾ ಯಮಶ್ಚೈತೇ ಸಮಾಃ ಮತಾಃ । ವಹ್ನ್ಯಾದೇಃ ದ್ವಿಗುಣೇನೋಚ್ಚಾಃ ॥ ೮ ॥

## ಕನ್ನಡಾರ್ಥ

ಏಳು ಬ್ರಹ್ಮಪುತ್ರರು, ವಿಶ್ವಾಮಿತ್ರ, ವೈವಸ್ವತಮನು, ಇವರು ಒಂಭತ್ತು ಜನರು ಮಿತ್ರ ಮುಂತಾದವರಿಂದ ಅಧಿಕರೂ, ಪರಸ್ಪರ ಸಮರೂ ಆಗಿರುತ್ತಾರೆ. ಇವರಿಗಿಂತ ಅಗ್ನಿ-ಭೃಗು, ಪ್ರಸೂತಿ ಈ ಮೂವರು ಅಧಿಕರು. ಇವರೂ ಪರಸ್ಪರ ಸಮರು; ಹಾಗೂ ಮಿತ್ರನಿಂದ ಎರಡು ಗುಣಗಳಿಂದ ಅಧಿಕರು. ಅಗ್ನಿಗಿಂತ ನಾರದ ಅಧಿಕನು. ಅವನಿಂದ ವರುಣನು ಅಧಿಕನು. ಅಗ್ನಿಯಿಂದ ಪಾದಮಾತ್ರ ಅಧಿಕನು. ಚಂದ್ರಾದಿಗಳು ಪಾದೋತ್ತಮರು ಎಂಬುದನ್ನು ಅನುವರ್ತಿಸಿ "ಪಾದಪಾದೋತ್ತಮ" ಎಂದು ಯೋಜಿಸಬೇಕು. ವರುಣನಿಂದ ಪಾದಪಾದದಿಂದ (೩/೮) ಚಂದ್ರನು ಅಧಿಕನು. ಚಂದ್ರ-ಸೂರ್ಯ-ಶತರೂಪಾ ಇವರು ಸಮರು, ಅಗ್ನಿಯಿಂದ ೨ ಗುಣಗಳಿಂದ ಉಚ್ಚರು" ಎಂಬ ಪ್ರಮಾಣ ಸಮ್ಮತವಾಗಿದೆ. ॥ ೮ ॥

ಅವತರಣಿಕಾ:— ಈ ಪದ್ಯದಿಂದ-ನಾರದ ಋಷಿಗಳಾರಂಭಿಸಿ ಕ್ರಮೇಣ ಉತ್ತಮೋತ್ತಮರಾದ ಅನಿರುದ್ಧಾದಿ ಆರು ಜನರವರೆಗೆ ಸ್ತೋತ್ರಗೈಯ್ಯುತ್ತಾರೆ.

**ನಾರದೋತ್ತಮ ಅಗ್ನಿಗಿಂದಲಿ ।**
**ವಾರಿ ನಿಧಿ ಪಾದೋತ್ತಮನು ಯಮ ।**
**ತಾರಕೇಶ ದಿವಾಕರನು ಶತರೂಪರುತ್ತಮರು ॥**
**ವಾರಿಜಾಪ್ತನಿಗಿಂದ ಪ್ರವಹಾ ।**
**ಮಾರುತೋತ್ತಮ ಪ್ರವಹಗಿಂದಲಿ ।**
**ಮಾರ ಪುತ್ರನಿರುದ್ಧಗುರು ಮನು ದಕ್ಷ ಶಚಿ ರತಿಯು ॥೯॥**

**ಪದ್ಯಾರ್ಥ** ;—ಅಗ್ನಿಗಿಂದಲಿ=ಅಗ್ನಿದೇವರು ಭೃಗುಋಷಿ ಪ್ರಸೂತಿ ಮೂವರಿಗಿಂತ, ನಾರದೋತ್ತಮ=ನಾರಂ ಜ್ಞಾನಂ ದದಾತೀತಿ ನಾರದಃ ನಾರದ ಋಷಿಗಳು ಉತ್ತಮರು=ಶ್ರೇಷ್ಠರು, ಈ ನಾರದರಿಗಿಂತಲೂ, ವಾರಿನಿಧಿ=ಸಮುದ್ರ ರಾಜನಾದ ವರುಣದೇವನು, ಪಾದೋತ್ತಮನು= ಒಂದು ಪಾದ ೧/೪ ಗುಣದಿಂದ ಶ್ರೇಷ್ಠನು, ವರುಣದೇವರಿಂದ, ಯಮ= ಯಮ-ಧರ್ಮ ಪುಣ್ಯ ಪಾಪಗಳ ವಿಚಾರಣೆ ಮಾಡತಕ್ಕ ಎರಡು ರೂಪಗಳಾದ ಯಮದೇವರು, ತಾರಕೇಶ=ನಕ್ಷತ್ರ ಪತಿಯಾದ ಚಂದ್ರ ದೇವರು, ದಿವಾ ಕರನು=ವಿವಸ್ವನ್ನಾಮಕ ಸೂರ್ಯದೇವರು ನಾಲ್ವರು ಶ್ರೇಷ್ಠರು. ವಾರಿ ಜಾಪ್ತನಿಗಿಂದ=ವಾರಿಜ=ಕಮಲ, ಆಪ್ತ=ಬಂಧು=ಮಿತ್ರನಾದ ವಿವಸ್ವ ನ್ನಾಮಕ ಸೂರ್ಯದೇವರಿಂದ. ಪ್ರವಹಾ ಮಾರುತೋತ್ತಮ=ವಾಯು ಕೋಣಕ್ಕೆ ಅಧಿಪತಿಯಾದ ಪ್ರವಾಹ ಮಾರುತ ದೇವರು ಶ್ರೇಷ್ಠರು. ಪ್ರವಹ ಗಿಂದಲಿ=ಪ್ರವಾಹ ವಾಯುದೇವರಿಗಿಂತಲೂ, ಮಾರಪುತ್ರನಿರುದ್ಧ=ಕಾಮ ಪುತ್ರನಾದ ಅನಿರುದ್ಧ ದೇವನು, ಗುರು=ದೇವಗುರು ಬೃಹಸ್ಪತ್ಯಾಚಾರ್ಯರು, ಮನು=ಸ್ವಾಯಂಭುಮನು, ದಕ್ಷ=ಬ್ರಹ್ಮಪುತ್ರ ದಕ್ಷ ಪ್ರಜೇಶ್ವರ, ಶಚಿ= ಇಂದ್ರಪತ್ನಿ ಶಚೀದೇವಿ, ರತಿ=ಕಾಮಭಾರ್ಯಾ ರತಿ ದೇವಿಯರು, ಈ ಆರು ಜನರು ಉತ್ತಮರೆಂದು ಕರೆಸುತ್ತಾರೆ.

**ಭಾವಸೂಚನ** ॥ ನಾರದೇತಿ ॥ ೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವಾರಿಜ" ಇತಿ ॥ ಚಂದ್ರಾದೇಃ ಪ್ರವಹಃ ಅಧಿಕಃ ದ್ವಿಗುಣಾತ್ ॥೯॥

## ಕನ್ನಡಾರ್ಥ

ಚಂದ್ರ ಮುಂತಾದವರಿಂದ ಪ್ರವಹನು ಎರಡು ಗುಣಗಳಿಂದ ಅಧಿಕನು ॥೯॥

**ಅವತರಣಿಕಾ** :—ಅನಿರುದ್ಧಾದಿ ಆರು ಜನರಿಗಿಂತಲೂ ಅಹಂಕಾರಿಕ ಪ್ರಾಣ ದೇವರನ್ನು ಆರಂಭಿಸಿ ಕ್ರಮೇಣ ಇಂದ್ರ ಕಾಮರು ಸೌಪರ್ಣ್ಯಾದಿ ಗಳು, ಜಾಂಬವತ್ಯಾದಿ ಆರು ಜನರು ಉತ್ತಮೋತ್ತಮರೆಂದು ನುತಿಸ್ರೈಯ್ಯು ತ್ತಾರೆ.

**ಆರು ಜನರುಗಳಿಂದ ಲಾಹಂ ।**
**ಕಾರಿಕ ಪ್ರಾಣೋತ್ತಮುಖಿಳ ಶ ।**
**ರೀರ ಮಾನಿ ಪ್ರಾಣಗಿಂದಲಿ ಕಾಮ ಇಂದ್ರರಿಗೆ ॥**
**ಗೌರಿ ವಾರುಣಿ ಖಗಪ ರಾಣಿಗೆ ।**
**ಶೌರಿ ಮಹಿಷಿಯರೊಳಗೆ ಜಾಂಬವ ।**
**ತೀರಮಾಯುತಳಾದ ಕಾರಣ ಅಧಿಕಳೆನಿಸುವಳು ॥೧೦॥**

**ಪದ್ಯಾರ್ಥ :**—ಆರು ಜನರುಗಳಿಂದ=ಹಿಂದೆ ಹೇಳಿದ ಅನಿರುದ್ಧಾದಿ ಆರು ಜನರಿಗಿಂತಲೂ, ಅಹಂಕಾರಿಕ ಪ್ರಾಣೋತ್ತಮ=ಅಹಂಕಾರಿಕ ಪ್ರಾಣ ದೇವರು ಉತ್ತಮ ಶರೀರಮಾನಿ ಪ್ರಾಣಗಿಂದಲಿ=ಶರೀರಕ್ಕೆ ಅಭಿಮಾನಿ ಯಾದ ಈ ಪ್ರಾಣದೇವರಿಗಿಂತಲೂ, ಕಾಮ=ಮನ್ಮಥ ಇಂದ್ರದೇವರು ಸ್ವರ್ಗಾಧಿಪತಿಯಾದ ಇಂದ್ರ ದೇವರು ಉತ್ತಮರು. ಈ ಇಂದ್ರಕಾಮರಿಗೆ, ಗೌರಿ, ವಾರುಣಿ, ಖಗಪರಾಣಿ, ಗೌರಿ=ರುದ್ರಪತ್ನಿ ಉಮಾದೇವಿ, ವಾರುಣಿ =ಶೇಷಪತ್ನಿ ವಾರುಣಿದೇವಿ, ಖಗಪರಾಣಿ=ಗರುಡದೇವರ ಹೆಂಡತಿ, ಸೌಪರಣಿ ದೇವಿಯರು ಮೂವರು ಉತ್ತಮರು. ಈ ಖಗಪರಾಣಿ=ಸೌಪ ರಣ್ಯಾದಿಗಳಿಗೆ, ಶೌರಿ=ಶೂರಸ್ಯಾಪತ್ಯಂ ಪುಮಾನ್ ಶೌರಿಃ=ಶೂರರಾಜ ಮಗನಾದ, ವಿಷ್ಣು, ಕೃಷ್ಣನ, ಮಹಿಷಿಯರೊಳಗೆ=ಆರುಜನ ಹೆಂಡಂದಿರು, ಜಾಂಬವತಿ ನೀಲಾ, ಮಿತ್ರವಿಂದಾ, ಕಾಳಿಂದಿ, ಲಕ್ಷಣಾ, ಭದ್ರಾದೇವಿ ಈ ಆರು ಜನರು ಉತ್ತಮರು ಇವರಲ್ಲಿ ಜಾಂಬವತೀ ರಮಾಯುತಳಾದ ಕಾರಣ ಅಧಿಕಳೆನಿಸುವಳು=ಜಾಂಬವತೀದೇವಿಯು ರಮಾ ಶ್ರೀ ಲಕ್ಷ್ಮೀ ಆವೇಶ ಇದ್ದ ಕಾರಣ ಅಧಿಕ=ಹೆಚ್ಚಿನಾಕೆ ಎಂದು ಕರೆಸುತ್ತಾಳೆ.

**ಭಾವಸೂಚನ ॥** ಆರೇತಿ ॥೧೦॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಆರುಜನರು"—ಪ್ರವಹಾತ್ ಪಂಚ ಗುಣಿತಾತ್ ಮನುಪೂರ್ವಕಾಃ॥ ಮನುಃ ಶಚೀ ರತಿಃ ದಕ್ಷಃ ಗುರುಃ ಕಾಮಸುತಃ (ತಾಃ) ತು ಇಮೇ ॥ ಸಮಾಃ ॥ ತಾಭ್ಯೋಽಪ್ಯಹಂ ಪ್ರಾಣಃ ಪಂಚದ್ವಯಗುಣಾಧಿಕಃ ॥ ತಸ್ಮಾತ್ ದಶೋತ್ತರೌ ಇಂದ್ರಕಾಮೌ "ಗೌರಿ" ಇತಿ ॥ ತತ್ರೇಷದುತ್ತಮ ಇಂದ್ರಃ ॥

ತಸ್ಮಾತ್ ಶಿವಾದೀನಾಂ ಭಾರ್ಯಾಃ ದಶಗುಣಾಧಿಕಾಃ || ತಾಭ್ಯಃ ದ್ವಿಗುಣಿತ ಶ್ರೇಷ್ಠಾಃ ಷಣ್ ಮಹಿಷ್ಯಃ ಹರಿಪ್ರಿಯಾಃ || ೧೦ ||

## ಕನ್ನಡಾರ್ಥ

ಪ್ರವಹವಿಗೆ ಐದು ಗುಣಗಳಿಂದ ಮನು ಮುಂತಾದವರು ಅಧಿಕರು, ಮನು, ಶಚಿ, ರತಿ, ದಕ್ಷ, ಗುರು, ಅನಿರುದ್ಧ (ಕಾಮಪುತ್ರ) ಇವರು ಸಮರು. ಇವರಿಗಿಂತ ಹತ್ತು ಗುಣಗಳಿಂದ ಅಹಂಕಾರಿಕ ಪ್ರಾಣನು ಹಿರಿಯನು. ಅಂಕಾರಿಕ ಪ್ರಾಣನಿಗಿಂತ, ಹತ್ತು ಗುಣಗಳಿಂದ ಹಿರಿಯರು ಇಂದ್ರಕಾಮರು, ಅವರಲ್ಲಿ ಇಂದ್ರನು ಸ್ವಲ್ಪ ಅಧಿಕನು. ಈ ಇಂದ್ರನಿಗಿಂತ ಹತ್ತು ಗುಣಗಳಿಂದ ರುದ್ರಪತ್ನಿ-ಉಮಾ, ಸೌಪರ್ಣಿ, ವಾರುಣಿ ದೇವಿಯರು ಅಧಿಕರು, ಇವರಿಗಿಂತ ಎರಡು ಗುಣಗಳಿಂದ ಅಧಿಕರು, ಶ್ರೀ ಕೃಷ್ಣನ ಷಣ್ ಮಹಿಷೆಯರು. ಇವರಲ್ಲಿ ಜಾಂಬವತಿಯು ರಮಾವೇಶ ಕಾರಣದಿಂದ ಅಧಿಕಳು. ||೧೦||

**ಅವತರಣಿಕಾ :**—ಈ ಪದ್ಯದಿಂದ ರುದ್ರಾದಿಗಳು ಜಾಂಬವತ್ಯಾದಿಗಳಿಂದ ಉತ್ತಮ ಈ ರುದ್ರಾದಿಗಳಾರಂಭಿಸಿ ಇಂದಿರೆಯು ಪರಮೋತ್ತಮಳೆಂದು ನುತಿಗೈಯ್ಯುತ್ತಾರೆ.

**ಹರ ಫಣಿಪ ವಿಹಗೇಂದ್ರ ಮೂವರು |**
**ಹರಿ ಮಡದಿಯರಿಗುತ್ತುಮರು ಸೌ |**
**ಪರಣಿ ಪತಿಗುತ್ತುಮರು ಭಾರತಿ ವಾಣಿ ಈರ್ವರಿಗೆ ||**
**ಮರುತ ಬ್ರಹ್ಮರು ಉತ್ತಮರು ಇಂ |**
**ದಿರಿಯು ಪರಮೋತ್ತಮಳು ಲಕ್ಷ್ಮಿಗೆ |**
**ಸರಿಯೆನಿಸುವವರಿಲ್ಲವೆಂದಿಗು ದೇಶಕಾಲದೊಳು || ೧೧ ||**

**ಪದ್ಯಾರ್ಥ :**—ಹರ=ಹರತಿ ಪಾಪಾದಿಕಮಿತಿ ಹರಃ ಮಹಾ ದೇವರು, ಫಣಿಪ=ಶೇಷ, ವಿಹಗೇಂದ್ರ=ಪಕ್ಷಿರಾಜನಾದ ಗರುಡ ದೇವರು, ಮೂವರು= ಮೂರು ಜನರು, ಹರಿ ಮಡದಿಯರಿಗುತ್ತಮರು=ಶ್ರೀ ಕೃಷ್ಣನ ಆರು ಜನ ಹೆಂಡಂದಿರಿಗೆ ಉತ್ತಮರು ಶ್ರೇಷ್ಠರು, ಅಧಿಕರು. ಈ ಸೌಪರಣಿಪತಿಗುತ್ತಮರು =ಸೌಪರಣಿದೇವಿಯ ಗಂಡ ಗರುಡ ದೇವರು, (ರುದ್ರ-ಶೇಷ ಗರುಡ

ಮೂವರಿಗಿಂತಲೂ) ಭಾರತಿ ವಾಣಿ=ಪ್ರಕಾಶಮಾನನಾದ ಪರಮಾತ್ಮನಲ್ಲಿ ಅತಿಶಯ ಭಕ್ತಿಯೇ ರತಿಯುಳ್ಳ ಶ್ರೀ ವಾಯು ದೇವರ ಹೆಂಡತಿ ಭಾರತೀ ದೇವಿಯರು, ವಾಣೀ=ವಯನಂ ವಾಣೀಃ ತಂತು ಸಂತಾನ, ವೀಣಾ ಬಾರಿಸುವಳು, ಮತ್ತು ವಾಣೀ=ವಾಚಾ ತಂತು ಅಕ್ಷರ ಶಬ್ದಗಳನ್ನು ನುಡಿಸುವಳು. ವಾಗಾಭಿಮಾನಿ ಸರಸ್ವತೀ ದೇವಿಯರು, ಈ ಭಾರತೀ ವಾಣೀ, ಈರ್ವರಿಗೆ= ಇಬ್ಬರಿಗೆ, ಮರುತ ಬ್ರಹ್ಮರು=ಮರುತ್=“ಮ್ರಿಯತೇಽನೇನ ವೃಷ್ಟೀನ ವಿನಾ ವೇತಿ ಮರುತ್”

ಬ್ರಹ್ಮ=ಬೃಂಹಯತಿ ವರ್ಧಯತಿ ಪ್ರಜಾ ಇತಿ ಬ್ರಹ್ಮ=ಪ್ರಜಾವೃದ್ಧಿ ಮಾಡುವರಾದ ಬ್ರಹ್ಮ ದೇವರು, ಬ್ರಹ್ಮರು ದ್ವಿವಚನ ಪ್ರಯೋಗ ಮಾಡಿದ್ದಾರೆ. ಜ್ಞಾನ ಸಾಧನ ಸಂಪತ್ತಿನಲ್ಲಿ ಸಮರಾದ ವಾಯು ಮತ್ತು ಬ್ರಹ್ಮ ದೇವರು ಇಬ್ಬರು ಉತ್ತಮರು=ಶ್ರೇಷ್ಠರು. ಈ ವಾಯು ಬ್ರಹ್ಮರಿಗಿಂತಲೂ ಇಂದಿರೆಯು ಶ್ರೀ ರಮಾದೇವಿಯು, ಪರಮೋತ್ತಮಳು; ಬ್ರಹ್ಮ ವಾಯುಗಳಿಂದ ಉತ್ಕೃಷ್ಟ ಗುಣ ಉಳ್ಳಾಕೆ ಶ್ರೇಷ್ಠಳು. ಲಕ್ಷ್ಮಿಗೆ ಸರಿಯೆನಿಸುವವರಿಲ್ಲವೆಂದಿಗು ದೇಶಕಾಲದೊಳು=ಶ್ರೀಲಕುಮಿಗೆ ದೇಶಕಾಲಗಳಲ್ಲಿ ಸಮಾನರೆನಿಸುವರಿಲ್ಲ. ಸದಾಶಶ್ವದೇಕಪ್ರಕಾರಳಾಗಿ, ಶ್ರೀ ಹರಿಗೆ ದೇಶಕಾಲದಿಂದ ಸಮಳೆನಿಸುತ್ತಾಳೆ. ಗುಣದಿಂದ ಅಸಮಳು.

**ಭಾವಸೂಚನ** ॥ ಹರೇತಿ ॥ ಹರಿಮಡದಿ, ಜಾಂಬವತ್ಯಾದಿಗಳು ॥೧೧॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉತ್ತಮಃ ಪಂಚಭಿಃ ತಾಭ್ಯಃ ॥ ಶೇಷಸುಪರ್ಣೇಶಾಃ ತ್ರಯಃ ಪಂಚ ಗುಣಾಧಿಕಾಃ॥ ಸಮಾಃ ಪರಸ್ಪರಂ ಸ್ವಸ್ವ ಭಾರ್ಯಾಭ್ಯಃ ತೇ ದಶೋತ್ತರಾಃ॥ ತೇಭ್ಯಃ ಶ್ರೀ ಭಾರತೀ ವಾಣ್ಯೌ ಸಮೇ ಶತಗುಣೋತ್ತಮೇ ॥ ತಾಭ್ಯಾಂ ಶತ ಗುಣೋದ್ರಿಕ್ತೌ ಬ್ರಹ್ಮೇಶೌ ತೌ ಸಮೌ ಮತೌ ॥ ತಾಭ್ಯಾಂ ಕೋಟಿ ಗುಣೋದ್ರಿಕ್ತಾ ಕಮಲಾ ಹರ್ಯತಿಪ್ರಿಯಾ ॥ ೧೧ ॥

## ಕನ್ನಡಾರ್ಥ

ಷಣ್ಮಹಿಷಿಯರಿಂದ ಐದು ಗುಣಗಳಿಂದ ಗರುಡಶೇಷ ರುದ್ರರು ಶ್ರೇಷ್ಠರು. ಪರಸ್ಪರ ಸಮರು. ತಮ್ಮ ತಮ್ಮ ಪತ್ನಿಯರಿಂದ ಹತ್ತು ಗುಣಗಳಿಂದ ಅಧಿಕರು

ಈ ಗರುಡಾದಿಗಳಿಗಿಂತ ಶತಗುಣಗಳಿಂದ ಅಧಿಕರು ಭಾರತೀ ಸರಸ್ವತೀ ದೇವಿಯರು. ಇವರೀರ್ವರಿಗಿಂತ ನೂರು ಗುಣಗಳಿಂದ ಅಧಿಕರು ವಾಯುಬ್ರಹ್ಮರು. ಇವರು ಪರಸ್ಪರ ಸಮರು. ಇವರೀರ್ವರಿಂದ ಕೋಟಿ ಗುಣಗಳಿಂದ ಮಿಗಿಲಾದವರು ಶ್ರೀ ಹರಿಯ ಅತಿ ಪ್ರೇಮಾಸ್ಪದರು ರಮಾದೇವಿಯವರು ||೧೧||

**ಅವತರಣಿಕಾ :—**೧೨-೧೩ ಎರಡು ಪದ್ಯಗಳಿಂದ ಶ್ರೀ ಲಕ್ಷ್ಮೀದೇವಿಯರ ಮಹಾಮಹಿಮೆ ಬಣ್ಣಿಸುತ್ತಾ ಪ್ರಮೇಯ ಭರಿತ ಸ್ತೋತ್ರ ಮಾಡುತ್ತಾರೆ.

**ಶ್ರೀ ಮುಕುಂದನ ಮಹಿಳೆ ಲಕುಮಿ (ಲಕ್ಷ್ಮೀ) ಮ |**
**ಹಾಮಹಿಮೆಗೇನಂಬೆ ಬ್ರಹ್ಮೇ |**
**ಶಾಮರೇಂದ್ರರ ಸೃಷ್ಟಿ ಸ್ಥಿತಿ ಲಯಗೈಸಿ ಅವರವರ ||**
**ಧಾಮಗಳ ಕಲ್ಪಿಸಿ ಕೊಡುವಳಜ |**
**ರಾಮರಣಳಾಗಿದ್ದು ಸರ್ವ |**
**ಸ್ವಾಮಿ ಮಮ ಗುರುವೆಂದುಪಾಸನೆ ಮಾಳ್ಪಳಚ್ಯುತನ ||೧೨||**

**ಪದ್ಯಾರ್ಥ :—** ಶ್ರೀ=ಶ್ರೀ ಶಬ್ದ ವಾಚ್ಯನಾದ ವಿಜ್ಞಾನಮಯ ಸ್ತ್ರೀ ರೂಪಿ ಹರಿಯು, ಶ್ರೀ ಲಕ್ಷ್ಮೀ ದೇವಿಗೆ ಬಿಂಬನಾಗಿ ಶ್ರೀ ದೇವಿಯ ದ್ವಾರಾ ಮುಮುಕ್ಷುಗಳಿಗೆ ಮೋಕ್ಷಾದಿ ಪುರುಷಾರ್ಥವನ್ನು ಕೊಡುವ, ಮುಕುಂದ ನಾಮಕ ಹರಿಯ, ಮಹಿಳೆ=ಸ್ತ್ರೀ ಲಕುಮಿ=ಶ್ರೀ ರಮಾದೇವಿಯರ, ಮಹಾಮಹಿಮೆಗೇನಂಬೆ? ಆತ್ಯಾಶ್ಚರ್ಯಕರ ಭಗವದ್ಗುಣಾನಂತ ಪಾರುಗಾಣದೆ ಇಪ್ಪುದೇ ಮಹಾ ಮಹಿಮಾ. ಇಂತಹ ಮಹದ್ಗುಣಾನಂತ್ಯದಲ್ಲಿ ಒಂದು ಗುಣವೂ ಪಾರುಗಾಣದಿಪ್ಪ ಮಹಾ ಲಕ್ಷ್ಮೀದೇವಿಯರಪ್ಪಾ? ನೋಡಿ, ಬ್ರಹ್ಮೇಶಾಮರೇಂದ್ರರ=ಬ್ರಹ್ಮದೇವರು, ಈಶ=ರುದ್ರದೇವರು, ಅಮರೇಂದ್ರರ=ದೇವತೆಗಳಿಗೆ ಶ್ರೇಷ್ಠನಾದ ಇಂದ್ರ ದೇವರ, ಸೃಷ್ಟಿ=ಉತ್ಪತ್ತಿ, ಸ್ಥಿತಿ=ಪಾಲನೆ, ಲಯ=ಸಂಹಾರ, ಗೈಸಿ=ಮಾಡಿ, ಅವರವರ ಧಾಮಗಳ ಕಲ್ಪಿಸಿಕೊಡುವಳು=ಬ್ರಹ್ಮನಿಗೆ ಬ್ರಹ್ಮ ಪದವಿ, ರುದ್ರನಿಗೆ ರುದ್ರ ಪದವಿ, ಇಂದ್ರನಿಗೆ ಸ್ವರ್ಗ ಪದವಿ ಕೊಡುವಳಲ್ಲದೆ, ಶ್ರೀ ಹರಿಯ ಲೇಶ ಕಟಾಕ್ಷ ಮಾತ್ರದಿಂದ, ಮುಕ್ತಿಯಲ್ಲಿಯೂ ಸಹ ಆವರವರ ಯೋಗ್ಯಧಾಮ=

ಮನೆ ನಿಯುತ ಸ್ಥಾನಗಳನ್ನು, ಕಲ್ಪಿಸಿ=ನಿರ್ಮಾಣ ಮಾಡಿಕೊಡುವಳು, ಅಜರಾಮರಣಳಾಗಿದ್ದು=ಜನ್ಮ ಮೃತಿಗಳಿಲ್ಲದವಳು, ಅಥವಾ ಜರಾಮರಣ ವರ್ಜಿತಳು. ನಿತ್ಯ ಮುಕ್ತಳು ಆಗಿದ್ದು, ಸರ್ವಸ್ವಾಮಿ=ಸರ್ವ ಜೀವರುಗಳಿಗೆ ಸ್ವಾಮಿಯೇ ಎನ್ನ ಪತಿ, ಸರ್ವ ಜೀವರಿಗೆ ಗುರುವಾದ ಹರಿಯೇ ಎನ್ನ ಪತಿಯೆಂದು, ಅಚ್ಯುತನ=ಚ್ಯುತಿರಹಿತನಾದ ಬಿಂಬನ್ನ ಆತ್ಮಾದಿ ಚತುರ್ಗುಣೋಪಾಸನೆ ಪ್ರಾರಂಭಿಸಿ ಅನಂತ ಗುಣೋಪಾಸನೆ ಮಾಡುವಳು.

**ಭಾವಸೂಚನ ||** ಶ್ರೀ ಮುಕುಂದೇತಿ ||೧೨||

**ವಿಶೇಷಸೂಚನೆ ||** "ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ" ಈ ಶ್ರುತ್ಯರ್ಥಪ್ರತಿಪಾದಕವೇ ಶ್ರೀ ಸರ್ವಜ್ಞರು ದ್ವಾದಶ ಸ್ತೋತ್ರ ೭ನೇ ಅಧ್ಯಾಯದಲ್ಲಿ "ವಿಶ್ವಸ್ಥಿತಿ ಪ್ರಲಯ ಸರ್ಗ ಮಹಾ ವಿಭೂತಿ ವೃತ್ತಿಪ್ರಕಾಶನಿಯಮಾವೃತಿ ಬಂಧ ಮೋಕ್ಷಾಃ || ಯಸ್ಯಾಃ ಅಪಾಂಗಲವ ಮಾತ್ರತ ಊರ್ಜಿತಾ ಸಾ | ಶ್ರೀರ್ಯತ್ಕಟಾಕ್ಷ ಬಲವತ್ಯಜಿತನ್ನಮಾಮಿ ||೧||

ಬ್ರಹ್ಮೇಶಶಕ್ರ ರವಿಧರ್ಮ ಶಶಾಂಕ ಪೂರ್ವಾ ಗೀರ್ವಾಣಸಂತತಿರಿಯಂ ಯದಪಾಂಗಲೇಶವ್ || ಆಶ್ರಿತ್ಯ ವಿಶ್ವ ವಿಜಯಂ ವಿಸೃಜತ್ಯಚಿಂತ್ಯಾ | ಶ್ರೀರ್ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ || ೨ ||

ಎಂಬ ಮಹಾ ಅರ್ಥಗರ್ಭಿತವನ್ನು ಈ ಪದ್ಯದಲ್ಲಿ ವರ್ಣಿಸಿದ್ದಾರೆ ||೧೨||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶ್ರೀ ಇತಿ || ತತೋಽನಂತ ಗುಣೋದ್ರಿಕ್ತಃ ಶ್ರೇಷ್ಠಃ ಶ್ರೇಷ್ಠತಮಃ ಹರಿಃ ||೧೨||

## ಕನ್ನಡಾರ್ಥ

ಶ್ರೀ ಹರಿಯು, ರಮಾದೇವಿಯರಿಂದ ಅನಂತ ಗುಣಗಳಿಂದ ಅಧಿಕನು ಶ್ರೀ ಹರಿಯು ಶ್ರೇಷ್ಠತಮನು ಇವನ ಸರಿ ಯಾರೂ ಇಲ್ಲ ||೧೨||

**ಅವತರಣಿಕಾ :**—೧೨ನೇ ಪದ್ಯದಲ್ಲಿ ವರ್ಣಿಸಿದಂತೆ ಇಂತಹ ಮಹಾ ಮಹಿಮೆಯುಳ್ಳ ಶ್ರೀ ಲಕುಮಿದೇವಿಯು ಪರೇಶನಾದ ಶ್ರೀ ಹರಿಯ ಅನಂತಾ ನಂತ ಗುಣಗಳಲ್ಲಿ ಒಂದು ಗುಣದ ಲೇಶಾಂಶಕ್ಕಾದರೂ ಸರಿ ಎನಿಸುವದಿಲ್ಲ. ದೇಶಕಾಲ ಸಮಳೆನಿಸುವಳಾದರೂ ಶ್ರೀ ಹರಿಯ ವಕ್ಷಸ್ಥಳವೆ ಅವಕಾಶವಾದೀ ತೆಂದು ಸ್ತೋತ್ರಗೈಯ್ಯುತ್ತಾರೆ.

**ಈಸು ಮಹಿಮೆಗಳುಳ್ಳ ಲಕ್ಷ್ಮಿ ಪ ।**
**ರೇಶ ನಂತಾನಂತ ಗುಣದೊಳು ।**
**ಲೇಶ ಲೇಶಕೆ ಸರಿಯೆನಿಸಳಾವಾವ ಕಾಲದಲಿ ॥**
**ದೇಶ ಕಾಲಾತೀತ ಲಕ್ಷ್ಮಿಗೆ ।**
**ಕೇಶವನ ವಕ್ಷಸ್ಥಳವೆ ಅವ ।**
**ಕಾಶವಾಯಿತು ಇವನ ಮಹಿಮೆಗೆ ವ್ಯಾಪ್ತಿಗೆಣೆಯುಂಟೆ ॥೧೩॥**

**ಪದ್ಯಾರ್ಥ :**—ಈಸು ಮಹಿಮೆಗಳುಳ್ಳ=ಈಸು=ಇಷ್ಟು ಬಹು ಅನಂತ ಮಹಿಮೆಯುಳ್ಳ ಅಥವಾ ಈ=ಇಂತಹ ಎಂದರೆ ಹಿಂದೆ ೧೨ ಪದ್ಯದಲ್ಲಿ ಹೇಳಿರುವ ಸು=ಸಮೀಚೀನವಾದ ಮಾಹಾತ್ಮ್ಯೆಯುಳ್ಳ, ಲಕ್ಷ್ಮೀ=ಶ್ರೀ ಲಕ್ಷ್ಮೀ ದೇವಿಯರು, ಪರೇಶ=ಸರ್ವೋತ್ತಮನಾದ ಶ್ರೀ ಹರಿಯ, ಅನಂತಾ ನಂತ ಗುಣದೊಳು=ಜ್ಞಾನಾನಂದಾದಿ ಬಹುಸಂಖ್ಯೆಯುಳ್ಳ ಲೆಕ್ಕ ಮಾಡಲು ಎಣಿಕೆಗೆ ಬಾರಪ್ಪು, ಅನಂತ ಗುಣಗಳಲ್ಲಿ ಲೇಶ ಲೇಶಕೆ=ಸ್ವಲ್ಪ ಸ್ವಲ್ಪ ಆದರೂ ಅಂದರೆ ಒಂದು ಗುಣದಲ್ಲಿ ಲೇಶ ಸ್ವಲ್ಪ, ಕಿಂಚಿತು ಅಂಶದಲ್ಲಿ, ಮತ್ತು ಲೇಶ ಕಿಂಚಿತು ಗುಣಾಂಶದಲ್ಲಿ ಮತ್ತು ಸ್ವಲ್ಪ ಆದರೂ, ಭಗವಂತನ ಗುಣಗಳಿಗೆ, ಆವಕಾಲದಲಿ ಸರಿಯೆನಿಸಳು=ಯಾವ ಕಾಲಕ್ಕೂ ಶ್ರೀ ಹರಿಯ ಲೇಶ ಲೇಶಾಂಶ ಗುಣಗಳಿಗೆ ಸಮಾನಳೆನಿಸಳು ಅಂದರೆ ಗುಣ ದಿಂದ ಅಸಮಳು, ಆದರೆ ಸಮಾಸಮಳು ಎಂಬ ಉಕ್ತಿ ಹೇಗೆ? ಸಮಳೆಂದರೆ ದೇಶಕಾಲಗಳಲ್ಲಿ ಹರಿಗೆ ಸಮಾನಳು, ಹೇಗೆಂದರೆ, ದೇಶ ಕಾಲಾತೀತಳು= ದೇಶದಿಂದ ಆಗುವ ಬಾಧೆ ಕಾಲದಿಂದ ಆಗುವ ಬಾಧೆಯಿಂದ ಅತೀತಳು= ಮೀರಿದವಳು ದೇಶಕಾಲಬಾಧೆ ಲಕ್ಷ್ಮೀದೇವಿಗೆ ಇಲ್ಲ. ನಿತ್ಯ ಮುಕ್ತಳು, ವ್ಯಾಪ್ತಳು. ಶ್ರೀ ಹರಿಯೊಡನೆ ಸದಾ ಇಪ್ಪಳೆಂಬುದಕ್ಕೆ, ಶ್ರೀ ಲಕ್ಷ್ಮೀದೇವಿಗೆ,

ಕೇಶವನ= ಕಂ ಬ್ರಹ್ಮಾಣಂ, ಈಶಂ ರುದ್ರಂ ವರ್ತಯತಿ ಇತಿ ಕೇಶವಃ ॥ ಬ್ರಹ್ಮ ರುದ್ರಾದಿಗಳ ಅಸ್ಥಿತ್ವಕ್ಕೆ ಕಾರಣನೂ, ತತ್ ಕ್ರಿಯಾವರ್ತನ ಮಾಡಿ ಮಾಡಿಸುವನಾದುದಕ್ಕೆ ಕೇಶವನಾಥ ಶ್ರೀಹರಿಯ, ವಕ್ಷಸ್ಥಳವೆ ಅವಕಾಶ ವಾಯಿತು=ಸದಾ ಸರ್ವರೂಪ ಸರ್ವದೇಶ ಕಾಲಗಳಲ್ಲಿ ವ್ಯಾಪ್ತನಾದ ಹರಿಯ ಅನುಗ್ರಹದಿಂದಲೇ ಲಕ್ಷ್ಮೀದೇವಿಗೆ ಶ್ರೀ ಹರಿಯು ವಕ್ಷಸ್ಥಳದಲ್ಲಿ ಇರಲಿಕ್ಕೆ ಅವಕಾಶ ಕೊಟ್ಟಿರುವನು. ಕಾರಣ ದೇಶಕಾಲಗಳಲ್ಲಿ ಸಮಳು ಇವನ= ಇಂತಹ ಶ್ರೀ ಹರಿಯ, ಮಹಿಮೆಗೆ, ವ್ಯಾಪ್ತಿಗೆ ಎಣೆಯುಂಟೆ? ಶ್ರೀ ಸಮಸ್ತ ದೇಶ ಕಾಲಗಳಲ್ಲಿ ಸರ್ವತ್ರ, ಬ್ರಹ್ಮಾಂಡ, ಬಹಿರ್ಬ್ರಹ್ಮಾಂಡದಪಕಾವರಣ ಮೀರಿ ಅವ್ಯಾಕೃತಾಕಾಶ, ಸಮಸ್ತ ಜಡ-ಜೀವತತ್ತ್ವದಾಕಾರ, ತತ್ಶಬ್ದ ವಾಚ್ಯ ತದ್ರೂಪನಾಗಿ ವ್ಯಾಪ್ತಿಗೆ=ವ್ಯಾಪಿಸಿರುವ ಶ್ರೀ ಹರಿಯ ಮಾಹಾತ್ಮ್ಯೆಗೆ ಎಣೆ ಯುಂಟೆ ? ಹೆಚ್ಚಿನ ವ್ಯಾಪ್ತಿಯುಳ್ಳವರಾರು ಇಲ್ಲವೆಂತ ಭಾವ.

**ಭಾವಸೂಚನ** ॥ ಈಸು ಮಹಿಮೇತಿ ॥ ಅತೀತ, ವ್ಯಾಪ್ತ, ಎಣೆ-ಸರಿ ॥೧೩॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಏವಂ ತರತಮೋಪೇತಾ (ತೇಽಅ) ನಂತಶಬ್ದಗಣೋಽಪಿ ಯುವರ್ ॥ ನಾಪಿ ತನ್ಮಾನಿನೀ ವಾಣೀ ರಮಾ ಸಾ ಮುಖ್ಯಮಾನಿನೀ ॥ ಯದ್ಗುಣಾದ್ಯಂಶಕಾಂಶಂ ವಾ ತದ್ದಶಾಂಶಾಂಶಸಂತತಿಮ್ ॥ ಯನ್ನಖಾಗ್ರಾದಿಸೌಂದರ್ಯಂ ತದ್ದ ಶಾಂಶಾಂಶವೈಭವಮ್ ॥ ವಕ್ತುಂ ದ್ರಷ್ಟುಂ ಚ ಮನಸಾ ಸ್ಮರ್ತುಂ ವಾ ಸ್ವಸ್ವಶಕ್ತಿತಃ ॥ ನಾಲಂ ನಾಲಂ ರಮಾದೀನಾಂ ಸಹಸ್ರಂ ವಾ ತಥಾ ಮಿತಮ್ ॥೧೩॥

## ಕನ್ನಡಾರ್ಥ

ಹೀಗೆ ತರತಮಭಾವದಲ್ಲಿ ಸರ್ವೋಚ್ಚತಮನಾದ ಶ್ರೀ ಹರಿಯನ್ನು ಅನಂತ ವೇದರಾಶಿಗಳಾಗಲೀ, ಅವುಗಳ ಅಭಿಮಾನಿಗಳಾದ ಭಾರತೀ ಸರಸ್ವತಿಯರಾಗಲೀ, ಮುಖ್ಯಾಭಿಮಾನಿಯಾದ ಶ್ರೀ ರಮಾದೇವಿಯರಾಗಲಿ ಸಂಪೂರ್ಣವಾಗಿ ತಿಳಿಯಲು ಸಮರ್ಥರಲ್ಲ. ಹರಿಯ ಗುಣಗಳ-ದಶಾಂಶದ

ಅಂಶಾಂಶಗಳ ಅಂಶಗಳನ್ನಾದರೂ ಪೂರ್ಣವಾಗಿ ಎಣಿಸಲು ಸಾಧ್ಯವಿಲ್ಲ. ಹರಿಯ ನಖಾಗ್ರದ ಸೌಂದರ್ಯದ ಅನಂತಾನಂತ ಅಂಶಗಳಲ್ಲಿ ಒಂದು ಅಂಶವನ್ನು ಸಹ ಸಾಕಲ್ಯೇನ ನೋಡಲಾಗಲೀ, ಹೇಳಲಾಗಲೀ ಯಾರೂ ಸಮರ್ಥರಲ್ಲ. ರಮಾದಿಗಳಿಗೂ ಸಾಧ್ಯವಿಲ್ಲದಿರುವಾಗ ಮಿಕ್ಕವರ ಪಾಡೇನು ? ||೧೩||

ಅವತರಣಿಕಾ ;—ಸಮಸ್ತ ಬ್ರಹ್ಮಾಂಡಗಳನ್ನೂ, ಬ್ರಹ್ಮಾದಿ ಸಕಲ ಮುಕ್ತಾಮುಕ್ತ ಜೀವರನ್ನೂ ತನ್ನ ಉದರದಲ್ಲಿ ಧರಿಸಿದ ವಿಶ್ವಕುಕ್ಷಿಯಾದ ಶ್ರೀ ಪುರುಷನಾಮಕ ಶ್ರೀ ಹರಿಯ ಸ್ತೋತ್ರ ಗೈಯ್ಯುತ್ತಾರೆ.




**ಒಂದು ರೂಪದೊಳೊಂದವಯವದೊ ।**
**ಳೊಂದು ರೋಮದೊಳೊಂದು ದೇಶದಿ ।**
**ಪೊಂದಿಕೊಂಡಿಹರಜಭವಾದಿ ಸಮಸ್ತ ಜೀವಗಣ ॥**
**ಸಿಂಧು ಸಪ್ತ ದ್ವೀಪ ಮೇರು ಸು ।**
**ಮಂದರಾದ್ಯದ್ರಿಗಳು ಬ್ರಹ್ಮ ಪು ।**
**ರಂದರಾದಿ ಸಮಸ್ತ ಲೋಕಪರಾಲಯಗಳೆಲ್ಲ ||೧೪||**

**ಪದ್ಯಾರ್ಥ :**—ಒಂದು ರೂಪದೊಳು=ಶ್ರೀ ಹರಿಯ ಅನಂತಾನಂತ ರೂಪಗಳು, ಇವುಗಳಿಗೆಲ್ಲ ಮುಖ್ಯ ಮೂಲಕಾರಣವಾದ, ಪುರುಷರೂಪವೇ ಒಂದಾಗಿರುವ ವಿಶ್ವಕುಕ್ಷಿರೂಪವೆಂದು ಪ್ರಕಾಶ ಸಂಹಿತೆಯಲ್ಲಿ ಹೇಳುತ್ತದೆ. "ಶೂನ್ಯನಾಮಾಥ ಜಗೃಹೇ ಪುರುಷಾಖ್ಯಂ ತನುಂ ಹರಿಃ॥ ಪುರುಷಃ ಸರ್ವ ರೂಪಾಣಾಂ ವ್ಯಕ್ತ್ಯಾ ಜೀವ ಇವ ಸ್ಥಿತಃ ॥ ಸೋ ಅನಂತಾತ್ಮಾ ವ್ಯಾಪ್ತತನುಃ ವಿಶ್ವಕುಕ್ಷಿ ಇತೀರಿತಃ ॥ ಇದೇ ವಿಷಯವೆ ಶ್ರೀ ವಿಜಯದಾಸಾರ್ಯರು ಸೃಷ್ಟಿ ಸುಳಾದಿ ೧೨ ಮಟ್ಟತಾಳ ಪುಟ ೫೫-"**ಪರಮಪುರುಷ** ನೀನೆ ಏಕೀಭೂತನಾಗಿ। ಚರಿಸಿದ ಅನಂತ ಜೀವರಾಶಿಗಳನ್ನುದರದಲ್ಲಿಟ್ಟುಕೊಂಡು ಮೆರವ ದೇವರ ದೈವ ವಿಜಯ ವಿಠ್ಠಲರೇಯ । ಶರಧಿಯೊಳಿಟ್ಟಂತೆ ಅಚ್ಛೇದ್ಯಾ ಅಭೇದ್ಯಾ ||೨|| ಇಂತಹ ಪುರುಷರೂಪವೇ ಒಂದು ರೂಪದಲ್ಲಿ, ಇಂತಹ ಮಹತ್ಪುರುಷ ರೂಪಿ ಹರಿಯ, ರೂಪದೊಳಂದವಯವ=ಒಂದೊಂದು ಅಂಗಗಳು ಅಂದರೆ, ಹಸ್ತಪಾದಾದಿ ಅಂಗಗಳಲ್ಲಿಯೂ ಮತ್ತು ಆ ಅವಯವಗಳಲ್ಲಿರುವ "ರೋಮ

ರೋಮಕೂಪದಿ ಒಂದು ಕಡೆಗೆ, ಪೊಂದಿಕೊಂಡಿಹ ರಜಭವಾದಿ ಸಮಸ್ತ ಜೀವಗಣ=ಬ್ರಹ್ಮರುದ್ರಾದಿ ಮೊದಲಾದ ಸಮಸ್ತ ಜೀವ ಗಣವೂ, ಸಮೂಹವೂ, ಸಿಂಧುಸಪ್ತ=ಏಳು ಸಮುದ್ರಗಳು, ಸಪ್ತದ್ವೀಪ= ಏಳು ದ್ವೀಪಗಳು, ಮೇರು=ಮೇರು ಪರ್ವತವೇ ಮೊದಲಾಗಿ ಉಳ್ಳ, ಮಂದರಾದ್ರಿಗಳೆಲ್ಲ=ಮಂದರ ಪರ್ವತವೇ ಮೊದಲಾಗಿ ಉಳ್ಳ ಸಮಸ್ತ ಪರ್ವತಗಳು, ಬ್ರಹ್ಮ=ಚತುರ್ಮುಖ ಬ್ರಹ್ಮ, ಪುರಂದರ=ಇಂದ್ರಾದಿ ಸಕಲ ಲೋಕಪಾಲಯಗಳೆಲ್ಲ, ಪೊಂದಿಕೊಂಡಿಹವು=ಸೂಕ್ಷ್ಮವಾಗಿ ಹೊಂದಿರುವರು, ಇವುಗಳಿಗೆಲ್ಲ ಆಧಾರ ಶ್ರೀ ಹರಿಯೇ ಎಂದು ಮುಖ್ಯ ಅರ್ಥ.

**ಭಾವಸೂಚನ** ॥ ಒಂದೇತಿ ॥೧೪॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಒಂದು" ಇತಿ ॥ ಸ ಹರಿಃ ಮಧ್ವಹೃತ್ಪದ್ಮಸಂಸ್ಥಿತಃ ಜಯತಿ ಪ್ರಭುಃ ॥೧೪॥

## ಕನ್ನಡಾರ್ಥ

ಇಂಥ ಸಮಸ್ತ ಬ್ರಹ್ಮಾಂಡೋದರ ಶ್ರೀ ಹರಿಯು ಶ್ರೀಮನ್ಮಧ್ವಾ ಚಾರ್ಯರ ಹೃದಯ ಪದುಮದಲ್ಲಿ ಶೋಭಿಸುತ್ತಾನೆ. ಇದೇ ಶ್ರೀ ಮಧ್ವಾ ಚಾರ್ಯರ ಮತ ವೈಭವ. ಇಲ್ಲಿರುವ ಘನತೆ ಇನ್ನೆಲ್ಲಿಯೂ ಇರುವುದಿಲ್ಲ. ॥ ೧೪ ॥

**ಅವತರಣಿಕಾ :**—ಇಂತಹ ಮಹದ್ಬ್ರಹ್ಮಾಂಡವನ್ನು ಧರಿಸಿದ ನಾಮಕ ಹರಿಯು ಸರ್ವದೇವೋತ್ತಮನು, ಸದಾಕಾಲದಲ್ಲಿ ಏಕ ಪ್ರಕಾರನಾಗಿರುವನು. ಅನಂತ ಗುಣ ಪರಿಪೂರ್ಣನೆಂದು ಅತ್ಯಾದರಾತಿಶಯ ಭಕ್ತಿಯಿಂದ ಶ್ರೀ ಹರಿ ಯನ್ನು ಅನಂತ ಶ್ರುತ್ಯರ್ಥಗಳಿಂದ ಸೈ ಮರೆದು ಸ್ತೋತ್ರ ಮಾಡುತ್ತಾರೆ.

**ಸರ್ವ ದೇವೋತ್ತಮನು ಸರ್ವಗ ।**
**ಸರ್ವ ಗುಣ ಸಂಪೂರ್ಣ ಸರ್ವದ ।**
**ಸರ್ವ ತಂತ್ರ ಸ್ವತಂತ್ರ ಸರ್ವಾಧಾರ ಸರ್ವಾತ್ಮಾ ॥**

**ಸರ್ವತೋಮುಖ ಸರ್ವನಾಮಕ |**
**ಸರ್ವಜನ ಸಂಪೂಜ್ಯ ಶಾಶ್ವತ |**
**ಸರ್ವಕಾಮದ ಸರ್ವ ಸಾಕ್ಷಿಗ ಸರ್ವಜಿತ್ಸರ್ವ ||೧೫||**

**ಪದ್ಯಾರ್ಥ:—**ಸರ್ವ ದೇವೋತ್ತಮನು=ಬ್ರಹ್ಮರುದ್ರೇಂದ್ರಾದಿ ಸಕಲ ದೇವತೆಗಳಿಗೆ ಉತ್ತಮನು, ಕ್ರೀಡಾದಿಗುಣ ವಿಶಿಷ್ಟರಲ್ಲಿ ಶ್ರೇಷ್ಠನು. ಸರ್ವಗ= ಸರ್ವ ದೇಶಕಾಲಗಳಲ್ಲಿ, ದೇಶಕಾಲಾದಿಗಳ ಬಾಧೆ ರಹಿತನಾಗಿ, ಸರ್ವದೇಶ ಪ್ರಕಾರನಾಗಿ ಇರುವವನು, ಅಥವಾ “ಸರ್ವಂ ಗಚ್ಛತಿ ಸರ್ವತ್ರ ಗಚ್ಛತೀತಿ ವಾ ಸರ್ವಗಃ ಸರ್ವಗುಣ ಸಂಪೂರ್ಣ=ಜ್ಞಾನಾನಂದಾದಿ ಅನಂತ ಗುಣ ಪರಿಪೂರ್ಣನು, ಸರ್ವದ=ಸರ್ವ ಕಾಲದಲ್ಲಿ, ಸರ್ವತಂತ್ರ ಸ್ವತಂತ್ರ= ರಮಾಬ್ರಹ್ಮಾದಿಗಳ ಪ್ರೇರಣೆ ಮಾಡುವಲ್ಲಿ ಸ್ವತಂತ್ರವಾಗಿರುವನು. ಶ್ರೀಹರಿಗೆ ಇನ್ನೊಬ್ಬರು ಪ್ರೇರಕರಿಲ್ಲ. “ಸ್ವತಂತ್ರೋ ಭಗವಾನ್ ವಿಷ್ಣುಃ”ಎಂಬುವಂತೆ ಸಕಲರಿಗೂ ಮುಖ್ಯವಾಗಿ ಪ್ರೇರಿಸುವನು, ಸರ್ವಾಧಾರ=ಸಕಲ ಚರಾ ಚರಾತ್ಮಕ ಜಗತ್ತಿಗೆ ಆಧಾರರೂಪನಾಗಿರುವನು, ಸರ್ವಾತ್ಮ=ಸಕಲ ಜೀವ ಜಡ ಸ್ವರೂಪದಂತೆ ತಾನೂ ಆ ರೂಪಗಳನ್ನು ಧರಿಸಿ ಬಿಂಬನಾಗಿ ಸರ್ವ ವಸ್ತುಗಳಿಗೆ ಅಸ್ತಿತ್ವಕ್ಕೆ ಕಾರಣನಾದ ಶ್ರೀ ಹರಿಯೇ, ಸರ್ವತೋಮುಖ= “ಅಥ ಕಸ್ಮಾದುಚ್ಯತೇ ಸರ್ವತೋಮುಖಃ ಇತಿ ! ಯಸ್ಮಾದಸಿಂದ್ರಿಯೋಽಪಿ ಸರ್ವತಃ ಪಶ್ಯತಿ; ಸರ್ವತಃ ಶೃಣೋತಿ | ಸರ್ವತೋ ಗಚ್ಛತಿ | ಸರ್ವತ ಆದತ್ತೇ | ಸರ್ವಥಾ ತಿಷ್ಠತಿ, ಇತ್ಯಾದಿ ಶ್ರುತೇಃ || (ವಿದ್ಯಾಧಿರಾಜೀಯ) ಸರ್ವತೋಮುಖನೆಂದು ಶ್ರೀ ಹರಿಗೆ ಏಕೆ ಹೆಸರು ಬಂದಿದೆ ಎಂದರೆ ಶ್ರೀ ಹರಿಯು ಸದಾ ಅನಿಂದ್ರಿಯನಾದರೂ ಸರ್ವವನ್ನು, ತನ್ನ ಕಣ್ಣಿನಿಂದ ಅಲ್ಲದೆ ಕಾಲು ಕೈ ಕಿವಿ ಮುಂತಾದ ಸಕಲೇಂದ್ರಿಯದಿಂದ ನೋಡುತ್ತಾನೆ. ತನ್ನ ಕಿವಿಯಿಂದ ಕೇಳುವದಲ್ಲದೆ ತನ್ನ ಇತರ ಕಿವಿ ಮೂಗು, ಜಿಹ್ವಾ, ಪಾಣಿ ಪಾದಾದಿ ಸರ್ವೇಂದ್ರಿಯಗಳಿಂದ ಕೇಳುತ್ತಾನೆ. ಸರ್ವತೋ ಗಚ್ಛತಿ=ತನ್ನ ಪಾದೇಂದ್ರಿಯದಿಂದಲ್ಲದೆ ಇತರ ಸಕಲೇಂದ್ರಿಯದಿಂದ ಸರ್ವ ದೇಶಗಳಲ್ಲಿ ಹೋಗುತ್ತಾನೆ, ತಿರಿಗಾಡುತ್ತಾನೆ “ಕಾಲಿಲ್ಲದೆ ನಡೆಯುವನು ಹರಿ, ಕೇಳುವ ಕಣ್ಣಿಲಿ ತಾನು” ಎಂದು ಶ್ರೀ ಪ್ರಾಣೇಶದಾಸರ ವಚನ, ಸರ್ವತ ಆದತ್ತೇ= ಸರ್ವೇಂದ್ರಿಯಗಳಿಂದ ಸರ್ವವನ್ನು ಭಕ್ಷಿಸುತ್ತಾನೆ. ಸರ್ವಥಾ ತಿಷ್ಠತಿ=

ಕಾಲಿಸಿಂದಲ್ಲವೆ ತನ್ನ ಸಕಲೇಂದ್ರಿಯದಿಂದ ನಿರ್ಲಿಪನು. ಶ್ರೀ ಹರಿಯ ಒಂದು ಅಂಗವು ಸಕಲೇಂದ್ರಿಯ ವ್ಯಾಪಾರ ಮಾಡುವ ಶಕ್ತಿಯುಂತಾಗಿದೆ- ಕಾರಣ ಸರ್ವತೋಮುಖನೆಂದು ಶ್ರೀ ಹರಿಗೆ ನಾಮ, ಸರ್ವ ನಾಮಕ= ತನ್ನಾಮ, ತತ್ ಶಬ್ದವಾಚ್ಯ, ಅಂದರೆ ಸಕಲ ಶಬ್ದಗಳು ಪ್ರಾಮುಖ್ಯವಾಗಿ ಶ್ರೀ ಹರಿಯ ವಾಚಕಗಳೇ ಆಗಿವೆ- ಸರ್ವಜನ ಸಂಪೂಜ್ಯ= ಸಕಲ ಜನರಿಂದಲೂ, ಸಮಿಾಚೀನವಾಗಿ ಸರ್ವೋತ್ತಮತ್ವೇನ ಪೂಜಾಗೊಳ್ಳುವವ, ಶಾಶ್ವತ= ಸಕಲ ದೇಶ ಕಾಲಗಳಬಾಧೆರಹಿತನಾಗಿ ಸನಾತನನಾಗಿ ಒಂದೇ ಪ್ರಕಾರವಾಗಿ ಇರುವನು ಚತುರ್ವಿಧ ನಾಶರಹಿತನೆಂದು ಭಾವ, ಸರ್ವಕಾಮದಃ= ಸರ್ವಾನ್ ಕಾಮಾನ್ ದದಾತೀತಿ ಸರ್ವ ಕಾಮದಃ ॥ ಸರ್ವರ ಅಪೇಕ್ಷೆಗಳನ್ನು ಪೂರೈಸಿಕೊಡುವನಾದುದರಿಂದಲೂ, ಮುಕ್ತಿಯಲ್ಲಿ ಸಹ ಮುಕ್ತರ ಸಂಕಲ್ಪ ಮಾತ್ರದಿಂದಲೇ ಅವರ ಮನೋರಥ ಪೂರೈಸುವವನು, ಸರ್ವ ಸಾಕ್ಷಿಗಃ= ಸರ್ವಂ ಪಶ್ಯತಿ ಸಾಕ್ಷಾತ್ ಕರೋತೀತಿ ॥ ಸರ್ವವನ್ನು ಸಾಕ್ಷಾತ್ತಾಗಿ ನೋಡುತ್ತಾನೆ. ಸರ್ವಜಿತ್= ಸರ್ವರಗೆಲ್ದವನಾದುದರಿಂದ ಸರ್ವಜಿತ್, ಸರ್ವಃ= ಪೂರ್ಣ ಗುಣತ್ವಾತ್ ಸರ್ವಃ-ಪೂರ್ಣ ಶಕ್ತಿತ್ವಾತ್ ಸರ್ವಃ ಪೂರ್ಣ ವ್ಯಾಪಕಾದ್ವಾ ಸರ್ವಃ, (ವಿದ್ಯಾಧಿರಾಜೀಯ-ವಿ.ಸ.) ಗುಣಗಳಿಂದ ಪೂರ್ಣನಾದುದರಿಂದ ಸಂಪೂರ್ಣ ಶಕ್ತಿ ಬಲಉಳ್ಳವನಾದುದರಿಂದ, ಸಂಪೂರ್ಣನಾಗಿ ಸಕಲ ದೇಶ ಕಾಲಗಳಲ್ಲಿ ಸಕಲ ಜೀವರಲ್ಲಿ ತ್ರಿಬಗೆಯಿಂದ ವ್ಯಾಪ್ತ ವ್ಯಾಪಿಸಿರುವ ಕಾರಣದಿಂದಲೂ ಶ್ರೀ ಹರಿಗೆ ಸರ್ವನೆಂದು ವೇದಗಳು ಹೊಗಳುತ್ತವೆ.

**ಭಾವಸೂಚನ ॥** ಸರ್ವೇತಿ ॥ ಸರ್ವಶೀರ್ಷ ಇತ್ಯುಕ್ತೇಃ ॥೧೫॥

## ಶ್ರೀವ್ಯಾಸ ದಾಸ ಸಿದ್ಧಾಂತ ಕೌಮುದೀ

"ಸರ್ವ" ಇತಿ ॥ ಸಾಕ್ಷಿತ್ವೇನ ಸ್ಥಿತಃ ॥ **ಸರ್ವಗಃ ॥** * ಓಂ ॥ ಶಿಕ್ಷನ್ನ ಯಜ್ಯಾಯಾನ್ ಕನೀಯಸೋ ದೇಕ್ಷ್ಣಂ ಅಮೃತಂ ಇತ್ವರ್ಯಾಸೀತ ಮಾರ ಮಾಚಿತ್ರ ಚಿತ್ರ್ಯಂ ಭರಾ ರಯಿಂ ನಃ ಯಸ್ತೇ ಇಂದ್ರ ॥ ಓಂ * ॥ ಸರ್ವಜೀವ ಜಾತಂ ಧನಾದಿನಾ ಗಚ್ಛತಿ ಇತಿ ತಥೋಕ್ತಃ ॥ **"ಸರ್ವತೋ ಮುಖಃ ॥** * ಓಂ ॥ ನಾವಾ ಪುರುಹೂತಃ ಇಂದ್ರೋ ವಿಶ್ವಾ ಅತದ್ವಿಷಃ ಸತ್ವಂ ನ ಇಂದ್ರ ವಾಜೇಭಿರ್ದಶಸ್ಯಾ ಚ ಗಾತು ಯಾ ಚ ಅಚ್ಛಾ ಚ ನ ಸುಮ್ನಂ ನೇಷಿ

|| ಓಮ್ || * ಸರ್ವಾರ್ ದ್ವೇಷಿಜನಾಂಶ್ಚ ಖನತಿ-ದಾರಯತಿ ಇತಿ ತಥೋಕ್ತಃ||
**"ಸರ್ವಜಿತ್"** * ಓಂ || ಪ್ರಸ್ತ್ರೋಭ ವಿದ್ವಾನ್ ಪುರಾ ವಾ ಯದಿ ವೇಳಾಸ ನೂನ ಇಷ ನೋ ಮಿತ್ರ ವರುಣಾಕರ್ತನ ಪೀವರೀ ಮಿಷಂ ಕ್ರಣುಹೀ ನ ಇಂದ್ರ || ಓಂ || * ಸರ್ವಂ ಜಯತಿ ಪ್ರಾಪ್ನೋತಿ ಇತಿ ಸರ್ವಜಿತ್ ||
**"ಸರ್ವ"** * ಓಂ ಯದಚರಸ್ತನ್ವಾ ವಾವೃಧಾನೋ ನದಂ ವ ಓದತೀನಾಂ || ಬಲಾನೀಂದ್ರ ಪ್ರಬ್ರುವಾಣೋ ಜನೇಷು ನದಂ (ವೋ) ಯೋಯುವತೀ ನೋಮ್ || * ಸರ್ವಸ್ವಾಮಿತ್ವಾತ್ ಸರ್ವಃ ||೧೫||

## ಕನ್ನಡಾರ್ಥ

**"ಸರ್ವಗ"** ಸರ್ವಜೀವರಲ್ಲಿ ಸಾಕ್ಷಿರೂಪದಿಂದ ಇರುವವನು. ಬೃಹತೀ ಮಂತ್ರಾನುಸಾರವಾಗಿ—"ಸರ್ವ ಜೀವ ಸಮೂಹವನ್ನು ಧನ ಮುಂತಾದವು ಗಳಿಂದ ಹೊಂದುವವನು" ಎಂದು ಅರ್ಥ.

"ಸರ್ವತೋಮುಖಃ"—ಸರ್ವ ವಿದ್ವೇಷಿಗಳನ್ನು ನಾಶ ಮಾಡುವವನು.

**"ಸರ್ವಜಿತ್*"**—ಸರ್ವವನ್ನು ಜಯಿಸುವುದರಿಂದ "ಸರ್ವಜಿತ್"

**"ಸರ್ವ"**—ಸರ್ವಕ್ಕೂ ಸ್ವಾಮಿಯಾದವನು ||೧೫||

**ಅವತರಣಿಕಾ :**—ಈ ಆರೋಹಣ ತಾರತಮ್ಯವನ್ನು ಬರೆದು ಪಠಿಸು ವವರಿಗೆ ಆಗುವ ಫಲದಾವುದು ? ಆ ಫಲವನ್ನು ಪೂರೈಸುವನು ಶ್ರೀ ಲಕ್ಷ್ಮೀ ನರಸಿಂಹನೆಂದು ಫಲಶ್ರುತಿ ಹೇಳುತ್ತಾರೆ.

**ತಾರತಮ್ಯಾರೋಹಣವ ಬರ |**
**ದಾರು ಪಠಿಸುವರವರ ಲಕ್ಷ್ಮೀ |**
**ನಾರಸಿಂಹ ಸಮಸ್ತ ದೇವಗಣಾಂತರಾತ್ಮಕನು ||**
**ಪೂರಿಯಿಸುವ ಮನೋರಥಂಗಳ |**
**ಕಾರುಣಿಕ ಕೈವಲ್ಯದಾಯಕ |**
**ದೂರಗೈಪ ಸಮಸ್ತ ದುರಿತವ ವೀತಶೋಕ ಸಖ ||೧೬||**

**ಪಧ್ಯಾರ್ಥ** :—ತಾರತಮ್ಯಾರೋಹಣವ=ಈ ಆರೋಹಣ ತೃಣಾದಿ ಬ್ರಹ್ಮಾಂತವರಿಗೆ ಇರುವ ಆರೋಹಣ ತರತಮಾತ್ಮಕ ಪದ್ಯಗಳನ್ನು, ಬರೆ

ದಾರು ಪಠಿಸುವರಿಗೆ= ಬರೆದು ಯಾವು ಪಠಿಸಿ ಪಾರಾಯಣ ಮಾಡುವರೋ ಅವರ ಮನೋರಥಂಗಳನು= ಆ ಭಕ್ತ ಜನರ ಮನೋ ಬಯಕೆಗಳನ್ನು, ಲಕ್ಷ್ಮೀನಾರಸಿಂಹ= ಶ್ರೀ ಲಕ್ಷ್ಮೀದೇವಿಯಿಂದ ಒಡಗೂಡಿದ ಶ್ರೀ ನರಸಿಂಹ ದೇವರು, ಮೊದಲನೇ ಸಂಧಿ ೧ನೇ ಪದ್ಯದಲ್ಲಿ ಶ್ರೀ ತಾಮ್ರಪರ್ಣೀ ಆಚಾರ್ಯರು ಶ್ರೀ ನಾರಸಿಂಹ ಶಬ್ದಕ್ಕೆ ಟೀಕಾ ಬರೆದಿದ್ದಾರೆ. ಸತ್ವಜೀವರ ಲಿಂಗವನ್ನು ತನ್ನ ನಖಗಳಿಂದ ವಿದಾರಣ ಮಾಡುವನು ನರಸಿಂಹರೂಪಿ ಹರಿಯು ಅಥವಾ ನರಸಿಂಹಸಂಬಂಧೀ ನಾರಸಿಂಹಃ ನಾರಸಿಂಹಾತ್ಮಕಮಿತಿ ಯಾವತ್ || ಯದ್ವಾ ನರಸಿಂಹಃ ಪುರುಷೋತ್ತಮಃ || ಅಥ ಕಸ್ಮಾದುಚ್ಯತೇ ನಾರಸಿಂಹ ಇತಿ || ಯಸ್ಮಾತ್ ಸರ್ವೇಷು ಭೂತಾನಾಂ ವೀರ್ಯತಮಃ ಶ್ರೇಷ್ಠತಮಃ ತಸ್ಮಾನ್ನರಸಿಂಹ ಆಸೀತ್ ಪರಮೇಶ್ವರ ಇತಿ ತಾಪನೀಯಶ್ರುತೇಃ || (ಪಿತ್ರ್ಯಧಿರಾಜೀಯ ವಿ. ಸ.) ಈ ನರಸಿಂಹನೇ ಫಲ ಕೊಡಲಿಕ್ಕೆ ಕಾರಣನು ಏಕೆಂದರೆ, ಸಮಸ್ತ ದೇವಗಣಾಂತರಾತ್ಮಕನು= ಸಮಸ್ತ ದೇವತೆಗಳ ಸಮೂಹದಲ್ಲಿ ಅಂತರಾತ್ಮನಾಗಿ ಬಿಂಬನಾಗಿ ಪ್ರೇರಿಸುವನು, ಕಾರುಣಿಕ= ಬಹು ಕರುಣಾಶಾಲಿಯು, ಅನಾದಿ ಅವಿದ್ಯಾಪಟಲವನ್ನು ನಿವಾರಣಗೈಸಿ ಕೈವಲ್ಯದಾಯಕ= ಕೇವಲಸ್ಯ ಭಾವಃ ಕೈವಲ್ಯಂ, ಬಂಧವಿರಹಿತವಾದ ಕೇವಲ ಸ್ವರೂಪಾನಂದಾವಿರ್ಭಾವ ಮುಕ್ತಿದಾಯಕನು. ದೂರಗೈಸ ಸಮಸ್ತ ದುರಿತವ= ಜೀವನು ಸೃಷ್ಟಿಗೆ ಬಂದಾರಭ್ಯ ಸಾಧನಕ್ಕೆ ಬಂದ ಸಮಸ್ತ ಪಾಪಗಳನ್ನು ಕಿಂ ವಾ ಲಿಂಗಭಂಗವನ್ನು ಸಹ ಮಾಡಿ ಸಕಲ ದುರಿತಗಳನ್ನು ಪರಿಹರಿಸುವನು. ವೀತಶೋಕಸಖ= ಯಾವ ವಾಯು ದೇವರಿಗೆ, ಯಾವ ಕಾಲದಲ್ಲಿ ಅಜ್ಞಾನಾದಿ ದುಃಖ ಶೋಕಗಳಿಲ್ಲವೋ ಶೋಕ ಮೋಹಗಳು 'ದೂರದಲ್ಲೆ ಇರುವವೊ, ಹೋಗಲ್ಪಟ್ಟ ಅತಿ ರೋಹಿತವಪ್ರಜ್ಞಾನರಾಯು ರೂಪರಾದ ಪ್ರಳಯೇಪಿ ಪ್ರತಿಭಾತಸ್ವರೂಪರು ವಾಯುದೇವರ ಸಖನೆಂದು ಈ ಪದ್ಯದಲ್ಲಿ ತಮ್ಮ ಬಿಂಬರೂಪನಾದ ನರಸಿಂಹನು ವಾಯ್ವಂತರ್ಯಾಮಿಯಾಗಿ ಸಕಲ ಬಿಂಬಕ್ರಿಯಾ ಜೀವನ ಸ್ವರೂಪದಲ್ಲಿ ಮಾಡುವರೆಂದು ಮನ ಮುಟ್ಟಿ ನರಸಿಂಹನ ಗುಣಾತಿಶಯಗಳನ್ನು ಪೊಗಳಿ ವಾಯುದ್ವಾರಾ ಈ ಪದ್ಯಾರ್ಥವನ್ನು ತಿಳಿಹಿಬರೆಸಿದ ದಾಸವರ್ಯರೇ ಗತಿಯು ನಮಗೆ ಜನ್ಮ ಜನ್ಮಕ್ಕೂ ಇಂಥ ದಾಸರೆ ಇರಲಿ.

**ಭಾವಸೂಚನ** || ಸಂಧಿ ಫಲಮಾಹ || ತಾರತಮ್ಯೇತಿ ||೧೬||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ತಾರತಮ್ಯ" ಇತಿ ||೧೬||

## ಕನ್ನಡಾರ್ಥ

ಈ ಆರೋಹಣ ತಾರತಮ್ಯ ಸಂಧಿಯನ್ನು ಬರೆಯುವವರಿಗೆ ಪಠಿಸುವವರಿಗೆ ಶ್ರೀ ಹರಿಯು ಕೊಡುವ ಫಲಗಳನ್ನು ಹೇಳುತ್ತಾರೆ ಮುಂದಿನ ಪದ್ಯಗಳಿಂದ ||೧೬||

**ಅವತರಣಿಕಾ:—**ತಾರತಮ್ಯ ಜ್ಞಾನದಿಂದಲೇ ಬಿಂಬನಾದ ಶ್ರೀಹರಿಯ ಸಂದರ್ಶನದಿಂದ ಮುಕ್ತಿಯಾಗುವದೆಂದು ಉಪದೇಶಗೈಯ್ಯುತ್ತಾರೆ.

**ಪ್ರಣತ ಕಾಮದನಂಘ್ರಿ ಸಂದರು ।**
**ಶನದಪೇಕ್ಷೆಯು ಉಳ್ಳವಗೆ ನಿ ।**
**ಚ್ಚಣಿಕೆ(ಕಿ) ಯೆನಿಪುದು ಜಡನೊದಲುಬ್ರಹ್ಮಾಂಡ ತರತಮವು॥**
**ಮನವಚನದಿಂ ಸ್ಮರಿಸುವರ ಭವ ।**
**ವನಧಿಶೋಷಿಸಿ ಪೋಗುವದು ಕಾ ।**
**ರಣವೆನಿಸುವದು ಜ್ಞಾನ ಭಕ್ತಿ ವಿರಕ್ತಿ ಸಂಪದಕೆ ॥೧೭॥**

**ಪದ್ಯಾರ್ಥ :—**ಪ್ರಣತಕಾಮದ ಶರಣಾಗತ ಭಕ್ತರಿಗೆ ಮುಖ್ಯ ಮುಕ್ತಿ ಫಲ ಪ್ರದನು ಬಯಕೆ ಸಲ್ಲಿಸುವ ಶ್ರೀ ನಾರಸಿಂಹಾ ಭಿನ್ನ ಶ್ರೀ ವಾಸುದೇವನ, ಅಂಘ್ರಿ ಪಾದಗಳ, ಸಂದರುಶನದಪೇಕ್ಷೆಯು ಉಳ್ಳವಗೆ ಕಾಣಬೇಕೆಂಬ ಹಂಬಲ ಲವಲವಿಕೆಯುಳ್ಳವಗೆ, ಅಂದರೆ ಸಾಧನ ಜೀವಿಗಳಾದ ಮುಮುಕ್ಷುಗಳಿಗೆ. ಈ ಜಡ ನೊದಲು ಬ್ರಹ್ಮಾಂಡ ತರತಮವು ನಿಚ್ಚಣಿಕೆ. ಎನಿಪುದು ಜಡ, ಕೇವಲ ಜಡವಲ್ಲದೇ ಸ್ಥಾವರ ಜೀವರಿಗೂ ಜಡರೆಂದು ಶಾಸ್ತ್ರದಲ್ಲಿ ಸಂಬೋಧಿಸಿದಂತೆ ಸ್ಥಾವರ ಜೀವರಾರಂಭಿಸಿ ಸಕಲ ಬ್ರಹ್ಮಾಂಡದಲ್ಲಿಪ್ಪ ತೃಣಾದಿ ಬ್ರಹ್ಮಾಂತ ಜೀವರ ತಾರತಮ್ಯ ತಿಳುವಳಿಕೆ, ಜ್ಞಾನವು, ನಿಚ್ಚಣಿಕೆ ಎನಿಪುದು ಊರ್ಧ್ವ ವೈಕುಂಠ ಲೋಕಕ್ಕೆ ಏರಲು, ಸೋಪಾನ=

ಪಾಪಟಿಗೆ ರೂಪವಾದ ಸಿಚ್ಚಣಿಕೆ ಎನಿಸುತ್ತದೆ. ಮನನಜನದಿಂ ಸ್ಮರಿಸುವರ =ಕೇವಲ ಆರೋಹಣ ತರತಮ ತಿಳಿದರೆ ಸಾಕಲ್ಲ. ಸದಾ ಸರ್ವದಾ, ವಾಚಾ ದಿಂದಲೂ, ಸ್ತೋತ್ರರೂಪವಾಗಿ ಬಾಯಿಂದ ಪಠಿಸುತ್ತ ಕ್ರಮೇಣ ಉತ್ತ ಮೋತ್ತಮ ಆರೆಂಬುದನ್ನು ಮನನ ಮಾಡುತ್ತ ಸ್ಮರಿಸುವವರ ಚಿಂತನೆ ಮಾಡುವವರ-ಭವವನಧಿ ಶೋಷಿಸಿ ಪೋಗುವವು=ಭವನೆಂಬ ಸಮುದ್ರದಲ್ಲಿ ಅಪಾರವಾದ ನೀರು ದಾಟಲು ಶಕ್ಯವಿಲ್ಲವಾದರೂ, ಈ ಆರೋಹಣ ತಾರ ತಮ್ಯವು, ಭವ ಸಮುದ್ರಕ್ಕೆ ವಡವಾಗ್ನಿ ಸದೃಶವಾಗಿ-ಸಂಸಾರ ಸಮುದ್ರವನು ಒಣಗಿಸಿ-ಸಂಸಾರ ದಾಟಲಿಕ್ಕೆ ಸುಗಮ ಮಾರ್ಗವಿದು. ಮತ್ತು, ಜ್ಞಾನ, ಭಕ್ತಿ, ವಿರಕ್ತಿ ಸಂಪದಕೆ ಕಾರಣವೆನಿಪುದು=ಶ್ರೀ ಸರ್ವೋತ್ತಮತ್ವೇನ ಶ್ರೀಹರಿಯ ಜ್ಞಾನ, ಜ್ಞಾನದಿಂದ ಭಕ್ತಿ, ವೈರಾಗ್ಯದಿಂದ ವಿಶೇಷ ಭಕ್ತಿಯಾದ ಸಂಪದಕೆ ಮೋಕ್ಷನೆಂಬ ಸಂಪತ್ತಿಗೆ ಈ ಆರೋಹಣ ತಾರತಮ್ಯ ಜ್ಞಾನವೇ ಮುಖ್ಯವಾದುದೆಂದು ಉಪದೇಶಗೈಯುತ್ತಾರೆ.

**ಭಾವಸೂಚನ ॥** ಪ್ರಣತೇತಿ ॥ ೧೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪ್ರಣತ" ಇತಿ॥

## ಕನ್ನಡಾರ್ಥ

ಪರಮಾತ್ಮನ ಸಾಕ್ಷಾತ್ಕಾರ ವೈರಾಗ್ಯ, ಭಕ್ತಿಗಳಿಗೆ ಕಾರಣವೆಂದು ಹೇಳುತ್ತಾರೆ "ಪ್ರಣತ" ಎಂಬ ಪದ್ಯದಿಂದ ॥೧೭॥

**ಅವತರಣಿಕಾ :**-ತ್ರಿವಿಧ ಜೀವರ ಸ್ವಭಾವ ಕರ್ಮಗಳನ್ನು ಶ್ರೀಹರಿಯು ಹೇಗೆ ವ್ಯಕ್ತ ಮಾಡುವನೆಂದು ಅಗ್ನಿ ದೃಷ್ಟಾಂತದಿಂದ ಹೇಳುತ್ತಾರೆ.

**ಅನಳನೊಳು ಹೋಮಿಸಿದ ಹರಿಚಂ ।**
**ದನವೆ ಮೊದಲಾದವದರ ಸೂವಾ ।**
**ಸನೆಯು ಪ್ರತ್ ಪ್ರತ್ಯೇಕ ತೋರ್ಪದು ಎಲ್ಲ ಕಾಲದಲಿ ॥**
**ದನುಜ ಮಾನವ ದಿವಿಜರವರನ ।**
**ರನುಚಿತೋಚಿತಕರ್ಮ ವೃಜಿನಾ ।**
**ರ್ದಸನು ವ್ಯಕ್ತಿಯ ಮಾಳ್ಪ ತ್ರಿಗುಣಾತೀತ ವಿಖ್ಯಾತ ॥೧೮॥**

**ಪದ್ಯಾರ್ಥ :**—ಅನಳ ನೊಳು ಹೋಮಿಸಿದ=ಅಗ್ನಿಯಲ್ಲಿ ಹೋಮ ಮಾಡಿದ ಹರಿಚಂದನವೆ ಮೊದಲಾದದರ ಸೂವಾಸನೆಯು=ಚಂದಯತೀತಿ ಚಂದನಂ, ಹರೇಃ ಚಂದನಂ ಹರಿಚಂದನಂ ಆಹ್ಲಾದಕಾರಕವಾದ ಇಂದ್ರ ದೇವರ ಚಂದನ ಪಾರಿಜಾತ-ಕಲ್ಪವೃಕ್ಷಾದಿ ವಿಶೇಷ ಸುವಾಸನೆ ಅಥವಾ ಚಂದನ ವಿಶೇಷವಾದ ಕೃಷ್ಣಾಗರು, ಚಂದನಾಗರು, ಅಗರು, ತಗರು ವಿಶೇಷ, ವಿವಿಧ ಸುವಾಸನೆಯುಳ್ಳ ಚಂದನವು ಶ್ರೀಹರಿಯ ಧೂಪಾರತಿಗೆ ಹಾಕಿದಾಗ್ಗೆ ಅಥವಾ ಬೇರೆ ಬೇರೆ ವಿವಿಧ ಅಗ್ನಿ ಕ್ರಿಯಾಗಳಲ್ಲಿ ಹೋಮಿಸಿದಾಗ್ಗೆ ಅದರ= ಅವುಗಳ ಸುವಾಸನೆಯು=ಒಳ್ಳೆ ವಾಸನೆಯು ಎಲ್ಲ ಕಾಲದಲ್ಲಿ ಪ್ರತ್ ಪ್ರತ್ಯೇಕ ತೋರ್ಪದು=ಆ ದ್ರವ್ಯಗಳನ್ನು ಹೋಮಿಸುವ ಕಾಲದಲ್ಲಿ ಬೇರೆ ಬೇರೆ ಸುವಾಸನೆಯು, ಅಗ್ನಿಯು, ವ್ಯಕ್ತ್ರಮಾಡುವಂತೆ ವೃಜಿನಾರ್ದನನು ಪಾಪ ಗಳನ್ನು ಅರ್ದನ ಮಾಡುವ ಹರಿಯು ದನುಜ=ದನುದೇವಿಯ ಪುತ್ರರು, ತಮೋಜೀವರು, ಮಾನವ=ಮನುಜರು, ನಿತ್ಯ ಸಂಸಾರಿಗಳು ರಜೋ ಜೀವರು, ದಿವಿಜರು=ಮುಕ್ತಿಯೋಗ್ಯರು ಮೊದಲುಗೊಂಡು ದೇವತೆಗಳು ಸತ್ವಜೀವರು, ಅವರವರನುಚಿತೋಚಿತ ಕರ್ಮ=ತ್ರಿವಿಧ ಜೀವರ-ಅನುಚಿತ ಉಚಿತ ಯೋಗ್ಯವಾಗದೇ ಇದ್ದ ದುಷ್ಕರ್ಮ, ಉಚಿತಕರ್ಮ ದೇವತೆಗಳ ಯೋಗವಾದ ಪುಣ್ಯ ಕರ್ಮವನ್ನು ವ್ಯಕ್ತಿ ಮಾಡುತಲಿಪ್ಪ, ಅವರವರ ಯೋಗ್ಯತೆಯನುಸರಿಸಿ ಫಲರೂಪವಾಗಿ ಅವರ ಅನುಭವಕ್ಕೆ ಕೊಟ್ಟು, ತೋರುವನು. ಆದರೂ ತಾನು ತ್ರಿಗುಣಾತೀತ ಸತ್ವ, ರಜಃ, ತಮೋಗುಣ ಗಳಿಂದ ಅತೀತ ದೂರನಾದವನು, ವಿಖ್ಯಾತ=ವೇದಗಳಲ್ಲಿ ಪ್ರಸಿದ್ಧನಾದ ಹರಿಯೆಂದು ಸ್ತೋತ್ರಗೈಯುತ್ತಾರೆ.

**ಭಾವಸೂಚನ** ‖ ಅನಳೇತಿ ‖೧೮‖

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಅನಲ" ಇತಿ ‖

### ಕನ್ನಡಾರ್ಥ

ಜೀವರ ಸ್ವಭಾವ ಕರ್ಮಗಳಿಗನುಸಾರವಾಗಿ ಅವರಿಗೆ ಕರ್ಮಫಲಗಳನ್ನು ಶ್ರೀ ಹರಿಯು ವ್ಯಕ್ತ ಮಾಡುವನು. ಈ ವಿಷಯವನ್ನು, ವಿವಿಧ ಆಹುತಿಯ

ವಾಸನೆಯನ್ನು ಆ ದ್ರವ್ಯದ ಅನುಗುಣವಾಗಿ ಹೊರಗೆಡಹುವ ಅಗ್ನಿಯು ದೃಷ್ಟಾಂತದಿಂದ ತಿಳಿಸುತ್ತಾರೆ, "ಅನಲ" ಎಂಬ ಪದ್ಯದಿಂದ ॥೧೮।

ಅವತರಣಿಕಾ :—ಆರೋಹಣ ತಾರತಮ್ಯ ಸಂಧಿಯನ್ನು ಉಪ ಸಂಹಾರ ಗೈಯ್ಯುತ್ತಾ ಜಿಂಬಸಾದ ಶ್ರೀ ಜಗನ್ನಾಥವಿಠಲನ ಅನಂತಗುಣ ಪೂರ್ಣನೆಂದು ವೈಮರೆತು ಸ್ತೋತ್ರಗೈಯ್ಯುತ್ತಾರೆ.

**ಭಕ್ತವತ್ಸಲ ಭಾಗ್ಯ ಪುರುಷ ವಿ ।**
**ವಿಕ್ತ ವಿಶ್ವಾಧಾರ ಸರ್ವೋ ।**
**ದೃಕ್ತ ದೃಷ್ಟಾ ದೃಷ್ಟ ದುರ್ಗಮ ದುರ್ವಿಭಾವ್ಯ ಸ್ವಹಿ ॥**
**ಶಕ್ತ ಶಾಶ್ವಿತ ಸಕಲ ವೇದ್ಯೈ ।**
**ಕೋಕ್ತ ಮಾನದ ಮಾನ್ಯ ಮಾಧವ ।**
**ಸೂಕ್ತ ಸೂಕ್ಷ್ಮ ಸ್ಥೂಲ ಶ್ರೀ ಜಗನ್ನಾಥ ವಿಠಲನು ॥೧೯॥**

ಅಂತು ಸಂಧಿ ೨೦ಕ್ಕೆ ಪದ ೬೦೩ಕ್ಕೆ ಆರೋಹಣ
ತಾರತಮ್ಯ ಸಂಧಿ ಸಮಾಪ್ತ ಮಂಗಳಮಾಹ ॥
ಶ್ರೀ ಗುರುಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :—**॥ ಭಕ್ತವತ್ಸಲ=ಭಕ್ತೇಷು ಸ್ನೇಹವಾನ್ ಭಕ್ತವತ್ಸಲ ಭಕ್ತರಲ್ಲಿ ಪ್ರೀತಿಯುಳ್ಳವ, ಭಾಗ್ಯ ಪುರುಷ=ಸಮಗ್ರ ಐಶ್ವರ್ಯವೀರ್ಯಾದಿ ಷಡ್ಗುಣೈಶ್ವರ್ಯ ಸಂಪನ್ನತ್ವವೇ ಮಹಾ ಭಾಗ್ಯ=ಪುರುಷನೆಂದು ಅಥವಾ ಸಕಲ ಐಶ್ವರ್ಯ ಮುಕ್ತಿ ಸಂಪತ್ಪ್ರದಾತೃಳಾದ ಶ್ರೀ ಲಕ್ಷ್ಮೀದೇವಿಗೆ ಪುರುಷ ಪತಿ, ವಿವಿಕ್ತ=ಜೀವಜಡಾತ್ಮಕ ಪ್ರಪಂಚ ವಿಲಕ್ಷಣ ಇತಿ ವಿವಿಕ್ತಃ (ವಿದ್ಯಾಧಿ ರಾಜೀಯ) ವಿಶ್ವಾಧಾರ=ಸಮಸ್ತ ಜಗತ್ತಿಗೆ ಸ್ಥಿತಿಕೊಟ್ಟು ವಿಶ್ವಕ್ಕೆ ತಾನೇ ಆಧಾರನೂ, ಲಯಕಾಲದಲ್ಲಿಯೂ, ಸಮಸ್ತ ಜೀವ ಜಡಾತ್ಮಕ ವಿಶ್ವವನ್ನು ಸ್ವೋದರದಲ್ಲಿರಿಸಿದಾಗ್ಯೂ ತಾನೇ ಆಧಾರನಾಗಿರುವನು. ಸರ್ವೋದ್ರಿಕ್ತ= ಸರ್ವರಿಂದ–ಉದ್ರಿಕ್ತ ಅಧಿಕನಾದವ ಸರ್ವೋತ್ತಮ, ದೃಷ್ಟಾದೃಷ್ಟ=ಜೀವರ ಯೋಗ್ಯತೆಯಂತೆ ದೃಷ್ಟನು=ತೋರುವನು, ಅದೃಷ್ಟ=ಸಾಕಲ್ಯೇನ ಕಾಣಿಸದಿರುವನು, ದುರ್ಗಮ=ಸಾಕಲ್ಯೇನ ಹೊಂದಲಿಕ್ಕೆ ಅಶಕ್ಯನು ಅಥವಾ ಮೋಕ್ಷ ಸುಖಕ್ಕೆ ಸಾಧನವಾದ ಜ್ಞಾನಾಖ್ಯ ದ್ರವ್ಯವನ್ನು ಹೊಂದಿಸುವನು,

ದುರ್ವಿಭಾವ್ಯ=ಸಾಕಲ್ಯೇನ ಅವನ ಗುಣ ರೂಪಕ್ರಿಯೆಗಳು ಹೀಗೆ ಎಂದು ಭಾವಿಸಿ ತಿಳಿಯಲಿಕ್ಕೆ ಅಶಕ್ಯನು, ಸ್ವಹಿ=ಸ್ವ=ತನ್ನಿಂದ ತಾನಾಗಿ, ಹಿ= ಪ್ರಸಿಧ್ಧನು. ತನ್ನನ್ನು ಪೊಗಳುವ ವೇದಗಳಲ್ಲಿ.ಸುಪ್ರಸಿದ್ಧನು, ಶಕ್ತ= ಸಕಲರಲ್ಲಿ ಬಲಶಾಲಿ, ಬಲಿಷ್ಠ, ಶಾಶ್ವತ=ಸಕಲ ಕಾಲದಲ್ಲಿ ಒಂದೇ ರೀತಿ ಯಾಗಿರುವನು, ಸಕಲ ವೇದೈಕೋಕ್ತ=ಸಕಲ ವೇದಗಳಿಂದ ಪ್ರಾಮುಖ್ಯ ನಾಗಿ ಪ್ರತಿಪಾದ್ಯನು, "ಸರ್ವೇ ವೇದಾಃ ಯತ್ಪದಮಾಮನಂತಿ" ಮಾನದ= ಮಾನಮಹಂಕಾರಂ ಸತ್ಕಾರಂ ವಾ ಯಥಾಸಂಭವಂ ದದಾತಿ ದ್ಯತೀತಿ ವಾ ಮಾನದಃ || ಮಾನ್ಯ=ಸರ್ವೇಶ್ವರತ್ವೇನ ಸರ್ವೈಃ ಪೂಜನೀಯತ್ವಾನ್ಮಾನ್ಯಃ|| ಮಾಧವ=ಮಧುಕುಲೋತ್ಪನ್ನತ್ವಾನ್ಮಧುವನ ವಿಹಾರಿತ್ವಾದ್ವಾ ಮಾಧವಃ || ಮಧುವಿದ್ಯಾ ವಿಷಯತ್ವಾನ್ಮಾಧವಃ, ಜ್ಞಾನರೂಪಸ್ವಾಮೀ ಚೇತಿ ಮಾಧವಃ ಸೂಕ್ತ=ವೇದವಾಕ್ಯಗಳಿಂದ ವೇದಸೂಕ್ತ ಮಂತ್ರಗಳಿಂದ ಸ್ತುತ್ಯನು, ಸೂಕ್ಷ್ಮ=ಅತ್ಯಣುವಾದವ ಜೀವಾಂತರ್ಯಾಮಿ ಬಿಂಬನಾದ ಹರಿಯೇ ಅತಿ ಸೂಕ್ಷ್ಮನು, ಸ್ಥೂಲ=ಮಹತ್ಪರಿಮಾಣವಾದ್ಯಾಕೃತಾಕಾಶವ್ಯಾಪ್ತರೂಪ ಸ್ಥೂಲ ಅಥವಾ (ರಘುಷು) ಸ್ಥೂಲೋ ಮಹತ್ಪರಿಮಾಣಃ ಅನಂತಾನ್ಯಯಶಕ್ತಿತ್ವಾ ತ್ತದನ್ಯತ್ರ ವಿರೋಧಿನಃ || ಸಂತಿ ಸರ್ವೇ–ಗುಣಾಸ್ತತ್ರ ನ ಚ ತತ್ರ ವಿರೋಧಿನ ಇತಿ ಚ ಶ್ರುತಿಃ || ಸ್ಥೂಲ, ಶ್ರೀ ಜಗನ್ನಾಥ ವಿಠ್ಠಲನು=ಜಗತ್ತಿಗೆ ಒಡೆಯ ನಾದ ಶ್ರೀ ವಿಠಲನಾಮಕ ಶ್ರೀ ಹರಿಯೆಂದು ಸ್ತೋತ್ರ ಮಾಡಿದ್ದಾರೆ. ಇತಿ ಆರೋಹಣ ತಾರತಮ್ಯ ಸಂಧಿ ಪದ್ಯಾರ್ಥ ಸಂಪೂರ್ಣಂ.

ಶ್ರೀ ಗುರುಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು

**ಭಾವಸೂಚನ** || ಭಕ್ತ್ಯೇತಿ ||೧೯||

ಓಮಿತಿ ಶ್ರೀ ಹರಿಕಥಾಮೃತಸಾರ ಭವಸೂಚನೆ

ಶ್ರೀಮದಾರೋಹಣ ಸಂಧಿಃ ಸಮಾಪ್ತಃ||

|| ಶ್ರೀ ಕೃಷ್ಣಾರ್ಪಣಮಸ್ತು ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪ ಸಂಹರತಿ-"ಭಕ್ತ" ಇತಿ || **"ವಿವಿಕ್ತ"**—* || ಓಂ || ಅಧಿಧೇಹಿ ಪೃಕ್ಷಃ ಪೀಪಿಹೀಷಃ ಸುದುಧಾ (ಘಾಂ) ಮಿಂದ್ರ ಧೇನುಂ ಭರದ್ವಾಜೇಷು ಸುರುಚೋರುರುಚ್ಯಾಃ ತಮಾ ನೂನಂ ವೃಜಿನಂ ||ಓಂ|| * ಪಾಪವಿಯೋಗ ಕರ್ತಾ || **ದುರ್ಗಮಃ**—* || ಓಂ || ವಿದ್ಯಾಮ ಶೂರನವ್ಯಸಃ ವಸೋಃ ಸ್ಪಾರ್ಹಸ್ಯ ಪುರುಹೂತ ರಾಧಸಃ || ಇಂದ್ರ ಯಥಾ ಹ್ಯಸ್ತಿತೇಽಪರೀತಂ ನೃತೋ ಶವಃ || ಓಂ || * || ಸುಖ ಸಂಪಾದ್ಯಜ್ಞಾನ ಧನಾಖ್ಯಂ ವಸು ಗಮಯತಿ ಪ್ರಾಪಯತಿ ಇತಿ ತಥೋಕ್ತಃ || ೧೯ ||

|| ಇತಿ ಆರೋಹಣ ಸಂಧಿಃ ಸಮಾಪ್ತಃ ||

## ಕನ್ನಡಾರ್ಥ

ಆರೋಹಣ ಸಂಧಿಯನ್ನು ಉಪಸಂಹರಿಸುತ್ತಾರೆ "ಭಕ್ತವತ್ಸಲ" ಎಂಬ ಪದ್ಯದಿಂದ.

**"ವಿವಿಕ್ತ"**—ಭಕ್ತರನ್ನು ಪಾಪಗಳಿಂದ ವಿಯೋಗ ಮಾಡುವನು.

**"ದುರ್ಗಮ"**—ಮೋಕ್ಷ ಸುಖಕ್ಕೆ ಸಾಧನವಾದ ಜ್ಞಾನವೆಂಬ ದ್ರವ್ಯವನ್ನು ಹೊಂದಿಸುವವನು || ೧೧ ||

ಇಲ್ಲಿಗೆ ಆರೋಹಣ ತಾರತಮ್ಯ ಸಂಧಿಯ ಕನ್ನಡಾರ್ಥಾನುವಾದವು ಮುಗಿದುದು

ಶ್ರೀಮಧ್ವೇಶ ಕೃಷ್ಣಾರ್ಪಿತವಾಗಲಿ.




ಶ್ರೀ ಲಕ್ಷ್ಮೀನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ
ಶ್ರೀ ಗುರುರಾಜೋ ವಿಜಯತೇ

# ೨೧ನೇ ಕರ್ಮ ವಿಮೋಚನ ಸಂಧಿಯ ಸಾರ

ಹಿಂದೆ ೨೦ನೇ ಸಂಧಿಯಲ್ಲಿ, ಆರೋಹಣ ತಾರತಮ್ಯದಿಂದ ಧ್ಯಾನೋಪಾಸನೆ ಮಾಡಲು, ಬ್ರಹ್ಮಜ್ಞಾನ ಉತ್ಪನ್ನವಾಗಿ ಕರ್ಮ ವಿಮೋಚನವಾಗುವದೆಂದು ಬಹು ಪ್ರಮಾಣ, ವಾಯು ಪುರಾಣ-ಮಾಘಮಾಹಾತ್ಮ್ಯ ಶಾಂಡಿಲ್ಯ ತತ್ವ ೬-೮ ಅಧ್ಯಾಯಗಳಲ್ಲಿ ವರ್ಣಿಸಿದಂತೆ ಶ್ರೀ ವಿಜಯದಾಸಾರ್ಯರು ಧ್ಯಾನೋಪಾಸನೆ ಸುಳಾದಿಗಳನ್ನು ರಚಿಸಿದ್ದಾರೆ. ಇದೇ ಆಧಾರವೇ ಗುಣತಾರತಮ್ಯ ಅವರೋಹಣ, ಆರೋಹಣ ಧ್ಯಾನೋಪಾಸನ ಸಂಧಿಗಳ ಸಂಬಂಧಗಳಿಗೆ ಮೂಲಾಧಾರ. ಇದರಂತೆ ಶ್ರೀ ವಿಜಯರು, "**ತಾರತಮ್ಯದಿಂದ ಹರಿಗುಣೋಪಾಸನೆ ಮೂರೊಂದು ಗುಣವಿಡಿದು ಕ್ರಮಾನುಸಾರದಲಿ ಪ್ರಾರಬ್ಧ ಸಂಖ್ಯದಲಿ** ಯೋಗ ಆ ತರುವಾಯ" ॥ ಎಂದು ಹೇಳಿದ್ದಾರೆ. ಕಾರಣ ಗುಣತಾರತಮ್ಯ, ಆರೋಹಣ ತಾರತಮ್ಯ, ಬೃಹತ್ತಾರತಮ್ಯ, ಕಲ್ಪಸಾಧನ ತಾರತಮ್ಯ, ಅವರೋಹಣ ತಾರತಮ್ಯ, ಅನುಕ್ರಮಣಿಕಾ ತಾರತಮ್ಯ, ದೈತ್ಯ ತಾರತಮ್ಯ, ಕಕ್ಷಾತಾರತಮ್ಯ ಸಂಧಿಗಳೆಲ್ಲ ಧಾನೋಪಾಸನೆಗೆ ಸಂಬಂಧವಾದುವೆಂದು ಶ್ರೀ ವಿಜಯದಾಸರ ನಿಜಭಾವವರಿತ ಶ್ರೀ ಜಗನ್ನಾಥದಾಸರ ನಿಜವಾದ ಉಕ್ತಿ ಎಂದು ತಾರತಮ್ಯ ಸಂಧಿಗಳ ಸಂಬಂಧ ವಿವೇಚನೆ ಸರಿಯಾಗಿದೆ. ಇನ್ನು ಅಪರೋಕ್ಷವಾದ ಮೇಲೆ, ಕರ್ಮ ಸಂಕ್ಷಯವಾಗುವದೆಂದು ಶಾಸ್ತ್ರಸಿದ್ಧ. ಕಾರಣ ದಾಸಾರ್ಯರು ಇಲ್ಲಿ ಪ್ರಸಂಗಾನು ಸಂಗತಿಯಿಂದ ಕರ್ಮ ವಿಮೋಚನ ಸಂಧಿಯನ್ನು **ಪ್ರಾ**ರಂಭಿಸಿದ್ದಾರೆ.

"ಕರ್ಮಣಾಂ ಗಹನಾ ಗತಿಃ" "ಮನನಶೀಲರಾದ ಮುನಿಗಳಾದರೂ ಒಂದು ದಿನದಲ್ಲಿ ಹತ್ತು ಜನುಮ ಬರುವ ಕರ್ಮ ಮಾಡುವರೆಂದೂ" ಮತ್ತು "ಕೆಸರಿಂದ ಕೆಸರು ತೊಳದಂತೆ ಕರ್ಮದ ಪಥವು" ಕರ್ಮದಿಂದಲೇ ಆರು ಕಡೆ ಬಿದ್ದವರಿಲ್ಲ ನಿರ್ಮಲಾತ್ಮಕ ವಿಜಯವಿಠಲನ ಪೊಂದು" ಒಂದು ಕರ್ಮಮೋಗೆ

ಅನಂತ ಕರ್ಮ, ಕರ್ಮದ ದಾರಿ ಕಡೆಗಾಣದವರಿಲ್ಲ" "ಕರ್ಮ ಕರ್ಮವಲ್ಲಿ ನಿಷ್ಕಾಮಕನಾಗಿ ಕರ್ಮನಾಮಕ ವಿಜಯ ವಿಠಲನ್ನ ಚಿಂತಿಸು" ಹೀಗೆ ಕರ್ಮಾಕರ್ಮ ಪ್ರೇರಕ, ಕಾರಕ, ಕರ್ಮಭೋಕ್ತೃವ್ಯನು ಶ್ರೀ ಹರಿಯೇ ಎಂದು ಚಿಂತಿಸಲು ಬ್ರಹ್ಮಜ್ಞಾನಿಯಾದವನಿಗೆ, "ಆಗಾಮಿ ಸಂಚಿತ ಹರಿಸಿ। ಆಗುವ ಪ್ರಾರಬ್ಧಗಳ। ವೇಗಾನುಸಾರ ತೀರಿಸಿ। ತಾಗಿಸ ದುಃಖಸ್ಪರುಶ ಪೋಗಲಾಡಿಸಿ (ಲಿಂಗಭಂಗಗೈಸಿ) ಅವರವರ। ಯೋಗ್ಯತಾನರಿವು ಸುಖವ ಗಾಲಿಸಿ। ಭಾಗವತರನ ಮಾಡಿ। ಶ್ರೀ ಗುರು ವಿಜಯ ವಿಠಲ ಮೂಗುತಿಯ ನೀವ"ನೆಂದು ಶ್ರೀ ವಿಜಯದಾಸರ ವಚನ. ಇಲ್ಲಿ ಮುಖ್ಯವಾದ ವಿಷಯಗಳ ವಿವೇಚನೆ ಏನಂದರೆ, ಜೀವನಿಗೆ ಅನಾದಿ ಕರ್ಮ ನೆಪದಿಂದ, ಸೂಕ್ಷ್ಮ ಸೃಷ್ಟಿ ಆರಂಭಿಸಿ, ಲಿಂಗ ಉಪಚಯದ್ವಾರಾ, ಅನಿರುದ್ಧ ಪ್ರಾಕೃತ ದೇಹಗಳನ್ನು ಕೊಟ್ಟು, ಸ್ಥೂಲ ಶರೀರ ಉತ್ಪತ್ತಿ ಮಾಡಿ ಸಾಧನ ಮಾಡಿಸುವ ಕಾಲದಲ್ಲಿ ಪ್ರತಿ ಶ್ವಾಸೋಚ್ಛ್ವಾಸಗಳಿಗೆ ಆಗುವಕರ್ಮಗಳೇನು? ಅವುಗಳನ್ನು ಮಾಡಿ ಮಾಡಿಸುವನಾರು? ೨ ಕರ್ಮಗಳಲ್ಲಿಪ್ಪ ಭೇದಗಳೇನು? ೩ ಒಬ್ಬನ ಕರ್ಮಗಳಂತೆ ಇನ್ನೊಬ್ಬ ಜೀವಿಯ ಕರ್ಮವೇ? ಅಥವಾ ಬೇರೆಯೆ? ೪ ಯಾವ ಯಾವ ಕರ್ಮಗಳಿಗೆ ಯಾರಾರು ಅಧಿಕಾರಿಗಳು? ೫ ದೇವತೆಗಳಲ್ಲಿ ಯಾವಾವ ಜಾತಿಗಳು ಅವರು ಸಹ ಕರ್ಮಕ್ಕೆ ಒಳಪಟ್ಟವರೆ? ೬ ದೇವತೆಗಳಂತೆ ಮಾನವರು ಜಾತಿ ವಿವೇಕ ಭೇದದಿಂದ ಕರ್ಮಮಾಡಿಸಿದರೆ, ಮಾಡಲು ಅಧಿಕಾರಿಗಳಾರು? ೭ ಸಂಚಿತಾಗಾಮಿ ಪ್ರಾರಬ್ಧ ಕರ್ಮಗಳ ವಿವರವೇನು? ೮ ಕರ್ಮಕ್ಕೆ ಆನಂತ್ಯವಿದ್ದ ಕಾರಣ ನಾಶವಾಗುವ ಬಗೆ ಹೇಗೆ ಏನೆಂಬುದು ವಿಚಾರಾಂಶ ವಾಗಿದೆ.

ಶ್ರೀ ವೇದವ್ಯಾಸ ದೇವರು ಬ್ರಹ್ಮಸೂತ್ರ ಚತುರ್ಥಾಧ್ಯಾಯ ೧ನೇ ಪಾದ **"ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ** ತದ್ವ್ಯಪದೇಶಾತ್ ಓಂ॥ ಎಂಬ ಸೂತ್ರದಲ್ಲಿ ಮುಕ್ತಿಯೋಗ್ಯರಿಗೆ ಪರಬ್ರಹ್ಮನ ದರ್ಶನವಾದ ಮೇಲೆ ಅಪರೋಕ್ಷ ಜ್ಞಾನವು ಆದ ಮೇಲೆ, ಆಗುವ ಪಾಪವು ಸಂಬಂಧವಾಗುವದಿಲ್ಲ. ಅಪರೋಕ್ಷ ಜ್ಞಾನಾತ್ ಪೂರ್ವದಲ್ಲೆ ಮಾಡಿದ ಅನೇಕ ಸಂಚಿತವಾದ ಕರ್ಮವು ಸ್ವರೂಪತಃ ನಾಶವಾಗುತ್ತವೆ. ತೂಲ ಅರಳೆಯ ರಾಶಿಯನ್ನು ಅಗ್ನಿಕಣವು ಒಮ್ಮೆಲೇ ವಿನಾಶ ಮಾಡುವಂತೆ ಅಪ

ರೋಕ್ಷ ಜ್ಞಾನದಿಂದ ಸ್ವರೂಪತಃ ಸಂಚಿತಕರ್ಮ ನಾಶಹೊಂದುತ್ತದೆ. ಅಪ ರೋಕ್ಷ ಜ್ಞಾನಾನಂತರ ಕರ್ಮವು ಆಗಾಮಿ ಮುಂದೆ ಬರುವದು. "ಪುಷ್ಕರ ಪಲಾಶದಂತೆ ಸಂಬಂಧವಾಗುವದಿಲ್ಲ. ನೀರಿನಲ್ಲಿ ಕಮಲವಿದ್ದಂತೆ. ಇನ್ನು "ನಾಭುಕ್ತಂ ಕ್ಷೀಯತೇ ಕರ್ಮ" ಎಂಬುವಂತೆ ಪ್ರಾರಬ್ಧ ಕರ್ಮವನ್ನು ಅವಶ್ಯ ವಾಗಿ ಅನುಭೋಗ ಮಾಡಿಸಿ ಪ್ರಾರಬ್ಧ ಕರ್ಮವನ್ನು ಉಪಮರ್ದ ಮಾಡಿ ಮುಕ್ತಿ ಕೊಡುತ್ತಾನೆ.

೨ ಇದರಂತೆಯೇ ಭಗವದ್ವೇಷಿಗಳಾದ ತಮೋಯೋಗ್ಯರಿಗೆ ತಮಸ್ಸಿಗೆ ಕಾರಣವಾದ ಮಿಥ್ಯಾ ಜ್ಞಾನವು ಪೂರ್ಣವಾಗುತ್ತಿರಲು, "ಯಥಾಽಶ್ಲೇಷೋ ವಿನಾಶಶ್ಚ ಮುಕ್ತಸ್ಯ ತು ವಿಕರ್ಮಣಃ । ಏವಂ ಸುಕರ್ಮಣಶ್ಚಾಪಿ ಪತತಸ್ತ ಮಸಿ ಧ್ರುವಮ್ ॥ ಇತ್ಯಾಗ್ನೇಯೇ ॥ ಎಂದು ಸರ್ವಜ್ಞರ ವಚನ, ಮುಕ್ತರ ಸಂಚಿತ ಆಗಾಮಿ ಕರ್ಮಪಾಪವು ವಿನಾಶ-ಅಶ್ಲೇಷವಾದಂತೆ ತಮೋಯೋಗ್ಯ ಬ್ರಹ್ಮದ್ವೇಷಿಗಳ ಪುಣ್ಯಕ್ಕೂ, ಅಂದರೆ ಮಿಥ್ಯಾಜ್ಞಾನಾತ್ಪೂರ್ವ ಸಂಚಯ ಪುಣ್ಯಕ್ಕೂ ಸ್ವರೂಪತಃ ನಾಶ, ಮಿಥ್ಯಾಜ್ಞಾನಾನಂತರ ಮುಂದೆ ಬರುವ ಆಗಾಮಿ ಪುಣ್ಯಕ್ಕೆ ಸಂಬಂಧವಾಗುವದಿಲ್ಲ.

ಹೀಗೆ ಕರ್ಮಕ್ಷಯವಾದೊಡನೇ ಬ್ರಹ್ಮಜ್ಞಾನಿಗೆ ಮುಕ್ತಿ, ಬ್ರಹ್ಮ ದ್ವೇಷಿಗೆ ತಮಸ್ಸಾಗುತ್ತದೆಂದರೆ "**ಓಂ ಅನಾರಬ್ಧಕಾರ್ಯೇ ಏವ ಪೂರ್ವೇ ತದವಧೇಃ ಓಂ**" ಎಂಬ ಸೂತ್ರಕ್ಕೆ, ಶ್ರೀ ಸರ್ವಜ್ಞರು "ಅನಾರಬ್ಧಕಾರ್ಯೇ ಏವ ಪೂರ್ವೇ ಪುಣ್ಯಪಾಪೇ ವಿನಶ್ಯತಃ ॥ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯತ ಇತಿ । ತದವಧೇಃ ॥ ಅನುಭವಿಸಲು ಯೋಗ್ಯ ವಾಗದೇ ಇರುವ ಪೂರ್ವಸಂಚಿತ ಪಾಪಗಳು ಮುಕ್ತಿಯೋಗ್ಯರಿಗೆ ನಾಶವಾಗು ತ್ತವೋ ಆಗಾಮಿ ಪಾಪಕರ್ಮಲೇಪವಿಲ್ಲವೋ ಅದರಂತೆ ಬ್ರಹ್ಮದ್ವೇಷಿಗಳ ಸಂಚಿತ ಪುಣ್ಯನಾಶ, ಆಗಾಮಿ ಪುಣ್ಯಕ್ಕೆ ಸಂಬಂಧವಾಗುವದಿಲ್ಲ. ಆದರೆ ಯಾವ ಅನುಭೋಕ್ತವ್ಯವಾದ ಪ್ರಾರಬ್ಧ ಕರ್ಮವು ಇದೆಯೋ ಅಲ್ಲಿಯವರಿಗೆ ಮೋಕ್ಷ ವಾಗುವದಕ್ಕೆ ಅವಧಿ. ಈ ಪ್ರಾರಬ್ಧಕರ್ಮವಾದರೂ ಶ್ರೀ ಹರಿಯು ಪರಮಾನು ಗ್ರಹಿಸಿ "ಆರಬ್ಧಯೋಶ್ಚ ನಾಶಃ ಸ್ಯಾದಲ್ಪಯೋಃ ಪುಣ್ಯಪಾಪಯೋಃ ಇತಿ ನಾರಾಯಣತಂತ್ರೇ"॥—ಮುಕ್ತಿಯೋಗ್ಯರ ಪಾಪ ಪ್ರಾರಬ್ಧ, ತಮೋಜೀವಿಗಳ ಪುಣ್ಯ ಪ್ರಾರಬ್ಧವು ಅವಶ್ಯ ಅನುಭೋಕ್ತವ್ಯವಾದರೂ, ಅಲ್ಪ ಪಾಪ ಪುಣ್ಯ

ಗಳಿಗೆ ಫಲಪ್ರಾಪ್ತಿಯಾಗುವ "ಉಪಮರ್ದವಾಗುವದೆಂದು ನಾರಾಯಣ ತಂತ್ರದಲ್ಲಿ ಹೇಳಿದೆ. ಈ ಪ್ರಾರಬ್ಧ ಕರ್ಮ ಅನುಭೋಗ ತೀರಿದೊಡನೆ, ಬ್ರಹ್ಮಕಲ್ಪಾಂತ್ಯದಲ್ಲಿ ಮುಕ್ತಿ, ಅಂಧಃತಮವಾಗುತ್ತದೆ. ಜ್ಞಾನಾತ್ಪೂರ್ವ ದಲ್ಲಿ ಮಾಡಿದ ಅಕಾಮ್ಯ ಕರ್ಮವು ಮೋಕ್ಷಕ್ಕೆ ಸಾಧನೀಭೂತವಾಗುತ್ತದೆ. ಬ್ರಹ್ಮಜ್ಞಾನೋತ್ತರದಲ್ಲಿ ಮಾಡಿದ ಅಕಾಮ್ಯ ಪುಣ್ಯದಿಂದ ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾಗುತ್ತದೆ.

ಅಪರೋಕ್ಷಾನಂತರದಲ್ಲಿಯೂ, ಸ್ವೋತ್ತಮರ ದ್ರೋಹವು, ನಿರಂಶ ರಿಗೆ ಮುಕ್ತಿಯಲ್ಲಿ ಕ್ಲೃಪ್ತಾನಂದಕ್ಕೆ ಹ್ರಾಸ, ಸಾಂಶ ತತ್ವಾಭಿಮಾನಿಗಳಿಗೂ, ರುದ್ರ ಪರಿಯಂತ ಆನಂದ ಉಪ್ರೇಕಕ್ಕೆ ಹ್ರಾಸವಾಗುತ್ತದೆಂದು ಶಾಸ್ತ್ರಸಿದ್ಧ.

ಮತ್ತು ಮುಕ್ತಿಯೋಗ್ಯರಿಗೆ ಮುಕ್ತಿಗೆ ಇಷ್ಟವಾಗದೇ ಇದ್ದ ಪುಣ್ಯವು ಪುತ್ರಶಿಷ್ಯಾದಿಗಳಿಗೇ, ಅನಿಷ್ಟಪಾಪವು ಕಿಂಚಿತ್ ನಾಶ ಕಿಂಚಿತ್ ದೈತ್ಯರಿಗೆ ಹಂಚಿ ಕೊಡುತ್ತಾನೆ.

ಕೇವಲ ಮೋಕ್ಷಕ್ಕೆ ಇಷ್ಟಪುಣ್ಯವೇ ಕಾರಣವಾಗುತ್ತದೆ. ಇಷ್ಟ ಪುಣ್ಯವೆಂದರೆ ಅಕಾಮ್ಯ ಪುಣ್ಯ **ಕೇವಲ ಭಗವದುಪಾಸನೆ ಬಿಂಬೋ ಪಾಸನೆ ಪುಣ್ಯವೇ** ಮೋಕ್ಷಕ್ಕೆ ಇಷ್ಟವಾದುದು. ಎಂದು ಶ್ರೀ ವಿಜಯರ ವಚನ "ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯ ವತ್ತರಂ ಭವತಿ"|| (ಛಾಂದೋಗ್ಯ ೧-೧-೧೦)

ಇಂತು ಬ್ರಹ್ಮಸೂತ್ರ, ಸೂತ್ರಭಾಷ್ಯಗಳಲ್ಲಿ ಸರ್ವಜ್ಞರು ವಿವರಿಸಿದಂತೆ.

**"ವಿಷ್ಣು ರಹಸ್ಯ ೩೩ನೇ ಅಧ್ಯಾಯದಲ್ಲಿಯೂ,** "ಅನಾದಿ ಕರ್ಮಣಾ ಬದ್ಧಾ ಜೀವಾ ಏವ ಹಿ ಸರ್ವಶಃ || ಪ್ರಾಗಬ್ದ ಕರ್ಮ ಭುಂಜಾನಾಃ ಪುನಃ ಕರ್ಮಾಣಿ ಕುರ್ವತೇ ||೧|| ತಾನ್ಯೇವ ಕ್ರಿಯಮಾಣಾನಿ ಜಾಯಂತೇ ಸಂಚಿತಾನ್ಯಪಿ || ತಾನ್ಯೇವ ಕಾಲತೋ ಯಾಂತಿ ಪ್ರಾರಬ್ಧತ್ವಂ ಫಲೋನ್ಮು ಖಾತ್ ||೨|| ಕೋ ನಾಮ ಕರ್ಮಣಾಂ ಪಾಕಕಾಲಂ ಜಾನಾತಿ ಮಾನವಃ || ಫಲೇನೈವ ವಿನಿಶ್ಚೇಯಃ ಪಾಪಕಾಲೋಯಮಿತ್ಯಪಿ ||೩|| ಅಯಮೇವ ಹಿ ಜೀವಸ್ಯ ಕರ್ಮಬಂಧಃ ಪ್ರಕೀರ್ತಿತಃ || ಅನಾದಿನಾ ತು ಲಿಂಗೇನ ಸೂಕ್ಷ್ಮ ಮಾತ್ರೇಂದ್ರಿಯಾತ್ಮನಾ ||೪|| ಶುಭಾಶುಭದೃಷ್ಟಿಯುತೋ ನಾನಾಯೋನಿಷು ನೀಯತೇ || ಯದೇಶ್ವರಃ ಪ್ರಾಣಯುತಃ ಪಿತರಿ ಸ್ಥಾಪಯತ್ಯಮುಮ್ ||೫||

ತದಾ ಪ್ರಭೃತಿ ತದ್ದೇಹೇ ಸ್ಥಿತೋ ಮಾಸದ್ವಯಾವಧಿ ॥ ರೇತೋರೂಪಃ ಮಾತರಿ ಸ ಕಾಲೇ ಯೋನಿಂ ವಿಶತ್ಯಪಿ ॥೬॥ ಯೋನಿಂ ಶೋಧಯತೇ ತತ್ರ ವಾಸುದೇವಾಭಿಧೋ ಹರಿಃ ॥ ರೇತಃ ಸಿಂಚತಿ ತತ್ರೈಷ ಪ್ರದ್ಯುಮ್ನೋ ಹಿ ಪ್ರಜಾಪತಿಃ ॥೭॥ ಸೃಷ್ಟ್ವಾ ಸಂಕರ್ಷಣಸ್ತತ್ರ ಧತ್ತೇ ರೂಪವಿಭಾಗಕಾನ್ ॥ ಧೃತ್ವಾ ಪುಷ್ಣಾತಿ ತಂ ಗರ್ಭಂ ಸ್ವಯಂ ಧಾತಾನಿರುದ್ಧಕಃ ॥ ತತ್ರಸ್ಥಸ್ಯಾಪಿ ಪೂರ್ವೇಣ ಕರ್ಮಣಾ ಪತನಂ ಭವೇತ್ ॥

ಇತ್ಯಾದಿ–ಇದರ ಸಾರಾಂಶವೇನೆಂದರೆ ಸರ್ವಜೀವರುಗಳು ಅನಾದಿ ಕರ್ಮದಿಂದ ಬದ್ಧರಾದವರು. ಇಲ್ಲಿ ವಿಚಾರಾಂಶ, ಜೀವರು ಸದಾ ಉಸಿರು ಬಿಡುವ ಶ್ವಾಸೋಚ್ಛ್ವಾಸವೇ ಅನಾದಿ ಕರ್ಮರೂಪವಾದುದು. ಇದಕ್ಕೂ ಶ್ರೀ ಹರಿಯೇ ಪ್ರೇರಕ, ಹೀಗೆ ಸೃಷ್ಟ್ಯಾರಂಭಿಸಿ ಪ್ರಾರಬ್ಧ ಕರ್ಮ ಭುಂಜಿಸಿ ತೀರಿಸುವವರೆಗೆ ಅನೇಕ ಕರ್ಮಗಳನ್ನು ಮಾಡುತ್ತಾನೆ. ಈ ಕಾಲದಲ್ಲಿ ಕೆಲವು ಅನುಭೋಕ್ತವ್ಯವಾಗದಿದ್ದ ಅನಂತ ಕರ್ಮಗಳು ಈ ಜೀವರಿಗೆ ಸಂಚಿತ ಕರ್ಮ ಸಂಗ್ರಹಿಸಿ ಕೂಡಿಟ್ಟ ರಾಶಿರಾಶಿ ಕರ್ಮವು ಅಪಾರವಾಗಿ ಸಂಗ್ರಹವಾಗುತ್ತಲಿದೆ. ಮತ್ತು ಸದ್ಯ ಅನುಭವಿಸತಕ್ಕ ಕರ್ಮ ಪ್ರಾರಬ್ಧವು ಫಲೋನ್ಮುಖವಾಗುತ್ತದೆ. ಇದೇ ಕರ್ಮವಿಪಾಕ ಕಾಲವು ಜೀವರಿಗೆಲ್ಲ ಕರ್ಮ ಬಂಧಕಕಾಲವು. ಇಂತಹ ಅನಾದಿ ಕರ್ಮಕ್ಕನುಸರಿಸಿ ತ್ರಿಗುಣಾತ್ಮಕವಾದ ಅನಾದಿ ಲಿಂಗದಲ್ಲಿ ಸೂಕ್ಷ್ಮರೂಪವಾಗಿ ಪಂಚಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಪಂಚತನ್ಮಾತ್ರಾ ಒಂದು ಮನಸ್ಸು ಹೀಗೆ (೧೬) ಕಲೆಗಳಿಂದ ಕೂಡಿದ ಸೂಕ್ಷ್ಮ ವಿಷಯಾದಿಗಳೇ ಶುಭ ಅಶುಭರೂಪವಾದ ನಾನಾಯೋನಿ ಯಲ್ಲಿ ಸಂಭವಿಸಲು ಕಾರಣರನ್ನಾಗಿ ಶ್ರೀ ಹರಿಯು ಮಾಡುತ್ತಾನೆ. ಅಲ್ಲದೇ ಸ್ವತಃ ಹರಿಯು ಪ್ರಾಣದೇವರಿಂದ ಸಹಿತನಾಗಿ, ಜೀವನನ್ನು ಪಿತೃನಲ್ಲಿ ಮಾಸ ದ್ವಯ ಪರಿಯಂತರವಿರಿಸಿ, ರೇತೋ ರೂಪದಿಂದ ಜೀವನನ್ನು ಮಾತೃ ಗರ್ಭ (ಯೋನಿ)ಯಲ್ಲಿ ತಂದಿಡುವ. ಇಲ್ಲಿಯಾದರೂ (ಯೋನಿ) ಗರ್ಭವನ್ನು ಶೋಧನ ಮಾಡುವನು–ಶ್ರೀ ವಾಸುದೇವನು ಪ್ರದ್ಯುಮ್ನನು ರೇತಸ್ಸು ಸಿಂಚನ ಮಾಡುವನು. ಸಂಕರ್ಷಣನೆಂಬ ಬಡಿಗನು ಆ ಜೀವರುಗಳಿಗೆ ಕೊಡ ಬೇಕಾದ ದೇಹದ ರೂಪ ಆಕೃತಿ ಮಾಡುವನು. ಈ ಗರ್ಭಗತ ದೇಹವನ್ನು ಧಾರಣ ಪೋಷಣ ಸ್ವತಃ ಅನಿರುದ್ಧನು ಮಾಡಿ, ಈ ನಾಲ್ಕುರೂಪಗಳಿಂದ

ತಾನಿದ್ದು, ಪೂರ್ವ ಕರ್ಮಾನುಸರಿಸಿ ಭುವಿಯಲ್ಲಿ ಜೀವನನ್ನು ಆಯಾ ದೇಹ ದಂತೆ ಪತನಹೊಂದಿಸುತ್ತಾನೆ. ಇತ್ಯಾದಿ. ಈ ಸ್ಥೂಲದೇಹಹೊಂದಿದನಂತರ ಸ್ಥೂಲ ಕರ್ಮವನ್ನು ತಾನೇ ನಾಲ್ಕು ರೂಪದಿಂದ ಮಾಡಿಸುತ್ತಾನೆ. ಇಂತಹ ಶ್ರೀಹರಿಯ ಅಚಿಂತ್ಯ ಅನಂತ ಶಕ್ತಿಯು.

ವಿಷ್ಣುರಹಸ್ಯ ಅಧ್ಯಾಯ ೩೩–೩೪–೩೫ ಮುಂತಾದ ಪ್ರಮೇಯ ಸಾರ ವನ್ನೇ ಶ್ರೀ ವಿಜಯದಾಸಾರ್ಯರು. (ಪ್ರಮೇಯ ಭಾಗ ಸುಳಾದಿ ೨೭) "ಅನಾದಿಯಿಂದ ಬಂದ ಕರ್ಮ ಪ್ರಕೃತಿ ರೂಪ ನಾನಾ ಪ್ರಕಾರ ಉಂಟು." ಈ ಸುಳಾದಿಯಲ್ಲಿ ಮೇಲಿನ ಪ್ರಶ್ನೆಗಳಿಗೆಲ್ಲ ಉತ್ತರ ರೂಪವಾಗಿ ವರ್ಣಿಸಿ ದ್ದಾರೆ. ಆ ಸುಳಾದಿಯ ಸಾರವನ್ನೇ ಇಲ್ಲಿ ಅತ್ಯಾವಶ್ಯವೆಂದು ಕೊಡಲಾಗಿದೆ. ಈ ಸುಳಾದಿಯ ರಹಸ್ಯವನ್ನು ಚೆನ್ನಾಗಿ ಅರಿತರೆ ಈ ೨೧ನೇ ಕರ್ಮ ವಿಮೋ ಚನ ಸಂಧಿ ಅರ್ಥವಾಗುತ್ತದೆ. ಕಾರಣ ಸಜ್ಜನರು ಮನನ ಮಾಡುವರೆಂದು ಬಿನ್ನೈಸುವೆ. ಮುಂದೆ ಇಂತಹ ದೇಶಕಾಲ ಸನ್ನಿವೇಶವೂ, ಬರವಣಿಗೆಯು ದೊರಕುವದು ದುರ್ಲಭವಾದರೂ ಶ್ರೀ ಹರಿಯ ಪ್ರೇರಣೆಯಂತೆ ಬರೆಸಿದುದು ವಿಜಯರ ವಚನಗಳೆಂದು ನಂಬಿ ತಿಳಿದು ಮನನಮಾಡಿರೆಂದು ಪುನಃ ವಿನಂತಿ.

ಮೊದಲಿಗೆ ಧ್ರುವ ತಾಳದಲ್ಲಿ ಅನಾದಿಯಿಂದ ಬಂದಂಥ ಕರ್ಮವು ಪ್ರಕೃತಿರೂಪವಾದುದು. ಇದು ಎರಡು ವಿಧವಾಗಿ ನಾನಾ ಪ್ರಕಾರ ಉಂಟು. ಈ ಅನಾದಿ ಕರ್ಮ ಪ್ರಕೃತಿ ರೂಪಕರ್ಮಕ್ಕೆ ಅನಂತ ಕಾಲದಿಂದಲೂ ಪಾಪ ಪುಣ್ಯ ಉಪಾದಾನ (ಒಂದರಿಂದೊಂದು ಪುಟ್ಟಲು ಕಾರಣ) ವಾಗಿರುವದು. ಪಾಪ ಹಾನಿಗೆ, ಪುಣ್ಯವೃದ್ಧಿಗೆ, ಕಾರಣವಾಗಿರುವದು. ಅಲ್ಲದೆ ಜ್ಞಾನಕ್ಕೆ ಕಾರಣವಾಗಿ ಜ್ಞಾನಿಗಳ ಸಾಧನಕ್ಕೆ ಬಿಡದೇ ಬೆಂಬಲವಾಗಿದೆ. ಮುಂದೆ ತ್ರಿಗುಣ ಕಾರ್ಯದಿಂದೊಡಗೂಡಿ ತ್ರಿವಿಧ ಪುಣ್ಯತ್ರಿವಿಧ ಪಾಪಗಳಿಗೆ ಆಯಾ ಗುಣಾನುಸರಿಸಿ ಆಗುತ್ತಲಿವೆ.

ಆದರೆ **ಪ್ರಾಣದೇವರಿಗೆ ಮಾತ್ರ ಈ ಕರ್ಮದಿಂದಲಿ ಪ್ರಧಾನ ಸಾಧನ ಕಾಣೆ?** ಶ್ರೀ ಹರಿ ಲೀಲೆ ಬಲು ವಿಚಿತ್ರ. ಮುಂದೆ ವೈನತೇಯ ಗರುಡಾದಿಗಳವಿಡಿದು ನೀಚ ಕ್ರಮಾನುಸರಿಸಿ ಈ ಕರ್ಮದಲ್ಲಿ ಅಭಿಮಾನಿ ಗಳಾಗಿಪ್ಪರು, ಅಲ್ಲದೇ ಈ ಸ್ಥೂಲ ಕರ್ಮಗಳಿಗೆಲ್ಲ ದಾನವರು ದೇವತೆಗಳ ನಿಕರವು ಸರಿಯಾಗಿ ಕೂಡಿಕೊಂಡಿಪ್ಪು (ವೈರ ಅನುಬಂಧಾದಿ) ದ್ವೇಷ,

ಸುಹೃತ್ ಬುದ್ಧಿ ಕೊಡುವನು. ಸ್ನಾನಾದಿ ಸತ್ಕರ್ಮಗಳು, ಇದರ ವಿರುದ್ಧ ವಾದ ದುಷ್ಕರ್ಮಾದಿಗಳು ಇರುವವು.

ಇಂತಹ ಅನಂತ ಕರ್ಮಗಳಿಗೆ ಒಳ ಮಾಡಿದ ಹರಿಯ ಆಜ್ಞೆಯಿಂದ ಎಂಭತ್ತುನಾಲ್ಕು ಲಕ್ಷ ಯೋನಿ ಚರಿಸುತ್ತ ಕರ್ಮ ಕ್ಷೀಣವಾಗುವವರೆಗೆ ತಿರುಗುತ್ತಲಿರಬೇಕು. ಈ ಕರ್ಮಗಳು ತ್ರಿವಿಧರಿಗೆ, ಅಂದರೆ ಮುಕ್ತರಿಗೆ ಆನಂದ, ದೈತ್ಯಾವಳಿಗೆ ದುಃಖ, ಮಾನವರಿಗೆ ಮಿಶ್ರಜ್ಞಾನವಾಗುವದು.

**ಈ ಅನಂತ ಕರ್ಮಗಳಿಗೆಲ್ಲ ಶ್ರೀನಿವಾಸನೇ ಮುಖ್ಯ ನಿಯಾಮಕನಾಗಿರುವನು.** ಅಲ್ಲದೇ ಪ್ರಕೃತಿ ದ್ವಾರಾ ಸರ್ವ ಜೀವಿಗಳಿಗೆ ಕರ್ಮಾನುಭವ ತಂದುಕೊಡುವನು. ಜೀವರ ಯೋಗ್ಯತಾನುಗುಣ, ಕಾಲಕ್ಕನುಸಾರವಾಗಿ ಕರ್ಮದಿಂದ ಬದ್ಧರನು ಮಾಡಿರುವನು. ಇಂತಹ ಅನಂತ **ಅಗಾಧ ಕರ್ಮಗಳನ್ನು ಎಣಿಸಿ ಕರ್ಮದಿಂದ ಕಡೆಬಿದ್ದವರುಂಟೆನೊ ?** ಅನಂತಾನಂತ ಜನುಮಕ್ಕೆ ಒಬ್ಬರೂ ಕರ್ಮದಿಂದ ಕಡೆಬಿದ್ದವರ ಕಾಣೆನು.

ಆದರೆ ಶ್ರೀ ಹರಿಯು ತಾನಾಗಿ ಒಲಿದು, ಸ್ಥೂಲದೇಹದ್ವಾರವೇ ಬಿಂಬ ದರ್ಶನವಿತ್ತು, ಪ್ರಾಣಸಖನಾಗಿ ಇದ್ದು, ಅನಾವಶ್ಯಕ ಕರ್ಮ ಏನೇನು ಉಳಿಯದಂತೆ ಅನುಭವ ಮಾಡಿಸಿ ಜ್ಞಾನವನ್ನು ಕೊಟ್ಟು ಪ್ರಾರಬ್ಧ ಅನುಭೋಗ ಮಾಡಿಸಿ, ನಿಶ್ಶೇಷ ದೋಷನನ್ನಾಗಿ ಮಾಡಿ ತಾನು ಭಾನು ಪ್ರಕಾಶದಂತೆ ಪೊಳೆದು, ಮುಕ್ತಿಯನ್ನು ಪೊಂದಿಸುವನು. ಆದರೆ ಭಕ್ತನು ಶ್ರೀ ಹರಿಯೇ ನೀನೇ ಸ್ವತಂತ್ರನೆಂದು ಭಜಿಸಲು ಮೌನಿಗಳರಸನಾದ ಶ್ರೀ ವಿಜಯವಿಠಲನು ಕರ್ಮದಿಂದ ಕಡೆ ಮಾಳ್ಪನು. ಇಂತು ಕರ್ಮ ಬಂಧಕತ್ವ ಮೋಚಕತ್ವ ಬಗೆ ವಿವರಿಸಿ.

ಮುಂದೆ ಮಟ್ಟತಾಳ ಆರಂಭಿಸಿ ೭ ತಾಳಗಳಲ್ಲಿಪ್ಪ ಸುಳಾದಿಯಲ್ಲಿ ಕರ್ಮಗಳ ಬೇಧವಿಚಾರವನ್ನು ಹೇಳುತ್ತಾರೆ. ಸಾಧಕರು ಅತ್ಯಾವಶ್ಯವಾಗಿ ತಿಳಿಯುವುದು.

ಈ ಅನಂತಕರ್ಮದಲ್ಲಿ **೧ ನಿತ್ಯಕರ್ಮ, ೨ ನೈಮಿತ್ತಿಕಕರ್ಮ, ೩ ಕಾಮ್ಯಕರ್ಮವೆಂದು** ಇದ್ದರೂ ಇದರೊಳು ಅನಂತ ಬಗೆಯಾಗಿರುವುದು.

೧ **ನಿತ್ಯಕರ್ಮವೆಂದರೆ** :-ಸ್ನಾನ, ಸಂಧ್ಯಾವಂದನೆ, ಜಪ ಪೂಜಾ ಅಗ್ನಿಹೋತ್ರಾದಿ ಯಜ್ಞ ಬಲಿಹರಣ ನಾನಾ ಸ್ತೋತ್ರಶ್ರವಣ, ದಾನಧರ್ಮಾದಿಗಳು ಮಾಡುವದು ಕಾಲತ್ರಯದಲ್ಲೂ ನಿತ್ಯಕರ್ಮವು.

೨ **ನೈಮಿತ್ತ ಕರ್ಮವೆಂದರೆ:—ಸೂರ್ಯ** ಚಂದ್ರೋಪರಾಗ ಗ್ರಹಣಾದಿಗಳು, ದರ್ಶಪೌರ್ಣಮಾಸ್ಯ, ತೀರ್ಥವಿಧಿ. ದಕ್ಷಿಣೋತ್ತರಾಯಣ ಪುಣ್ಯಕಾಲ, ಸಾವತ್ಸರಿಕ ಪೈತೃಕಕಾಲದಲ್ಲಿ ಮಾಡುವ ಕರ್ಮಗಳೆಲ್ಲ ನೈಮಿತ್ತಿಕವೆಂದು ಕರೆಸುತ್ತವೆ.

೩ **ಕಾಮ್ಯಕರ್ಮ** :—ದ್ರವ್ಯ ದೇಶಕೋಶ ಗಜತುರಗ ರಾಜ್ಯ ಪುತ್ರಾದಿಗಳ ಭೋಗ ಅಪೇಕ್ಷೆಯಿಂದ ಮಾಡುವದು ಕಾಮ್ಯಕರ್ಮ. ಈ ಕಾಮ್ಯಗಳನುಸರಿಸಿ ಪುತ್ರಕಾಮೇಷ್ಟಿ ಯಜ್ಞಾದಿಗಳನ್ನು ಮಾಡಲು ಪುಣ್ಯಸಾಧನಗಳಾಗುವವು. ಅನೇಕ ದೋಷಗಳ ಕಳಕೊಂಡರೂ, ಈ ಕಾಮ್ಯಕರ್ಮ ನೀಗಿಸದೆ ಮುಂದೆ ಅನರ್ಥಸಾಧನವಾಗಿ ನರಕದಲ್ಲಿ ಸುತ್ತಿಸುತ್ತ ಅನೇಕ ಜನುಮಾದಿಗಳು ತಂದಿಪ್ಪನು. "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬುವಂತೆ ತತ್ತಳಗೊಳಿಸದಲೆ ಕೆಟ್ಟುಪೋಗುವವು । ಮನಮೊದಲಾದ ಹತ್ತೊಂದು ವ್ಯಾಪ್ತನಾದ ವಿಜಯ ವಿಠ್ಠಲನು, **ತಾನೇ ಕರ್ತನಾಗಿ ಸರ್ವ ಕರ್ಮ ಪ್ರೇರಿಸುವನು.**

## ನಿತ್ಯ ನೈಮಿತ್ತಿಕ ಕರ್ಮಗಳ ಪ್ರಭೇದಗಳು

೧ ನಿತ್ಯಕರ್ಮ, ೨ ನೈಮಿತ್ತಿಕಕರ್ಮ, ಇದರಲ್ಲಿ ಪುನಃ, ೩ ಸಬೀಜ ಕರ್ಮ, ೪ ನಿರ್ಬೀಜಕರ್ಮ, ೫ ಪಾಪಬೀಜ ಪುಣ್ಯಕರ್ಮ, ೬ ಪುಣ್ಯಬೀಜಪಾಪಕರ್ಮ, ೭ ಜ್ಞಾತ ನಿರ್ಬೀಜ ಪುಣ್ಯಕರ್ಮ, ೮ ಅಜ್ಞಾತ ನಿರ್ಬೀಜ ಪುಣ್ಯಕರ್ಮ, ೯ ಜ್ಞಾತ ನಿರ್ಬೀಜ ಪಾಪಕರ್ಮ, ೧೦ ಅಜ್ಞಾತ ನಿರ್ಬೀಜ ಪಾಪಕರ್ಮ,—

ಇನ್ನು ೧೧ ಕಾಮ್ಯಕರ್ಮ, ೧೨ ನಿಷ್ಕಾಮ್ಯಕರ್ಮ ಮತ್ತು ೧೩ ದೈಶಿಕ ಕರ್ಮ, ೧೪ ದೈಹಿಕಕರ್ಮ, ೧೫ ಕಾಲಿಕಕರ್ಮ, ೧೬ ಸ್ವಾಭಾವಿಕಕರ್ಮ ಹೀಗೆ ೧೬ ವಿಧವಾಗಿಪ್ಪವು.

## ಇನ್ನು ಅನೇಕ ಬಗೆ ಸೂಕ್ಷ್ಮ ವಿಚಾರವಿದೆ

ಈ ಎಲ್ಲ ಕರ್ಮಗಳನ್ನು ಮಾಡುವಾಗ್ಗೆ ೧ ಸಂಚಿತ ೨ ಆಗಾಮಿ ಪ್ರಾರಬ್ಧ ಕರ್ಮವೆಂದು ತ್ರಿವಿಧವಾಗಿ ಬಂಧಕಕ್ಕೆ ಕಾರಣವನ್ನಾಗಿ ಜೀವನನ್ನು ಬಂಧಿಸುತ್ತಾನೆ, ಸಾಧನಪೂರ್ತಿ ಮಾಡಿಸಿ.

ತನ್ನ ಸ್ವೇಚ್ಛೆಯಿಂದ ಬ್ರಹ್ಮಜ್ಞಾನವಿತ್ತು, ಸಕಲ ಕರ್ಮಗಳನ್ನು ಶ್ರೀ ಹರಿಯೇ ಮುಖ್ಯವಾಗಿ ಮಾಡಿಸುತ್ತಾನೆಂಬ ಜ್ಞಾನ ಕೊಟ್ಟು ಸಂತತ ಹರಿಯಾಧೀನ ಚಿಂತಿಸುವವರಿಗೆ ಕರ್ಮಮೋಚನ ಗೈಯ್ಯುತ್ತಾನೆಂದು ಶಾಸ್ತ್ರಾನುಭವ ಸಿದ್ಧ.

ಮೇಲೆ ವಿವರಿಸಿದ ೧೬ ಬಗೆಯ ಕರ್ಮಗಳು ಆವು? ಅವರ ವಿವರವು ಶ್ರೀ ವಿಜಯರಾಯರ ವಾಕ್ಯಕ್ಕೆ ಸಾಧಕವಾದ ವಿಷ್ಣು ರಹಸ್ಯಾದಿಗಳ ಪ್ರಮಾಣಾನುಸರಿಸಿ ಸಾಧಕರ ಸಾಧನಗೋಸುಗ ಇಲ್ಲಿ ಅತ್ಯಾವಶ್ಯವಾಗಿ ವಿವರಿಸುತ್ತದೆ. ಆದರದಿಂದ ಗ್ರಹಿಸಲು ವಿನಂತಿ.

### (೧) ಕರ್ಮಗಳ ವಿವರಣೆ

ನಿತ್ಯ ನೈಮಿತ್ತಿಕ ಕಾಮ್ಯಕರ್ಮಗಳ ವಿವರ ಮೇಲೆ ಬರೆದಿದೆ. ಕಾಮ್ಯಕರ್ಮ ಸರ್ವಥಾ ಮಾಡಕೂಡದು. ಇದು ಮಹಾ ಪ್ರತಿಬಂಧಕ, ನಿತ್ಯ ನೈಮಿತ್ತಿಕ ಎರಡು ನಿಮಿಷ ಮಾಡಿದರಾಗೆ ಅದರಲ್ಲಿ ಸಬೀಜ, ನಿರ್ಬೀಜ ಕರ್ಮ ಉಂಟು. **೩ ಸಬೀಜ ಕರ್ಮದಲ್ಲಿ ಪಾಪಬೀಜ ಪುಣ್ಯ ಮೊದಲನೇದು ೪ ಪಾಪ ಬೀಜ ಪುಣ್ಯವೆಂದರೆ**=ಯಮ ನಿಯಮ ತಪ ದಾನ ಧರ್ಮ, ದೇವರಪೂಜೆ, ಸುಮನಸರ ಭಜನೆ, ತೀರ್ಥಯಾತ್ರೆ, ಸ್ಮೃತಿ ಶಾಸ್ತ್ರಗಮ ಓದು, ನಾನಾ ಕರ್ಮಗಳು ಮಾಳ್ಪಾಗ **ಮಮಕಾರ ಅಹಂಕಾರ ಅಸೂಯಾ ಈರ್ಷ್ಯ ಸಂಗಮದಿಂದ** ಬೆರಸಿದರೆ ಇದೆ ಪಾಪ ಬೀಜಪುಣ್ಯ,

**೫. ಪುಣ್ಯಬೀಜಪಾಪವೆಂದರೆ:—**ಉತ್ತಮ ಜನರು ತಂದೆತಾಯಿ ಗುರು, ಮತ್ತೆ ಶರಣಾಗತರು, ಸಹೋದರ ಬಾಂಧವರು, ಸುತ್ತಲಿದ್ದ ಪರಿವಾರ ನಾನಾ ಪ್ರಜೆ, ಸತ್ವಗುಣದಲ್ಲಿ ಪ್ರವರ್ತಿಸುತ್ತಿರೆ, ಮಿತ್ರ ಮಿಕ್ಕಾದ ಜನತೆ ಮದುವೆಗೋಸುಗ, ಆರ್ತಜನರಿಗೆ ಬಂದ ಕ್ಲೇಶ ಕಳೆವುದಕೆ **ಪುಶಿ** ಉತ್ತರ

ದಿಂದವರ ಕಾರ್ಯ ಮಾಡಿಕೊಟ್ಟು ತೃಪ್ತಿಯನು ಬಡಿಸಿದರೆ ಇದೆ **ಪುಣ್ಯ ಬೀಜಪಾಪ.** ಪ್ರತ್ಯೇಕ ಪ್ರತ್ಯೇಕ ತ್ರಿವಿಧ ಜನರಿಗೆ ನಿತ್ಯ, ನಿತ್ಯವಿದು ಮುಕ್ತರಿಗೆ ಪಾಪಕೆಟ್ಟು ಪುಣ್ಯ ಗೋತ್ರ ಅಭಿವೃದ್ಧಿಯಾಗುವದು ದಿನದಿನಕ್ಕೆ. ನಿತ್ಯಸಂಸಾರಿಗೆ ತಮೋಯೋಗ್ಯರಿಗೆ, ಬತ್ತುವದು ಪುಣ್ಯ ಮಹಾಪಾಪ ಅಭಿವೃದ್ಧಿ.

## ನಿರ್ಬೀಜ ಕರ್ಮ ವಿವರ

೧. ಜ್ಞಾತ ನಿರ್ಬೀಜಪುಣ್ಯ, ೨ ಅಜ್ಞಾತ ನಿರ್ಬೀಜ ಪುಣ್ಯ ಸರ್ವ ಜನರಿಗೆ ಉಂಟು.

**ಜ್ಞಾತನಿರ್ಬೀಜ ಪುಣ್ಯ ಕರ್ಮವೆಂದರೆ:**—ಮಹಾಖ್ಯಾತಿಗೋಸುಗವಾಗಿ ತಾನು ತನ್ನವರು ಸಹ, ಮಾತುಮಾತಿಗೆ ಕೊಟ್ಟ ದಾನಧರ್ಮಾದಿಗಳು, ನೋತ ಪುಣ್ಯದಿಂದ ಜನನವಾಗೆ, ಗಾತ್ರದಿಂದಲಿ ಸುಖಬಿಡಿಸಿ, ಆ ತರುವಾಯ ಯಾತಕ್ಕೆ ಬಾರದಲೆ ಕೆಟ್ಟುಪೋಗುವದು.

**೨ ಅಜ್ಞಾತ ನಿರ್ಬೀಜ ಪುಣ್ಯವೆಂದರೆ,** ತಿಳಿಯದೇ ಇದ್ದ ನಿರ್ಬೀಜ ಪುಣ್ಯವು, ಪೋತ ಬಾಲ್ಯತನದಲ್ಲಿ ತಾನು ಅನೇಕ ರತ್ನಾಭರಣವನ್ನು ಶೃಂಗಾರವಾಗಿ ಧರಿಸಿದರೂ, ಜ್ಞಾನವಿಲ್ಲದೆ ಕೆಟ್ಟುಪೋಗುವದು ನೀತವಲ್ಲವೋ ಮುಂದೆ ಸಾಧನವಿಲ್ಲ.

**೮ ಜ್ಞಾತ ನಿರ್ಬೀಜಪಾಪ**—ಯಾತ್ರೆ ತೀರ್ಥಕೆ ಪೋಪ ಕಾಲದಲ್ಲಿ, ಪ್ರಾತರ ಸ್ನಾನ–ಸಾಯಂಕಾಲ ವಿಹಿತಾಚರಣೇ ತೊರೆದು, ದೂತನಂತೆ ತಿರುಗಿ ಬರುವ ಮಾನವ ಮುಂದೆ ಭೂತಿರಹಿತನಾಗಿ ಪುಟ್ಟಿ ತಾನು, ಪಾತಕ ಮಾಡದೆ ಸತ್ಕರ್ಮ ಮಾಳ್ಪನಿದು. ಜ್ಞಾತ ನಿರ್ಬೀಜ ಪುಣ್ಯ ಇದೆಯೆಂಬೋದು

**೯. ಜ್ಞಾತರಹಿತ ನಿರ್ಬೀಜ ಪಾಪ**ವೆಂಬೋದು, ಮಾರ್ಗವಿಡಿದು ಪೋಪಾಗ ನೇತ್ರದಿಂದಲಿ ಕಾಣದೆ, ಆತುರದಿ ಕ್ರಿಮಿ ಕೀಟಾದಿಗಳೆಲ್ಲ. ಘಾತಿಸಿದ ಪಾಪ ಬಂದುದರಿಂದ, ತಾತರುಳನಾಗಿ ಮತಿ ಇಲ್ಲದೆ ಹೇಯ ಪೂತಿ ಗಂಧದೊಳು ಪೊರಳುವನು, ಈ ತೆರದಲಿ ಉಣಿಸಿ ಕೆಟ್ಟು ಪೋಗುವದು. ಇನ್ನಾಶಿತಕ್ಕೆ ಸಂಶಯವೋ ಇದೆ ನಿರ್ಬೀಜ ಪಾಪಕರ್ಮ.

ಹೀಗೆ ನಿರ್ಬೀಜ ಪಾಪ ಪುಣ್ಯ ಕೆಟ್ಟು ಪೋಗುವವು. ಆದರೆ **ಸಬೀಜ ಪುಣ್ಯ ಪಾಪದಿಂದಲೇ** ದೈತ್ಯ, ಸುರರಿಗೆ ಜನುಮ ಜನುಮದಲ್ಲಿ ಕೌತುಕ

ತೋಃಪತ್ರ, ಸುಖ ದುಃಖ ಮುಖದಿಂದ ಶೀತೋಷ್ಣ ಉಣಿಸುವದು, ತೊಲಗ ಗೊಡದೇ ದೈತ್ಯ ಜನಕೆ ಪುಣ್ಯ, ಮಾಯಿಗಳಿಗೆ ಪಾಪ, ವ್ರಾತವಕ್ಕು.

**೧೧. ಇನ್ನು ಕಾಮ್ಯ ಕರ್ಮ** ವಿವರ ಮೇಲೆ ವಿವರಿಸಿದೆ. ಇದು ಕೇವಲ ಅಜ್ಞಾತ ದೆಶೆಯಲ್ಲಿ, ಮುಕ್ತಿಯೋಗ್ಯರಿಂದಲೂ, ಪ್ರವತ್ತಿ ಕರ್ಮ ವಾಗುವುದುಂಟು, ಪುಣ್ಯ ಪಾಪ ಅನುಭವಸಿ ಕೆಟ್ಟು ಪೋಗುವದು. ಫಲಾ ಪೇಕ್ಷೆಯಿಂದ ಮಾಡುವದೇ ಕಾಮ್ಯ ಕರ್ಮ.

**೧೨. ನಿಷ್ಕಾಮ್ಯ ಕರ್ಮ**=ಫಲ ರಹಿತನಾಗಿ ಕೇವಲ ಶ್ರೀವಿಷ್ಣು ಪ್ರೇರಣಯಾ ಶ್ರೀವಿಷ್ಣು ಪ್ರೀತ್ಯರ್ಥಂ ಎಂದು ಸಂಕಲ್ಪ ಮಾಡುವಂತೆ ದೃಢ ಮನಸ್ಸಿನಿಂದ ಸಕಲ ಕರ್ಮಗಳು ಭಗವಂತ ಮಾಡಿಸಿದಂತೆ ಆಗುವೆಂದು ತಿಳಿದು ಅಪೇಕ್ಷೆ ರಹಿತನಾಗಿ ಕೇವಲ ಭಗವತ್ಪ್ರೀತಿಗೋಸುಗ ಮಾಡುವದೇ ನಿವೃತ್ತಿ ಕರ್ಮ, ನಿಷ್ಕಾಮ್ಯಕರ್ಮ, ಇದೇ ಅಪರೋಕ್ಷ ಜ್ಞಾನಕ್ಕೆ ಸಾಧನ.

**೧೩. ದೈಶಿಕ ಕರ್ಮ**=ತೀರ್ಥಯಾತ್ರೆಗಳಿಂದ ರಾಶಿ ಪುಣ್ಯಒಪ್ಪದು. ಕರಣ ಶುದ್ಧವಾಗುವವು. ಆದರೆ ಈ ದೈಶಿಕ ಕರ್ಮದಲ್ಲಿಯೂ, ಪಾಪದೋಷ ಕರ್ಮವೂ ಉಂಟು, ಬೀದಿಯೊಳಗೆ ಶಾಸ್ತ್ರ ಅಭ್ಯಾಸ ಮಾಡಿಸುವದು, ದೋಷವೆ ನಿಶ್ಚಯ.

**೧೪. ಕಾಲಿಕ ಕರ್ಮ**=ಮಾಸ ಮನ್ವಾದಿಗಳು ಮಾಡುವದೇ ಕಾಲಿಕಕರ್ಮ.

**೧೫. ದೈಹಿಕ ಕರ್ಮ**=ವರ್ಣಾಶ್ರಮುಗಳಂತೆ ಆಯಾ ಯುಗಾನು ಸಾರ ಮಾಡುವದು ದೈಹಿಕ ಕರ್ಮ.

**೧೬. ಸ್ವಾಭಾವಿಕ ಕರ್ಮ**=ಸತ್ವ-ರಾಜಸ, ತಾಮಸವೆಂಬೋದೆ ಸ್ವಾಭಾವಿಕ ಕರ್ಮ.

ಕಾರಣ ಈ ಸಮಸ್ತ ಜನಕೆ ಪ್ರಾಬಲ್ಯ ಅಪ್ರಾಬಲ್ಯದಿಂದ ವಾಸೆ ಯಿಂದಲಿ ಕರ್ಮ ಉಣಿಸುವದು, ಈ ಸುಕರ್ಮಗಳ ತೀರಿ ಪೋಗುವ ತನಕ ಘಾಶಿ ಬಡಲೆಬೇಕು.

ಸಾಮಾನ್ಯವಾಗಿ ಶ್ರೀವಿಜಯರ ವಚನದಂತೆ, ಕರ್ಮಗಳ ವಿವರ ನಿರೂಪಿಸಿದೆ. ಆದರೆ ಈ ಎಲ್ಲ ಕರ್ಮಗಳನ್ನು ಮಾಡಲಿಕ್ಕೆ ಅಧಿಕಾರಿಗಳು

ಯಾರು? ದೇವತೆಗಳಲ್ಲಿಯೂ, ಜಾತಿ ಭೇದಗಳುಂಟು. ವರ್ಣ ಭೇದ ಗಳುಂಟು.

"ದೇವಾ ಷೋಡಶಜಾತೀಯಾಃ ಸ್ವಭಾವಾದೇವ ಜಜ್ಞಿರೇ ॥ ಸ್ವಸ್ವಯೋಗ್ಯತಯಾ ಸರ್ವೈರ್ಬ್ರಹ್ಮಾದ್ಯೈಃ ಸ ಉಪಾಸ್ಯತೇ॥ ಏವಂ ಷೋಡಶಜಾತೀಯಾಃ ನರಜೀವಾಃ ಪ್ರಕೀರ್ತಿತಾಃ ॥ ಚರಾಚರಸ್ಯ ಸರ್ವಸ್ಯ ವ್ಯವಹಾರ ಪ್ರಸಿದ್ಧಯೇ ॥೩೧॥ ವಿಷ್ಣುರಹಸ್ಯ ಅಧ್ಯಾಯ ೩೫ರಲ್ಲಿ ಹೇಳಿದಂತೆ,

ದೇವ ಮಾನವ ದಾನವರು ಚರಿಸುವ ತ್ರಿವಿಧ ಬಗೆ ಕರ್ಮ ಅನಂತ, ಇದರಲ್ಲಿ, ಜಾತಿ ವರ್ಣಭೇದಗಳಿಂದ ಚರಿಸುವ ಅಧಿಕಾರಿಗಳನ್ನು ದೇವರು ಅವರ ಪೂರ್ವ ಕರ್ಮಾನುಸರಿಸಿ, ಸೃಷ್ಟಿಮಾಡಿದ್ದಾನೆ. ಜಾತಿ ಭೇದ ಅಧಿಕಾರ ವಿವರವನ್ನು ಶ್ರೀ ವಿಜಯದಾಸರು ಪ್ರ. ಸು. ಪುಟ ೪೪-೪೫ ಧ್ರುವ ತಾಳದಲ್ಲಿ ಆಜ್ಞೆ ಕೊಡಿಸಿದಂತೆ ಅತ್ಯಾವಶ್ಯವಾಗಿ ತಿಳಿಯುವದು.

**ಜಾತಿ-ಭೇದಗಳ ವಿವರ**



೧. ಸತತ ಕರ್ಮವನೆಸುಗುವರು ಮುಖಜರು, **ಬ್ರಾಹ್ಮಣ ಜಾತಿ.**

೨. ಬಾಹುಜರು **ಕ್ಷತ್ರಿಯರು.**

೩. ಊರುವಿನಿಂದ ಪುಟ್ಟಿದವರು, **ವೈಶ್ಯರು.**

೪. ಪಾದದಿಂದ ಪುಟ್ಟಿದವರು **ಶೂದ್ರರು** ಎಂದು ನಾಲ್ಕು ಪ್ರಥಮ ಜಾತಿಗಳು. ಇವರಿಂದ ಪುಟ್ಟಿದ ಅನುಲೋಮ ಪ್ರತಿ ಲೋಮ ಜಾತಿಗಳಿಂದು, ಆರು ಆರು ೧೨ ವಿಧವಾದ ಜಾತಿಗಳುಂಟು.

**ಅನುಲೋಮರೆಂದರೆ:—** ಉತ್ತಮ ಜಾತೀಯ ಪುರುಷನಿಂದ ಅಧಮ ಜಾತಿಯ ಸ್ತ್ರೀಯರಲ್ಲಿ ಜನಿಸಿದವರು ಅನುಲೋಮ ಜಾತಿ. ಪ್ರತಿಲೋಮರು ಅಧಮ ಜಾತೀಯ ಪುರುಷನಿಂದ ಉತ್ತಮ ಜಾತೀಯ ಸ್ತ್ರೀಯಲ್ಲಿ ಪುಟ್ಟಿದ ವರು ಪ್ರತಿ ಲೋಮಜಾತಿ.

| ಅನುಲೋಮ ಜಾತಿ ವಿವರ | ಪ್ರತಿ ಲೋಮ ಜಾತಿ ವಿವರ |
|---|---|
| ೧ ಬ್ರಾಹ್ಮಣ ಪುರುಷನಿಂದ<br>೧ ಕ್ಷತ್ರಿಯ ಸ್ತ್ರೀಯಲ್ಲಿ ಪುಟ್ಟಿದ ಜಾತಿ **ಮೂರ್ಧಾಭಿಷಿಕ್ತಾ** | ೧ ಕ್ಷಿತಿಪಂಗೆ ಕ್ಷತ್ರಿಯಗೆ ಬ್ರಾಹ್ಮಣ ಸ್ತ್ರೀಯಲ್ಲಿ ಪುಟ್ಟಿದವ<br>೧ **ಸೂತನೆನಿಸುವನು** |
| ೨ ಬ್ರಾಹ್ಮಣನಿಂದ, ವೈಶ್ಯಸ್ತ್ರೀಯಲ್ಲಿ ಪುಟ್ಟಿದ ಜಾತಿ **ಅಂಬಿಷ್ಟ** | ೨ ವೈಶ್ಯ ಜಾತೀಯ ಪುರುಷನಿಗೆ ಬ್ರಾಹ್ಮಣ ಸ್ತ್ರೀಯಳಲ್ಲಿ ಪುಟ್ಟಿದವ **ವೈದೇಹನೆಂದು** |
| ೩ ಬ್ರಾಹ್ಮಣನಿಂದ, ಶೂದ್ರಾದಿ ಜಾತಿಯಲ್ಲಿ ಪುಟ್ಟಿದವರು **ಪಾರಶವ** | ೩ ವೈಶ್ಯಗೆ ಕ್ಷತ್ರಿಂ ಸ್ತ್ರೀಯಳಲ್ಲಿ ಪುಟ್ಟಿದವ **ಮಾಗಧ** |
| ೨ ಕ್ಷಿತಿಪಂಗೆ = ಕ್ಷತ್ರಿಯಗೆ<br>೪ ವೈಶ್ಯಸ್ತ್ರೀಯಲ್ಲಿ ಪುಟ್ಟಿದವರು **ಮಾಹಿಷ್ಯ** | ೨ ಪದಜ ಶೂದ್ರ ಜಾತಿ ಪುರುಷನಿಂದ<br>೪ ಬ್ರಾಹ್ಮಣ ಸ್ತ್ರೀಯಳಲ್ಲಿ ಪುಟ್ಟಿದವ **ಚಾಂಡಾಲ** |
| ೫ ಕ್ಷತ್ರಿಯರಿಗೆ ಶೂದ್ರ ಸ್ತ್ರೀಯಲ್ಲಿ ಪುಟ್ಟಿದ ಜಾತಿ **ಉಗ್ರನಾಮಕ** | ೫ ಶೂದ್ರನಿಗೆ, ಕ್ಷತ್ರಿಯಳಲ್ಲಿ ಪುಟ್ಟಿದವ **ಕ್ಷತ್ತಾ** |
| ೬ ಕ್ಷಿತಿಸುರ ಭೂಭುಜರಲ್ಲಿ ಪುಟ್ಟಿ, ಚತುರ ವಂಶದಲ್ಲಿ **ಕರ್ಣ**ನೆಂಬನು ಲೋಮ. ಹೀಗೆ ಆರು ಅನುಲೋಮ ಜಾತಿ ವಿವರ. | ೬ ಶೂದ್ರನಿಗೆ ವೈಶ್ಯ ಜಾತಿಯಲ್ಲಿ ಪುಟ್ಟಿದವ, **ಯೋಗವ** ಹೀಗೆ ೬ ಪ್ರತಿ ಲೋಮ ಜಾತಿಗಳು. |

ಇಂತು ೬ ಅನುಲೋಮ ೬ ಪ್ರತಿಲೋಮ    ೧೨ ಜಾತಿ ಭೇದ

ಮತ್ತು ಮೊದಲನೆಯವು ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರ ೪ ಮೊದಲನೆ ಜಾತಿ
ಮೃತ-ಭರ್ತ ಸ್ತ್ರೀಯರಲ್ಲಿ ಅನ್ಯರಿಗೆ ಪುಟ್ಟಿದವರು ೧ ಗೋಳಕ ಜಾತಿ
ಗಂಡನು ಬದುಕಿರುವಾಗ ಅನ್ಯರಿಂದ ಹುಟ್ಟಿದವರು ೨ ಕುಂಡ ಜಾತಿ
೧೮—

ಹೀಗೆ ೧೮ ವಿಧವಾಗಿವೆ. ಪ್ರತಿ ಪ್ರತಿ ಜಾತಿಯಿಂದ ಪುಟ್ಟಿದ ಜಾತಿ ಎಣಿಸೆ ಶತ-ಶತ ನಾಲ್ಕು ಯೋನಿ ಪ್ರಭೇದವೋ (೪೦೦) ಜಾತಿ ಶತ ಧೃತಿ ಪಿತ ನಮ್ಮ ವಿಜಯ ವಿಠ್ಠಲರೇಯ ತುತಿಸಿದ ಜೀವಿಗಳ ಕರ್ಮದಿಂದು ದ್ಧರಿಸುವಾ ||೧೦||

ಇವರಲ್ಲಿ ಶ್ರುತಿ ಉಕ್ತಕರ್ಮ ಹಲಬರಿಗುಂಟು. ಕ್ರಮವಾಗಿ ಕೃತು ಮೊದಲಾಗಿ ಮಾಡುವಿವರಾ! ಶ್ರುತಿಶ್ರವಣಾದಿಯಿಂದ ಕೆಲವರಿಗೆ ಸಾಧನ|ಗತಿಗೆ ಪೋಗುವರು ಈ ಆಚರಿಸಿ, ಎಂದು ಪೇಳಿದ್ದಾರೆ. ಇದರ ವಿವರ ವಿಷ್ಣು ರಹಸ್ಯ ಅಧ್ಯಾಯ ೩೫ರಲ್ಲಿ "**ಅನ್ಯೇಸುಲೋಮಿನಃ ಸರ್ವೇ ವೈದಿಕಾಧಿ ಕೃತಾ ಮತಾಃ||** ತ ಏವ ಹಿ ದ್ವಿಜಾ ಸ್ತ್ರ್ಯಸ್ಯೇ ಏಕಜಾತಯ ಈರಿತಾಃ||೫೬|| **ಪ್ರತಿಲೋಮೇಷು ಸರ್ವೇಷು ವೈದಿಕಾನ (ಅನ)ಧಿಕಾರಿಕಾಃ ||** ಎಂದು ಹೇಳಿದ್ದಾರೆ. ಇಂತು ಅಧಿಕಾರ ಭೇದ ಕರ್ಮ ಭೇದ ವಿವರಗಳನ್ನು ತಿಳಿಯಬೇಕು. ಒಂದರೊಳಗೆ ಅನಂತ ಬಗೆ ಕರ್ಮ.

ಇನಿತು ಧಾತ್ರಿಯೊಳಗೆ ಸಬೀಜ ಪುಣ್ಯ ಕರ್ಮ, ಸಬೀಜ ಪಾಪ ಕರ್ಮ. ಇವೆರಡೆ ಸುರರು ದೈತೇಯರಿಗೆ ಜನುಮ ಜನುಮದಲ್ಲಿ ಕೌತುಕ ತೋರುತ್ತಾ ಶೀತ ಉಷ್ಣ ಮೊದಲಾದವುಗಳಿಂದ ಸುಖ ದುಃಖ ಉಣಿಸುವದು. ದೈವತ ಜನಕೆ ಪುಣ್ಯ, ಮಾಯಿಗಳಿಗೆ ಪಾಪ ಸಮೂಹವು ತೊಲಗವೇ ಬಿಡದು.

**ಇಷ್ಟ, ಅನಿಷ್ಟ ಪುಣ್ಯ ಪಾಪ ವಿಚಾರ** ಮತ್ತು **ಕಾಮ್ಯ ನಿಷ್ಕಾಮ ಕರ್ಮವು.** ಸೋತ್ತಮರು, ಮುಕ್ತಿಯೋಗ್ಯರು, ಜ್ಞಾನ ಪೂರ್ವದಲ್ಲಿ ಪಾತಕ ಪುಣ್ಯಗಳು ಮಾಡಿದರೆ ಖ್ಯಾತಿಗೊಂಬುವ ದುಃಖ, ಇಷ್ಟಾನಿಷ್ಟ ಭೀತಿ ಯಿಂದಲಿ ಬಹು ದೇಹಗಳ ತಂದಿತ್ತು ಉಣಿಸುವನು.

**ಇನ್ನು ಜ್ಞಾನೋತ್ತರದಲ್ಲಿ** ಮಾಡಿದ ಇಷ್ಟಾನಿಷ್ಟ ಕರ್ಮ ಪಾಪ ಪುಣ್ಯ. ಯಾತನಿ ಜನರಿಗೆ ದುಃಖ ಸ್ವರೂಪರಾದ ದೈತ್ಯರಿಗೆ ಅನಿಷ್ಟ ಪಾಪ ಹೋಗುವದು. ಅವರಿಗೆ ದುರ್ಮತಿ ಕೊಡುವದು.

ಜ್ಞಾನೋತ್ತರದಲ್ಲಿ ಮಾಡಿದ (ನೋತ) ಅನಿಷ್ಟ ಪುಣ್ಯ ತನ್ನವರಿಗೆ ಸತ್ಕರ್ಮ ಪಥಕ್ಕೆ ಸಹಾಯಭೂತವಾಗುವದು. **ಇಷ್ಟಪುಣ್ಯ** ಜ್ಞಾನೋತ್ತರದಿ **ಮಾಡಿದ್ದು** ಆನಂದ ಅಭಿವ್ಯಕ್ತಿಗೆ ಕಾರಣವಾಗುವದು. ಜ್ಞಾನೋತ್ತರದಿ **ಮಾಡಿದ ಅನಿಷ್ಟ ಪುಣ್ಯ** ಲಿಂಗಗಾತುರಕೆ ಕಾರಣ, ಮತ್ತು ತನ್ನ ಆಪ್ತರಿಗೆ ಸಹಾಯ, ಪಾಪ ತಮೋಯೋಗ್ಯರಿಗೆ ಪೋಗುವದು. ಮಾತ್ರಾ (ವಿಷಯ) ರಹಿತವಾದ ನಿಷ್ಕಾಮ ಕರ್ಮಗಳು, ಪಾತನಿಂವಲಿ ವಿಜಯವಿಠಲ ಸಬೀಜ ಕರ್ಮಗಳ ಮಾಡುಸುವನೆಂದು (೫) ನೇ ತ್ರಿವಿಡಿತಾಳದಲ್ಲಿ ಹೇಳಿದ್ದಾರೆ.

## ಇನ್ನು ಖೂಳ ಜಾತಿಯ ಇಷ್ಟ-ಅನಿಷ್ಟಪಾಪಪುಣ್ಯ

ಇದರಲ್ಲಿ ಪುಣ್ಯ ಸಮೂಹವು ದೈತ್ಯರಿಗೆ ಇಷ್ಟವೆನಿಸುವದಿಲ್ಲ. ಮೇಲು ಇವರ ಈ ಖಳರ ಜ್ಞಾನ ಪೂರ್ವ ಮತ್ತು ಜ್ಞಾನೋತ್ತರದಿ ಮಾಡಿದ ಪುಣ್ಯ ಮುಕ್ತಿಯೋಗ್ಯರಿಗೆ ಪೋಗುವದು.

## ದೈತ್ಯರ ಇಷ್ಟಾನಿಷ್ಟ ಪಾಪಗಳು

ಅನಿಷ್ಟಪಾಪ ದೈತ್ಯ ಸಮೂಹಕ್ಕೆ ಸಹಾಯ. ಇಷ್ಟ ಪಾಪ ಭೂತ ಅಪರೋಕ್ಷ(ಮಿಥ್ಯಾಜ್ಞಾನ)ಕ್ಕೆ ಕಾರಣವಾಗಿ, ದುಃಖಾಭಿವೃದ್ಧಿ ಕೊಡುವದು. ನೀಲ ಚಿದ್ರೂಪದವರ (ದೈತ್ಯರ) ಸುದ್ದಿ ಕೇಳಿರಿ. ಈ ಪರಿ ಬಾಳುತ್ತಲಿಪ್ಪರು. **ಹಲಬವರು ಅನಿಷ್ಟ ಪುಣ್ಯದಿಂದ** ಸಂಸಾರಾವಸ್ಥೆಯಲ್ಲಿ ಮಾತ್ರ, ಆಳಾಗಿ ಅರಸಾಗಿ ವೈರಾನುಬಂಧದಿಂದ ದ್ವೇಷವೆ ಮಾಡುತ್ತ ವಾಲಗ ಮಾಡುವರು. ತ್ರಿಗುಣ ಕಾರ್ಯವು ಬೆರಸಿಯೇ ಇರುವದು. ಇದು ಭೂಲೋಕದೊಳಗೆ ಸಂಸಾರಾವಸ್ಥೆಯಲ್ಲಿ ದೈತ್ಯಜಾಲಕೆ ಸುಖಬಡಿಸುವ ವಿಚಿತ್ರ ಕರ್ಮ ಧರ್ಮ ಒಂದಲ್ಲ ಸಾಲು ಸಾಲಾಗಿವೆ. ಒಂದಕ್ಕನಂತವಾಗಿವೆ. ಕಾಲಮೂರುತಿ ವಿಷ್ಣು ವಿಜಯವಿಠ್ಠಲರೇಯನು ಮೂಲಸ್ವಭಾವ ನೋಡಿ ಪ್ರೇರಣೆ ಮಾಡುವನೆಂದು ಆಜ್ಞಾಪಿಸಿದ್ದಾರೆ.

ಇಂತಹ ಅನಂತ ವಿಧವಾದ ಕರ್ಮಗಳನ್ನು ಬೇರೆ ಬೇರೆ ಅವರ ಯೋಗ್ಯತಾನುಸಾರವಾಗಿ ಉಂಡು ಅನುಭವಿಸಿ, ಕರ್ಮ ತೀರಿಸಲಿಕ್ಕೇ ಬೇಕು. ಆರೊಂದು ಸಪ್ತಾವರಣದ ಬೊಮ್ಮಾಂಡಪುಟ್ಟದ ಆರಭ್ಯವಾಗಿ ಒಡನೊಡನೆ

ದೇಹವತೆತ್ತಬೇಕು. ಕ್ರೂರ ಅಕ್ರೂರ ಕರ್ಮಕೆ ತೊಡಕಿ ಮಾಡಿದ ಕರ್ತವ್ಯ ಸಾರಿಸಾರಿಗೆ ಉಂಡು ನೀಚೋಚ್ಚಯೋನಿ ಸೇರುತ್ತ ಸಂತಾಪಪಡುತ್ತಾ, ನರಕ ಬಾಧೆ ಧಾರಣೆಯಿಂದ ತಮ ತಮ್ಮ ಸುಖ ದುಃಖ ಪೂರೈಸಬೇಕು. ಶ್ರೀ ಹರಿಕೃಪೆಪಾತ್ರ ಸಾಧನಮಾಳ್ಪ ತೋರಿಕೊಡುವನು. ಕಾರುಣ್ಯದಿಂದಲಿ ಪೊಲಿವನು, ಲೀಲೆಯಿಂದ ಪೊರೆವನು.

ಹೀಗೆ ಜನನನಾಗುತ್ತ ಬಂದ ಪ್ರತಿ ಕರ್ಮಗಳು ಅಪಾರ ಕರ್ಮಗಳು ಮಾಡಿದುದಕ್ಕೆ ಕರ್ಮ ವಿಚಾರಣೆ **ಸಪ್ತ ಋಷಿಗಳ ಜ್ಞಾನವಂತಾವಾಗ, ನೂರು, ಇನ್ನೂರು, ಮುನ್ನೂರು, ನಾನೂರು, ಐನೂರು, ಸಾವಿರಾ, ಲಕ್ಷ, ಕೋಟಿ ಜನ್ಮಂಗಳು** ವಿಸ್ತಾರವಾಗಿ ಕಟ್ಟಿ ಉಳಹುವನು. ಅದರೊಳಗೆ ಕೆಲವು ತೀರಿ ಪೋಗುವಂತೆ ಸುಖದುಃಖಗಳು ಬಿಡಿಸಿ ಹಾರೈಸುವನು. ಅಲ್ಲಿಂದ ಹತಶೇಷ ಕರ್ಮಗಳು ವ್ಯಾರೆ ಇಲ್ಲದಿರೆ ಅದರೊಳಗೊಂದೊಂದು ಧಾರಾಳವಾಗಿರಲು, ನೋಡಿ. ಜನ್ಮಂಗಳು ನೂರಾರುಕಟ್ಟಿ, ತೀವ್ರ ಕರ್ಮ ಉಣಲೆಂದು ಧಾರುಣಿಯೊಳಗೆ ಹಾಕಲು, ಪುನರಪಿ ಪುಟ್ಟುವನು—ಅಗ್ಗೆ ಚಾರುಮತಿಯಿಂದ (ಭಗವಂತನ ಸ್ಮರಣೆಯಿಂದ) ಕರ್ಮವ ಮಾಡುತ್ತ ಇರಲು, ಒಂದು ಸಾಧನ ದೇಹವನ್ನು ಧರಿಸಿ, **ಮೂರು ಗುಣದಿಂದ ಮಾಡಿದ ಕರ್ಮ ಗಣಿತ ಮೀರಿ, ಒಂದೊಂದಕ್ಕೆ ಕರ್ಮ ಅನಾವಸ್ಥಿ ಎಂದೆನಿಸಲು** ಅಂತಃಕರಣ ಶುದ್ಧಿಯಾಗಿ, ಶುಭ ಕರ್ಮವು ಸಜ್ಜನರ ಸಂಗತಿ ಯಿಂದ ಸದ್ಗತಿಗೆ ಕಾರಣವಾಗುವದು. ಇಷ್ಟೇ ಅಲ್ಲ ವೀರವೈಷ್ಣವ ಸಚ್ಛಾಸ್ತ್ರಕ್ಕೆ ಅನುಕೂಲ ದಾರಿಯಾಗುವದು. ಆ ಮೇಲೆ ಮನನ ವಿಚಾರ ಧ್ಯಾನ ನಿಜಾ ಸನ, ಧ್ಯಾನನಿಶ್ಚಯತತ್ವ **ತಾರತಮ್ಯದಿಂದ ಹರಿಗುಣೋಪಾಸನೆ ಪ್ರಾರಬ್ಧ ಸಂಖ್ಯಾಯೋಗ ಧೃಢವಾಸನಾಮಯ ಪರೋಕ್ಷಜ್ಞಾನ, ಅಪರೋಕ್ಷಜ್ಞಾನ ವಾಸನಾಮಯ ಅಪರೋಕ್ಷ ಅಲ್ಲಿಂದ ಪ್ರಾಜ್ಞ, ಬಿಂಬಾಪರೋಕ್ಷದಿಂದ ಶ್ರೀ ಹರಿಕೃಪೆ ಮಾಡಲು ಸಂಚಿತಾಗಾಮಿ ಕರ್ಮನಾಶ ಪ್ರಾರಬ್ಧ ಅನುಭವಿಸಲೇಬೇಕು. ಹೀಗೆ ಸಾಧನ ವಿಚಾರ ವನ್ನು ಪೇಳಿದ್ದಾರೆ.**

ಸಂಚಿತ, ಆಗಾಮಿ, ಪ್ರಾರಬ್ಧ ಕರ್ಮಗಳ ವಿವರ ಮೇಲೆ ಸಂಕ್ಷೇಪದಿಂದ ಹೇಳಿದರೂ,

## ಪ್ರ. ಸು. ಪುಟ ೮೩ ಝಂಪೆ ತಾಳದಲ್ಲಿ

೧ **ಸಂಚಿತ ಕರ್ಮ**=ಅನಪರೋಕ್ಷ ಕಾಲದಿ ಮಾಡಿದ ಕರ್ಮವು ಜನನ ಗರ್ಭಾ ನರವಾಸವಲ್ಲಿ ಬಿದ್ದು ಅನುಭವಿಸಲಾಗಿ ಉಳಿದ ಕರ್ಮ **ಸಂಚಿತ** ಕರ್ಮವೆನಿಸುವದು. ಸಾಧನ ಮಾಡುತ್ತಲಿರುವಾಗ್ಗೆ, ಅನಿತರೊಳು ಪ್ರಾಜ್ಞನ ಸಂದರುಶನವಾಗಲು, ಸಂಚಿತ ಕರ್ಮನಾಶವಾಗುವದು.

೨ ಅಪರೋಕ್ಷ ಕಾಲದಲ್ಲಿ ಮಾಡಿದ ಕರ್ಮಗಳಿಗೆ ಮುಂದೆ ಬರುವ **ಆಗಾಮಿಕರ್ಮ** ಲೇಸವಾಗುವದಿಲ್ಲ.

೩ **ಪ್ರಾರಬ್ಧಕರ್ಮ**=ಅಪರೋಕ್ಷವಾದರೂ, ನಾನಾಜನುಮ ಅನುಭವಿಸದಲೆ ತಾನೇ ಪೋಗುವದಿಲ್ಲ. ಆದರೆ ಎಣೆ ಇಲ್ಲದ ಹರಿಯ ಕರುಣ ವಾಪರೆ, ದಿನದೊಳಗೆ ಪ್ರಾರಬ್ಧ ಏನೇನು ಇದ್ದಾಗ್ಯೂ, ಉಪಮರ್ದನ ಮಾಡಿ ಉಣಿಸುವನು. ಹೇಗೆಂದರೆ; ಪ್ರಾರಬ್ಧ ಕರ್ಮಗಳ ಸುಖ ದುಃಖ ಹೊಣೆಯಾಗಿ, ಕರ್ಮ ಭೂಮಿಯಲ್ಲಿ ಪುಟ್ಟಿ ಉಣುತಲಿಪ್ಪದರೊಳಗೆ ಉಳಿದದೆ ತತು ತತು ಜನುಮ ಪೊತ್ತು ಪೋದ ಸಂಬಂಧವು ಪ್ರಣತ ಜನ ಮಂದಾರ ವಿಜಯ ವಿಠಲರೇಯನ ನೆನಸಿದ ಮನುಜಂಗೆ ಸರ್ವಸೌಖ್ಯ.

ಇನ್ನು **ಅಪರೋಕ್ಷ ನಂತರದಿ** ಮಾಡಿದ ವಿವಿಧ ಕರ್ಮಗಳು, ಸ್ವಪ್ನ ಜಾಗ್ರತಾ ಅವಸ್ಥೆ ವಿಡಿದು ನಿತ್ಯಾ ಇಪ್ಪವಗೆ ಗತಿ ಕೇಳು, ಅಪವರ್ಗದಲ್ಲಿ ಆನಂದ ಅಭಿವ್ಯಕ್ತಿಗೆ ನಿಪುಣತನದಲ್ಲಿ ಒದಗುವದು. ಇದೆ ಇಷ್ಟ ಸುಪುಣ್ಯವೆನಿಸುವದು.

೧ **ಅನಿಷ್ಟ ಪುಣ್ಯ** ಉಪಕಾರ ಮಾಡಿದ ಜನರಿಗೆ ಪೋಪುದು, ೨ ವಿಪುಳವಿರಜಾನದಿ ಸ್ನಾನಕ್ಕೆ ಕಾರಣವಾಗುವದು. ೩ ಉಪಚರಿಸಿದ ಪಾಪಾ ಉತ್ತಮರ ದ್ರೋಹವೆಂಬುದು. ಆನಂದಹ್ರಾಸಕ್ಕೆ ಕಾರಣ. ಸುಪರ್ವಾಣ ಜನರಿಗೆ ಪ್ರಾಪ್ತವ್ಯಕ್ಕೆ ಹ್ರಾಸ, ಮನುಷ್ಯಾದಿಗೆ ಕ್ಲೃಪ್ತಾನಂದಕ್ಕೆ ಹ್ರಾಸ ಸಿದ್ಧವೆನ್ನಿ । ತಪನ ಚಂದ್ರಮ ಸಾಕ್ಷಿ ಪೇಳಿದದಕೆ ತಪಶೀಲನಾದರೂ ಪಾಪಕ್ಕೆ ಒಗದೆ ಬಿಡನು. ಗುಪ್ರತ ಇದು ಮಹಾ ಗುಪುತ ಗಹನ ಕರ್ಮ....ಅಪಾರ ಪಾರ ಭಿನ್ನ ವಿಜಯ ಸಿರಿವಿಠಲ ನಿತ್ಯ ತೃಪುತನೊಬ್ಬನು, ಕರ್ಮ ಬಂಧಾತೀತನು ಕಾಣೋ ॥೯॥

**ಮತ್ತು ಮುಕ್ತಿಯಲಿ ಇಹ ಕರ್ಮ** ಪ್ರಯೋಜನವಿಲ್ಲ. ಭಕ್ತಿ ಮೊದಲಾದ ಜಡವಸ್ತುಗಳಿಲ್ಲ. **ಮುಕ್ತ ಜನರು ಅಲ್ಲಿ ಮಾಡಿದ ಕರ್ಮಕ್ಕೆ ವ್ಯಕ್ತಿಯಾಗುವದು ಇದ್ದಾನಂದಕೆ ಸತ್ಯ.** ಭಕ್ತಿಭರಿತನಾಗಿ ನಾನಾರೂಪದಲಿ ಉಕ್ತಿ ಸಿದ್ಧನೆನ್ನಿ ತಾರತಮ್ಯವೇ ಉಂಟು ತ್ಯಕ್ತ ವೈದೀಕರು ಸರ್ವರು ಅಲ್ಲಿಲ್ಲಿ, ಶಕ್ತಿ ಮೊದಲಾದ ಗುಣರೂಪವೆನ್ನಿ, ಭಕ್ತವತ್ಸಲ ಸ್ವಾಮಿ ವಿಜಯವಿಠಲ ವಿ ! ರಕ್ತಿ ಇಲ್ಲದವಗೆ ಒಲಿಯಾ ಒಲಿಯನು ||೧೦|| ಸಂತತ ಗುರುಭಕ್ತಿ ತಾರತಮ್ಯಜ್ಞಾನ ಸಹಿತ ತದೀಕ ಧ್ಯಾನದಲಿ ಕರ್ಮಾಚರಣೆ ಮಾಡಲಿಬೇಕು. ೧ ಸಂಕಲ್ಪ, ೨ ಮೌನ, ೩ ಸ್ಪರುಶ, ೪ ಸಂಭಾಷಣ ೫ ಭೋಜನ, ೬ ಏಕಾಸನ । ಕರಣಶುದ್ಧಿಯಿಂದ **ಆರು ಬಗೆ** ಸುಜನರ ಬಳಿ ಇಷ್ಟು ಮೆಚ್ಚಿಸಬೇಕು. ಇದೆ ಬಿಂಬ ದರುಶನಕ್ಕೆ ಕಾರಣ. ಸಂಚಿತಾಗಾಮಿ ಕರ್ಮನಾಶ. ಮುಕ್ತಿಯಲ್ಲೆ ಆನಂದವೆಂದು ಶ್ರೀ ವಿಜಯರ ಆಜ್ಞೆ ಆವಾವ ಕರ್ಮಗಳು ಮಾಡಿ ಫಲವೇನು ಕೈವಲ್ಯ ಮಾರ್ಗಕೆ ಸಂಗತಿಯಾಗದು । **ಶ್ರೀ ವಲ್ಲಭನೆ ಸರ್ವಮಾಡಿಸಿದಂತೆ । ಎಲ್ಲ ಜೀವಿಗಳು ಕರ್ಮ ಮಾಡುವರೆನ್ನು ।** ದೇವತೆಗಳಿಗೆ ಅಸ್ವಾತಂತ್ರ್ಯ ಆವುದು ಕೊಡುವದು ಹರಿಯಾಧೀನವು । ದೈವತಂತ್ರಾಖ್ಯವೇ ಬಿಂಬಕ್ರಿಯನೆ ತಿಳಿ....ಪೂವಿಲ್ಲನಯ್ಯ ವಿಜಯವಿಠಲರೇಯ । ದೇವವೈತ್ಯ ಜಾಲಕ್ಕೆ ಅಪೂರ್ವದಿಂದ ವಾಳ್ಪ ||೧೫|| ಕಾರಣ. ಕರ್ಮ ಅಕರ್ಮದಲ್ಲಿ ನಿಷ್ಕಾಮಕನಾಗಿ । ಕರ್ಮನಾಮಕ ವಿಜಯವಿಠಲನ್ನ ಚಿಂತಿಸು ಹರಿ ಅಧೀನನಾಗಿ ಹರಿ ಸರ್ವ ಕರ್ಮ ಕರ್ತಾ ಕಾರಯಿತಾ ಎಂದು ತಿಳಿಯುವದೆ ಮುಖ್ಯವಾದ ಸಾಧನ. ಪ್ರತಿಕ್ರಿಯಾದಲ್ಲಿ ಹರಿರೂಪಗಳನ್ನು ಚಿಂತಿಸಬೇಕು.

**ಶ್ರೀ ಗೋಪಾಲವಿಠಲರು ಒಂದು ಸುಳಾದಿ** ಪ್ರಮೇಯ ಭಾಗ. ಪು|| ೩೧ ತಾಳ ತ್ರಿವಿಡಿ ಪುಟ ೯೯ ರಲ್ಲಿ ಬಹು ಸುಲಭವಾಗಿ ಕರ್ಮದಿಂದ ಕಡೆಗೆ ಪಾರಾಗುವ ಹಂಚಿಕೆ ಬಹು ಜಾಣ್ಮೆಯಿಂದ ಹೊಸ ಪರಿವರ್ಣಿಸಿದ್ದಾರೆ.

ತ್ರಿವಿಡಿ ತಾಳ

"ಒಂದು ಕರ್ಮವು ಮಾಡೆ ಅವರಿಗೆ ಅದರಲ್ಲಿ । ಇದಿರೆ ಅಜಭವ ಪರಿವಾರ ಸಹವಾಗಿ । ನಿಂದು ತನಗೆ ಕರ್ಮ ಮಾಡಿಸಿದರೆಂಬ । **ಚಂದದ**

**ಸ್ಮೃತಿಯನ್ನು ಬಂದೊದಗಿದರೆ ।** ಸಂದೇಹಸ್ಥನಾಗಾ ಸಂಸಾರಕೆ ದೂರಾ। ಬಂಧಮೋಚಕ ಅಪೆ. **ಮಧ್ಯಮ ಪ್ರಸಾದ ।** ಸಂದರುಶನ ಪೂರ್ವ ಸ್ವೇಚ್ಛಾ ದಕಿಂತಲಿ। **ಹಿಂದಾಗುವವು ಸಂಚಿತಾಗಾಮಿ ಕರ್ಮವು।** ಮಂದಮತಿಯು (ಅಜ್ಞಾನ) ನಾಶ ನೊಡಲಿಕಿಂತ । ಹಿಂದಾಗ ಈ ಮೇಲೆ ಹರಿಯ ದರ್ಶನ ದಲ್ಲಾಗ್ಯ । ನಂದಭರಿತನಾಗಿ ಸಂಚರಿಸುವಾ । ಮುಂಪೆ ಮುಂದತಿಶಯ ಸಮಾಧಿ ಸಾಧನ । ಪೊಂದಿ ಕೂಡ್ರುವನಾಹ ಜಡದಂದದಿ । ಸಿಂದಿರಪೆ ಬಾಹಿರ ಸ್ಮೃತಿಭೇರಿ ತಾಡನವಾಗೆ । ಒಂದೇ ಅವನ ವ್ಯಾಪಾರ ವೃತ್ತಿನಾಶ । ಸಂಪೇಹ ವಿಲ್ಲಿದಕೆ ಸದ್ಗುರುಪ್ರಸಾದ । ಛಂದವಗಾಯಿತೆಂದು ಅರಿವದು । ವೃಂದಾರ ಕೇಂದ್ರ ಶ್ರೀ ಗೋಪಾಲವಿಠಲ । ಒಂದು ಮಾತ್ರವು ಇಟ್ಟ (ಪ್ರಾರಬ್ಧ) ಸಕಲ ಸುಖ ಕೊಡುವ ॥೫॥

ಮುಂದೆ ಅಟ್ಟತಾಳದಲ್ಲಿ ಪ್ರಾರಬ್ಧಕರ್ಮ ಕಡೆಗಾಗುವ ಜಗೆ ಉತ್ತಮ ಪ್ರಸಾದ ಲಕ್ಷಣ ಹೇಳುತ್ತಾರೆ.

### ಅಟ್ಟತಾಳ

ಉತ್ತಮ ಪ್ರಸಾದ ಮತ್ತೆ ಲಕ್ಷಣ ಕೇಳು । ಪ್ರತ್ಯಕ್ಷವು. ನೋಡು ಆವಾವ ವಿಷಯದಿ ತತ್ವ ಸಂಪೇಹವಿಲ್ಲ **ಪ್ರಾರಬ್ಧ ಕರ್ಮವು । ಅತ್ಯಲ್ಪ ವಾಗಿನ್ನು ಕಡಿಗೆ ಆಗುವದು । ಹತ್ತಿದ ಲಿಂಗವು ಅಕಾರ್ಯ ಕಾರ್ಯವು** ಎತ್ತ ನೋಡಿದರು ಹರಿಯರೂಪಗಳೆಂಬ । ಚಿತ್ತ ವ್ಯಾಕುಲನಾಗ ಅಖಂಡ ಧ್ಯಾನದಿ । ಸತ್ಯ ಲೋಕದಿ ವಾಸವಾಗಿ ಅನಂತರ । ಮುಕ್ತನಾಗುವ ತಾನು ಹಿಂದೆ ನಾನಾ ಜನ್ಮ । ಸುತ್ತಿ ಬಂದವನೆಲ್ಲ ನೆನೆದು ತನ್ನ ಮನೋ ವೃತ್ತಿ ನಾನಾ ಪರಿ ವ್ಯಭಿಚರಿಸಿದಪೆಲ್ಲ । ಉತ್ತಮರ ಕೂಡ ಸುಖಪೇಳಿಕೊಳ್ಳುತ । ಉತ್ಕಟವಾಗಿ ತವುಗಿಂದ ವರರಿಗೆ । ಮತ್ತೆ ತಮ್ಮೊಳು ಭಕ್ತಿಯ ಹೆಗ್ಗಳ ವಾ । ಡುತ್ತ ಆನಂದ ಭರಿತನಾಗುವ ನಾವ । ಸತ್ಯಸಂಕಲ್ಪ ಗೋಪಾಲ ವಿಠ್ಠಲನ್ನ । ಭಕ್ತರಲ್ಲಿ ಭಕ್ತಿ ಮುಕ್ತಿ ಸಾಧನನೇ ॥೬॥ ಇನ್ನು ಮುಂದೆ.

## ಸಂತತ ಕರ್ಮನೆಸಗುವ ಕಾಲದಲ್ಲಿ ಬಗೆ ಹೇಳುತ್ತಾರೆ

|| ಆದಿತಾಳ ||

ಹರಿಪರನೆನ್ನು ಹರಿ ವಾರ್ತೆಯು ಕೇಳು | ಹರಿ ಮಾತುಗಳಾಡು | ಹರಿ ಮೂರ್ತಿಯ ನೋಡು | ಹರಿ ಪೂಜೆಯ ಮಾಡು | ಹರಿಗಡ್ಡವ ಬೀಳು ಹರಿಪರನಾಗು | ಹರಿಭಕ್ತರ ಕೂಡು ಹರಿಯನ್ನೇ ಬೇಡು | ಹರಿಯ ಹೊರತಿನ್ನು ಪರಿಗೆ (ಪರಹರಿ) ಬೀಳದಿರು | ಹರಿಯ ಪಾಯುದಿನ್ನು ಹರಿಗುಣವ ತಿಳಿ ಹರಿಯಭಕುತರಿಂದ ಹರಿಯ ಪದದರಫಳಿಗೆ ಇರಸಲ್ಲಿ | ಹರಿ ಮಾಡಿಸಿದ್ದೆಲ್ಲ ಹರಿಗರ್ಪಣ ಮಾಡು | ಹರಿಯನ್ನು ತಿಳಿ ಗುರುಗಳಲ್ಲಿನ್ನು | ಹರಿಧೇನಿಸಿ | ಗುರುವಿನ ಗುರುತುಮಾಡು | ಹರಿ ಸರ್ವ ಕರ್ತೃ ಗೋಪಾಲ ವಿಠಲನ್ನ ಸ್ಮರಣೆಯು ಕ್ಲೇಶ ಹರ ಸುಖಕರ ||೭||

ಜತೆ

ನೋಡಿ ಮಾಡು ಕರ್ಮ ಫಲದಿ ವಿರಕ್ತನಾಗಿ |
ಬೇಡು ಗೋಪಾಲ ವಿಠ್ಠಲನಂಘ್ರಿಗಳ ಸೇವಾ || ೮ || ಎಂದು.

ಕರ್ಮದಿಂದ ಕಡೆಬೀಳುವ ಒಳ್ಳೆ ಸುಗಮವಾದ ದಾರಿಯನ್ನು ಸಜ್ಜನರಿಗೆ ತೋರಿ ಸಜ್ಜನರನ್ನು ದುಷ್ಕರ್ಮದಿಂದ ಕಡೆಗೆ ಮಾಡಿ ಉದ್ಧರಿಸಿದ ಶ್ರೀ ಜಗನ್ನಾಥ ದಾಸರಾಯರ ನೀತಗುರುಗಳಾದ ಶ್ರೀ ಗೋಪಾಲ ವಿಠ್ಠಲರ ವಚನ ಮರೆಯದೇ ನೆನಪಿನಲ್ಲಿಟ್ಟು ಈ ಸಂಧಿ ಅರ್ಥಪೂರ್ವಕವಾಗಿ ಪಠಿಸಿದರೆ ಕರ್ಮಮೋಚನವಾಗುವದೆಂದು ತಿಳಿದ ಅಪರೋಕ್ಷಜ್ಞಾನಿಗಳಾದ ಶ್ರೀ ಜಗನ್ನಾಥ ದಾಸಾರ್ಯರು ಈ ಕರ್ಮವಿಮೋಚನ ಸಂಧಿಯಲ್ಲಿ ಅನಾದಿ ಕರ್ಮದಲ್ಲಿ ಶ್ರೀ ನಾರಾಯಣನು ಪ್ರೇರಕನಾಗಿರುವನು. ಮುಂದೆ ಸೃಷ್ಟಿಪ್ರಾರಂಭಿಸಿ ಲಿಂಗ ಉಪಚಯಾದಿ ವಾಸುದೇವಾದಿ ಪಂಚ ಭಗವದ್ರೂಪಗಳ ಕಾರಣ-ಕಾರ್ಯ ರೂಪಗಳು. ಮುಂದೆ ಶ್ರೀ ನಾರಾಯಣಾದಿ ಪಂಚ-ಪಂಚ ಭಗವದ್ರೂಪಗಳು ೨೫ ಮೂಲ ೫ ಹೀಗೆ ಒಟ್ಟಿಗೆ ೩೦ ಭಗವದ್ರೂಪಗಳಿಂದಲೇ ಕರ್ಮ ಪ್ರೇರಕನಾಗಿ ಕರ್ಮ ಮಾಡಿಸುವನು. ||೧-೨||

ಇನ್ನು ೩ನೇ ಪದ್ಯದಲ್ಲಿ ಕಾರಣ, ಕಾರ್ಯ, ಕರ್ತೃಗಳಲ್ಲಿಯೂ ಶ್ರೀ ಹರಿಯು ಕಪಿಲಾದಿ ಜ್ಞಾನಪ್ರದರೂಪನಾಗಿದ್ದು ಕರ್ಮ ಪ್ರೇರಕನಾಗಿ

ಮಾಡಿಸುವ ಭಗವದ್ರೂಪಗಳನ್ನೇ ಚಿಂತಿಸಬೇಕು ಮತ್ತು ೪ನೇ ಪದ್ಯದಲ್ಲಿ, ತಾನು ಎಲ್ಲ ಕಡಿಗೆ ವ್ಯಾಪ್ತನಾಗಿದ್ದರೂ, ತನ್ನಲ್ಲಿ ಎಲ್ಲರನ್ನೂ ಇಟ್ಟು ಸಲಹುವನು. ಅಂತರ್ಯಾಮಿ ರೂಪ-ಆವೇಶ ರೂಪ-ಅಂಶರೂಪ, ಅವತಾರ, ಕಾರ್ಯರೂಪಗಳ ಚಿಂತಿಸಲು ಉಪದೇಶಗೈದು ಮುಂದೆ ೫ ಪದ್ಯದಲ್ಲಿ ದೃಷ್ಟಾಂತ ಪೂರ್ವಕವಾಗಿ ಹೇತುವಾದ ಮೂಲ ಕಾರಣ ರೂಪದಲ್ಲಿ, ಮತ್ತು ಬಾಹಿರ ಕ್ರಿಯಾ ಕಾರ್ಯರೂಪಗಳಲ್ಲಿಯೂ, ಶಿಲಾ, ದಾರುವಿನಲ್ಲಿ ಅಗ್ನಿಯೊಬ್ಬನೆ ಅಡಕವಾಗಿದ್ದಂತೆ ಶ್ರೀ ಹರಿಯು ಕಾರಣ ಕಾರ್ಯಗಳಲ್ಲಿ ಅಡಕವಾಗಿ ಕರ್ಮಗಳನ್ನಾಚರಿಸುತ್ತ ಬಗೆ ಹೇಳಿ, ಮುಂದೆ ೬ನೇ ಪದ್ಯದಲ್ಲಿ ಸಮುದ್ರ ತೆರೆಗಳಂತೆ ಕರ್ಮಗಳು ಅನಂತ. ಅವುಗಳನ್ನು ತಾನೇ ಮಾಡಿ ಮಾಡಿಸಿ ನಿರ್ಮಮ, ನಿರ್ಲೇಪನಾಗಿರುವ ಶ್ರೀ ಹರಿಯ ರೂಪಗಳನ್ನು ಪ್ರತಿ ಕರ್ಮ ಪ್ರೇರಕನೆಂದು ತಿಳಿದರೆ ಕರ್ಮ ಮೋಚಕನೆಂದು ಹೇಳಿದ್ದಾರೆ. ಹೇಗಂದರೆ ಮೇಘ ಮಳೆಗರೆದು ಶಾಂತಿ ನೀವಂತೆ ಪುಣ್ಯ ಫಲಗಳನ್ನು ಕೊಡುವನು. ಸಮುದ್ರದ ವಡಬಾಗ್ನಿ ಸಮುದ್ರೋದಕ ಕುಡಿಯುವಂತೆ ಪಾಪಕರ್ಮ ಭಸ್ಮಮಾಡುವನು. ಈ ಪ್ರಕಾರ ಶ್ರೀ ಹರಿಯು ವ್ಯಾಪ್ಯ ವ್ಯಾಪಕ ಕರ್ಮ ಪ್ರೇರಕ ಪ್ರೇರ್ಯನನ್ನು ತಿಳಿಯದೇ ಪಂಡಿತಂಮನ್ಯಮಾನರಾಗಿ ಪುಸ್ತಕಗಳನ್ನು ನೋಡುತ್ತಾ ಮಂತ್ರ ಸ್ತೋತ್ರ ಪಠಿಸಿದರೂ, ಜಪ ಮಾಡಿದರೂ ಫಲವಿಲ್ಲ. ಶ್ರೀ ಹರಿಯೆ ನಿರಸ್ತ ಕಾಮನಾಗಿ ಸರ್ವಾವಸ್ಥೆ ಪ್ರೇರಕನೆಂದೆ ತಿಳಿಯಬೇಕು.

## ಮುಂದೆ ಸಾಧನ ವಿಚಾರ

ಮತ್ತು ಮನಸ್ಸಿನಲ್ಲಿ ಹರಿ ಕರ್ತೃತ್ವಾನು ಸಂಧಾನವನ್ನು ತಿಳಿಯದೇ ಬಹಿರಂಗವಲ್ಲಿ ಸ್ನಾನಾಚರಣೆಗಳನ್ನು ಡಂಬಾಚಾರದಿಂದ ಮಾಡಿದರೆ ಮಧ್ಯ ಭಾಂಡವ ದೇವ ನದಿಯೊಳಗೆ ತೊಳೆದರೂ ಹೇಗೆ ಪರಿಶುದ್ಧವಾಗುವದಿಲ್ಲವೊ ಹಾಗೆಯೆ ಒಣಾ ಕರ್ಮಠರಿಗೆ ಕರ್ಮಲೇಪವಾಗದೇ ಬಿಡದು.

ಕಾರಣ ಕೇವಲ ಭಕ್ತಿ ಪೂರ್ವಕವಾಗಿ ಶ್ರೀ ಹರಿ ಮುಕ್ತಾ ಮುಕ್ತ ನಿಯಾಮಕನಾದ ಸರ್ವೋತ್ತಮನಾದ ಶ್ರೀ ಹರಿಯ ಮಹಿಮೆಯನ್ನು ಮರೆಯದಲೆ ಕೊಂಡಾಡಬೇಕು. ಲೋಕ ಪ್ರಸಕ್ತಿಗಳ ಬಿಡಬೇಕು. ಶ್ರೀ ಹರಿಯಾಜ್ಞೆಯಿಂದರಿದು ಶ್ರುತಿ ಸ್ಮೃತ್ಯುಕ್ತ ಕರ್ಮಗಳನ್ನು ಭಗವಂತನ

ಅನುಸಂಧಾನ ಪೂರ್ವಕ ಮಾಡಬೇಕು. ಸಾಂಗವಾಗದೇ ಕರ್ಮಕ್ಕೆ ಕೊರತೆ-ಲೋಪವಾದರೂ ಅಡ್ಡಿ ಇಲ್ಲ. ಆದರೆ ಮಾಡಿದಷ್ಟು ಕರ್ಮವಾದರೂ ನಿಷ್ಠಾ ಪುಕನಾಗಿ ಮಾಡು. ಭಗವಂತನಿಗೆ ಅರ್ಪಿಸು. ಶ್ರೀ ಹರಿ ಅಪರಾಧವೆಣಿಸದೆ ಅಪವರ್ಗ ಕೊಡುವನು.

ಶ್ರೀಹರಿಯು, ಸ್ವರತ ಸುಖಮಯ ಸುಲಭನು, ವಿಶ್ವವ್ಯಾಪ್ತನೆಂದು ಸದಾ ಸ್ಮರಿಸುತ್ತ ಕರ್ಮಾಚರಿಸಬೇಕು. ಇದರಲ್ಲಿ ನಿರ್ಮಮ-ಅಹಂಕಾರ ರಹಿತನಾಗಿ ಕರ್ಮ ವಿಕರ್ಮಗಳನ್ನು ಭಗವಂತನಿಗೆ ಅರ್ಪಿಸಿದರೆ ತನ್ನರಮನೆಯೊಳಿಟ್ಟು ಕಾಯುವನು. ॥ ೬-೧೩ ॥

೧೪. ಹೀಗೆ ಐಹಿಕ ಸುಖ ಬೇಡದೇ ನಿರಂತರ ಶಾಶ್ವತವಾದ ಸುಖವನ್ನು ಬೇಡುತ್ತ ಶ್ರೀ ಹರಿಯನ್ನು ಆರಾಧಿಸಿದರೆ, ಶಿಲ್ಪಿಗಳು ಮೂರ್ತಿ ಕಡೆದು, ಆ ಶಿಲೆಯನ್ನು ಪೂಜಿಸುವಂತೆ ಮಾಡುವ ತೆರದಂತೆ ಶ್ರೀ ಹರಿ ಕೃಪೆ ಮಾಡಿ ರಕ್ಷಿಸುವ.

೧೫. ಶ್ರೀ ಹರಿ ಸಕಲ ದೇಶದಿ ವ್ಯಾಪ್ತ, ಸರ್ವ ಭೂತ ನಿವಾಸಿ, ಆಕಾಶವು ದೇಶಬೇಧಗಳಲ್ಲಿ ವ್ಯಾಪಿಸಿದಂತಿರುವ ಆತನಿಗೆ ದ್ವೇಷ ಸ್ನೇಹ ಉದಾಸೀನಗಳಿಲ್ಲ. ಅವರವರ ಉಪಾಸನೆಯಂತೆ ಫಲವೀವನು.

೧೬. ಈ ಪ್ರಕಾರ ಶ್ರೀ ಹರಿ ಸ್ವತಂತ್ರ ಸರ್ವಕರ್ತಾ ಕಾರಕಯೆಂದು ತಿಳಿದು ತಾರತಮ್ಯದಿಂದ ಉಪಾಸನೆ ಮಾಡಲು ಶ್ರೀ ಹರಿ ಮಿಂಚಿನಂದದಿ ಒಳಗೆ ಪೊಳೆವನು. ನಂತರ ಸಂಚಿತಾಗಾಮಿ ಕರ್ಮನಾಶವಾಗುವವು.

೧೭. ಕೇವಲ ಕರ್ಮವೇ ತಾರಕವಲ್ಲ. ಭಗವಂತನ ಪಾದಾರವಿಂದದಲ್ಲಿ ತೈಲಧಾರೆಯಂತೆ ಅವಿಚ್ಛಿನ್ನ ಮನಸಿಟ್ಟು ತುತಿಸಬೇಕು. ಮೂರ್ಖರಾದವರು ಕೇವಲ ಕರ್ಮವೇ ತಾರಕವೆಂದು ಪೇಳುತ್ತಾರೆ.

೧೮. ಕೇವಲ ಕರ್ಮದಿಂದ ಕಡೆಬಿದ್ದವರಿಲ್ಲ. ಉತ್ತಮಾಧಿಕಾರಿಗಳಾದ ಬ್ರಹ್ಮಾದಿ ದೇವತೆಗಳು ಭಗವಂತನ ಪೂರ್ಣ ಮಹಿಮೆ ತಿಳಿಯದೇ ಮನವಚನದಿಂ ಯೋಗ್ಯತೆಯಂತೆ ಸ್ತೋತ್ರ ಮಾಡಿ ಶ್ರಾಂತರಾಗಿ ಕೊನೆಗೆ ಭಗವಂತ ನೀನೆ ರಕ್ಷಿಸೆಂದು ಭಗವತ್ಪಾದಾರವಿಂದ ಕಲ್ಪವೃಕ್ಷ ನೆಳಲು ಆಶ್ರಯಿಸುವರು, ಮಹಾಭಕ್ತಿಯಾದ ಕಾರಣ.

೧೯. ತಾರತಮ್ಯಜ್ಞಾನ ಶೂನ್ಯರಾಗಿ ವಾರಿಚರವೆನಿಪ ನಾವಿಯನ್ನು ಬಿಟ್ಟು ನೀರೊಳಗೆ ಕೆಟ್ಟಧ್ವನಿಯಿಂದ ಒದರುತ್ತಿರುವ ಕಪ್ಪೆಯನ್ನು ಏರಿ ಸಮುದ್ರದಾಟುವೆಂದು ಸಾಹಸ ಮಾಡುವವು ಯಾರೆಂದರ ಸೌರಿ-ಶಕ್ತಿ ಮತಾನುಗರು, ಶ್ರೀ ಹರಿಯನ್ನು ಭಜಿಸದೆ ಕೆಡುತಿಹರು.

೨೦ ಕಾರಣ ಭಗವದ್ಭಕ್ತರಾದವರು ರಾಜನ ಮಗನಂತೆ ದುಗ್ಧಾಣಿಗಾಗಿ ಬಿಕ್ಕೆ ಬೇಡದಿರಿ. ಮಧ್ವಶಾಸ್ತ್ರವೆಂಬ ಧೇನು ಮನೆಯಲ್ಲಿರಲು ಗೋಮಯ ಬಯಸಿದಂತೆ ಐಹಿಕ ಸುಖಗಳನ್ನು ಬೇಡದೇ ಪ್ರಾಣಾಂತರ್ಯಾಮಿ ಶ್ರೀ ಹರಿಯನ್ನು ಭಜಿಸಿರಿ.

೨೧ ಐಹಿಕ ಸುಖ ಬೇಡಿದರೆ, ಹಸಿದವನು ಮನೆಯಲ್ಲಿದ್ದ ಅನ್ನಪಾನಾದಿಗಳನ್ನು ಬಿಟ್ಟು ಅಡವಿಗೆ ಹೋಗಿ ಹುಳಿ ಕಹಿ ಬೋರಿ ಹಣ್ಣುಗಳ ಅಪೇಕ್ಷೆಯಿಂದ ಬದರಿ ಗಿಡಗಳ ಮುಳ್ಳು ಪೊದೆಯೊಳಗೆ ಬಿದ್ದು ಬಾಯಿ ಬಿಡುವಂತೆ ಆಗುವದು. ಕಾರಣ ಬ್ರಹ್ಮನ ತಂದೆಯಾದ ಹರಿಯನ್ನು ಭಜಿಸದೆ ಉದರಗೋಸುಗವಾಗಿ ಕ್ಷುದ್ರದೇವತೆಗಳನ್ನು ಆರಾಧಿಸುವದು ಬಿಡೆಂದು ಉಪದೇಶಿಸಿದ್ದಾರೆ.

೨೨ ಬ್ರಹ್ಮಜನಕನು ಜ್ಞಾನಿಯು, ಜ್ಞೇಯನು, ಜ್ಞಾತನು ಎಂದು ಕರೆಸುತ್ತ ಬುದ್ಧಿ ಮನ ಆದಿ ಇಂದ್ರಿಯಗಳ ನಾಮದಿ ಕರೆಸುತ್ತಿರುವನೆಂದು ಉಪಾಸಿಸಿದರೆ ಹೃದಯಾಕಾಶ ಚಂದ್ರಮನು ಪೊಳೆವನು.

೨೩-೨೪ ಕಾರಣ ಹರಿಗೆ ಪ್ರೀತವಾಗದೇ ಇದ್ದದು ವಿಧಿಪತ್ತಾದರೂ ನಿಷಿದ್ಧ ಕರ್ಮವನ್ನು ಬಿಡು. ಶ್ರೀಹರಿಗೆ ಪ್ರೀತಿಕರವಾದ ನಿಷಿದ್ಧಕರ್ಮವನ್ನು ಮಾಡೆಂದು ಬಹು ದೃಷ್ಟಾಂತದಿಂದ ಪೇಳಿದ್ದಾರೆ. ಹರಿಗೆ ಪ್ರೀತಿಕರ ಕರ್ಮವೇ ಮುಖ್ಯ.

೨೫ ಶ್ರೀಭಗವಂತನ ಸ್ಮೃತಿಯುಕ್ತವಾದುದೇ ಸತ್ಕರ್ಮವೆಂದು ಭಗವಂತನ ಅನೇಕ ಕಾರಣ ಕಾರ್ಯರೂಪಗಳನ್ನು ಚಿಂತನೆ ಮಾಡಬೇಕೆಂದು ಭಗವಂತನ ಗುಣಾತಿಶಯಗಳನ್ನು ವರ್ಣಿಸಿದ್ದಾರೆ.

೨೬-೨೭ ಇಂತಹ ಅನಂತರೂಪಿ ಹರಿಯನ್ನು ಸಾಧಕರಾದ ಭಕ್ತರು ಹೇಗೆ ಹುಡುಕುತ್ತಾರೆಂದರೆ ತಂದೆತಾಯ್ಗಳ ಗುರ್ತು ಅರಿಯದ ಕಂದನು,

ದೇಶಾಂತರದಲ್ಲಿ ತನ್ನ ಸ್ವರೂಪದಂತೆ ಇರುವರನ್ನು ನೋಡಿ ಇವರೇ ಬಹುಶಃ ನನ್ನ ಪಿತೃವರೆಂದು ತಿಳಿಯುವಂತೆ ಶ್ರುತಿ, ವೇದ, ಪುರಾಣಾದಿಗಳು ಭಾರತ ಪ್ರತಿ ಪದ್ಯಗಳಲ್ಲಿ ಭಗವಂತನ ಗುಣನಾಮರೂಪಕ್ರಿಯೆಗಳನ್ನು ಹುಡುಕುತ್ತ ಸಾರಸ್ವತ ಶಫರಿಯಂದದಿ ಒಳ್ಳೆ ಬುದ್ಧಿಯಿಂದ ಶ್ರೀಹರಿಯನ್ನು ಕಾಣುವ ಅತಿ ಕುತೂಹಲದಿಂದ ಶ್ರೀಹರಿಯ ರೂಪಗುಣಗಳನ್ನು ತಿಳಿಯುವರು.

## ಶ್ರೀಹರಿಯ ಅನಂತ ಸ್ತೋತ್ರ

೨೮ ಹರಿಯ ರೂಪಗಳು, ಮತ್ಸ್ಯಕೇತನ ಜನಕಾದಿಗಳು, ಗುಣಾದಿಗಳು ಕ್ರಿಯಾದಿಗಳನ್ನು ಭಜಿಸಲು ಗೋವತ್ಸನ್ಯಾಯದಂತೆ ಶ್ರೀಹರಿಯು ಸಲಹುವನೆಂದು ಉಪದೇಶಗೈಯ್ಯುತ್ತಾರೆ.

೨೯ ಯಾರು ಜ್ಞಾನಿಗಳು ಶ್ರೀಹರಿಯ ರೂಪ ಗುಣ ಕ್ರಿಯೆಗಳನ್ನು ತಿಳಿದು ಭಜಿಸುವರೋ ಅವರಿಗೆ ಸಮೀಪದಲ್ಲೆ ಹೃದಂಬರದಲ್ಲಿ ಕಾಣುವ. ದೈತ್ಯರು ಭಗವದ್ವೇಷಿಗಳಿಗೆ ಬಹು ದೂರನಾಗಿರುವನು. ಅವರ ಸೋಹಂ ಉಪಾಸನೆಯಂತೆ ದೂರನಾಗಿ ನಿರಯವೀವನು. ಸಾರಿಸಾರಿಗೆ ನೆನವರಿಗೆ ಸದಾ ಸೌಖ್ಯವನೀವನೆಂದು ಶ್ರೀಹರಿಯ ಸ್ತೋತ್ರಗೈಯ್ಯುತ್ತಾರೆ.

೩೦ ಚಕ್ರಶಂಖಾದಿಗಳ ಧರಿಸಿದ ಮಹಾಮಹಿಮ ವಿಧಿಶರ್ವಾದಿ ಪೂಜ್ಯನು. ತನ್ನ ಭಕ್ತರ ಪಥ ಗೆಲಿಸಲು ನಿರ್ಲಜ್ಜನಾಗಿ ಕಾರ್ಯಮಾಡಿ, ಬಲಿರಾಜನ ಯಜ್ಞ ಕೆಡಿಸಿ, ಜಾಹ್ನವಿ ಪಡೆದು, ಬಲಿಯ ಆಳಾಗಿ ಮನೆಯ ಕಾಯ್ದು ಇಂದಿರೇಶನ ಒಂದೇ ಕ್ರಿಯವಾದರೂ ದ್ವಂದ್ವವಾಗಿ ತೋರಿತು.

೩೧ ಶ್ರೀಹರಿಯೇ ನಿನ್ನ ಹೊರತಾಗಿ ಸುರಾಸುರಗಣದೊಳಗೆ ಶಕ್ತರೆನಿಸುವರು ಯಾರೂ ಇಲ್ಲ. ಸರ್ವರಿಂದ ಸರ್ವಕಾಲದಲ್ಲಿ ಸರ್ವೋದ್ರಿಕ್ತನೆನಿಸುವನು. ಕಾರಣ ಅನ್ಯಪ್ರಸಕ್ತಿಗಳನ್ನು ಈಡಾಡಿ ಹರಿಕಥಾಮೃತಸಾರ ಪಾನ ವಿಷಯದಲಿ ಸಂತತ ಆಸಕ್ತನಾಗಿರಬೇಕು.

೩೨ ಶ್ರೀಹರಿಯೇ ಪ್ರಣತರಿಗೆ ಇಷ್ಟಾರ್ಥ ಕೊಡುವ ಚಿಂತಾಮಣಿಯು, ಸಚ್ಚಿನ್ಮಯಮಣಿಮಯಾಭರಣದಿಂ ಸಂತತ ಭೂಷಿತನಾಗಿರುವನು. ದೋಷದೂರನು. ಯಾರಿಂದಲೂ ಪೂರ್ಣ ತಿಳಿಯುವ ಗಹನನು.

ಮಹಾಮಹಿಮನು. ಭಕ್ತರ ದೋಷಗಳನ್ನು ಎಣಿಸನು. ಭಕ್ತಿಯಿಂದ ಶಬರ ಸ್ತ್ರೀಯು ಕಾಡಿನಲ್ಲಿದ್ದ ಸಿಹಿ ಬೋರೆ ಹಣ್ಣುಗಳ ರುಚಿ ನೋಡಿ ಶ್ರೀರಾಮನಿಗೆ ಅರ್ಪಿಸಲು ಪರಮಾತ್ಮನು ಸ್ವೀಕರಿಸಿದ. ಭಕ್ತಿರಸವನ್ನು ಸ್ವೀಕರಿಸಿದ ಕಾರಣ

೩೩ ಈತನನ್ನು ಬಲ್ಲೆನೆಂಬುವರಿಲ್ಲ. ಎಲ್ಲರಿಗೂ ಬೇಕಾದ ವಸ್ತು ಬಿಂಬನಾದ ಹರಿಯನ್ನು ಪೂರ್ಣ ಬಲ್ಲೆನೆಂಬುವರು ಯಾರೂ ಇಲ್ಲ. ಸಕಲ ಲೋಕದಿ ವ್ಯಾಪಿಸಿರುವನು. ಅಜ್ಞಾತ ಜನರು, ಮೋಕ್ಷಯೋಗ್ಯರು ಪೂರ್ಣ ತಿಳಿಯದಿದ್ದರೂ, ಬೆಲ್ಲದ ಅಚ್ಚಿನ ಗೊಂಬೆ ಎಲ್ಲ ಕಡಿಗೆ ಸಿಹಿ ಇಪ್ಪ ಇರುವೆಗಳು ಹೇಗೆ ಮುತ್ತುವವೊ ; ಜ್ಞಾನಾನಂದಾದಿ ಸದ್ಗುಣ ಪೂರ್ಣನು, ಜಗಕೆ ಅಪ್ರತಿಮಲ್ಲನಾಗಿ ಎಲ್ಲರೊಳಗೆ ತಾನೆ ಇರುತಿರುವನು.

೩೪ ಶ್ರೀಹರಿಯೇ ನೀನು ವೇದಪ್ರತಿಪಾದ್ಯನು, ಚಂದ್ರನಂತೆ ಸಜ್ಜನರ ಅಜ್ಞಾನವೆಂಬ ಕತ್ತಲೆ ಕಳೆದು ಸುಜ್ಞಾನ ಮೇಘಾಮೃತವನ್ನುಗರೆಯುವನು, ಯದುಕುಲಶ್ರೇಷ್ಠ ಶ್ರೀಕೃಷ್ಣನೇ ನಿರುಪಮನು ನಿಸ್ಸೀಮನು, ತನ್ನ ಭಕ್ತರಿಗೆ ಪ್ರಾರಬ್ಧ ಕರ್ಮಗಳನ್ನು ಉಣಿಸಿ ತೀವ್ರದಿ ಬಹು ತ್ವರೆಯಿಂದ ಪ್ರಾರಬ್ಧ ಕರ್ಮ ಉಪಮರ್ದ ಮಾಡಿ ಹೇಗೆಂದರೆ (ಕ್ಷುಬ್ಧ ಅಗ್ನಿಯಂತೆ ಸಕಲಭುಂಜಿಸಿ) ದಯಾ ಸಮುದ್ರನು ಭಕ್ತರನ್ನು ಬಿಡದೇ ಇರುವನು.

೩೫. ಶ್ರೀ ಹರಿಯೇ ನೀನು ರಮಾ ಬ್ರಹ್ಮಾದಿಗಳಿಂದ ವಂದಿತನಾದ ಸರ್ವೋತ್ತಮನು. ಭೂಭಾರಹರಣಾರ್ಥ ಬ್ರಹ್ಮದೇವರ ಸ್ತೋತ್ರಕ್ಕೊಲಿದು ದೇವಕಿ ದೇವಿಯ ಜಠರದಲ್ಲಿ ಅವತರಿಸಿ ಮಾನವ ವೇಷದಂತೇ ಲೀಲೆಯನ್ನು ತೋರಿದ, ಬಲರಾಮಾನುಜನೇ ದೈತ್ಯಕುಲನಾಶನಗೈದ ಕೃಷ್ಣನೇ ನೀನು ನಿನ್ನ ಪಾದಾವಲಂಬಿಗಳಾದ ಭಕ್ತರನ್ನು ಸಲಹಿದ ಜಂಬೂರೂಪಿ ಶ್ರೀ ಹರಿಯ ಪಾದದಲ್ಲಿಪ್ಪ ಶ್ರೀ ಕೃಷ್ಣನಾದ ಜಗನ್ನಾಥ ವಿಠಲನೇ, ಸಕಲಕರ್ಮಕರ್ತಾ ಕಾರಯಿತಾ ಎಂದು ಪ್ರತಿಲವ ನಿಮಿಷಗಳಲ್ಲಿ ಶ್ರೀ ಹರಿಯ ರೂಪಗಳನ್ನು ಚಿಂತಿಸಲು ಉಪದೇಶಗೈದಿರುವರು ದಾಸರು ದಯೆಯಿಂದ ಬರೆಸಿದ ಇದೇ ಸಂಧಿಯ ಸಾರ ಮಧ್ವೇಶನಿಗೆ ಅರ್ಪಿತವಾಗಲಿ, ಕರ್ಮಕ್ಷಯವಾಗಲಿ, ಇಂದೆ ಮುಕ್ತಿ ಬಂದೊದಗಲೆಂಬ ಹಂಬಲ.

ಶ್ರೀ ಲಕ್ಷ್ಮೀ ನರಸಿಂಹಾತ್ಮಕ ಶ್ರೀ ಲಕ್ಷ್ಮೀ ವೆಂಕಟೇಶ ಪ್ರಸನ್ನ
ಶ್ರೀ ಗುರುರಾಜೋ ವಿಜಯತೇ

# ೨೧ನೇ ಕರ್ಮ ವಿಮೋಚನ ಸಂಧಿ

ಶ್ರೀ ರಾಘವೇಂದ್ರ ಗುರು— ಶ್ರೀ ವರದೇಂದ್ರ ಗುರು

ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

**ಮೂಲ ನಾರಾಯಣನು ಮಾಯಾ ।**
**ಲೋಲನಂತವತಾರನಾಮಕ ।**
**ವ್ಯಾಳರೂಪ ಜಯಾರಮಣನಾವೇಶನೆನಿಸುವನು ॥**
**ಲೀಲೆ ಗೈವಾನಂತ ಚೇತನ ।**
**ಜಾಲದೊಳು ಪ್ರದ್ಯುಮ್ನ ಬ್ರಹ್ಮಾಂ ।**
**ಡಾಲಯದ ವೊಳಹೊರಗೆ ನೆಲಸಿಹ ಶಾಂತಿ ಅನಿರುದ್ಧ ॥ ೧ ॥**

**ಅವತರಣಿಕಾ :**—ಹಿಂದೆ ಬಿಂಬೋಪಾಸನೆ ೧೮ ಸಂಧಿಯಲ್ಲಿ ಮತ್ತು ೧೯–೨೦ನೇ ಸಂಧಿಯಲ್ಲಿ ಅವರೋಹಣ ಆರೋಹಣ ತಾರತಮ್ಯ ಸಂಧಿಯಲ್ಲಿ ಪೇಳಿದಂತೆ ಬಿಂಬದರ್ಶನದಿಂದ ಅಪರೋಕ್ಷಜ್ಞಾನ ಉಂಟಾಗುತ್ತದೆ. ಈ ಅಪರೋಕ್ಷಜ್ಞಾನದಿಂದ “ಸಂಚಿತಾಗಾಮಿಕರ್ಮ ನಾಶವಾಗಿ ಪ್ರಾರಬ್ಧ ಅನುಭೋಕ್ತವ್ಯವಾಗಿ ಬ್ರಹ್ಮಣಾ ಸಹ ಮುಕ್ತಿಯಾಗುತ್ತದೆ. ಎಂದು ಶ್ರೀ ವಿಜಯದಾಸರ ಸುಳಾದಿಗೆ ಅನುಕೂಲವಾಗಿ ಅಪರೋಕ್ಷಜ್ಞಾನಾನಂತರ ಕರ್ಮ ವಿಮೋಚನ ಕರ್ಮಕ್ಷಯ ಹೇಗಾಗುತ್ತದೆಂದು ಪ್ರಸಂಗ ಸಂಗತ್ಯಾನುಸರಿಸಿ ಬ್ರಹ್ಮಸೂತ್ರಭಾಷ್ಯ ಅಧ್ಯಾಯ ೪ ೧ನೇ ಪಾದ “ತದಧಿಗಮಾಧಿಕ ಅಧಿಕರಣದಲ್ಲಿ”

**“ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷ**
**ವಿನಾಶೌ ತದ್ವ್ಯಪದೇಶಾತ್ ಓಂ” ॥೧೩॥** (ಬ್ರ. ೪-೧-೧೩)

ಈ ಸೂತ್ರಕ್ಕೆ ಶ್ರೀಸರ್ವಜ್ಞರ ಭಾಷ್ಯ

(೧) ಬ್ರಹ್ಮದರ್ಶನ ಉತ್ತರಾಘಸ್ಯಾಶ್ಲೇಷಃ ಪೂರ್ವಾಘಸ್ಯ ವಿನಾಶಶ್ಚ (೨) ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ (ಛಾ. ೪-೧೪-೩) ತದ್ಯಥೈಷೀಕಾ ತೂಲಮಗ್ನೌ ಪ್ರೋತಂ ಪ್ರದೂಯತೇ ಏವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ (ಛಾ. ೫-೨೪-೩) ಇತಿ ತದ್ವ್ಯಪದೇಶಾತ್ ||೧೩||

**ಇದರ ಸಾರಾಂಶವೇನೆಂದರೆ** ಬ್ರಹ್ಮದರ್ಶನವಾದಮೇಲೆ ಅಂದರೆ ಅಪರೋಕ್ಷಜ್ಞಾನವಾದಮೇಲೆ ಒದಗತಕ್ಕ ಆಗಾಮಿ ಮುಂದೆ ಬರುವ ಪಾಪಕ್ಕೆ ಅಶ್ಲೇಷ ಸಂಬಂಧವಾಗದಿರುವದು. ಅಪರೋಕ್ಷಜ್ಞಾನಾತ್ಪೂರ್ವ ಮಾಡಿರ ತಕ್ಕ ಅಪ್ರಾರಬ್ಧವಾದ ಸಂಚಿತಕರ್ಮವು ಸ್ವರೂಪತಃ ವಿನಾಶವಾಗುತ್ತದೆ. ಹೇಗೆ ಜಲದಲ್ಲಿ ಪದ್ಮಪತ್ರಗಳು ಸಂಬಂಧವಾಗಿರುವುದಿಲ್ಲವೋ ಹಾಗೆಯೇ ಬ್ರಹ್ಮಜ್ಞಾನಿಯಲ್ಲಿ ಆಗಾಮಿ ಪಾಪಫಲವು ಸಂಬಂಧವಾಗುವುದಿಲ್ಲ. ಹೇಗೆ ತೃಣವು ಅರಳೆಯೂ, ಅಗ್ನಿಸಂಪರ್ಕವಾದೊಡನೆ ಸುಡುತ್ತದೆಯೋ ಹೀಗೆಯೇ ಬ್ರಹ್ಮಜ್ಞಾನಿಗೆ ಪೂರ್ವದಲ್ಲಿ ಮಾಡಿರತಕ್ಕ ಸಂಚಯ ಎಲ್ಲ ಪಾಪಗಳು (ಸಂಚಿತಕರ್ಮಪಾಪ) ಸ್ವರೂಪತಃ ನಾಶವಾಗಿ ಜ್ಞಾನೋತ್ತರ ಪಾಪಗಳು ಪದ್ಮಪತ್ರದಂತೆ ಸಂಬಂಧವಾಗುವುದಿಲ್ಲ. ಇದು ಬ್ರಹ್ಮಜ್ಞಾನಿಗಳ ವಿಷಯ ವಾಯಿತು.

ಇನ್ನು ಬ್ರಹ್ಮದ್ವೇಷಿಗಳಾದ ತಮೋಜೀವಿಗಳಿಗೆ ಮಿಥ್ಯಾಜ್ಞಾನ ದೃಢ ವಾಗುತ್ತಲೇ ಅವರ ಪುಣ್ಯಕ್ಕೂ ವಿನಾಶ ಅಶ್ಲೇಗಳು ಆಗುತ್ತವೆ. ಹೇಗೆಂದರೆ ಸೂತ್ರ

**"ಓಂ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ಓಂ"**||(ಬ್ರ. ೪-೧-೪) **'ಭಾಷ್ಯ'** ಪುಣ್ಯಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ಶಬ್ದೋಽನು ತ್ಥಾನವಾಚೀ|| ಯಥಾ ಅಶ್ಲೇಷೋ ವಿನಾಶಶ್ಚ ಮುಕ್ತಸ್ಯ ತು ವಿಕರ್ಮಣಃ| ಏವಂ ಸುಕರ್ಮಣಶ್ಚಾಪಿ ಪತತಸ್ತಮಸಿ ಧ್ರುವಮ್|| ಇತ್ಯಾಗ್ನೇಯೇ ||೧೪|| ಇದರ ಸಾರಾಂಶವೇನೆಂದರೆ ಹೇಗೆ ಬ್ರಹ್ಮಜ್ಞಾನಿಗಳ ಪೂರ್ವೋತ್ತರ ಪಾಪಗಳಿಗೆ ನಾಶ ಅಶ್ಲೇಷಗಳೋ ಹಾಗೆಯೇ ಭಗವದ್ವೇಷಿಗಳ ಆಗಾಮಿ ಪುಣ್ಯಕ್ಕೂ

ಸಂಬಂಧಾಭಾವವು. ಪೂರ್ವಸಂಚಯ ಪುಣ್ಯಕರ್ಮ ಸ್ವರೂಪತಃ ನಾಶವು ಆಗುತ್ತವೆಂಬ ಶ್ರೀಸರ್ವಜ್ಞರ ವಚನದಂತೆ ಕರ್ಮವಿಮೋಚನ ಸಂಧಿಯನ್ನು ದಾಸಾರ್ಯರು ಪ್ರಾರಂಭ ಮಾಡಿದ್ದಾರೆ. ಈ ಹರಿಕಥಾಮೃತಸಾರವು ಶಾಸ್ತ್ರಾರ್ಥದಿಂದ ಘನವಾಗಿ ತುಂಬಿ ತುಳುಕುತ್ತದೆ.

ಕಾರಣ ಮೊದಲಿಗೆ ಕರ್ಮವೇನು ? ಕರ್ಮಸ್ವರೂಪವೇನು ? ಕರ್ಮ ಪ್ರವರ್ತಕನಾರು ? ಕರ್ಮನಿವರ್ತಕನಾರು ? ಕರ್ಮವಿಮೋಚಕ, ವಿಕರ್ಮ ನಾಶಕನಾರು ? ಎಂಬುದನ್ನು ಸ್ವೋಕ್ತಿಯಂತೆ ವಿಸ್ತಾರಗೈಸಲು ದಾಸ ರಾಯರು, "ಮೂಲನಾರಾಯಣನು ಮಾಯಾಲೋಲನಂತಾವತಾರನೆಂದು ಈ ಸಂಧಿಯನ್ನು ಉಪಕ್ರಮಿಸಿದ್ದಾರೆ.

**ಪದ್ಯಾರ್ಥ** :—ಮೂಲನಾರಾಯಣನು=ಸೃಷ್ಟಿ ಪ್ರಾರಂಭದಲ್ಲಿ ವಟ ಪತ್ರಶಾಯಿಯಾದ ಶೂನ್ಯನಾಮಕನು. ಉದಕಗಳಿಗೆ ಆಶ್ರಯನಾದ ಕಾರಣ ನಾರಾಯಣನೆಂದು ಅಥವಾ ಸರ್ವಜೀವಾಂತರ್ಯಾಮಿ ಬಿಂಬರೂಪಿ ಹರಿಯೇ ಮೂಲನಾರಾಯಣನೇ ಪುರುಷರೂಪಿ ಹರಿಯು ಬಹಿಃಕಾಲರೂಪದಿಂದ, ಮಾಯಾಲೋಲ=ಮಾಯಾದೇವಿಗೆ ಪತಿ ರಮಣನಾದ, ಶ್ರೀವಾಸುದೇವನು ಮೊದಲಿಗೆ ಪ್ರಾದುರ್ಭೂತನಾದನು, ಅನಂತ ಅವತಾರ ನಾಮಕ="ಏತ ನ್ನೋಪಲಭ್ಯತೇ ತಿರ್ಯಗೂರ್ಧ್ವ ಮಧ್ಯಮಧಸ್ತಾತ್ತಸ್ಮಾದುಚ್ಯತೇ ಅನಂತ ಇತಿ ಶ್ರುತೇಃ"(ವಿದ್ಯಾಧಿರಾಜೀಯ ವಿ.ಸ.ನಾ.) ಅಡ್ಡ ಉದ್ದ ಕೆಳಗೆ ಮೇಲೆ ಮಧ್ಯ ನಡುವೆ ಯಾವಾತನು ಉಪಲಭ್ಯನಾಗಿರುವನೋ ಆತನೇ ಅನಂತ ನೆಂದು ಶ್ರುತಿ, ಈತನಿಗೆ ಅನಂತ ಶೇಷರೂಪವುಳ್ಳವ ಅಥವಾ ಅನಂತ ಬಹು ಅವತಾರವುಳ್ಳವನಾದುದರಿಂದಲೂ ಅನಂತನೆಂದೂ. ವ್ಯಾಳರೂಪ=ವಿಗತ ಮಾನಂ ಪೂರ್ಣಬಲಮಸ್ಯೇತಿ ವ್ಯಾಳಃ। ಮಣಿಷು ಸೂತ್ರಮಿವ ಸರ್ವ ಭೂತೇಷು ವ್ಯಾಳಂಬತ ಇತಿ ವ್ಯಾಳಃ। (ವಿದ್ಯಾ.) ದೋಷಾದಿರಾಹಿತ್ಯ ಸಂಪೂರ್ಣಸ್ವಾತಂತ್ರ್ಯ ಬಲ ಶಕ್ತಿಮಾನಾದುದರಿಂದ ವ್ಯಾಳಃ ಅಥವಾ ಮಣಿ ಗಳಿಗೆ ಆಧಾರವಾಗಿ ಸೂತ್ರವು ಇದ್ದಂತೆ ಸರ್ವ ಭೂತ ಪ್ರಾಣಿಗಳ ಅಸ್ತಿತ್ವಕ್ಕೆ ಆಧಾರನಾಗಿರುವ ಕಾರಣ ವ್ಯಾಳಃ "ಸೂತ್ರೇ ಮಣಿಗಣಾ ಇವ" ಅಥವಾ ವ್ಯಾಳರೂಪ ಸಂಕರ್ಷಣನೆ ಶೇಷರೂಪನು, ಜಯಾರಮಣ=ಜಯಾದೇವಿಗೆ

ಪತಿಯಾದ ಸಂಕರ್ಷಣನ ಆವೇಶ ವಾಯು=ಸಂಕರ್ಷಣನ ಪುತ್ರ ವಾಯು, ವಾಯುಪುತ್ರ ಶೇಷ ಇವರಲ್ಲೇ ಸಂಕರ್ಷಣನು ತನ್ನ ಆವೇಶವಿಟ್ಟು ಕಾರ್ಯ ಮಾಡುತ್ತಾನೆ. ಮತ್ತು ಅನಂತ ಚೇತನ ಜಾಲದೊಳು ಪ್ರದ್ಯುಮ್ನನಾಮಕ ಹರಿಯು ಲೀಲೆಗೈವನು="ಅನುಬಂಧಿಗಳೊಳು ಕೃತಿಪತಿ ಪ್ರದ್ಯುಮ್ನನು ಸುಖಗಳ ತೋರ್ಪ"ನೆಂಬಂತೆ ಬಹು ಸಂಖ್ಯಾಕ ಜೀವದಲ್ಲಿ ಪ್ರದ್ಯುಮ್ನದೇವನು ಲೀಲಾ ಮಾಡುತ್ತಾನೆಂದು, ಇನ್ನು "ಬ್ರಹ್ಮಾಂಡಾಲಯದ ಒಳಹೊರಗೆ ನೆಲಸಿಹ ಶಾಂತಿ ಅನಿರುದ್ಧ=ಬ್ರಹ್ಮಾಂಡದ ಹೊರಗೂ ಒಳಗೂ ಇರುವ ಸಮಸ್ತ ದೇಹಕಾಲಗಳಲ್ಲಿ, ಜಡವಸ್ತುಗಳಲ್ಲಿ ಶಾಂತಿದೇವಿಯ ಪತಿಯಾದ ಅನಿರುದ್ಧ ದೇವನು ಇದ್ದು ಕಾರ್ಯ ಮಾಡುತ್ತಾನೆ. "ಅನಿರುದ್ಧನು ನಿಜ ವನಿತೆ ಸಹಿತ ತಾ ಧನಧಾನ್ಯದೊಳಿಪ್ಪ ‖ ಗುಣವಂತರೊಳು ಜಯಾಪತಿ ಸಂ | ಕರುಷಣ ಕರ್ಮಪ ಮಾಳ್ಪ ‖" ವಾಸುದೇವ ವಿಜಯಪ್ರದನಾಗಿ ಈ ಶರೀರ ಗಳೊಳು | ವಾಸವಾಗಿ ಮಾಯಾಪತಿ ಮಾಡಿದ ಲೇಸುಪುಣ್ಯಗಳು ‖ ಎಂದು ದಾಸರಾಯರ "ಬಯಸದಿರಹಿಕ ಸುಖಗಳನು" ಎಂಬುವ ಪದದಲ್ಲಿ ವರ್ಣಿ ಸಿದ್ದಾರೆ. ಹೀಗೆ ಪಂಚರೂಪಿ ಪರಮಾತ್ಮನ ಕಾರ್ಯಗಳನ್ನು ವರ್ಣಿಸಿದ್ದಾರೆ. ಈ ರೂಪಗಳೇ ಬಹಿಃಕಾಲಕರ್ಮಪ್ರೇರಕರೂಪಗಳೆಂದು ದಾಸಾರ್ಯರು ಬಹು ಅನ್ವರ್ಥಕವಾಗಿ ವರ್ಣಿಸಿದ್ದಾರೆ. ಸೃಷ್ಟಿಪ್ರಾರಂಭದಿ ಲಿಂಗಉಪಚಯ ಮಾಡಿ ವಾಸುದೇವನೇ ಕರ್ಮಾಭಿವ್ಯಕ್ತಿಗೆ ಮೂಲಕಾರಣ.

**ಭಾವಸೂಚನ ‖** ಈಗ್ಗೆ ದಾಸರು ಆಚತುರ್ದಶಮಾದ್ವರ್ಷಾತ್ ಯಂಬಸ್ಮಾಂದೋಕ್ತಿಯು ಮತ್ತು "ಮುನಿಃ ಸುಕರ್ಮಶಿಲೋಪಿ ತಿಷ್ಠನ್ನೇಕ ದಿನೇ ದಿನೇ ‖ ದಶಾವರಾಣಾಂ ದೇಹಾನಾಂ ಕಾರಣಂ ಪ್ರತಿಪದ್ಯತೇ" ಎಂಬ ವಾಯು ಪುರಾಣೋಕ್ತಿಯನ್ನು ತಿಳಿದು ನಾವು ದಿನದಿನದಲ್ಲಿ ಹತ್ತು ನೀಚ ಜನ್ಮ ಬರತಕ್ಕ ಕರ್ಮ ಮಾಡಿದರೆ ಮುಕ್ತಿಯನ್ನು ಎಂದುಕಂಡೇವಂತ ದೈನ್ಯ ವಹಿಸಲು, ಅಪ್ಪಾ ದುಃಖ ಬಿಡಬ್ಯಾಡಿರಿ, ನಮ್ಮ ಜಗನ್ನಾಥನ್ನ ನಾವು ಹೇಳಿದಂತೆ ಕರ್ಮಾಚರಿಸಿ ಸಂತೋಷ ಬಡಿಸಿದರೆ ಒಂದು ನಿಮಿಷಕ್ಕೆ ಹತ್ತಿ ಯನ್ನು ಅಗ್ನಿಯಂತೆ ನಾಶ ಐದಿಸುವ ಯೆಂತ ಹೇಳಿ ಸಕಲಾಘೌಘವಿಘಟನ "ತದಧಿಗಮ ಇತಿ" ಸೂತ್ರೋಕ್ತ ಹ್ಯಾಗಂದರೆ, ಜ್ಞಾನ ವಿಜ್ಞಾನ ಪೂರ್ವ ಕರ್ಮಾಚರಣೆವನ್ನು ಮಾಡಿರಿ, ಮಾಡೋ ಅಲ್ಲಿ ನಿಯಮ ಬಹಳ ಅದೆ.

ಕರ್ತೃತ್ವ ಭ್ರಮ ಬಿಟ್ಟು ನನ್ನ ಕರ್ಮ ಕಳಿಯಲಿಕ್ಕೆ ನಮ್ಮ ಲಕ್ಷ್ಮೀಪತಿ ಸಪರಿವಾರನಾಗಿ, ತನ್ನ ಮನಿಗೆ ಬಂದು ತಾ ಮಾಡಿ ಮಾಡಿಸುವಾನೆಂತನು ಸಂಧಾನ ಬೇಕು. ಜಾಗ್ರತಿ ಇರಲಿ.

ಕಲಿ ಮೊದಲಾದ ದೈತ್ಯರು ಈ ಜ್ಞಾನ ಕೊಡರು. ಆದರೂ ಶ್ರೀ ಸವಿಚಾರ ಶಾಸ್ತ್ರ ಶ್ರವಣಾದಿಗಳಿಂದ ವಾಯುರಾಜನ ಪ್ರೀತಿ ಪಾತ್ರ ಸಂಪಾದಿಸಿದರೆ ಅವರು ಕಲಿಯನ್ನು ಅನುಕೂಲಿಸ್ಯಾರು. ಇದು ನಮ್ಮುಕ್ತಿಯೇ ಅಲ್ಲ. ಬೇಕಾದರೆ ಮನುಜಾ ವಾಯುಪುರಾಣ ನೋಡಪ್ಪಾ, ಅಲ್ಲಿಂದ ನಮ್ಮ ಪ್ರಾಕೃತ ಪದದಲ್ಲಿ ವಿಶ್ವಾಸ ಆದೀತು. "ಯೋಗೀ ಮೋಕ್ಷಮವಾಪ್ನೋತಿ ಜ್ಞಾನ ವಿಜ್ಞಾನ ಸಂಪದಾ ॥ ಕರ್ಮ ಕುರ್ಯಾತ್ ಸದಾ ವಿದ್ವಾನ್ ಕರ್ತೃತಾಂ ಸ್ವಾಂ ವಿಹಾಯ ಚ ॥ ಕರ್ತಾ ಕಾರಯಿತಾ ವಿಷ್ಣುಃ ಪ್ರೇರಕಃ ಸಾಕ್ಷಿಚೇತನಃ ॥ ಕರ್ಮಣಾಂ ಫಲದೋ ಭೋಕ್ತಾ ಸ್ವಾತಾ ಕರ್ಮಣ್ಯಕರ್ಮಣಿ"ಯೆಂತ ವಾಯು ಪುರಾಣವನ್ನೇ ಅರ್ಥತಃ ಗ್ರಹಣ ಮಾಡಲಿಕ್ಕೆ ಈ ಸರ್ವ ಕರ್ಮ ವಿಮೋಚನ ಸಂಧಿ ಪ್ರಾರಂಭಿಸುತ್ತಾರೆ. ಅದಕ್ಕೆ ಸೂಚನಾ **॥ಹರೀತಿ॥** ಮಂಜೂಷಾಕಾರರು ಹೀಗೆ ಅಪ್ಪಣೆ ಕೊಡಿಸಿದ್ದಾರೆ.

"ನಿತ್ಯಕೃತಕರ್ಮಾಳಿ ತತ್ಕ್ಷಣ ।
ಸತ್ಯಸಂಕಲ್ಪನಿಗೆ ಒಪ್ಪಿಸೆ ।
ಚಿತ್ತದಿಂ ಕೈಕೊಂಡು ಜೀವನ್ಮುಕ್ತನೆನಿಸುವದಾ ॥
ಒತ್ತಿಪರಮ ಸು ಸೂಕ್ಷ್ಮ ರೀತಿಯ ।
ಅತ್ಯಧಿಕ ಸಂಪ್ರೀತಿಯಿಂದಲಿ ।
ಬಿತ್ತರಿಸಿಹ ಕರ್ಮಗಳ ಮೋಚನದ ಸಂಧಿಯಲಿ ॥೨೧॥

ಮೂಲೇತಿ ॥ ಮಾಯಾ ತದಾಖ್ಯಾ ರಮಾ ॥ ಅನಂತೇತಿ ನಾಮ್ನ್ಯಪಿ ವಿಶೇಷಣಂ ॥ ವ್ಯಾಳೇತಿ ಸಹಸ್ರನಾಮಾಂತರ್ಗತಂ ಪದಂ ಜಗ್ರಾಹ ಭಗವಾನ್ ದಾಸಭೂಪಃ "ಅಹಃ ಸಂವತ್ಸರೋ ವ್ಯಾಳಃ ಇತ್ಯುಕ್ತೇಃ॥ ಜಾಲಃ ಸಮೂಹಃ। ಆಲಯಮಾಸೀ । ನೆಲಸಿಪ್ಪಾ ಇದ್ದಾನೆ ॥೧॥

## ಶ್ರೀವ್ಯಾಸ ದಾಸ ಸಿದ್ಧಾಂತ ಕೌಮುದೀ

"ಅವತಾರಾನ್" ಇತ್ಯತ್ರ "ತದಾವೇಶಾನ್ ತಥಾ ಸಮ್ಯಕ್ ಜ್ಞಾತ್ವಾ ಮುಕ್ತಿಃ ನ ಚಾನ್ಯಥಾ" ಇತಿ ಆರ್ಯವಾಜ್ಮುದ್ರಯಾ(ಏ) ತತ್ಸಂಧಿಂ ಆರಭತೇ "ಮೂಲ" ಇತಿ ॥ ಮೂಲರೂಪಂ ॥ ಮಾಯಾಲೋಲಃ ತದಾವಿರ್ಭೂತಃ ವಾಸುದೇವಃ ॥ "ಅನಂತ"-"ಏತನ್ನಾನಾವತಾರಾಣಾಂ ನಿಧಾನಂ" ಇತ್ಯುಕ್ತೇಃ ॥ ಉಭಯಾನ್ವಯಿ ಚೇದವಲ್ ॥ "ನರನಾಮಾತ್ರ ತಸ್ಮಿನ್" ಇತ್ಯುಕ್ತೇಃ ॥ ವ್ಯಾಲಃ ಸರ್ಪಃ॥ ತದ್ರೂಪಃ ॥ ಯದ್ವಾ ವ್ಯಾಲಃ ಆವೇಶಃ ॥ ಅನ್ಯತ್ರ ಪ್ರವೇಶಃ ॥ "ವ್ಯಾಲಃ"-ಓಂ * ಪುರೋಳಾ ಈತ್ತ್ರುರ್ವಶೇ (ಶೋ) ಯಕ್ಷುರಾಸೀದ್ರಾಯೇ ಮತ್ಸ್ಯಾಸೋ ನಿಶಿತಾ ಅಪೀವ ॥ ಶ್ರುಷ್ಟಿಂ ಚಕ್ರುಃ ಭೃಗುದ್ರುಹ್ಯವಶ್ಚ ಸರವಾ ಸರವಾಯುಮತರತ್ ॥ ಓಂ ॥ * ವ್ಯಾಲಃ ಕ್ರೂರಃ ಪ್ರಾಣೀ । ತದ್ವತ್ ಶತ್ರುಮಾರಕಃ ॥ ಶಾಂತಿಃ-ತತ್ಪತಿಃ ॥೧॥

## ಕನ್ನಡಾರ್ಥ

"ಅವತಾರಾನ್" ಎಂಬಲ್ಲಿ-"ಪರಮಾತ್ಮನಾದ ನಾರಾಯಣನ ಅವತಾರಗಳನ್ನೂ ಆವೇಶಗಳನ್ನೂ ಯಥಾವತ್ತಾಗಿ ತಿಳಿದರೇ ಮುಕ್ತಿಯಾಗುವದು; ಇಲ್ಲದಿದ್ದರೆ ಇಲ್ಲ" ಎಂದು ಹೇಳುವ ಶ್ರೀಮದಾಚಾರ್ಯರ ವಚನವನ್ನು ಅನುಸರಿಸಿ, ಆವೇಶಗಳನ್ನು ಹೇಳಲು ಈ ಸಂಧಿಯನ್ನು ಪ್ರಾರಂಭಿಸುತ್ತಾರೆ- "ಮೂಲ" ಎಂಬ ಪದ್ಯದಿಂದ.

ನಾರಾಯಣನು ಮೂಲರೂಪನು ಅವನಿಂದ ಮೊದಲು ವಾಸುದೇವ ರೂಪವು ಪ್ರಾದುರ್ಭೂತವಾಯಿತು. ಈ ವಾಸುದೇವರೂಪವು ನಾನಾ ಅವತಾರಗಳಿಗೆ ಕಾರಣವಾದುದು ಎಂದು ಹೇಳಿದುದರಿಂದ "ಅನಂತ" ಎಂದು ಹೇಳಿದುದು ಅತ್ಯಂತ ಸಂಗತವು. "ಅನಂತಾವತಾರನಾಮಕ" ಎಂಬುದು ವಾಸುದೇವನಿಗೇ" ವ್ಯಾಳರೂಪ ಜಯಪತಿ ಸಂಕರ್ಷಣನಿಗೆ ಹೀಗೆ ಉಭಯತ್ರ ಅನ್ವಯಿಸುತ್ತದೆ. ಅಂದರೆ ಶೇಷರೂಪದಿಂದ, ಶೇಷಾಂತರ್ಯಾಮಿ ಸಂಕರ್ಷಣರೂಪವು ಪ್ರಾದುರ್ಭೂತವಾಗಿ ಶೇಷನಲ್ಲಿ ಹಾಗೂ ಉಳಿದವರಲ್ಲಿ ಅಂಶರೂಪದಿಂದ ಪ್ರವಿಷ್ಟನಾಗಿರುತ್ತಾನೆ- "ವ್ಯಾಲಃ"—ಸರ್ಪ ಈ ರೂಪವುಳ್ಳವ

ನಾಗಿ; ಎಂದು ಅರ್ಥ. ಅಥವಾ ವ್ಯಾಲನಲ್ಲಿ-ಸರ್ಪನಾದ ಶೇಷನಲ್ಲಿ ಆವೇಶ. ಉಳಿದವರಲ್ಲಿ ಪ್ರವೇಶ.

"ವ್ಯಾಲಃ"—"ವ್ಯಾಲ" ಎಂದರೆ ಭಯಂಕರ ಕ್ರೂರವಾದ ಪ್ರಾಣಿ. ಅದರಂತೆ ಶತ್ರುಗಳನ್ನು ಸಂಹರಿಸುವವನಿಗೆ "ವ್ಯಾಲ" ಎಂದು ಹೆಸರು. ಬೃಹತೀ ಮಂತ್ರಾನುಗುಣವಾದ ಅರ್ಥವಿದು.

"ಶಾಂತಿ ಅನಿರುದ್ಧ" ಎಂಬಲ್ಲಿ ಶಾಂತಾಪತಿ ಅನಿರುದ್ಧ ಎಂದು ಅರ್ಥ ವನ್ನು ತಿಳಿಯಬೇಕು ||೧||

ಅವತರಣಿಕಾ :—ಹಿಂದಿನ ಪದ್ಯದಲ್ಲಿ ಹೇಳಿದಂತೆ ಅನಿರುದ್ಧಾದಿ ಐದು ಕಾರಣ ರೂಪಗಳು ಒಂದೊಂದರಲ್ಲಿ ಪುನಃ ೫ ರೂಪಗಳಂತೆ ೨೫ ಕಾರ್ಯ ರೂಪದಿ ಒಟ್ಟಿಗೆ ೩೦ ರೂಪದಿಂದ ಬ್ರಹ್ಮಾಂಡದಲ್ಲಿ ಚರಿಸುತಿಪ್ಪ ಭೇದವರ್ಜಿತ ವಾದ ಭಗವದ್ರೂಪಗಳನ್ನು ವರ್ಣಿಸುತ್ತಾರೆ.

**ಐದು ಕಾರಣ ರೂಪವಿಪ್ಪ ।**
**ತ್ತೈದು ಕಾರ್ಯಗಳೆನಿಸುವವು ಆ ।**
**ರೈದು ರೂಪದಿ ರಮಿಸುತಿಪ್ಪನು ಈ ಚರಾಚರದಿ ॥**
**ಭೇದ ವರ್ಜಿತ ಮೂಜಗಜ್ಜ ।**
**ನ್ಮಾದಿ ಕಾರಣ ಮುಕ್ತಿ ದಾಯಕ ।**
**ಸ್ವೋದರದೊಳಿಟ್ಟೆಲ್ಲರನು ಸಂತೈಪ ಸರ್ವಜ್ಞ ॥ ೨ ॥**

**ಪದ್ಯಾರ್ಥ** :—ಐದು ಕಾರಣರೂಪ=ನಾರಾಯಣ ವಾಸುದೇವ, ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಇವೈದು ಪ್ರಾದುರ್ಭೂತವಾದ ಮೂಲ ಕಾರಣ ರೂಪಗಳು, ಇಪ್ಪತ್ತೈದು ಕಾರ್ಯಗಳೆನಿಸುವವು=೧ ನಾರಾಯಣ-ನಾರಾಯಣ-ನಾರಾಯಣ, ವಾಸುದೇವ-ನಾ, ಪ್ರದ್ಯುಮ್ನ-ನಾ, ಅನಿರುದ್ಧ, ೨ ವಾಸುದೇವ, ನಾರಾಯಣ, ವಾಸು ವಾಸು, ವಾ-ಸಂ, ವಾ-ಪ್ರ, ವಾ-ಅ ೩ ಸಂಕರ್ಷಣ-ನಾ, ಸಂ.ವಾಸು, ಸಂ-ಸಂ, ಸಂ-ಪ್ರ, ಸಂ-ಅನಿರುದ್ಧ, ೪ ಪ್ರದ್ಯುಮ್ನ, ನಾರಾಯಣ, ಪ್ರವಾಸು, ಪ್ರ-ಸಂ, ಪ್ರ-ಪ್ರ-ಪ್ರ-ಅ, ೫ ಅನಿ ರುದ್ಧ-ನಾ, ಅಂ-ವಾಸು, ಅಂ-ಸಂ, ಅ, ಪ್ರ, ಅ. ಅ. ಹೀಗೆ ೨೫ ರೂಪ

ಗಳು ಕಾರ್ಯ ಮೂಲ ಕಾರಣ ರೂಪಗಳು ೫ ಒಟ್ಟಿಗೆ ೩೦ ರೂಪ-ಆರೈದು= ೬×೫=೩೦ ರೂಪಗಳಿಂದ ರಮಿಸುತಿಪ್ಪನು, ಈ ಚರಾಚರದಿ= ಈ ಚರ ಜೀವನಲ್ಲಿ ಅಚರ=ಪ್ರಕೃತ್ಯಾತ್ಮಕ ಸಹಿತವಾದ ಮೂಲ ಜಡ ಪ್ರಕೃತಿ ಮತ್ತು ೨೪ ಜಡತತ್ವಗಳಲ್ಲಿ ತತ್ ಕಾರ್ಯ ಮಾಡುತ್ತ, ರಮಿಸುತಿಪ್ಪನು=ಪ್ರಕೃತಿ ಯಿಂದೊಡಗೂಡಿ ವಿಹಾರ ಮಾಡುವನು, ಭೇದವರ್ಜಿತ=ಒಂದು ಮೂಲ ಕಾರಣ ರೂಪಕ್ಕೂ ಕಾರ್ಯರೂಪಗಳಿಗೂ ಕಿಂಚಿತ್ತಾದರೂ ಭೇದವೇ ಇಲ್ಲ. ಮೂಜಗಜ್ಜನ್ಮಾದಿ ಕಾರಣ= ಮೂರು ಲೋಕಗಳಾದ ಈ ಜಗತ್ತಿಗೆ ಜನ್ಮಾದಿ ಕಾರಣ=ಸೃಷ್ಟಿ ಸ್ಥಿತಿ ಲಯ ಮಾಡತಕ್ಕ ಸ್ವತಂತ್ರನಾದ ಕಾರಣ ಪುರುಷನು, ಅಲ್ಲದೇ ಮುಕ್ತಿದಾಯಕ=ಸಾಧನಪೂರ್ಣರಾದ ಜೀವರಿಗೆ ಅಪುನರಾವರ್ಜಿತ ವಾದ ಲಿಂಗಭಂಗಾತ್ಮ ದ್ವಿದಳವಾದ ಸ್ವರೂಪಾನಂದಾವಿರ್ಭಾವ ಮೋಕ್ಷವನ್ನು ಕೊಡುವನು. ಸ್ವೋದರದೊಳಗಿಟ್ಟಿಲ್ಲರನು ಸಂತೈಪ=ಪ್ರಳಯ ಕಾಲದಲ್ಲಿ ಎಲ್ಲ ಜೀವಿಗಳನ್ನು ತನ್ನ ಉದರದಲ್ಲಿಟ್ಟುಕೊಂಡು ಸಂತೈಸ=ಸಂರಕ್ಷಿಸುವ ಕಾಪಾಡುವ, ಸರ್ವಜ್ಞ="ಸರ್ವಂ ಜಾನಾತೀತಿ ಸರ್ವಜ್ಞಃ" ಸರ್ವವನ್ನು ತಿಳಿದವನಾದ ಕಾರಣ ಸರ್ವಜ್ಞನೆಂದು ಕರೆಸುತ್ತಾನೆ, ಕಾರಣ=ಕರ್ಮಕ್ಕೆ ಬೇಕಾದ ಆಧಾರ, ಹೇತು, ಕಾರ್ಯ=ಕೆಲಸ=ಕ್ರಿಯಾಚರಣ ||

**ಭಾವಸೂಚನ ||** ಐದೇತಿ || ಉಕ್ತರೂಪಗಳು ಇಪ್ಪತ್ತೈದು ತತ್ವಗಳು, ಆರೈದು ಮೂವತ್ತು || "ಸ ಪಂಚರೂಪೀ ಭಗವಾನ್ ತ್ರಿಂಶನ್ಮೂರ್ತಿಃ ವಿರಾಜತೇ|ಬ್ರಹ್ಮಾಂಡೇ ಇತಿ ತಾರತಮ್ಯೇ || ಮೂಜಗ=ಮೂರು ಜಗತ್ತು ||೨||

**ವಿಶೇಷ ಸೂಚನೆ ||** "ಪಂಚರೂಪಿ ಪರಮಾತ್ಮನು ತಾ ಪ | ಟ್ಪಂಚ ರೂಪದಿ ಪೊರೆವ | ಪಂಚಜ್ಞಾನ ಕರ್ಮೇಂದ್ರಿಯ ಜನ್ಯ ದ್ವಿ | ಪಂಚಪಾತಕ ತರಿವ || ಸಂಚಿತಾಗಾಮಿಗಳಪರಾಧವ | ಮುಂಚಿನವರಿಗೀವ | ವಾಂಛಿತಪ್ರದ ಜಗನ್ನಾಥ ವಿಠಲನು | ಮಿಂಚಿನಂದದಿ ಪೊಳೆವ ||೫||

(ಬಯಸದಿರಹಿಕ ಸುಖಗಳನುದಿನದಿ ಎಂಬುವ) ದಾಸಾರ್ಯರಪದದಿಂದ ಕರ್ಮವೋಚನ ಸಂಧಿಯು ಅರ್ಥವಾಗುತ್ತದೆ.

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಐದು" ಇತಿ ॥ ನಾರಾಯಣಾದಯಃ ಪಂಚ ಪೃಥಕ್ ಪ್ರಕೃತ್ಯಾ ಸಹ ತತ್ವೇಷು ತಿಷ್ಠಂತಿ ಮಿಲಿತ್ವಾ—"ಆರೈದು"ತ್ರಿಂಶತಿ "ಮೂಜ್ಜಗ"-ಮೂರು ಲೋಕ "ಭೂಃ, ಭುವಃ ಸ್ವಃ" ಇತಿ ॥೨॥

### ಕನ್ನಡಾರ್ಥ

ನಾರಾಯಣ ಮುಂತಾದ ಐದು ರೂಪಗಳು ಕಾರಣಗಳು ನಾರಾಯಣ ನಾರಾಯಣ, ನಾರಾಯಣ ವಾಸುದೇವ ಈ ಮುಂತಾದ ಇಪ್ಪತ್ತೈದು ಕಾರ್ಯ ರೂಪಗಳು ಇದಲ್ಲದೇ ಪ್ರಕೃತಿಯಿಂದ ಸಹಿತವಾದ ಇಪ್ಪತ್ತೈದು ತತ್ವಗಳಲ್ಲಿ ರುವ ೨೫ ಶ್ರೀ ಹರಿಯ ರೂಪಗಳೂ-ನಾರಾಯಣ ಮುಂತಾದ ಐದು ರೂಪ ಗಳೂ ಸೇರಿ ಮೂವತ್ತು ರೂಪಗಳಾಗುತ್ತವೆ. "ಮೂಜ್ಜಗ"—ಭೂಲೋಕ, ಭುವರ್ಲೋಕ, ಸ್ವರ್ಲೋಕವೆಂಬ ಮೂರು ಲೋಕಗಳು ॥೨॥

**ಅವತರಣಿಕಾ ॥** ಇನ್ನು ಕರ್ತೃ-ಕರ್ಮ-ಕ್ರಿಯೆಗಳಲ್ಲಿಯೂ ಸಹ ತನ್ನಾಮ ರೂಪಗಳಿಂದ ಇದ್ದು ಜ್ಞಾನಪ್ರದನಾದ ಕಪಿಲ ನಾಮಕ ಹರಿಯು ರಮಾಬ್ರಹ್ಮರುದ್ರೇಂದ್ರಾದಿಗಳನ್ನು ಪ್ರೇರಿಸುತ್ತಾ ಕರ್ಮ ಮಾಡಿಸಿ ರಕ್ಷಿಸುತ್ತಾ ದೈತ್ಯಾದಿಗಳನ್ನು ಶಿಕ್ಷಿಸುವನೆಂದು ಹೇಳುತ್ತಾರೆ.

**ಕಾರ್ಯಕಾರಣ ಕರ್ತೃಗಳೊಳು ಸ್ವ ।**
**ಭಾರ್ಯರಿಂದೊಡಗೂಡಿ ಕಪಿಲಾ ।**
**ಚಾರ್ಯ ಕ್ರೀಡಿಸುತಿಪ್ಪ ತನ್ನೊಳು ತಾನೆ ಸ್ವೇಚ್ಛೆಯಲಿ ॥**
**ಪ್ರೇರ್ಯನಲ್ಲ ರಮಾಬ್ಜಭವ ।**
**ರಾರ್ಯ ರಕ್ಷಿಸಿ ಶಿಕ್ಷಿಸುವನು ಸ್ವ ।**
**ವೀರ್ಯದಿಂದಲಿ ದಿವಿಜ ದಾನವ ತತಿಯ ದಿನದಿನದಿ ॥೩॥**

**ಪದ್ಯಾರ್ಥ :—**ಕಾರ್ಯ=ಕೆಲಸ, ಕ್ರಿಯೆಯಲ್ಲಿ, ಕಾರಣ=ಕಾರ್ಯ ತೇಽನೇನೇತಿ ಕಾರಣಂ, ಕರ್ತಾ=ಕರೋತಿ ಕಾರಯತೀತಿ ವಾ ಕರ್ತಾ (ವಿದ್ಯಾ ಧಿರಾಜೀಯ ವಿ.) ಕರಣಂ ಕಾರಣಂ ಕರ್ತಾ ಎಂದು ವಿಷ್ಣುಸಹಸ್ರನಾಮ. ಹೀಗೆ ಮೂರು ರೂಪದಿಂದ ಸ್ವಭಾರ್ಯರಿಂದೊಡಗೂಡಿ=ತಮ್ಮ ಪತ್ನಿ

ಲಕ್ಷ್ಮೀದೇವಿಯರಿಂದ ಕೂಡಿಕೊಂಡು, ಕಪಿಲಾಚಾರ್ಯ=ಮಹರ್ಷಿಃ ಕಪಿಲಾಚಾರ್ಯ ಎಂದು (ವಿ. ಸ. ನಾ.) ಮಹರ್ಷಿಕಪಿಲಾಚಾರ್ಯಃ ಸವಿಶೇಷಣಮೇಕಂ ನಾಮ॥ ಮಹಾಂಶ್ಚಾಸೌ ಋಷಿಶ್ಚ ಮಹರ್ಷಿಸ್ಸರ್ವಜ್ಞ ಋಷಿಃ॥ ಸುಖರೂಪಂ ಪಾಲಯತೇ ಚ ಜಗದನೇನೇತಿ ಕಪಿಲಃ॥ ಋಷಿಃ ಪ್ರಸೂತಂ ಯಸ್ತಮಗ್ರೇ ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್। ಸುಖಾನಂದಾತ್ ತತ್ಪಾಲನಾಲ್ಲೀಯನಾಚ್ಚ॥ಯಂ ವೈ ದೇವಂ ಕಪಿಲಮುದಾ ಹರಂತೀತಿ ಬಾಭ್ರವ್ಯಶಾಖಾಯಾಮ್॥ಸುಖಂ ಪಿಬತಿ ಲೀಯತೇ ಚೇತಿ ವಾ ಕಪಿಲಃ॥ಶುದ್ಧಾತ್ಮತತ್ವಜ್ಞಾನಲಕ್ಷಣಂ ಸಾಂಖ್ಯಮಾಚಿನೋತೀತಿ ಆಚಾರ್ಯಃ॥ ಕಪಿಲಶ್ಚಾಸಾವಾಚಾರ್ಯಶ್ಚೇತಿ ವಾ ಕಪಿಲಾಚಾರ್ಯಃ॥ ಇಷ್ಟು ಕಪಿಲಾ ಚಾರ್ಯನೆಂಬುದಕ್ಕೆ ಅರ್ಥ. (ವಿ.ರಾಜೀಯ). ಶುದ್ಧವಾದ ಆತ್ಮತತ್ವಜ್ಞಾನ ರೂಪ ಸಾಂಖ್ಯಶಾಸ್ತ್ರ ರಚಿಸಿ ವ್ಯಾಖ್ಯಾತೃರಾದುದರಿಂದ ಆಚಾರ್ಯಃ ಸುಖಂ ಶುಭಸಾರವನ್ನು ಪಾನಮಾಡುತ್ತಾ ಜ್ಞಾನಪ್ರದನಾದುದರಿಂದ ಕಪಿಲಃ ಇತ್ಯಾದಿ ಇಂತು ಕಪಿಲಾಚಾರ್ಯ ಸುಖಜ್ಞಾನಪ್ರದನಾಗಿ, ತನ್ನೊಳು ತಾನು ಸ್ವೇಚ್ಛೆಯಲಿ ಕ್ರೀಡಿಸುತಿಪ್ಪ=ಸ್ವರಮಣನಾಗಿ ವಿಜ್ಞಾನಮಯನಲ್ಲಿ ಆನಂದ ಮಯನು ರಮಿಸುತ್ತಾ ಇದ್ದು, ಪ್ರೇರ್ಯನಲ್ಲ=ಎಂದರೆ ಕಾರ್ಯಕಾರಣ ಕರ್ತೃಗಳಿಗೆ ಪ್ರೇರಕನಲ್ಲನೆ? ಎಂಬುದಕ್ಕೆ ಅಥವಾ ಕಾರ್ಯಕಾರಣಕರ್ತ ರಲ್ಲಿ ಪ್ರೇರಕನು ಎಂದು ಅರ್ಥಮಾಡಬೇಕು ಹೊರ್ತಾಗಿ ಪ್ರೇರಕನಲ್ಲವೆಂದು ಅರ್ಥ ಮಾಡಕೂಡದು. ಹೀಗೆ ರಮಾಬ್ಜಭವರಾರ್ಯ ರಕ್ಷಿಸಿ=ರಮಾಬ್ರಹ್ಮ ರುದ್ರನೇ ಮೊದಲಾದವರನ್ನು ರಕ್ಷಿಸಿ=ಕಾಪಾಡುವನು, ಶಿಕ್ಷಿಸುವನು=ದೈತ್ಯ ದಾನವಾದಿಗಳನ್ನು ಶಿಕ್ಷಾ ಮಾಡುವನು, ಸ್ವವೀರ್ಯದಿಂದಲಿ=ತನ್ನಯ ಬಲ ಪರಾಕ್ರಮದಿಂದಲೇ ದಿವಿಜದಾನವತತಿಯ ದಿನ ದಿನದಿ=ಬ್ರಹ್ಮಾದಿದೇವತೆಗಳ ಸಮೂಹವನ್ನು, ದಾನವತತಿಯ=ದನುಪುತ್ರರಾದ ತಮೋಜೀವಿಗಳಾದ ದೈತ್ಯದಾನವರನ್ನು ನಿತ್ಯದಲ್ಲಿಯೂ ರಕ್ಷಿಸಿಶಿಕ್ಷಿಸುವನೆಂದು ಕರ್ಮಪ್ರೇರಕನಾದ ಶ್ರೀಹರಿಯನ್ನು ಪ್ರಾರ್ಥಿಸುತ್ತಾರೆ.

**ಭಾವಸೂಚನ॥** ಕಾರ್ಯೇತಿ॥ ಕಪಿಲೇತಿ॥ ಮಹರ್ಷಿಃ ಕಪಿಲಾ ಚಾರ್ಯ ಇತ್ಯುಕ್ತೇಃ॥ ತತಿ ಸಮೂಹ ॥೩॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಕಾರ್ಯ" ಇತಿ || "ಕಾರಣಂ" * ಓಂ || ರಣಂತಿ ಸಪ್ತಸಿ ಧನಃ (ಸ
ಸದಃ) ಇಂದ್ರಂ ಸುತೇ ಹವಾಮಹೇ ತ್ರಿಕದ್ರುಕೇಷು ಚೇತನರ್ ||ದೇವಾಸೋ
ಯಜ್ಞಮತ್ನತ ತಮಿದ್ವರ್ಧಂತು ||ಓಂ||* ಕಂ ಸವನತ್ರಯುವರ್ || ತತ್ರ ಅಧ
ಯ್ವಾರ್ಯದಿ ಶಬ್ದವಿಷಯಃ ಕಾರಣಂ || "ಗುಣಪ್ರಕೃತಿ ಜೀವಗಃ" || **ಕಪಿಲ
ಚಾರ್ಯಃ"** * ಓಂ || ಶಿಪ್ರ್ಯಂಧಸಃ ದಾನಾ ವೃಗೋ ನ ವಾರಣಃ ಪುರುತ್
ಚರಥಂ ದಧೇನ ಕಿಷ್ಟ್ವಾ ನಿಯಮುದಾ ಸುತೇ ಗಮೋ ಮಹಾಂಶ್ಚರಸಿ|ಓಂ|
ಸುಖಪಾತೃತ್ವಾತ್ ಕಪಿಃ||ಲಾತಿ ಅನುಗೃಹ್ಣಾತಿ ಶಿಷ್ಯಾನ್ ಇತಿ ಲಃ||ಗತೇ
ಆಚರಣೀಯತ್ವಾತ್ ಆಚಾರ್ಯಃ||"ತನ್ನೊಳು"-ಸ್ವರತೇಃ||ನ ಹ್ಯನ್ಯತಿಃ
ಇತ್ಯುಕ್ತೇಃ || "ಪ್ರೇರ್ಯನಲ್ಲ" ಪ್ರೇರಣಾನರ್ಹ || ಭವರತಾನ್||"ಆರ್ಯ
ಇತಿ ಪದಂ || "ಶಿಕ್ಷಿಸುವುದು" ಶಾಸ್ತಿ ಅನ್ಯಾನ್ ಶಿಕ್ಷಯತಿ ||೩||

## ಕನ್ನಡಾರ್ಥ

"ಕಾರಣ" ಸವನತ್ರಯಕ್ಕೆ ಎಂದು ಹೆಸರು. ಈ ಸವನಗಳಲ್ಲಿ ಅಧ್ವಯು
ಮುಂತಾದವರ ಶಬ್ದಗಳಿಗೆ ವೈದಿಕ ಮಂತ್ರಗಳಿಗೆ ಮುಖ್ಯವೃತ್ತಿಯಿಂದ ಮುಖ
ವಾಗಿ ಪ್ರತಿಪಾದಿತನಾದವನು. ಮತ್ತು ಪ್ರಕೃತಿ ಜೀವರಲ್ಲಿರುವವನು.

**"ಕಪಿಲಾಚಾರ್ಯ"** ಸುಖವನ್ನೇ ಸ್ವೀಕರಿಸುವವ, ಶಿಷ್ಯರನ್ನು ಅನು
ಗ್ರಹಿಸುವವ ಅನುಕರಣೀಯ ಗತಿಯುಳ್ಳವನು. "ಪರಮಾತ್ಮನಿಗೆ ಅನ್ಯರಿಂದ
ರತಿಯಿಲ್ಲ" ಎಂದು ಹೇಳಿರುವುದರಿಂದ "ತನ್ನೊಳು ತಾನೇ" ಎಂದು ಅ
ಸಮಂಜಸ. ಭವರ ಆರ್ಯ ಎಂದು ಪದಚ್ಛೇದ. ಅನ್ಯರನ್ನು ಶಾಸನ
ಮಾಡುವನು.||೩||

**ಅವತರಣಿಕಾ** :—ಶ್ರೀ ಹರಿಯು ಸಮಸ್ತ ಜಗತ್ತಿನೊಳಗೆ ವ್ಯಾಪ್ತ
ನಾಗಿ ಅವತಾರ-ಆವೇಶ ಅಂತರಾತ್ಮನಾಗಿಯೂ ಜಗತ್ತಿನೊಳಗೆ ಅವಕಾಶ
ಪ್ರದನಾಗಿಯೂ, ಇರುವನೇ ಯೋಗೀಶ್ವರರ ಮನದಲ್ಲಿ ತಾನಿಪ್ಪನಾದರೂ
ತನ್ನೊಳಗೆ ಎಲ್ಲರನ್ನ ಇಟ್ಟು ಸಲಹುವನೆಂದು ದೃಷ್ಟಾಂತದಿಂದ ಹೇಳುತ್ತಾರೆ

**ಈ ಸಮಸ್ತ ಜಗತ್ತಿನೊಳಗಾ ।**
**ಕಾಶದೋಲಿರುತಿಪ್ಪ ವ್ಯಾಪ್ತಾ ।**
**ವೇಶ ಅವತಾರಂತರಾತ್ಮಕನಾಗಿ ಪರಮಾತ್ಮ ॥**
**ನಾಶರಹಿತ ಜಗತ್ತಿನೊಳಗವ ।**
**ಕಾಶದನು ತಾನಾಗಿ ಯೋಗೀ**
**ಶಾಶಯ ಸ್ಥಿತ ತನ್ನೊಳೆಲ್ಲರನಿಟ್ಟು ಸಲಹುವನು ॥೪॥**

**ಪದ್ಯಾರ್ಥ :—**ಈ ಸಮಸ್ತ ಜಗತ್ತಿನೊಳಗೆ=ಈ-ಕಣ್ಣಿಗೆ ಕಾಣುವ ಸಮಸ್ತ ಎಲ್ಲ ಬ್ರಹ್ಮಾಂಡದಲ್ಲಿ ಪಿಂಡಾಂಡದಲ್ಲಿಯೂ, ಆಕಾಶದೊಲಿರುತಿಪ್ಪ= ಆಕಾಶವು ಗಗನವು ಹೇಗೆ ಸರ್ವತ್ರ ವ್ಯಾಪಿಸಿಕೊಂಡಿರುವದೊ ಅದರಂತೆ ಇರುವನು. ಹೇಗೆಂದರೆ, ವ್ಯಾಪ್ತ=೧-ಸಕಲ ಜಗತ್ತಿನಲ್ಲಿ, ಘನೀಭೂತ ಅಪ್ರತಿಘನಾಗಿ ಒಂದೇ ರೀತಿ ವ್ಯಾಪ್ತ, ೨-ಜಡ ಚೇತನರಂತೆ ವ್ಯಾಪ್ತ, ೩-ತನ್ನ ನಿಜ ಸಚ್ಚಿದಾನಂದರೂಪಕರಚರಣಾದಿ ಚಿನ್ಮಯಾವಯವಗಳಿಂದ ವ್ಯಾಪ್ತನಾಗಿರುವನಲ್ಲದೆ ಸಾಂಶರಾದ ದೇವತೆ ಜೀವರಲ್ಲಿ, ಆವೇಶ=ಬಲರಾಮ ಮೊದಲಾದವರಲ್ಲಿ, ಶ್ರೀ ಹರಿಯ ಆವೇಶ—ಭಾವ ತುಂಬಿರುವಿಕೆ ಮತ್ತು ಅವತಾರ= ತನ್ನ ಕಳೇವರ ಚಿನ್ಮಯರೂಪದಿಂದ ರಾಮಕೃಷ್ಣಾದಿ ರೂಪಗಳಿಂದ ಪ್ರಾದುರ್ಭಾವ, ಅಂತರಾತ್ಮಕನಾಗಿ=ಜೀವಜಡಗಳೊಳಗೆ ಇರುವನು. ಪರಮಾತ್ಮ ="ಪರಮಶ್ಚಾಸಾವಾತ್ಮಾ ಚೇತಿ ಪರಮಾತ್ಮ" "ಅಥ ಕಸ್ಮಾದುಚ್ಯತೇ ಪರಮೇತಿ।ಪರಮಾರ್ಧ್ಯೆ ಶ್ರುತೇ ನಾಮರೂಪೇ ವ್ಯಾಕ್ರಿಯೇತೇ ತಸ್ಮಾದೇನಮಾಹುಃ ಪರಮ ಇತ್ಯಾಗ್ನಿವೇಶ್ಯ ಶ್ರುತಿಃ ॥ಆನಂದಾನುಭವತ್ವಾಚ್ಚ ನಿರ್ದೋಷತ್ವಾಚ್ಚ ಭಣ್ಯತೇ॥ ನಿತ್ಯತ್ವಾಚ್ಚ ತಥಾತ್ಮೇತಿ ವೇದವಾದಿಭಿರೀಶ್ವರ ಇತಿ ಬ್ರಹ್ಮತಂತ್ರೇ॥" (ವಿದ್ಯಾಧಿರಾಜೀಯ) ನಾಶರಹಿತ=ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣತಾ ॥ ಎಂದು ನಾಲ್ಕು ವಿಧದಿಂದಲೂ ನಾಶರಹಿತನಾದವನು. ಈ ಪ್ರಕಾರ ಜಗತ್ತಿನಲ್ಲಿ ಎಡಬಿಡದೆ ವ್ಯಾಪ್ತ್ಯಾದಿರೂಪಗಳಿಂದ ಇದ್ದರೂ, ಬ್ರಹ್ಮಾಂಡದಲ್ಲಿ, ಒಳಗೂ ಹೊರಗೂ, ಜೀವಾಂತರ್ಯಾಮಿಯಾಗಿ, ಅವಕಾಶದನು ತಾನಾಗಿ=ಎಡೆ ಕೊಡುವನಾಗಿ, ಯೋಗೀಶಾಶಯಸ್ಥಿತ= "ನಿರತಿಶಯ ಚಿತ್ತ ಸಮಾಧಾನಾದ್ಯೋಗೀ ಯೋಗಿನಾಮಾಶಯೋ ಯೋಗಿ,"

ಎಂತ ಪರಮಾತ್ಮನಿಗೆ ನಾಮವಿದ್ದರೂ; ಶ್ರೀ ಹರಿಯು ಪ್ರತಿಬಿಂಬರಾವ ಚಿತ್ತ ಶುದ್ಧರಾವ ಯೋಗಿಗಳ ಮನಸ್ಸಿನಲ್ಲಿರುವವನು. ಆದರೂ, ತನ್ನೊಳೆಲ್ಲರ ನಿಟ್ಟುಸಲಹುವನು=ಪ್ರಳಯ ಕಾಲದಲ್ಲಿ ತನ್ನ ಉದರದೊಳಗೆ ಎಲ್ಲರನ್ನೂ ಇಟ್ಟು ರಕ್ಷಿಸುವನು, ಕಾಪಾಡುವನು ಇಂತು ಪರಮಾತ್ಮನಾದ ಬಿಂಬರೂಪಿ ಹರಿಯ ಕಾರುಣ್ಯ.

**ಭಾವಸೂಚನ** ‖ ಈ ಸಮಸ್ತೇತಿ ‖ ಆಶಯ ಮನಸ್ಸು ‖೪‖

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈ ಸಮಸ್ತ" ಇತಿ ‖ "ಆವೇಶ"—ಅನ್ಯಗತಃ ‖ "ಆಶಯ"— ಮನಸ್ಸು ‖೪‖

## ಕನ್ನಡಾರ್ಥ

"ಆಕಾಶವತ್ ಸರ್ವಗತಃ" ಎಂದು ಮುಂತಾಗಿ ಹೇಳಲಾದ ಪರಮಾತ್ಮನು ತನ್ನ ವ್ಯಾಪ್ತರೂಪ, ಅಂತರ್ಯಾಮಿರೂಪ, ಅಂಶಾವತಾರ, ಆವೇಶ ಮುಂತಾದವುಗಳಿಂದ ಜಗತ್ತನ್ನ ತನ್ನ ಉದರದಲ್ಲಿಟ್ಟು ಸಲಹುವನು ; ಎಂದು ಈ ಪದ್ಯದಲ್ಲಿ ಹೇಳುತ್ತಾರೆ. ತನ್ನ ಅಂಶ ಅವತಾರಗಳನ್ನು ಬಿಟ್ಟು, ಮಿಕ್ಕ ದೇವತೆಗಳಲ್ಲಿ ಆವೇಶವನ್ನು ಇಡುತ್ತಾನೆ. "ಯೋಗೀಶಾಶಯ" ಯೋಗಿಗಳ ಹೃದಯ ಮನಸ್ಸು ‖೪‖

**ಅವತರಣಿಕಾ :—**ಇನ್ನು ಶ್ರೀಹರಿಯು, ಕಾರಣ ಕಾರ್ಯ ವಸ್ತುಗಳೊಳಗೆ, ಹೇಗೆ ಇರುವನೆಂಬುದು, ಕಟ್ಟಿಗೆ ಮತ್ತು ಶಿಲೆಯಲ್ಲಿ ಅಡಗಿಪ್ಪ ಅಗ್ನಿಯ ದೃಷ್ಟಾಂತದೊಂದಿಗೆ ವರ್ಣಿಸುತ್ತಾರೆ.

**ದಾರು ಪಾಷಾಣಗತ ಪಾವಕ ।**
**ಬೇರೆ ಬೇರಿಪ್ಪಂತೆ ಕಾರಣ ।**
**ಕಾರ್ಯಗಳ ವೊಳಗಿದ್ದು ಕಾರಣಕಾರ್ಯನೆಂದೆನಿಸಿ ‖**
**ತೋರಿಕೊಳ್ಳದೆ ಯೆಲ್ಲರೊಳು ವ್ಯಾ।**
**ಪಾರ ಮಾಡುವ ಯೋಗ್ಯತೆಗಳನು ।**
**ಸಾರ ಫಲಗಳನುಣಿಸಿ ಸಂತೈಸುವ ಕೃಪಾಸಾಂದ್ರ ‖೫‖**

**ಪದ್ಯಾರ್ಥ :**—ದಾರು=ಕಟ್ಟಿಗೆ ಯಜ್ಞದಲ್ಲಿ ಅಗ್ನಿ ಮಥನ ಮಾಡಲಿಕ್ಕೆ ಕಟ್ಟಿಗೆ ಮಂಳು, ಕಡಗೋಲು, ದಾ೨. ಪಾಷಾಣಗತ=ಶಿಲೆ ಕಲ್ಲಿನಲ್ಲಿ ಅಡಕವಾಗಿದ್ದ ಅಗ್ನಿಯಂತೆ ಅಂದರೆ ದಾರು ಮಥನ ಮಾಡಿದರೆ, ಪಾಷಾಣ ಕಲ್ಲಿಗೆ ಕಲ್ಲು ಘರ್ಷಿಸಿ ಹೊಡೆದರೆ ಹೇಗೆ ಅಗ್ನಿ ಉತ್ಪನ್ನವಾಗಿ ಪ್ರಕಾಶಿಸುತ್ತಿದೆಯೋ ಅಂತೆಯೇ ಸಾಧನ ಜೀವಿಗಳಾದ ಯೋಗಿಗಳ ಹೃದಯದಲ್ಲಿ ಪ್ರಕಾಶಮಾನನಾಗಿ ಬೇರೆ ಬೇರೆ ಜಡ (ಚೇತನರಲ್ಲಿ) ಅಡಕವಾಗಿ ಹರಿಯು, ಕಾರಣ=ಹೇತುವಾದ ವಸ್ತುವಿನಲ್ಲಿ ದಾರುವಿನಲ್ಲಿದ್ದ ಅಗ್ನಿ ಮತ್ತು ಕಾರ್ಯಗಳ ಒಳಗಿದ್ದು ಕ್ರಿಯಾರೂಪವಾದುದರೊಳಗೆ ಅಗ್ನಿ ಶಿಲೆಯಲ್ಲಿ ತಾನೆ ಇದ್ದು ಕಾರಣ ಕಾರ್ಯನೆಂದೆನಿಸಿ=ಕಾರಣ=ಕರ್ಮಕ್ಕೆ ಬೇಕಾದ ಆಧಾರ, ಹೇತು, ಕಾರ್ಯ=ಕಜ್ಜ, ಕೆಲಸ, ಕ್ರಿಯೆಯೂ ಸಹ ತಾನೆ ಎಂದು ಪೆಸರುಳ್ಳವನಾಗಿ ಕರೆಸುತ್ತ ತೋರಿಕೊಳ್ಳದೆ ಎಲ್ಲರೊಳು ವ್ಯಾಪಾರ ಮಾಡುವ=ದಾರು ಶಿಲೆಗಳಲ್ಲಿ ಪಾವಕ ಅಡಗಿಪ್ಪಂತೆ=ಅಜ್ಞ ಜನರಿಗೆ ತೋರದೆ, (ಯೋಗಿ ಜನರಿಗೆ ಅವರಿಗೆ ತಕ್ಕ ಯೋಗ್ಯತೆಯಂತೆ ತೋರುತ್ತಾ) ಸಕಲ ಕ್ರಿಯೆಗಳನ್ನು ಮಾಡುವನು. ಕೃಪಾಸಾಂದ್ರ=ಸಿಬಿಡವಾದ ದಟ್ಟಡಿ ಕೃಪೆಯುಳ್ಳ ಹರಿಯು, ಎಲ್ಲರೊಳು, ಯೋಗ್ಯತೆಯಂತೆ ವ್ಯಾಪಾರ ಮಾಡಿ, ಫಲಗಳುಣಿಸುವನು= ಸಂತೈಸುವ=ಸಮಾಧಾನಗೊಳಿಸುವ, ತೃಪ್ತಿಬಡಿಸುವ, ಕಾರ್ಯಕ್ಕೆ ಹೇತುವಾದ ಕಾರಣ, ಕಾರ್ಯದಲ್ಲಿಯೂ ತಾ ನೆಲಸಿ ಪ್ರೇರಿಸುವನೆಂದಭಿಪ್ರಾಯ.

**ಭಾವಸೂಚನ ||** ದಾರು ಇತಿ ||೫||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದಾರು" ಇತಿ || ಗತಪದಂ ಪೂರ್ವತ್ರ ಅಪಿ ಯೋಜ್ಯಂ || ಸಾಂದ್ರ= ನಿಬಿಡ || ೫ ||

## ಕನ್ನಡಾರ್ಥ

"ದಧಿಸ್ಥಘೃತವಚ್ಚೈವ ಕಾಷ್ಠಸ್ಥಾನಲವತ್ ತಥಾ" ಎಂದು ಮುಂತಾಗಿ ಹೇಳಿದಂತೆ ದೃಷ್ಟಾಂತಪುರಃಸರವಾಗಿ ಕಾರ್ಯಕಾರಣಗಳಲ್ಲಿ ಶ್ರೀಹರಿಯು ತತ್ತನ್ನಾಮಕನಾಗಿ, ಅಂತರ್ಯಾಮಿಯಾಗಿ, ಅವಿದಿತವಾಗಿ ವ್ಯಾಪಾರ

ಮಾಡಿಸುತ್ತಾ ಅವರವರ ಯೋಗ್ಯತೆಯಂತೆ ಫಲಗಳನ್ನು ಜೀವರಿಗೆ ಅನುಭವ ಮಾಡಿಸುವನೆಂದು ಈ ಪದ್ಯದಿಂದ ತಿಳಿಸುತ್ತಾರೆ.

ಗತ ಎಂಬ ಪದವನ್ನು ವ್ಯಾಕರಣ ಶಾಸ್ತ್ರದ ನಿಯಮಾನುಸಾರವಾಗಿ ಪೂರ್ವಪದದ ಮುಂದೆಯೂ ಅನ್ವಯಿಸಿ "ದಾರುಗತ", "ಪಾಷಾಣಗತ" ಎಂದು ಅರ್ಥ ಮಾಡಬೇಕು. "ಕೃಪಾಸಾಂದ್ರ"=ಕೃಪಾಪೂರ್ಣ ಘನ||೫||

**ಅವತರಣಿಕಾ :**—ಹೇಗೆ ಸಮುದ್ರ ತೆರೆಗಳು ಮೇಲಿಂದ ಮೇಲೆ ಬರುತ್ತವೆಯೋ ಅದರಂತೆ ಕರ್ಮಾಕರ್ಮಜನ್ಯ ಫಲಂಗಳು ಉಂಡುಣಿಸುವ ನೆಂದು ಶ್ರೀಹರಿಯ ನಿರ್ಲೇಪಾದಿ ಅನಂತ, ಗುಣೋತ್ಕರ್ಷಣಪೂರ್ವಕ ಸ್ತೋತ್ರಗೈಯ್ಯುತ್ತಾರೆ.

**ಊರ್ಮಿಗಳ ವೋಲಿಪ್ಪ ಕರ್ಮ ವಿ।**
**ಕರ್ಮಜನ್ಯ ಫಲಾಫಲಂಗಳ।**
**ನಿರ್ಮಲಾತ್ಮನು ಮಾಡಿ ಮಾಡಿಸಿ ಉಂಡುಣಿಸುತಿಪ್ಪ||**
**ನಿರ್ಮಮ ನಿರಾಮಯ ನಿರಾಶ್ರಯ।**
**ಧರ್ಮವಿತು ಧರ್ಮಾತ್ಮ ಧರ್ಮಗ।**
**ದುರ್ಮತೀ ಜನರೊಲ್ಲನಪ್ರತಿಮಲ್ಲ ಶ್ರೀನಲ್ಲ||೬||**

**ಪದ್ಯಾರ್ಥ :**—ಊರ್ಮಿಗಳ ವೋಲಿಪ್ಪ=ಸಮುದ್ರ ತೆರೆಗಳಂತೆ ವ್ಯವಧಾನವಿಲ್ಲದೆ ಒಂದರ ಮೇಲೊಂದು ಬರುವ ಅಲೆಗಳು ಹೇಗೆ ಬರುವವೋ, ಅದನಂತೆ, ಕರ್ಮವಿಕರ್ಮಜನ್ಯ ಫಲಾಫಲಂಗಳ=ಸುಕರ್ಮದ ಸುಷ್ಠು ಪುಣ್ಯ ರೂಪವಾದ ಫಲಗಳು, ವಿಕರ್ಮ=ವಿರೋಧ ಕರ್ಮ-ಮಾಡಬಾರದ ಪಾಪ ಕರ್ಮ, ಪಾಪ ಕೆಲಸವ ಅಫಲ=ಪಾಪವೇ ಇವೆರಡು, ನಿರ್ಮಲಾತ್ಮನು ಮಾಡಿ ಮಾಡಿಸಿ=ಮಲ ರಹಿತ ದೋಷದೂರನಾದ, ಚಿನ್ಮಯಶರೀರನು, ತಾನು ಉಭಯ ಕರ್ಮಗಳನ್ನು ಜೀವನಲ್ಲಿದ್ದು ಮಾಡಿದರೂ, ಪುಣ್ಯಪಾಪಗಳ ಲೇಪ ಶ್ರೀಹರಿಗೆ ಇಲ್ಲ. ಕರ್ಮ ನಿರ್ಲೇಪನು, ಮಾಡಿಸಿ=ಜೀವರಿಂದ ದ್ವಿವಿಧ ಕರ್ಮವನ್ನು ಮಾಡಿಸುತ್ತಾ, ತಾನು ಕರ್ಮ ಮಾಡಿದರೂ ಲೇಪವಿಲ್ಲದವನಾದರೂ, ಉಂಡು=ತನ್ನ ಶುಭಸಾರವಾದ ಸ್ವಾಖ್ಯರಸವನ್ನು

ತಾನು ಸ್ವೀಕರಿಸಿ, ಉಣಿಸುತಿಪ್ಪ=ಜೀವರಿಗೆ ಉಣಿಸುವನು, ಜೀವರಿಗಾದರೂ ಹರಿಕರ್ತೃತ್ವಾನುಸಂಧಾನದಿಂದ ಕರ್ಮ ಮಾಡಿದರೂ ಕರ್ಮಲೇಪವಿಲ್ಲ, ಸ್ಥೂಲಾದಿ ರಸ ಸ್ಥೂಲಾದಿ ಶರೀರಗಳಿಗೆ ಹೊರ್ತಾಗಿ, "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಎಂಬುವಂತೆ ಶ್ರೀಹರಿಯು ಜೀವಾಂತರ್ಯಾಮಿ ಯಾಗಿ ಜೀವನಿಂದ ಕರ್ಮ ಮಾಡಿಸಿದರೂ, ದೇವರಿಗಂತೂ ಮೊದಲೇ ಕರ್ಮ ಲೇಪವಿಲ್ಲ. ಕೇವಲ ಸಾಕ್ಷಿಯಾಗಿರುವನು. ಅದರಂತೆ ಜೀವನ ಸ್ವರೂಪಕ್ಕೂ ಲೇಪವಿಲ್ಲ. ಹಿಂದಿನ ಸಂಧಿಗಳಲ್ಲಿ ವಿವರಿಸಿವೆ. ಇಂತು ಶ್ರೀಹರಿಯು, ಕರ್ಮ ನಿರ್ಲೇಪನಾಗಿ, ನಿರ್ಮಮ=ಪರಕೀಯ ವಸ್ತುಗಳಲ್ಲಿ ತನ್ನದೆಂಬ ಅಹಂಕಾರ ವಿಲ್ಲದಿರುವುದು, ಅಹಂಕಾರ ಮಮತಾ ರಹಿತನಾದವ, ನಿರಾಶ್ರಯ= ಶ್ರೀಹರಿಗೆ ಇನ್ನೊಬ್ಬರು ಆಶ್ರಯ, ಆಸರೆ ಎಡೆ ಇಲ್ಲ, ತನಗೆ ತಾನಾಶ್ರಯನು, ನಿರಾಮಯ=ಆಮಯ, ರೋಗವಿಲ್ಲದವನು, ಸಂತತ ಸುಖಿ, ಧರ್ಮವಿತ್= ವೇದೋಕ್ತ ಧರ್ಮ ತಿಳಿದವ, ಅಥವಾ ಅಭೀಷ್ಟ ಸಮೂಹವನ್ನು ತಂದು ಕೊಡುವನಾದುದರಿಂದ ಧರ್ಮವಿತ್, ಧರ್ಮಾತ್ಮ=ಧರ್ಮ ಪುಣ್ಯ ಸ್ವರೂಪ ನಾದವ, ಧರ್ಮಗ=ವೇದವಿಹಿತವಾದ ಕರ್ಮವೇ ಧರ್ಮ, ಇಂಥ ಧರ್ಮ ಗಳಲ್ಲಿ ಇರುವವ, ದುರ್ಮತೀ ಜನರೊಲ್ಲ=ದುಷ್ಟಮತಿಯುಳ್ಳ ಪಾಪಾತ್ಮರಾದ ದೈತ್ಯಾದಿಗಳನ್ನು ವಲ್ಲ, ದೈತ್ಯರ ಕರ್ಮಗಳು ಮುಕ್ತಿಗೆ ಸಾಧಕವೆಂದು ಸ್ವೀಕರಿಸುವುದಿಲ್ಲ, ಅಪ್ರತಿಮಲ್ಲ=ಎಣೆ ಇಲ್ಲದ ಶೂರ, ಶ್ರೀನಲ್ಲ=ಶ್ರೀಲಕ್ಷ್ಮೀ ಪತಿ ನಾಥ.

**ಭಾವಸೂಚನ :**—ಊರ್ಮೀತಿ॥ ತೆರೆಗಳ ಹಾಂಗೆ। ವಿಕರ್ಮ=ವೇದ ವಿರುದ್ಧ ಧರ್ಮ, ನಿರ್ಮಮ=ಅಹಂಕಾರ ಶೂನ್ಯ, ನಿರಾಮಯ=ನೀರೋಗಿ॥ ಧರ್ಮೇತಿ ಧರ್ಮಜ್ಞ, ಶ್ರೀನಲ್ಲ=ಲಕ್ಷ್ಮೀಪತಿ ॥೬॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಊರ್ಮಿ" ತೆರೆ॥ ಅಲೇಪಂ ವಕ್ತಿ 'ನಿರ್ಮಲ' ಇತಿ ॥'ಉಂಡು' ವಿವೃತ ಮೇತತ್ ॥ ಅಸ್ವೀಯೇ ಸ್ವೀಯತ್ವ(ಬುದ್ಧಿ)ರಾಹಿತ್ಯಂ ನಿರ್ಮಮತ್ವಮ್ ॥ 'ನಿರಾಶ್ರಯ' ಇತಿ ವೈದಿಕಸಿಲಯನ ಪದಾರ್ಥಃ॥ **'ಧರ್ಮವಿತ್'** * ಓಂ ॥ ಸ್ತೋತೃಭ್ಯ ಇಂದ್ರ ಮೃಳಯ ಭದ್ರ ಭದ್ರಂ ನ ಆಭರೇಷಮೂರ್ಜಂ(ಜೇ)

ಶತಕ್ರತೋ ಯದಿಂದ್ರ ಮೃಳಯಾಸಿ ನಃ ಸ ನೋ ವಿಶ್ವಾನ್ಯಾಭರಃ ॥೬॥ * ಧ್ರಿಯತೇ ಇತಿ ಧರ್ಮಃ ಅಭೀಷ್ಟ ಸಮೂಹಃ ॥ ತಂ ಪ್ರಾಪಯತಿ ಇತಿ ಧರ್ಮವಿತ್॥ **'ಧರ್ಮಾತ್ಮಾ'*** ಓಂ ॥ ವಿರೋಚನಾ ದಧದ್ರತ್ನಾ(ಜಿ)ಸಿ ದಾಶುಷೇ ಸ್ತೋತೃಭ್ಯ ಇಂದ್ರಮರ್ಚತ ಆತೇ ದಧಾಮೀಂದ್ರಿಯಮುಕ್ಥಾ ವಿಶ್ವಾ ಶತಕ್ರತೋ ॥ಓಂ॥*॥ ರತ್ನಾನಿ ಯಜಮಾನೇ ಆ ದಧಾತಿ ಇತಿ ಧರ್ಮಃ॥ 'ಅಪ್ರತಿಮಲ್ಲ' ಅಪ್ರತಿದ್ವಂದ್ವ॥ 'ನಲ್ಲ' ನಾಥಃ ॥೬॥

## ಕನ್ನಡಾರ್ಥ

ಹಿಂದಿನ ಪದ್ಯದಲ್ಲಿರುವ "ತೋರಿಕೊಳ್ಳದೆ ಎಲ್ಲರೊಳು ವ್ಯಾಪಾರ ಮಾಡುವ ಯೋಗ್ಯತೆಗಳನುಸಾರ ಫಲಗಳನುಣಿಸಿ ಸಂತೈಸುವ ಕೃಪಾಸಾಂದ್ರ ಎಂಬುದನ್ನೇ ಇನ್ನೂ ವಿವರಿಸುತ್ತಾರೆ ಈ ಪದ್ಯದಿಂದ.

'ಊರ್ಮಿ' ತೆರೆ. ಕರ್ಮವಿಕರ್ಮಗಳನ್ನು ಮಾಡಿ ಮಾಡಿಸಿದರೂ 'ಲೇಪವಿಲ್ಲ'ನೆಂದು ಹೇಳುತ್ತಾರೆ 'ನಿರ್ಮಲ'ವೆಂಬ ಪದದಿಂದ. ಉಂಡು ಪರಮಾತ್ಮನ ಸ್ಥೂಲ ಸೂಕ್ಷ್ಮ ಭೋಜನಕ್ರಮವನ್ನು ಬಣ್ಣಿಸುವಾಗ ಭೋಜನ ಸಂಧಿಯಲ್ಲಿ ನಿರೂಪಿಸಿರುತ್ತಾರೆ. ಪರಕೀಯ ವಸ್ತುಗಳಲ್ಲಿ ತನ್ನದೆಂಬ ಅಭಿಮಾನವಿಲ್ಲದಿರುವುದು ನಿರ್ಮಮತ್ವವೆನಿಸುತ್ತದೆ. **'ನಿರಾಶ್ರಯ'** ಇದು ವೇದಗಳಲ್ಲಿ ಉಕ್ತವಾದ 'ಅನಿಲಯನ' ಎಂಬ ಪದದ ಅರ್ಥಾನುವಾದ.

**"ಧರ್ಮವಿತ್"**—ಅಭೀಷ್ಟಸಮೂಹವು ಧರ್ಮ; ಅದನ್ನು ಹೊಂದಿಸಿ ಕೊಡುವವನು ಧರ್ಮವಿತ್.

**"ಧರ್ಮಾತ್ಮಾ"-ಧರ್ಮ**-ರತ್ನ ಮುಂತಾದ ದ್ರವ್ಯಗಳನ್ನು ಯಜ್ಞಾದಿಗಳನ್ನು ಮಾಡುವ ಯಜಮಾನ ಮುಂತಾದವರಲ್ಲಿ ಅನುಗ್ರಹಿಸುವವನು.

'ಅಪ್ರತಿಮಲ್ಲ' ಅಪ್ರತಿದ್ವಂದ್ವ 'ನಲ್ಲ' ನಾಥ ॥೬॥

**ಅವತರಣಿಕಾ :**—ಕರ್ಮಾಕರ್ಮ ಫಲಗಳನ್ನು, ಶ್ರೀ ಹರಿಕರ್ತೃತ್ವಾನುಸಂಧಾನ ಪೂರ್ವಕ ಶ್ರೀ ಹರಿಗೆ ಸಮರ್ಪಿಸಲು, ಶ್ರೀ ಹರಿಯು ಪಾಪ ಭಸ್ಮ ಮಾಡಿ, ಪುಣ್ಯ ಫಲವರ್ಷಿಸುವನೆಂದು ವಡಬಾಗ್ನಿ ಮೇಘ ದೃಷ್ಟಾಂತದಿಂದ ಹೇಳುತ್ತಾರೆ.

**ಜಲದ ವಡಬಾನಲಗಳಂಬುಧಿ ।**
**ಜಲವನುಂಬುವು ಅಬ್ದ ಮಳೆಗರೆ ।**
**ದಿಳೆಗೆ ಶಾಂತಿಯ ನೀವುದನಳನು ತಾನೆ ಭುಂಜಿಪುದು ॥**
**ತಿಳಿವುದೀಪರಿಯಲ್ಲಿ ಲಕ್ಷ್ಮೀ ।**
**ನಿಲಯ (ಗುಣ) ಯುಗಕೃತ ಕರ್ಮಜ ಫಲಾ ।**
**ಫಲಗಳುಂಡುಣಿಸುವನು ಸರ್ವಗ ಸರ್ವಜೀವರಿಗೆ ॥೭॥**

**ಪದ್ಯಾರ್ಥ:**—ಜಲದ ವಡಬಾನಲಗಳಂಬುಧಿ ಜಲವನುಂಬುವು= ಜಲದ=ಮೇಘ ಮತ್ತು ವಡಬಾನಲ=ಸಮುದ್ರದಲ್ಲಿರತಕ್ಕ ಅಗ್ನಿ ಎರಡೂ ಅಂಬುಧಿಜಲ=ಸಮುದ್ರೋದಕವನ್ನು ಉಂಬುವವು, ಕುಡಿಯುವವು. ಆದರೆ ಆ ಅಬ್ದ=ಮೇಘ ತಾನು ಉಂಡು ಅಂದರೆ ತಾನು ಕುಡಿದ ಸಮುದ್ರೋದಕವನ್ನು ಮಳೆಗರೆದು ಇಳಿಗೆ ಶಾಂತಿಯನೀವುದು=ಮೇಘವು ಮಳೆಯನ್ನು ವರ್ಷಿಸಿ, ಭೂಮಿಗೆ ಶಾಂತಿಯನ್ನು ಕೊಟ್ಟು ಸಕಲ ಪೈರು ಧಾನ್ಯ ಸಮೃದ್ಧಿಯನ್ನು ಕೊಟ್ಟು ಸುಖವನ್ನು ಕೊಡುವದು, ಅನಳನು ತಾನೆ ಭುಂಜಿಪದು=ವಡಬಾಗ್ನಿಯು ತಾನೇ ಸಮುದ್ರೋದಕವನ್ನು ಕುಡಿದೇ ಬಿಡುತ್ತದೆಯೋ; ಇದರಂತೆ ತಿಳಿವುದೀಪರಿಯಲ್ಲಿ= ಈಪ್ರಕಾರ ತಿಳಿಯ ಬೇಕು, ಲಕ್ಷ್ಮೀನಿಲಯ=ಶ್ರೀ ಲಕ್ಷ್ಮೀದೇವಿಗೆ ಆಶ್ರಯನಾದ ಅಥವಾ ಶ್ರೀ ಲಕ್ಷ್ಮೀ ವಕ್ಷಸ್ಥಳವೇ ಮನೆ ಮಾಡಿಕೊಂಡು ಇರುವ ಶ್ರೀ ಹರಿಯು ಯುಗ ಕೃತ ಕರ್ಮಜ ಫಲಾಫಲಗಳುಂಡುಣಿಸುವನು=ಎರಡೂ ದ್ವಿವಿಧವಾದ ಕರ್ಮಗಳ ಫಲ ಅಂದರೆ ಪುಣ್ಯ ಕರ್ಮಗಳನ್ನು, ಮೇಘದಂತೆ ವರ್ಷಿಸಿ ಶಾಂತಿ ಕೊಡುವನು. ಅಫಲ=ವಿಕರ್ಮದಿಂದಾದ ಪಾಪ ಫಲಗಳನ್ನು ವಡಬಾನಲ= ಸಮುದ್ರಾಗ್ನಿಯಂತೆ ಭಸ್ಮ ಮಾಡುವನು. ತಾನು ಪಾಪ ಫಲಗಳನ್ನು ಭಸ್ಮ ಮಾಡಿ, ತನ್ನ ಶುಭಸಾರವನ್ನು ಸ್ವೀಕರಿಸಿ, ಜೀವರಿಗೆ ತಕ್ಕ ಯೋಗ್ಯತಾನು ಸಾರ ಪುಣ್ಯಫಲದಾತೃನಾಗಿ ಆನಂದವೀವನು.

**ಭಾವಸೂಚನ ॥** ಅಬ್ದೇತಿ ಮೇಘ ॥೭॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜಲದ" ಇತಿ ॥ "ಉಂಡು" ಇತಿ ಪೂರ್ವಪದಂ ॥ ದುಷ್ಫಲಂ ಪರಂ ಆಶಂಕ್ಯ ನ ಇತ್ಯತ್ರ ಅಯಂ ದೃಷ್ಟಾಂತಃ ॥ (ದೃಷ್ಟಾಂತಯುಗಂ ಚ) "ಜಲದ"–ಮೇಘಃ ॥ "ಮಳೆ"–ಮೇಘಂ ಕೃತ್ವಾ ಪ್ರವರ್ಷತಿ ಇತ್ಯುಕ್ತೇಃ ॥ "ವಾಡವಃ"—ಸಮುದ್ರೋದಪಾಯೀ ಪ್ರಸಿದ್ಧಃ ॥ "ತಿಳಿವುದು" ಉಕ್ತಭಂಗ್ಯಾ ॥ ೭ ॥

## ಕನ್ನಡಾರ್ಥ

ಕರ್ಮವಿಕರ್ಮಜನ್ಯ ಫಲಗಳಲ್ಲಿ ಸ್ವಶುಭಸಾರಭಾಗವನ್ನು ತಾನೇ ಸ್ವೀಕರಿಸಿ ಮಿಕ್ಕ ಭಾಗವನ್ನು ಅವರವರಿಗೆ ಯೋಗ್ಯತಾನುಗುಣವಾಗಿ ಶ್ರೀಹರಿಯು ಹಂಚುವನು ; ಈ ವಿಷಯದಲ್ಲಿ ವಡವಾನಲ-ಮೇಘ ದೃಷ್ಟಾಂತ ಗಳನ್ನು ತಿಳಿಸುತ್ತಾರೆ. ಈ ಪದ್ಯದಿಂದ.

"ಉಂಡು"—ಎಂಬುದು ಪೂರ್ವದಲ್ಲಿ ಹೇಳಲ್ಪಟ್ಟಿದೆ. ಪರಮಾತ್ಮನಲ್ಲಿ ಪಾಪಫಲವಿದೆಯೆಂದು ಸಂಶಯವು ಬಂದರೆ ಅದನ್ನು ಪರಿಹರಿಸಿ ಆ ದುಷ್ಫಲವು ಅವನಿಗಿಲ್ಲವೆಂದು ತಿಳಿಸಲು ಈ ದೃಷ್ಟಾಂತ (ಮೇಘದ) ಸಮುದ್ರದ ನೀರೇ ಸೂರ್ಯನ ಮುಖಾಂತರ ಮೇಘವಾಗಿ ಮಳೆಯಾಗುವುದೆಂಬುದು ಪ್ರಸಿದ್ಧ ವಾದುದು. ವಡವಾಗ್ನಿಯು ಸಮುದ್ರದ ಜಲವನ್ನೇ ಕುಡಿಯುವದೆಂಬ ವಿಷಯವು ಸುಪ್ರಸಿದ್ಧವಾದುದು. ಹಿಂದೆ ಹೇಳಿದ ಪ್ರಕಾರಗಳಿಂದ ಉಂಡು ಣಿಸುವ ಕ್ರಮವನ್ನು ತಿಳಿಯಬೇಕು ॥ ೭ ॥

ಅವತರಣಿಕಾ :—ಬಿಂಬಕ್ರಿಯಾನು ಸಂಧಾನರಹಿತನಾದವ ಏನೇನು ಕರ್ಮ ಮಾಡಿದರೂ ಸಕಲವೂ ವ್ಯರ್ಥವೆಂದು ಉಪದೇಶಿಸುತ್ತಾರೆ.

ಪುಸ್ತಕಗಳವಲೋಕಿಸುತ ಮಂ ।
ತ್ರಸ್ತುತಿಗಳನಲೇನು ರವಿಯುದ ।
ಯಸ್ತಮಯ ಪರಿಯಂತ ಜಪಗಳ ಮಾಡಿ ಫಲವೇನು ? ॥
ಹೃಸ್ಥ ಪರಮಾತ್ಮನೆ ಸಮಸ್ತಾ ।
ವಸ್ಥೆಗಳೊಳಿದ್ದೆಲ್ಲರೊಳಗೆ ನಿ ।
ರಸ್ತ ಕಾಮನು ಮಾಡಿ ಮಾಡಿಪನೆಂದು ತಿಳಿಯದನ ॥೮॥

**ಪದ್ಯಾರ್ಥ :**—ಪುಸ್ತಕಗಳವಲೋಕಿಸುತ, ಅನೇಕ ತರದ ವಿಚಾರ ಪುಸ್ತಕಗಳನ್ನು ನೋಡುತ್ತ, ಮಂತ್ರಸ್ತುತಿಗಳನಲೇನು ?=ಅನೇಕ ಮಂತ್ರ ಗಳನ್ನು, ಸ್ತೋತ್ರಸ್ತುತಿಗಳನ್ನು ಅರ್ಥವರಿಯವೇ ಅಂದರೇನಾಗುವ ಫಲವೂ ಇಲ್ಲ. ರವಿಯುದಯಸ್ತಮಯ ಪರಿಯಂತ ಜಪಗಳ ಮಾಡಿ ಫಲವೇನು ? =ಸೂರ್ಯೋದಯ ಆರಂಭಿಸಿ, ಸೂರ್ಯ ಮುಳುಗುವ ಪರಿಯಂತರ ಆಸನದಲ್ಲಿ ಕುಳಿತು, ಬೇಕಾದಷ್ಟು ಮಂತ್ರಗಳು ಜಪಮಣಿ ಸರಗಳನ್ನು ತಿರು ಗಿಸುತ್ತ ನಾನೇ ಮಂತ್ರ ಜಪಿಸುವೆನೆಂಬ ಅಹಂಕಾರದಿಂದ ಮಾಡಿದರೆ ಏನೂ ಲಾಭವಿಲ್ಲ. ಏಕಂದರೆ ಕರ್ತಾ ಕಾರಯಿತಾ ಬೇರೆ ಇದ್ದಾನೆ. ಹೃತ್ಸ್ಥ=ಎನ್ನ ಹೃದಯದಲ್ಲಿ ಚಿನ್ಮಯರೂಪಿ ಬಿಂಬನಾದ ಪರಮಾತ್ಮ=ಪರಮಶ್ಚಾಸಾವಾತ್ಮಾ ಚೇತಿ ಪರಮಾತ್ಮಾ॥ಅಥ ಕಸ್ಮಾದುಚ್ಯತೇ ಪರಮಾತ್ಮೇತಿ "ಪರಮಾದ್ಧ್ಯೇಯತೇ ನಾಮರೂಪೇ ವ್ಯಾಕ್ರೀಯೇತೇ ತಸ್ಮಾದೇನಮಾಹುಃ ಪರಮ ಇತ್ಯಾಗ್ನಿ ವೇಶ್ಯಶ್ರುತಿಃ" । ಆನಂದಾನುಭವತ್ವಾಚ್ಚ ನಿರ್ದೋಷತ್ವಾಚ್ಚ ಭಣ್ಯತೇ ॥ ನಿತ್ಯತ್ವಾಚ್ಚ ತಥಾತ್ಮೇತಿ ವೇದವಾದಿಭಿರೀಶ್ವರಃ ಇತಿ ಬ್ರಹ್ಮತಂತ್ರೇ ॥ (ವಿ.ಸ. ನಾ.ವಿ.ರಾ) ಇಂತಹ ನಿರ್ದುಷ್ಟಜ್ಞಾನಾನಂದನೂ, ನಿತ್ಯನೂ, ಮಮ ಸ್ವಾಮಿ ಯಾದವನೇ ಪರಮಾತ್ಮ ಮದ್ಬಿಂಬನೇ, ಸಮಸ್ತಾವಸ್ಥೆಗಳೊಳು ಇದ್ದೆಲ್ಲ ರೊಳಗೆ=ಎಲ್ಲರಲ್ಲಿ ಮದ್ಬಿಂಬನೇ ಸರ್ವಬಿಂಬ, ಸರ್ವಸ್ವಾಮಿ ಮಮಸ್ವಾಮಿ ಇದ್ದು ಜಾಗ್ರತ ಸ್ವಪ್ನ ಸುಷುಪ್ತಿ ಮೂರ್ಛಾ ಮರಣಾವಸ್ಥೆಗಳಲ್ಲಿ ತಾನೇ ಇದ್ದು, ನಿರಸ್ತಕಾಮ=ಹೋಗಲ್ಪಟ್ಟ ಆಶೆಯುಳ್ಳವ, ನಿರಪೇಕ್ಷನೇ ಎಲ್ಲ ಅವಸ್ಥಾ ವ್ಯಾಪಾರಗಳನ್ನು ತಾನು ಮಾಡಿ, ಜೀವರಿಂದ ಮಾಡಿಸುವನೆಂದು ತಿಳಿಯದವನು, ಎಷ್ಟು ಜಪಾದಿಗಳು ಮಾಡಿದರೂ ಫಲವಿಲ್ಲ

**ಭಾವಸೂಚನ ॥** ಪುಸ್ತಕೇತಿ ॥ ಪಾಡಿತಿ ॥ ಹೇಳತಕ್ಕ ನಿರ್ಗುಣೋ ಪಾಸನಾನಧಿಕಾರಿ (ಅನಧಿಕಾರಿ) ॥ ೮ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಏವಂ ರಸಾಜ್ಞಾನೇ ಸರ್ವಂ ಅಭಕ್ತ್ಯಾ ಅನರ್ಥಪ್ರದಮೇವ ಇತ್ಯಾಹ "ಪುಸ್ತಕ" ಇತಿ ॥೮॥

## ಕನ್ನಡಾರ್ಥ

ಹೀಗೆ ಸ್ವಾರಚರಿತನಾದ ಶ್ರೀ ಹರಿಯ ಸರ್ವ ವ್ಯಾಪಾರ ಮಹಿಮೆಯನ್ನು ತಿಳಿಯದೆ ಮಾಡುವದೆಲ್ಲವೂ ಅಭಕ್ತಿಯೆನಿಸುವುದು; ಆದುದರಿಂದ ಅದು ಅನರ್ಥಕಾರಣವೆಂದು ಹೇಳುತ್ತಾರೆ—"ಪುಸ್ತಕ"ವೆಂಬ ಪದ್ಯದಿಂದ ||೮||

**ಅವತರಣಿಕಾ :**—ಹಿಂದೆ ೮ನೇ ಪದ್ಯದಲ್ಲಿ ಹೇಳಿದ್ದನ್ನೇ ದಾರ್ಢ್ಯಾರ್ಥ ವಾಗಿ ದೃಷ್ಟಾಂತಪೂರ್ವಕವಾಗಿ ಹೇಳುತ್ತಾರೆ. ಹರಿಯನ್ನು ಮನಮುಟ್ಟಿ ಭಜಿಸದವನ ದೇಹ ಕೇವಲ ಅಪವಿತ್ರನೆಂಬ ದೃಷ್ಟಾಂತದಿಂದ ಉಪದೇಶಿ ಸುತ್ತಾರೆ.

**ಮದ್ಯಭಾಂಡವ ದೇವನದಿಯೊಳ।**
**ಗದ್ದಿ ತೊಳೆಯಲು ನಿತ್ಯದಲಿ ಪರಿ।**
**ಶುದ್ಧವಾಹುದೆ ಎಂದಿಗಾದರು ಹರಿಪದಾಬ್ಜಗಳ॥**
**ಬುದ್ಧಿಪೂರ್ವಕ ಭಜಿಸದವಗೆ ವಿ।**
**ರುದ್ಧವೆನಿಸುವವೆಲ್ಲ ಕರ್ಮ ಸ।**
**ಮೃದ್ಧಿಗಳ ದುಃಖವನೆ ಕೊಡುತಿಹವಧಮ ಜೀವರಿಗೆ॥೯॥**

**ಪದ್ಯಾರ್ಥ :**—ಮದ್ಯಭಾಂಡವ=ಮದ್ಯ=ಅಪೇಯವಾದುದು, ಶಿಂದಿ, ಶೆರೆ ತುಂಬಿದ ಕೊಡ ಅಥವಾ ಗಡಿಗೆಯನ್ನು, ದೇವನದಿಯೊಳಗದ್ದಿ ತೊಳೆಯಲು=ಅತಿ ಪವಿತ್ರವಾದ ಶ್ರೀ ವಾಮನರೂಪಿ ಹರಿಯ ವಾಮ ಪಾದಾಂಗುಷ್ಟ ನಖಜನಿತ, ದೇವನದಿ=ಗಂಗಾ ನದಿಯಲ್ಲಿ ಮುಳುಗಿಸಿ ಆ ಭಾಂಡ ತೊಳೆದರೂ, ನಿತ್ಯದಲಿ ಪರಿಶುದ್ಧವಾಹುದೆ?=ಆ ಭಾಂಡ ಎಂದಿ ಗಾದರೂ ಪವಿತ್ರವಾದೀತೆ? ಆಗುವುದಿಲ್ಲವೋ, ಅದರಂತೆ ಎಂದಿಗಾದರೂ ಒಂದು ಕಾಲದಲ್ಲಿ ಯಾವಾಗ್ಯಾದರೂ, ಹರಿಪದಾಬ್ಜಗಳ=ಬಿಂಬರೂಪಿ ಶ್ರೀ ಹರಿಯ ಪಾದಕಮಲಗಳನ್ನು, ಬುದ್ಧಿಪೂರ್ವಕ=ಚಂಚಲಮನೋವೃತ್ತಿ ಬಿಟ್ಟು ನಿಶ್ಚಿತ ದೃಢವಾದ ಮನಸ್ಸಿಗೆ ಬುದ್ಧಿ ಎಂತ ಕರೆಸುತ್ತದೆ. ಇಂತಹ ಸುದೃಢ ಜ್ಞಾನದಿಂದ ಭಜನೆ ಮಾಡದಿರುವವನಿಗೆ, ಎಲ್ಲ ಕರ್ಮಗಳು ವಿರುದ್ಧ ವೆನಿಸುವವು=ಬೇಕಾದಷ್ಟು ಪುಣ್ಯಕರ್ಮಗಳನ್ನು ಮಾಡಿದರೂ ಅವೆಲ್ಲ ವಿಪರೀತವಾಗಿ, ದುಃಖಗಳ ಸಮೃದ್ಧಿಗಳನೆ ಕೊಡುವವು ಅಧಮ ಜೀವರಿಗೆ=

ಅಹಂಕಾರ ಮಮಕಾರವುಳ್ಳ ಅಧಮ ನೀಚ ಜೀವರು ದೈತ್ಯಾದಿಗಳು, ಅಥವಾ ಮದ್ಯ ಸದೃಶವಾದ ಸ್ವರೂಪತಃ ಅಪವಿತ್ರ ಮನಸ್ಸು ಉಳ್ಳವರಿಗೆ, ಎಲ್ಲ ಕರ್ಮಗಳು ಪುಣ್ಯಗಳೆ ಆಗಲಿ ಯಥೇಚ್ಛವಾಗಿ ದುಃಖವನ್ನೆ ಕೊಡುತ್ತವೆಂದು ಉಪದೇಶಿಸುತ್ತಾರೆ. ಅರ್ಥಾತ್ ಅಹಂಕಾರ ಮಮಕಾರವುಳ್ಳ ಮನಸ್ಸೇ ಮದ್ಯಭಾಂಡ, ಅಧಮರಿಗೆ ಸ್ವರೂಪತಃ ಅಹಂಕಾರ ಇದ್ದೇ ಇರುತ್ತದೆ. ಸದ್ಗುರು ಉಪದೇಶದಿಂದಲೂ ಹೋಗುವುದಿಲ್ಲ.

**ಭಾವಸೂಚನ ॥** ಮದ್ಯೇತಿ॥ ಸುರಾಕುಂಭಮಿವಾಪಗಾ ಇತ್ಯುಕ್ತೇಃ ||೯||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ನನು ಕಥಂ ಏತತ್ ? ಮಂತ್ರಾದೀನಾಂ ಉದ್ಧಾರಕಾಣಾಂ ಸತ್ವಾತ್ ಇತಿ || ಸುರಾಕುಂಭಂ ಆಪಗಾವತ್ ನ ಇತ್ಯಾಹ 'ಮದ್ಯ' ಇತಿ || 'ವೃದ್ಧಿ' ವೃಂದ ||೯||

## ಕನ್ನಡಾರ್ಥ

ಹರಿಭಕ್ತಿವರ್ಜಿತವಾದುದೆಲ್ಲವೂ ಅನರ್ಥಕಾರಣವೆಂಬುದು ಹೇಗೆ ಯುಕ್ತ? ಯಾಕಂದರೆ ಪಾಪಗಳಿಂದ ಮನುಷ್ಯನನ್ನು ಉಳಿಸಲು ಪ್ರಾಯಶ್ಚಿತ್ತ ಮಂತ್ರ ಮುಂತಾದ ಉದ್ಧಾರ ಕಾರಣಗಳಿರುವವಲ್ಲ? ಎಂದು ಸಂಶಯ ಬಂದರೆ "ಭಾಗೀರಥಿಯು ಸುರಾಭಾಂಡವನ್ನು ಹೇಗೆ ಪವಿತ್ರಸುವುದಿಲ್ಲವೋ ಅದರಂತೆ" ಎಂಬುದಾಗಿ ಉತ್ತರವನ್ನು ಹೇಳುತ್ತಾರೆ 'ಮದ್ಯ' ಎಂಬ ಪದ್ಯದಿಂದ. 'ಕರ್ಮವೃದ್ಧಿ' ಕರ್ಮಸಮೂಹ ||೯||

**ಅವತರಣಿಕಾ :**—ಸಕಲವೂ ಬಿಂಬರೂಪಿ ಶ್ರೀಹರಿಯೇ ಮಾಡಿ ಮಾಡಿಸುವನೆಂಬ ಸುಜ್ಞಾನದಿಂದ ಭಕ್ತಿಮಂತನಾಗಿ ವಿಹಿತಕರ್ಮಗಳನ್ನು ಮಾಡುವದು ಶ್ರೀಹರಿಯಾಜ್ಞೆಯೆಂದು, ತಿಳಿದು ಹರಿ ಮಾಡಿಸಿದಂತೆ ಮಾಡುವದು ಮುಕ್ತಿಯೋಗ್ಯನ ವಿಹಿತ ಧರ್ಮವೆಂದು ಉಪದೇಶಿಸುತ್ತಾರೆ,

**ಭಕ್ತಿಪೂರ್ವಕವಾಗಿ ಮುಕ್ತಾ।**
**ಮುಕ್ತನಿಯಾಮಕನ ಸರ್ವೋ।**
**ದ್ರಿಕ್ತ ಮಹಿಮೆಗಳನವರತ ಕೊಂಡಾಡು ಮರೆಯದಲೆ॥**

**ಸಕ್ತನಾಗದೆ ಲೋಕವಾರ್ತೆ ಪ್ರ।**
**ಸಕ್ತಿಗಳನೀಡಾಡಿ ಶ್ರುತಿಸ್ಮೃ।**
**ತ್ಯುಕ್ತ ಕರ್ಮವ ಮಾಡುತಿರು ಹರಿಯಾಜ್ಞೆಯೆಂದರಿದು॥೧೦॥**

**ಪದ್ಯಾರ್ಥ** :—ಭಕ್ತಿ ಪೂರ್ವಕವಾಗಿ=ನವವಿಧ ಸ್ನೇಹಸಹಿತವಾದ ನವ ವಿಧದಿಂದ ಕೂಡಿದ, ಪರಮ ಸ್ನೇಹವೆಂಬ ಶ್ರೀ ಹರಿಯಲ್ಲಿ ನಿಶ್ಚಯವಾದ ಭಕ್ತಿಯಿಂದ ಮುಕ್ತಾಮುಕ್ತ ನಿಯಾಮಕನ=ಅನಂತಕಾಲದಿಂದ ಹಿಂದೆ ಲಿಂಗಭಂಗವಾಗಿ ಮುಕ್ತಿಯಲ್ಲಿ ಆನಂದಪಡುವ ಎಲ್ಲ ಮುಕ್ತ ಜೀವರು, ಅಮುಕ್ತರು=ಲಿಂಗಭಂಗವಾಗದೇ ಇರುವ ಸಕಲ ಜೀವರಿಗೂ, ನಿಯಾಮಕನ =ಒಡೆಯ, ಸಂಚಾಲಕ ಪ್ರೇರಕನೆಂದು ತಿಳಿದು, ಸರ್ವೋದ್ರಿಕ್ತಮಹಿಮನ= ಸರ್ವರಿಂದಲೂ ಅಧಿಕ ಹೆಚ್ಚಿನವನಾದ ಶ್ರೀ ಹರಿಯೇ ಸರ್ವೋತ್ತಮನ ಮಹಾ ಮಹಿಮೆಗಳನ್ನು ಅಥವಾ ಸರ್ವೋದ್ರಿಕ್ತ ಮಹಿಮೆಗಳ=ಉತ್ಕೃಷ್ಟವಾದ ಹೆಚ್ಚಿನದಾದ ಶ್ರೇಷ್ಠತೆ ಹಿರಿಮೆಯನ್ನು. ಮರೆಯದೆಲೆ ಕೊಂಡಾಡು=ಒಂದು ಅರಲವವಾದರೂ ಬಿಡದೆ, ಪ್ರೈಮೇಲಿ ಸ್ಮೃತಿ ಇಟ್ಟು ಒಳ್ಳೆ ತಿಳುವಳಿಕೆಯಿಂದ ಸ್ತೋತ್ರ ಮಾಡುತ್ತಲಿರು, ಲೋಕವಾರ್ತೆ ಸಕ್ತನಾಗದೇ=ಲೋಕರ ಹಾಳ ಹರಟೆ ವಾರ್ತೆಯಲ್ಲಿ ಉತ್ಸಾಹವುಳ್ಳವನಾಗದೆ ಪ್ರೀತಿಯುಳ್ಳವನಾಗದೇ ಲೋಕ ವಾರ್ತೆ, ಪ್ರಸಕ್ತಿಗಳನೀಡಾಡಿ=ಲೋಕದ ಇತರ ಸುದ್ದಿ ಸಂದರ್ಭ ಲೋಕ ವಿಷಯಗಳು, ಈಡಾಡಿ=ಮನದಿಂದ ದೂರೋಡಿಸಿ, ದೂರ ಒಗೆದು, ಶ್ರುತಿ ಸ್ಮೃತ್ಯುಕ್ತ ಕರ್ಮವ ಮಾಡುತಿರು, ಹರಿಯಾಜ್ಞೆಯೆಂದರಿದು=ವೇದ ಪುರಾಣಾದಿಗಳಲ್ಲಿ ಹೇಳಿದ ವಿಹಿತ ಯೋಗ್ಯವಾದ ಕರ್ಮ ಕೆಲಸ ಪುಣ್ಯಕಾರ್ಯ ವನ್ನು ನಿರಂತರ ಮಾಡುತ್ತಲೇ ಇರಬೇಕು, ಹೇಗಂದರೆ ನಾನು ಶ್ರೀ ಹರಿ ಮಾಡಿಸಿದಂತೆ ವಿಹಿತ ಕರ್ಮಾಚರಣೆ ಮಾಡುವ ಸುಜ್ಞಾನವಿರಬೇಕು ಎಂದು ತಾತ್ಪರ್ಯ ॥೧೦॥

**ಭಾವಸೂಚನ** ॥ ಹರೀತಿ ॥ ಶ್ರುತಿಸ್ಮೃತೀ ಹರೇರಾಜ್ಞೇ ತಸ್ಯಾಹ ಮನುಗಸ್ಸದಾ ॥ ತಸ್ಮಾದಾಜ್ಞಾಧರೋ ಭೂತ್ವಾ ಯಾವಜ್ಜೀವಂ ವಸಾ ಮ್ಯಹಮಿತಿ ಶಾಂಡಿಲ್ಯಸ್ಮೃತಿಃ ॥೧೦॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಭಕ್ತಿ" ಇತಿ ||೧೦||

### ಕನ್ನಡಾರ್ಥ

ಹರಿಭಕ್ತಿಯುತನಾಗಿ ವಿಹಿತ ಕರ್ಮಗಳನ್ನು ಭಗವದಾಜ್ಞೆಯೆಂದು ಆಚರಿಸುವುದೇ ಕರ್ತವ್ಯವೆಂದು ತಿಳಿಸುತ್ತಾರೆ "ಭಕ್ತಿ" ಎಂಬ ಪದ್ಯದಿಂದ||೧೦||

**ಅವತರಣಿಕಾ :—**ಹಿಂದಿನ ಪದ್ಯದಲ್ಲಿ ಶ್ರುತಿಸ್ಮೃತಿ ಹರಿಯಾಜ್ಞೆ ಎಂದರಿದು ಕರ್ಮಗಳನ್ನು ಮಾಡೆಂದು ಆಜ್ಞಾಪಿಸಿದರು. ಆ ಕರ್ಮವನ್ನಾದರೂ ಫಲರಹಿತನಾಗಿ ನಿಷ್ಕಾಮಕನಾಗಿ ಮಾಡಲು ಶ್ರೀಹರಿ ಸ್ವೀಕರಿಸುವನು. ಕರ್ಮಸಾಫಲ್ಯನಾಗುವುದು. ಮುಕ್ತಿಸುಖವೀವನು.

**ಲೋಪವಾದರು ಸರಿಯೆ ಕರ್ಮಜ।**
**ಪಾಪಪುಣ್ಯಗಳೆರಡು ನಿನ್ನನು।**
**ಲೇಪಿಸವು ನಿಷ್ಕಾಮಕನು ನೀನಾಗಿ ಮಾಡುತಿರೆ॥**
**ಸೌಪರಣಿ ವರವಹನ ನಿನ್ನ ಮ।**
**ಹಾಪರಾಧಗಳೆಣಿಸದಲೆ ಸ್ವ।**
**ರ್ಗಾಪವರ್ಗವ ಕೊಟ್ಟು ಸಲಹುವ ಸತತ ಸುಖಸಾಂದ್ರ||೧೧||**

**ಪದ್ಯಾರ್ಥ :—**ಲೋಪವಾದರು ಸರಿಯೆ=ಕರ್ಮಗಳು ಮಾಡುವಲ್ಲಿ ಕೊರತೆಯಾದರೂ ಅಥವಾ ಕರ್ಮ ಮಾಡುವದು ಮರೆತರೂ ಅಡ್ಡಿ ಇಲ್ಲ. ಆದರೆ, ಮಾಡಿದ ಕರ್ಮ ನೀನು ನಿಷ್ಕಾಮಕನಾಗಿ ಕರ್ಮ ಫಲದಲ್ಲಿ ಆಶಾ ಇಡದೇ ಫಲರಾಹಿತ್ಯದಿಂದ ಮಾಡು, ಅಂದರೆ, ಶ್ರೀಹರಿ ಪ್ರೀತ್ಯರ್ಥವಾಗಿ ಶ್ರೀಹರಿಯು ಮಾಡಿಸಿದಂತೆ ಮಾಡಿದ ಕರ್ಮಗಳು, ಲೇಪಿಸವು=ಹತ್ತುವು ತಗಲವು, ಏಕೆಂದರೆ ಸೌಪರಣಿವರವಹನ=ಗರುಡದೇವರೆ ವಾಹನನಾದ ಶ್ರೀ ಕೃಷ್ಣನು ಹರಿಯು, ನಿನ್ನ ಮಹಾಪರಾಧಗಳೆಣಿಸದಲೆ=ನಿನ್ನ ಕರ್ಮ ಲೋಪ, ಕರ್ಮ ಮಾಡುವಲ್ಲಿ ಮರಿಯುವಿಕೆಯೆಂಬ, ಅಪರಾಧಗಳನ್ನು ತಪ್ಪುಗಳನ್ನು ಗಣನೆಗೆ ತಾರದಲೆ, ಹರಿಸ್ಮೃತಿಯಿಂದ ಮಾಡಿದಷ್ಟೇ ಕರ್ಮ ಫಲ ಶುಭಸಾರ ಸ್ವೀಕರಿಸಿ, ಸ್ವಪ್ರಸಾದದಿಂದ, ಸ್ವರ್ಗ=ಪುಣ್ಯ ಅನುಭವಿಸತಕ್ಕ ಸ್ವರ್ಗಲೋಕ ಸ್ವರ್ಗ=ಸುಷ್ಠು ಅರ್ಜಿತ ಇತಿ ಸ್ವರ್ಗಃ, ಅಪವರ್ಗ=ಪಾಪೇಭ್ಯಃ ಅಪವರ್ಜಿತ

ಇತ್ಯಪವರ್ಗಃ, ಪಾಪಗಳಿಂದ ವರ್ಜಮಾಡುವುದು ಯಾವುದೋ ಅದು, ಮೋಕ್ಷವ ಕೊಟ್ಟು, ಸಲಹುವನು=ರಕ್ಷಿಸುವನು, ಕಾಪಾಡುವನು, ಸುಖ ಸಾಂದ್ರ=ಸುಖಪೂರ್ಣನಾದ ಹರಿಯು ಸಲಹುವನು.

**ಭಾವಸೂಚನ :—**ಲೋಪವಾದರೂ ಸರಿಯೇತಿ ॥ ಇರದೇ ಇಲಿಕ್ಕೆ ॥೧೧॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಲೋಪ' ಇತಿ ॥ ಪ್ರವೃತ್ತಿ ತ್ಯಕ್ತ್ವಾ ಸ್ವಧರ್ಮಮ್ ಇತ್ಯುಕ್ತೇಃ ॥ (ಸೌಪರಣಿ) ವರ ಗರುಡ ॥ ೧೧ ॥

## ಕನ್ನಡಾರ್ಥ

ಕರ್ಮಲೋಪವಾದರೂ ಚಿಂತೆಯಿಲ್ಲ, ವಿಷ್ಣುಭಕ್ತಿ, ನಿಷ್ಕಾಮ ಇವುಗಳಿಂದ ಶ್ರೀಹರಿಯು ಅಪರಾಧಗಳನ್ನು ಕ್ಷಮಿಸಿ ಮೋಕ್ಷಾದಿ ಪುರುಷಾರ್ಥಗಳನ್ನು ಭಕ್ತರಿಗೆ ಕರುಣಿಸುವನೆಂದು ಹೇಳುತ್ತಾರೆ ಈ ಪದ್ಯದಿಂದ. ಕಾಮ್ಯ ಫಲಪ್ರಾಪಕ ಪ್ರವೃತ್ತಿ ಧರ್ಮಗಳನ್ನು ಬಿಟ್ಟು, ಭಗವದರ್ಪಣ ಬುದ್ಧಿಯಿಂದ ಮಾಡಿದ ನಿಷ್ಕಾಮ ಕರ್ಮದಿಂದ ಜ್ಞಾನದ್ವಾರಾ ಮೋಕ್ಷವಾಗುವುದೆಂದು ಹೇಳಲಾಗಿದೆ. 'ಸೌಪರ್ಣಿ ವರ' ಗರುಡ ॥೧೧॥

**ಅನತರಣಿಕಾ :—**ಹರಿಯು ಕರ್ಮಗಳನ್ನು ಮಾಡಿಸಿದಾಗ್ಯೂ ತಾನು ನಿರ್ಲಿಪ್ತನು ಎಂದು ಹಿಂದಿನ ಪದ್ಯದಲ್ಲಿ ಹೇಳಿ ಈಗ ಭಗವಂತನು ಸ್ವತಂತ್ರ ಸ್ವರಮಣಾದಿ ಅನೇಕ ಗುಣಗಳನ್ನು ವರ್ಣಿಸುತ್ತಾರೆ.

**ಸ್ವರತ ಸುಖಮಯ ಸುಲಭ ವಿಶ್ವಂ।**
**ಭರ ವಿಶೋಕ ಸುರಾಸುರಾರ್ಚಿತ।**
**ಚರಣಯುಗ ಚಾರ್ವಂಗ ಶಾರ್ಙ್ಗ ಶರಣ್ಯ ಜಿತಮನ್ಯು॥**
**ಪರಮ ಸುಂದರತರ ಪರಾತ್ಪರ।**
**ಶರಣಜನ ಸುರಧೇನು ಶಾಶ್ವತ।**
**ಕರುಣಿ ಕಂಜದಳಾಕ್ಷಕಾಯನೆ ಕಂಗೊಳಿಪ ಶೀಘ್ರ॥೧೨॥**

**ಪದ್ಯಾರ್ಥ :—**ಸ್ವರತಃ=ತನ್ನಲ್ಲೇ ರತಿಯುಳ್ಳವ, ಸ್ವರಮಣ, ಸುಖಮಯ=ಆನಂದಮಯ ಶರೀರಿ, ಸುಲಭ=ಭಕ್ತ್ಯಾ ಸುಖೇನ ಲಭ್ಯತ ಇತಿ ಸುಲಭಃ। ಭಕ್ತಿಯಿಂದ ನಿರಾಯಾಸವಾಗಿ ಲಭಿಸುವನಾದುದರಿಂದ ಸುಲಭನೆಂತ ಹರಿಗೆ ನಾಮ, ವಿಶ್ವಂಭರ=ವಿಶ್ವಂ ಬಿಭರ್ತೀತಿ ವಿಶ್ವಂಭರಃ, ಜಗತ್ತನ್ನು ಧಾರಣ ಮಾಡುವನು, ವಿಶೋಕ=ವಿಗತಃ ಶೋಕೋ ಯಸ್ಯೇತಿ ವಿಶೋಕಃ ಹೋಗಲ್ಪಟ್ಟ ಕ್ಲೇಶ ದುಃಖದೂರನು, ಸುರಾಸುರಾರ್ಚಿತ=ದೇವದೈತ್ಯರಿಂದ ಪೂಜಿಗೊಳ್ಳುವ ಚರಣ ಯುಗ ಉಳ್ಳವನು, ಚಾರ್ವಂಗ=ಸುಬುದ್ಧಿಪ್ರೇರಕ, ಅಥವಾ ಸುಂದರವಾದ ಚಿನ್ಮಯ ದೇಹವುಳ್ಳವ, ಶಾರ್ಙ್ಗ=ನಾಶವಾಗದೇ ಇರುವ ವೇದಗಳ ಸ್ತೋತ್ರ ವಿಶೇಷಗಳಿಂದ ಸ್ತುತ್ಯನು, ಶರಣ್ಯ=ತನ್ನಾಶ್ರಯ ಹೊಂದಿದವರನ್ನು ರಕ್ಷಣ ಮಾಡುವವನು. ಜಿತಮನ್ಯು=ಕ್ರೋಧವನ್ನು ಗೆದ್ದವನು. ಜಿತೋ ಮನ್ಯುಃ ಕೋಪೋ ಯೇನ ಸಃ ಜಿತಮನ್ಯುಃ, ಪರಮ ಸುಂದರತರ=ಸುಂದರಳಾದ ಲಕ್ಷ್ಮೀದೇವಿಯರಿಂದಲೂ, ಹೆಚ್ಚಿನ ಸೌಂದರ್ಯವುಳ್ಳ ಸುಂದರಾಂಗ ಚಲುವ. ಪರಾತ್ಪರ=ಪರಳಾದ ಲಕ್ಷ್ಮೀದೇವಿಯರಿಗೂ ಉತ್ತಮ, ಶರಣ ಜನ ಸುರಧೇನು=ತನ್ನನ್ನೇ ಮರೆಹೊಕ್ಕ ಭಕ್ತರಾದ ಮುಕ್ತಿಯೋಗ್ಯರಿಗೆ, ಬೇಡಿದಿಷ್ಟಾರ್ಥವನು ಕರೆಯುವ ಅಮರ ಆಕಳು, ಶಾಶ್ವತ="ಶಶ್ವದೇಕಪ್ರಕಾರಂ ಯತ್ ಶಾಶ್ವತಂ ಶಿವಮುಚ್ಯತ ಇತಿ ಶ್ರುತೇಃ" ॥ ಅಲ್ಪಶಕ್ತಿರಸಾರ್ವಜ್ಞಃ ಪಾರತಂತ್ರ್ಯಮಪೂರ್ಣತಾ।ಉಪಜೀವಕತ್ವಂ ಜೀವತ್ವಂ ಈಶತ್ವಂ ತದ್ವಿಪರ್ಯಯಃ॥ಸ್ವಾಭಾವಿಕಂ ತಯೋರೇತನ್ನಾನ್ಯಥಾ ಸ್ಯಾದಿತೀವ ಹಿ॥ ವದಂತಿ ಶಾಶ್ವತಾವೇತಾ ಏತ ಏವ ಮಹಾಜನಾ ಇತಿ ವಿಷ್ಣುಪುರಾಣೇ (ವಿ.ರಾ.) ಅಥವಾ ಶಾಶ್ವತಕರುಣಿ=ನಿತ್ಯವಾಗಿ ಜೀವರಲ್ಲಿದ್ದು ಕರುಣಾ ಮಾಡುವ, ಕೃಪಾಸಮುದ್ರ, ಕಂಜದಳಾಕ್ಷ=ಕಮಲದೋಪಾದಿ ವಿಸ್ತೃತ ನೋಟ ಉಳ್ಳವ, ಕರುಣಾಕಟಾಕ್ಷನೆ, ಕಾಯೆನಲು=ಹೇ ಸ್ವಾಮಿಯೇ ರಕ್ಷಿಸೆನ್ನಲು, ಕಂಗೊಳಿಪ ಶೀಘ್ರ=ಪ್ರತ್ಯಕ್ಷನಾಗಿ ಕಣ್ಣೆದುರಿಗೆ ಬಂದು ತನ್ನ ನಿಜರೂಪ ತೋರುವನು. ಅಪರೋಕ್ಷ ಜ್ಞಾನಿಗಳಿಗಾದರೂ, ಅವರವರ ಸ್ವರೂಪಯೋಗ್ಯತೆ ಅನುಸರಿಸಿ, ಕೆಲವು ಕ್ಲುಪ್ತಕಾಲದಲ್ಲಿ ಶ್ರೀಹರಿಯ ದರ್ಶನ, ಈ ರೀತಿ ಪುನಃ ಪ್ರಾರ್ಥನಾದಿಂದ ಶ್ರೀಹರಿಯು ಪುನಃ ಗೋಚರನಾಗುವನು, ಇದೇ ಈ ಪದ್ಯದ ಮುಖ್ಯಾಂಶ ದಾಸರು ಪ್ರೇರಿಸಿದ್ದು.

**ಭಾವಸೂಚನ** ||ಸ್ಪರತೇತಿ ||೧೨||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಸ್ವರತ' ಇತಿ || ಸುಲಭ * ಓಂ || ಆಯಾಹಿ ಸುಷುಮಾ ಹಿ ತ ಇಂದ್ರ ಸೋಮಂ ಪಿಬಾ ಇಮಂ ಏದಂ ಬರ್ಹಿಃ ಸದೋ ಮಮ || ಆತ್ವಾ ಬ್ರಹ್ಮಯುಜಾ ಹರೀ ವಹತಾಂ||ಓಂ * ಸು ಸಮೀಚೀನಂ ಜ್ಞಾನಂ ಲಭತೇ ಇತಿ ತಥೋಕ್ತಃ || **'ಚಾರ್ವಂಗ'** "ಪ್ರರಾಧಸಾ ಜೋದಯಾತೇ ಮಹಿತ್ವಂ ನಾಮೋ ಹರೀಣಾಂ ಪತಿಂ ದಕ್ಷಷ್ಟಂ ಚ ತಮುಬ್ರುವಮ್ || ನೂನಂ ಶುದ್ಧಿ ಸ್ತುವತೋ ಅಶ್ವಸ್ಯಂ "|| ಚಾರ್ವೀಂ ಬುದ್ಧಿಂ ಗಮಯತಿ ಇತಿ ತತ್ಪ್ರೇರ ಕತ್ವಾತ್ ಚಾರ್ವಂಗಃ ||**"ಶಾರ್ಙ್ಗೀ"** * ಓಂ || ಮಧೂನಿ ವಿಸೃಷ್ಟ ಧೇನಾ ಭರತೇ ಸುವೃಕ್ತಿರಿಯಾ ಮಿಂದ್ರಜೋಹವತೀ ಮನೀಷಾ|| ಆ ನೋ ದಿವ ಆ ಪೃಥಿವ್ಯಾ ಋಜೀಷಿನ್ || ಓಂ || * || 'ಸೃ' ಹಿಂಸಾಯಾಂ || ಜೀರ್ಯತೇ ಹಿಂಸ್ಯತೇ ಸಮಾಪ್ಯತೇ ಅನೇನ ಇತಿ ಶಾರ್ಙ್ಗಃ ಸ್ತೋತ್ರ ವಿಶೇಷಃ|| ಸ ಅಸ್ಮಿನ್ ಪ್ರತಿಪಾದಕತ್ವೇನ ಅಸ್ತಿ ಇತಿ ತಥೋಕ್ತಃ || **"ಜಿತಮನ್ಯುಃ"** * ಓಂ || ಆಸೋನ್ನು ಕಮಜರೋ ವರ್ಧಾಶ್ಚ ವಿಶ್ವದೇತಾ ಸಹ(ವ)ನಾ ತೂತುಮಾ ಕೃಷೇ(ಷೈಃ) ಏತಾ ವಿಶ್ವಾ ಸವನಾ ತೂತು ಮಾಕೃಷೇ ||ಓಂ * || "ಮನ್ಯುಃ ದೈನ್ಯೇ ಕ್ರತೌ ಕ್ರುಧಿ" ಇತ್ಯುಕ್ತೇಃ ಮನ್ಯುಃ ದೈನ್ಯಮ್ || ಕ್ರೋಧಶ್ಚ || ಜರಾದ್ಯುಪಲಕ್ಷಕಂ ಚ || ಜಿತಃ ಅಭಿಭೂತಃ ಮನ್ಯುಃ ಜರಾದಿದೋಷಃ ಯೇನ ಸಃ ತಥೋಕ್ತಃ||"ಸುಂದರತರಂ" ಪರಮಸುಂದರಂ. "ಪರಾತ್" ಅಕ್ಷ ರಾತ್ || "ಕಾಯನೆ" ಕಾಯಿ ! ಎನಲು ||೧೨||

## ಕನ್ನಡಾರ್ಥ

**"ಸುಲಭ'**—ಸಮೀಚೀನವಾದ ಜ್ಞಾನವನ್ನು ಹೊಂದುವವನು(ಜ್ಞಾನ ಗಮ್ಯನು) ಅಥವಾ ಪೂರ್ಣಜ್ಞಾನವುಳ್ಳವನು.

**"ಚಾರ್ವಂಗ"**—ಶೋಭನವಾದ ಬುದ್ಧಿಯನ್ನು ಪ್ರೇರಿಸುವವನು. (ಶುಭಮತಿಯನ್ನು ಪ್ರೇರಿಸುವವನು).

**"ಶಾರ್ಙ್ಗ"**—ಶಾರ್ಙ್ಗವೆಂದರೆ ಸ್ತೋತ್ರ ವಿಶೇಷಗಳು (ಯಾವುಗಳಿಂದ ಸಂಸಾರವು, ದೇಹಬಂಧವು ದುಃಖ ಮುಂತಾದುವುಗಳು ಜೀರ್ಣ ನಾಶವಾಗುವುವೋ ಅಂಥ ಸ್ತೋತ್ರಗಳು) ಅವುಗಳಿಂದ ಹೊಗಳಿಸಿಕೊಳ್ಳತಕ್ಕವನು.

**"ಜಿತಮನ್ಯುಃ"**—ಮನ್ಯು ಶಬ್ದಕ್ಕೆ ದೈನ್ಯ, ಕ್ರೋಧ, ಕ್ರತು ಎಂಬ ಅರ್ಥಗಳನ್ನು ಕೋಶವು ಹೇಳುತ್ತದೆ. ದೈನ್ಯ ಶಬ್ದದಿಂದ ಜರಾ ಮುಂತಾದ ದೋಷಗಳನ್ನೂ ಸಂಗ್ರಹಿಸಬೇಕು. 'ಜಿತ' ಗೆಲ್ಲಲ್ಪಟ್ಟ 'ಮನ್ಯು' ಕ್ರೋಧ, ಜರಾ, ದೈನ್ಯ, ಮುಂತಾದ ದೋಷಗಳುಳ್ಳವನು.

**"ಸುಂದರತರ"**—ಪರಮ ಸುಂದರ. ಪರಾತ್ಪರ ಎಂಬಲ್ಲಿ ಪರಾತ್ ಅಕ್ಷರಳೆನಿಸಿದ ಶ್ರೀ ಮಹಾಲಕ್ಷ್ಮೀದೇವಿಗಿಂತ 'ಪರಃ' ಸರ್ವೋತ್ತಮನೆಂದು ಅರ್ಥ ತಿಳಿಯಬೇಕು. || ೧೨ ||

**ಅವತರಣಿಕಾ:**—ಹಿಂದೆ ಹೇಳಿದಂತೆ ಭಗವಂತನ ಸ್ತೋತ್ರ ಮಾಡುತ್ತ ಮಮಕಾರ ನಾನೇ ಮಾಡುವನೆಂಬ ಅಹಂಕಾರವನ್ನು ಬಿಟ್ಟು ಕರ್ಮ ವಿಕರ್ಮಗಳನ್ನು ಭಗವಂತನಿಗೆ ಅರ್ಪಿಸಲು, ನಿಷ್ಕಲುಷನನ್ನು ಮಾಡಿ ತನ್ನ ಸದನದಲ್ಲಿಟ್ಟು ಸಲಹುವನೆಂದು ಉಪದೇಶಿಸುವರು.



**ನಿರ್ಮಮನು ನೀನಾಗಿ ಕರ್ಮ ವಿ ।**
**ಕರ್ಮಗಳನು ನಿರಂತರದಲಿ ಸು ।**
**ಧರ್ಮನಾಮಕಗರ್ಪಿಸುತ ನಿಷ್ಕಲುಷ ನೀನಾಗು ॥**
**ಭರ್ಮಗರ್ಭನ ಜನಕ ದಯದಲಿ ।**
**ದುರ್ಮತಿಗಳನು ಕೊಡದೆ ತನ್ನಯ ।**
**ಹರ್ಮ್ಯದೊಳಗಿಟ್ಟೆಲ್ಲ ಕಾಲದಿ ಕಾವ ಕೃಪೆಯಿಂದ ॥೧೩॥**

**ಪದ್ಯಾರ್ಥ :**—ನಿರ್ಮಮ=ನಾನೇ ಮಾಡುವೆ ನಾನು ನನ್ನದೆಂಬ ಬುದ್ಧಿಬಿಟ್ಟು, ಸಕಲವೂ ಶ್ರೀಹರಿ ಮಾಡಿಸುತ್ತಾನೆಂದು ತಿಳಿದು, ಕರ್ಮ=ಪುಣ್ಯ ಕೆಲಸ, ಚಲೋ ಒಳ್ಳೇಕಾರ್ಯ, ವಿಕರ್ಮ=ಶಾಸ್ತ್ರ ವಿರುದ್ಧವಾದ ಪಾಪಕರ್ಮಗಳು, ನಿರಂತರದಲ್ಲಿ=ಪ್ರತಿ ನಿತ್ಯದಲಿ ಒಂದು ಅರಲವ ಕಾಲವಾದರೂ ಬಿಡದೇ, ಸುಧರ್ಮನಾಮಕಗರ್ಪಿಸುತ=ಸು=ಸುಷ್ಠು, ಸಮಾ

ಚೀನವಾಗಿ ಚನ್ನಾಗಿ, ಧರ್ಮಃ=ಸರ್ವ ಜಗದ್ಧರ್ತಾ ಇತಿ ಧರ್ಮಃ ॥ "ಧರ್ಮೋ ವಾ ಇದಮಗ್ರ ಆಸೀತ್ ಪೃಥಿವೀ ನ ವಾಯುರ್ನಾಕಾಶೋ ನ ನ ಬ್ರಹ್ಮರುದ್ರೇಂದ್ರಾ ನ ದೇವಾ ಋಷಯಃ ಸೋ ಧ್ಯಾಯದಿತಿ ಸಾಮವೇದೇ ಬಾಭ್ರವ್ಯಶಾಖಾಯಾಮ್" ॥ ಇಂತು ಸಮೀಚೀನವಾಗಿ ಜಗದ್ಧಾರಣ ಪೋಷಣ ಕ್ರೀಡಾ ಮಾಡುವ ಹರಿಗೆ, ಅಂದರೆ ಸುಧರ್ಮವೆಂಬ ಪದವು ಸಕಲ ಜಗತ್ತು ಧಾರಣ ಮಾಡಿ ಕ್ರೀಡಾ ಮಾಡುವನೆಂದರೆ ಸಕಲ ಕರ್ತಾ ಎಂದು ತಿಳಿದು, ಸುಧರ್ಮನಾಮವುಳ್ಳ ಹರಿಗೆ ಅರ್ಪಿಸುತ ನಿಷ್ಕಲುಷ ನೀ ನಾಗು= ಸ್ವಾಮಿ ನೀನು ಮಾಡಿಸಿದ ಎಲ್ಲ ಪಾಪ ಪುಣ್ಯಗಳು ನಿನಗೆ ಒಪ್ಪಿತೋ ಹರಿ ಯೆಂದು ಬಿಂಬನ ಪಾದಗಳಿಗೆ ಅರ್ಪಿಸಿದರೆ, ಶ್ರೀ ಹರಿ ಪಾಪವನ್ನು ಭಸ್ಮ ಮಾಡಿ ಪುಣ್ಯವನ್ನು ಸ್ವೀಕರಿಸಲು, ನೀನು ಪಾಪಲೇಪದಿಂದ ದೂರನಾಗುವಿ, ಪುಣ್ಯವನ್ನು, ಭರ್ಮಗರ್ಭನಜನಕ=ಬಂಗಾರದೊಡಲಿನ ತಂದೆ, ಬ್ರಹ್ಮ ಜನಕ, ದಯದಲಿ=ಕೃಪೆಯಿಂದ ಸ್ವೀಕರಿಸಿ, ದುರ್ಮತಿಗಳನು ಕೊಡದೇ= ಕೆಟ್ಟ ಬುದ್ಧಿಯನ್ನು ಕೊಡದೇ, ಸದಾ ತನ್ನ ಸ್ಮೃತಿ ಇತ್ತು, ತನ್ನಯ ಹರ್ಮ್ಯ=ತನ್ನ-ಸೌಧ= ಮೇಲುಪ್ಪರಿಗೆ, ಅಂದರೆ ವೈಕುಂಠ ಲೋಕದಲ್ಲಿಟ್ಟು (ಮುಕ್ತನ ಮಾಡಿ) ಎಲ್ಲ ಕಾಲದಿ ಕಾವ ಕೃಪೆಯಿಂದ=ಮುಕ್ತ್ಯನಂತರ ಸದಾ ಕರುಣೆಯಿಂದ ಕಾಪಾಡುವನು.

**ಭಾವಸೂಚನ** ॥ ನಿರ್ಮಮೇತಿ ॥ ಸುಧರ್ಮೇತಿ ॥ ಸುಧರ್ಮಾಖಂಡ ಪರಶುಃ ಇತ್ಯುಕ್ತೇಃ ॥ ಭರ್ಮಗರ್ಭನು, ಹಿರಣ್ಯಗರ್ಭಃ ಹರ್ಮ್ಯಃ ಪ್ರಾಸಾದಃ ॥ ಉಕ್ತಂ ಚ ಪಾಂಚರಾತ್ರಾಗಮೇ ಪ್ರಕಾಶಸಂಹಿತಾಯಾಮ್ ॥ "ತೃಣಾದಿ ಸರ್ವಜೀವಾನಾಂ ಸ್ವರೂಪೋದ್ಧಾರ ಆಗತೇ। ಕಾಲೇ ತತ್ತದ್ಯೋಗ್ಯ ಜೀವಸಾಧನೋಚಿತಕಾಲಕೇ ॥ ಹರಿಶ್ಚ ಶ್ರೀ ಬ್ರಹ್ಮವಾಯೂ ಸಭಾರ್ಯೌ ಚ ತದಾಜ್ಞಯಾ ॥ ಏತದನ್ಯದ್ವೀಪವರ್ಷಜಾಯಮಾನಾನ್ಯಸರ್ವಶಃ ॥ ಸ್ವಕರ್ಮವಶಗಾನ್ ಸ್ವರ್ಗಾಂತರಿಕ್ಷಧರಣೀಚರಾನ್॥ ನಾನಾಯೋನಿಗತಾನ್ ಜೀವಾನ್ ಅತಳಾದ್ಯಧರಸ್ಥಿತಾನ್॥ಉದ್ಧರ್ತುಕಾಮೋ ಭಗವಾನ್ ಭಾರತೇ ಜನಯಿಷ್ಯತಿ ॥ ತತ್ರ ಮಾನುಷಯೋನ್ಯುತ್ಥಾಂಸ್ತತ್ರಾಪಿ ಬ್ರಾಹ್ಮಣೋತ್ತ ಮಾನ್ ॥ ತತ್ರ ಸರ್ವಸ್ವರೂಪೋರುವ್ಯಕ್ತಿಕಾರಕಕರ್ಮಣಾ ॥ ಸಂಯೋಜ್ಯ

ಸರ್ವಸದ್ಯೋಗ್ಯಜ್ಞಾನಾದಿಷ್ಟಗುರೂತ್ತಮಾನ್ ॥ ಭಿನ್ನದೇಶೇ ಭಿನ್ನಕಾಲೇ ಯೋಜಯತ್ಯಖಿಲಾನ್ ಹರಿಂತಿ ॥೧೩॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**"ನಿರ್ಮಮ"** ಇತಿ ॥ **"ನಿರ್ಮಮಃ"** "ನಾಹಂ ಕರೋಮಿ" ಇತಿ ಬುದ್ಧಿಃ ॥ **"ಸುಧರ್ಮ"** ಸುಷ್ಠು ಜಗತ್ ಧರ್ತೃತ್ವಾತ್ ಕ್ರೀಡಕತ್ವಾತ್ ನಾತೃತ್ವಾತ್ ಚ ತಥೋಕ್ತಃ ॥ "ಭರ್ಮ"-ಬಂಗಾರ ॥ "ಹರ್ಮ್ಯ"-ವೈಕುಂಠ ॥೧೩॥

## ಕನ್ನಡಾರ್ಥ

**"ನಿರ್ಮಮ"** "ನಾನು ಸ್ವತಂತ್ರಕರ್ತನಲ್ಲ. ನಾರಾಯಣನೇ ಸ್ವತಂತ್ರ ಕರ್ತ, ಪ್ರೇರಕ" ಎಂಬ ನಿಶ್ಚಿತಬುದ್ಧಿಯುಳ್ಳವನು.

**"ಸುಧರ್ಮ"**—ಉತ್ತಮ ರೀತಿಯಲ್ಲಿ ಜಗತ್ತನ್ನು ಧಾರಣಪೋಷಣ ಮಾಡುವುದರಿಂದ ಕ್ರೀಡಿಸುವುದರಿಂದಲೂ, ಜಗತ್ಸಂಹಾರಕನಾದುದರಿಂದಲೂ ಸುಧರ್ಮನೆಂದು ಹೆಸರು.

**"ಭರ್ಮ"**—ಬಂಗಾರ. **"ಹರ್ಮ್ಯ"**—ಸದನ, ವೈಕುಂಠ ॥೧೩॥

**ಅವತರಣಿಕಾ ॥** ಐಹಿಕವಾದ ಕ್ಷುದ್ರ ಫಲವನ್ನು ಅಪೇಕ್ಷಿಸದೇ ನಿರಂತರ ಶಾಶ್ವತ ಸುಖವಾದ ಮೋಕ್ಷವನ್ನು ಕೊಡುವ ಹರಿಯನ್ನು ಆರಾಧಿಸಿದರೆ ಶಿಲ್ಪಿಗನ ಕೈಲಿ ಸಿಕ್ಕ ಶಿಲಿಯನ್ನು ಮೂರ್ತಿ ಮಾಡಿ, ಪೂಜೆಗೆ ಯೋಗ್ಯ ವಾಗುವಂತೆ ಮಾಡಿ ರಕ್ಷಿಸುತ್ತಾನೆಂಬ ಉಪಮೆ ಹೇಳುತ್ತಾರೆ.

**ಕಲ್ಪ ಕಲ್ಪದಿ ಶರಣಜನ ವರ ।**
**ಕಲ್ಪ ವೃಕ್ಷನು ತನ್ನ ನಿಜ ಸಂ।**
**ಕಲ್ಪದನುಸಾರದಲಿ ಕೊಡುತಿಪ್ಪನು ಫಲಾಫಲವ ।**
**ಅಲ್ಪ ಸುಖದಾಪೇಕ್ಷೆಯಿಂದಹಿ ।**
**ತಲ್ಪನಾರಾಧಿಸದಿರೆಂದಿಗು ।**
**ಶಿಲ್ಪಿಗನ ಕೈ ಶಿಕ್ಕ ಶಿಲೆಯಂದದಲಿ ಸಂತೈಪ ॥೧೪॥**

**ಪದ್ಯಾರ್ಥ :**—ಕಲ್ಪ ಕಲ್ಪದಿ=ಇದೊಂದೆ ಬ್ರಹ್ಮಕಲ್ಪವಲ್ಲ, ಹಿಂದೆ ಆಗಿ ಹೋದ ಮುಂದಾಗುವ ಎಲ್ಲ ಬ್ರಹ್ಮದೇವರ ಮಹಾ ಕಲ್ಪಗಳಲ್ಲಿ ಅಂದರೆ ನಿರಂತರದಲ್ಲಿ, ವರ=ಶ್ರೇಷ್ಠನಾದ, ಕಲ್ಪವೃಕ್ಷನು=ಸ್ವರ್ಗದಲ್ಲಿರುವ ಕಲ್ಪತರು ಬೇಕಾದ ಇಷ್ಟಾರ್ಥವನ್ನು ಕೊಡುವದಕ್ಕೆ ನಿಯಾಮಕನು, ಕಲ್ಪವೃಕ್ಷ ಜೀವಿಗೂ ಅಂತಃ ಪ್ರೇರಕನಾಗಿ ಬಯಸಿದ ಇಷ್ಟಾರ್ಥವನ್ನು ಕೊಡುವನು. ತನ್ನ ನಿಜಸಂಕಲ್ಪದನುಸಾರದಲಿ ಕೊಡುತಿಪ್ಪನು ಫಲಾಫಲವ=ಆದಿಸೃಷ್ಟಿ ಯಲ್ಲಿ ಜೀವರ ಯೋಗ್ಯತೆಯಂತೆ ತನ್ನ ಇಚ್ಛೆಯನನುಸರಿಸಿ ನಿಶ್ಚಯವಾದ ಯೋಚನೆ ಅನುಸರಿಸಿಯೇ ಜೀವರ ಯೋಗ್ಯತೆಯಂತೆ, ಫಲಾಫಲವನ್ನು ಕೊಡುವನು, ಕಾರಣ ನೀನು ಅಲ್ಪಸುಖದಾಪೇಕ್ಷೆಯಿಂದಲಿ=ಕ್ಷುದ್ರ ಸ್ವಲ್ಪ ವಾದ ಐಹಿಕ ಐಶ್ವರ್ಯಾದಿ ಸಂಪತ್ತಿಗೋಸುಗ, ಅಹಿತಲ್ಪನಾರಾಧಿಸರೆಂದಿಗು= ಒಂದೂ ಕಾಲದಲ್ಲಾದರೂ ಶೇಷನೇ ಹಾಸಿಗೆಯಾದ ಶೇಷಶಾಯಿಯಾದ ಹರಿಯನ್ನು ಪೂಜೆ ಮಾಡಬೇಡ. ಶ್ರೀ ಹರಿಯು ಮೋಕ್ಷದಾತನೆ ನಿಜವೆಂದು, ಅನನ್ಯ ಶರಣಾಗತನಾಗಿ ಆರಾಧಿಸಿದರೆ, ಶಿಲ್ಪಿಗನ ಕೈಶಿಕ್ಕ ಶಿಲೆಯಂದದಲಿ= ಶಿಲ್ಪಶಾಸ್ತ್ರವನ್ನು ಬಲ್ಲವನು ಕಲ್ಲು ಮೂರ್ತಿ ಮಾಡುವನು, ಒಂದು ಉತ್ತಮ ಮೂರ್ತಿ ಮಾಡಲಿಕ್ಕೆ ಒಳ್ಳೆ ನುಣುಪಾದ ಶಿಲೆಯನ್ನು ಸಂಪಾದಿಸಿ ಜೋಕೆ ಯಿಂದಿಟ್ಟು ಮೂರ್ತಿ ಮಾಡಿ, ಆ ಶಿಲೆಯನ್ನು ಲೋಕದಲ್ಲಿ ಹೇಗೆ ಪೂಜಾ ಮಾಡಲು ಮಾನ್ಯ ಮಾಡುವನೋ, ಅದರಂತೆ ಶ್ರೀ ಹರಿ ಶಿಲೆಸದೃಶರಾದ ಅಸ್ವತಂತ್ರರಾದ ಮುಕ್ತಿಯೋಗ್ಯ ಜೀವರು ಸಕಲ ಕರ್ಮವೂ ಹರಿಗೆ ಅರ್ಪಿ ಸಲು, ಮುಕ್ತರನ್ನಾಗಿ ಮಾಡಿ ಸಂತೈಸ=ಮೋಕ್ಷದಲ್ಲಿ ಆನಂದವನ್ನು ಕೊಡುವನು. (ಏಕದೇಶ ದೃಷ್ಟಾಂತ)

**ಭಾವಸೂಚನ** ॥ ಕಲ್ಪೇತಿ ॥ ೧೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕಲ್ಪ" ಇತಿ ॥ **"ಆರಾಧಿಸದಿರೆ"** ಆರಾಧಿಸದಿರಲು ॥ "ಶಿಲ್ಪಿಕ"— ಲಕುಟಕಃ ॥ ಪ್ರತಿಮಾರ್ಥಂ ರಕ್ಷತ್ಯಯಮ್ ॥ ೧೪ ॥

## ಕನ್ನಡಾರ್ಥ

ಕ್ಷುದ್ರಫಲಕ್ಕಾಗಿ ಹರಿಯನ್ನು ಆರಾಧಿಸದೆ ನಿಷ್ಕಾಮ ಭಕ್ತಿಯಿಂದ ಶ್ರೀ ವಿಷ್ಣು ಪ್ರೀತಿಗಾಗಿ ಕರ್ಮವನ್ನು ಮಾಡಿ ಅವನಡಿಗಳಲ್ಲಿ ಸಮರ್ಪಿಸಿದರೆ

"ಜೀವರನ್ನು ಪರಮಾತ್ಮನು ಸಂಸಾರದಿಂದ ಮುಕ್ತ ಮಾಡುವನು" ಅವರ ಸ್ವರೂಪಾವಿರ್ಭಾವವನ್ನು ಮಾಡಿ ತೋರಿಸುವನು; ಎಂಬ ಅಭಿಪ್ರಾಯ ವನ್ನು ಹೇಳುತ್ತಾರೆ. ಶಿಲ್ಪಿಯು ಶಿಲೆಯನ್ನು ಸಂರಕ್ಷಿಸಿ, ಪ್ರತಿಮೆಯನ್ನು ಮಾಡಿ ಮಾನ್ಯವಾಗುವಂತೆ ಹೇಗೆ ಮಾಡುವನೋ ಅದರಂತೆ ಶ್ರೀ ಹರಿಯು ಇಂಥ ತನ್ನ ಭಕ್ತರನ್ನು ಅನುಗ್ರಹಿಸಿ, ಅವರೂ ಮಾನ್ಯರಾಗುವಂತೆ ಮಾಡು ವನು. ಎಂಬುದು ದೃಷ್ಟಾಂತಾಶಯ ॥ ೧೪ ॥

**ಅವತರಣಿಕಾ :—** ಸರ್ವಜೀವ ಜಡಗಳಲ್ಲಿ ಆಕಾಶವು ವ್ಯಾಪಿಸಿದಂತೆ ಸರ್ವ ಚರಾಚರಾತ್ಮಕರಲ್ಲಿ ಅಂತರ ನಿವಾಸಿಯೆಂದೆನಿಸಿ, ತತ್ತದ್ಯೋಗ್ಯ ಜೀವರ ಉಪಾಸನೆಯಂತೆ ಫಲ ಕೊಡುವನು. ಶ್ರೀ ಹರಿಗೆ ದ್ವೇಷ ಸ್ನೇಹ ಉದಾಸೀನಗಳಿಲ್ಲವೆಂದು ಉಪದೇಶಿಸುತ್ತಾರೆ.

**ದೇಶ ಭೇದಾಕಾಶದಂದದಿ ।**
**ವಾಸುದೇವನು ಸರ್ವ ಭೂತ ನಿ ।**
**ವಾಸಿಯೆನಿಸಿ ಚರಾಚರಾತ್ಮಕನೆಂದು ಕರೆಸುವನು ॥**
**ದ್ವೇಷ ಸ್ನೇಹೋದಾಸಿನಗಳ ।**
**ಲ್ಲೀಶರೀರಗಳೊಳಗೆ ಅವರೋ ।**
**ಪಾಸನೆಗಳಂದದಲಿ ಫಲವೀವನು ಪರಬ್ರಹ್ಮ ॥೧೫॥**

**ಪದ್ಯಾರ್ಥ :—** ದೇಶಭೇದಾಕಾಶದಂದದಿ=ಆಕಾಶವು ಎಲ್ಲ ಕಡೆಗೆ ವ್ಯಾಪಿಸಿದ್ದರೂ ಘಟ, ಮಠ, ಗಡಿಗೆ, ಮನೆ, ವಸ್ತ್ರಾದಿಗಳಲ್ಲಿ ಹೇಗೆ ಬೇರೆ ವಿಧವಾಗಿ ಆಕಾಶವು ಆ ಘಟ ಮಠಗಳಂತೆ ವ್ಯಾಪಿಸಿರುತ್ತದೆಯೋ ಅದ ರಂತೆ, ವಾಸುದೇವನು=ಸಮಸ್ತ ಜಗತ್ತಿನಲ್ಲಿ ವ್ಯಾಪಿಸಿದ ಹರಿಯು, ಸರ್ವ ಭೂತನಿವಾಸಿಯೆನಿಸಿ=ಬಹಿರಂಗದಲ್ಲಿಪ್ಪ ಭೂತಾಕಾಶ ಅವ್ಯಾಕೃತವಲ್ಲದೇ ಸಕಲ ಜೀವರ ಹೃದಯಾಕಾಶದಲ್ಲಿಯೂ ಅಂತರ್ಯಾಮಿಯಾಗಿದ್ದು, ಚರಾ ಚರಾತ್ಮಕನೆಂದು ಕರೆಸುವನು=ಚರಜಂಗಮ ಜೀವರು, ಅಚರ ಸ್ಥಾವರ ಜೀವರು ಮತ್ತು ಜಡಗಳ ಅಸ್ತಿತ್ವಕ್ಕೆ ಕಾರಣನಾಗಿ ಬಿಂಬನೆಂದಿಸಿ, ಜೀವ ಜಡವೇ ಆತ್ಮ ದೇಹಧಾರಿಯೆಂದು ಕರೆಸುತ್ತಾನೆ. ತನ್ನಾಮ ತದ್ರೂಪತಚ್ಛಬ್ದ

ವಾಚ್ಯನಾಗಿ ಕರೆಸುತ್ತಾನೆ. ಈ ಶರೀರಗಳೊಳಗೆ ದ್ವೇಷ-ಸ್ನೇಹ-ಉದಾಸೀನತೆಯು ಇಲ್ಲ, ಸತ್ವರಲ್ಲಿ ಸ್ನೇಹ, ತಮೋಜೀವರಲ್ಲಿ ದ್ವೇಷ, ನಿತ್ಯ ಸಂಸಾರಿಗಳಲ್ಲಿ ಉದಾಸೀನತೆ; ತಾತ್ಸಾರ ತಿರಸ್ಕಾರ ಇಲ್ಲ, ಪರಬ್ರಹ್ಮ=ಅಕ್ಷರಳೆನಿಸಿದ ಲಕ್ಷ್ಮಿದೇವಿಗೆ ಪರಶ್ರೇಷ್ಠನಾದ, ಬ್ರಹ್ಮ=ಪರಿಪೂರ್ಣ ಇತಿ ಬ್ರಹ್ಮಾ॥ ಅಥ ಕಸ್ಮಾದುಚ್ಯತೇ ಪರಬ್ರಹ್ಮೇತಿ "ಬೃಹತಿ ಬೃಂಹಯತಿ ಚೇತಿ ಶ್ರುತೇಃ॥ ಅವರೋಪಾಸನೆಗಳಂದದಲಿ=ಆಯಾ ಜೀವರ ಯೋಗ್ಯತೆ ಧರ್ಮ-ಕರ್ಮ ಸಾಧನ ಉಪಾಸನ ಧ್ಯಾನದಂದದಿ, ಫಲವೀವನು=ಫಲವನ್ನು ಕೊಡುವನು ॥೧೫॥

**ಭಾವಸೂಚನ॥** ವ್ಯೋಮವಚ್ಚೇತ್ಯುಕ್ತೇಃ ॥೧೫॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೇಶ" ಇತಿ ಘಟಾದೇಃ "ಆತ್ಮಾ" ಅಂತರ್ಯಾಮಿ ಉಪಾಸನೇ ಅಂತರ್ಯಾಮಿತ್ವಬುದ್ಧೇಃ ವಾಯೋಃ ಅಕುರ್ವತಃ ಕಲೇಃ ॥೧೫॥

## ಕನ್ನಡಾರ್ಥ

ದೇಶಭೇದ ಎಂದರೆ ಘಟಾದಿದೇಶಭೇದಗಳಿಂದ ಎಂದು ಅರ್ಥ. "ಆತ್ಮಾ"—ಅಂತರ್ಯಾಮಿ ವಾಯ್ವಂತರ್ಯಾಮಿ ಹರಿಯೆಂದು ಸರ್ವತ್ರದಲ್ಲಿ ಉಪಾಸಿಸಬೇಕು ॥೧೫॥

**ಅವತರಣಿಕಾ :—**ಹಿಂದಿನ ಪದ್ಯಗಳಲ್ಲಿ ನಿರೂಪಿಸಿದಂತೆ ಉಪಾಸನೆ ಭಗವಧ್ಯಾನ, ಸರ್ವಕರ್ಮ ಸಮರ್ಪಣದಿಂದ ಪರೋಕ್ಷವಾಗಿ ಸಂಚಿತ ಆಗಾಮಿ ಕರ್ಮ ಕೆಡುವವಲ್ಲದೇ ಅಪರೋಕ್ಷಾನಂತರದಲ್ಲಿಯೂ ಮಾಡಿದ ಸತ್ಕರ್ಮವೂ ಫಲರಹಿತವಾಗಿ ಆನಂದಕ್ಕೆ ಕಾರಣವಾಗುವವು.

**ಸಂಚಿತಾಗಾಮಿಗಳ ಕರ್ಮ ವಿ।**
**ರಿಂಚಿ ಜನಕನ ಭಜಿಸೆ ಕೆಡುವವು।**
**ಮಿಂಚಿನಂದದಿ ಪೊಳೆವ ಪುರುಷೋತ್ತಮನು ಹೃದಂಬರದಿ॥**

**ವಂಚಿಸುವ ಜನರೊಲ್ಲ ಶ್ರೀ ವ ।**
**ತ್ಸಾಂಚಿತ ಸುಸದ್ವಕ್ಷ ತಾ ನಿ ।**
**ಷ್ಕಿಂಚನ ಪ್ರಿಯ ಸುರಮುನಿಗೇಯ ಶುಭಕಾಯ ॥೧೬॥**

**ಪದ್ಯಾರ್ಥ :—**ಸಂಚಿತಾಗಾಮಿಗಳ ಕರ್ಮ=ಅಪರೋಕ್ಷ ಜ್ಞಾನ ಆಗುವುದಕ್ಕಿಂತಲೂ ಮುಂಚೆ ಮಾಡಿದ ಕರ್ಮ ಸಂಚಯ=ಕೂಡಿಟ್ಟ ಕರ್ಮ ಸಮೂಹಕ್ಕೆ ನಾಶ, ಆಗಾಮಿ ಕರ್ಮ=ಅಪರೋಕ್ಷ ಜ್ಞಾನಾನಂತರದಲ್ಲಿ ಬರುವ ಕರ್ಮಗಳು ಲೇಪವಿಲ್ಲದೆ ಕೆಡುವವು=ಕೆಟ್ಟುಹೋಗುವವು, ಹೇಗೆ ಕೆಡುವವುಯೆಂದರೆ ವಿರಂಚಿ ಜನಕನ ಭಜಿಸೆ ಕೆಡುವವು, ಮೂಲ ಸೃಷ್ಟಿಯಲ್ಲಿ ಮೊದಲಿಗೆ, ವಾಸುದೇವನಾಮಕ ಹರಿಯಿಂದ ಮಾಯಾದೇವಿಯಲ್ಲಿ ಪುರುಷ ನಾಮಕನೇ ಪುನಃ ಪ್ರದ್ಯುಮ್ನನಲ್ಲಿ ವಿರಂಚಿನಾಮಕ ಬ್ರಹ್ಮನ ತಂದೆ, ವಾಸು ದೇವನಾಮಕನೇ ಮುಕ್ತಿ ಕೊಡುವನಾದ ಕಾರಣ ಈ ವಾಸುದೇವನೆ ಮುಕ್ತ ರಿಗೆ ಬಿಂಬ, ಈತನನ್ನು ಭಜನೆ ಮಾಡಲು, ಸಂಚಿತಾಗಾಮಿ ಕರ್ಮನಾಶ ವಾಗಿ ಮುಕ್ತಿಯೋಗ್ಯರ ಹೃದಂಬರದಿ=ಜೀವನ ಚಿದ್ ಹೃದಯ ಸ್ವರೂಪ ದೇಹದ ಹೃದಯದಲ್ಲಿ ಪುರುಷೋತ್ತಮಃ=ಪುರುಷಾಭ್ಯಾಂ ಕ್ಷರಾಕ್ಷರಾಭ್ಯಾಂ ಉತ್ತಮಃ ॥ ಮಿಂಚಿನಂದದಿ=ಪ್ರಕಾಶಮಾನನಾಗಿ ಮನುಜಾದಿಗಳಿಗೆ ಮಿಂಚಿನಂತೆ ಹೊಳೆಯುವನು. ವಂಚಿಸುವ ಜನರೊಲ್ಲ=ಹರಿಗೆ ವಂಚನೆ ಮಾಡುವ ಇನ್ನೊಬ್ಬ ಬೇರೆ ಸ್ವತಂತ್ರ ಜೀವಿಗಳುಂಟೆ? ಎಂದರೆ ಹಾಗಲ್ಲ, ಜೀವರು ತಮಃಸ್ವಭಾವದವರು ಅವರ ಮೂಲ ಸ್ವಭಾವವೇ ದಂಭ-ಅಂಕಾರ ಕಾಮ, ರಾಗ ಕಪಟ-ವಂಚಕರು. ಇವರ ಅಸ್ತಿತ್ವಕ್ಕಾದರೂ ಶ್ರೀ ಹರಿಯೇ ಕಾರಣವಾದರೂ ಇಂತಹ ವಂಚಕರಾದ ತಮೋಜೀವರನ್ನುವಲ್ಲನೆಂದರೆ, ಅವರನ್ನು ಮುಕ್ತಿಗೆ ಸೇರಗುಡ ಶ್ರೀ ವತ್ಸಲಾಂಛನ=ಶ್ರೀವತ್ಸಲಕ್ಷಣಂ ಚಿಹ್ನಂ ಯಸ್ಯ ವಕ್ಷಸಿ ಸ್ಥಿತಮಿತಿ॥ (ವಿ.ರಾ.) ಶ್ರೀ ಲಕ್ಷ್ಮೀರೂಪ ಚಿಹ್ನವನ್ನು ತನ್ನ ವಕ್ಷಸ್ಥಳದಲ್ಲಿ ಧಾರಣ ಮಾಡಿದುದಕ್ಕೆ, ಸುಸದ್ವಕ್ಷನೆಂದು ಹೆಸರು. ತಾನಿಷ್ಕಿಂಚನಜನಪ್ರಿಯ=ತಾನು ಶ್ರೀ ಹರಿಯು ಜ್ಞಾನಿ ಜನರ ಪ್ರಿಯ, ಸುರಮುನಿಗೇಯ=ದೇವತೆಗಳು ಮುನಿಗಳಿಂದಲೂ ಅಥವಾ ನಾರದ ಋಷಿ ಗಳಿಂದ ಗೇಯ=ಗಾನರೂಪದಿಂದ ಸ್ತೋತ್ರ ಮಾಡಿಸಿಕೊಳ್ಳುವವ, ಶುಭ ಕಾಯ=ಮಂಗಳ ಶರೀರಉಳ್ಳವ ಚಿದಾನಂದ ರೂಪ ॥೧೬॥

**ಭಾವಸೂಚನೆ :**—ಚಂಚಲೇತಿ, ಸಂಚಿತಾಗಾಮಿ ಕರ್ಮ ವಿರಂಚಿ ಜನಕನ ಭಜಿಸಲು ಮಿಂಚಿನಂದದಿ ಪೊಳೆಯೆ ಕರ್ಮ ವಿನಾಶಗೈದುವದು. ಪಂಚಿಸುವ ಜನರೊಲ್ಲ. ಹರಿ ಶ್ರೀ ವತ್ಸಲಾಂಛಿತ ಸುಸದ್ವಕ್ಷ, ತಾಸಿಕ್ಕಿಂಚನ ಜನ ಪ್ರೀಯ ಸುರಮುನಿಗೇಯ ಶುಭಕಾಯೇತಿ ; ಪಂಚದಶಪದಂ ಕೇಚಿತ್ ಪಠಂತಿ ತಚ್ಚಿಂತ್ಯಂ ಮೂಲಕೋಶೇಷ್ವದರ್ಶನಾತ್ "ತದಧಿಗಮ ಇತ್ಯುಕ್ತೇಃ ಯಥೈಷಿಕಾ ತೂಲಂ ತದ್ಯಥಾ ಪುಷ್ಕರಪಲಾಶ ಇತಿ ಚ ಶ್ರುತೇಶ್ಚ ||೧೬|| (ಇದರ ಅರ್ಥವು ಸುಗಮವಾಗಿದೆ.)

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

'ಸಂಚಿತ' ಇತಿ || ತದಧಿಗಮನಯಾರ್ಥಃ ||

**"ಶ್ರೀವತ್ಸಾಂಚಿತಸಸದ್ವಕ್ಷ"**— * ಓಂ || ಮೇಧಾ ಅಸೃಕ್ಷತ ಸಮಿಂದ್ರೋ ರಾಯೋ ಬೃಹತೀರಧೂನುತ ಸಂಕ್ಷೋಣಿ ಸಮು ಸೂರ್ಯಂ ಸಂ ಶುಕ್ರಾಸಃ ಶುಚಯಃ ಸಂಗವಾಶಿರಃ ||ಓಂ|| ಶ್ರಿಯಂ ಕಾಂತಿಂ ಚ ವಹತಿ ಇತಿ ಶ್ರೀವತ್ಸಃ ಸೂರ್ಯಃ || ತಂ ವಕ್ಷತಿ ಚಾಲಯತಿ ಇತಿ ಸರ್ವಾಶ್ರಯಾ ಶ್ರೀಃ(ಭೂಃ) | ತೇಜೋವಹಾ ಸೂರಃ || ತೌ ಕಂಪಯತಿ ಇತಿ || ಶ್ರೀವತ್ಸಧರೋ ವಾ ||೧೬||

## ಕನ್ನಡಾರ್ಥ

ಈ ಪದ್ಯವು 'ತದಧಿಗಮ' ಅಧಿಕರಣದ ಅರ್ಥವನ್ನು ವಿವರಿಸುತ್ತದೆ. (ಬ್ರ.ಸೂ. ೪-೧-೧೩) ಶ್ರೀ-ಕಾಂತಿಯನ್ನು ಧರಿಸಿರುವವನು ಸೂರ್ಯ, ಅವನನ್ನು ಪ್ರಚಾಲಿಸುವವಳು ಸರ್ವಾಶ್ರಯಳಾದ ರಮಾದೇವಿ. ಆಕೆಯನ್ನೂ ಸೂರ್ಯನನ್ನೂ ನಡೆಯಿಸತಕ್ಕವನು. ಅಥವಾ ಶ್ರೀವತ್ಸಲಕ್ಷಣವುಳ್ಳವನು ಎಂದು 'ಶ್ರೀವತ್ಸ' ಎಂಬ ಪದಕ್ಕೆ ಅರ್ಥವನ್ನು ತಿಳಿಯಬೇಕು. ||೧೬||

**ಅವತರಣಿಕಾ :**—ಕರ್ಮವೇ ಮುಖ್ಯ ತಾರಕವಲ್ಲ. ಕರ್ಮವೇ ಮಾರಕವು. ಜೀವರಿಗೆಲ್ಲ ಕರ್ಮವೇ ಮಾರಕವು" ಎಂದು ಶ್ರೀ ಪುರಂದರ

ದಾಸರ ವಚನದಂತೆ ಕೇವಲ ಕರ್ಮದಿಂದಲೇ ಕಡೆಬಿದ್ದವರಿಲ್ಲ. ಕರ್ಮ ತಾರಕನಾದ ಹರಿಯನ್ನು ಭಜಿಸಿರೆಂದು ಉಪದೇಶಿಸುತ್ತಾರೆ.

**ಕಾಲದ್ರವ್ಯ ಸುಕರ್ಮ ಶುದ್ಧಿಯು।**
**ಪೇಳುವರು ಅಲ್ಪರಿಗೆ ಅವು ನಿ।**
**ರ್ಮೂಲ ಗೈಸುವವಲ್ಲ ಪಾಪಗಳೆಲ್ಲ ಕಾಲದಲಿ॥**
**ತೈಲಧಾರೀಯಂತವನ ಪದ।**
**ವಾ(ಓ)ಲಯಿಸಿ ತುತಿಸದಲೆ ನಿತ್ಯದಿ।**
**ಬಾಲಿಶರು ಕರ್ಮಗಳೆ ತಾರಕವೆಂದು ಪೇಳುವರು ॥೧೭॥**

**ಪದ್ಯಾರ್ಥ** :—ಕಾಲ=ವಸಂತಾದಿ ಕಾಲಕೃತ ಕರ್ಮಸ್ನಾನಾದಿಗಳು, ದ್ರವ್ಯ=ಧರ್ಮಕ್ಕೆ ಅನುಕೂಲವಾದ ದ್ರವ್ಯ, ಕರ್ಮ=ಯಜ್ಞಾದಿ ಕರ್ಮ, ಸ್ವರ್ಗಕಾಮದಿಂದ ಯಜ್ಞ ಮಾಡುವರಾದ, ಅಲ್ಪರು=ಅಧಮಾಧಿಕಾರಿಗಳು, ಇವರು ಕಾಲ ಕರ್ಮ ದ್ರವ್ಯವೆಂದು ಕೆಲಕಾಲ ತಿಳಿದು, ಆಚರಿಸುವರು, ಆದರೆ ಅವು ಮೂರು, ಎಲ್ಲ ಪಾಪಗಳನ್ನು ಏಕ ಕಾಲದಲ್ಲಿ ನಿರ್ಮೂಲ ಗೈಸುವವಲ್ಲ=ಕರ್ಮಕ್ಕೆ ಪ್ರಾಧಾನ್ಯ, ಜಡಕರ್ಮವು ಎಲ್ಲ ಪಾಪಗಳನ್ನು ಒಂದೇ ಕಾಲದಲ್ಲಿ, ನಾಶ ಮಾಡಲು ಶಕ್ತವಲ್ಲ, ಅಲ್ಪರು ತೈಲಧಾರಿಯಂತವನಪದ= ಅಧಮಾಧಿಕಾರಿಗಳು, ಅವನ=ಆಕರ್ಮ ಪ್ರೇರಕನಾದ ಹರಿಯ ಪಾದಪದ್ಮ ಗಳನ್ನು, ತೈಲಧಾರೀಯಂತೆ=ಹೇಗೆ ಎಣ್ಣೆಯ ಧಾರೆಯು ಅವಿಚ್ಛಿನ್ನವಾಗಿ ಬೀಳುತ್ತಪೆಯೋ, ಆದರಂತೆ ನಿರಂತರ ಅವಿಚ್ಛಿನ್ನವಾಗಿ ಎಡೆಬಿಡದೆ, ಓಲೈಸಿ =ಸೇವೆ ಮಾಡದೇ, ನಿತ್ಯದಿ ತುತಿಸಿದಲೆ=ನಿತ್ಯದಲ್ಲಿ ಹರಿಪಾದ ಸೇವೆ ಮಾಡದೇ ಸ್ತೋತ್ರ ಮಾಡದೇ ಕೊಂಡಾಡದೇ, ಬಾಲಿಶರು=ಮೂರ್ಖರು, ಕರ್ಮಗಳೇ ತಾರಕವೆಂದು ಪೇಳುವರು=ಕೇವಲ ಕರ್ಮವೇ ಕಡೆ ಹಾಯಿಸು ವವೆಂದು ಪೇಳುವರು॥ "ಕರ್ಮಧಾರಿಯ ಜಿಡು ಕಡೆ ಬಿದ್ದವರ ಕಾಣೆ ನಿರ್ಮ ಲಾತ್ಮಕ ವಿಜಯವಿಠಲನ್ನ ನೆರೆ ನಂಬು" ಎಂದು ಶ್ರೀ ವಿಜಯದಾಸರ ಸುಳಾದಿ. ಆದರೆ ಕರ್ಮ ಮಾಡುವುದೇ ಬಿಡಬೇಕೆ ? ಎಂದರೆ, ಶಾಸ್ತ್ರವಿಹಿತವಾದ ಕರ್ಮ ಮಾಡಬೇಕು. ಹೇಗೆಂದರೆ "ಕರ್ಮವೇ ತಾರಕವು ಜೀವರಿಗೆಲ್ಲ ಕರ್ಮವೇ ತಾರಕವು ॥ ಕರ್ಮ ತಾರಕ ಕೇಳು ನಿರ್ಣಯವೀ ಮಾತು । ದುರ್ಮತಿಯನು

ಬಿಟ್ಟು ಮರ್ಮವನರಿತರೆ ಕರ್ಮವೇ ತಾರಕವು॥ ಎಂದು ಶ್ರೀ ಗುರುಗೋಪಾಲ ದಾಸರ ೫ ನುಡಿ ಪದವಿದೆ. ಮರ್ಮವೇನೆಂದರೆ, ಕರ್ಮಪ್ರೇರಕ, ಕರ್ಮ ಕರ್ತಾ, ಕರ್ಮ ನಿಯಾಮಕ, ಕರ್ಮಬಂಧಮೋಚಕ ಶ್ರೀಹರಿ ಎಂದೇ ತಿಳಿದು ಸಕಲ ವಿಹಿತ ಕರ್ಮ ಮಾಡಿ ಹರಿಗರ್ಪಿಸಬೇಕು.

**ಭಾವಸೂಚನ :**—ಕಾಲೇತಿ ॥ ಕೃಷ್ಣ ಸಾರೋತ್ಪತ್ತಿಃ ದೇಶಶುದ್ಧಿಃ॥ "ಯತ್ರ ಯತ್ರ ಚ ಮದ್ಭಕ್ತಾಃ ಪ್ರಶಾಂತಾ ಸಮದರ್ಶಿನಃ ಇತಿ ವಾ ॥

ಧಾನ್ಯ ದಾರ್ವಸ್ಥಿತಂತೂನಾಂ ರಸತೈಜಸಚರ್ಮಣಾಂ ಇತಿ ದ್ರವ್ಯ ಶುದ್ಧಿಃ

ಕರ್ಮಶುದ್ಧಿಃ ಮದರ್ಪಣಮ್॥೧೭॥ ಭಾಗವತ ಏಕಾದಶ ಸ್ಕಂದ ೨೧ನೆ ಅಧ್ಯಾಯ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಕಾಲ' ಇತಿ ಕಾಲಃ ವಸಂತಃ, ಕರ್ಮ ಸ್ನಾನಾದಿ ದ್ರವ್ಯಂ ಧರ್ಮೋಪಯೋಗಿ । ನೈತಾವತ್ ಪಾಪಭೇದಾಯ ಅಲಮ್ **ಓಲಯಿಸಿ"**— ಸ್ತುತಿಸಿ ತತ್ಪದ ಸೂಚಿತಾ ಶುದ್ಧಿಃ ಗುಣಾನುವಾದಃ ಕಾಲಃ ತತ್ ಕರ್ಮ ಹರಿತೋಷಕಮ್ । ದ್ರವ್ಯಂ ನಿಷ್ಕಾಮ ಧರ್ಮೋಪಯೋಗಿ ॥೧೭



## ಕನ್ನಡಾರ್ಥ

"ಕಾಲ"=ವಸಂತ ಮುಂತಾದ ಕಾಲ, ಕರ್ಮಗಳು ಸ್ನಾನ ಮುಂತಾದವುಗಳು. ದ್ರವ್ಯಂ ಧರ್ಮೋಪಯೋಗಿಯಾದುದು. ಒಳ್ಳೇಕಾಲ, ಒಳ್ಳೇ ಕರ್ಮ, ಒಳ್ಳೇ ದ್ರವ್ಯ, ಇವುಗಳಷ್ಟೇ ಪಾಪನಿವಾರಣೆಗೆ ಸಾಕಾಗುವುದಿಲ್ಲ. ಪರಮಾತ್ಮನ ಗುಣಾನುವಾದ ನಡೆಯುವ ಕಾಲವೇ ನಿಜವಾದ ಕಾಲ. ಹರಿತೋಷಕರವಾದುದೇ ನಿಜವಾದ ಕರ್ಮ. ನಿಷ್ಕಾಮ ಧರ್ಮೋಪಯೋಗಿಯಾದುದೇ ದ್ರವ್ಯ. ಆದುದರಿಂದ ಶ್ರೀ ಹರಿಯನ್ನು ಸ್ತುತಿಸುವುದೇ ಪರಮ ಪಾವನಕರವೆಂದು ಜ್ಞಾನಿಗಳ ಸನ್ಮತ ॥೧೭॥

**ಅವತರಣಿಕಾ :**—ಹಿಂದಿನ ಪದ್ಯದಲ್ಲಿ ಅಧಮಾಧಿಕಾರಿಗಳ ಕರ್ಮ ಲಕ್ಷಣ ಪೇಳಿ ಈ ಪದ್ಯದಲ್ಲಿ ಉತ್ತಮಾಧಿಕಾರಿಗಳಾದ ಬ್ರಹ್ಮಾದಿ ದೇವತೆಗಳು

ಕರ್ಮ ಪ್ರೇರಕನಾದ ಹರಿಯ ಮಹಿಮಾ ಪ್ರಾಂತಗಾಣದೇ ಸ್ತೋತ್ರ ಮಾಡುವ ಕ್ರಮ ವಿವರಿಸುತ್ತಾರೆ.

**ಕಮಲ ಸಂಭವ ಶರ್ವ ಶಕ್ರಾ ।**
**ದ್ಯಮರರೆಲ್ಲರು ಇವನ ದುರತಿ ।**
**ಕ್ರಮ ಮಹಿಮೆಗಳ ಮನ ವಚನದಿಂ ಪ್ರಾಂತಗಾಣದಲೆ ॥**
**ಶ್ರಮಿತರಾಗಿ ಪದಾಬ್ಜಕಲ್ಪ ।**
**ದ್ರುಮದ ನೆಳಲಾಶ್ರೈಸಿ ಲಕ್ಷ್ಮೀ ।**
**ರಮಣ ಸಂತೈಸೆಂದು ಪ್ರಾರ್ಥಿಪರತಿ ಭಕುತಿಯಿಂದ ॥೧೮॥**

**ಪದ್ಯಾರ್ಥ :**—ಕಮಲಸಂಭವ=ಪದ್ಮನಾಭರೂಪಿ ಪರಮಾತ್ಮನ ನಾಭಿಕಮಲದಿಂದ ಪುಟ್ಟಿದ ಚತುರ್ಮುಖ ಬ್ರಹ್ಮ, ಶರ್ವ=ರುದ್ರ ದೇವರು ಶಕ್ರಾದ್ಯಮರರೆಲ್ಲರು=ಇಂದ್ರನೇ ಮೊದಲಾದ ಎಲ್ಲ ದೇವತೆಗಳು, ಇವನ= ಈ ಬಿಂಬರೂಪಿಯಾದ ಶ್ರೀಹರಿಯ ದುರತಿಕ್ರಮ ಮಹಿಮೆಗಳ, ಅತಿಕ್ರಾಂತುಂ ನ ಶಕ್ಯ ಇತಿ ದುರತಿಕ್ರಮಃ=ದಾಟಲು ಅಶಕ್ಯವಾದ ಮಹಿಮೆಯುಳ್ಳ ಶ್ರೀ ಹರಿಯ ಚರಿತ್ರೆಯನ್ನು, ಮನವಚನದಿಂ ಪ್ರಾಂತಗಾಣದಲೇ ಮನಸ್ಸಿನಿಂದ ಧ್ಯಾನ ಮಾಡಲು ಶಕ್ಯವಿಲ್ಲದೇ ವಚನದಿಂ ಬಾಯಿಯಿಂದ ಹೊಗಳಲು ಶಕ್ಯರಾಗವೆ ಅವನ ಅನಂತ ಮಹಿಮೆಗಳ ಕೊನೆಗಾಣದೇ ಶ್ರಾಂತರಾಗಿ= ಬಹು ಸಾಧನ ಮಾಡಿ ಮಾಡಿ ಶ್ರಮವನ್ನು ಹೊಂದಿ, ಶ್ರೀ ಹರಿಯ ಸುಪ್ರಸಾದ ವಿನಾ ನಮಗೆ ಗತಿ ಇಲ್ಲವೆಂದು ತಿಳಿದು, ಪದಾಬ್ಜ ಕಲ್ಪದ್ರುಮದ ನೆಳಲಾಶ್ರಯಿಸಿ=ಶ್ರೀ ಹರಿಯ ಪಾದಪದ್ಮವೆಂಬ, ಕಲ್ಪವೃಕ್ಷದ ಛಾಯಾ ಆಶ್ರಯ ಮಾಡಿ, ಅಂದರೆ ಶ್ರೀ ಹರಿಯೇ ಸ್ವಪ್ರಸಾದಮಂತರೇಣ ಲಭ್ಯನಲ್ಲವೆಂದು ತಿಳಿದು ಶ್ರೀ ಹರಿಯ ಆತ್ಯಂತಿಕ ಪ್ರಸಾದಗೋಸುಗ, ಲಕ್ಷ್ಮೀರಮಣ ಸಂತೈಸೆಂದು=ಶ್ರೀ ಸಂಪತ್ಕರಳಾದ ಶ್ರೀ ರಮೆಗೆ ರಮಣಪತಿಯಾದ ಸಂಪತ್ಕರವಾದ ಮುಕ್ತಿ, ಮುಕ್ತರಲ್ಲಿ ಕ್ರೀಡಾ ಮಾಡುವ ಮುಕುಂದನೇ, ಸಂತೈಸೆಂದು ಪ್ರಾರ್ಥಿಪರತಿಭಕುತಿಯಿಂದ=ಆತ್ಯಂತಿಕವಾದ ಸು ದೃ ಢ ಸ್ನೇಹದಿಂದ, ಸಮಾಧಾನಪಡಿಸಿ ರಕ್ಷಿಸಿ, ಮುಕ್ತಿಯನ್ನು ಕೊಡೆಂದು ಸ್ತೋತ್ರ ಮಾಡುವರು.

ಭಾವಸೂಚನ ॥ ಕಮಲೇತಿ ॥ ನೆಳಲೇತಿ ॥ ಪ್ರಸನ್ನತಾಪೋಪ ಶಮಾತಪತ್ರಮಿತಿ ಭಾಗವತೇ ॥೧೮॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಕಮಲ" ಇತಿ॥ದುಃಖೇನಾಪಿ ಅತಿಕ್ರಾಂತುಂ ಪಾರಂ ಗಂತುಂ ಅಶಕ್ಯಃ ದುರತಿಕ್ರಮಃ ॥ "ಪ್ರಸನ್ನತಾಪೋಪಶಮಾತಪತ್ರಮ್" ಇತ್ಯುಕ್ತೇಃ ॥೧೮॥

**ಕನ್ನಡಾರ್ಥ**

ಯಾವನ ಮಹಿಮೆಯನ್ನು ಬಹು ಪರಿಶ್ರಮದ ಪ್ರಯತ್ನಗಳಿಂದಲೂ ಅತಿಕ್ರಮಿಸಲು ಸಾಧ್ಯವಿಲ್ಲವೋ ಅವನ ಮಹಿಮೆಯು ದುರತಿಕ್ರಮವೆನಿಸುವುದು.

ಭಾಗವತದಲ್ಲಿ ಶರಣಾಗತ ಭಕ್ತಜನರ ತಾಪಗಳನ್ನು ಉಪಶಮಗೊಳಿಸುವ ಆತಪತ್ರ ಭವತಾಪನಿವಾರಕ ಛತ್ರವೆಂದು ಪರಮಾತ್ಮನ ಪದಪದ್ಮವನ್ನು ಸ್ತುತಿಸಿಸುತ್ತಾರೆ. ಅದನ್ನೇ ಈ ಪದ್ಯದಲ್ಲಿ "ಪದಾಬ್ಜಕಲ್ಪದ್ರುಮದ ನೆಳಲನಾಶ್ರಯಿಸಿ" ಎಂಬುದಾಗಿ ಅನುವಾದಿಸುತ್ತಾರೆ ॥೧೮॥

ಅವತರಣಿಕಾ :—ಶ್ರೀ ಹರಿಯು ಸರ್ವೋತ್ತಮನೆಂದು ತಿಳಿಯದೇ ತಾರತಮ್ಯಜ್ಞಾನರಹಿತರು ಸೌರ ಶೈವ ಮತಾವಲಂಬಿಗಳಾಗಿ ಕೆಡುವರೆಂಬುದಕ್ಕೆ ದೃಷ್ಟಾಂತ ಪೂರ್ವಕವಾಗಿ ಹೇಳುತ್ತಾರೆ.

**ವಾರಿಚರವೆನಿಸುವವು ದರ್ದುರ ।**
**ತಾರಕಗಳೆಂದರಿದು ಭೇಕವ ।**
**ನೇರಿ ಜಲಧಿಯ ದಾಟುವೆನುಯೆಂಬುವನ ತೆರದಂತೆ ॥**
**ತಾರತಮ್ಯಜ್ಞಾನ ಶೂನ್ಯರು ।**
**ಸೂರಿಗಮ್ಯನ ತಿಳಿಯಲರಿಯದೆ ।**
**ಸೌರ ಶೈವ ಮತಾನುಗರ ಅನುಸರಿಸಿ ಕೆಡುತಿಹರು ॥೧೯॥**

**ಪದ್ಯಾರ್ಥ** :—ವಾರಿಚರವೆನಿಸುವವು ದರ್ದುರ=ಶಬ್ದೈಃ ಕರ್ಣೌ ದೃಣಾತೀತಿ ದರ್ದುರಃ॥ಯಾವದರ ಕೂಗಿನಿಂದ ಕಿವಿ ಒಡೆಯುವದೊ, ಅಸಹ್ಯ

ಸ್ವರವುಳ್ಳ ಕಪ್ಪೆಯು, ನೀರಿನಲ್ಲಿ ತಿರುಗಾಡುವ ಪ್ರಾಣಿ–ನಾವೆಯು ವಾರಿಚರ ನೀರಲ್ಲಿ ಚರಿಸುವ ನಾವೆಯನ್ನು ಬಿಟ್ಟು ಕಪ್ಪೆಯೇ ತಾರಕಗಳೆಂದರಿದು ಸಮುದ್ರವನ್ನು ದಾಟಿಸುವವೆಂದು ತಿಳಿದು, ಭೇಕವನೇರಿ=ಭೇಕ=ಸರ್ಪಾತ್ ಬಿಭೇತೀತಿ ಭೇಕಃ=ಸರ್ಪದಿಂದ ಅಂಜುತ್ತದೆ ಕಾರಣ ಭೇಕವೆಂದು ಕಪ್ಪಿಗೆ ಹೆಸರು. ಕೆಟ್ಟ ಧ್ವನಿಯಿಂದ ಕೂಗುವದು, ಸರ್ಪಕ್ಕೆ ಅಂಜುವದು ಈ ಎರಡು ವಿಶೇಷಣಗಳು ಬಹು ಅರ್ಥಭರಿತವಾಗಿವೆ. ನಾವೆಯನ್ನು ಬಿಟ್ಟು ಕಪ್ಪೆಯ ಹೆಗಲೇರಿ ಸಮುದ್ರ ದಾಟುವೆನು, ಎಂಬುವನ ತೆರದಂತೆಯೇ ತಾರತಮ್ಯ ಜ್ಞಾನಶೂನ್ಯರು=ಶ್ರೀ ಹರಿಯೇ ಸರ್ವೋತ್ತಮ, ಬ್ರಹ್ಮಾದಿಗಳು ಕ್ರಮೇಣ ಶ್ರೀ ಹರಿಯ ಭಕ್ತರೆಂಬ ತರತಮ ಭಾವ ತಿಳಿಯದ, ಜ್ಞಾನಶೂನ್ಯರು= ಜ್ಞಾನ ತಿಳುವಳಿಕೆ ಇಲ್ಲದವರು. ಸೂರಿಗಮ್ಯನ ತಿಳಿಯಲರಿಯದೇ=ಜ್ಞಾನಿಗಳಿಂದ ಹೊಂದಲಿಕ್ಕೆ ಯೋಗ್ಯನಾದ ಶ್ರೀ ಹರಿಯೇ ಸರ್ವೋತ್ತಮನೆಂದು ತಿಳಿಯಲು ಅರಿಯವೇ ಅರಿವು ಅಜ್ಞಾನದಿಂದ ತಿಳಿಯದೇ, ಸೌರ=ಸೂರ್ಯನೆ ಸರ್ವೋತ್ತಮ, ಶೈವ=ಶಿವನೆ ಸರ್ವೋತ್ತಮ ಇತ್ಯಾದಿ ಮತಾನುಗರ ಅನುಸರಿಸಿ =ಸೌರ-ಶಿವ ಶಾಕ್ತ ಇತ್ಯಾದಿ ಮತ ಪ್ರವರ್ತಕರ ಅನುಸರಿಸಿ, ಕೆಡುತಿಹರು= ಮುಕ್ತಿಗೆ ಭಾಗಿಗಳಾಗದೇ ಮಿಶ್ರ, ಸುಖದುಃಖ ನರಕಾದಿಗಳಲ್ಲಿ ಬಿದ್ದು ಕೆಡುತ್ತಾರೆ.

**ಭಾವಸೂಚನ ||** ನೀರೊಳಗಿಹೇತಿ | ವಾರಿಚರೇತಿ || ಅತ್ರತ್ಯಂ ಪದಂ ಕ್ವಚಿತ್ ಪುಸ್ತಕೇಷು|ಇದಂ ದ್ವಯಮಪ್ಯೇಕತಾತ್ಪರ್ಯಕಂ ||೧೯||

**ವಿ. ಸೂಚನೆ—**ಸೌರ ಶೈವ ಮತಗಳು ಕಪ್ಪೆಯಂತೆ ಕಿವಿಗೆ ಅಸಹ್ಯ ಒದರುವಂತೆ ನಿರರ್ಥಕ ಕಿವಿಗೆ ಇಂಪಾಗದಿರುವದು. ಪರರಿಂದ ಅಂಜುವದು. ಪ್ರಬಲ ಶ್ರುತಿಗಳಿಂದ ಹೆದರುವಿಕೆಯು ಎರಡೂ ವಿಶೇಷಣ ಸಾರ್ಥಕ್ಯ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವಾರಿ" ಇತಿ ||೧೯||

## ಕನ್ನಡಾರ್ಥ

ತಾರತಮ್ಯ ಜ್ಞಾನದಿಂದ ಪರಮಾತ್ಮನ ಸರ್ವೋತ್ತಮತ್ವವನ್ನು ತಿಳಿ

ಯದೆ ಅನ್ಯಮತಾವಲಂಬನದಿಂದ ಕೆಡುವರು ; ಎಂಬುದಾಗಿ ಈ ಪದ್ಯದಿಂದ ಹೇಳುತ್ತಾರೆ ॥೧೯॥

**ಅವತರಣಿಕಾ** :—ಕಾಮ್ಯಫಲಸೇವೆಯನ್ನು ಧಿಕ್ಕರಿಸುತ್ತಾರೆ. ಮುಕ್ತಿ ಯೋಗ್ಯರು ಐಹಿಕ ಕಾಮ್ಯಗಳನ್ನು ಸರ್ವಥಾ ಬೇಡಕೂಡದೆಂದು ದೃಷ್ಟಾಂತ ಪೂರ್ವಕ ವರ್ಣಿಸುತ್ತಾರೆ-

**ಕ್ಷೋಣಿಪತಿಸುತನೆನಿಸಿ ಕೈದು ।**
**ಗ್ಗಾಣಿಗೊಡ್ಡುವ ತೆರದಿ ಸುಮನಸ ।**
**ಧೇನು ಮನಿಯೊಳಗಿರಲು ಗೋಮಯ ಬಯಸುವಂದದಲಿ ॥**
**ವೇಣುಗಾನ ಪ್ರಿಯನ ಅಹಿಕ ಸು ।**
**ಖಾನುಭವ ಬೇಡದಲೆ ಲಕ್ಷ್ಮೀ ।**
**ಪ್ರಾಣನಾಥನ ಪಾದ ಭಕ್ತಿಯ ಬೇಡು ಕೊಂಡಾಡು ॥೨೦॥**

**ಪದ್ಯಾರ್ಥ** :—ಕ್ಷೋಣಿ ಪತಿ ಸುತನೆನಿಸಿ=ಭೂಮಿಯಾಳುವ ರಾಜನ ಮಗನೆನಿಸಿ, ಮಹಾ ಐಶ್ವರ್ಯವಂತ ಧನಾಧಿಪನಾದ ರಾಜ ಕುಮಾರನು, ದುಗ್ಗಾಣಿಗೆ=ಎರಡು ಕಾಸು ದಮ್ಮಡಿಗೆ, ಕೈ ಒಡ್ಡುವ ತೆರದಿ=ರಾಜಕುಮಾರನು, ಮನೆ ಮನೆ ತಿರುಗಿ ಒಂದು ಕಾಸು ಕೊಡಿರಪ್ಪಾ ಎಂದು ಕೇಳಿ ಭಿಕ್ಷೆ ಬೇಡುವುದು ಎಷ್ಟು ಲಜ್ಜಾಸ್ಪದವೋ, ಮತ್ತು ಸುಮನಸಧೇನು=ದೇವತೆಗಳ ಆಕಳು ಕಾಮಧೇನು ಬೇಕಾದ್ದು ಇಚ್ಛಿಸಿದ್ದು ಕೊಡುವ ಕಾಮಧೇನು ಮನೆಯಲ್ಲಿ ಇರಲು, ಗೋಮಯ ಬಯಸುವಂದದಲಿ=ಪರರಮನಿಲಿ ಕಟ್ಟಿದ, ಆಕಳ ಹೆಂಡೆ ಬಯಸುವಂತೆ, ಅಂದರೆ ದುಗ್ಗಾಣಿ-ಕಾಸು, ಶಗಣಿ ಇವು ಸಹ ಲೋಕದಲ್ಲಿ ಬಹು ಸಲಭ ಮತ್ತು ಕನಿಷ್ಠವಾದುವು. ನೀವು ರಾಜಾಧಿರಾಜನ ಮಕ್ಕಳು, ಪ್ರೀತಿ ಪಾತ್ರರು ಮೋಕ್ಷ ಯೋಗ್ಯ ಜೀವಿಗಳು, ಸುರಧೇನು ಸದೃಶನಾದ ಶ್ರೀ ಹರಿಯು ಸಾಧನ ಜೀವಿಗಳ ವಶನಾಗಿರುವನು. ಇಂತಹ ವೇಣುಗಾನ ಪ್ರಿಯನ ಕೊಳಲೂದಿ ಸಾಮಗಾನಾದಿ ಮಾಡಿ ಪ್ರೀತಿಯಿಂ ಜಗತ್ತನ್ನು ಬೆಡಗುಗೊಳಿಪ ಶ್ರೀಕೃಷ್ಣನ್ನ, ಆಹಿಕ ಸುಖಾನುಭವ ಬೇಡದಲೆ=ಈ ಲೋಕದ ಸುಖದ ಅನುಭೋಗವನ್ನು ಅಪೇಕ್ಷಿಸದೆ ಕೇಳ

ದಲೆ, ಲಕ್ಷ್ಮೀ ಪ್ರಾಣನಾಥನ= ಶ್ರೀ ಲಕ್ಷ್ಮೀದೇವಿ ಪ್ರಾಣದೇವರಿಗೆ ನಾಥ=
ಒಡೆಯನ, ಪಾದ ಭಕ್ತಿಯ ಬೇಡು= ಶ್ರೀಕೃಷ್ಣನ ಪಾದದಲ್ಲಿ ಭಕ್ತಿಯನ್ನು
ಬೇಡುತ್ತ, ಕೊಂಡಾಡು=ಸ್ತುತಿಸು.

**ಭಾವಸೂಚನ ॥ ಕ್ಷೋಣಿಪತೀತಿ ॥೨೦॥**

## ಶ್ರೀವ್ಯಾಸ ದಾಸ ಸಿದ್ಧಾಂತ ಕೌಮುದೀ

ಕಾಮ್ಯಸೇವಾಂ ಧಿಕ್ಕರೋತಿ–" ಕ್ಷೋಣಿ " ಇತಿ ॥ ॥೨೦॥

## ಕನ್ನಡಾರ್ಥ

ಕಾಮ್ಯಫಲವನ್ನು ಉದ್ದೇಶಿಸಿ, ಪರಮಾತ್ಮನ ಸೇವೆಯನ್ನು ಮಾಡ
ಬಾರದೆಂದು ಹೇಳುತ್ತಾರೆ–" ಕ್ಷೋಣಿಪತಿ " ಎಂಬ ಪದ್ಯದಿಂದ. ॥೨೦॥

**ಅವತರಣಿಕಾ** :—ಹರಿಯನ್ನು ಬಿಟ್ಟು ಅನ್ಯ ದೇವತೆಗಳನ್ನಾರಾಧಿಸು
ವವರಿಗೆ ಆಗುವ ಭವಣೆಯನ್ನು ದೃಷ್ಟಾಂತ ಪೂರ್ವಕವಾಗಿ ಹೇಳುತ್ತಾರೆ.

**ಕ್ಷುಧೆಯುಗೋಸುಗ ಪೋಗಿ ಕಾನನ ।**
**ಬದರಿ ಫಲಗಳಪೇಕ್ಷೆಯಿಂದಲಿ ।**
**ಪೊದೆಯೊಳಗೆ ಸಿಗ ಬಿದ್ದು ಬಾಯ್ದೆರದವನ ತೆರದಂತೆ ॥**
**ವಿಧಿ ಪಿತನ ಪೂಜಿಸದೆ ನಿನ್ನಯ ।**
**ಉದರ ಗೋಸುಗ ಸಾಧು ಲಿಂಗ ।**
**ಪ್ರದರುಶಕರಾರಾಧಿಸುತ ಬಳಲದಿರು ಭವದೊಳಗೆ ॥೨೧॥**

**ಪದ್ಯಾರ್ಥ** :—ಕ್ಷುಧೆಯುಗೋಸುಗ= ಹಸಿವೆ ತಡೆಯಲಾರದೇ, ಅಡವಿ
ಯಲ್ಲಿದ್ದ ಹಣ್ಣು ಹಂಪಲವನ್ನಾದರೂ ತಿಂದು ಹಸಿವೆಕಳಕೊಳ್ಳುವೆನೆಂಬ ಆಶೆ
ಯಿಂದ, ಬದರಿ ಫಲಗಳ ಅಪೇಕ್ಷೆಯಿಂದಲಿ= ಬೋರೆ ಫಲಗಳ ಆಶೆಯಿಂದ
ಕಾನನಕ್ಕೆ ಪೋಗಿ= ಅಡವಿಗೆ ಹೋಗಿ, ಅಡವಿಯಲ್ಲಿದ್ದ, ಕಹಿ ಬೋರೆ ಗಿಡದ
ಪೊದೆಯೊಳಗೆ= ಮುಳ್ಳುಗಳಿರುವ ಅನೇಕ ಗಿಡಗಂಟೆಗಳ ಗುಂಪಿನಲ್ಲಿ, ಸಿಗ
ಬಿದ್ದು= ಸಿಕ್ಕಿಕೊಂಡು, ಬಾಯ್ದೆರದವನ ತೆರದಂತೆ= ಬಾಯಿಬಿಟ್ಟು ಅಯ್ಯೋ

ಊರೊಳಗಿರುವುದು ಬಿಟ್ಟು ಅಡವಿಗೆ ಯಾಕೆ ಬಂದೆನೊಯೆಂದು ಚೀರಿ ಒದ್ದಾಡುವಂತೆಯೇ, ನೀನು (ಅಧ್ಯಾಹಾರ) ವಿಧಿಪಿತನ ಪೂಜಿಸದೆ=ಶ್ರೀ ಹರಿಯ ಭಜಿಸದೆ ನಿನ್ನಯ ಉದರಗೋಸುಗ=ನಿನ್ನ ಹೊಟ್ಟೆ ತಿಪ್ಪಲ ಸಲು ವಾಗಿ, ಸಾಧುಲಿಂಗ ಪ್ರದರುಶಕರಾರಾಧಿಸುತ=ಮೇಲೆ ಸಾಧುಗಳಂತೆ ವೇಷ ವನ್ನು ಹಾಕಿ ಜನರಿಗೆ ಮೋಸ ಮಾಡಿ ತೋರುವರು, ಕ್ಷುದ್ರದೇವತೆ ಮುಂತಾದ ವಶದಿಂದ ಲೋಕರಿಗೆ ಆಶ್ಚರ್ಯತೋರುವರು ಕಪಟ ವೇಷಧಾರಿ ಗಳನ್ನು ಭಜಿಸುತ್ತ, ಭವದೊಳಗೆ=ಈ ಸಂಸಾರದಲ್ಲಿ, ಬಳಲದಿರು=ದುಃಖ ಪಡಬೇಡ. ಸಂತತ ಬ್ರಹ್ಮ ಪಿತನು ಸಕಲಾಭೀಷ್ಟದನೆಂದು ಹರಿಯನ್ನೇ ಭಜಿ ಸೆಂದು ಉಪದೇಶಿಸುತ್ತಾರೆ.

**ಭಾವಸೂಚನ** ॥ ಕ್ಷುಧೆಯುಗೋಸುಗ ॥೨೧॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ವಿಪರ್ಯಯೇ ಅನಿಷ್ಟಮಾಹ "ಕ್ಷುಧೆ" ಇತಿ ॥೨೧॥

**ಕನ್ನಡಾರ್ಥ**

ಶ್ರೀ ಹರಿಯನ್ನು ಬಿಟ್ಟು ಅನ್ಯಮತಾವಲಂಬಿಗಳಾದ ಇತರ ದೇವತೆ ಗಳನ್ನು ಭಜಿಸುವರು ಸಂಸಾರದಲ್ಲಿ ಬಳಲುವರು, ಎಂಬ ವಿಷಯವನ್ನು ದೃಷ್ಟಾಂತದಿಂದ ಹೇಳುತ್ತಾರೆ "ಕ್ಷುಧೆಯು" ಎಂಬ ಪದ್ಯದಿಂದ. ಹರಿಯನ್ನು ತೊರೆದು ಅನ್ಯರನ್ನು ಭಜಿಸುವುದು ಅನಿಷ್ಟಕರವೆಂದು ಈ ಪದ್ಯದ ಸಾರಾ ಭಿಪ್ರಾಯ ॥೨೧॥

**ಅವತರಣಿಕಾ** :—ವಿಧಿ ಪಿತನಾದ ಶ್ರೀ ಬಿಂಬರೂಪಿ ಹರಿಯ ಅನಂತ ಗುಣಗಳನ್ನು ಸ್ತೋತ್ರ ಮಾಡಲು ಶ್ರೀ ಹೃದಯಾಕಾಶ ಚಂದ್ರನು ತೋರುವ ನೆಂದು ಉಪದೇಶಿಸುತ್ತಾರೆ.

**ಜ್ಞಾನಜ್ಞೇಯ ಜ್ಞಾತೃವೆಂಬಭಿ ।**
**ಧಾನದಿಂ ಬುದ್ಧ್ಯಾದಿಗಳಧಿ ।**
**ಷ್ಠಾನದಲಿ ನೆಲೆಸಿದ್ದು ಕರೆಸುತ ತತ್ತದಾಹ್ವಯದಿ ॥**

**ಭಾನು ಮಂಡಲಗ ಪ್ರದರ್ಶಕ (ಪ್ರದರುಶಕ) ।**
**ತಾನೆನಿಸಿ ವಶನಾಗುವನು ಶುಕ ।**
**ಶೌನಕಾದಿ ಮುನೀಂದ್ರ ಹೃದಯಾಕಾಶಗತ ಚಂದ್ರ ॥೨೨॥**

**ಪದ್ಯಾರ್ಥ** :—ಜ್ಞಾನ=ಅವಬೋಧರೂಪತ್ವಾತ್ ಜ್ಞಾನಂ ತಸ್ಯೈವ ವಿಶೇಷಣಂ ಉತ್ತಮಮಿತಿ॥ (ವಿ.ಸ.ವಿ.ರಾ.) ಬುದ್ಧಿಗೆ ತೋರುವುದೇ ಜ್ಞಾನ ತಿಳುವಳಿಕೆಯೆಂದು ಶ್ರೀ ಹರಿನಾಮ, ಜ್ಞೇಯ=ತಿಳಿಯತಕ್ಕವಸ್ತು, ಶ್ರೀ ಹರಿಯೆ ಜ್ಞಾತೃ=ಶ್ರೀ ಹರಿ ತಾನು ತಿಳಿದವನಾದುದರಿಂದ ಜೀವರಿಗೆ ತಿಳಿಸಿಕೊಟ್ಟು ತಿಳಿದವನನ್ನಾಗಿ ಮಾಡುವನಾದ ಕಾರಣ ಜ್ಞಾತೃವೆಂಬ ಅಂದರೆ ತಿಳುವಿಕೆ, ತಿಳಿಯತಕ್ಕವಸ್ತು, ತಿಳಿದವ ಎಂಬ ಈ ಮೂರು ಅಭಿಧಾನದಿಂ=ಹೆಸರಿನಿಂದ ಕರೆಸುತ್ತ, ಬುದ್ಧ್ಯಾದಿಗಳಧಿಷ್ಠಾನದಲಿ=ಮನ ಬುದ್ಧ್ಯಾದಿ ಸ್ಥಾನದಿ ಜ್ಞಾನೇಂದ್ರಿಯಗಳಲ್ಲಿ ವಾಸವಾಗಿದ್ದು ತತ್ತದಾಹ್ವಯದಿ =ಆಯಾ ನಾಮಗಳಿಂದ ಕರೆಸುತ್ತಲಿರುವ, ಭಾನುಮಂಡಲಗ ಪ್ರದರ್ಶಕ =ಅಧ್ಯಾತ್ಮವಾದ ಬುದ್ಧ್ಯಾದಿ ಇಂದ್ರಿಯಗಳಲ್ಲಿ ನೆಲಸಿಪ್ಪ (ಶ್ವೇತದ್ವೀಪ ಗತನಾದ) ಹರಿಯೇ ಸೂರ್ಯಮಂಡಲವನ್ನು ಪ್ರಕಾಶ ಮಾಡುವನು, ಶುಕ=ರುದ್ರಾವತಾರರಾದ ಶುಕ ಮಹರ್ಷಿಗಳ ಮತ್ತು ಶೌನಕಾದಿ ಅಂತ ರ್ದೃಷ್ಟರಾದ ಋಷಿಗಳ, ಹೃದಯಾಕಾಶಗತ ಚಂದ್ರ=ಆದಿ ಗುರು ಪರಮ ಗುರುಗಳ ಹೃದಯದಲ್ಲಿ ಸುಶೀತಲನಾಗಿ ಆನಂದ ಕೊಡುವ ಚಂದ್ರನಂತೆ ಪ್ರಕಾಶಮಾನಚಂದ್ರನೆ, ನಿನ್ನ ವಶನಾಗುವ=ನಿನ್ನ ಕೈಸಿಕ್ಕುವ ಅಂದರೆ ಹೃದಯದಲ್ಲಿ ಹೊಳೆಯುವನೆಂದು ಧ್ಯಾನ ಉಪಾಸನೆ ವಿವರವನ್ನೇ ಉಪ ದೇಶಿಸುತ್ತಾರೆ.

**ಭಾವಸೂಚನ ॥** ಜ್ಞಾನೇತಿ । ಜ್ಞೇಯ ಘಟಾದಿಗಳು । ಜ್ಞಾತೃ ಆತ್ಮ ॥ ೨೨ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಜ್ಞಾನ" ಇತಿ ॥೨೨॥

## ಕನ್ನಡಾರ್ಥ

ಜ್ಞಾನ-ಜ್ಞಾತೃ-ಜ್ಞೇಯ, ಭೋಕ್ತೃ-ಭೋಜ್ಯ-ಭೋಜನ, ಕರ್ತೃ-ಕಾರ್ಯ-ಕ್ರಿಯಾ ಹೀಗೆ ಬುದ್ಧಿ ಮುಂತಾದ ಅಧಿಷ್ಠಾನಗಳಲ್ಲಿದ್ದು ತತ್ತತ್ಸ್ಥಾನ ಗಳಿಂದ-ತತ್ತದಂತರ್ನಿಯಮನ ಮಾಡುತ್ತ-ಜ್ಞಾನಾದಿಗಳನ್ನು ಪ್ರವರ್ತಿಸುವ ಬಿಂಬರೂಪಿ ಶ್ರೀಹರಿಯನ್ನು ಆಕಾಶಾದಿಗಳಲ್ಲಿ ಸೂರ್ಯಾದಿಗಳಲ್ಲಿ ನಿಂತು ವ್ಯಾಪಿಸಿ ಪ್ರಕಾಶಾದಿ ಪ್ರೇರಕನೆಂದು ತಿಳಿದು ಉಪಾಸನೆಯನ್ನು ಮಾಡಬೇಕು; ಎಂದು ಈ ಪದ್ಯದ ಭಾವ ||೨೨||

ಅವತರಣಿಕಾ :—ಹರಿಯ ಪ್ರೀತಿಗೆ ಕಾರಣವಾದುದು ಶಾಸ್ತ್ರವಿಧಿ, ಶ್ರೀಹರಿಯ ಪ್ರೀತಿಗೆ ಕಾರಣವಾಗದೇ ಇದ್ದ ಕರ್ಮ ನಿಷಿದ್ಧ ಕಾರಣ ಭಗವಂತನ ಪ್ರೀತಿಗೆ ಕಾರಣವಾದ ಕರ್ಮ ಮಾಡಬೇಕೆಂದು ದೃಷ್ಟಾಂತ ಪೂರ್ವಕ ಉಪದೇಶಿಸುತ್ತಾರೆ.

**ಉದಯ ವ್ಯಾಪಿನಿ ದರ್ಶ ಪೌರ್ಣಿಮ ।**
**ಅಧಿಕ ಯಾಮವು ಶ್ರವಣ ಅಭಿಜಿತು ।**
**ಸದನವೈದಿರೆ ಮಾಳ್ಪ ತೆರದಂದವಲಿ ಹರಿಸೇವೆ ॥**
**ವಿಧಿನಿಷೇಧಗಳೇನು ನೋಡದೆ ।**
**ವಿಧಿಸುತಿರು ನಿತ್ಯದಲಿ ತನ್ನಯ ।**
**ಸದನದೊಳಗಿಂಬಿಟ್ಟು ಸಲಹುವ ಭಕ್ತವತ್ಸಲನು ॥೨೩॥**

**ಪದ್ಯಾರ್ಥ :**—ಉದಯ ವ್ಯಾಪಿನಿದರ್ಶ=ಅಮಾವಾಸ್ಯವು ಉದಯ ವ್ಯಾಪಿಸಿರಬೇಕು, ಮತ್ತು ಪೌರ್ಣಿಮಾ ಅಧಿಕ ಯಾಮವು=ಹುಣ್ಣಿಮಿ ತಿಥಿಯು ಒಂದು ಯಾಮವು ಹೆಚ್ಚಾಗಿರಬೇಕು. ಶ್ರವಣ ಅಭಿಜಿತು ಸದನ ವೈದಿರೆ=ಶ್ರವಣ ನಕ್ಷತ್ರವು ಅಭಿಜಿನ್ ಮುಹೂರ್ತವೆಂದರೆ ೧೫ ಗಳಿಗೆ ಇರಬೇಕು. ಮಧ್ಯಾಹ್ನ ವ್ಯಾಪಿನಿ, ಶ್ರವಣ ಇದ್ದರೆ ಉಪೋಷಣ ಮಾಡ ಬೇಕು ಎಂದು ಶಾಸ್ತ್ರ ನಿಯಮ. ಹೀಗೆ ವಿಷ್ಣುಪಂಚಕ ವ್ರತೋಪೋಷಣ ಮಾಡುವುದು ಶಾಸ್ತ್ರವಿಧಿ, ಅದರಂತೆ ವಿಷ್ಣುಭಕ್ತರಾದವರು, ವಿಧಿನಿಷೇಧ ಗಳೇನು ನೋಡದೆ=ಸಾಮಾನ್ಯ ವಿಧಿ ನಿಷೇಧಗಳನ್ನು ನೋಡದೇ ನಿರಂತರ

ಶುಚಿ ಅಶುಚಿ ಕಾಲದಲ್ಲಿ ಭಗವತ್‌ಸ್ಮರಣ ("ಸಂತತಂ ಚಿಂತಯೇನಂತಂ") ಮಾಡಬೇಕು. ಮತ್ತು ಅಶುಚಿಯಲ್ಲಿ ಸಂಧ್ಯಾ ಗಾಯತ್ರಿ ಜಪ ಭಗವತ್ಪೂಜಾದಿಗಳು ಮಾನಸದಿಂದ ಮಾಡುವದು ವಿಧಿಶಾಸ್ತ್ರಸಮ್ಮತ. ಹೀಗೆ ಸಾಮಾನ್ಯವಾದ ವಿಧಿ ನಿಷೇಧ ನೋಡದೆ ವಿಧಿಸುತಿರು=ಸತ್ಕರ್ಮ ಮಾಡುತ್ತಿರಬೇಕು. ಹೀಗೆ ನಿತ್ಯದಲ್ಲಿ ಭಗವಂತಗೆ ಪ್ರೀತಿಯುಕ್ತ ಕರ್ಮ ಮಾಡಲು, ಭಕ್ತವತ್ಸಲ=ಭಕ್ತರನ್ನು ಕಾಪಾಡುವ ಹರಿಯು, ತನ್ನಯ ಸದನಪೊಳಗಿಂಬಿಟ್ಟು=ತನ್ನ ಮನೆಗಳಾದ ಶ್ವೇತದ್ವೀಪ, ಅನಂತಾಸನ, ವೈಕುಂಠಾದಿಗಳಲ್ಲಿ ಇಂಬುಕೊಟ್ಟು=ಆಶ್ರಯಕೊಟ್ಟು, ಸಲಹುವನು=ಕಾಪಾಡುವನು =ರಕ್ಷಿಸುವನು.

**ಭಾವಸೂಚನ ||** ಉದಯೇತಿ || ವಿದಿಸೇತ್ಯನಂತರಂ || ವಿಧಿಸುತಿರು ನಿತ್ಯದಲಿ ತನ್ನಯ ಸದನಪೊಳಗಿಂಬಿಟ್ಟು ಸಲಹುವ ಭಕ್ತವತ್ಸಲನು ಇತಿ ಶುದ್ಧ ಪಾಠಾಂತರಮ್ ||೨೩||

"ಉದಯಸ್ಪರ್ಶಯುಕ್ ದರ್ಶಃ ಪೌರ್ಣಮಾಸೀ ತು ಯಾಮಿಕಾ || ಮಧ್ಯಾಹ್ನ ವ್ಯಾಪಿನೀ ಶ್ರೋಣಾ ಉಪೋಷ್ಯಾ ವಿಷ್ಣು ತತ್ಪರೈಃ||ವಿಷ್ಣುಪಂಚಕ ನಿರ್ಣಯ ಸಾರೇ ||೨೩||

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

ಭಗವತ್ಸಂಬಂಧಿ ವಿಧಿ ನಿಷೇಧೌ ಅನಾಲೋಚ್ಯ ಉಕ್ತರೀತ್ಯಾ ಕರ್ಮ ಕುರ್ಯಾತ್ ಇತ್ಯೇತತ್ ನಿದರ್ಶಯತಿ "ಉದಯ" ಇತಿ || ಅಮಾಯಾ ಉದಯ ವ್ಯಾಪ್ತಾ ಪೌರ್ಣಿಮಾ ಸಂಬಂಧಾಧಿಕಾಯಾಮೇ ಅಭಿಜಿತ್ ಶ್ರವಣಾಗತೌ ಸೈವ ಯಥಾ" ಇತಿ ಯೋಜ್ಯಮ್ ||೨೩||

## ಕನ್ನಡಾರ್ಥ

ಭಗವಂತನ ಪ್ರೀತಿಗೆ ಕಾರಣವಾಗದ ವಿಧಿನಿಷೇಧಗಳನ್ನು ಆಲೋಚಿಸದೆ ಹಿಂದೆ ಹೇಳಿದಂತೆ ಕರ್ಮವನ್ನು ಮಾಡಬೇಕು. ಎಂಬ ವಿಷಯವನ್ನು ನಿದರ್ಶನದಿಂದ ತಿಳಿಸುತ್ತಾರೆ "ಉದಯ" ಎಂಬ ಪದ್ಯದಿಂದ. ಅಮಾವಾಸ್ಯೆಯು ಉದಯವ್ಯಾಪ್ತವಾಗಿರಬೇಕು. ಪೌರ್ಣಿಮೆಯು ಯಾಮುಕ್ಕಿಂತ

ಅಧಿಕವಾಗಿರಬೇಕು. ಅಭಿಜಿನ್ ಮುಹೂರ್ತದಲ್ಲಿರುವ ಶ್ರವಣ ನಕ್ಷತ್ರವಿರ ಬೇಕು. ಅಂಥ ದಿವಸಗಳಲ್ಲಿ ಉಪವಾಸರೂಪವಾದ ಹರಿಸೇವೆಯನ್ನು ಮಾಡಬೇಕು. ಅಂದರೆ ವಿಷ್ಣುಪಂಚಕ ವ್ರತೋಪವಾಸವನ್ನು ಮಾಡಬೇಕು. ಮುಖ್ಯವಾಗಿ ಹರಿಪ್ರೀತಿಗೆ ಕಾರಣವಾದುವೇ ವಿಧಿ; ಅವನ ಅಪ್ರೀತಿಗೆ ಕಾರಣವಾದುವೇ ನಿಷೇಧ; ಹೀಗೆ ತಿಳಿಯಬೇಕು. ಹೊರತಾಗಿ ಸಾಮಾನ್ಯ ವಾದ ವಿಧಿನಿಷೇಧಗಳನ್ನು ಲಕ್ಷಿಸಬಾರದೆಂದು ತಾತ್ಪರ್ಯ॥೨೩॥

**ಅವತರಣಿಕಾ :**—ವಿಧಿವತ್ತು ಕರ್ಮವಾದರೂ ಭಗವಂತನಿಗೆ ಪ್ರೀತ್ಯಾಗದಿರುವ ಕಾಲವಿಶೇಷಗಳಲ್ಲಿ ಆ ಕರ್ಮ ಬಿಡುವುದು. ಶಾಸ್ತ್ರನಿಯಮ ದಂತೆ ನಿಂದ್ಯವಾದ ದ್ರವ್ಯದಲ್ಲಿ ಆಶಾ ಮಾಡದೇ ಬಿಡಬೇಕೆಂದು ಉಪದೇಶಿ ಸುತ್ತಾರೆ.

**ನಂದಿವಾಹನರಾತ್ರಿ ಸಾಧನೆ ।**
**ಬಂದ ದ್ವಾದಶಿ ದಶಿಮಿ ಪೈತೃಕ ।**
**ಸಂಧಿಸಿಹ ಸಮಯದಲಿ ಶ್ರವಣವ ತ್ಯಜಿಸುವಂತೆ ಸದಾ ॥**
**ನಿಂದ್ಯರಿಂದಲಿ ಬಂದ ದ್ರವ್ಯವ ।**
**ಕಂದೆರೆದು ನೋಡದಲೆ ಶ್ರೀಮದ ।**
**ನಂದ ತೀರ್ಥಾಂತರ್ಗತನ ಸರ್ವತ್ರ ಭಜಿಸುತಿರು ॥೨೪॥**

**ಪದ್ಯಾರ್ಥ :**—ನಂದಿವಾಹನರಾತ್ರಿ=ಶಿವರಾತ್ರಿ, ಮಾಘ ಕೃಷ್ಣ ಚತುರ್ದಶಿ ರಾತ್ರಿ ವೈಷ್ಣವರು ಉಪೋಷಣ ಮಾಡಬಾರದೆಂದು ಶಾಸ್ತ್ರ ನಿಯಮ. ಏಕೆಂದರೆ ಇದು ಅವೈಷ್ಣವವ್ರತ. ಸಾಧನ ದ್ವಾದಶಿ ದಿನ ಶ್ರವಣಾ ನಕ್ಷತ್ರ ಬರಲು, ಮತ್ತು ದಶಿಮಿ=ದಶಮಿ ತಿಥಿ ದಿನ ಶ್ರವಣಬರಲು ಪೈತೃಕ ಸಂಧಿಸಿಹ ಸಮಯದಲಿ=ಪಿತೃಗಳ ಶ್ರಾದ್ಧ ದಿವಸ ಶ್ರವಣಾ ನಕ್ಷತ್ರ ಬಂದಿರಲು, ಶ್ರವಣವ ತ್ಯಜಿಸುವಂತೆ ಸದಾ=ವಿಷ್ಣುಪಂಚಕ ವ್ರತ ಮಾಡು ವರು ಶ್ರವಣೋಪವಾಸಬಿಡಬೇಕಂತ ಶಾಸ್ತ್ರನಿಯಮ, ಯದ್ಯಪಿ ಶ್ರವಣೋಪ ವಾಸವು ಹರಿಗೆ ಪ್ರೀತಿಯಾದರೂ ವೈಷ್ಣವರಿಗೆ ಶಿವರಾತ್ರಿ ಉಪವಾಸ ನಿಷಿದ್ಧ ಸಾಧನ ದ್ವಾದಶಿ ಸಾಧಿಸುವದು ಅತ್ಯಾವಶ್ಯಕ, ದಶಮಿ ವ್ರತ ಏಕಭುಕ್ತ ಆವಶ್ಯಕ, ಪಿತೃಗಳ ಶ್ರಾದ್ಧ ಪಿಂಡಪ್ರದಾನ. ಪಿತೃಶೇಷ ಗ್ರಹಣ ಮಾಡುವದು

ಮುಖ್ಯ ಕಾರಣ ಈ ೪ ದಿನಗಳಲ್ಲಿ ಶ್ರವಣ ಬಂದಾಗ್ಗೆ ಉಪೋಷಣ ಮಾಡ ಬಾರದೆಂದು ನಿಯಮ. ಇದರಂತೆಯೆ, ನಿಂದ್ಯರಿಂದಲಿ ಬಂದ ದ್ರವ್ಯವ ಕಂಡೆರೆದು ನೋಡದಲೆ=ಯದ್ಯಪಿ ದ್ರವ್ಯವು ಧರ್ಮಕ್ಕೆ ಉಪಯೋಗವಾದರೂ ವೈಷ್ಣವನು, ನಿಂದ್ಯರಾದ ಅವೈಷ್ಣವರಿಂದ ಬಂದ ದಾನವು ದ್ರವ್ಯವನ್ನು, ಕಣ್ಣಿನಿಂದ ಸಹಿತ ನೋಡದಲೆ ತ್ಯಜಿಸಬೇಕು. "ಕೊಡೋದಿಲ್ಲ ಶೈವರಿಗೆ ದಾನವನು ಹಿಡೋದಿಲ್ಲವರದು" ಎಂದು ಪ್ರಾಣೇಶದಾಸರ ವಚನ. ನಿಂದ್ಯರ ದ್ರವ್ಯ ಸ್ವೀಕರಿಸುವುದರಿಂದ ಅಂಥ ದುರ್ಬುದ್ಧಿಯೇ ಪುಟ್ಟಿ ಅನರ್ಥಕ್ಕೆ ಕಾರಣ ವಾಗುವುದು. ಕಾರಣ ನಿಂದಾಸ್ಪದವಾದ ಹಣವನ್ನು ಸರ್ವಥಾ ವೈಷ್ಣವರು ಸ್ವೀಕರಿಸಬಾರದು. ಶ್ರೀಮದಾನಂದತೀರ್ಥಾಂತರ್ಗತನ ಸರ್ವತ್ರ ಭಜಿಸು ತಿರು=ಶ್ರೀಸಂಪತ್ಕರವಾದ ಮೋಕ್ಷವಲ್ಲಿ ಆನಂದವನ್ನು ಕೊಡತಕ್ಕ ಶಾಸ್ತ್ರವನ್ನು ರಚಿಸಿದ ಮಧ್ವಾಂತರ್ಯಾಮಿ ಶ್ರೀಹರಿಯೇ ಮದ್ಬಿಂಬನೆಂದು ಸರ್ವ ಕಾಲದೇಶಗಳಲ್ಲಿ ಭಜನೆ ಮಾಡು ಪೂಜೆ ಮಾಡೆಂದು ಉಪದೇಶಿಸುತ್ತಾರೆ.

**ಭಾವಸೂಚನ** ॥ ನಂದಿವಾಹನೇತಿ ॥ ಈ ದೃಷ್ಟಾಂತಗಳು ಅನ್ಯಾಯಾರ್ಜಿತ ಧನ ನೋಡಬಾರದೆಂಬ ವಿಷಯದಲ್ಲಿ ವಿಷ್ಣುಪಂಚಕವ್ರತ ಮಾಡುವರಿಗೆ ಆವಶ್ಯಕವಾದ ಶ್ರವಣೋಪವಾಸ, ಶಿವರಾತ್ರಿ ಸಾಧನ ದ್ವಾದಶೀ ವೈತೃಕ ಯುಕ್ತವಾದ ದಶಮಿಗಳಲ್ಲೆ ಹ್ಯಾಂಗ ಬಿಡಬೇಕೋ ಹಾಂಗ, ಶಿವರಾತ್ರಿಯಲ್ಲಿ ಮಾಡಿದ ಉಪವಾಸಾದಿಗಳಷ್ಟು, ಶ್ರೀಚಂದ್ರಲಲಾಮ ಪ್ರೀತ್ಯಾಧಾಯಕೌ, ಆತನ ಅನುಗ್ರಹಾಕಾಂಕ್ಷಿಗಳಾದ ಭಾಗವತರು ಹ್ಯಾಂಗ ಉಲ್ಲಂಘಿಸಬೇಕೆಂದರೆ ಅವತ್ರಿನ ಉಪವಾಸ ಶ್ರೀಗಾರುಡಸ್ಕಾಂದ ಪಂಚರಾತ್ರಾದಿಗಳಲ್ಲಿ ಒಟ್ಟು ವಿಪ್ರತಿಷಿದ್ಧವಾಗಿದೆ. "ದಶಮೀ ದ್ವಾದಶ್ಯೋಃ ಶ್ರವಣಸಂಗತತ್ವೇಪಿ ನೋಪವಾಸಃ ಪ್ರಶಸ್ಯತೇ ಇತ್ಯೇತದಪಿ ತತ್ರೈವೋಕ್ತಂ ತಥಾ ಹಿ ॥ ಉಕ್ತಂ ಚ ಗಾರುಡೇ॥ "ಪ್ರಮಾದಾಚ್ಛಿವರಾತ್ರಿಂ ತು ಯೇ ಕುರ್ವಂತಿ ನರಾಧಮಾಃ ॥ ನರಕೇ ಪಚ್ಯಮಾನಾಸ್ತೇ ಯಾವಚ್ಚಂದ್ರದಿವಾಕರಾವಿತಿ॥ಆನಂದಾಕರೇ ಚ॥ಮಾಸೇ ಮಾಘೇಸಿತೇ ಪಕ್ಷೇ ಚತುರ್ದಶ್ಯಾಂ ಶಿವವ್ರತಂ॥ಯದ್ಯಪಿ ಶ್ರವಣೋಪೇತಂ ನೋಪೋಷ್ಯಂ ವಿಷ್ಣುತತ್ಪರೈರಿತಿ ಸ್ಕಾಂದೇ ಚ॥ಯದ್ಯಪಿ ಶ್ರವಣೋಪೋಷ್ಯಾ ಮಾಘೇ ಕೃಷ್ಣ ಚತುರ್ದಶೀ ॥ ತಥಾಪಿ ನೈವ ಸೋಪೋಷ್ಯಾ ವಿಷ್ಣುಭಕ್ತೈಃ

ಕದಾಚನೇತಿ।। ಸ್ಮೃತಿಸಂಗ್ರಹೇ ಪಾಂಚರಾತ್ರೇ ಚ।।ಶಿವರಾತ್ರಿ ಚತುರ್ದಶ್ಯಾಂ ಶೋಣಾಯೋಗೋ ಭವೇದ್ಯದಿ।।ಸಾ ಶೋಣಾ ವಿಷ್ಣುಭಕ್ತೈಸ್ತು ನೋಪೋಷ್ಯಾ ವಿಷ್ಣುಸಂಭವೇತಿ ।। ದ್ವಾದಶ್ಯಾಂ ಚ ದಶಮ್ಯಾಂ ತು ನೋಪೋಷ್ಯಾ ವಿಷ್ಣು ತತ್ಪರೈಃ।। ಶಿವರಾತ್ರ್ಯಾಂ ನೋಪವಸೇಚ್ಛ್ರವಣಾ ಸಂಗತಾಪಿ ವೇತಿ" ಶಿವ ರಾತ್ರಿ ನಿರ್ಣಯೇ।।ಅತಸ್ತದ್ವಾಸರೇ ಉಪವಾಸೋ ನ ಹರಪ್ರೀತಿದ ಇತ್ಯುಕ್ತಂ ಭವತಿ ।। "ಪಿತ್ರಬ್ಧೇ ರೌದ್ರಿಕಾಬ್ಧೇ ಚ ಸಾಧನ ದ್ವಾದಶೀ ದಿನೇ ।। ದಶಮ್ಯಾಂ ಚೈವ ವಿಬುಧೈರ್ನೋಪೋಷ್ಯಾ ವಿಷ್ಣುತತ್ಪರೈರಿತಿ **ಬ್ರಾಹ್ಮೇ ।। ವಿಷ್ಣು ಪಂಚಕನಿರ್ಣಯೇಪ್ಯುಕ್ತಂ।।** "ವಿಷ್ಣುವ್ರತಾಭಿಮಾನಾದ್ವಾ ಶ್ರವಣೇ ಚಾಭಿ ಮಾನತಃ।। ಯಃ ಕುರ್ಯಾದ್ವಿಷ್ಣುಭಕ್ತಸ್ತು ವಿಷ್ಣುದ್ರೋಹೀ ನ ಸಂಶಯಃ ಸ ತತ್ಫಲಂ ಶಿವೇ ದತ್ವಾ ಯಾತಿ ಘೋರ ಮಹತ್ತಮು ಇತಿ"

"ವಿಷ್ಣುವ್ರತಸ್ಥೋ ರಾಜೇಂದ್ರ ಮಾತಾಪಿತೃ ಮೃತೇಹನಿ।।ಕುರ್ಯಾದ್ಧಿ ವಿಧಿವತ್ ಶ್ರಾದ್ಧಂ ತಚ್ಛೇಷಂ ಭೋಜಯೇತ್ ಸುಧೀಃ।।ಅನ್ಯಥಾ ಕರ್ಮ ಲೋಪಃ ಸ್ಯಾದ್ವ್ರತಭಂಗೋಪಿ ಜಾಯತೇ ಇತಿ ।।೨೩।।

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ವ್ಯತಿರೇಕಂ ಆಹ "ನಂದಿವಾಹನ" ಇತಿ ।। "ಸಾಧನೆ" ಇತಿ ದ್ವಾದಶ್ಯ ಹೇತುಃ ।। ಏವಂ ಉತ್ತರತ್ರ ಜ್ಞೇಯಮ್ ।।೨೪।।

## ಕನ್ನಡಾರ್ಥ

ಶ್ರವಣೋಪವಾಸವನ್ನು ಯಾವಾಗ ಮಾಡಬಾರದು ಎಂಬುದರ ದೃಷ್ಟಾಂತದಿಂದ ನಿಂದ್ಯರಿಂದ ಬಂದ ದ್ರವ್ಯವನ್ನು ವರ್ಜಿಸಬೇಕು ಎಂದು ಹೇಳುತ್ತಾರೆ "ನಂದಿವಾಹನ" ಎಂಬ ಪದ್ಯದಿಂದ.

ಇಲ್ಲಿ "ಸಾಧನೆ ಬಂದ ದ್ವಾದಶಿ" ಎಂಬಲ್ಲಿ 'ಸಾಧನೆ ಬಂದ' ಎಂಬ ಪದವು ದ್ವಾದಶೀ ಪಾರಣೆಯನ್ನು ಬಿಡದಿರುವುದರಲ್ಲಿ ಕಾರಣವನ್ನು ಹೇಳುತ್ತದೆ. ಅಂದರೆ ಸಾಧನೀ ದ್ವಾದಶಿಯಿರುವಾಗ ಶ್ರವಣವನ್ನು ಬಿಡಬೇಕು. ಅಂತ ತಾತ್ಪರ್ಯ. ಇದರಂತೆ ಮುಂದಿನ ಸಂದರ್ಭಗಳಲ್ಲಿಯೂ ಜೋಡಿಸಬೇಕು. ।।೨೪।।

**ಅವತರಣಿಕಾ :**--ಹಿಂದಿನ ಎರಡು ಪದ್ಯಗಳಲ್ಲಿ ವಿಷ್ಣುಪ್ರೀತಿಯಾದ ಕರ್ಮವನ್ನು ಮಾಡಬೇಕು. ಅಪ್ರೀತಿಯಾದ ಕರ್ಮವನ್ನು ಬಿಡುವದು, ಅಂದರೆ ಶ್ರೀಹರಿಯ ಗುಣೋತ್ಕರ್ಷಪೂರ್ವಕ ಸ್ತೋತ್ರ ಮಾಡುವರಿಗೆ, ಸುದಾಮನಗೊಲಿದಂತೆ ಒಲಿದು ಅಖಿಳಾರ್ಥಗಳನ್ನು ಕೊಡುವ ಶ್ರೀಹರಿಯ ಸ್ತೋತ್ರಗೈಯ್ಯುತ್ತಾರೆ.

**ಶ್ರೀ ಮನೋರಮ ಮೇರು ತ್ರಿಕಕು।**
**ಬ್ಧಾಮ ಸತ್ಕಲ್ಯಾಣಗುಣ ನಿ।**
**ಸ್ಸೀಮ ಪಾವನನಾಮ ದಿವಿಜೋದ್ದಾಮ ರಘುರಾಮ॥**
**ಪ್ರೇಮಪೂರ್ವಕ ನಿತ್ಯ ತನ್ನ ಮ।**
**ಹಾ ಮಹಿಮೆಗಳ ತುತಿಸುವರಿಗೆ ಸು।**
**ದಾಮಗೊಲಿದಂದದಲಿ ಅಖಿಳಾರ್ಥಗಳ ಕೊಡುತಿಪ್ಪ॥೨೫॥**

**ಪದ್ಯಾರ್ಥ :**—ಶ್ರೀಮನೋರಮ=ಸಂಪತ್ಕರಳಾದ ಶ್ರೀ ಲಕ್ಷ್ಮೀ ದೇವಿಯರ ಮನಕೆ ಆಹ್ಲಾದಕರನು, ಮೇರು=ಜಗತ್ತಿನ ವಿಶಿಷ್ಟಕಾರ್ಯ ನಡೆಸಲು ಬ್ರಹ್ಮಾದಿ ದೇವತೆಗಳಿಂದ ಒಂದು ರೂಪದಿ ಮೇರು ಪರ್ವತದಲ್ಲಿ ನೆಲಸಿಪ್ಪನು. ಇವೇ ಹರಿಯು. ತ್ರಿಕಕುಬ್ಧಾಮ=ತಿಸ್ರಃ ಕಕುಭಃ ವೈಕುಂಠಾ ದಯೋ ಲೋಕಾ ಯಸ್ಯೇತಿ ತ್ರಿಕಕುಪ್॥ಅನಂತಾಸನ ವೈಕುಂಠ ನಾರಾಯಣ ಪುರಾಣಿ ತು॥ತ್ರೀಣಿ ಧಾಮಾನಿ ವೈ ವಿಷ್ಣೋಸ್ತ್ರಿಲೋಕಾದ್ಬಹಿರೇವ ಹಿ ಇತಿ ಬ್ರಹ್ಮಾಂಡೇ ॥ (ವಿ.ರಾ.) ಶ್ವೇತದ್ವೀಪ ಅನಂತಾಸನ ವೈಕುಂಠ ಮೂರು ನಿತ್ಯಲೋಕ ಮನೆಯಾಗಿ ಉಳ್ಳ ಶ್ರೀಹರಿಯು ಸತ್ಕಲ್ಯಾಣಗುಣ=ಜ್ಞಾನ ಆನಂದಾದಿ ಅನಂತ ಮಂಗಳಕರ ಗುಣವುಳ್ಳವ, ನಿಸ್ಸೀಮ=ಮೇರೆ ಇಲ್ಲದ, ಸಾಟಿ ಇಲ್ಲದ ಹರಿಯು, ಪಾವನ ನಾಮ=ಶ್ರೀಹರಿಯ ಅನಂತ ನಾಮ ಗಳೆಲ್ಲವೂ ಪವಿತ್ರವಾದವು ಮಂಗಳಕರವಾದುವು. ದಿವಿಜೋದ್ದಾಮ= ಬ್ರಹ್ಮಾದಿದೇವತೆಗಳಿಂದ ಶ್ರೇಷ್ಠನಾದವನು, ರಘುರಾಮ=ಸೂರ್ಯವಂಶಜ ರಘುರಾಜನ ಕುಲದಲ್ಲಿ ಅವತರಿಸಿದ ರಾಮರೂಪಿ ಹರಿಯು, ರಾಮಃ= ಯೋಗಿನೋಽಸ್ಮಿನ್ ರಮಂತ ಇತಿ ರಾಮಃ ॥ ರಮಣೀಯತ್ವಾದ್ರಾಮಃ ॥ ಆನಂದರೂಪತ್ವಾತ್ ಪೂರ್ಣತ್ವಾತ್ ಲೋಕರಮಣತ್ವಾಚ್ಚ ರಾಮಃ॥ಆನಂದ

ರೂಪೋ ನಿಷ್ಪರಿಮಾಣ ಏವ ಲೋಕಶ್ವೈತ್ರಸ್ಮಾದ್ರುಪತೀರ್ತೇನ ರಾಮಃ ಇತಿ ಶಾಂಡಿಲ್ಯ ಶಾಖಾಯಾಂ || (ವಿ.ರಾ.ವಿ.ಸ.) ಪ್ರೇಮಪೂರ್ವಕ ತನ್ನ ಮಹಾ ಮಹಿಮೆಗಳ ತುತಿಸುವರಿಗೆ=ಮೇಲೆ ವಿವರಿಸಿದಂತೆ ಭಗವದ್ಗುಣಾತಿಶಯ ಗಳನ್ನು ಮಹಾಭಕ್ತಿಯಿಂದ ಸ್ತೋತ್ರ ಮಾಡುವರಿಗೆ; ಸುದಾಮಗೊಲಿ ದಂವಗಲಿ= ಶ್ರೀಕೃಷ್ಣನ ಬಾಲಮಿತ್ರನ ಬಪನ ಒಪ್ಪಿಡಿ ಅವಲಿಗೆ ಒಲಿದಂತೆ ಒಲಿದು ಸಕಲ ಸಂಪದವನ್ನು ಕೊಡುವನು.

ಭಾವಸೂಚನ || ಶ್ರೀಮನೋರಮೇತಿ ||೨೫||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಶ್ರೀ' ಇತಿ||'ತ್ರೀಣಿ' ಶ್ವೇತದ್ವೀಪಾದೀನಿ | 'ನಿಃಸೀಮ' ಅಪರಿಮಿತ|| ಉದ್ದಾಮ ಚೇಷ್ಟ ||೨೫||

## ಕನ್ನಡಾರ್ಥ

"ತ್ರಿಕಕುಬ್ಧಾಮ" ಎಂದರೆ ಶ್ವೇತದ್ವೀಪ ಮುಂತಾದುವುಗಳಲ್ಲಿರುವವ ನೆಂದು ಅರ್ಥ. "ನಿಃಸೀಮ" ಅಪರಿಮಿತ "ಉದ್ದಾಮ" ಉದ್ದಾಮ ವ್ಯಾಪಾರಗಳುಳ್ಳವನು ||೨೫||

**ಅವತರಣಿಕಾ :—**ಹಿಂದಿನ ಪದ್ಯದಲ್ಲಿ ಭಗವಂತನ ಜ್ಞಾನ ಆನಂದಾದಿ ಗುಣಪೂರ್ಣನ ಗುಣಗಳನ್ನು ಹೇಗೆ ತಿಳಿದು ಜ್ಞಾನಿಗಳು ಗಾನ ಮಾಡು ತ್ತಾರೆಂದರೆ ದೃಷ್ಟಾಂತಪೂರ್ವಕ ಈ ಪದ್ಯದಿಂದ ಉಪದೇಶಿಸುತ್ತಾರೆ.

**ತಂದಿ ತಾಯ್ಗಳ ಕುರುಹನರಿಯದ|**
**ಕಂದ ದೇಶಾಂತರದೊಳಗೆ ತ|**
**ನ್ನಂದದಲಿಯಿಪ್ಪನರ ಜನನೀ ಜನಕರನು ಕಂಡು ||**
**ಹಿಂದೆ ಯನ್ನಯ ಪಡೆದವರು ಈ |**
**ಯಂದದಲಿ ಯಿಪ್ಪರಲ ನಾನವ |**
**ರೆಂದು ಕಾಣುವೆನೆನುತ ಹುಡುಕುವ ತೆರದಿ ಕೋವಿದರು**
**||೨೬||**

**ಪದ್ಯಾರ್ಥ :**—ತಂದಿ=ಈ ಸ್ಥೂಲದೇಹ ಜನಿಸಲು ಕಾರಣನಾದ ಪಿತಾ ತಂದೆ, ಮತ್ತು ತಾಯಿ ಹಡದಮ್ಮ ಈ ಉಭಯರ ಕುರುಹುನರಿಯದ ಕಂದ= ಇವನನ್ನು ಹೆತ್ತು ಕಂದ=ಶಿಶು ಇರುವಾಗಲೇ ಬಿಟ್ಟು ದೇಶಾಂತರಕ್ಕೆ ಹೋಗಿದ್ದಾರೆ. ಈ ಕಂದಮ್ಮ ತಂದೆತಾಯಿಗಳ ಗುರುತು ಸಹ ಅರಿಯ ತಿಳಿಯನು, ದೇಶಾಂತರದೊಳಗೆ=ಎರಡನೇ ದೇಶ ಅಥವಾ ದೂರದ ಊರಿನಲ್ಲಿ, ತನ್ನಂದದಲಿ ಇಪ್ಪವರ=ಆ ಹುಡುಗ ಬಾಲಕ ತನ್ನಂತೆ ದೇಹ ಮುಖ ನಾಸಾದಿ ಮುಖ ಪೋಲುವ ಚಿಹ್ನವನ್ನು ಕಾಣುತ್ತ ಹಿಂದೆಯೆನ್ನನು ಪಡೆದವರು=ಈ ಪೂರ್ವದಲ್ಲೆನ್ನನು ಹೆತ್ತು ನನ್ನಿಂದ ಅಗಲಿಹೋದವರು, ಈಯಂದದಲಿ ಇಪ್ಪರಲ=ಈಗ ದೇಶಾಂತರದಲಿ, ನನ್ನ ದೇಹ ಹೋಲಿಕೆಯಂತೆ ಇರುವರನ್ನು, ಅಲ=ನಿಶ್ಚಯವಾಗಿ, ನಾನವರೆಂದು ಕಾಣುನೆನೆನುತ=ನನ್ನಂತಿರುವನಪ್ಪ ಅಮ್ಮನನ್ನು ಯಾವಾಗ್ಗೆ ಕಂಡೇನು ಎಂಬ ಹಂಬಲದಿಂದ, ಹುಡುಕುವಂತೆಯೇ, ಕೋವಿದರು ಎಂಬುದು ಮುಂದಿನ ಪದ್ಯಕ್ಕೆ ಅನ್ವಯ.

**ಭಾವಸೂಚನ :**—ತಂದೇತಿ ॥ ಕುರುಹು=ಪರಿಚಿತಿ, ಕಂದ=ಸಣ್ಣವ ॥೨೬॥

**ವಿಶೇಷ ಸೂಚನೆ :**—ತಂದೆತಾಯ್ಗಳು ಎನ್ನಂದದಲಿ ಈ ದೃಷ್ಟಾಂತ ಪದಗಳು ದ್ರಾಷ್ಟಾರ್ಂತಿಕಕ್ಕೆ ಬಹು ಅನ್ವರ್ಥಕವಾಗಿರುತ್ತವೆ. ಸಾಧನ ಮಾಡಿ ಬಿಂಬನನ್ನು ಕಾಂಬುವ ಹಂಬಲ ಜೀವಿಗಳ ಬಿಂಬ=ಎನ್ನಂದದಲಿ= ನನ್ನ ಸ್ವರೂಪದಂತೆ ಆತ್ಮನಾಮ ಬಿಂಬಹರಿಯೇ ಸೃಷ್ಟಿಗೆ ತರಲಿಕ್ಕೆ ರಮೆಯ ದ್ವಾರಾ ಲಿಂಗ ಉಪಚಯ ಮಾಡಿ, ಸೃಷ್ಟಿಗೆ ತಂದ ಮುಖ್ಯ ತಂದೆತಾಯ್ಗಳು ಎಂದು ಬಹು ರಹಸ್ಯಾಭಿಪ್ರಾಯ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅನವರತಂ ಶ್ರೀಕಮಲಾಪತಿ ಮುಹುಃಶ್ರವಣಮನನಾದಿಕಂ ಅವಶ್ಯಂ ಅನುಷ್ಠೇಯಂ ಇತ್ಯತ್ರ ಅಪೂರ್ವ ದೃಷ್ಟಾಂತದ್ವಯಂ ಪದ್ಯ ದ್ವಯೇನ (ದ್ವಂದ್ವೇನ) ಆಹ "ತಂದೆ" ಇತಿ ॥

"ಕುರುಹು" ಗುರುತು॥"ತಂದಃ" ಬಾಲಃ॥"ತನ್ನಂದದಲಿ" ಸ್ವಸಾತಾ ಪಿತೃವತ್॥ಇಪ್ಪರಲ-ಇರುವರು. "ಪುಡುಕುವ" ಹುಡುಕುವ॥೨೬॥

## ಕನ್ನಡಾರ್ಥ

ಶ್ರೀಕಮಲಾಪತಿ ನಾರಾಯಣನ ವಿಷಯಕವಾದ ಕಥಾಶ್ರವಣ ಮನನ ಮುಂತಾದವುಗಳನ್ನು ಯಾವಾಗಲೂ (ಸದಾ) ಅವಶ್ಯವಾಗಿ ಅನುಷ್ಠಿಸಲೇ ಬೇಕೆಂಬ ವಿಷಯದಲ್ಲಿ ಅಪೂರ್ವವಾದ ಎರಡು ದೃಷ್ಟಾಂತಗಳನ್ನು ಈ ಎರಡು ಪದ್ಯಗಳಿಂದ ಹೇಳುತ್ತಾರೆ. "ತಂದ" ಎಂಬ ಪದ್ಯದಿಂದ. "ಕುರುಹು" ಗುರುತು. "ತನ್ನಂದದಲಿ" ಎಂಬ ವಾಕ್ಯದ ಅಭಿಪ್ರಾಯ. "ತನ್ನಂತಿರುವ ಬಾಲಕರ ತಂದೆತಾಯಿಗಳಂತೆ ತನಗೂ ತನ್ನ ತಾಯಿತಂದೆಗಳಿರುವರು" ಎಂಬುದಾಗಿ ॥೨೬॥

**ಅವತರಣಿಕಾ :**—ಹಿಂದಿನ ಪದ್ಯದಿಂದ ಕೋವಿದರು ಜ್ಞಾನಿಗಳು ಭಗವಂತನಾದ ಬಿಂಬರೂಪಿ ಹರಿಯನ್ನು ಕಾಣುವ ಸಾಧನವನ್ನು ಹೇಗೆ ಪುಡುಕುವದೆಂಬುದು ಬಹು ಚನ್ನಾಗಿ ವಿವರಿಸುತ್ತಾರೆ.

**ಶ್ರುತಿ ಪುರಾಣ ಸಮೂಹದೊಳು ಭಾ।**
**ರತ ಪ್ರತಿಪ್ರತಿ ಪದಗಳೊಳು ನಿ।**
**ರ್ಜಿತನ ಗುಣರೂಪಗಳ ಪುಡುಕುತ ಪರಮಹರುಷದಲಿ॥**
**ಮತಿಮತರು ಪ್ರತಿ ದಿವಸ ಸಾ।**
**ರಸ್ವತ ಸಮುದ್ರದಿ ಶಫರಿಯೆಂದದಿ।**
**ಸತತ ಸಂಚರಿಸುವರು ಕಾಣುವ ಲವಲವಿಕೆಯಿಂದ॥೨೭॥**

**ಪದ್ಯಾರ್ಥ :**—ಕೋವಿದರು=ಜ್ಞಾನಿಗಳು (ಹಿಂದಿನ ಪದ್ಯದಿಂದ ಅನ್ವಯ) ಏನು ಮಾಡುತ್ತಾರೆಂದರೆ ಶ್ರುತಿ ಪುರಾಣ ಸಮೂಹದೊಳು= ವೇದಗಳ ಒಂದೊಂದು ಋಕ್ಕಿನ ಪುರಾಣ ಸಮೂಹಗಳೊಳು=ಅಷ್ಟಾದಶ ಪುರಾಣ ಉಪಪುರಾಣಗಳ ಗುಂಪಿನಲ್ಲಿ, ಭಾರತ ಪ್ರತಿಪ್ರತಿಪದಗಳೊಳು=ಇತಿ ಹಾಸವಾದ "ಭಾರತಃ ಪಂಚಮೋ ವೇದಃ" ಎಂಬಂತೆ ಮಹಾಭಾರತ ಪ್ರತಿ

ಪ್ರತಿ ಪದಗಳಲ್ಲಿ ಶ್ರೀಹರಿಯ ಮಾಹಾತ್ಮ್ಯ ಇರುವುದು. ನಿರ್ಜಿತನ=ಯಾರಿಂದಲೂ ಜಯಿಸಲ್ಪಡದೇ ಇದ್ದ ಶ್ರೀಹರಿಯ, ಗುಣ=ಆನಂದಾದಿ ಗುಣಗಳನ್ನು, ರೂಪಗಳು=ಅನಿರುದ್ಧಾದಿ ರಾಮಕೃಷ್ಣಾದಿ ಅನಂತ ರೂಪಗಳನ್ನು, ಪುಡುಕುತ್ತ=ವೇದ-ಪುರಾಣ ಭಾರತದಲ್ಲಿ ಹುಡುಕುತ್ತ ಅಂದರೆ, ಹೊಸ ಹೊಸ ಗುಣ ರೂಪಗಳನ್ನು ಶೋಧಿಸಿ ತತ್ಕಾರ್ಯ ತಿಳಿದು ಸಂಕೀರ್ತನೆ ಮಾಡುತ್ತ, ಮತಿವಂತರು=ಜ್ಞಾನವಂತರು, ಪ್ರತಿ ದಿವಸ=ಪ್ರತಿ ನಿತ್ಯ ದಿನೆ ದಿನೆ ಬಿಡದೆ, ಸಾರಸ್ವತ ಸಮುದ್ರದಿ=ಸರಸ್ವತಿಗೆ ಸಂಬಂಧವಾದ ಶಾಸ್ತ್ರ ಒಳ್ಳೇ ಬುದ್ಧಿಯಿಂದ ನಿಶ್ಚಿತವಾದ ಬುದ್ಧಿ ಸಮುದ್ರದಲ್ಲಿ, ಶಫರಿಯೆಂದದಿ=ಮೀನಿನಂತೆ ಬುದ್ಧಿವಂತರು ಕಾಣುವ ಲವಲವಿಕೆಯಿಂದ=ಶ್ರೀಹರಿಯನ್ನು ಕಾಣುವ ಹಂಬಲದಿಂದ ಸಂಚಾರ ಮಾಡುವರು. "ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ॥ ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ" ದಾಸರ ವಚನಾನುಸರಿಸಿ ಶಾಸ್ತ್ರಾರ್ಥ ವಿಚಾರವು ಅತ್ಯಾವಶ್ಯವಾದುದು, ಶಾಸ್ತ್ರಶ್ರವಣ, ಮನನ, ಜಿಜ್ಞಾಸಾ ಮುಖ್ಯ ಬೇಕು.

**ಭಾವಸೂಚನ :—** ಶ್ರುತೀತಿ॥ ಸಾರಸ್ವತ ॥ ಅನವರತ ॥ ಶಫರ ಮೀನ ॥ ೨೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶ್ರುತಿ ಇತಿ ॥ "ಸಾರಸ್ವತ" ಇತಿ ॥ "ಶಫರಿ" ಮತ್ಸ್ಯಃ ॥ ಪ್ರಮಾಣಂ ತು "ಯತ್ ಕೀರ್ತನಾತ್ ಯಚ್ಛ್ರವಣಾಚ್ಚ ಗಾನಾತ್ ಯತ್ಸಂಸ್ಮೃತೇಶ್ಚಾಪಿ ಯದರ್ಚನೇನ ॥ ಸರ್ವೇಷ್ಟಸಿದ್ಧಿಃ ಸತತಂ ಪ್ರಜಾಯತೇ ಸ ಏಕ ಏವಾಸ್ತಿ ರಮಾಪತಿಃ ಪ್ರಭುಃ॥೧॥ ಯತ್ ಶ್ರೂಯಮಾಣಂ ಹರತೇ ಮನಾಂಸಿ ಯತ್ಪಾನತಃ ಸ್ಯಾದಧಿಕಾ ಪಿಪಾಸಾ ॥ ನವೋ ನವೋ ಯತ್ರ ರಸಶ್ಚ ಲಭ್ಯತೇ ಕೋ ನಾಮ ತಸ್ಮಾದ್ ವಿರಜೇತ್ ರಸಜ್ಞಃ ॥೨॥ ಏವಂ ವಿಧಾತ್ ಯೋ ಹರಿಸತ್ಕಥಾಮೃತಾತ್ ವಿರಕ್ತ ಚಿತ್ತಃ ಪಶುರೇವ ಸಾಕ್ಷಾತ್ ॥ ಅಶೃಂಗ ಪುಚ್ಛಃ ದ್ವಿಪತೇಥ ತಂ ಯೋ ನಹೀ ತಸ್ಸ್ಯಾತ್ ತಮೃತೇ ನಾಕಿಂ ಚ ಏತಾವತಾದಿಂ ಸಕಲೇಶ್ವರಾಹಂ ಯಚ್ಛ್ರೀಪತೇಃ ಸದ್ಗುಣವೀರ್ಯಸಂಘಾನ್

ಕೃಣ್ವನ್ ಪ್ರಗಾಯನ್ ಅಥ ಕೀರ್ತಯನ್ ಚ ತೃಪ್ಯಾಮಿ ನಾದ್ಯಾಪಿ ನವಂ ನವಂ ಸ್ವದನ್ ॥ ಇತಿ ದ್ವಾದಶ ವಿಷ್ಣುರಹಸ್ಯೇ ॥೨೭॥

## ಕನ್ನಡಾರ್ಥ

ಶಫರೀ ಮೀನ, ಭಾರತ ಮುಂತಾದ ಶಾಸ್ತ್ರಸಾಗರದಲ್ಲಿ ಮಿಂದು ಜ್ಞಾನಿಗಳು ಮೀನವಂತೆ ಹರಿಗುಣಾಮೃತವನ್ನು ಆಸ್ವಾದಿಸುತ್ತ ವಿಹರಿಸುವರು ಈ ವಿಷಯದಲ್ಲಿ ಪ್ರಮಾಣಗಳನ್ನು ಹೇಳುತ್ತಾರೆ. "ಯಾರ ಸಂಕೀರ್ತನಗಳಿಂದ, ಶ್ರವಣದಿಂದ, ಗುಣಗಾನಗಳಿಂದ, ಸ್ಮರಣ ಮಾತ್ರದಿಂದ, ಮತ್ತು ಅರ್ಚನದಿಂದ ಭಕ್ತರಿಗೆ ಸತತ ಸರ್ವಾಭೀಷ್ಟವಾಗುವುದೋ ಅವನು ಪ್ರಭುವಾದ ರಮಾಪತಿಯೊಬ್ಬನೇ! ಶ್ರವಣ ಮಾತ್ರದಿಂದ ಮನಸ್ಸನ್ನು ಯಾವುದು ಆಕರ್ಷಿಸುವುದೋ, ಯಾವುದರ ಪಾನಮಾತ್ರದಿಂದ ಇನ್ನಷ್ಟು ಪಾನ ಮಾಡುವ ಅಭಿಲಾಷೆಯು ಇನ್ನೂ ಹೆಚ್ಚಾಗುವುದೋ, ಯಾವುದರಲ್ಲಿ ನೂತನ ನೂತನ ರಸವು ಲಭಿಸುತ್ತದೋ ಅಂಥ ಶ್ರೀಹರಿಯ ಸತ್ಕಥೆಯಲ್ಲಿ ಯಾವ ರಸಜ್ಞನು ಆಸಕ್ತನಾಗುವುದಿಲ್ಲ? ಇಂಥ ಶ್ರೀ ಹರಿಕಥಾಮೃತದಲ್ಲಿ ಅನಾಸಕ್ತವಾದ ಮನಸ್ಸುಳ್ಳವನು ಸಾಕ್ಷಾತ್ ಬಾಲಕೋಡುಗಳಿಲ್ಲದ ಪಶುವೇ ಸರಿ. ಅವನ ಹೊರತು ಈ ಹರಿಕಥೆಯನ್ನು ದ್ವೇಷಿಸುವರಾರು? ಅವನಿಗೆ ನರಕವೇ ಸರಿ! ಹೇ ಶ್ರೀಹರಿಯೇ! ಶ್ರೀಹರಿಯ ಸದ್ಗುಣಗಳ ಸದ್ವೀರ್ಯ ಚರಿತ್ರಗಳ ಪರಂಪರೆಯನ್ನು ಕೇಳಿ, ಅವುಗಳನ್ನು ಗಾಯನ-ಸಂಕೀರ್ತನಗಳನ್ನು ಮಾಡಿದರೂ ಇಂದಿಗೂ ತೃಪ್ತನಾಗುವುದಿಲ್ಲ. ನೂತನನೂತನ ರಸಾವಿಷ್ಕಾರವಾಗುವುದು. ಇದಿಷ್ಟೇ ನನಗೆ ಸಾಕು. ಈ ರೀತಿಯಾಗಿ ವಿಷ್ಣುರಹಸ್ಯ ಹನ್ನೆರಡನೆಯ ಅಧ್ಯಾಯದಲ್ಲಿ ಹೇಳಲಾಗಿರುತ್ತದೆ. ॥೨೭॥

**ಅವತರಣಿಕಾ :**—ಶ್ರೀ ಹರಿಯೇ ಸಕಲ ಕರ್ಮವಿಮೋಚಕನೆಂದು ಅನಂತ ಗುಣೋತ್ಕರ್ಷಣ ಪೂರ್ವಕ ಯಾರು ಸ್ತೋತ್ರ ಮಾಡುವರೋ, ಆಕಳು ಕರುವಿನಲ್ಲಿ ಮಮತೆಯಿಂದ ದೂರದಿಂದ ಓಡಿ ಬಂದು ಮೊಲೆ ಕೊಡುವಂತೆ ಶ್ರೀಹರಿಯು ಭಕ್ತರನ್ನು ರಕ್ಷಿಸುತ್ತಾನೆಂದು ಹೇಳುತ್ತಾರೆ.

**ಮತ್ಸ್ಯಕೇತನ ಜನಕ ಹರಿ ಶ್ರೀ।**
**ವತ್ಸಲಾಂಛನ ನಿಜಶರಣ ಜನ।**
**ವತ್ಸಲ ವರಾರೋಹ ವೈಕುಂಠಾಲಯ ನಿವಾಸಿ॥**
**ಚಿತ್ಸುಖಪ್ರದ ಸಲಹೆನಲು ಗೋ।**
**ವತ್ಸ ಧ್ವನಿಗೊದಗುವ ತೆರದಿ ಪರ।**
**ಮೋತ್ಸಹದಿ ಬಂದೊದಗುವನು ನಿರ್ಮತ್ಸರರ ಬಳಿಗೆ ॥೨೮॥**

**ಪದ್ಯಾರ್ಥ:**—ಮತ್ಸ್ಯಕೇತನ ಜನಕ=ಮತ್ಸ್ಯ ಮೀನವೇ ಧ್ವಜಚಿಹ್ನೆವಾಗಿವುಳ್ಳ ಕಾಮದೇವರ ತಂದೆಯಾದ ಶ್ರೀಕೃಷ್ಣನೇ ಹರಿ=ಬಿಂಬರೂಪಿಯು, ಶ್ರೀವತ್ಸಲಾಂಛನ=ತನ್ನ ವಕ್ಷ ಸ್ಥಳದಲ್ಲಿ ಶ್ರೀ ದೇವಿಲಕುಮಿಗೆ ಆಶ್ರಯ ಕೊಟ್ಟು ಲಕುಮಿಯನ್ನು ಪ್ರೇಮದಿಂದ ಎದೆಯಲ್ಲಿ ಧರಿಸಿದ ಲಕ್ಷಣವುಳ್ಳ, ಶ್ರೀ ವತ್ಸಚಿಹ್ನೆಯಿಂದ ಶೋಭಿತನಾದವ, ನಿಜ ಶರಣಜನ ವತ್ಸಲ=ತನ್ನ ನಿಜ ಭಕ್ತರಾರೋ ಅವರನ್ನು ಕಾಪಾಡುವ ಬಿರುದುಳ್ಳವ, ವರಾರೋಹ= ಉತ್ತಮ ಶ್ರೇಷ್ಠನಾದವನೆಂಬುದಕ್ಕೆ, ವೈಕುಂಠಾಲಯ ನಿವಾಸಿ=ವೈಕುಂಠ ಲೋಕ ಶ್ರೀಭಾಗದಲ್ಲೇ ಸದಾ ಮನೆ ಮಾಡಿ ಕೊಂಡಿರುವವನು, ಚಿತ್‌ಸುಖ ಪ್ರದ=ಭಕ್ತರುಗಳಾದ ಮೋಕ್ಷಯೋಗ್ಯರಿಗೆ ನಿರ್ದುಷ್ಟ ಜ್ಞಾನಾನಂದವನ್ನು ಅಭಿವ್ಯಕ್ತಿ ಮಾಡಿಕೊಡುವನು. ಇಂತಹ ಬಿಂಬರೂಪಿ ಹರಿಯೇ, ಸಲಹೆನಲು=ರಕ್ಷಣ ಮಾಡಪ್ಪಾ ಅಪ್ಪಾ ಎಂದು ಅನನ್ಯಗತಿಕ ನೀನೇ ಎಂದು ಮೊರೆ ಇಟ್ಟು ದೈನ್ಯದಿಂದ ಪ್ರಾರ್ಥಿಸಲು, ನಿರ್ಮತ್ಸರರ ಬಳಿಗೆ=ದ್ವೇಷ ಅಸೂಯೆ, ಕಾಪಟ್ಯ ಹೊಟ್ಟೆಕಿಚ್ಚು ಇಲ್ಲದಿರುವ ಭಕ್ತರ ಹತ್ತಿರ, ಸಮೀಪಕ್ಕೆ ಹೇಗೆ ಬರುವನೆಂದರೆ, ಗೋ=ಆಕಳು, ವತ್ಸ ಧ್ವನಿಗೊದಗುವ ತೆರದಿ= ಅಡವಿಯಲ್ಲಿ ಆಕಳು ಮೇಯಲಿಕ್ಕೆ ದೂರ ಹೋದಾಗ್ಗೆ, ಕರುವು ತಾಯಿ ಹಂಬಲಿಕೆಯಿಂದ, ಅಂಬಾ ಅಂಬಾ ಎಂದು ಕೂಗಲು ಕೇಳಿದಾಕ್ಷಣವೇ ಕರುವಿನ ಮೇಲಿನ ಪ್ರೀತಿಯಿಂದ ಓಡಿ ಬಂದು ಮೊಲೆ ಉಣ್ಣಿಸುವಂತೆ ಶ್ರೀ ಹರಿಯೇ ಸಲಹೆಂದು ಪರವಶವಾಗಿ ಮೈಮರೆದು ಕೂಗಲು ಭಕ್ತರಿದ್ದೆಡೆ ಬಂದು, ಸಲಹುವನು=ಕಾಪಾಡುವನು. ರಕ್ಷಿಸುವನು.

**ಭಾವಸೂಚನ ॥ ಮತ್ಸ್ಯೇತಿ ॥ ಕಾವು ॥ ವರಾರೋಹ ಉತ್ತಮ ಕಟಿಪಶ್ಚಾತ್ ಭಾಗ ॥೨೮॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮತ್ಸ್ಯ" ಇತಿ॥ **"ವರಾರೋಹ"**—ಓಂ ಸೇನಾಸೀರಥ ನೃಭ್ಯೋ ಆಶೀನಃ ಸತ್ವಾ ಗವೇಷಣಃ ಸ ಧೃಷ್ಣುಃ॥ಮಾ ಚಿತ್ ಸಭ್ರೇಷತೇ ಜನೋ ನ ರೇಷನ್ ಮನೋ ಯೋ ಅಸ್ಯ॥ಓಂ॥ವರತ್ವೇನ ಸರ್ವಾರೂಢಃ ॥೨೮॥

## ಕನ್ನಡಾರ್ಥ

ಭಕ್ತರು ಮೊರೆಯಿಟ್ಟು ಕರೆದಲ್ಲಿಗೆ ಶ್ರೀಹರಿಯು ಗೋವತ್ಸನ್ಯಾಯದಂತೆ ಬಂದೊದಗುವನೆಂದು ಹೇಳುತ್ತಾರೆ ಈ ಪದ್ಯದಿಂದ **"ವರಾರೋಹ"** ಶ್ರೇಷ್ಠ ನೆನಿಸಿ ಸರ್ವರ ಮೇಲೆ ಇರುವವನು, ಆರೋಹಿಸುವವನು. ॥೨೮॥

**ಅವತರಣಿಕಾ :**—ವೈಮರೆದು ಮತ್ತು ಶ್ರೀಹರಿಯ ಗುಣಗಳನ್ನು "ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್" ಎಂಬುವ ಶ್ರುತ್ಯರ್ಥ ಪ್ರತಿಪಾದ್ಯನಾದ ಶ್ರೀಹರಿಯನ್ನು ಸ್ತೋತ್ರ ಮಾಡುತ್ತಾರೆ.

**ಸೂರಿಗಳಿಗೆ ಸಮೀಪಗ ದುರಾ ।**
**ಚಾರಿಗಳಿಗೆಂದೆಂದು ದೂರಾ ।**
**ದ್ದೂರತರ ದುರ್ಲಭನೆನಿಸುವನು ದೈತ್ಯ ಸಂತತಿಗೆ ॥**
**ಸಾರಿ ಸಾರಿಗೆ ನೆನೆವವರ ಸಂ।**
**ಸಾರವೆಂಬ ಮಹೋರಗಕೆ ಸ ।**
**ರ್ಪಾರಿಯೆನಿಸಿ ಸದಾ ಸುಸೌಖ್ಯವನೀವ ಸರ್ವರಿಗೆ ॥೨೯॥**

**ಪದ್ಯಾರ್ಥ :**—ಸೂರಿಗಳಿಗೆ ಸಮೀಪಗ=ಜ್ಞಾನಿಗಳಿಗೆ ಬಹು ಸಮೀಪ ದಲ್ಲಿರುವನು ಜ್ಞಾನಿಗಳ ಉಪಾಸನೆಯಂತೆ ಇವೇ ಸ್ಥೂಲದೇಹದ ಚಿತ್ ಹೃದಯ ದಲ್ಲಿ ಬಿಂಬನಾಗಿ ಪೊಳೆಯುವನು. ಯದ್ಯಪಿ ವೈಕುಂಠವಾದ ದೂರದಲ್ಲಿ ವಾಸವಾಗಿದ್ದರೂ, ಜ್ಞಾನಿಗಳಿಗೆ ಬಹು ಸಮೀಪಗನು, ದುರಾಚಾರಿಗಳಿ ಗೆಂದೆಂದು ದೂರಾ=ಪರದಾರಾ ವಂಚಕ, ಪರದ್ರವ್ಯ ಹರಣ, ಪರನಿಂದಾರ

ತರು ಪಂಚ ಮಹಾ ಪಾತಕಿಗಳು ಇವರೆ ದುರಾಚಾರಿಗಳು. ಕದಾಚಿತ್ ಉತ್ತಮ ಜೀವನಾಗಿದ್ದರೆ, ಸಾಧನ ಗುರೂಪದಿಷ್ಟ ಭಗವನ್ನಾಮದಿಂದ ಸದಾಚಾರಿಯಾಗಬಹುದು. ಆದರೆ ದುರಾಚಾರಿಗಳು—ಅಹಂಕಾರವೆಂಬ ಸುರಾಪಾನ ಮಾಡಿದ ಮಾದಕದಿಂದ, ಜೀವಬ್ರಹ್ಮರೊಂದೆಂಬ ಐಕ್ಯವಾದಿಗಳು ಭಗವಂತನಿಗೆ ಗುಣವಿಲ್ಲವೆಂಬರು. ಅನಂತಗುಣಪೂರ್ಣಗೆ ಎಂಟೆ ಗುಣ ವೆಂಬರು. ವೇದಕ್ಕೆ ವಿರುದ್ಧಾರ್ಥ ಕಲ್ಪಿಸಿ, ಭಗವಂತನ ಗುಣಗಳನ್ನು ತನ್ನಲ್ಲಿ ಆರೋಪಿಸಿಕೊಳ್ಳುವ ಕಳ್ಳರು. ಇವರೇ ಪಂಚಮಹಾಪಾತಕಿಗಳು. ದುರಾಚಾರಿಗಳು, ಇವರಿಗೆ, ದೂರಾದ್ದೂರತರ=ಬಹು ದೂರ ಇರುವನು, ದೈತ್ಯಸಂತತಿಗೆ=ಇಂಥ ದುರಾಚಾರಿಗಳಾದ ದೈತ್ಯ ಕುಲಕ್ಕೆ, ದುರ್ಲಭ= ಎಂದೂ ಸಿಗುವನಲ್ಲ, ಆದರೆ ಸಾರಿಸಾರಿಗೆ ನೆನೆವರ=ಪ್ರತಿ ಕ್ಷಣಕ್ಕೆ ಶ್ರೀರಾಮ ಕೃಷ್ಣಾ ಹರೇ ಎಂದು ನಿಶ್ಚಿತ ಹರಿ ಮಹಿಮಾ ತಿಳಿದು ನೆನಸುವರ=ಶಾಸ್ತ್ರ ದಲ್ಲಿ ಪೇಳಿದಂತೆ ಶಾಸ್ತ್ರಸಮ್ಮತವಾದ ಗ್ರಂಥ ಚಿಂತನೆಯಿಂದ ಭಗವಂತನ ಚಿಂತನೆ ಮಾಡುವವರ, ಸಂಸಾರವೆಂಬ ಮಹೋರಗಕೆ=ಸಂಸಾರವೆಂಬ ಘಟಸರ್ಪಕ್ಕೆ, ಸರ್ಪಾರಿಯೆನಿಸಿ=ಸರ್ಪಕ್ಕೆ ವೈರಿಯಾದ ಶ್ರೀಗರುಡನೆನಿಸಿ, ಸರ್ಪಗಳನ್ನು ಗರುಡ ಪಕ್ಷಿ ಹೇಗೆ ಸಂಹರಿಸುತ್ತವೆಯೋ ಸಂಸಾರವೆಂಬ ಕೆಟ್ಟ ಹಾವನ್ನು ಹತಗೈಸುವನು, ಸದಾ ಸುಸೌಖ್ಯನನೀವ ಸರ್ವರಿಗೆ=ನಿರಂತರ ಇಹ-ಮುಕ್ತಿಯಲ್ಲಿ ಸರ್ವಮೋಕ್ಷಯೋಗ್ಯರಿಗೆ ಸೌಖ್ಯವನ್ನು ಕೊಡುವನು.

**ಭಾವಸೂಚನ:**—ಸೂರೀತಿ ದೂರಾದ್ದೂರತ್ತರಂಯತ್ತು ತದೇವಾಂತಿಕಮಂತಿಕಾದಿತ್ಯುಕ್ತೇಃ||ದ್ವಿಜರಾಜ ಗರುಡ||ದಲ್ಲಣ=ನಾಶಕ ||೨೯||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸೂರಿ" ಇತಿ "ದೂರಾತ್ ದೂರತರಂ ಯತ್ತು" ಇತ್ಯುಕ್ತೇಃ

**ದುರ್ಲಭ :**—* ಓಂ ವಿಶ್ವಾಸಿ ವಿಶ್ವಮನಸೋ ಧಿಯಾ ನೋ ವೃತ್ರಹಂತೃಮ ಉಗ್ರ ಪ್ರಣೇತು ರಥಿ ಷೂ ವಸೋ ಗಹಿ ವಯಂ ತೇ ಅಸ್ಯ ವೃತ್ರಹನ್ ಓಂ * ದುಃಖೇನ ಲಬ್ಧುಂ ಯೋಗ್ಯಃ ಬಹ್ವಾಯಾಸೇನ ಯಜ್ಞಾದಿನಾ ಲಭ್ಯಃ ನ ಅಲ್ಪೇನ ||೨೯||

## ಕನ್ನಡಾರ್ಥ

"ಪರಮಾತ್ಮನು ದೂರಾತ್ ದೂರತರನೂ ಸಮೀಪಕ್ಕಿಂತಲೂ ಸಮೀಪನೂ ಆಗಿರುತ್ತಾನೆ" ಎಂದು ಹೇಳಿದುದರಿಂದ "ಸೂರಿಗಳಿಗೆ ಸಮೀಪಗ, ದುರಾಚಾರಿಗಳಿಗೆಂದೆಂದು ದೂರಾತ್ ದೂರತರ" ಎಂದು ದಾಸರಾಯರು ನಿರೂಪಿಸಿರುತ್ತಾರೆ. ||೨೯||

**ಅವತರಣಿಕಾ :—** ದಾರ್ಢ್ಯಾರ್ಥವಾಗಿ ಶ್ರೀ ಹರಿಯ ಗುಣಗಳನ್ನು ಮತ್ತು ಮತ್ತು ಸ್ತೋತ್ರ ಮಾಡುತ್ತಾರೆ.

**ಚಕ್ರ ಶಂಖ ಗದಾಬ್ಜಧರ ದುರ।**
**ತಿಕ್ರಮ ದುರಾವಾಸ ವಿಧಿ ಶಿವ।**
**ಶಕ್ರ ಸೂರ್ಯಾದ್ಯಮರ ಪೂಜ್ಯಪದಾಬ್ಜ ನಿರ್ಲಜ್ಜ॥**
**ಶುಕ್ರಶಿಷ್ಯನ ಅಶ್ವಮೇಧಾ।**
**ಪ್ರಕ್ರಿಯವ ಕೆಡಿಸ್ಯಬ್ಜ ಜಾಂಡವ।**
**ತಿಕ್ರಮಿಸಿ ಜಾಹ್ನವಿಯ ಪಡೆದ ತ್ರಿವಿಕ್ರಮಾಹ್ವಯನು॥೩೦॥**

**ಪದ್ಯಾರ್ಥ :—** ಚಕ್ರ=ಚಕ್ರಾಯುಧ, ಶಂಖ=ಶಂಖಾಯುಧ, ಗದಾ=ಗದಾಯುಧ, ಅಬ್ಜ=ಕಮಲ, ಮೇಲಬಲಗೈಯಲ್ಲಿ ಚಕ್ರ, ಅಜ್ಞಾನ ನಾಶಕರವಾದದು, ಮೇಲ್ ಎಡಗೈಯಲ್ಲಿ ಶಂಖ=ಜ್ಞಾನಪ್ರದವಾದುದು, ಕೆಳಗಿನ ಎಡಗೈಲಿ=ಗದಾ, ದೈತ್ಯಾದಿಗಳ ದಲ್ಲಣ, ಕಾಮಾದಿ ಅರಿಷಡ್ವರ್ಗ ದಲ್ಲಣ, ಕೆಳ ಬಲಗೈಲಿ ಅಬ್ಜ ಕಮಲ=ಮನಸ್ಸಿಗೆ ಮನೋಹರ ಕೊಡುವ, ಬಿಂಬರೂಪಿ ಹರಿಯು (ಆದಿತ್ಯ ಪುರಾಣ ವೆಂಕಟೇಶ ಮಾಹಾತ್ಮ್ಯ) ದುರತಿಕ್ರಮಃ=ದುಃಖೇನ ಅತಿಕ್ರಾಂತುಂ ಶಕ್ಯಃ ದುರತಿಕ್ರಮಃ|| (ವಿ.ರಾ.) ಪರಮಾತ್ಮನನ್ನು ದಾಟಲಿಕ್ಕೆ ಪೂರ್ಣವಾಗಿತಿಳಿಯಲಿಕ್ಕೆ ಶಕ್ಯವಿಲ್ಲವವನಾದುದರಿಂದ ದುರತಿಕ್ರಮನೆಂದೂ, ದುರಾವಾಸ=ದುಃಖೇನಾವಾಸ್ಯತೇ ಯೋಗಿಭಿಸ್ಸ ಇತಿ ದುರಾವಾಸಃ|| ಕಷ್ಟಬಟ್ಟು ಸಾಧನ ಮಾಡುವುದರಿಂದ ಆಶ್ರಯಿಸಲು ಶಕ್ಯನಲ್ಲ ಕೇವಲ ಸ್ತೋತ್ರಕ್ಕೆ ಸುಲಭ, ವಿಧಿ=ಬ್ರಹ್ಮ, ಶಿವ=ಮಂಗಳಕರನಾದ ರುದ್ರ ಶಕ್ರ=ಇಂದ್ರ, ಸೂರ್ಯಾದ್ಯಮರಪೂಜ್ಯ=ಸೂರ್ಯ ಇವರೇ ಮೊದಲಾದ

ದೇವತೆಗಳಿಂದ ಪೂಜ್ಯವಾದ, ಪದಾಬ್ಜ=ಪಾದಕಮಲಗಳುಳ್ಳವ, ನಿರ್ಲಜ್ಜ= ಲಜ್ಜಾ ನಾಚಿಕೆ ರಹಿತನಾದವನೆಂದರೆ, ದೈತ್ಯಾದಿಗಳಿಗೆ ಮೋಹ ಹುಟ್ಟಿಸಲು, ಬುದ್ಧರೂಪದಿಂದ ವಸನವನ್ನು ತೊರೆದು ಬತ್ತಲೆ ಇರುವನಾದನು, ಅಲ್ಲದೇ, ತಾನು ಬ್ರಹ್ಮಾದಿಗಳಿಗೆ ಸಂಪತ್ತು ಕೊಡುವ ಹರಿಯು, ವಟು ವಾಮನ ರೂಪದಿಂದ ಲಜ್ಜಾರಹಿತನಾಗಿ ತಿರುಕ ಹಾರುವನಂತೆ ದಾನವನ್ನು ಬೇಡಲು, ಶುಕ್ರಶಿಷ್ಯನ=ದೈತ್ಯರಿಗೆ ಗುರುಗಳಾದ ಶುಕ್ರಾಚಾರ್ಯರ ಶಿಷ್ಯ ಬಲಿ ಚಕ್ರವರ್ತಿಯ ೧೦೦ನೇ ಅಶ್ವಮೇಧ ಯಜ್ಞಕ್ಕೆ ಪೋಗಿ, ಮೂರು ಪಾದ ಭೂಮಿ ದಾನ ಬೇಡಿ, ಬಲಿಯನ್ನು ಮೆಟ್ಟಿ, ಅವನ ಬಾಗಿಲ ದೂತನಂತೆ ಕಾಯ್ದುದೇ ನಿರ್ಲಜ್ಜತ್ವ, ಬಲಿಯ ಅಶ್ವಮೇಧ ಯಜ್ಞವನ್ನು ಕೆಡಿಸಿ, ಮೂರು ಪಾದದಿಂದ ಭೂಭುವರ್ಲೋಕ ಆಕ್ರಮಿಸಿ, ಅಬ್ಜಜಾಂಡವತಿಕ್ರಮಿಸಿ =ಬ್ರಹ್ಮಾಂಡ ಅತಿಕ್ರಮಿಸಿ ಮೀರಿ, ಎಡ ಪಾದಾಂಗುಟ ನಖದಿಂದ ಬ್ರಹ್ಮಾಂಡ ಕಟಹಾ ಭೇದನ ಮಾಡಿ, ಬಹಿರಾವರಣ ಉದಕರೂಪಳಾದ, ಜಾಹ್ನವಿ=ಜಹ್ನುಪುತ್ರಿ ಗಂಗೆಯನ್ನು ಪಡೆದ=ಹೆತ್ತ ತ್ರಿವಿಕ್ರಮಾಹ್ವಯನು ="ತ್ರಯೋ ವಿಕ್ರಮಾಸ್ತ್ರಿಷು ಲೋಕೇಷು ಕ್ರಾಂತಿಃ ಯಸ್ಯ ಸಃ ತ್ರಿವಿಕ್ರಮಃ|| "ತ್ರೀಣಿ ಪದಾ ವಿಚಕ್ರಮ ಇತಿ ಶ್ರುತೇಃ"||ಏವಂ ವಾ|| "ತ್ರಿರಿತ್ಯೇವಂ ತ್ರಯೋ ವೇದಾಃ ಕೀರ್ತಿತಾ ಮುನಿಸತ್ತಮೈಃ || ಕ್ರಾಮನ್ನೇತಾನ್ತು ಸರ್ವಾಂಸ್ತ್ವಂ ವಿಕ್ರಮೋಸಿ ಜನಾರ್ದನೇತಿ ಹರಿವಂಶೇ|| (ವಿ.ರಾ.) ಮೂರು ಪಾದಗಳಿಂದ ಭೂವ್ಯಾದಿ ಮೂರು ಲೋಕ ಅತಿಕ್ರಮಿಸಿದ ಕಾರಣ ತ್ರಿವಿಕ್ರಮನೆಂತಲೂ ಅಥವಾ ಮುನಿಗಳು ಜ್ಞಾನಿಗಳು ತ್ರಯಿ ವೇದನೆಂದು ಸ್ತುತಿಸುತ್ತಾರೆ. ಮತ್ತು ಕ್ರಮದಿಂದ ಸರ್ವವನ್ನು ಸರ್ವರಿಂದಲೂ, ಅತಿಕ್ರಮಿಸದೇ ಹೊಂದಲಿಕ್ಕೆ ಅಶಕ್ಯನಾದುದರಿಂದ ವಿಕ್ರಮಶೂರನೆಂದು, ದುಷ್ಟಜನಮರ್ದಕನಾದ ಶ್ರೀ ಹರಿಯೇ ಎಂದು ಸ್ತೋತ್ರ ಮಾಡಿರುವರು.

**ಭಾವಸೂಚನ ||** ಚಕ್ರಶಂಖೇತಿ || "ದೈನವರಾಸಾರ ಸಂಸಾರವೆಂಬ ಮಹೋರಗಗೆ ಸರ್ಪಾರಿಯೆನಿಸಿ ಸದಾ ಸೌಖ್ಯವನೀವ ಸುಜನರ್ಗೇತಿ"ವಾ ಪಾಠಃ ಪೂರ್ವಪದೇ ||೩೦||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**"ಚಕ್ರಶಂಖಗದಾಬ್ಜಧರ"** ಇತಿ || **"ಚಕ್ರಧರ(ಚಕ್ರೀ)"** * ಓಂ|| ಅಸೋ ಯಥಾ ನೋऽವಿತಾ ವೃಧೇ ಚ ದಧೋ ವಸೂನಿ ಮಮದಶ್ಚ ಸೋಮ್ಯೈಃ || ಗೃಭೀತಂ ತೇ ಮನ ಇಂದ್ರ ದ್ವಿಬರ್ಹಾಃ ಸುತಃ ಸೋಮಃ ಪರೀಷಕ್ತಾ || ಓಂ || * ಚಕ್ರಂ ವರ್ಧನಂ ತತ್ ದಾತವ್ಯತ್ವೇನ ಅಸ್ತೀತಿ ಚಕ್ರೀ ಚಕ್ರಪಾಣಿರ್ವಾ ||

**"ಶಂಖಭೃತ್"** * || ಅಸುರ್ಯಸ್ಯ ವಿದ್ವಾನ್ ಸದಾ ತೇ ನಾಮ ಸ್ವಯಶೋ ವಿವಿರ್ಮ(ಬ್ಮ)ಮ ಭೂರಿ ಹಿ ತೇ ಸವನಾ ಮಾನುಷೇಷು ಭೂರಿ ಮನೀಷೀ ಹವತೇ ತ್ವಾಮಿತ್||ಓಂ||* ದೇವಾಹ್ವಾನಂ ಶಂಖಃ||ತದ್ವಿಷಯಃ|| ದರಧರೋ ವಾ ||

**"ಪದ್ಮೀ'** * ಓಂ || ವೃಗಯಂತೇ ಅಭಿತ್ಸರಂತಿ ಧೇನುಭಿಃ ತ್ರಯ ಇಂದ್ರಸ್ಯ ಸೋಮಾಃ ಸುತಾಸಃ ಸಂತು ದೇವಸ್ಯ ಸ್ವೇ ಕ್ಷಯೇ ಸುತಪಾವ್ನಃ|| ಓಂ ||*||(ತ್ರಿಸವನಾನುಗಸೋಮಃ) ಪದ್ಮಂ || ಕಂಜಂ ವಾ || ಅಸ್ಯ ಅಸ್ತಿ ಪೇಯತ್ವ ಧಾರ್ಯತ್ವಾಭ್ಯಾಂ ಪದ್ಮೀ || **ದುರತಿಕ್ರಮ** * ಓಂ || ನ ಪರೀ ಬಾಧೋ ಹರಿವೋ ಗವಿಷ್ಟಿಷು ಆ ತ್ವಾ ಗೋಭರಿವ ವಜ್ರಂ ಗೀರ್ಭಿರ್ ಋಣೋಭ್ಯದ್ರಿವಃ ಅಸ್ಮಾಕಾಮಂ ಜರಿತುರಾ ಮನಃ ಪೃಣ || ಓಂ || * ದುಃಖೇನ ಅಪಿ ಅತ್ಯೇತುಂ ಅಶಕ್ಯಃ ಕ್ರಮಃ ಶಕ್ತಿಃ ಯಸ್ಯ ಸಃ ತಥೋಕ್ತಃ || **"ದುರಾವಾಸಃ"** * ಓಂ || ನೂ ಅನ್ಯತ್ರಾಚಿದದ್ರಿವಸ್ತ್ವನ್ನೋ ಜಗ್ಮುರಾ ಶಸಃ ||ಮಘವಂ ಶ್ಛಗ್ಧಿ ತವ ತನ್ನ ಊತಿಭಿಃ ನಹ್ಯಾಂಗ ನೃತೋ ತ್ವದನ್ಯಂ|| ಓಂ||*|| ಸ್ತುತಿಭಿರೇವ ಆವಾಸನೀಯಃ ಪ್ರಸನ್ನೀಕರ್ತವ್ಯಃ ನ ಸುಖೇನ ಇತಿ ತಥೋಕ್ತಃ ||೩೦||

## ಕನ್ನಡಾರ್ಥ

"ಚಕ್ರಶಂಖಗದಾಬ್ಜಧರ" ಎಂಬ ಸಮಸ್ತಪದವನ್ನು ಬಿಡಿಸಿದರೆ ಚಕ್ರಧರ, ಶಂಖಧರ, ಗದಾಧರ, ಅಬ್ಜಧರ ಎಂಬ ನಾಲ್ಕು ನಾಮಗಳು ಆಗುತ್ತವೆ.

**"ಚಕ್ರಧರ"**—ಚಕ್ರ ಅಂದರೆ ಅಭಿವೃದ್ಧಿ(ಬೆಳವಣಿಗೆ) ಅದನ್ನು ಕೊಡುವುದಕ್ಕಾಗಿ ಹಿಡಿದಿರುವವನು; ಅಥವಾ ಚಕ್ರವೆಂಬ ಆಯುಧವನ್ನು ಹಿಡಿದಿರುವವನು.

**"ಶಂಖಧರ"**—ದೇವತೆಗಳ ಆಹ್ವಾನಕ್ಕೆ ಶಂಖವೆಂದು ಹೆಸರು. ದೇವತೆಗಳ ಆಹ್ವಾನಕ್ಕೆ ವಿಷಯನು; ಅಥವಾ ಶಂಖವನ್ನು ಹಿಡಿದವನು.

**"ಪದ್ಮಧರ"**—ಸವನತ್ರಯದಲ್ಲಿ ಅರ್ಪಿಸಲ್ಪಡುವ ಸೋಮಕ್ಕೆ ಪದ್ಮವೆಂದು ಹೆಸರು. ಅದನ್ನು ಪಾನ ಮಾಡುವವನು. ಅಥವಾ ಪದ್ಮವನ್ನು ಧರಿಸಿದವನು.

**"ದುರತಿಕ್ರಮಃ"**—ಕಷ್ಟದಿಂದಲೂ ಸಹ ಅತಿಕ್ರಮಿಸಲಶಕ್ಯವಾದ ಚರಿತ್ರವುಳ್ಳವನು–ಶಕ್ತಿವುಳ್ಳವನು.

**"ದುರಾವಾಸಃ"**—ಸ್ತುತಿಗಳಿಂದಲೇ ಪ್ರಸನ್ನನಾಗತಕ್ಕವನು, ಹೊರತಾಗಿ ಅನ್ಯ ಸುಲಭ ಉಪಾಯಗಳಿಂದ ಪ್ರಸನ್ನನಾಗದವನು ॥೩೦॥

**ಅವತರಣಿಕಾ :**—ಹಿಂತೆ ವರ್ಣಿಸಿದಂತೆ ಶ್ರೀಹರಿಯನ್ನು ಸದಾ ಸ್ತೋತ್ರ ಮಾಡು. ಲೌಕಿಕ ಹಾಳಹರಟೆಗಳನ್ನೀಡಾಡು. ಸದಾ ಸರ್ವಕಾಲದಲ್ಲಿ ಭಕ್ತಿ ಪೂರ್ವಕವಾಗಿ ಹರಿಕಥಾಮೃತ ಪಾನ ವಿಷಯದಲ್ಲಿ ಆಸಕ್ತನಾಗಿರು ಎಂದು ಉಪದೇಶಿಸುತ್ತಾರೆ.




**ಶಕ್ತರೆನಿಸುವರಿಲ್ಲ ಹರಿವ್ಯತಿ ।**
**ರಿಕ್ತಸುರಗಣದೊಳಗೆ ಸರ್ವೋ ।**
**ದ್ರಿಕ್ತನೆನಿಸುವ ಸರ್ವರಿಂದಲಿ ಸರ್ವಕಾಲದಲಿ ॥**
**ಭಕ್ತಿ ಪೂರ್ವಕವಾಗಿ ಅನ್ಯ ಪ್ರ ।**
**ಸಕ್ತಿಗಳ ನೀಡಾಡಿ ಪರಮಾ ।**
**ಸಕ್ತನಾಗಿರು ಹರಿಕಥಾಮೃತ ಪಾನ ವಿಷಯದಲಿ ॥೩೧॥**

**ಪದ್ಯಾರ್ಥ :**—ಸುರಗಣದೊಳಗೆ=ದೇವತೆಗಳ ಸಮೂಹದೊಳಗೆ ಶ್ರೀಹರಿ ವ್ಯತಿರಿಕ್ತ=ಶ್ರೀಹರಿಯ ಹೊರತಾಗಿ ಅನ್ಯರಾರೂ ಬಲಿಷ್ಠರು ಶ್ರೇಷ್ಠರೂ ಯೆನಿಸುವದಿಲ್ಲ. ಏಕಂದರೆ ಸರ್ವಕಾಲದಲಿ=ಎಲ್ಲ ಕಾಲಗಳಲ್ಲಿ

ನಿತ್ಯನಾಗಿ, ಸರ್ವರಿಂದಲೂ=ಅಂದರೆ ಸುರ ಅಸುರನರರಿಂದ ಎಲ್ಲರಿಂದಲೂ, ಸರ್ವೋದ್ರಿಕ್ತನೆನಿಸುವ=ಸ ರ್ವ ರಿಂ ದ, ಉದ್ರಿಕ್ತ=ಶ್ರೇಷ್ಠನೆನಿಸುವನು. ಕಾರಣ ಭಕ್ತಿಪೂರ್ವಕವಾಗಿ=ದಾರಪುತ್ರಾದಿಗಳಿಂದಲೂ ಹೆಚ್ಚಿನ ಸ್ನೇಹ ಪರಮಾತ್ಮ ನೀನೆ ಗತಿ ದಾಯಕನೆಂಬ ನಂಬಿಕೆಯಿಂದ ಪರಮ ಸ್ನೇಹದಿಂದ ಭಜಿಸು, (ಅಧ್ಯಾಹಾರ) ಅನ್ಯ ಪ್ರಸಕ್ತಿಗಳ ನೀಡಾಡು=ಪರಮಾತ್ಮನ ವ್ಯತಿ ರಿಕ್ತವಾಗಿ ಲೌಕಿಕ ಹರಟೆಗಳನ್ನು ಬಿಡು ಒಗೆ, ಹೀಗೆ ನಿರಂತರ ಏಕ ಭಕ್ತಿ ಯಿಂದ, ಪರಮಾ ಸಕ್ತನಾಗಿರು ಹರಿಕಥಾಮೃತ ಪಾನ ವಿಷಯದಲಿ=ಬಿಂಬ ರೂಪನಾದ ಶ್ರೀಹರಿಯ ಲೀಲಾ ಕಥಾ ಚರಿತ್ರೆ ರೂಪವಾದ ಅಮೃತಪಾನ ವಿಷಯದಲ್ಲಿ ಹೆಚ್ಚಿಗೆ ಆಸಕ್ತನಾಗಿರು=ಪ್ರೀತಿ ಪೂರ್ವಕ ಹರಿಯ ಕಥೆ ಕೇಳೆಂದು ಉಪದೇಶಿಸುತ್ತಾರೆ. ಶ್ರೀಹರಿಯೆ ಸರ್ವ ಕರ್ಮ ಕರ್ತ ಕಾರ ಯಿತಾನೆಂಬ ದೃಢ ಜ್ಞಾನದಿಂದ ಆಯಾ ಕರ್ಮಮಾಡುವಾಗ್ಗೆ ಆಯಾ ಭಗವನ್ಮೂರ್ತಿಗಳನ್ನು ಸ್ಮರಿಸುತ್ತಿರಬೇಕು.

**ಭಾವಸೂಚನ** || ಶಕ್ತೇತಿ ||೩೧||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶಕ್ತ" ಇತಿ|| ಉದ್ರಿಕ್ತ ಪೂರ್ಣ ||೩೧||

## ಕನ್ನಡಾರ್ಥ

ಹರಿವ್ಯತಿರಿಕ್ತರನ್ನು ತೊರೆದು, ಸರ್ವೋತ್ತಮ ಪೂರ್ಣಗುಣನೆಂಬು ದಾಗಿ ಶ್ರೀಹರಿಯನ್ನೇ ನೆನೆಯುತ್ತ, ಅನ್ಯತ್ರ ಅನಾಸಕ್ತಿಯಿಂದಲೂ, ಹರಿ ಯಲ್ಲಿ ಪರಮ ಭಕ್ತಿಯಿಂದಲೂ ಹರಿಕಥಾಮೃತರಸವನ್ನು ಪಾನಮಾಡ ಬೇಕೆಂದು ಹೇಳುತ್ತಾರೆ. "ಶಕ್ತ" ಎಂಬ ಪದ್ಯದಿಂದ.

"ಉದ್ರಿಕ್ತ" ಪೂರ್ಣ ||೩೧||

**ಅವತರಣಿಕಾ :—**ಅನನ್ಯಗತಿಕನಾಗಿ ಹರಿಸ್ತೋತ್ರ ಯಾಕೆ ಮಾಡ ಬೇಕೆಂದರೆ ಶ್ರೀಹರಿಯ ಅಪಾರಕರುಣಾನಿಧಿ ಮುಂತಾದ ಗುಣಗಳನ್ನು ಸ್ತೋತ್ರಗೈಯ್ಯುತ್ತಾರೆ.

**ಪ್ರಣತ ಕಾಮದ ಭಕ್ತ ಚಿಂತಾ |**
**ಮಣಿ ಮಣಿಮಯಾಭರಣ ಭೂಷಿತ |**
**ಗುಣಿ ಗುಣತ್ರಯ ದೂರ ವರ್ಜಿತ ಗಹನ ಸನ್ಮಹಿಮ ||**
**ಎಣಿಸ ಭಕ್ತರ ದೋಷಗಳ ಕುಂ |**
**ಭಿಣಿಜೆಯಾಣ್ಮ ಶರಣ್ಯ ರಾಮಾ |**
**ಪಣವೆನಲು ಕೈಕೊಂಡ ಶಬರಿಯ ಫಲವ ಪರಮಾತ್ಮ ||೩೨||**

**ಪದ್ಯಾರ್ಥ :—**ಪ್ರಣತ ಕಾಮದ=ಶರಣಾಗತರಾದ ಭಕ್ತರಿಗೆ ಬೇಡಿದಿಷ್ಟಾರ್ಥವನ್ನು ಕೊಡುವನು. ಮತ್ತು ಭಕ್ತ ಚಿಂತಾಮಣಿ=ಭಕ್ತರಿಗೆ ಚಿಂತಿತ ಫಲವನ್ನು ಕೊಡುವ ಸ್ವರ್ಗದಲ್ಲಿರುವ ಚಿಂತಾಮಣಿ ಎಂಬ ರತ್ನದಲ್ಲಿ ನಿಂದು ಚಿಂತಿಸಿದ್ದನ್ನು ಕೊಡಲು ಪ್ರೇರಿಸುವನು. ಭಕ್ತರು ಚಿಂತನೆ ಮಾಡಿದ್ದು ಕೊಡದಿರುವನೆ? ಮಣಿಮಯಾಭರಣ ಭೂಷಿತ=ಸಾಧಾರಣವಾಗಿ ನವ ರತ್ನಾದಿಗಳಿಂದ ಖಚಿತವಾದ ಆಭರಣ=ವಸ್ತುಗಳಿಂದ ಅಲಂಕೃತನಾದವನು, ಯದ್ಯಪಿ ತಾನು ಬ್ರಹ್ಮಾಭಿಧಾನವಾದ ಕೌಸ್ತುಭಮಣಿಯನ್ನು ಧಾರಣ ಮಾಡಿದರೂ, ಶ್ರೀಹರಿಯ ಕಾಂತಿಯಿಂದಲೇ ಮಣಿಗೆ ಭೂಷಣ ಹೊರ್ತಾಗಿ ಮಣಿಗಳಿಂದ ಹರಿಯು ಭೂಷಿತನಲ್ಲ. ಗುಣಿ=ಅನಂತಜ್ಞಾನಾನಂದಾದಿ ಗುಣಗಳ ಖಣಿಯು, ಗುಣತ್ರಯ ದೂರವರ್ಜಿತ=ಸತ್ವಾದಿ ತ್ರಿಗುಣಗಳಿಂದ ದೂರನಾದವ ಪ್ರಕೃತಿ ಗುಣ ಸಂಬಂಧ ಇರವೆ ಇರುವವನು. ಗಹನ=ಕೇನಾಪಿ ಜ್ಞಾತುಂ ನ ಶಕ್ಯತ ಇತಿ ಗಹನಃ ಯಾರೂ ಯಾವ ಕಾಲದಲ್ಲೂ ಪೂರ್ಣವಾಗಿ ಶ್ರೀಹರಿ ರೂಪಗಳನ್ನು ತಿಳಿಯದವರಾದುದರಿಂದ ಶ್ರೀಹರಿಗೆ ಗಹನನೆಂದು ಹೆಸರು. ಸನ್ಮಹಿಮ=ಸಮಿಾಚೀನವಾದ ಉತ್ಕೃಷ್ಟ ಮಹಿಮೆಯುಳ್ಳವ ಏಕೆಂದರೆ, ಭಕ್ತಳಾದ ಶಬರಿಯು ಬೇಡರ ಜಾತಿಯಲ್ಲಿ ಹುಟ್ಟಿದ್ದರೂ, (ಮೂಲದಲ್ಲಿ ಅಪ್ಸರೆಯಳು) ಭಕ್ತಳಾದ ಕಾರಣ ಶ್ರೀರಾಮನಿಗೆ ಸಿಹಿ ಬೋರೆ ಹಣ್ಣುಗಳನ್ನು ಕಡಿದು ಇಟ್ಟು ರಾಮ ಬಂದಕೂಡಲೇ ಎರಗಿ ರಾಮನೇ ನಿನಗೆ ಅರ್ಪಿತವಾಗಲಿ ಎಂದು ಭಕ್ತಿಯಿಂದ ಕೊಟ್ಟ ಎಂಜಲ ಬೋರೆ ಫಲಗಳನ್ನು ಕುಂಭಿಣಿಜೆಯಾಣ್ಮ=ಭೂಮಿಯಿಂದ ಪುಟ್ಟಿದ ಸೀತಾದೇವಿಯ ಆಣ್ಮ=ಪತಿ ರಾಮದೇವರೆ, ನೀನೆ, ಶರಣ್ಯ=ಶರಣು ಹೊಕ್ಕ ಭಕ್ತರನ್ನು

ಸಲಹುವ ರಾಮನೇ ತಾನು ಕಡಿದು ಸವಿ ನೋಡಿದರೂ, ಎಂಜಲು ಫಲ ಗಳೆನ್ನದೆ, ಶಬರಿ ಭಕ್ತಳ ಅಪರಾಧವನ್ನೆಣಿಸದೆ ರಾಮಾರ್ಪಣವೆನಲು, ಪರ ಮಾತ್ಮನು ಶಬರಿಯು ಫಲವನ್ನು ಕೈಕೊಂಡ ಸ್ವೀಕರಿಸಿದನು. ಇದು ಪ್ರಾರಬ್ಧಕರ್ಮ ಅನುಭವಿಸುವ ದೇವತೆಗಳ ಅಪರಾಧ ಕ್ಷಮಾಪಣೆ ಹೊರ್ತಾಗಿ ಅಸ್ಮದಾದಿಗಳ ಅಪರಾಧ ಕ್ಷಮಿಸುವವನಲ್ಲ.

**ಭಾವಸೂಚನ** || ಪ್ರಣತೇತಿ || ಘೃಣಿ ದಯಾವಂತ || ಕುಂಭಿಣಿ= ಭೂ, ಅಣ್ಮ=ಅಧಿಪತಿ ||೩೨||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪ್ರಣತ ಇತಿ || ೩೨||

## ಕನ್ನಡಾರ್ಥ

ಪರಮಾತ್ಮನು ಭಕ್ತಿಯಿಂದ ಸಮರ್ಪಿಸಿದುದನ್ನು ಸ್ವೀಕರಿಸಿ ಪದವನ್ನು ಕೊಡುವನು. ಈ ವಿಷಯದಲ್ಲಿ ಶಬರಿಯ ದೃಷ್ಟಾಂತವನ್ನು ಸೂಚಿಸುತ್ತಾರೆ ಈ ಪದ್ಯದಿಂದ ||೩೨||

**ಅವತರಣಿಕಾ :—** ಶ್ರೀಹರಿಯನ್ನು ಸಂಪೂರ್ಣವಾಗಿ ಯಾರೂ ತಿಳಿ ದಿಲ್ಲವಾದರೂ, ಅನಂತಗುಣಪೂರ್ಣನೆಂದು ಬೆಲ್ಲದಚ್ಚಿನಗೊಂಬಿಯ ದೃಷ್ಟಾಂತ ದಿಂದ ಪರಮಾತ್ಮ ಎಲ್ಲರಿಗೆ ಬೇಕಾದವನೆಂದು ಗುಣೋತ್ಕರ್ಷಿಸುತ್ತಾರೆ.

**ಬಲ್ಲೆನೆಂಬುವರಿಲ್ಲ ಈತನ।**
**ಒಲ್ಲೆನೆಂಬುವರಿಲ್ಲ ಲೋಕದೊ।**
**ಳಿಲ್ಲದಿಹ ಸ್ಥಳವಿಲ್ಲವೈ ಅಜ್ಞಾತ ಜನವ(ರಿ)ಲ್ಲ||**
**ಬೆಲ್ಲದಚ್ಚಿನ ಬೊಂಬಿಯೆಂದದಿ।**
**ಎಲ್ಲರೊಳಗಿರುತಿಪ್ಪ ಶ್ರೀಭೂ।**
**ನಲ್ಲ ಇವಗೆಣೆಯಿಲ್ಲ ಅಪ್ರತಿಮಲ್ಲ ಜಗಕೆಲ್ಲ ||೩೩||**

**ಪದ್ಯಾರ್ಥ :—** ಈತನ=ಸರ್ವೋತ್ತಮನಾದ ಶ್ರೀಹರಿಯು ಸಕಲರಿಗೆ ಬಿಂಬನೆಂಬುವ ಪುರುಷ=ಕಾಲ ರೂಪನು, ಅನಂತ ಗುಣಪೂರ್ಣನೆಂಬುದ

ರಿಂದ ಬಲ್ಲೆನೆಂಬುವರಿಲ್ಲ=ರಮಾಬ್ರಹ್ಮಾದಿ ದೇವತೆಗಳು ಒಬ್ಬರೂ ಸಂಪೂರ್ಣ ತಿಳಿಯಲಾರರು ? ಆದರೂ, ಈತನ ಒಲ್ಲೆನೆಂಬುವರಿಲ್ಲ=ಶ್ರೀಹರಿಯು ನಮಗೆ ಬೇಡವಪ್ಪಾ ಎಂದು ಒಬ್ಬರೂ ಅನ್ನಲಾರರು, ಏಕೆಂದರೆ ಬೆಲ್ಲದಚ್ಚಿನ ಬೊಂಬಿಯಂದದಿ ಎಲ್ಲರೊಳಗಿರುತಿಪ್ಪ=ಬೆಲ್ಲವು ಮೊದಲೆ ಸಿಹಿ ಎಲ್ಲರಿಗೆ ಬೇಕಾದ ರುಚಿ ಪದಾರ್ಥ, ಅದರೊಳಗೆ ಸುಂದರವಾದ ಗೊಂಬೆ ಕಟ್ಟಿಗೆಯಲ್ಲಿ ಕಡೆದು ಅಚ್ಚುಪಡಿ ಮಾಡಿ ಅದರೊಳಗೆ ಬೆಲ್ಲ ಕಾಸಿ ಪಾಕಮಾಡಿ ಹಾಕಿದರೆ ಸುಂದರ ಮೂರ್ತಿ ಆಗುವದು, ಆ ಮೂರ್ತಿಯ ಸರ್ವಾವಯವ ಗಳಲ್ಲಿ ಬೆಲ್ಲವು ಹೇಗೆ ವ್ಯಾಪಿಸಿರುವುದೋ, ಅದರಂತೆ, ಹರಿಯು ಲೋಕ ದೊಳಿಲ್ಲದಿಹ ಸ್ಥಳವಿಲ್ಲ=ಹದಿನಾಲ್ಕು ಲೋಕದಿ ಬಹಿರದಿ ಸಕಲ ಕಡಿಗೆ ವ್ಯಾಪಿಸಿರುವನು, ಆತನು ಇರದೇ ಇದ್ದ ಸ್ಥಳವೇ ಇಲ್ಲ, ಸರ್ವ ವ್ಯಾಪ್ತನು, ಎಲ್ಲರೊಳಗಿರುತಿಪ್ಪ=ಸಕಲ ಚೇತನ ಜಡರಲ್ಲಿ ಬಿಂಬನಾಗಿರುವನು, ಅಜ್ಞಾತ ಜನವಲ್ಲ(ರಿಲ್ಲ)=ಪೂರ್ಣ ಶ್ರೀಹರಿಯನ್ನು ತಿಳಿಯದೇ ಇದ್ದರೂ ಎತ್ತ ನೋಡಿದರತ್ತ ಬೆಲ್ಲವು ಗೊಂಬಿಯಲ್ಲಿ ವ್ಯಾಪಿಸಿ ಸಿಹಿಯಾಗಿರುವಂತೆ ಈ ಸಿಹಿ ಗುಣಕ್ಕೆ ಇರುವೆಗಳು ತನ್ನಿಂದ ತಾನೆ ಹೇಗೆ ಅಂಟಿಕೊಳ್ಳುವುವೋ ಅದರಂತೆ ಸಕಲ ಸುಖ ಬಡತಕ್ಕ ಸಿಹಿ ಸುಖವನ್ನು ಅನುಭವಿಸುವ ಮುಮುಕ್ಷು ಜೀವಿ ಗಳಿಂದ ಪೂರ್ಣವಾಗಿ ತಿಳಿಯದಿದ್ದರೂ, ಯೋಗ್ಯತೆಯಂತೆ ತಿಳಿಯುವರು, ಏಕಂದರೆ, ಶ್ರೀ=ಸಂಪತ್ಕರಳಾದ ಪ್ರಕೃತ್ಯಭಿಮಾನಿ ಭೂದೇವಿಗೆ, ನಲ್ಲ ಪತಿ ಯಾದ ಹರಿಗೆ, ಇವಗೆಣೆ ಇಲ್ಲ=ಈತನಿಗೆ ಸರಿಯಾರೂ ಇಲ್ಲ, ಜಗಕೆಲ್ಲ ಅಪ್ರತಿಮಲ್ಲ=ಮಹಾ ಸಮರ್ಥನು, ಜಗತ್ತಿಗೊಬ್ಬನೆ ಶ್ರೀಹರಿಯೆಂದು ಎಲ್ಲರೂ ಶ್ರೀಹರಿಯನ್ನೇ ಬಯಸುವರು.

**ಭಾವಸೂಚನ :**—ವಲ್ಲೇತಿ ||೩೩||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಒಲ್ಲೆ" ಇತಿ ||೩೩||

### ಕನ್ನಡಾರ್ಥ

ಆತ್ಮ, ಪ್ರಿಯ, ಸುಹೃತ್, ದೇಶ-ಕಾಲ-ಗುಣ-ಕೃತಿ ಪರಿಚ್ಛೇದರಹಿತ, ಸರ್ವಜ್ಞ, ಸರ್ವತೋ ವ್ಯಾಪ್ತ, ಸಮಾಧಿಕ ರಹಿತ ಎಂದು ಮುಂತಾಗಿ

ವಿಶೇಷಣಗಳಿಂದ ಶ್ರೀಭೂದುರ್ಗಾರಮಣ ಶ್ರೀಹರಿಯನ್ನು ಸ್ತುತಿಸುತ್ತಾರೆ ಈ ಪದ್ಯದಿಂದ. ||೩೩||

**ಅವತರಣಿಕಾ :—** ಇಂತು ಸಕಲ ಕರ್ಮ ಕರ್ತೃನಾದ ಹರಿಯು ಸಂಚಿತಾಗಾಮಿ ಕರ್ಮವಿಮೋಚಕನಾದರೂ, ಅವಶ್ಯವಾಗಿ ಅನುಭೋಕ್ತವ್ಯ ಕರ್ಮ ಜ್ಞಾನಿಗಳಿಗಾದರೂ ಬಿಡದು. ಪ್ರಾರಬ್ಧಕರ್ಮ ಅನುಭೋಗಿಸಲು ಶರೀರ ತೆತ್ತಲೇ ಬೇಕು. ಸಮರ್ಥನಾದ ಹರಿಯು ಪ್ರಾರಬ್ಧಕರ್ಮವನ್ನು ಉಪಮರ್ದನ ಮಾಡುವನೆಂಬುದಕ್ಕೆ ದೃಷ್ಟಾಂತ ಹೇಳುತ್ತಾರೆ.

**ಶಬ್ದಗೋಚರ ಶಾರ್ವರೀ ಕರ |**
**ಅಬ್ದವಾಹನನನುಜ ಯದು ವಂ |**
**ಶಾಬ್ಧಿ ಚಂದ್ರಮ ನಿರುಪಮ ಸುನಿಸ್ಸೀಮ ಸಮಿತಸಮ ||**
**ಲಬ್ಧನಾಗುವ ತನ್ನವಗೆ ಪ್ರಾ |**
**ರಬ್ಧ ಕರ್ಮಗಳುಣಿಸಿ ತೀವ್ರದಿ |**
**ಕ್ಷುಬ್ಧ ಪಾವಕನಂತೆ ಬಿಡದಿಪ್ಪನು ದಯಾಸಾಂದ್ರ ||೩೪||**

**ಪದ್ಯಾರ್ಥ :—** ಶಬ್ದಗೋಚರ=ಶ್ರೀಹರಿಯು ವೇದಪ್ರತಿಪಾದ್ಯನು, ಯೋಗ್ಯತೆಯಂತೆ ವೇದಗಳಿಂದಲೇ ಗೋಚರ=ಕಣ್ಣಿಗೆ ಕಾಣುವನು, ತಿಳಿಯಲು ಶಕ್ಯನಾದವನು, ಶಾರ್ವರೀಕರ=ಶಾರ್ವರೀ=ರಾತ್ರಿಯನ್ನು ಬೆಳಗುವ ಚಂದ್ರನು, ಸಜ್ಜನರ ಅಜ್ಞಾನವನ್ನು ಕಳೆದು ಆನಂದ ಕೊಡುವ ಚಂದ್ರಮನು, ಅಬ್ದವಾಹನನನುಜ=ಮೇಘವಾಹನನಾದ ಇಂದ್ರದೇವರಿಗೆ ತಮ್ಮ ಉಪೇಂದ್ರ ಅದಿತಿ ದೇವಿಯಲ್ಲೇ ಅವತಾರ ಮಾಡಿದನು, ಸಜ್ಜನರಿಗೆ ಸುಜ್ಞಾನ ವೃಷ್ಟಿಯನ್ನು ಕರೆಯುವನು, ಅಂದರೆ ವೇದವಾಕ್ಯಗಳಂತೆ ಹರಿಯನ್ನು ಭಜಿಸಿ ಉಪಾಸನೆಗೈಯಲು, ಅಜ್ಞಾನವನ್ನು ಕಳೆದು ಆನಂದಕರನಾಗಿ ಸುಜ್ಞಾನವೃಷ್ಟಿಗರೆಯುವನು, ಯದುವಂಶಾಬ್ಧಿ ಚಂದ್ರಮ=ಯದು ಕುಲವೆಂಬ ಸಮುದ್ರಕ್ಕೆ ಚಂದ್ರಮ=ಚಂದ್ರೋದಯದಲ್ಲಿ ಸಮುದ್ರವು ಉಕ್ಕೇರುವುದು, ಯದುಕುಲದ ಚಂದ್ರ ಶ್ರೀಕೃಷ್ಣ ಅವತರಿಸಲು, ಜಗತ್ತಿಗೆ ಬಂದ ಆಪತ್ತು ಹರಿಸಿ, ದುಷ್ಟ ಸಂಹಾರ ಶಿಷ್ಟರ ಪಾಲನೆ ಮಾಡಿದನೋ

ಕೃಷ್ಣನು ಸಮಸ್ತ ದುರಿತ ಪರಿಹಾರಕನಾಗಿ ಆನಂದ ಕೊಡುವನು, ನಿರುಪಮ=ಉಪಮೆ ಇಲ್ಲದವ, ಸುನಿಸ್ಸೀಮ=ಒಳ್ಳೇ ಬಲಶಾಲಿ ಪರಾಕ್ರಮಿ ಸಮಿತಸಮ=ಇಲ್ಲಿ "ಸಮ್ಮಿತಸಮಃ" ಶ್ರೀವಿಷ್ಣುಸಹಸ್ರನಾಮ, ಸಮ್ಮಿತ= ಸಮ್ಯಕ್ ಶ್ರುತ್ಯಾದಿ ಪ್ರಮಾಣೈಃ ಮಿತಃ ಸಮ್ಮಿತಃ ॥ ಸಮ್ಯಕ್ ಸಾಕಲ್ಯೇನ ಪ್ರಮಾಣೈರಪ್ರತೀ, ಇತಿ ವಾ ತ ಅಪರಿಚ್ಛಿನ್ನ ಇತಿ ವಾ । ನ ಪ್ರಮಿತ ಇತಿ ವಾ ಸಮ್ಮಿತಃ ॥(ವಿ.ರಾ.) ಹೀಗೆ ಮೂರು ಅರ್ಥ. ಶ್ರುತ್ಯಾದಿ ಪ್ರಮಾಣಗಳಿಂದ, ಸಂಪೂರ್ಣ ತಿಳಿಯಲು ಶಕ್ಯನಲ್ಲ, ಅಥವಾ—ಪರಿಚ್ಛಿನ್ನನಾಗದಿರುವನು, ಅಥವಾ ಈತನ ಯಥಾರ್ಥ ಜ್ಞಾನವು ಸಾಕಲ್ಯೇನ ಆಗದಿರುವಿಕೆ, ಹೀಗೆ ಸಮಿತನೆಂತಲೂ, ಸಮಃ=ಅಧಿಷ್ಠಾನ ವೈಚಿತ್ರ್ಯೇಪಿ ಸ್ವಸ್ಯ ಸರ್ವತ್ರೈಕ ರೂಪತ್ವಾತ್ ಸಮಃ—ನಾನಾ ತರದ ಯೋನಿ ಜೀವರಿದ್ದರೂ ಆ ವಿಚಿತ್ರ ಜೀವಿಗಳಲ್ಲಿ ಅಂತರಾತ್ಮನಾಗಿರುವ ಒಂದೇ ರೂಪದಿಂದ ಇರುವ ಹರಿಗೆ ಸಮ ನೆಂತಲೂ, ಇದಕ್ಕೆ ಪ್ರಮಾಣ ಹೇಳುತ್ತಾರೆ. "ವಿಷಮೇಷ್ವಪಿ ಜೀವೇಷು ಸಮೋ ವಿಷ್ಣುಸ್ಸದೈವ ತು ॥ ಯತ್ರ ನಾಧಿಗತಸ್ಯಾಪಿ ಗುಣಾಃ ಪೂರ್ಣಾಃ ಹರೇಸ್ಸದೇತಿ ಪೈಂಗಿಶ್ರುತಿಃ" ॥ ಅಥವಾ "ಪಕ್ಷವರ್ಜಿತತ್ವಾದ್ವಾ ಸಮಃ"॥ ಶತ್ರುಮಿತ್ರರೆಂಬ ಪಕ್ಷಪಾತ ಇಲ್ಲದವನಾದುದರಿಂದ ಸಮನೆಂತಲೂ, "ಸಮಃ ಪ್ರಿಯಸುಹೃತ್ ಬ್ರಹ್ಮನ್" ಎಂಬ ಭಾಗವತೋಕ್ತಿ ಮತ್ತು "ನಾಸ್ಯ ಭಕ್ತೋ ಪ್ರಿಯೋ ದ್ವೇಷ್ಯೋ ನ ಚಾಭಕ್ತೋಪಿ ಯತ್ಪ್ರಿಯಃ ॥ ಕಿಂ ತು ಭಕ್ತ್ಯನು ಸಾರೇಣ ಫಲದೋತಃ ಸಮೋ ಹರಿಃ" ॥ಇತಿ ಪಾದ್ಮೇ ಸ್ಕಾಂದೇ ಚ ॥ ದೇಶಃ ಕಾಲೋ ಗುಣಶ್ಚೈವ ಭಕ್ತ್ಯಾದೀನಾಂ ವ್ಯಪೇಕ್ಷ್ಯ ತು ॥ ಯೋಗ್ಯತಾಂ ಚ ತಥಾ ಕರ್ಮ ಸಮ ಇತ್ಯಭಿಧೀಯತ ಇತಿ" ॥ (ವಿ.ರಾ.) ಹೀಗೆ ಭಗವ ದ್ಗುಣಾತಿಶಯಗಳನ್ನು ಪೊಗಳುತ್ತ ಧ್ಯಾನೋಪಾಸನಾಂತದಲ್ಲಿ ಯಾರು ಸ್ತೋತ್ರ ಮಾಡುವರೋ, ಅವರು, ತನ್ನವರೆಂದು ಹರಿಗೆ ಸಮ್ಮತ. ಇಂಥ ತನ್ನವಗೆ=ತನ್ನ ನಿಜ ಭಕ್ತನಿಗೆ, ಪ್ರಾರಬ್ಧಕರ್ಮಗಳುಣಿಸಿ ಲಬ್ಧನಾಗುವ= ಅತ್ಯಾವಶ್ಯವಾಗಿ ಅನುಭವಿಸತಕ್ಕ ಕರ್ಮಕ್ಕೆ ಪ್ರಾರಬ್ಧನೆಂತ, ಇಂತಹ ಕರ್ಮ ಗಳನ್ನು ಉಪಮರ್ದನ ಮಾಡಿ, ಶೀಪ್ರದಿ=ಬಹಳ ದಿನ ಅನುಭವಿಸತಕ್ಕ ಕರ್ಮ ಸ್ವಲ್ಪೇ ದಿನಗಳಲ್ಲಿ ಉಣಿಸಿ, ತ್ವರೆಯಿಂದ ಹೇಗೆ ಕ್ಷುಬ್ಧಪಾವಕ= ಪ್ರಜ್ವಲಿಸುವ ಅಗ್ನಿಯಲ್ಲಿ ಹೋಮದ್ರವ್ಯಗಳನ್ನು ಹಾಕಿದರೆ ತೆಗೆದು ತಕ್ಷಣ

ಹೇಗೆ ತೀವ್ರದಲ್ಲಿ ಆ ವಸ್ತು ದಹಿಸಿಬಿಡುವುದೋ ಅದರಂತೆ ಪ್ರಾರಬ್ಧಕರ್ಮ ಉಪಮರ್ದನ ಮಾಡಿ, ದಯಾಸಾಂದ್ರ=ದಯಾಘನನು, ಕೃಪಾಪೂರ್ಣನು, ಬಿಡದಿಪ್ಪನು=ತನ್ನ ಭಕ್ತರನ್ನು ಬಿಡದೆ ಪ್ರಾರಬ್ಧಕರ್ಮ ಉಣಿಸಿ ಜನ್ಮ ವರ್ಜಿತರನ್ನು ಮಾಡುವನು. ಶ್ರೀಮದಾಚಾರ್ಯರ ಭಾಷ್ಯಕ್ಕೆ ಸಮ್ಮತ ವಾದದ್ದು.

**ಭಾವಸೂಚನ :—** ಶಬ್ದೇತಿ ॥ ಅಬ್ದವಾಹನ ಇಂದ್ರ ॥ ಸಮಿತ ॥ ಪಕ್ಷ ಪಾತ ವರ್ಜಿತ ॥ ಕ್ಷುಬ್ಧ=ಜ್ವಲಿತ ॥೩೪॥

**ವಿಶೇಷ ಸೂಚನೆ :—** ಮುಂದೆ ವ್ಯಾಸದಾಸ ಸಿದ್ಧಾಂತ ಕೌಮುದಿ ಕಾರರು ಈ ಪದ್ಯಕ್ಕೆ ಸರಿಯಾದ ಘನ ವ್ಯಾಖ್ಯಾನ ಬರೆದು ಲೋಕಕ್ಕೆ ಉಪ ಕಾರ ಮಾಡಿದ್ದಾರೆ. ಇಂಥ ಸುಜ್ಞಾನಿಗಳೇ ತಾರಕರು. ಅಜ್ಞರ ನುಡಿ ನಂಬದೆ ಸುಜ್ಞಾನಿಗಳ ಮಾತೇ ನಿಜವೆಂದು ನಂಬಿರಿ. (ಪ್ರಕಾಶಕ) "ಅಜ್ಞಾನಿ ಗಳ ಕೂಡ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡ ಕಲಹವೇ ಲೇಸು" (ಕನಕದಾಸರು).

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**"ಶಬ್ದ"** ಇತಿ॥ಯತಃ ಪೂರ್ವಾಣಿ ಕರ್ಮಾಣಿ ಭೋಕ್ತುಮಾರಬ್ಧಕಾಣಿ ಚ॥ಪ್ರಾಪ್ತೇ ಶರೀರೇ ಕುರ್ವಂತಿ ನಿತ್ಯ ಕರ್ಮಾಣ್ಯನೇಕಶಃ॥ಕ್ರಿಯಮಾಣಾನಿ ತಾನಿ ಸ್ಯುಃ ಅಶುಭಾನಿ ಶುಭಾನಿ ಚ॥ತಾನ್ಯೇವ ಪರತಃ ಕಾಲೇ ಸಂಚಿತಾನಿ ಭವಂತಿ ಹಿ॥ಸಂಚಿತಾನಿ ಚ ಕಾಲೇನ ಲಾಭಾಚ್ಚ ಸಹಕಾರಿಣಃ॥ಫಲೋನ್ಮುಖಾ ನ್ಯುದ್ಭವಂತಿ ತಾನಿ ಪ್ರಾರಬ್ಧಕಾನಿ ತು॥ತೇಷಾಂ ಫಲಸ್ಯ ಭೋಗಾಯ ಧ್ರಿಯ ಮಾಣಃ ಶರೀರಕಮ್ ॥ ಪುನಃ ಕರೋತಿ ಕರ್ಮಾಣಿ ಹ್ಯೇವಮೇವಂ ತು ಪುನಃ ಪುನಃ ॥ ಕರ್ಮಣಾಂ ಹಿ ಪ್ರಭಾವೋಽಯಂ ಏವಮೇವಾದಿಕಾಲತಃ ॥ ತಸ್ಮಾತ್ ಭೋಗಾದಿನಾ ಕ್ವಾಪಿ ಕ್ಷೇಪ್ತುಂ ಕರ್ಮ ನ ಶಕ್ಯತೇ ॥ ತಸ್ಮಾತ್ ತಂ ಶರಣಂ ಯಾಯಾತ್ ಮುಮುಕ್ಷುರ್ಯಸ್ಯ ಜಾಯತೇ ॥ ಇತಿ ॥ ಕರ್ಮಮೋಕ್ಷೌ ಉದಾಹೃತೌ ಭಗವತಾ ವಿಷ್ಣುರಹಸ್ಯೇ॥ಅಲ್ಪಭೋಗೇನ ಕ್ಷುಬ್ಧಃ॥ಶಾಂತಾರ್ಚಿಃ ತದ್ ದಗ್ಧ್ವಾ ॥೩೪॥

## ಕನ್ನಡಾರ್ಥ

"ಪೂರ್ವದ ಪ್ರಾರಬ್ಧ ಕರ್ಮಗಳನ್ನು ಉಪಭೋಗಿಸಲು ಶರೀರವು ಬರುವುದು. ಆ ಶರೀರದಲ್ಲಿ ಅನೇಕ ತರಹದ ಕರ್ಮಗಳನ್ನು ನಿತ್ಯದಲ್ಲೂ ಮಾಡುತ್ತಾರೆ. ಅವರು ಮಾಡುವ ಈ ಕರ್ಮಗಳಲ್ಲಿ ಕೆಲವು ಶುಭಗಳೂ, ಕೆಲವು ಅಶುಭಗಳೂ ಆಗಿರುತ್ತವೆ. ಈ ಕರ್ಮಗಳೇ ಮುಂದಿನ ಶರೀರಕ್ಕೆ ಸಂಚಿತಗಳಾಗುವುವು. ಸಂಚಿತ ಕರ್ಮಗಳು ಕಾಲಾನುಸಾರವಾಗಿ ಸಹಕಾರಿ ಕಾರಣದ ಮೂಲಕವಾಗಿ ಫಲವನ್ನು ಕೊಡುವವುಗಳಾಗುತ್ತವೆ. ಹಾಗೂ ಅವು ಪ್ರಾರಬ್ಧಗಳೆನಿಸುವುವು. ಈ ಕರ್ಮಫಲಗಳನ್ನು ಉಪಭೋಗಿಸಲು ಶರೀರವನ್ನು ಹೊಂದಿ ಮತ್ತೆ ಕರ್ಮಗಳನ್ನು ಮಾಡುತ್ತಾನೆ. ಮತ್ತೆ ಅವುಗಳ ಫಲಗಳನ್ನು ತೀರಿಸಲು ಶರೀರಾಂತರಗಳಿಂದ ಕರ್ಮಗಳನ್ನು ಮಾಡು ತ್ತಾನೆ. ಹೀಗೆ ಅನಾದಿಕಾಲದಿಂದ ಕರ್ಮಗಳು ಚಕ್ರದಂತೆ ಬಂದೇ ಬರು ವವು. ಈ ಕರ್ಮಗಳನ್ನು ಕೇವಲ ಫಲೋಪಭೋಗದಿಂದಲೇ ಕಳೆದು ಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ಮುಮುಕ್ಷುಗಳು ಆ ಕರ್ಮವಿಮೋಚಕ ನಾದ ಶ್ರೀ ನಾರಾಯಣನನ್ನು ಮರೆಹೋಗಬೇಕು." ಎಂದು ವಿಷ್ಣುರಹಸ್ಯ ದಲ್ಲಿ ಭಗವಂತನು ಕರ್ಮ, ಅವುಗಳ ಮೋಚನ ಇವುಗಳನ್ನು ಉದಾಹರಿಸಿ ನಿರೂಪಿಸುತ್ತಾನೆ.

ದೃಷ್ಟಾಂತದಲ್ಲಿ ಅಗ್ನಿಯು ಅಲ್ಪತೃಣಾದಿಗಳ ಭೋಗದಿಂದ ಕ್ಷುಭಿತ ನಾಗುವನು. ಅದೆಲ್ಲವನ್ನೂ ದಹಿಸುವುದರಿಂದ ಶಾಂತನಾಗುವನು, ಎಂದು ತಿಳಿಯಬೇಕು. ||೩೪||

**ಅವತರಣಿಕಾ :—** ಶ್ರೀಹರಿಯು ಭಕ್ತರಕ್ಷಕನೆಂದು ಸ್ತೋತ್ರ ಗೈಯ್ಯುತ್ತಾ ಈ ಕರ್ಮವಿಮೋಚನ ಸಂಧಿಯನ್ನು ಮುಗಿಸುತ್ತಾರೆ.

**ಶ್ರೀ ವಿರಿಂಚ್ಯಾದ್ಯಮರವಂದಿತ ।**
**ಈ ವಸುಂಧರೆಯೊಳಗೆ ದೇವಕಿ ।**
**ದೇವಿ ಜಠರದೊಳವತರಿಸಿದನು ಅಜನು ನರರಂತೆ ॥**

**ರೇವತೀರಮಣಾನುಜನು ಸ್ವಪ।**
**ದಾವಲಂಬಿಗಳನು ಸಲಹಿ ದೈ।**
**ತ್ಯಾವಳಿಯ ಸಂಹರಿಸಿದ ಜಗನ್ನಾಥವಿಠ್ಠಲನು॥೩೫॥**

ಅಂತು ಸಂಧಿ ೨೧ಕ್ಕೆ ಪದ ೬೩೮
ಕರ್ಮವಿಮೋಚನ ಸಂಧಿ ಸಮಾಪ್ತ ಮಂಗಳಮಾಹ॥
ಶ್ರೀಗುರುಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು॥

**ಪದ್ಯಾರ್ಥ :—** ಶ್ರೀ=ಸಂಪತ್ಕರಳಾದ ರಮಾದೇವಿ, ವಿರಿಂಚ್ಯಾದಿ= ಬ್ರಹ್ಮದೇವರೆ ಮೊದಲಾದ ದೇವತೆಗಳಿಂದ, ವಂದಿತ=ನಮಸ್ಕರಿಸಿಕೊಳ್ಳು ವವನು, ಈ ವಸುಂಧರೆಯೊಳಗೆ=ಈ ಭರತ ಖಂಡ ಪುಣ್ಯಭೂಮಿಯೊಳಗೆ, ದೇವಕಿ ದೇವಿ=ದೇವಕ ರಾಜನ ಮಗಳಾದ ದೇವಕಿ ದೇವಿಯ, ಜಠರ ದೊಳಗೆ=ಗರ್ಭದೊಳಗೆ ಅಥವಾ ಉದರದಿಂದ, ಅವತರಿಸಿದನು=ಶ್ರೀಕೃಷ್ಣ ನೆಂಬೊ ನಾಮದಿಂದ ಪ್ರಾದುರ್ಭೂತನಾದನು. ಅವತಾರ ಮಾಡಿದನು, ಬ್ರಹ್ಮಾದಿವಂದಿತನೂ, ಅಜನು=ಉತ್ಪತ್ತಿಶೂನ್ಯನಾದನೂ, ನರರಂತೆ= ಮನುಷ್ಯರಂತೆ ಅವತರಿಸಿದನೆ ಹೊರ್ತಾಗಿ ಮಾನವರಂತೆ ಶ್ರೀಹರಿಗೆ ಗರ್ಭ ವಾಸದುಃಖವಿಲ್ಲ, ರೇವತೀ ರಮಣಾನುಜನು=ರೈವತ ರಾಜನ ಪುತ್ರಿಯಾದ ರೇವತಿ ದೇವಿಯ ಪತಿ ಬಲರಾಮ ದೇವರ ತಮ್ಮನು ಶ್ರೀಕೃಷ್ಣಪರಮಾತ್ಮನು. ಸಮಸ್ತ ಪಾಪರೂಪವಾದ ಕರ್ಮವಿಕರ್ಮವನ್ನು ಮೋಚನ ಮಾಡಿ ಪಾಪ ಪರಿಹಾರಗೈಸಿ, ಸ್ವಪದಾವಲಂಬಿಗಳನು ಸಲಹಿ=ತನ್ನ ಪಾದವನನುಸರಿಸಿ ನಂಬಿದ ಭಕ್ತರನ್ನು ಸಲಹಿ=ಸಂರಕ್ಷಿಸಿ. ದೈತ್ಯಾವಳಿಯ ಸಂಹರಿಸಿದ=ದೈತ್ಯರ ಕುಲವನ್ನೇ ನಾಶ ಮಾಡಿದ, ಜಗನ್ನಾಥ ವಿಠ್ಠಲನು=ಜಗತ್ತಿಗೆ ಸ್ವಾಮಿಯಾದ ಶ್ರೀಕೃಷ್ಣನೇ ಎಂದು ನುತಿಗೈದು ಕರ್ಮ ವಿಮೋಚನ ಸಂಧಿಯನ್ನು ತಮ್ಮ ಬಿಂಬನಾದ ಜಗನ್ನಾಥವಿಠ್ಠಲರೂಪಿ ಹರಿಯ ಪಾದವೇ ಶ್ರೀಕೃಷ್ಣನೆಂದು ಶ್ರೀಕೃಷ್ಣಾರ್ಪಣ ಪೂರ್ವಕವಾಗಿ ಸಂಧಿ ಸಮಾಪ್ತ ಗೈದ ದಾಸಾರ್ಯರು ನಿಂದು ತಾವೇ ಪದ್ಯಾರ್ಥ ಬರೆದು ಬರೆಸಿದ್ದು. ಶ್ರೀಮಧ್ವೇಶಾರ್ಪಣಮಸ್ತು ॥೩೫॥

**ಭಾವಸೂಚನ** ॥ ಉಪಸಂಹರತಿ ಶ್ರೀತಿ॥ ರೇವತಿರಮಣಾನುಜ ಕೃಷ್ಣ, ಆವಳಿ=ಪಂಙ್ಕ್ತಿ।ಇತಿ ಭಾವಸೂಚನೇ ಕರ್ಮ ವಿಮೋಚನ ಸಂಧಿಃ ಸಮಾಪ್ತಃ ||೩೫||

ಶ್ರೀಕೃಷ್ಣಾರ್ಪಣಮಸ್ತು

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

**"ಶ್ರೀ"** ಇತಿ || ಅಬ್ದವಾಹನಾನುಜ ಪದೇನ ಇಂದ್ರಾನುಜತ್ವಸ್ಯ, ರೇವತೀ ರಮಣಾನುಜಪದೇನ ಬಲಾನುಜತ್ವಸ್ಯ ಚ ಕಥನೇನ ಭಕ್ತರಕ್ಷಣಂ ಉಕ್ತಮ್ ||೩೫||

ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ
ವ್ಯಾಸದಾಸಸಿದ್ಧಾಂತ ಕೌಮುದ್ಯಾಂ ಕರ್ಮವಿಮೋಚನ ಸಂಧಿಃ ಸಮಾಪ್ತಃ

## ಕನ್ನಡಾರ್ಥ

ಈ ಸಂಧಿಯನ್ನು ಮುಗಿಯಿಸುತ್ತಾರೆ "ಶ್ರೀವಿರಿಂಚ್ಯಾದ್ಯಮರ ವಂದಿತ" ಎಂಬ ಪದ್ಯದಿಂದ.

ಹಿಂದಿನ ಪದ್ಯದಲ್ಲಿ "ಅಬ್ದವಾಹನಾನುಜ" (ಅಬ್ದ-ಮೇಘ, ತದ್ವಾಹನ-ಮೇಘವಾಹನ ಇಂದ್ರ, ಅವನ ಅನುಜ-ವಾಮನ) ಎಂಬ ಪದದಿಂದ ಶ್ರೀಹರಿಯು ಇಂದ್ರಾನುಜ-ಉಪೇಂದ್ರ-ವಾಮನನಾದನು ಎಂದು ಹೇಳಿದುದರಿಂದಲೂ, ಈ ಪದ್ಯದಲ್ಲಿ ಬಲರಾಮಾನುಜನೆಂದು (ಶ್ರೀಕೃಷ್ಣನಿಗೆ) ಹೇಳಿದುದರಿಂದಲೂ ಭಕ್ತರಕ್ಷಣವನ್ನು ಹರಿಯು ಮಾಡುವನೆಂಬ ಲಕ್ಷಣವು ಹೇಳಲ್ಪಟ್ಟಿರುತ್ತದೆ. ||೩೫||

ಇಲ್ಲಿಗೆ ಕರ್ಮವಿಮೋಚನ ಸಂಧಿಯ ಕನ್ನಡಾರ್ಥಾನುವಾದವು ಮುಗಿದುದು

ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ

ಶ್ರೀ ಲಕ್ಷ್ಮೀ ನರಸಿಂಹಾತ್ಮಕ ಶ್ರೀ ಲಕ್ಷ್ಮೀ ವೆಂಕಟೇಶ ಪ್ರಸನ್ನ
ಶ್ರೀ ಗುರುರಾಜೋ ವಿಜಯತೇ

# ೨೨ನೇ ಭಕ್ತಾಪರಾಧಸಹಿಷ್ಣು ಸಂಧಿಯ ಸಾರ

ಈ ೨೨ನೇ ಸಂಧಿ ಮಾತ್ರ ದಾಸಾರ್ಯರ ಕಾಲದ ಮೂಲ ಪ್ರತಿಗೆ ಅನುಸರಿಸಿ ಅಚ್ಚಾದ ಎಲ್ಲ ಪ್ರತಿಗಳಲ್ಲಿಯೂ ಸರಿಯಾಗಿ ಉಳಿದವೆ. ಆದರೆ ಮೂಲ ಪ್ರತಿಯಲ್ಲಿರದೇ ಇದ್ದ ಎರಡು ಪದ್ಯಗಳು (೧)ಉಲ್ಲಡಿಯ ನೆಳಲಂತೆ ಭವತಲ್ಲಣದ ಸೌಖ್ಯವು ಒಂದು ಪದ್ಯ ಮತ್ತು (೨) ದ್ರುಹಿಣ ಮೊದಲಾದಮರರಿಗೆ ಈ ಎರಡು ಪದ್ಯಗಳು ಇತರ ಛಾಪೆ ಪುಸ್ತಕಗಳಲ್ಲಿ ಹೆಚ್ಚಾಗಿ ಸೇರಿಸಿದ್ದಾರೆ. ಇವೆರಡು ಪದ್ಯಗಳು ಶ್ರೀ ಗುರು ಶ್ರೀಶರಾಯರ ಪ್ರತಿ ಶ್ರೀ ಪ್ರಾಣೇಶ ವಿಠಲರ ಬಹಳ ಹಳೇ ಪ್ರತಿಗಳಲ್ಲಿ ಇಲ್ಲ. ಈ ಭಕ್ತಾಪರಾಧ ಸಹಿಷ್ಣು ಸಂಧಿಗೆ ಸಕಲ ದುರಿತ ನಿವಾರಣ ಸಂಧಿಯೆಂದು ಭಾವಸೂಚನೆ ಕಾರರು ತೋರಿಸಿದ್ದಾರೆ. ಕರುಣಾಳುವಾದ ಶ್ರೀಹರಿಯು ಭಕ್ತರ ಪ್ರಾರಬ್ಧ ಕರ್ಮ ಅನುಭೋಕ್ತೃವ್ಯ ಮಾಡಿಸುವಾಗ ಕರ್ಮ ಅನಂತವಾದರೂ, ಅಲ್ಪ ಭೋಗದಿಂದಲೇ ಪ್ರಾರಬ್ಧ ಕರ್ಮ ಉಣಿಸುವಾಗ್ಗೆ ಪಾಪಗಳು ಕಿಂಚಿತು ಒದಗಿದರೂ, ಆ ಭಕ್ತರ ಅಪರಾಧಗಳನ್ನು ಎಣಿಸುವುದಿಲ್ಲ ವೆಂಬುವನ್ನು ಬ್ರಹ್ಮ ಸೂತ್ರಾನುಸಾರವಾಗಿ ಈ ಸಂಧಿಯಲ್ಲಿ ನಿರೂಪಿಸುತ್ತಾರೆ.

**ಅವತರಣಿಕಾ :**—ಹಿಂದಿನ ೨೧ನೇ ಸಂಧಿಯಲ್ಲಿ ಸಂಚಿತಕರ್ಮನಾಶ-ಆಗಾಮಿಕರ್ಮ ಬ್ರಹ್ಮದರ್ಶನದಿಂದ ಅಲೇಪವಾಗಿ ಪ್ರಾರಬ್ಧಕರ್ಮ ಭೋಕ್ತೃವ್ಯನಂತರ ಮುಕ್ತಿಯಾಗುತ್ತದೆಂದು ಶಾಸ್ತ್ರಸಮ್ಮತಿಯಿಂದ ದಾಸಾರ್ಯರು ಅಪ್ಪಣೆ ಕೊಡಿಸಿದರು. ಆದರೆ ಈ ಭಕ್ತಾಪರಾಧ ಸಹಿಷ್ಣು ಸಂಧಿಗೂ ಹಿಂದಿನ ಕರ್ಮವಿಮೋಚನ ಸಂಧಿಗೂ ಸಂಬಂಧವೇನೆಂಬುದು ತಿಳಿಯುವದು ಅವಶ್ಯಕತೆ ಇದೆ. ಶ್ರೀ ದಾಸಾರ್ಯರೇ ಮಹಾಕರುಣೆಯಿಂದ ಭಕ್ತರಿಗೆ ಸುಜ್ಞಾನಕೊಡಲು ಹಿಂದಿನ ೨೧ನೇ ಸಂಧಿ ಪದ್ಯ ೩೪ರಲ್ಲಿ "ಲಬ್ಧನಾಗುವ

**ತನ್ನವಗೆ ಪ್ರಾರಬ್ಧ ಕರ್ಮಗಳುಣಿಸಿ ತೀವ್ರದಿ । ಕ್ಷುಬ್ಧ ಪಾವಕನಂತೆ** ಬಿಡದಿಪ್ಪನು ದಯಾಸಾಂದ್ರ" ಎಂಬುದನ್ನು ಹೇಳಿದ್ದಾರೆ. ಇದು ಬ್ರಹ್ಮಸೂತ್ರ ಅರ್ಥವೇ ಇದೆ. ತನ್ನ ಭಕ್ತರಾದವರಿಗೆ ಪ್ರಾರಬ್ಧಕರ್ಮಗಳ ಉಣಿಸುವ ಸಮಯದಿ ಪ್ರಾರಬ್ಧ-ಪುಣ್ಯ ಪ್ರಾರಬ್ಧಪಾಪಗಳೆರಡು ಉಣಿಸುತ್ತಾನೆ. ಈ ಪ್ರಾರಬ್ಧ ವಿಧಿವತ್ತಾದುದು. ಅವಶ್ಯ ಅನುಭೋಕ್ತವ್ಯವಾದುದು. ಒಲ್ಲೆನೆಂದರೆ ಬಿಡದು. "ಭೋಗೇನ ಪುಣ್ಯಂ ಕುಶಲೇನ ಪಾಪಂ ಕಲೇವರಂ ಕಾಲಜವೇನ ಹಿತ್ವಾ ।। ಕೀರ್ತಿಂ ವಿಶುದ್ಧಾಂ ಸುರಲೋಕಗೀತಾಂ ವಿತಾಯ ಮಾಮೇಷ್ಯತಿ ಮುಕ್ತ ಬಂಧಃ ।।೧೪।। ಭಾಗವತ ೭-೧೪ರಲ್ಲಿ ಶ್ರೀನರಸಿಂಹದೇವರು ಪ್ರಹ್ಲಾದರಾಜರಿಗೆ ಆಜ್ಞೆ ಕೊಟ್ಟಿದ್ದಾರೆ. ಮನ್ವಂತರ ದೈತ್ಯರಾಜ್ಯ ಭೋಗವಾಳುವ ಕಾಲದಲ್ಲಿ "ಪುಣ್ಯಂ ಪ್ರಾರಬ್ಧಂ ಕಾಮ್ಯಪುಣ್ಯಂ ಕುಶಲೇನ ಪ್ರಾಯಶ್ಚಿತ್ತಾದಿನಾ **ಪಾಪಂ ಕಾಲಜವೇನ ಪ್ರಾರಬ್ಧಪ್ರಾಪ್ತಂ** ಕಾಲಜವೇನ ಹಿತ್ವಾ ವಿನಾಶ್ಯ ಸುರಲೋಕಗೀತಾಂ ವಿಶುದ್ಧಾಂ ಕೀರ್ತಿಂ ವಿತಾಯ ವಿಸ್ತೃತ್ಯ ಮುಕ್ತಬಂಧೋ ಮಾಮೇಷ್ಯತಿ ।। (ಭವಾನಿತಿ ಯೋಜನಾ) **ಪ್ರಾರಬ್ಧಪಾಪಂ ಪ್ರತಿ ಪ್ರಾಯಶ್ಚಿತ್ತಸ್ಯೋಪಮರ್ದಕತ್ವಂ ಜ್ಞಾತವ್ಯಂ।।** ಅನೇನಾಧಿಪತ್ಯದಾನಂ ಭೋಗೇನ ಕಾಮ್ಯಪುಣ್ಯಕ್ಷಯಸಂಪಾದಕತಯಾ **ಪಾಪೋಪಮರ್ದಕ ಕುಶಲಾನುಷ್ಠಾನೋಪಯೋಗಿತಯಾ** ಪ್ರಾರಬ್ಧ ಸುರದೇಹಾದಿ ನಾಶಕತಯಾ ಕೀರ್ತ್ಯಾದಿ ಸಂಪಾದಕತಯಾ ಮಹಾನುಗ್ರಹ ಏವ ಪ್ರಹ್ಲಾದೇ ಕೃತಃ"।। ಎಂದು ಶ್ರೀಭಾಗವತ ಸಪ್ತಮ ಟಿಪ್ಪಣಿ ಮಂದನಂದನೀಕಾರರಾದ ದೇವಾಂಶರಾದ ಶ್ರೀ ವ್ಯಾಸತತ್ವಜ್ಞ ಶ್ರೀಪಾದಂಗಳವರು ಅಪ್ಪಣೆ ಕೊಡಿಸಿರುವರು. ಸಾರಾಂಶ ರಾಜ್ಯಭೋಗಕಾಲದಲ್ಲಿಯೂ ನನ್ನಾಜ್ಞೆಯಿಂದ ಪುಣ್ಯಪ್ರಾರಬ್ಧವಂ ಸಂಪಾದಿಸಿ ವಿಸ್ತೃತವಾದ ಕೀರ್ತಿಯನ್ನು ಹೊಂದು. ಪಾಪ ಪ್ರಾರಬ್ಧಕರ್ಮ ಪ್ರಾಯಶ್ಚಿತ್ತಾದಿಗಳಿಂದ ಉಪಮರ್ದನವನ್ನು ಎನ್ನನುಗ್ರಹದಿಂದ ಸ್ವಲ್ಪ ಅನುಭೋಗದಿಂದಲೇ ಉಪಮರ್ದನವಾಗುವುದು. ಪ್ರಾರಬ್ಧಕರ್ಮದಿಂದ ಹಿಂದಿನ ಜನ್ಮದಲ್ಲಿ ಬ್ರಹ್ಮಶಾಪದಿಂದ ಬಂದ ಅಸುರದೇಹಾದಿಗಳ ನಾಶವಾಗಲು ನನ್ನನ್ನು ಹೊಂದಿ ಬಂಧಮುಕ್ತನಾಗು.

ಹೀಗೆ ಭಗವಂತನು ಸಾಂಶದೇವತೆಗಳಾದ ತನ್ನ ಭಕ್ತರ ಪಾಪರೂಪ

ವಾದ ಕರ್ಮಗಳನ್ನು ಉಪಮರ್ದನ ಮಾಡುವಲ್ಲಿ ಸಮರ್ಥನೂ, ಅತಿ ದಯಾಳೂ ಎಂದು ಸ್ತೋತ್ರಗೈದಿರುವನು.

ಸಂಚಿತಾಗಾಮಿ ಕರ್ಮನಾಶಾನಂತರದಲ್ಲಿ ಬ್ರಹ್ಮಜ್ಞಾನಿಯಾದವನಿಗೆ "ಪ್ರಾರಬ್ಧಕರ್ಮ" ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಮ್" ಎಂಬುವ ವಚನದಂತೆ, ಅನುಭೋಕ್ತವ್ಯ ಕಾಲದಲ್ಲಿ ತನ್ನ ಭಕ್ತರಿಂದ ಆದ ಅಪರಾಧ ಕ್ಷಮಿಸುತ್ತಾನೆ. ಅಂದರೆ ಕರುಣಾಸಮುದ್ರನಾದ ಹರಿಯು, ಅನು ಗ್ರಹಿಸಿ ಪಾಪಕರ್ಮ ಉಪಮರ್ದನ ಮಾಡುವದೇ ಭಕ್ತಾಪರಾಧಸಹಿಷ್ಣುತೆ. ಶ್ರೀಹರಿಯ ಕಾರುಣ್ಯ ಎಂದು ಈ ಭಕ್ತಾಪರಾಧಸಹಿಷ್ಣು ಸಂಧಿಯನ್ನು ಉಪ ಕ್ರಮಿಸಿದುದು ಬಹು ಸಮಂಜಸ. ಹಿಂದಿನ ಸಂಧಿಗೂ ಈ ಸಂಧಿಗೂ ಬಹು ನಿಕಟ ಸಂಬಂಧ. ಈ ಪ್ರಾರಬ್ಧಕರ್ಮ ಸಾಂಶದೇವತೆಗಳು, ನಾನಾ ಅಂಶ ಗಳಿಂದ ಭಗವಂತನಾಜ್ಞೆಯಿಂದ ಅನುಭೋಗಿಸುವರು. ನಿರಂಶರು ಒಂದೇ ಅಂಶ ದಿಂದ ಅನುಭೋಗಿಸುವರು.

**"ಓಂ ಭೋಗೇನ ತ್ವಿತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ ಓಂ"॥** ಎಂಬ ಬ್ರಹ್ಮಸೂತ್ರ. ಈ ಸೂತ್ರಾರ್ಥವೇನಂದರೆ ಪ್ರಾರಬ್ಧ ಪುಣ್ಯ ಪಾಪ ಗಳನ್ನು ಫಲಾನುಭವದಿಂದ ನಾಶಪಡಿಸಲು ವಿಲಂಬವಿಲ್ಲದೇನೆ ತತ್ವಜ್ಞಾನಿಯು ಜ್ಞಾನಪರಿಪಾಕದಿಂದ ಬ್ರಹ್ಮನನ್ನು ಹೊಂದುತ್ತಾನೆ. ಬ್ರಹ್ಮದ್ವೇಷಿಯು ದ್ವೇಷ ಪರಿಪಾಕದಿಂದ ತಮಸ್ಸನ್ನು ಹೊಂದುತ್ತಾನೆ.

ಇದಕ್ಕೆ ಶ್ರೀ ಸರ್ವಜ್ಞರ ಭಾಷ್ಯ **"ಆರಬ್ಧ ಪುಣ್ಯ ಪಾಪೇ ಭೋಗೇನ ಕ್ಷಪಯಿತ್ವಾ ಬ್ರಹ್ಮ ಸಂಪತ್ಸ್ಯತೇ ॥** ಅಥೇತಿ ನಿಯಮಸೂಚಕಮ್"॥ ಇವರ ಸಾರಾಂಶವೇನೆಂದರೆ ತತ್ವಜ್ಞಾನಿಯು ಅನಾರಬ್ಧ(ಅಪ್ರಾರಬ್ಧ)ವಾದ ಪುಣ್ಯಪಾಪಗಳಿಂದ ಬೇರೆಯಾದ ಪ್ರಾರಬ್ಧ ಪುಣ್ಯ ಪಾಪಗಳನ್ನು ಕಾರ್ಯ ದ್ವಾರಾ ಅನುಭವದಿಂದ ನಾಶಪಡಿಸಿದ ಮೇಲೆ ಬ್ರಹ್ಮದರ್ಶಿಯು ಪರಬ್ರಹ್ಮ ನನ್ನೂ, ಬ್ರಹ್ಮದ್ವೇಷಿಯು ತಮಸ್ಸನ್ನೂ ಹೊಂದುತ್ತಾನೆ. ಅಥ ಶಬ್ದವು ಪ್ರಾರಬ್ಧ ಪುಣ್ಯ ಪಾಪಗಳ ನಾಶವಾದೊಡನೆಯೇ ಎನ್ನುವ ಈ ನಿಯಮ ವನ್ನು ಸೂಚಿಸುತ್ತದೆ.

ಈ ನಿಯಮವು ತತ್ಕ್ಷಣವೇ ಎಂದು ಪ್ರಾರಬ್ಧ ಕರ್ಮ ನಾಶವಾದೊಡನೆ ಎಂಬುದು ಹೇಗೆ ಇವರ ವಿಚಾರವೇನು ? ಇದಕ್ಕೂ ಕಾಲಾವಧಿಯುಂಟೋ ಎಂದರೆ ಶ್ರೀಮದಾಚಾರ್ಯರು ಮುಂದೆ ಭಾಷ್ಯದಲ್ಲಿ "**ಆರಬ್ಧ ಪುಣ್ಯಪಾಪಸ್ಯ ಭೋಗೇನ ಕ್ಷಪಣಾದನು । ಪ್ರಾಪ್ನೋತ್ಯೇವ ತಮೋ ಘೋರಂ ಬ್ರಹ್ಮ ವಾ ನಾತ್ರ ಸಂಶಯಃ ॥ ಬ್ರಹ್ಮಣಾಂ ಶತಕಾತ್ತು ತತ್ಪೂರ್ವ ಪ್ರಾರಬ್ಧ ಸಂಕ್ಷಯಃ ॥ ನಿಯಮೇನ ಭವೇನ್ನಾತ್ರ ಕಾರ್ಯಾ ಕಾಚಿ ದ್ವಿಚಾರಣಾ ॥ ಇತಿ ಚ ನಾರಾಯಣ ತಂತ್ರೇ ॥** ಇದರ ಸಾರಾಂಶ ವೇನೆಂದರೆ ಪ್ರಾರಬ್ಧ ಪುಣ್ಯಪಾಪಗಳಿಗೆ ಭೋಗದಿಂದ ನಾಶವಾದೊಡನೆಯೇ ಬ್ರಹ್ಮದರ್ಶಿಯು ಪರಬ್ರಹ್ಮನನ್ನು, ಬ್ರಹ್ಮದ್ವೇಷಿಯು ಅಸಹ್ಯ ದುಃಖವುಳ್ಳ ತಮಸ್ಸನ್ನು ಹೊಂದುತ್ತಾನೆ. ಈ ಅರ್ಥದಲ್ಲಿ ಸಂದೇಹವಿಲ್ಲ. ಪ್ರಾರಬ್ಧ ಕರ್ಮ ನಾಶವಾಗುವುದಕ್ಕೆ ಕಾಲಾವಧಿ ಇದೆಯೋ ಎಂದರೆ ಬ್ರಹ್ಮಮಾನದಿಂದ ನೂರು ಬ್ರಹ್ಮಕಲ್ಪ ಯಾವ ಕಾಲವೋ ಆ ಕಾಲ ಸಮಾಪ್ತಿಯಾಗದ ಮೊದಲಿಗೇವೆ, ಬ್ರಹ್ಮ ಮೊದಲಾದ ಎಲ್ಲ ಬ್ರಹ್ಮಜ್ಞಾನಿಗಳಿಗೂ, ಪ್ರಾರಬ್ಧಕರ್ಮವು ಉಳಿ ಯುವುದಿಲ್ಲ. ಬ್ರಹ್ಮದೇವರ ನೂರು ವರ್ಷ ಪರಿಯಂತವಾಗಿಯೇ ಈ ನಿಯಮಕ್ಕೆ ಎಲ್ಲಿಯೂ ಬಾಧಕವಿಲ್ಲ. ಹೀಗೆ ನಾರಾಯಣತಂತ್ರ ಎನ್ನುವ ಗ್ರಂಥದಲ್ಲಿ ಹೇಳಿದೆ. ಆದ ಕಾರಣದಿಂದಲೇ ದಾಸರಾಯರು ಇದೇ ೨೭ನೇ ಸಂಧಿಯ ಕೊನೆಯ ಪದ್ಯ(೩೩)ದಲ್ಲಿಯೂ "**ಬ್ರಹ್ಮಕಲ್ಪಾಂತದಲಿ ವೇದಾ। ಗಮ್ಯ ಶ್ರೀಜಗನ್ನಾಥ ವಿಠ್ಠಲ । ಸುಮ್ಮನೀವನು ತ್ರಿವಿಧರಿಗೆ ಅವರವರ ನಿಜಗತಿಯಾ ॥** ಎಂದು ಹೇಳಿದ್ದು ಸೂತ್ರ ಭಾಷ್ಯಗಳಿಗೆ ಅನುಕೂಲ ವಾಗಿಯೂ ಬಹು ಅರ್ಥವತ್ತಾಗಿದೆ. ಆದರೆ ಬ್ರಹ್ಮದೇವರಿಗೆ ನೂರು ಕಲ್ಪದಿ ಪ್ರಾರಬ್ಧಕ್ಷಯ. ಇತರ ರುದ್ರಾದಿಗಳಿಗೆ ಪ್ರಾರಬ್ಧ ಕ್ಷಯ ಎಷ್ಟೆಷ್ಟು ಕಲ್ಪವೆಂದರೆ

"ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧ ಸಂಕ್ಷಯಃ । ಬ್ರಹ್ಮಣ ಸ್ತ್ವೇವ ತಾವತ್ಸ್ಯಂ ಪಂಚಾಶದ್ಬ್ರಹ್ಮಣಸ್ತಥಾ ॥ ರುದ್ರಸ್ಯ ವಿಂಶದೇವ ಸ್ಯಾದಿಂದ್ರ ಸ್ಯಾಷ್ಟಾಧಿಕಾ ದಶ ॥ ಅನ್ಯೇಷಾಂ ಬ್ರಹ್ಮಮಾತ್ರಸ್ಯ ಷ್ವಂತ ಆರಬ್ಧ ಸಂಕ್ಷಯಃ"

ಇದಕ್ಕೆ ಸರಿಯಾದ ಅರ್ಥವನ್ನೆ ಶ್ರೀ ಜಗನ್ನಾಥದಾಸವರ್ಯರು ಸಾಧನ ಕಲ್ಪ ೨೪ನೇ ಸಂಧಿ ಪದ್ಯ ೪೫ರಲ್ಲಿ ಸಂಕ್ಷಿಪ್ತವಾಗಿ ಹೇಳಿದ್ದೇನೆಂದರೆ :—

ಸಾಧನಗಳ ಪರೋಕ್ಷನಂತರ ।
ಐದುವರು ಮೋಕ್ಷವನು ಶಿವಶ।
ಕ್ರಾದಿ ದಿವಿಜರು ಉಕ್ತಕ್ರಮದಿಂ ಕಲ್ಪಸಂಖ್ಯೆಯಲಿ ।।
ಐದಲೆಯಗೈವತ್ತುಪೇಂದ್ರ ಸ
ಹೋದರನಿಗಿಪ್ಪತ್ತು ದ್ವಿನವತ್ಪ
ಗಾಧಿಪತಿ ಪ್ರಾಣನಿಗೆ ಗುರುಮನುಗಳಿಗೆ ಷೋಡಶವು ॥

ಮತ್ತು ಮುಂದೆ ೪೬-೪೭ ಪದ್ಯದಲ್ಲಿ ಇತರ ದೇವತೆಗಳ ವಿಷಯ ಹೇಳುತ್ತಾರೆ. ಪ್ರವಹ ಮರುತಗೆ ಹನ್ನೆರಡು ಸೈಂ।ಧವದಿನಾಕರ ಧರ್ಮರಿಗೆ ದಶ। ನವಸುಕಲ್ಪವು ಮಿತ್ರರಿಗೆ ಶೇಷಶತಜನಕೆಂಟು ॥ ಕಪಿಸನಕ ಸುನಂದನ ಸನ। ತ್ಕುವರ ಮುನಿಗಳಿಗೇಳು ವರುಣನ । ಯುವತಿ ಪರ್ಜನ್ಯಾದಿ ಪುಷ್ಕರಗಾರು ಕಲ್ಪದಲಿ॥೪೬॥ ಐದು ಕರ್ಮಜ ಸುರರಿಗಾಜಾ। ನಾದಿಗಳಿಗೆರಡು ಕಲ್ಪಾ। ರ್ಥಾದಿಕತ್ರಯ ಗೋಪಿಕಾಸ್ತ್ರಿಯರು ಪಿತೃತ್ರಯವು ॥ ಈ ದಿವೌಕಸ ಮನುಜ ಗಾಯಕ । ರೈದುವರು ಎರಡೊಂದು ಕಲ್ಪನರಾಧಿಪರಿಗರೆ ಕಲ್ಪದೊಳಗ ಪರೋಕ್ಷ ವಿರುತಿಹುದು॥೪೭॥ ದಾಸರೆ ಆರಬ್ಧ ಸಂಕ್ಷಯ ಕಾಲ ಬ್ರಹ್ಮಸೂತ್ರ ಅನುವ್ಯಾಖ್ಯಾನ ಸುಧಾ ಪರಿಮಳ ಗ್ರಂಥಗಳ ಸರಿಯಾದ ಭಾವಸಜ್ಜನರಿಗೆ ತಿಳಿಸಿದ ಕರುಣಾಳುಗಳು.

## ಹರಿಯಿಂದ ಇನ್ನು ಪ್ರಾರಬ್ಧಕರ್ಮ ಅಪರಾಧ ಉಪರ್ದನ ಹೇಗಂಪರೆ

ಶ್ರೀ ವಿಜಯದಾಸಾರ್ಯರು ಶ್ರೀ ವೆಂಕಟೇಶ ದೇವರ ಸ್ತೋತ್ರ ಸುಳಾದಿ (೧೧) ತೀರ್ಥಕ್ಷೇತ್ರ ಮಹಿಮಾಸುಳಾದಿ ಪು ೯೯-೧೦೦ರಲ್ಲಿ ಭಕ್ತರು ಮಾಡಿದ ಪರಾಧ ಹೇಗೆ ಕ್ಷಮಿಸುವನೆಂದರೆ ತಾಯಿ ತನ್ನ ಮಗುವನ್ನು ನೋಯು ಗೊಡದಂತೆ ದಂಡಿಸಿ ಪಾಲಿಸುವಂತೆ ಪಾಲಿಪನೆಂದು ಹೇಳುತ್ತಾರೆ.

### ಧ್ರುವತಾಳದಲ್ಲಿ

ಕಾಯದಿಂದಲಿ ಭಕ್ತ ಮಾಡಿದಪರಾಧ । ತಾಯಿಯೆಂದದಿ ತಾನೆ ಕಾರುಣ್ಯದಿಂ । ಘಾಯವಾಗದಂತೆ ದಂಡಿಸಿ ಪಾಲಿಸುವ । ಶ್ರೀಯರಸನ ಗುಣಕೆ ಏನೆಂಬೆನೋ।ಸ್ತ್ರೀಯೋಗಾ ಮೊದಲಾದ ಪಾಪಂಗಳು ಮಾಡಿರೆ।

ಕಾಯಿದುಕೊಂಬುವನಯ್ಯಾ **ವಾಸನಮಯದಿಂ** । ಆಯಿತೆಂಪೆನಿಸುವ **ಸ್ವಲ್ಪಾನುಭವದಿಂದ** । ನೋಯಾದಂತೆ ಪಾಪಾ ತೀರಿಸುವನು । ಈಯುವನಿ ಯೊಳಗೆ ಎಣಿಸಿದರು ಇಂಥ ಉ।ಪಾಯ ಬಲ್ಲಂಥ ದೈವ ಒಂದು ಇಲ್ಲ। ಬಾಯಲ್ಲಿ ಆಡಿದರು ಕೋಪದಿಂದವನ । ಸಾಯಾ ಬಡುವರಲ್ಲೋ ಮುಂದೋರದೆ । ಕಾಯಜ ಪಿತನ ಮಹಿಮೆ ಕೇಳಿರೋ ತನ್ನವರು । **ಕಾಯಾದಲ್ಲಿ ಪಾಪಾ ಮಾಡೆ ಮನದಲ್ಲಿ ಉಣಿಪಾ । ಛಾಯಾದಂತೆ ಪುಣ್ಯ ಮನದಿಂದ ಮಾಡಿದರೆ । ಕಾಯುದಲಿ ಉಣಿಸುವ ಖ್ಯಾತಿಯಿತ್ತು** । ಮಾಯಾಕಾರನ ಮಾಯ ತಿಳಿದವನಾರು ದೈತೇಯ ಜನರಿಗೆ ಇದರ ವಿಪರೀತವೋ ವಾಯು ವಂದಿತ ವಿಜಯವಿಠಲ ವೆಂಕಟಗಿರಿ । ರಾಯ ತನ್ನ ಶರಣರಿಗೆ ಭೀತಿ ಬರ **ಗೊಡನು** ॥೧॥

**ಮುಂದೆ ತ್ರಿವಿಡಿ ತಾಳವಲ್ಲಿ ಶ್ರೀಹರಿಯ ಭಕ್ತಾಪರಾಧ ಸಹಿಷ್ಣುತೆ ಯನ್ನು ಮತ್ತೂ ವಿವರಿಸುತ್ತಾರೆ.**

"ಆವಾವ ದೈವಗಳ ನಂಬಿದರೇನಯ್ಯಾ । ಭಾವದಲಿ ನೋಡಿದರು ಸುಖವೇ ಇಲ್ಲ । ನೋವಾಗುವದು ಕೇಳಿ ಬಾಯಿಲಾಡಿದದಕ್ಕೆ । ಕೇವಲ ಬಾಧಿಯ ಬಡಿಸುವರು।ದೇವದೇವೇಶನ ಕರುಣತ್ವ ಇಂತಲ್ಲ। **ನೋವಾಗೊಡ ದಂತೆ ಉಣಿಪ ಪಾಪಾ** । ಆವಾವಗಾದರು ಇಂಥ ಶಕುತಿಯುಂಟೇ। ತ್ರಿವಿಧ ಗುಣದಿಂದ ಪ್ರತಿಬದ್ಧರು । **ಭೂವಲ್ಲಭ ಚೋರರ ದಂಡಿಸಿದಂತೆ ದೈ । ತ್ಯಾವಳಿಯ ಶಿಕ್ಷಿಸುವ** ನಿರ್ದೋಷನೋ । ದೇವ ನಾರಾಯಣ ವಿಜಯ ವಿಠ್ಠಲ್ಲ । ಶ್ರೀ ವೇಂಕಟನಾಥ ನಮ್ಮನು ಕಾವ ॥೩॥ ಎಂದು ಪ್ರಾರಬ್ಧಕರ್ಮ ಉಪಮರ್ದನ ಮಾಡಿ ಸ್ವಲ್ಪದರಲ್ಲಿಯೇ ಅನುಭೋಗಿಸಿ ಪಾಪ ಕಳೆದು ಪುಣ್ಯ ತಂದೀವನೆಂದು ವಿಶದವಾಗಿ ವರ್ಣಿಸಿ ಶ್ರೀ ವಿಜಯದಾಸರ ಪಾದವೇ ನಿಜ ಗತಿ.

ಮತ್ತು ಇನ್ನೊಂದು ಸುಳಾದಿಯಲ್ಲಿ ತನ್ನ ನಿಜಭಕ್ತರಾದ ಸಾತ್ವಿಕ ಜೀವರ ಲಿಂಗದೇಹ ಪರಿಚ್ಛೇದ ತ್ರಯದಲ್ಲಿದ್ದ ತಮಸ್ಸು ಪಾಪ ಕಳೆಯಲು ಭಕ್ತರಿಂದ ತಮೋಗುಣ ಕಾರ್ಯ ಮಾಡಿಸಿ, ಲಿಂಗಾಂಗಗತ ತಮ ನಾಶ ಮಾಡುತ್ತಾನೆ. ಈ ತಮೋಗುಣ ನಾಶಕತೆಯೇ ಭಕ್ತಾಪರಾಧಸಹಿಷ್ಣುತೆ,

ಗೀತೆಯಲ್ಲಿ ವಿಶದವಾಗಿದೆ. ಇಂತು ಪ್ರಾರಬ್ಧಕರ್ಮ ಉಣಿಸಿ ನಿಜಭಕ್ತರ ಅಪರಾಧ ಸಹಿಷ್ಣು ಹರಿಯೆಂದು ಈ ಪೂರ್ವಪೀಠಿಕೆಯಲ್ಲಿ ವಿಸ್ತಾರವಾಗಿ ಅಂಕೆ ಮಾಡಿತು.

ಇನ್ನು ಮುಂದೆ ದಾಸಾರ್ಯರು ಈ ಎಲ್ಲ ಶಾಸ್ತ್ರ ಭಾವಗಳಿಗನುಸರಿಸಿಯೇ ಮೊದಲಿಗೆ ಸಾಧನ ಜೀವಿಗಳ ಬುದ್ಧ್ಯಾರೋಹಣಗೋಸುಗವಾಗಿ ಯಾವ ಯಾವ ಭಕ್ತರ ಎಂಥೆಂಥ ಅಪರಾಧಗಳನ್ನು ಹೇಗೆ ಕ್ಷಮಾಪಣ ಮಾಡಿದ ನೆಂಬುದು ಆಯಾ ಭಕ್ತರ ದೃಷ್ಟಾಂತಪೂರ್ವಕ ಅವರ ದಾರಿದ್ರ್ಯಹರಣ-ದಾರಿದ್ರ್ಯಪ್ರಾಪ್ತ್ಯಕ್ಕೆ ಕಾರಣ–ಅದರ ಮೋಚನ–ಮತ್ತು ಸ್ವಯಂ ಭಕ್ತರಿಂದ ಆದುದು–ಅಪರಾಧ–ಭಕ್ತರಿಗೆ ಆಪತ್ತು ಪರರಿಂದ ಬಂದುದು ಮುಂತಾದ ಅನೇಕ ಭಕ್ತರುಗಳನ್ನು ಅನೇಕ ಅವತಾರಗಳಲ್ಲಿ ರಕ್ಷಿಸಿದ್ದು ಹೇಳಲು,

೧ನೇ ಪದ್ಯದಲ್ಲಿ ಶ್ರೀ ಲಕುಮಿರಮಣಗೆ ಸಮನಾದ ಕರುಣಾಳು ಎಲ್ಲಿಯೂ ಇಲ್ಲೇ ಇಲ್ಲ. ಕುಚೇಲನಾಮಕ ಬ್ರಾಹ್ಮಣನು ಸಾಂದೀಪಿ ಗುರುಗಳಲ್ಲಿ ಶ್ರೀಕೃಷ್ಣನೊಡನೆ ವಿದ್ಯಾಭ್ಯಾಸ ಮಾಡುವಾಗ್ಗೆ ಶ್ರೀಕೃಷ್ಣ-ಸಹಪಾಠಿಗ-ಮಿತ್ರ-ಗೆಳೆಯನೆಂದರಿದ ಕಾರಣ ಇದು ಅಲ್ಲದೆ ಪೂರ್ವ ಅನೇಕ ಜನ್ಮ ಜನ್ಮಾಂತರದ ದಾರಿದ್ರ್ಯ ದುಃಖ ಪ್ರಾರಬ್ಧ ಅನುಭವ ಮಾಡಿಸಿ ಅವನ ಸಾಧನ ಪೂರ್ತಿಯಾದುದು ತಿಳಿದು ಒಂದು ಮುಷ್ಟಿ ಅವಲಕ್ಕಿ ಸ್ವೀಕರಿಸೋ ಕೃಷ್ಣಾ ಸರ್ವೋತ್ತಮಾ ಎಂದು ಅರ್ಪಿಸಲು-ಸ್ವೀಕರಿಸಿ-ದಾರಿದ್ರ್ಯ ಕಳೆದು ಇಹಪರದಲ್ಲಿ ಮಹಾ ಸಂಪತ್ತು ಕೊಟ್ಟ.

ದ್ರೌಪದಿದೇವಿಯರು ದುಃಖಪ್ರಾರಬ್ಧರಹಿತರು. ಇವರು ಭಾರತೀ ದೇವಿಯರು. ಇವರಿಗೆ ದೇಹದ ಮಾನಾಭಿಮಾನ ಇಲ್ಲೇ ಇಲ್ಲ. ಇವರಿಗೆ ದುಷ್ಟನಾದ ದುಃಶಾಸನನ ವಸ್ತ್ರಾಪಹರಣದ ಭೀತಿ ಎಲ್ಲಿಂದ? ಆದರೆ ಅಜ್ಞ ಜನರಿಗೆ ಮೋಹ ತೋರಿಸಿದರು. ಇವರಲ್ಲಿದ್ದ ಬ್ರಹ್ಮಶಾಪಬದ್ಧರಾದ ಶಚಿ-ಶಾಮಲಾ-ಉಷಾದೇವಿಯರ ಮಾನರಕ್ಷಣಾರ್ಥವಾಗಿ ಶ್ರೀಹರಿಯೇ ರಕ್ಷಿಸೆಂದು ಮೊರೆ ಇಡಲು ಕೃಷ್ಣನು ಅನೇಕ ವಸ್ತ್ರಗಳನ್ನಿತ್ತು ಮಾನ ರಕ್ಷಿಸಿದ. ಭಕ್ತ ಪ್ರಹ್ಲಾದರಾಜನಿಗೆ, ತಂದೆಯಾದ ಹಿರಣ್ಯಕಶಿಪು ಅನೇಕ ಬಾಧೆ ಕೊಡಲು ಹಿರಣ್ಯಕಶಿಪುವನ್ನು ಸಂಹರಿಸಿ ಪ್ರಹ್ಲಾದನನ್ನು ರಕ್ಷಿಸಿದ. ಹಿಂದೆ ಬ್ರಹ್ಮ

ದೇವರು ದೈತ್ಯಯೋನಿ ಐದು ಎಂದು ಶಾಪ ಕೊಟ್ಟರು. ಬ್ರಹ್ಮದೇವರಲ್ಲಿ ಮಹಾಭಕ್ತಿಯಿದ್ದಾಗ್ಯೂ ಭಗವತ್‌ಸೇವೆಗೆ ಕಿಂಚಿತು ಕಾಲ ತಡೆಯಾದ ಕಾರಣ ಈ ಅಪರಾಧ ಮನ್ನಿಸಿದರು.

ಇನ್ನು (೨) ಪದ್ಯದಲ್ಲಿ ವಾಯು ಶಿಷ್ಯ ದೇವಶರ್ಮನು ದಾರಿದ್ರ್ಯದಿಂದ ಬಳಲುತ್ತಿರೆ ವಾಯು ದೇವರ ಆಜ್ಞೆಯಂತೆ ಶ್ರೀ ವೆಂಕಟೇಶನನ್ನು ಸ್ತೋತ್ರ ಗೈಯಲು ಆತನ ದುಃಖ ಪ್ರಾರಬ್ಧ ತೀರಿಸಿ ಸುಖ ಪ್ರಾರಬ್ಧವನ್ನು ಇತ್ತು ಜ್ಞಾನಭಕ್ತ್ಯಾದಿ ಸಂಪತ್ತು ಧನ ಧಾನ್ಯ ಸಂಪತ್ತು ಭಗವತ್ ಸಾಧನೆಗೆ ಇತ್ತು ರಕ್ಷಿಸಿದನೆಂದು ಆದಿತ್ಯಪುರಾಣ ಶ್ರೀ ವೆಂಕಟೇಶ ಮಾಹಾತ್ಮ್ಯೆಯಲ್ಲಿ ನಿರೂಪಿತ ವಾಗಿದೆ.

(೩)ನೇ ಪದ್ಯದಲ್ಲಿ ಕೃಷ್ಣಾವತಾರದಲ್ಲಿ ಅನೇಕ ದೇವತೆಗಳು ಅವತರಿಸಿ ಭೂಭಾರಹರಣಾರ್ಥವಾಗಿ, ಶ್ರೀ ಕೃಷ್ಣನ ಪ್ರೇರಣೆಯಿಂದ ಪಾಂಡವ ಪಕ್ಷ ಧರ್ಮ ವಿರೋಧಿಗಳಾದ ಕುರುರಾಜ ದುರ್ಯೋಧನನ ಪಕ್ಷ ವಹಿಸಿ ಅವನ ಸೇನೆಯಲ್ಲಿ ಸೇರಿದ ದ್ರೋಣಾಚಾರ್ಯರು, ಭೀಷ್ಮಾಚಾರ್ಯರು, ಕೃಪಾ ಚಾರ್ಯರು, ಅಶ್ವತ್ಥಾಮನೇ ಮೊದಲಾದ ದೇವತೆಗಳು ವಿರುದ್ಧವಾಗಿ ತನ್ನ ಮೇಲೆ ಬಾಣ ಎಸೆದು ಮತ್ತು (ಧರ್ಮ) ಪಾಂಡವ ಭಕ್ತರ ಅನೇಕ ವಿರೋಧ ಮಾಡಿದ ಅಪರಾಧವನ್ನು ಕ್ಷಮಿಸಿ ಕಾಯ್ದನು. ಎಂದು ಶ್ರೀ ಕೃಷ್ಣ ಪರಮಾತ್ಮನ ಭಕ್ತಸಂರಕ್ಷಣೆಯನ್ನು ಹೇಳಿದ್ದಾರೆ.

೪ನೇ ಪದ್ಯದಲ್ಲಿ ಶ್ರೀ ವೆಂಕಟೇಶ ಮಾಹಾತ್ಮ್ಯ ಪುರಾಣಾದಿ ಕಥಾ ವಿಸ್ತರಿಸುತ್ತಾ ತನ್ನ ವಿರೋಧಿಯಾಗಿ ಸಮರಯಾಚನಕ್ಕೆ ಬಂದ ಭಕ್ತ ತೋಂಡಮಾನರಾಜನಿಗೆ ಶಂಖ ಚಕ್ರಗಳನ್ನಿತ್ತು ತಾನು ನಿರಾಯುಧನಾಗಿ ಶಾಲಕನ ಕಡಿಗೆ ಯುದ್ಧಮಾಡಿದ ಭಕ್ತ ತೋಂಡಮಾನನೃಪನಿಗೆ ಸೋತವ ನಂತೆ ತೋರಿ ಪದ್ಮಾವತಿಯರ ಪ್ರಾರ್ಥನೆಯಂತೆ ಉಭಯರಿಗೆ ಅರ್ಧರಾಜ್ಯ ಕಲ್ಪಿಸಿ, ಭಕ್ತರ ಅಪರಾಧ ಕ್ಷಮಿಸಿದ.

ಚೋಳರಾಜನು, ಅರಿಯದೇ ವೆಂಕಟನ ತಲೆ ಗೋಪಾಲನಿಂದ ಒಡೆಸಿದ. ಅವನಿಗೆ ಪಿಶಾಚ ಜನ್ಮ ಬಂದುದ್ದು ಮುಂದೆ ಆಕಾಶ ರಾಜನ ಮಗಳು ಪದ್ಮಾವತಿ ವಿವಾಹ ಕಾಲ ಕೊಟ್ಟ ಕಿರೀಟ ಧರಿಸಿದ್ದಾಗ್ಗೆ, ನಿನಗೆ

ಸುಖವಾಗಲಿ ಎಂದು ರಕ್ಷಿಸಿದ. ಮತ್ತು ತೋಂಡಮಾನರಾಜನು ನಿತ್ಯ ಜಲ ಮಾರ್ಗದಿಂದ ಬಂದು ಬ್ರಾಹ್ಮೀಮುಹೂರ್ತದಲ್ಲಿ ಶ್ರೀವೆಂಕಟನಿಗೆ ಬಂಗಾರದ ತುಳಸಿಗಳನ್ನು ಏರಿಸುತ್ತಿದ್ದ. ಅತ್ತ ಇನ್ನೊಬ್ಬ ವೆಂಕಟ ಭಕ್ತ ಮಾನವನು ಕುಂಬಾರನಾದ ಭೀಮನು ತನ್ನ ಭಾಂಡಗಳನ್ನು ಮಾಡುವ ಕಾಲ ಮೊದಲಿಗೆ ಮಣ್ಣಿನಿಂದ ತುಳಸೀ ದಳಗಳನ್ನು ಮಾಡಿ ಭಕ್ತಿಯಿಂದ ಶ್ರೀವೆಂಕಟನ ಚರಣಕ್ಕೆ ದೂರದಿಂದ ಅರ್ಪಿಸಿಲು, ಶ್ರೀ ವೆಂಕಟನು ತೋಂಡಮಾನರಾಜನು ಏರಿಸಿದ ಬಂಗಾರ ತುಲಸಿ ದಳಗಳ ಮೇಲೆ ಮೃಣ್ಮಯ ತುಲಸಿ ದಳಗಳು ಬಂದು ಅರ್ಪಿತವಾದುದು ನೋಡಿ ತೋಂಡಮಾನನ ಅಹಂಕಾರ ಹೋಯಿತು. ಭಾಂಡಕಾರ ಭೀಮನಿಗೂ ಕುಂಬಾರ ಜನ್ಮವನ್ನು ಪರಿಹರಿಸಿ ಸುಜ್ಞಾನವಿತ್ತು ಸಂರಕ್ಷಿಸಿದ. ಮುಂದೆ

(೫)ನೇ ಪದ್ಯದಿಂದ ೮ನೇ ಪದ್ಯದವರೆಗೆ ಭಕ್ತರು ನಾನಾ ಅಪರಾಧ ಗಳನ್ನು ತಾನೇ ಮಾಡಿದರೆಂಬುದು ಅಹಲ್ಯಾ ದೇವಿಯನ್ನು ಇಂದ್ರದೇವರು ಋಷಿವೇಷದಿಂದ ಅಕಾಲದಲ್ಲಿ ಸಂಭೋಗಿಸಿದ ಪಾಪ ಅಹಲ್ಯಾ ಋಷಿ ಪತ್ನಿಗೆ ಶಾಪದಿಂದ ಬಂದ ಜಡ ಜನ್ಮ ನಿವೃತ್ತಿ ಮಾಡಿ ರಕ್ಷಿಸಿದ. ಇಂದ್ರದೇವರು ವೃತ್ರಾಸುರನ ಹನನಗೈದು ದೇವತೆಗಳ ರಕ್ಷಿಸಿದ್ದು ಪುಣ್ಯ ಬೀಜ ಪಾಪದಿಂದ ರಕ್ಷಿಸಿದ. ಮತ್ತು ಬಲಿರಾಜನು ದೈತ್ಯಾವೇಶದಿಂದ ಶ್ವೇತದ್ವೀಪಗನಾದ ಶ್ರೀಹರಿಯ ಮುಕುಟಕದ್ದದ್ದು ಗರುಡ ದೇವರಿಂದ ತರ್ಸಿ ಶ್ರೀಕೃಷ್ಣ ಗೋಮಂತ ಪರ್ವತದಲ್ಲಿರಲು, ಆತನಿಗೆ ಅರ್ಪಿಸಿದುದು. ಶ್ವೇತದ್ವೀಪಗತನಾದ ಹರಿಯು ಶ್ರೀಕೃಷ್ಣರು ಒಂದೇ ಆದಕಾರಣ ಆ ಕಿರೀಟವು ಕೃಷ್ಣದೇವರ ಶಿರಸ್ಸಿಗೆ ಸರಿ ಹೋಯಿತು. ಇಂತು ಕಿರೀಟ ಕದ್ದ ಬಲಿಯಪರಾಧವನ್ನು ಕ್ಷಮಿಸಿದನು. ಮತ್ತು ೬ನೇ ಪದ್ಯದಲ್ಲಿ ನಂದವ್ರಜದಲಿ ಇರುವ ಸ್ತ್ರೀಯರ ಜಾರಭಕ್ತಿಗೆ ಒಲಿದು ಜಾರಕರ್ಮದಿಂದಲೇ ಕೃಷ್ಣನು ಅವರ ಅಂಗಸಂಗ ಮಾತ್ರದಿಂದ ಲಿಂಗಾಂಗದಲ್ಲಿದ್ದ ಪಾಪವನ್ನು ದೂರಮಾಡಿ ಪೊರೆದ. ಕೃಷ್ಣನು ಚಿಕ್ಕ ಬಾಲಕನು ಜಾರ ಕರ್ಮ ಹೇಗೆ ಮಾಡಿದ ವಿಚಾರಿಸಿರಿ ? ತಾನು ಜನ್ಮರಹಿತ ನಾದಾಗ್ಯೂ ಭಕ್ತಳಾದ ಗೋಪಿ ದೇವಿಗೆ ತಪಸ್ಸಿಗೆ ಒಲಿದು ದೇವಕಿಯಲ್ಲಿ ಅವತರಿಸಿದರೂ ನಂದಗೋಪ ಗೋಪಿಯರಿಗೆ ಒಳ್ಳೆ ಮಗನೆನಿಸಿದನು. ಶ್ರೀಹರಿಯು ಭಕ್ತಪರಾಧೀನನೆಂಬುದು ತೋರಿಸಿದ್ದಾರೆ. ಶ್ರೀ ಕೃಷ್ಣನು ಚಿಕ್ಕ

ಮಗುವಾಗಿ ಇರುವಾಗಲೇ ಗೊಲ್ಲಬಾಲರಸಂಗಡ ಚಂಡಿನ ಆಟವಾಡಿ ಅವರನ್ನು ಸೋಲಿಸಿ ಅವರ ಹೆಗಲ ಮೇಲೆ ಹತ್ತಿ ಭಾರವನ್ನು ಹಾಕಿ ಅವರಲ್ಲಿದ್ದ ತಮೋ ಗುಣ ನಾಶಗೈದೆನೋ? ಕೃಷ್ಣಾ ನೀನು ಗರುಡಗಮನನೆಂಬ ಗರ್ವಿಕೆಯು ಬಿಟ್ಟಿಯೆಯ್ಯಾ ಪ್ರಭೋ. ಕೃಷ್ಣಾ ಎಷ್ಟೆಂಥೇಳಲಿ ಗೋಕುಲವಲ್ಲಿದ್ದ ಗೊಲ್ಲತಿ ಯರನು ಕೊಳಲೂದಿ ಮೋಹಿಸಿ ಒಲಿಸಿ, ಅವರ ಪಾಪಗಳನ್ನು ಕಳೆದೆಯಾ? ಶ್ರೀಕೃಷ್ಣಾ ನಿನ್ನಾಜ್ಞೆಯಿಂದ ದೇವತೆಗಳು ಗೋಪಾಲರಾಗಿಯೂ, ಸನಕಾದಿ ಗಳು ಆಕಳಾಗಿಯೂ ಪುಟ್ಟಿರಲು ಆ ಗೋ ಗೋಪಾಲರನ್ನು ನಾನಾ ವಿಧವಾಗಿ ಆಕಳಕಾಯ್ದ ಗೊಲ್ಲನೆಂದು ಹರಲೆ ಹೊತ್ತು ರಕ್ಷಿಸಿದ ಭಾರ ಇಂದು ಎಲ್ಲಿ ಪೋಯಿತೋ? ಕೃಷ್ಣಾ ನಿನ್ನ ಭಕ್ತರನ್ನು ಕೈ ಬಿಡಬೇಡಪ್ಪಾ ಸ್ವಾಮಿ. ಮಾನವ ರಾದರೂ ಸಹ ಭಕ್ತರ ಅಪರಾಧ ಕ್ಷಮಿಸುವನೆಂಬ ದಾಸರ ಉಕ್ತಿಮರೆಯದೆ ಲಾಲಿಸು ಕರುಣಿಸು ಕೃಷ್ಣಾ. ನೀನು ದುಷ್ಟ ದುರ್ಜನರ ಸೇವೆ ಔತುನ ಸ್ವೀಕಂಸುವನಲ್ಲದುದಕ್ಕೆ ದುರ್ಯೋಧನನ ಭೋಗ್ಯವು ಅಯೋಗ್ಯವೆಂದು ನಿರಾಕರಿಸಿ ಬಡ ಭಕ್ತನಾದ ದೇವಾಂಶನಾದ ವಿದುರನ ಕುಡುತೆ ಹಾಲು ಕುಡಿದು ತೇಗಿ ಹಾಲು ಹೊಳೇ ಹರಿಸಿದ ಪ್ರಭೋ ನೀನಲ್ಲವೇ? ಬಡ ಭಕ್ತನ ಈ ಅಬದ್ಧನುಡಿಗಳಾದರೂ ಬಿಡದೆ ಬೇಗ ಸ್ವೀಕರಿಸಿ ಕಡೆ ಹಾಯಿಸುವ ಭಾರ ನಿನದಲ್ಲೊ ಕೃಷ್ಣಾ.

ಕೃಷ್ಣಾ ನಿನ್ನ ಮಹಿಮೆ ಅನಂತವಯ್ಯಾ. ಗೋಪಿ ದೇವಿಗೆ ಪುನ್ನಾಮ ನರಕದಿಂದ ಕಡೆಗೆತ್ತುವ ಕೃಷ್ಣಾ, ಇಂದು ಅಪುತ್ರರೆನಿಸಿದ ಭಕ್ತರನ್ನು ಸುಪುತ್ರರನ್ನಾಗಿ ಮಾಡಿ ಜ್ಞಾನ ಪುತ್ರವನ್ನು ಲಭಿಸುವದು ನಿನ್ನ ಭಾರ ವಲ್ಲೇನೋ? ಅಂದು ವ್ರಜದಲ್ಲಿರುವ ಷೋಡಶ ಸಹಸ್ರ ಸ್ತ್ರೀಯರಿಗೆ ಭರ್ತೃ ಎನಿಸಿ ಕಾಪಾಡಿದಿ. ಇವರಾರು? ಅಗ್ನಿ ಪುತ್ರರು ನಿನ್ನ ಅಂಗಸಂಗ ಬಯಸಿದವರೇ ಗೋಪಿಕಾಸ್ತ್ರೀಯರಾಗಿ ಜನಿಸಿದವರನ್ನು ರಕ್ಷಿಸಿದಂತೆ ಕಲಿ ಕಾಲ ವಶಾತ್ ಅನೇಕ ದುಃಖದಲ್ಲಿ ಬಳಲಿತ್ತಿರುವ ಭಕ್ತರಿಗೆ ಸಾಧು ಸಂಗ ದ್ವಾರಾ ನಿನ್ನ ಅಂಗ ಸಂಗವಿತ್ತು ಕಾಪಾಡುವದು ನಿನ್ನ ಭಾರವಲ್ಲೆನಯ್ಯಾ? ಅಂದು ಇಂದ್ರನು ಮಳೆಗರೆದು ಗೋಪಾಲಕರನ್ನು ಭಯಗೊಳಿಸಲು ಬಾಲಕ ನಂತೆ ತೋರುವ ಶ್ರೀ ಕೃಷ್ಣಾ ಕಿರಿಬೆರಳಿನಿಂದ ಗೋವರ್ಧನ ಪರ್ವತವನ್ನು ಎತ್ತಿ ಆಸಕಲರನ್ನು ರಕ್ಷಿಸಿ ಇಂದ್ರನ ಗರ್ವ ಪರಿಹರಿಸಿದಂತೆ, ಇಂದು ನಿನ್ನ

ಭಕ್ತರ ಮೇಲೆ ಶಿಲಾವರುಷ ಗೈದು ಪ್ರಾಣಿಹಿಂಸಕರಾದ ದುಷ್ಟರಿಂದ ರಕ್ಷಿಸಲು ಇಂತಹ ಮಹಾ ಪರ್ವತ ಸಮಾನವಾದ ಬಲವಾದ ರಕ್ಷಕ್ರೆ ಎಲ್ಲಿ ಪೋಯಿತಯ್ಯಾ? ನಿನ್ನ ಪರ್ವತ ಸಮಾನ ಮಹಾಕಾಯದಲ್ಲಿ ಭಕ್ತರನ್ನು ಇರಿಸಿ ರಕ್ಷಿಸುವದು ಮರೆಯಬೇಡಪ್ಪಾ ಕೃಷ್ಣಾ. ಎಷ್ಟು ಮೊರೆ ಇಟ್ಟರೂ ನಿನ್ನ ಮೋರೆ ಅಟ್ಟದ ಮೇಲೆ ಏರಿದೆ. ಭಕ್ತರನ್ನು ದಯಾ ದೃಷ್ಟಿಯಿಂದ ನೋಡು ಭಕ್ತಾಪರಾಧವನ್ನು ಕಳೆ.

ಅಪ್ಪಾ ಹರಿಯೆ ನೀನು ನಿನಗೆ ಗೋಚರ, ನಿನಗೆ ಆವನಾಮ ಆವ ರೂಪವಿದೆ ಹೇಳು. ನೀನು ನಿತ್ಯ ಸಕಲರಾವಿನಲ್ಲಿ ವ್ಯಾಪ್ತನಾದಾಗ್ಯೂ ರಾಮ ಕೃಷ್ಣಾದಿ ರೂಪಗಳಿಂದ ಕೇವಲ ಹ್ರಸ್ವನಾಗಿ ಲೋಕರಿಗೆ ತೋರಿ, ಗರ್ಗಋಷಿಗಳು ನಿನಗೆ ಕೃಷ್ಣಾ ಎಂದು ಹೆಸರಿಟ್ಟರೆ, ಅದೇ ನಾಮ ಭಕ್ತರಿಗೆ ತಾರಕ ಮಾಡಿ, ಉತ್ತಮಗತಿ ಇತ್ತಂತೆಯೂ, ನಾನಾ ದೇಶ ಕಾಲಗಳಲ್ಲಿ ನಾನಾ ಯುಗದಲ್ಲಿ ಅವತಾರ ಮಾಡಿ ಭಕ್ತರಾದ ದೇವ ಋಷಿ ಪಿತೃ ಮಾನವರ ಸೇವೆ ಕೊಂಡು ಪೊರೆದನೆಂಬ ದಾಸರ ವಾಕ್ಯವನ್ನಾದರೂ ಮನ್ನಿಸು. ಹಿಂದೆ ಸುಗ್ರೀವನ ಅಪರಾಧ ಕ್ಷಮಿಸಿ ರಕ್ಷಿಸಿದಂತೆ ಧ್ರುವರಾಯನು, ಅನಿಯತ ಪದವಿ ಯಾಚಿಸಿ ನಿನ್ನ ಮೊರೆ ಇಡಲು ನೀತ ಪದವಿಯನ್ನು ಕೊಟ್ಟು ರಕ್ಷಿಸಿದಂತೆ ಅಂದೂ ನೀನೆ ಇಂದೂ ನೀನೆ ಮುಂದೆಯೂ ನೀನೆ. ನೀನೆ ಬಾಂಧವ ತಂದೆಯಾಗಿ ಕಾಯ್ವುದು ಮರೆಯಬೇಡವಯ್ಯಾ.

ಹೀಗೆ (೧೦)ನೇ ಪದ್ಯದವರಿಗೆ ಶ್ರೀಹರಿಯ ಭಕ್ತಾಪರಾಧ ಸಹಿಷ್ಣುತೆ ಕಾರುಣಿಕತೆ ಸ್ತೋತ್ರಗೈದಿರುವರು.

ಮುಂದೆ ೧೧-೧೨ನೇ ಪದ್ಯದಲ್ಲಿ ಕರುಣಾಕರ ಭಕ್ತಾಪರಾಧ ಸಹಿಷ್ಣು ಕೃಷ್ಣನೂ ದುಷ್ಟ ದೈತ್ಯರನ್ನು ಶಿಕ್ಷಿಸಿ ಶಿಷ್ಟರನ್ನು ಪರಿಪಾಲನೆ ಮಾಡುವನು. ಸೃಷ್ಟ್ಯಾದಿ ಅಷ್ಟಕರ್ತನಿಗೆ ನಷ್ಟ ತುಷ್ಟಿಗಳು ಇಲ್ಲೇ ಇಲ್ಲ. ಸ್ಮರಣೆ ಮಾತ್ರ ಮಾಡಲು ಬಿಂಬನಾದ ಹೃದ್ಗುಹನು ಸಂತೋಷ ಪಡುವನು. ಸರ್ವಜಗತ್ತು ತನ್ನ ವಶದಲ್ಲಿಟ್ಟು, ಬ್ರಹ್ಮದೇವರನ್ನು ಸಹ ಅಂಜಿಸಿದವನಂತೆ ತೋರಿ ತನ್ನ ಬಂಧಕ ಶಕುತಿ ತೋರಿದನಲ್ಲದೆ, ರುದ್ರಾದಿ ದೇವತೆಗಳನ್ನು ಸಂರಕ್ಷಿಸಿದನೆಂದು ಸ್ತೋತ್ರಗೈದಿದ್ದಾರೆ. ಮಹಾ ಸಮರ್ಥನಾದ ಹರಿಯು, ಸತ್ಯ ಸಂಕಲ್ಪನು ತನಗೆ ತಾನೆ ಸೇವಕನಾಗಿ ಭೋಗ್ಯ ಭೋಕ್ತೃಗಳೊಳಗೆ ಇದ್ದು ತತ್ವೇಶರನ್ನು

ತೃಪ್ತಿಬಡಿಸುತ್ತಾನೆ. ಮತ್ತರಾದ ಅಸುರರಿಗೆ ನಿರಯಾದಿ ಫಲವನ್ನು ಕೊಡುತ್ತಾನೆಂದು ಶ್ರೀಹರಿಯು ವೈಷಮ್ಯ ನೈರ್ಘಣ್ಯರಹಿತನೆಂದು ಹೇಳಿದಂತಾಯಿತು, ಇಂತಹ ಸರ್ವೋತ್ತಮನಾದ ಹರಿಯ ಸದಾ ಯಾವ ಕಾರಣದಿಂದಲಾದರೂ ಸಂತತ ಸ್ಮರಣ ಮಾಡಲೇಬೇಕು. ಅಂದರೆ ಕಪಿಕುಲದವರಾದರೂ ಸುಗ್ರೀವಾದಿಗಳನ್ನು ಸಲಹಿದಂತೆ ಸಲಹುವನೆಂದು ೧೫ನೇ ಪದ್ಯದವರೆಗೆ ಹೇಳಿದ್ದಾರೆ.

ಮುಂದೆ ೧೬ನೇ ಪದ್ಯದಲ್ಲಿ, ಹಿಂದೆ ಸಕಲ ಭಕ್ತರ ಆಪತ್ತು ರಕ್ಷಿಸಿ ಕಾಯ್ದಂತೆ ಅಲ್ಲ. ಇಂದು ಸದಾ ಸರ್ವ ಜೀವರ ಸಂಗಡಲೇ (ತಾನು ಉತ್ಪತ್ತಿ ರಹಿತನಾದರೂ) "ಜನಿಷ್ಠೋತ ವಿಷ್ಣುಃ" ಎಂಬ ಶ್ರುತಿಯಂತೆ ಪ್ರಾದುರ್ಭೂತನಾಗಿ ಜೀವನ ಉತ್ಪತ್ತಿ ಎಂಬ ಯಜ್ಞದಲ್ಲಿ **ಯಜ್ಞ ನಾಮಕನಾಗಿಯೇ** ಅವತರಿಸಿ ಜೀವನ ಮುಂದಿನ ಸ್ಥಿತ್ಯಾದಿ ಕಾರ್ಯಗಳನ್ನು ನಡಿಸುವನು. ಎಂದು ಹೇಳಿ ಮುಂದೆ ೧೭ನೇ ಪದ್ಯದಿಂದ ೨೪ ಪದ್ಯ (೮) ಪದ್ಯ ಪೂರ್ತಿ ಸ್ಥಿತಿ ಪಾಲನ ಕಾರ್ಯವು ಮನುಜಾದಿ ದೇವತೆಗಳು, ಅದ್ರಿ, ಗ್ರಾಮ, ಉಪಗ್ರಾಮ, ಗ್ರಾಮಾಧಿಪತಿ, ಗ್ರಾಮಣಿ ಮುಂತಾದವರಲ್ಲಿ, ಯಾವರೂಪದಿಂದ ಇದ್ದು ಸಲಹುವನೆಂಬುದನ್ನು ಉಪನಿಷತ್ ವಾಕ್ಯಗಳಂತೆ ಆಯಾ ನಾಮಗಳನ್ನು ಸವಿಸ್ತರ ಪೇಳಿದ್ದಾರೆ. **ಇಂತಹ ನಾಮಗಳನ್ನು ಸ್ಮರಿಸುತ್ತಾ ಭಗವದುಪಾಸನೆ ಮಾಡಿ ಬಿಂಬನಲ್ಲಿ ಐಕ್ಯ ಚಿಂತಿಸುವರಿಗೆ ಪ್ರಾರಬ್ಧ ಕಡೆಗೊತ್ತಿ** ವಿಜಯಸಾರಥಿಯು ಒಲಿದು ವಿಜಯವನ್ನು ತಂದೀವನು. ಯಾವ ವಿಜಯವೆಂದರೆ, ಅರಿಷಡ್ಗುಣ ತಮೋರೂಪ ಲಿಂಗ ಭಂಗವಿ ಅನಿಷ್ಟ ನಿವೃತ್ತಿಗೈಸಿ ಮೋಕ್ಷಾನಂದವಾದ ವಿಜಯಪ್ರದನು.

ಹೀಗೆ ಅಸೃಜ್ಯಕಾಲದಿಂದಲೂ, ಅಭಿಮತವಾಗದೇ ಇದ್ದು ಸಮಸ್ತ ಚೇತನರು, ಅಂದರೆ ದೇವಮಾನವ ದಾನವರಿದ್ದರೂ ಅಸೃಜ್ಯ ಕಾಲದಲ್ಲಿ ಭಗವಂತನ ಶಕ್ತಿಗೆ ಒಳಗಾಗಿರುವರು ಕರ್ಮಭೋಗ ಶಕ್ತಿ ಇಲ್ಲದುದರಿಂದ ಶ್ರೀಶನು ಸಾಧನ ಮಾಡಬಲ್ಲ ಜೀವರನ್ನು ಸೃಷ್ಟಿಗೆ ತಂದ ಮೇಲೆ ಭಗವತ್ಪ್ರೇರಣೆಯಂತೆ ತಮಗೆ ಉಚಿತವಾದ ಕರ್ಮಫಲ ಉಣುತ್ತ ಸೃಷ್ಟಿಯಲ್ಲಿ ಚರಿಸುವರೆಂದು ೨೭ನೇ ಪದ್ಯದಲ್ಲಿ ನಿರೂಪಿಸಿದ್ದಾರೆ.

ಇನ್ನು ಸಂಸಾರ ಅವಸ್ಥೆಯು ಹೇಗಿರುವದೆಂಬುದನ್ನು ೨೭ನೇ ಪದ್ಯ

ದಿಂದ ವಿವರಿಸುತ್ತಾರೆ. ಘುರಡಿನೆಳಲು ಬಿಸಿಲು ಇದ್ದಂತೆ ಸಂಸಾರ ಸುಖ ದುಃಖ ಮಿಶ್ರಿತವಾದುದು. ಎಲ್ಲಿ ಪ್ರೋಕ್ಷರೂ ಪ್ರಾರಬ್ಧ ಅನುಭೋಕ್ತೃತ್ವ ಪರಿಗೆ ಬಿಡವು. ಈ ಸಂಸಾರ ದುಃಖ ಪರಿಹರಿಸಲು, ಬಲ್ಲವರು ಜ್ಞಾನಿಗಳ ಕೂಡಾಡಿ, ಶ್ರವಣ ಮನನಾದಿಗಳನ್ನು ಮಾಡಬೇಕು. ದೇಹ ಆತ್ಮ ಪರಿ ಶುದ್ಧ್ಯರ್ಥವಾಗಿ ಶ್ರೀ ಹರಿಯ ನಿರ್ಮಾಲ್ಯ ತುಳಸಿ ಮಿಶ್ರಿತವಾದ ತೀರ್ಥ ತೆಗೆದು ಶ್ರೀಹರಿ ನೈವೇದ್ಯವನ್ನೇ ಭುಂಜಿಸುವರು. ಇಂತಹ ಪವಿತ್ರವಾದ ಪರಿಶುದ್ಧಾನ್ನಭುಂಜಿಸಲು, ಸುಜ್ಞಾನ ಪುಷ್ಟಿಭವ ದುಃಖದಿಂದ ಬಿಡುಗಡೆ ಮಾಡುವದು.

ಶ್ರೀಹರಿಯ ನೈವೇದ್ಯಭುಂಜಿಸುವ ಕ್ರಮ ಹೇಗೆಂದರೆ "ಸಮರ್ಪಣ ಪ್ರಕಾರ ತಿಳಿಯೋದು ಚೆನ್ನಾಗಿ" ಶ್ರೀವಿಜಯ ದಾಸರ ಸುಳಾದಿ ಅರ್ಥ ಚನ್ನಾಗಿ ಹಿರಿಯ ಜ್ಞಾನಿಗಳಿಂದ ತಿಳಿದು ಶ್ರೀಹರಿ ರಮೆಗೆ ಪ್ರಾಣಭಾರತಿಯರಿಗೆ ಅವ ರವರರ ರಸ ಸ್ವೀಕರಿಸಲು ಪ್ರಾರ್ಥಿಸಿ, ಸುನಿವೇದಿತ ಅನ್ನದಿಂದಲೇ ಪಂಚ ಸೂನಾದೋಷ ಪರಿಹಾರಾರ್ಥವಾಗಿ ವೈಶ್ವದೇವ ಮಾಡುವದು ಹೇಗೆಂದರೆ, ಕೊಯ್ದು ಧಾನ್ಯಗಳನ್ನು, ಕುಟ್ಟಿ, ಹೊಟ್ಟು ತೆಗೆದು ಅಥವಾ ಬೀಸಿ, ನೀರಿ ನಲ್ಲಿ ನೆನಸಿ ಉದಕುಂಭ ಸಂಪರ್ಕವೆಂದರೆ ತೊಳೆದು ಹಿಟ್ಟು ನೀರಲ್ಲಿ ಕಲಿಸಿ ಅಟ್ಟು ಅಡಿಗೆ ಮಾಡಿ ಬೇಯಿಸಿ, ಅಥವಾ ಕಾಳು ಹುರಿದು ಕರಿದು ಸುಟ್ಟುದು ಇವೆಲ್ಲ ದೋಷಗಳು ಪರಿಹಾರವಾಗಲು ಅಗ್ನ್ಯಂತರ್ಗತ ಪರಶುರಾಮನಿಗೆ ಆಹುತಿಕೊಟ್ಟು, ಬಲಿಹರಣಾದಿ ಮಾಡಿ, ವೈಶ್ವದೇವ ಶೇಷಮಿಶ್ರಿತ ಅನ್ನ ದಿಂದಲೇ ಗುರುಗಳಿಗೆ ಹಸ್ತೋದಕಕೊಟ್ಟು, ಬ್ರಾಹ್ಮಣ ಮುಖದಿಂದ ಅನ್ನ ಕೊಟ್ಟು, ಇಂತಹ ಪವಿತ್ರ ಅನ್ನವನ್ನು ಪ್ರಾಣಾಗ್ನಿ ಹೋತ್ರಕ್ರಮದಿಂದ ತನ್ನಲ್ಲಿಪ್ಪ ಆಹವನೀಯಾದಿ ಅಗ್ನಿಗತ ಪಂಚ ಪ್ರಾಣರಿಗೆ ಪಂಚಾಹುತಿಯನ್ನು ಕೊಟ್ಟು ಭುಂಜಿಸಬೇಕೆಂದು ಶಾಸ್ತ್ರಾಯ ಶಿಕ್ಷೆ. ಇದನ್ನು ಬಿಟ್ಟು, ಹಸಿವೆ, ಉದರ ಪೂರ್ತಿಗೆ ನೈವೇದ್ಯ ವೈಶ್ವದೇವವಿನಾ ಭುಂಜಿಸುವ ನರನನ್ನು ಯಮ ದೂತರು ಪಾಶದಿಂದ ಕಟ್ಟಿ ಯಮಲೋಕದಿಡುವರು. ಕಾರಣ ಆಲಸ್ಯ ಮಾಡದೇ ಪರಿಪರಿ ವಿಹಾರಕ್ಕೆ ರುಚಿ ಅನ್ನ ತಿನ್ನುವ ಒಣಾಭೋಗದ ಆಶೆ ಬಿಟ್ಟು ಮೇಲೆ ಹೇಳಿದಂತೆ ಹರಿನೈವೇದ್ಯಭುಂಜಿಸಿರಿ. ಸಂತತ ಧ್ಯಾನೋಪಾಸನ ಕ್ರಮ ಮರೆಯದೇ ಮಾಡುತ್ತ ಹೃನ್ಮಂದಿರದ ಹೆಬ್ಬಾಗಿಲು ಅಂದರೆ ಮುಖ

ದಿಂದ ಹರಿನಾಮೋಚ್ಚಾರಣ ಮಾಡಿದರೆ ಶ್ರೀಹರಿಯು ಬೇಗನೆ ಒದಗಿ ರಕ್ಷಿಸುವ. ಯಾರಿಗೆ ಪ್ರಾರಬ್ಧ ಕರ್ಮ ಅನುಭೋಗಿಸುವ ವ್ಯಾಳ್ಯ ಹರಿನಾಮ ಮೇಲೆ ಹೇಳಿದ ವಿವರದಂತೆ ಆಯಾ ನಾಮಗಳ ಕಾರ್ಯ ತಿಳಿದು ಭಗ ವನ್ನಾಮ ಉಚ್ಚರಿಸುವವರಿಗೆ ಮೋಕ್ಷಾನಂದವೀವನು.

ಶ್ರೀಹರಿಯು ಮಹಾ ಕರುಣಾಳು. ತನ್ನ ನಿಜಭಕ್ತರಾದವರು ಏನು ಅಪರಾಧ ಮಾಡಿದರೂ, ಕೊನೆಗೆ ಕ್ಷಮಿಸುವನು. ಯಾರಿಗೆಂಬುದು ಉದಾ ಹರಣೆ ಹೇಳುತ್ತಾರೆ. ಉತ್ತಮನಾದ ಜೀವನಿಗೆ ಪ್ರಾರಬ್ಧ ಕರ್ಮವಶಾತ್ ಬೇಡರ ಜನ್ಮ ಬಂದಿತು. ಆಗ್ಗೆ ಬೇಟೆಗಾರನು, ಪಕ್ಷಿಮೃಗಗಳ ಬೇಟೆಯಾಡಿ ಪ್ರಾಣಹಿಂಸಾ ಮಾಡುವ ಲುಬ್ಧಕನಾದರೂ ಆ ಬೇಡರವನಿಗೆ ಪ್ರಾರಬ್ಧಕರ್ಮ ತೀರಿದದು ನೋಡಿ, ಅವನಿಗೆ ಸುಜ್ಞಾನವನ್ನು ಇತ್ತು ವಾಲ್ಮೀಕಿ ರಾಮಾಯಣ ವನ್ನು ಬರೆಸಿ, ವಾಲ್ಮೀಕಿಋಷಿ ಮಾಡಿದ. ಶ್ರೀರಾಮಚಂದ್ರ ಪ್ರಭುವೆ ಕಾಪಾಡೆನಲು ಸಂರಕ್ಷಿಸುವನು.

ಈ ಕಾರಣದಿಂದ ಮುಂದೆ ೩೧-೩೨-೩೩ ಪದ್ಯ ಮೂರರಿಂದ, ದಾಸಾ ರ್ಯರು, ತಮ್ಮ ಹಿಂದಿನ ಅನುಭವ, ಶ್ರೀ ವಿಜಯಗೋಪಾಲರ ಅವಹೇಳನಾ ಮಾಡಿದ್ದಕ್ಕೆ ಬಟ್ಟ ಭವಣೆ ನೆನಿಸುತ್ತ ಶ್ರೀಹರಿಯೇ ನಾನು ನಿನ್ನ ಭಕ್ತರ ಇರುವನ್ನು ತಿಳಿಯದ ಮೂಢ ಮೂರ್ಖನು. ನಿನ್ನ ವಿನಾ ಅನ್ಯರನು ಬೇಡದಂತೆ ಮಾಡು. ನಿನ್ನ ಬೇಡಿದರೂ ಚತುರ ವಿಧ ಪುರುಷಾರ್ಥಗಳನ್ನು ಸ್ವಪ್ನದಲ್ಲಿ ಸಹಾ ಬೇಡಿಸದಿರಪ್ಪಾ. ಆದರೆ ನಾನು ದೈನ್ಯವೃತ್ತಿಯಿಂದ ನಿನ್ನ ಇದೇ ಪ್ರಾರ್ಥಿಸುವೆನೇನೆಂದರೆ ನಿನ್ನ ಅಮಲ ಗುಣ ಕೊಂಡಾಡಿ ಹಿಗ್ಗುವ ಭಗವದ್ಭಕ್ತರಾದ ಭಾಗವತರು ಶ್ರೀ ವಿಜಯರಾಯರು, ಗೋಪಾಲದಾಸ ರಂಥ ಜ್ಞಾನಿಗಳ ಸಹವಾಸ ಜನ್ಮಜನ್ಮದಲ್ಲಿ ಕೊಡು. ಅವರ ಅನುಗ್ರಹ ದಿಂದಲೇ ಶ್ರೀ ವ್ಯಾಸ ವಾದಿರಾಜರು ಶ್ರೀ ಪುರಂದರದಾಸರು ಅನುಗ್ರಹಿಸಿ ಈ ಮಹತ್ತರವಾದ ನಿನ್ನ ಗುಣನಾಮ ಕೀರ್ತನೆಯಾದ ಶ್ರೀ ಹರಿಕಥಾಮೃತಸಾರ ವನ್ನು ಬರೆಸಿದ ಭಾಗ್ಯವು. ಹರಿದಾಸರ ಅನುಗ್ರಹ ಕಾರಣ ಜನ್ಮಜನ್ಮದಲ್ಲಿ ಹರಿಭಕ್ತರ ಸಂಗ ಕೊಡೆಂದು ಅನೇಕ ಭಾಗವತಾದಿ ಸದ್ಗ್ರಂಥಗಳ ಉಕ್ತಿ ಯಂತೆ ದಾಸರಾಯರು ಶ್ರೀಹರಿಗೆ ಮೊರೆ ಇಟ್ಟು ಶಿಷ್ಯರಿಗೆ ಉಪದೇಶ ಮಾಡಿರು ವರೆಂಬುದು ಮರೆಯಲಾಗದು. ಶ್ರೀಹರಿಯೇ ಧರ್ಮಾರ್ಥಕಾಮಮೋಕ್ಷ

ವನ್ನು ಕೊಡುವ ಧೊರೆ ಇರುವನು. ಅಲ್ಲದೇ ಈ ನಾಲ್ಕು ವಿಧ ರೂಪ ನಾಗಿಯೇ ಅನಿರುದ್ಧಾದಿ ನಾಲ್ಕು ರೂಪಗಳಿಂದ ಜಗತ್ತಿನ ಕಾರ್ಯ ಮಾಡಿ ಸಕಲ ಜೀವರಿಂದ ಸಾಧನ ಮಾಡಿಸಿ ಶಾಶ್ವತ ಸುಖವಾದ ಮೋಕ್ಷವನ್ನು ಕೊಡುವನು. ಇರಲಾಗಿ ಶ್ರೀ ಹರಿಯ ವಿನಾ ಮತ್ತೊಂದು ಪುರುಷಾರ್ಥ ವನ್ನು ಬಯಸಬೇಡಿರಿ. ಎಂದು ಸತ್ವಜೀವರಿಗೆ ಉಪದೇಶಿಸಿರುವರು. ಆದರೆ ಅಲ್ಪಮತಿಗಳಾದ ರಜೋ ತಮ ಜೀವರು ತಮ್ಮ ಸ್ವಭಾವ ಯೋಗ್ಯತೆಯಂತೆ ಶ್ರೀಹರಿಯ ಪ್ರೇರಣೆಯಿಂದಲೇ ಶ್ರೀಹರಿಯನ್ನೆ ಬಿಟ್ಟು, ಉಚ್ಛಿಷ್ಟ ಗಣಪತಿ, ಸೂರ್ಯ, ಶಿವ, ಶಕ್ತಿ ಮೊದಲಾದ ಅನ್ಯದೇವತೆಗಳನ್ನು ಭಜಿಸಲು ಅಲ್ಪ ಐಹಿಕ ಸುಖವಾಗುವದು. ತಿಳಿಯದೇ ಇಹದ ಸಂಪದ ಸುಖವೇ ಶಾಶ್ವತ ಸ್ಥಿರವೆಂದು ತಿಳಿದು ಅನ್ಯದೇವತೆಗಳನ್ನು ಭಜಿಸುವರು. ಕಾರಣ ಮುಮುಕ್ಷು ಗಳೇ ಅನ್ಯದೇವತೆಗಳ ಕಣ್ಣೆತ್ತಿ ನೋಡಬೇಡಿರೆಂದು ಉಪದೇಶಿಸಿ ಮುಂದೆ ೩೩ನೇ ಪದ್ಯದಲ್ಲಿ,

ಶ್ರೀಹರಿಗೆ ಯಾವ ಕಾಲ ದೇಶಗಳಲ್ಲಿ ಯಾವ ಜೀವರಲ್ಲಿ ವೈಷಮ್ಯ ನೈರ್ಘೃಣ್ಯಾದಿಗಳಿಲ್ಲ, ದ್ವೇಷ ಅಸೂಯೆ ಇಲ್ಲ. ಆತನು ಸುಧರ್ಮನಾಮಕನು ಎಂದರೆ, ಸ್ವರೂಪದಲ್ಲಿ ಯಾವ ಯಾವ ಜೀವರಿಗೆ, ಯಾವ ಯೋಗ್ಯತೆ ಇದೆಯೋ ಸ್ವರೂಪ ಆ ಧರ್ಮವನ್ನು ಬಲ್ಲವನು. ಕಾರಣ ಸತ್ವ ರಜೋ ತಮೋ ಜೀವರಿಗೆ ಅವರವರ ಪ್ರಾರಬ್ಧಕರ್ಮ ಉಣಿಸಿ, ತೀರಿಸಿ, ಬ್ರಹ್ಮದೇವರ ಕಲ್ಪ ಕೊನೆಗೆ ಅವರವರ ಸಾಧನ ಮುಗಿಸಿ, ಸುಮ್ಮನೇ ಅವರವರ ನಿಜಗತಿ ಈವನು. ಏನೂ ಮಾಡದೆ, ಜೀವರು ಅಸ್ವತಂತ್ರರು. ಇವರಿಂದ ಏನೂ ಆಗುವದಿಲ್ಲ. ಶ್ರೀಹರಿ ಸರ್ವತಂತ್ರಸ್ವತಂತ್ರನು ಯೋಗ್ಯತೆಯರಿತವ. ಕಾರಣ ಜೀವರು ಏನೂ ಮಾಡಲಾರರು. (ಬರಿದೆ, ಕೆಲಸವಿಲ್ಲದೆ) ಎಂಬ ಗೂಢಾರ್ಥ ದಿಂದ, ಸತ್ಯಸಂಕಲ್ಪಾನುಸಾರ ಸುಮ್ಮನೇ ಅವರ ಯೋಗ್ಯತೆಯನ್ನು ಅರಿತು ದೇವಗಳಿಗೂ ಸಮಗ್ರ ನಿಬುಕದ ಜಗನ್ನಾಥವಿಠಲನು ಅನಂತ ಕಲ್ಯಾಣ ಗುಣಪೂರ್ಣನೆಂದು ಭಕ್ತಾಪರಾಧಸಹಿಷ್ಣು ಸಂಧಿ ಮುಗಿಸಿರುವ ದಾಸರಾಯರ ಅಡಿಗಳಿಗೆ ಜನ್ಮಜನ್ಮದಿ ಶರಣಾಗಿರಲಿ, ಎಂದು ಬೇಡಿಸುವದು ಸಹ ಶ್ರೀ ಹರಿಯಾಧೀನ.

ಶ್ರೀಗುರುಮಧ್ವೇಶಕೃಷ್ಣಾರ್ಪಿತವು

ಶ್ರೀ ಲಕ್ಷ್ಮೀನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ
ಶ್ರೀ ಗುರುರಾಜೋ ವಿಜಯತೇ

# ೨೨ನೇ ಭಕ್ತಾಪರಾಧಸಹಿಷ್ಣು ಸಂಧಿ

ಶ್ರೀ ರಾಘವೇಂದ್ರ ಗುರು— ಶ್ರೀ ವರದೇಂದ್ರ ಗುರು

ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

**ಶ್ರೀಲಕುಮಿವಲ್ಲಭಗೆ ಸಮ ಕರು ।**
**ಣಾಳುಗಳ ನಾ ಕಾಣೆನೆಲ್ಲಿ ಕು ।**
**ಚೇಲನವಲಿಗೆ ಮೆಚ್ಚಿಕೊಟ್ಟನು ಸಕಲ ಸಂಪದವ ॥**
**ಕೇಳಿದಾಕ್ಷಣ ವಸ್ತ್ರಗಳ ಪಾಂ ।**
**ಚಾಲಿಗಿತ್ತನು ದೈತ್ಯನುದರವ ।**
**ಸೀಳಿ ಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರ ॥೧॥**

**ಅವತರಣಿಕಾ :—**ಈ ಮೊದಲನೇ ಪದ್ಯದಲ್ಲಿ, ಶ್ರೀಹರಿಯು ಮಹಾ ಕರುಣಾಳು ಎಂಬುದನ್ನು, ಕುಚೇಲ-ಪಾಂಚಾಲಿ-ಪ್ರಹ್ಲಾದರಾಯ ಈ ಭಕ್ತರ ಆಪತ್ತನ್ನು ಕಳೆದು ರಕ್ಷಿಸಿದನೆಂದು ಭಕ್ತರಕ್ಷಕತ್ವವನ್ನು ಹೇಳುತ್ತಾರೆ.

**ಪದ್ಯಾರ್ಥ :—**ಶ್ರೀಲಕುಮಿಯೊಲ್ಲಭಗೆ ಸಮ ಕರುಣಾಳುಗಳ ನಾ ಕಾಣೆನೆಲ್ಲಿ=ಶ್ರೀಸಂಪತ್ಕರನಾದ ಮುಕ್ತಿದಾತೃನಾದ ಶ್ರೀ ರಮಾದೇವಿಗೆ ಪತಿಯಾದ ಶ್ರೀಹರಿಗೆ ಸಮ ಕರುಣಾಳುಗಳ=ಸರಿಯೆನಿಸುವ ಕರುಣಾಮಯನಾದವರನ್ನು ನಾನು ಎಲ್ಲಿಯೂ ಕಂಡೇ ಇಲ್ಲ. ಯಾವ ಶ್ರುತಿ, ಪುರಾಣ, ಇತಿಹಾಸಗಳಲ್ಲಿ ಉಪನಿಷದಾದಿಗಳಲ್ಲಿ ಪುಡುಕಿದರೂ ಶ್ರೀಬಿಂಬರೂಪನಾದ ಶ್ರೀಹರಿಯೇ ಮಹಾ ದಯಾಸಮುದ್ರನು, ಅಂತಃಕರುಣಿಯು, "ಏನಂ ಮೋಚಯಾಮಿ" ಎಂಬಂತೆ

ಭಕ್ತನನ್ನು ಯಾವಾಗ್ಗೆ ಉದ್ಧರಿಸುವೆನೆಂಬ ಉತ್ತಮ ಪ್ರಸಾದವೇ ಶ್ರೀಹರಿಯ ಕರುಣಾಳುತನ. ಯಾವಾವ ಭಕ್ತರನ್ನು ಕಾರುಣ್ಯದಿಂದ ಉದ್ಧರಿಸುವನೆಂದರೆ ಎಲ್ಲ ಸಾಂಶದೇವತೆಗಳಾದ ನಿಜಭಕ್ತರಿಗೊಲಿದುದನ್ನೇ ಹೇಳುತ್ತಾರೆ.

೧) ಕುಚೇಲನವಲಿಗೆ ಮೆಚ್ಚಿಕೊಟ್ಟನು ಸಕಲ ಸಂಪದವ=ಕುತ್ಸಿತವಾದ ಚೇಲ ಹರಕು ಬಟ್ಟೆಯುಳ್ಳ ಸುದಾಮನು, ಈತನಿಗೆ ಕುಚೇಲನೆಂದು ಭಾಗವತಾದಿಯಲ್ಲಿ ಹೇಳಿದ್ದು ನಿಜ. ಮುಕ್ತಿಯೋಗ್ಯರಾದ ಲಿಂಗದೇಹಗತವಾದ ತಮಃ ಪರಿಚ್ಛೇದದಲ್ಲಿಪ್ಪ ತಮೋಗುಣ ನಾಶವಾಗಲು, "ಲಿಂಗಾಂಗಿ ಎಂಬ ಕಂಚುಕ" ಅಂಗಿ ಅರಿವೆ ಚೇಲದಲ್ಲಿದ್ದ ತಮೋಗುಣ ನಾಶವಾಗಲು ಹರಿದ ಅಂಗಿ, ಕುತ್ಸಿತ ಚೇಲವೆಂದು ಶಾಸ್ತ್ರ ಸಮ್ಮತದಂತೆ, ಸುದಾಮ ಶ್ರೀ ಕೃಷ್ಣರಿಬ್ಬರು ಪೂರ್ವ ವಯಸ್ಸಿನಲ್ಲಿ ಸಾಂದೀಪನಾಚಾರ್ಯರಲ್ಲಿ ಓದುವ ಕಾಲ ಶ್ರೀಕೃಷ್ಣನೊಬ್ಬ ಸಖನೆಂಬ ಅಜ್ಞಾನದಿಂದ ಬಂದ ದಾರಿದ್ರ್ಯ ಅಜ್ಞಾನವನ್ನು ಪರಿಹರಿಸಿ, ಆತನು ಛಿದ್ರ ವಸ್ತ್ರದಲ್ಲಿ ಕಟ್ಟಿ ತಂದ ಪೃಥುಕತಂಡುಲವನ್ನು ಸ್ವೀಕರಿಸಿ ಆತನ ಅಪರಾಧವನ್ನು ಕ್ಷಮಿಸಿ ಸಕಲ ಸಂಪತ್ತು ಕೊಟ್ಟನು. ಕೇಳಿದಾಕ್ಷಣ ವಸ್ತ್ರಗಳ ಪಾಂಚಾಲಿಗಿತ್ತನು=ಸಾಮಾನ್ಯವಾಗಿ ಮೇಲೆ ತೋರುವರಿಗೆ ದುಃಶಾಸನನು ದ್ರೌಪದಿ ವಸ್ತ್ರ ಹರಣ ಕಾಲದಲ್ಲಿ ದ್ರೌಪದಿ ಮೊರೆ ಕೇಳಿ ವಸ್ತ್ರಗಳಾನಂತ್ಯ ಮಾಡಿದನು. ಆದರೆ ಋಜುಪತ್ನಿಯರಾದ ದ್ರೌಪದಿ ದೇವಿಯರಿಗೆ ದುಃಖಪ್ರಾರಬ್ಧವೇ ಇಲ್ಲ. ದೇಹಾಭಿಮಾನ ರಹಿತರು. ಆದರೆ ದ್ರೌಪದಿದೇವಿಯರ ದೇಹದಲ್ಲಿ ಬ್ರಹ್ಮಶಾಪದಿಂದ ಶಚಿ, ಶಾಮಲಾ, ಉಷಾದೇವಿಯರಿದ್ದುದರಿಂದ ಅವರ ಶಾಪ ಪರಿಹರಿಸಪ್ಪಾ ಕೃಷ್ಣಾ ಎಂದು ದ್ರೌಪದಿ ದೇವಿ ಮೊರೆ ಇಡಲು ಅವರಿಗೆ ಬಂದ ಆಪತ್ತು ರಕ್ಷಿಸಿ ವಸ್ತ್ರಗಳಾನಂತ ಮಾಡಿ ಸಲಹಿದನು. ಎಂದು ವ್ಯಾಸದಾಸ ಸಿದ್ಧಾಂತಕೌಮುದಿಕಾರರು ಬಹು ರಹಸ್ಯ ವಿವರಿಸಿದ್ದಾರೆ. ದೈತ್ಯನುದರವ ಸೀಳಿ ಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರ=ಮಹಾ ಕೃಪಾಸಮುದ್ರನಾದ ಹರಿಯು, ಕರ್ಮಜ ದೇವತೆಯಾದ ಪ್ರಹ್ಲಾದ ರಾಜರಿಗೆ, ಬ್ರಹ್ಮಶಾಪದಿಂದ ದೈತ್ಯಯೋನಿ ಬಂದಿರಲು, ಹಿರಣ್ಯಕಶಿಪುನಾದ ಪ್ರಹ್ಲಾದರಾಜರ ತಂದೆಯು ನಾನಾ ಬಾಧೆ ಕೊಡಲು, ರಕ್ಷಿಸಿ ಕಾಯ್ದನು. ಸಕಲ ಆಪತ್ತುಗಳು ದುರಿತ ನಿವಾರಣ ಮಾಡಿದನು. ಪ್ರಾರಬ್ಧ ಅನುಭೋಕ್ತವ್ಯನಾದ ರಾಜ್ಯವಾಳುವ ಕಾಲದಲ್ಲಿಯೂ ಭಕ್ತನನ್ನು

ರಕ್ಷಿಸಿದನೆಂದು ಅವತರಣಿಕೆಯಲ್ಲಿ ವಿಶದವಾಗಿ ದಾಸಾರ್ಯರು ಬರೆಸಿದ್ದಾರೆಂಬುದು ಮರೆಯದೇ ನೆನಪಿನಲ್ಲಿಡಿ.

**ಭಾವಸೂಚನ ॥ "ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ ॥** (ಬ್ರ. ೪-೧-೧೩) ಶ್ರೀಹರಿಯನ್ನು ಕಂಡ ವ್ಯಾಳೆ ಪೂರ್ವೋತ್ತರ ಪಾಪ ಇಲ್ಲಾ. "ತದ್ಯಥೈಷಿಕಾತೂಲ ಎಂಬ ವೇದ ಇದ್ದ ಪ್ರಯುಕ್ತ ಮತ್ತೂ "ಯಥೋಪಾಸ್ಯಾಂಜಸಾ ದೃಷ್ಟಂ ಬ್ರಹ್ಮ" ಎಂಬನುವ್ಯಾಖ್ಯಾನ ಇರೋಣದರಿಂದ "ಅತಃ ಕರ್ಮ ಕ್ಷಯಾತ್" ಎಂಬ ಸಾಮಾನ್ಯ ವಚನಕ್ಕೆ ಭಯ ಬಡಬಾರದೆಂತ ಸಮಾಧಾನ ಮಾಡುವ ಶ್ರೀ ಜಗನ್ನಾಥಭಟರು ಈ ಸರ್ವ ದುರಿತ ನಿವಾರಣ ಸಂಧಿಯನ್ನುಪಕ್ರಮಿಸಲಿಕ್ಕೆ ಸೂಚನ ಹರೀತಿ ॥ ಮಂಜೂಷಾಯಾಂ ಚ

ಭಾಮಿನಿ

ಪರಮ ಕರುಣಾನಿಧಿಯ ನಾಮ ।
ಸ್ಥಿರದಿ ಸ್ಮರಿಸಲು ದುರಿತರಾಶಿಯ ।
ತರಿದು ಬಿಸಟುವನನಳ ತೂಲ ರಾಶಿ ಪೊಕ್ಕಂತೆ ॥
ಅರಿದು ಸತ್ವರ ಭಜಿಸೆನೆನುತಲಿ ।
ಕರುಣಶಾಲಿಗಳಾದ ದಾಸರು ।
ವಿವರಿಸಿಹರೈ ಸಕಲ ದುರಿತಗಳ್ ಹರಣ ಸಂಧಿಯಲಿ ॥೨೨॥

ಶ್ರೀಲಕುಮಿವಲ್ಲಭೇತಿ ॥೧॥

**ಶ್ರೀಗುರುಜಗನ್ನಾಥವಿಠ್ಠಲರ ತಾತ್ಪರ್ಯ ಪ್ರಕಾಶಿಕಾ**

ಮೂಲಹರಿಕಥಾಮೃತಸಾರದಂತೆ ಸಂಸ್ಕೃತ ಶ್ಲೋಕಗಳು

ಶ್ರೀರಸ್ತು ॥ ಹರಿಃ ಓಂ ॥ ಶ್ರೀನಿವಾಸೋಪಮಃ ಕೋಸಾವಪರಾಧಸಹಿಷ್ಣುಕಃ । ಕುಚೇಲದತ್ತಧಾನಾಯಾಃ ಸಂತುಷ್ಟಃ ಸಂಪದಂ ದದೌ ॥೧॥ ದ್ರೌಪದ್ಯಾ ವಸ್ತ್ರ ನಿಚಯಂ ದತ್ವಾ ದೈತ್ಯೋದರಂ ಭಿದನ್ ॥ ಶಿಶುಂ ಪ್ರಹ್ಲಾದ ನಾಮಾನಮಪೀಪಲದ್ಧರಿಃ ಸ್ವಯಮ್ ॥೨॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶ್ರೀರಸ್ತು|| ಹರಿಃ ಓಂ||ತ್ರ್ಯಕ್ಷ ಲಕ್ಷ್ಮೀ ಕಟಾಕ್ಷಪ್ರೇಕ್ಷಿತಾತ್ಮನೇ ನಮಃ "ಕಿಂ ತೃಷ್ಣಯಾ ಭವವಾಹಿನ್ಯಾ ಸರ್ವಾತ್ಮನಾ ಶರಣಮುಪಗತೇ ಸರ್ವಜಿಷ್ಣೌ ವಿಷ್ಣೌ ? ಶ್ರೀಕೃಷ್ಣ ಏವ ಸರ್ವಾಪರಾಧಸಹಿಷ್ಣುಃ" ಇತಿ ವಕ್ತುಂ ಏತತ್ಸಂಧ್ಯಾರಂಭಃ || ತತ್ರ ತಾವತ್ ತತ್ತದಪರಾಧೋಪಮರ್ದೇ ಅಸಾಧಾರಣಕರುಣೇನ ಭವಿತವ್ಯಮ್ ಇತಿ ಅತಃ ಆಹ "ಶ್ರೀ" ಇತಿ || **"ಅವಲು" "ಅವಲಕ್ಕಿ"|| ದರ್ಶನಪ್ರತಿಬಂಧಕೋಪಮರ್ದೇನ ಮಹರಾದ್ಯಾಪಾದಕೇಕ್ಷಣ ದಾನಂ || "ನ ಸಾಮಾನ್ಯಾತ್"** ಇತಿ ಸೂತ್ರಾತ್ || "ಕೇಳಿ" ವಿಲಾಸ ದರ್ಶನೇ ರತಾಃ ಸ್ತ್ರಿಯಃ ಚತುರ್ಮುಖಂ ಪ್ರತಿ || ತದೀಯಶಾಪಸಂಯುತಾಃ ನರೇಷು ದೇಹಸಂಯುತಾಃ || "ತದಾಪರಾಧಕರ್ಮಜ ಪ್ರಭೂತ ಮಾನ ಖಂಡನಮ್||ಸಮಾಪ್ಯ ವಸ್ತ್ರರಾಶಿಕಂ ದದೌ ಹರಿಃ ಕೃಪೋದಧಿಃ||"ಚತುರ್ಮುಖೀಯ ಶಾಪತಃ ಸುರೇಷು ಸಂಭವೇ ಜನೇಃ || ಕೃಪಾಲುರೀಕ್ಷಿತೋಭವತ್ ಸಭಾತಲೇ ನೃಕೇಸರೀ" ||೧||

### ಕನ್ನಡಾರ್ಥ

ಸರ್ವನಿಯಾಮಕನಾದ ನಾರಾಯಣನನ್ನು ಸರ್ವವಿಧದಿಂದ ಶರಣು ಹೊಂದಿದವನಿಗೆ ಈ ಸಂಸಾರದಲ್ಲಿ ಮತ್ತಷ್ಟು ಮುಳುಗಿಸುವ ವಿಷಯ ತೃಷ್ಣೆಯು ಬಾಧಿಸುವುದಿಲ್ಲ. ಅವನೇ ಭಕ್ತರ ಸರ್ವ ಅಪರಾಧಗಳನ್ನು ಕ್ಷಮಿಸುವ ಸಹಿಷ್ಣುವಾಗಿರುತ್ತಾನೆ ಎಂದು ಶ್ರೀನಾರಾಯಣಾನುಗ್ರಹಪಾತ್ರರಾದ ಶ್ರೀ ದಾಸವರ್ಯರು ಈ ಸಂಧಿಯನ್ನು ಪ್ರಾರಂಭಿಸುತ್ತಾರೆ. ಆ ಆ ಅಪರಾಧಗಳನ್ನು ನಾಶಪಡಿಸಲು ಅಥವಾ ಕಡಮೆ ಮಾಡಲು ಶ್ರೀಹರಿಯು ಅಸಾಧಾರಣ ಕರುಣಾಮಯನಾಗಿರಬೇಕು. ಆದುದರಿಂದ ಹೇಳುತ್ತಾರೆ "ಶ್ರೀ" ಎಂಬ ಪದ್ಯವನ್ನು.

||ಓಂ|| **ನ ಸಾಮಾನ್ಯಾದಪ್ಯುಪಲಬ್ಧೇಃ ಮೃತ್ಯುವತ್ ನ ಹಿ ಲೋಕಾಪತ್ತಿಃ"** ಓಂ|| ಎಂಬ ಬ್ರಹ್ಮಸೂತ್ರ (ಅ. ೩ ಪಾ. ೩ ಸೂ. ೫೩)ದಲ್ಲಿ "ಮರಣ ಮಾತ್ರಾನಂತರ ಮುಕ್ತಿಯಾಗದೇ ಲಿಂಗದೇಹಭಂಗಾನಂತರವೇ ಮುಕ್ತಿಯಾಗುವಂತೆ ಬಿಂಬದರ್ಶನಾನಂತರದಲ್ಲಿಯೇ ಮುಕ್ತಿ; ಅದು

ಸಾಮಾನ್ಯ ಭಗವದ್ರೂಪಗಳ ದರ್ಶನದಿಂದ ಆಗುವುದಿಲ್ಲ. ಇನ್ನು ಸಾಮಾನ್ಯ ಭಗವದ್ರೂಪದರ್ಶನವು ಮಹರಾದಿ ಲೋಕಗಳನ್ನು ಹೊಂದಿಸಿಕೊಡುವುದು" ಎಂದು ಹೇಳಿರುತ್ತಾರೆ. ಅದರಂತೆ ಶ್ರೀಹರಿಯು ಅವರವರ ಬಿಂಬಾಪರೋಕ್ಷ ಜ್ಞಾನದ ಪ್ರತಿಬಂಧಕಗಳನ್ನು ಪರಿಹರಿಸಿ (ಕಡಿಮೆ ಮಾಡಿ) ಮಹರಾದಿ ಲೋಕಗಳನ್ನು ಕೊಟ್ಟು ಕುಚೇಲಾದಿಗಳಿಗೆ ಕರುಣಿಸಿರುತ್ತಾನೆ ಎಂದು ತಿಳಿಯಬೇಕು.

"ಕೇಳಿದಾಕ್ಷಣ"ವೆಂಬ ಚರಣದಿಂದ ದ್ರೌಪದಿಗೆ ಅಕ್ಷಯವಸ್ತ್ರವಿತರಣ ರೂಪವಾದ ಹರಿಯ ಕರುಣೆಯನ್ನು ಹೇಳುತ್ತಾರೆ. ಮಹಾಸಭೆಯಲ್ಲಿ ಉಷಾ-ಶಚಿ-ಶಾಮಲಾ-ಉಮಾ ಇವರುಗಳು ಸ್ವೈರಿಣಿಯರಂತೆ ವಿಲಾಸವನ್ನು ಬ್ರಹ್ಮದೇವನ ಮುಂದೆ ತೋರಿಸಿದರು. ಆಗ ಅದರಿಂದ ಕುಪಿತನಾದ ಬ್ರಹ್ಮದೇವನು ಶಾಪವನ್ನಿತ್ತನು. ಅವನ ಶಾಪಯುಕ್ತರಾಗಿಯೇ ಅವರು ಮನುಷ್ಯಸ್ತ್ರೀಯರಾಗಿ ಹುಟ್ಟಿದರು. ಈ ಮೂವರ ಆ ಅಪರಾಧ ಕರ್ಮದಿಂದ ಆದ ವಸ್ತ್ರಾಪಹರಣರೂಪ ಮಾನಖಂಡನವನ್ನು ಮುಗಿಯಿಸಿ, ಕೃಪಾಸಾಗರ ಹರಿಯು ವಸ್ತ್ರರಾಶಿಗಳನ್ನು ಕೊಟ್ಟು ಪರಿಹರಿಸಿದನು. ದ್ರೌಪದಿಯ ದೇಹದಲ್ಲಿ ಇರುವ ಅವರ ಮೊರೆಯನ್ನು ಕೇಳಿ ಭಾರತಿಯ ಸ್ತೋತ್ರಕ್ಕೆ ಪ್ರೀತನಾಗಿ ಸಂರಕ್ಷಿಸಿದನು." ಎಂಬ ವಿಶೇಷವನ್ನು ಇಲ್ಲಿ ತಿಳಿಯಬೇಕು ||೧||

**ಅವತರಣಿಕಾ :—**ವಾಯುಶಿಷ್ಯನಾದ ದೇವಶರ್ಮನೆಂಬ ಬ್ರಾಹ್ಮಣನು ಶ್ರೀನಿವಾಸನನ್ನು ಪ್ರಾರ್ಥಿಸಲು ದಾರಿದ್ರ್ಯದೋಷವನ್ನು ಕಳೆದು ಸಂಪತ್ತು ಇತ್ತು ಸುಖಪ್ರಾರಬ್ಧ ಅನುಭೋಗ ಕೊಟ್ಟದ್ದು ಆದಿತ್ಯಪುರಾಣ ಶ್ರೀ ವೆಂಕಟೇಶ ಮಾಹಾತ್ಮ್ಯ ಚರಿತ್ರೆ ಹೇಳುತ್ತಾರೆ.

**ದೇವಶರ್ಮಾಹ್ವಯ ಕುಟುಂಬಕೆ ।**
**ಜೀವನೋಪಾಯವನು ಕಾಣದೆ ।**
**ದೇವದೇವ ಶರಣ್ಯ ರಕ್ಷಿಸು ರಕ್ಷಿಸೆನೆ ಕೇಳಿ ॥**
**ತಾ ವೊಲಿದು ಪಾಲಿಸಿದ ಸೌಖ್ಯ ಕೃ ।**
**ಪಾವಲೋಕನದಿಂದ ಈತನ ।**
**ಸೇವಿಸದೆ ಸೌಖ್ಯಗಳ ಬಯಸುವರಲ್ಪ ಮಾನವರು ॥೨॥**

**ಪದ್ಯಾರ್ಥ :—** ದೇವಶರ್ಮಾಖ್ಯಯು=ದೇವಶರ್ಮನೆಂದು ಹೆಸರುಳ್ಳ ಬ್ರಾಹ್ಮಣನು, ಈತನು ವಾಯುದೇವರ ಶಿಷ್ಯನು. ತಪಸ್ಸು ಆಚರಿಸುತ್ತಿದ್ದನು. ಆದರೆ ಬಹು ದಾರಿದ್ರ್ಯದೋಷ ಬಡತನವು ಭಗವದ್ಭಕ್ತರಿಗೆ ಬೆನ್ನಟ್ಟಿರುವದೆ, ಕುಟುಂಬಕೆ ಜೀವನೋಪಾಯವನು ಕಾಣದೆ=ತನ್ನ ಹೆಂಡತಿ ಮಕ್ಕಳಿಗೆ ಜೀವಧಾರಣ ಸಹ ಮಾಡಲು ಅನ್ನವನ್ನು ಕಾಣದೆ ಬಳಲುತ್ತಿರಲು, ತಪಸ್ಸು ಮುಗಿಯುವ ವ್ಯಾಳ್ಯ ಗುರುಗಳಾದ ವಾಯುದೇವರು ಬಂದು ಆಜ್ಞೆಯಿತ್ತರು. ನೀನು ವೆಂಕಟಗಿರಿಗೆ ಹೋಗಿ ಶ್ರೀನಿವಾಸನನ್ನು ಭಜಿಸು, ದಾರಿದ್ರ್ಯ ಪರಿಹಾರ ಮಾಡಿ ಅಖಿಳ ಸಂಪದವನ್ನು ಕೊಡುವನೆಂಬ ವಾಯು ವಚನಾನುಸರಿಸಿ ದೇವಶರ್ಮನು ಶ್ರೀನಿವಾಸದೇವರಲ್ಲಿ ಬಂದು ಪ್ರಾರ್ಥಿಸಿದ್ದೇನೆಂದರೆ, ದೇವ ದೇವ=ಕ್ರೀಡಾದಿ ವಿಶಿಷ್ಟ ಗುಣವುಳ್ಳವರಾದ ಬ್ರಹ್ಮಾದಿ ದೇವತೆಗಳಿಗೆ ನೀನು ದೇವ, ಅವರಿಗೆ ಕ್ರೀಡಾದಿ ಗುಣ ವಿಶಿಷ್ಟಗಳನ್ನು ತಂದುಕೊಡುವನು, ಶರಣ್ಯ =ಶರಣು ಪೊಕ್ಕವರನ್ನು ರಕ್ಷಿಸುವ ಬಿರಿದುಳ್ಳವನೆ, ದಾರಿದ್ರ್ಯ ದೋಷದಿಂದ ಬಳಲುವೆನ್ನನು ರಕ್ಷಿಸು ರಕ್ಷಿಸು=ಕಾಪಾಡು ಕಾಪಾಡು ಎಂದು ಪ್ರಾರ್ಥಿಸುವ ದನ್ನು ಕೇಳಿ, ತಾವೊಲಿದು=ಶ್ರೀನಿವಾಸನು ಬಹು ಕರುಣಿಯು ಬಡ ಬ್ರಾಹ್ಮಣನು ಮೊರೆ ಇಡುವುದನ್ನು ಕೇಳಿ ಅಂತಃಕರುಣದಿಂದ ಪ್ರತ್ಯಕ್ಷನಾಗಿ, ದುಃಖಪ್ರಾರಬ್ಧ ಅನುಭೋಕ್ತವ್ಯ ತೀರಿಸಿ ಶ್ರೀ ವೆಂಕಟನು ಕೃಪಾವಲೋಕನ ದಿಂದ ಸೌಖ್ಯವ ಪಾಲಿಸಿದ=ಕೃಪಾದೃಷ್ಟಿಯಿಂದ, ಅನಂತ ಧನ ಜ್ಞಾನಧನ ಧಾನ್ಯ ಪಾಲಿಸಿ ಸುಖಪ್ರಾರಬ್ಧ ವಿತ್ತನು. ಈತನ ಸೇವಿಸದೆ=ಇಂತಹ ಮಹಾ ಮಹಿಮನಾದ ವೇಂಕಟನನ್ನು ಸೇವೆ ಮಾಡದಲೆ, ಅಲ್ಪ ಮಾನವರು=ಕ್ಷುದ್ರ ಮನುಜರು ತಾರತಮ್ಯಜ್ಞಾನಶೂನ್ಯರು, ಶ್ರೀಹರಿಯ ಮಹಿಮೆ ಅರಿಯದಲೆ, ಸೌಖ್ಯಗಳ ಬಯಸುವರು=ಸುಖಕ್ಕೆ ಕಾರಣವಾದ ಧನಧಾನ್ಯವನ್ನು ಇಚ್ಛಿಸು ವರು.

**ವಿ ಶೇ ಷ ಸೂ ಚ ನೆ :—** ದಾರಿದ್ರ್ಯವು ಮಹಾಕೆಟ್ಟದ್ದು. ಇದು ದುಷ್ಕರ್ಮದಿಂದ ಒದಗುವದು. "ಘೋರ ವ್ಯಭಿಚಾರ, ಪರನಿಂದೆ, ಪರ ವಿತ್ತಾಪಹಾರ ಮಾಡಿದ ದೋಷದಿಂದ ದರಿದ್ರರಾಗುವರು. ಮೂರು ವಿಧ ದಿಂದಲಿ ಕಾರಣನೆ ನೀನು ದುಷ್ಕರ್ಮ ಪರಿಸೋ" ಎಂದು ಶ್ರೀಗೋಪಾಲದಾಸ

ರಾಯರು ಶ್ರೀಜಗನ್ನಾಥದಾಸರ ಆಪತ್ತು ಕಳೆದು ರಕ್ಷಿಸೆಂದು ಶ್ರೀಧನ್ವಂತರಿ ದೇವರ ಸ್ತೋತ್ರಗೈದಿರುವರು.

**ಭಾವಸೂಚನ** ॥ ದೇವಶರ್ಮೇತಿ ॥ ಆತನು ವಾಯುಶಿಷ್ಯ ॥ರಕ್ಷಿಸೇತಿ॥ ಭಕ್ತವತ್ಸಲ ಭೋ ವಿಷ್ಣು !

ಸೌಖ್ಯೇತಿ॥ವಿಪನ್ನಾಶಃ ಸಂಪದಾಪ್ತಿರ್ಭೂಯಾತ್ತೇ ಮದನುಗ್ರಹಾತ್ ಇತಿ ಆದಿತ್ಯಪುರಾಣೇ ॥೨॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ತ್ರಿಭಿಃ ಸಾಕ್ಷಿಭಿಃ ಅಪರಿತೋಷಾತ್ ಆಹ "ದೇವ" ಇತಿ ॥ "ಎನೆ" ವಚನಮ್ ॥ "ಕುಕರ್ಮಜಾಂ ದರಿದ್ರತಾಂ ನಿರಸ್ಯ ದರ್ಶನಂ ದದೌ॥೨॥

## ಕನ್ನಡಾರ್ಥ

ಕುಚೇಲ ದ್ರೌಪದಿ ಪ್ರಹ್ಲಾದ ಈ ಮೂವರ ದೃಷ್ಟಾಂತಗಳಿಂದ ಅಲಂ ಬುದ್ಧಿ (ಸಾಕು ಎಂಬ ಬುದ್ಧಿ)ಯನ್ನು ಹೊಂದದೇ ಇನ್ನೂ ಪುರಾಣೋಕ್ತ ಒಂದು ದೃಷ್ಟಾಂತವನ್ನು ಹೇಳುತ್ತಾರೆ- "ದೇವಶರ್ಮ" ಎಂಬ ಪದ್ಯದಿಂದ.

ದೇವಶರ್ಮನೆಂಬ ಬ್ರಾಹ್ಮಣನು ಪರಿಪರಿಯಾಗಿ ಪ್ರಾರ್ಥಿಸಲು ಅವನ ಭಕ್ತಿಯುಕ್ತ ಸ್ತೋತ್ರ ಪ್ರಾರ್ಥನೆಗಳಿಗೆ ಮೆಚ್ಚಿ ಶ್ರೀ ಶ್ರೀನಿವಾಸನು ಪೂರ್ವ ಜನ್ಮದ ಪಾಪಕರ್ಮಗಳ ಫಲವಾಗಿ ಬಂದೊದಗಿದ ಅವನ ದಾರಿದ್ರ್ಯವನ್ನು ಹಿಂಗಿಸಿ, ತನ್ನ ಸಂದರ್ಶನವನ್ನು ಅನುಗ್ರಹಿಸಿದನು. ಎಂದು ಆದಿತ್ಯ ಪುರಾಣ ವೆಂಕಟೇಶಮಾಹಾತ್ಮ್ಯೆಯಲ್ಲಿ ಹೇಳಲಾಗಿದೆ. ॥೨॥

**ಅವತರಣಿಕಾ :**—ಹಿಂದೆ ಹೇಳಿದ ಭಕ್ತರ ವಿಪತ್ತು ಕಳೆದು ಸುಖ ವಿತ್ತದು ಇಷ್ಟೇ ಅಲ್ಲ, ಭಾರತ ಕಥಾ ನೆನಪು ತಂದುಕೊಟ್ಟು ದ್ರೋಣ ಭೀಷ್ಮ ಕೃಪಾದಿಗಳು ಮಾಡಿದ ಅಪರಾಧ ಕ್ಷಮಿಸಿ, ಪರಿಪಾಲಿಸಿದ ಶ್ರೀಹರಿಯ ಕಾರುಣಿಕತೆಯನ್ನು ಸ್ತೋತ್ರಗೈಯ್ಯುತ್ತಾರೆ.

**ಶ್ರೀನಿವಾಸನ ಪೋಲ್ವ ಕರುಣಿಗ।**
**ಳೀನಳಿನಜಾಂಡದೊಳು ಕಾಣೆ ಪ್ರ।**
**ವೀಣರಾದವರರಸಿ ನೋಳ್ಪುದು ಶ್ರುತಿ ಪುರಾಣದೊಳು॥**

**ದ್ರೋಣಭೀಷ್ಮಕೃಪಾದಿಗಳು ಕುರು।**
**ಸೇನೆಯೊಳಗಿರೆ ಅವರವಗುಣಗ।**
**ಳೇನು ನೋಡದೆ ಪಾಲಿಸಿದ ಪರಮಾತ್ಮ ಪರಗತಿಯ॥೩॥**

**ಪದ್ಯಾರ್ಥ :—** ಶ್ರೀನಿವಾಸನ=ಶ್ರೀ-ಸಂಪತ್ಕರಳಾದ ಶ್ರೀಲಕ್ಷ್ಮೀ ದೇವಿಗೆ ಶ್ರೀರೂಪದಿಂದ ಬಿಂಬನಾದ ಶ್ರೀಹರಿಗೆ, ಪೋಲ್ಪ=ಹೋಲುವ, ಕರುಣಿಗಳ ಈ ನಳಿನಜಾಂಡದೊಳು ಕಾಣೆ=ಇಂತಹ ಕರುಣಿಗಳನ್ನು ಈ ಬ್ರಹ್ಮಾಂಡದೊಳು ಮತ್ತು ಈ ಬ್ರಹ್ಮಾಂಡಗಳು ಪ್ರವಾಹರೂಪದಿಂದ ನಿತ್ಯವಾದ ಕಾರಣ ಹಿಂದಾದ ಮುಂದಾಗುವ ಯಾವ ಬ್ರಹ್ಮಾಂಡ ಗಳಲ್ಲಿಯೂ, ರಮಾ ಬ್ರಹ್ಮಾದಿದೇವತೆಗಳಿಗೆ ಮಿಾರಿದ ಹೆಚ್ಚಿನ ಕರುಣಾಳು ವಾದ ಶ್ರೀಹರಿಯನ್ನು ನಾನು ಕಂಡೇ ಇಲ್ಲ. ಬೇಕಾದರೆ ಪ್ರವೀಣರಾದವರು =ಜ್ಞಾನಿಗಳಾದವರು, ಶ್ರುತಿ ಪುರಾಣದೊಳು ಅರಸಿ ನೋಳ್ಪುದು=ವೇದ ಗಳು ಪುರಾಣಗಳಲ್ಲಿ ಪುಡುಕಿ ನೋಡಿರಿ, ಶ್ರೀನಿವಾಸನಿಗೆ ಸರಿ ಮಿಗಿಲೆನಿಸುವ ಕರುಣಾಸಮುದ್ರರು ಇಲ್ಲೇ ಇಲ್ಲ. ಈತನು ಎಂತಹ ಕರುಣಾಸಮುದ್ರನೆಂದರೆ ತನ್ನ ಭಕ್ತರಾದ ದೇವಾಂಶರಾದ, ದ್ರೋಣಾಚಾರ್ಯರು, ಭೀಷ್ಮಾಚಾರ್ಯರು ಕೃಪಾಚಾರ್ಯರು, ಮೊದಲಾಗಿ ಕರ್ಣ ಅಶ್ವತ್ಥಾಮ ಮತ್ತು ಕೆಲವು ದೇವಾಂಶರು ಪಾಂಡವ ದ್ವೇಷಿಗಳಾದ ದುರ್ಯೋಧನನ ಸೈನ್ಯದಲ್ಲಿ ಭಗವ ತ್ಕಾರ್ಯಸಾಧನಕ್ಕಾಗಿ ಸೇರಿ, ಪಾಂಡವ ಪಕ್ಷಿಯಾದ ಶ್ರೀಕೃಷ್ಣನ ಮೇಲೆ ನಾನಾ ವೇಳೆ ನಾನಾ ತೆರದ ಬಾಣಗಳನ್ನು ಬಿಟ್ಟು, ಶ್ರೀಹರಿಗೆ ಅಪರಾಧ ಮಾಡಿದರೂ, ಅವರವಗುಣಗಳೇನು ನೋಡದೆ=ಈ ಮೂರು ಜನರ ಹಿಂಸಾತ್ಮಕ ಶಸ್ತ್ರ ಪ್ರಯೋಗ ರೂಪ ಕೆಟ್ಟಗುಣಗಳನ್ನು ಮನಸ್ಸಿಗೆ ತಾರದೇ ಯದ್ಯಪಿ ವೈರಿ ಸೈನ್ಯದಲ್ಲಿದ್ದರೂ, ಭೂಭಾರಹರಣಕ್ಕೆ ಶ್ರೀ ಭೀಮಕೃಷ್ಣರಿಗೆ ಸಹಾಯಕರಾದ ಭಕ್ತರ ಅಪರಾಧ ಕ್ಷಮಿಸಿ, ಪರಮಾತ್ಮ=ರಮೆಗೂ ಉತ್ತಮ ನಾದ ಕೃಷ್ಣ ಈ ಭಕ್ತರಿಗೆ ಉತ್ತಮವಾದ ಗತಿ ಕೊಟ್ಟನೆಂದು ಶ್ರೀಹರಿಯ ಭಕ್ತಾಪರಾಧ ತಾಳ್ಮೆಯನ್ನು ಹೇಳಿದ್ದಾರೆ.

**ಭಾವಸೂಚನ ॥** ಶ್ರೀತಿ ॥೩॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ನನು ರಮಾದೀನಾಂ ದಯಾಸಾರಾಣಾಂ (ಸಾಂದ್ರಾಣಾಂ) ಸತ್ವೇಽಪಿ ಕಿಂ ವಿಶಿಷ್ಯ ಹರೇರೇವ ಪ್ರಶಂಸಾ ? ಇತಿ ಚೇತ್ ನ ॥ "ಶ್ರಿಯಂ ವಸಾನಾ" ಇತ್ಯಾದಿಷು ಅಸ್ಯೈವ ಘೃಣಾಪಾರಾವಾರತ್ವಂ ಭಾಸತೇ ಪರೀಕ್ಷಕಾಣಾಂ ಇತ್ಯಾಹ "ಶ್ರೀ" ಇತಿ ॥ "ಸಿಯುಧ್ಯತೋಽಪಿ ಸಂಗರೇ ಪಿಧಾಯ ಪದ್ಮಲೋಚನಮ್ ।ಸುಶಸ್ತ್ರ ವೃಷ್ಟಿಭಿಃ ಪುರಾ ದಧಾರ ತಾನ್ ಕೃಪಾಬಲಾತ್"॥೩॥

### ಕನ್ನಡಾರ್ಥ

ರಮಾ ಮುಂತಾದ ದಯಾವಂತರನ್ನು ಬಿಟ್ಟು ಶ್ರೀಹರಿಯನ್ನೇ ಯಾಕೆ ಪ್ರಶಂಸಿಸಬೇಕು ? ಎಂದು ಆಕ್ಷೇಪವು ಉದಯಿಸುತ್ತದೆ. ಆದರೆ "ಶ್ರಿಯಂ ವಸಾನಾ" ಎಂದು ಮುಂತಾದ ಶ್ರುತಿ ಸ್ಮೃತಿಗಳನ್ನು ಪರೀಕ್ಷಿಸುವವರಿಗೆ ಶ್ರೀ ಹರಿಯೇ ದಯಾಸಮುದ್ರನೆಂಬುದಾಗಿ ತಿಳಿದುಬರುತ್ತದೆ. ಆದುದರಿಂದ ಎಲ್ಲರಿಗಿಂತ ಹೆಚ್ಚಿನ ಕರುಣಾಪೂರ್ಣನಾದುದರಿಂದ ಅವನನ್ನೇ ಪ್ರಶಂಸಿಸುವದು ಅತ್ಯುಚಿತ.

ಭೀಷ್ಮದ್ರೋಣ ಮುಂತಾದವರು ಬಾಣದ ಮಳೆಗಳನ್ನು ತನ್ನ ಮೇಲೆ ಸುರಿಸಿ, ಸಂಗ್ರಾಮದಲ್ಲಿ ಯುದ್ಧ ಮಾಡುತ್ತಿದ್ದರೂ, ಶ್ರೀಕೃಷ್ಣನು ಕಣ್ಣು ಮುಚ್ಚಿ, ಅಪರಾಧಗಳನ್ನೆಣಿಸದೆ ಅವರಿಗೆ ಸದ್ಗತಿಯನ್ನು ದಯಪಾಲಿಸಿದನು. ಇದು ಭಾರತಾದಿ ಇತಿಹಾಸ ಪುರಾಣಗಳಲ್ಲಿ ಸಿದ್ಧವಾದ ವಿಷಯವಾಗಿದೆ.॥೩॥

**ಅವತರಣಿಕಾ :—** ಹಿಂದಿನ ಪದ್ಯದಲ್ಲಿ ಶ್ರುತಿಪುರಾಣದೊಳು ಪುಡುಕಿದರೆ ಶ್ರೀನಿವಾಸನ ಪೋಲ್ವ ಕರುಣಿಯು ಕಾಣನೆಂದುದಕೆ, ಈ ಭವಿಷ್ಯೋತ್ತರ ಪುರಾಣ ಶ್ರೀ ವೆಂಕಟೇಶಮಾಹಾತ್ಮ್ಯೆಯಲ್ಲಿ ಪೇಳಿದ ಭಕ್ತರನ್ನು ರಕ್ಷಿಸಿದ್ದು ಪೇಳುತ್ತಾರೆ.

**ಚಂಡ ವಿಕ್ರಮ ಚಕ್ರ ಶಂಖವ ।**
**ತೊಂಡಮಾನ ನೃಪಾಲಗಿತ್ತನು ।**
**ಭಾಂಡಕಾರಕ ಭೀಮನ ಮೃದಾಭರಣಗಳಿಗೊಲಿದ॥**

**ಮುಂಡೆವ(ಯೊ)ಡದಾಕಾಶರಾಯನ।**
**ಹೆಂಡತಿಯು ನುಡಿಗೇಳಿ ಮಗಳಿಗೆ।**
**ಗಂಡನೆನಿಸಿದ ಗಹನ ಮಹಿಮ ಗದಾಬ್ಜದರಪಾಣಿ ॥೪॥**

**ಪದ್ಯಾರ್ಥ :—** ಚಂಡ= ತೀಕ್ಷ್ಣ, ಘೋರ, ಕ್ರೂರವಾದ ಯುದ್ಧದಲ್ಲಿ ವಿಕ್ರಮ= ಶೂರ ಬಲಶಾಲಿಯಾದ ಶ್ರೀ ಶ್ರೀನಿವಾಸನು, ಶಂಖ ಚಕ್ರವ= ತನ್ನ ಸ್ವರೂಪಾಯುಧವಲ್ಲದೆ ಇರುವ ಬೇರೆ ಆಯುಧವಾದ ಶಂಖಾಯುಧ ವನ್ನೂ, ಚಕ್ರಾಯುಧವನ್ನೂ, ತೋಂಡಮಾನ ನೃಪಾಲಗಿತ್ತನು= ಆಕಾಶ ರಾಜ ತಮ್ಮನಾದ ತೋಂಡಮಾನ ರಾಜನಿಗೆ ಕೊಟ್ಟನು. ಆಕಾಶರಾಜನ ಮಗನಿಗೂ ತೋಂಡಮಾನನಿಗೂ, ರಾಜ್ಯವಿಷಯದಲ್ಲಿ ಕಲಹ ಉತ್ಪನ್ನವಾಗಿ ಯುದ್ಧ ಪ್ರಸಂಗ ಒದಗಲು, ಉಭಯರು ಬಂದು ನಮಗೆ ಸಹಾಯ ನೀಡೆಂದು ಕೇಳಲು, ಹಿಂದೆ ಈ ಶ್ರೀಕೃಷ್ಣನೇ ಕುರುಪಾಂಡವರು ಸಹಾಯ ಕೇಳಿದಾಗ್ಗೆ ಯಾದವ ಸೈನ್ಯವನ್ನು ಕುರುಗಳಿಗೆ ಇತ್ತು, ತಾನು ಚಕ್ರ ಪಿಡಿಯದೇ ಪಾಂಡವರ ಕಡಿಗೆ ಸಹಾಯ ಮಾಡಿದಂತೆ ಹೆಂಡತಿಯಾದ ಲಕ್ಷ್ಮೀಯುಕ್ತ ಳಾದ ಶ್ರೀಪದ್ಮಾವತಿ ಪ್ರಾರ್ಥನೆಯಂತೆ ತಾನು ಚಕ್ರ ಧರಿಸದೇ ಶಾಲಕನಾದ ಆಕಾಶರಾಜನ ಮಗ ವಸುದಾನನೆಂಬುವನಿಗೆ ಸಹಾಯ ನೀಡಿದನು. ತೋಂಡ ಮಾನರಾಜನಿಗೆ ತಾನು ಶಂಖ ಚಕ್ರವನ್ನು ಕೊಟ್ಟು ಸಹಾಯ ನೀಡಿದನೆಂಬ ಭವಿಷ್ಯೋತ್ತರ ಪುರಾಣಕಥೆಯ ದ್ವಾರಾ ಶ್ರೀನಿವಾಸನ ಕಾರುಣಿಕತೆ ಭಕ್ತ ವಾತ್ಸಲ್ಯ ಶ್ರೀನಿವಾಸನ ಸಂಗಡ ತೋಂಡಮಾನ ಯುದ್ಧ ಮಾಡಿದ ಭಕ್ತಾಪ ರಾಧ ಸಹಿಷ್ಣುತೆಯನ್ನು ಪೇಳಿ ಮುಂದೆ ಇನ್ನೊಬ್ಬ ಭಕ್ತನಾದ, ಭಾಂಡಕಾರಕ ಭೀಮನ ಮೃದಾಭರಣಗಳಿಗೊಲಿದ= ಕುಂಬಾರ ಭಕ್ತನಾದ ಭೀಮನು ಬಡವನು. ಮಣ್ಣಿನಿಂದ ತುಳಸೀದಳಗಳನ್ನು ಮಾಡಿ,ದಾರುಮಯ ಪ್ರತಿಮಾ ಶ್ರೀನಿವಾಸನಿಗೆ ಅರ್ಪಿಸಲು ಶ್ರೀನಿವಾಸನು ಸ್ವೀಕರಿಸಿ ಆ ಮೃಣ್ಮಯ ತುಲಸಿ ಮಾಲಿಕೆಯನ್ನು ಕಂಠದಲ್ಲಿ ಧರಿಸಿ, ತೋಂಡಮಾನಗೆ ಆಶ್ಚರ್ಯ ತೋರಿಸಿ ಉಭಯರಿಗೆ ಸಾರೂಪ್ಯವನ್ನು ಕೊಟ್ಟನೆಂದು ಭವಿಷ್ಯೋತ್ತರ ಪುರಾಣ ವೆಂಕಟೇಶಮಾಹಾತ್ಮ್ಯ ಅಧ್ಯಾಯ ೧೩-೧೪ರಲ್ಲಿ ವಿಸ್ತಾರವಾಗಿದೆ ಮತ್ತು, ಮುಂಡೆಯೊಡೆದ= ಶ್ರೀನಿವಾಸನು ಹುತ್ತಿನಲ್ಲಿರಲು, ಗೋರೂಪರಾದ ಬ್ರಹ್ಮ

ದೇವರು ಚೋಳದೇಶಾಧಿಪನಲ್ಲಿ ಇದ್ದು ನಿತ್ಯ ಶ್ರೀನಿವಾಸನಿಗೆಂದು ಹುತ್ತಿನಲ್ಲಿ ಹಾಲು ಸುರಿಸುತ್ತಿರಲು, ಮನೆಯಲ್ಲಿ ಹಾಲು ಕೊಡದಿರಲು ಚೋಳರಾಜನ ಭೃತ್ಯನು ರಾಜಪತ್ನಿಯಿಂದ ತಾಡಿತನಾಗಿ, ಗೋವು ಹುತ್ತಿನ ಮೇಲೆ ಹಾಲು ಕರೆಯುವದನ್ನು ನೋಡಿ, ಕುಠಾರದಿಂದ ಗೋಹನನ ಮಾಡಬೇಕೆಂಬುದರಲ್ಲಿ ಭಕ್ತರಕ್ಷಕನಾದ ಶ್ರೀನಿವಾಸನು ತನ್ನ ತಲೆ ಮೇಲಕ್ಕೆ ಎತ್ತಿ ಕುಠಾರದ ಏಟಿಗೆ ಗುರಿಯಾದನು. ಸಚ್ಚಿದಾನಂದನು ಅಚ್ಛೇದ್ಯನು, ಅಭೇದ್ಯನು, ಲೀಲಾ ಮಾನುಷನಂತೆ ತಲೆಯೊಡೆದವನೆಂದು ರಕ್ತಹರಿಸಿದ್ದನ್ನು ತೋರಿದನು. ಇದನ್ನರಿತ ಮೇಲೆ ಚೋಳರಾಜನು ಬಂದು ಪ್ರಾರ್ಥಿಸಲು ಶ್ರೀನಿವಾಸನು ಕೇಳದೆ, ದುರ್ಮದದಿಂದ ಭಾರ್ಯಳ ವಿಕೋಪ ಧೇನುಪಾಲನ ಶಿಕ್ಷೆ, ಧೇನು ಪಾಲನು ತನ್ನ ಕುಠಾರದಿಂದ ತಲೆಯೊಡದವರಿಂದ ತಕ್ಷಣವೇ ಅವನಿಗೆ ಮೃತ್ಯು ಒದಗಿತು. ಎಲೈ ರಾಜನೇ "ಯಜಮಾನಗೃಹೇ ಯಸ್ತು ನ ವಿಚಾರಪರೋ ಭವೇತ್ || ಸ್ತ್ರೀಪುತ್ರಾದ್ಯೈಃ ಕೃತಂ ಕರ್ಮ ತಸ್ಯಾನಿಷ್ಟಕರಂ ವಿದುಃ || ಇತ್ಯುಕ್ತ್ವಾ ಭಗವಾನ್ ದೇವಃ ಶಶಾಪ ನೃಪಪುಂಗವಮ್|| **ಪಿಶಾಚೋ ಭವ ದುರ್ಬುದ್ಧೇ ಮದ್ದುಃಖಾಧಾನಕರ್ಮಣಾ ||** ನೀನು ಪಿಶಾಚನಾಗೆಂದು ಶಾಪ ಕೊಡಲು ಚೋಲರಾಜನು ಮೂರ್ಛಿತನಾಗಿ ಕೆಲ ಹೊತ್ತಿನ ಮೇಲೆ ಎದ್ದು ಪ್ರಾರ್ಥಿಸಲು ಪುನಃ ವೆಂಕಟನು ವಿಶಾಪವನ್ನು ಕೊಟ್ಟನು. ಏನೆಂದರೆ ಮುಂದೆ ಕಲಿಯುಗದಿ ಆಕಾಶರಾಜನೆಂಬ ರಾಜನು ತನ್ನ ಮಗಳನ್ನು ನನಗೆ ಕೊಟ್ಟು ವಿವಾಹ ಸಮಯದಲ್ಲಿ ರತ್ನಖಚಿತವಾದ ಶತಭಾರಯುಕ್ತವಾದ ಕಿರೀಟವನ್ನು ಕೊಡುವನು. ಆ ಕಿರೀಟಧಾರಣ ಮಾಡಿದ ಕಾಲದಲ್ಲಿ ಆನಂದದಿಂದ ಎನಗೆ ಆನಂದಭಾಷ್ಪಗಳು ಬಂದಾಗ್ಗೆ "ಘಟಿಕಾಷಟ್ಕಮಾತ್ರಂ ತೇ ಸುಖಂ ತತ್ರ ಭವಿಷ್ಯತಿ" ಎಂದು ಚೋಲ ರಾಜನನ್ನು ಸಂತೈಸಿ ಅವನ ಅಪರಾಧವನ್ನು ಕ್ಷಮಿಸಿದ. ಕರುಣಾಳು ಎಂದು ಇದೊಂದು ಚೋಲರಾಜನಾದ ಭಕ್ತರಕ್ಷಣೆ, ಭವಿಷ್ಯೋತ್ತರ ವೆಂಕಟೇಶ ಮಾಹಾತ್ಮ್ಯೆ ೪ನೇ ಅಧ್ಯಾಯ. ಅಜ್ಞಾತ ಪಾಪಕರ್ಮ ಪರಿಹಾರ **ಅಥವಾ** ........................ಹೆಂಡತಿಯ ನುಡಿ ಕೇಳಿ, ಮಂಡೆಯೊಡೆದಾಕಾಶರಾಜನ ಮಗಳಿಗೆ ಗಂಡನೆನಿಸಿದ= ರಾಮಾವತಾರದಲ್ಲಿ ಯಜ್ಞಕುಂಡದಿಂದ ಬಂದ ಇಬ್ಬರು ಸೀತಾದೇವಿಯರನ್ನು ನೋಡಿ, ರಾಮನು ಅಜ್ಞನಂತೆ ಸೀತೆಯನ್ನು

ಕೇಳಲು ಈಕೆಯು ವೇದವತಿ ನನ್ನ ಆಕೃತಿಯನ್ನು ಧರಿಸಿ ನಾನಾ ಕಷ್ಟಗಳಿಗೊಳಗಾಗಿದ್ದಾಳೆ. ಈಕೆಯನ್ನು ಸ್ವೀಕರಿಸೆಂದು ಸೀತಪತ್ನಿ ಲಕ್ಷ್ಮೀರೂಪಳಾದ ಸೀತಾಂಬೆ ಹೆಂಡತಿಯ ಮಾತು ಕೇಳಿ, ನಾನು ಮುಂದೆ ಕಲಿಯುಗದಲ್ಲಿ ಈ ವೇದವತಿಯನ್ನು ವೇಂಕಟರೂಪದಿಂದ ಸ್ವೀಕರಿಸುವೆನೆಂದು ವಚನವಿತ್ತಂತೆ ಈಗ ಕಲಿಯುಗದಿ ಶ್ರೀನಿವಾಸ ವಲ್ಮೀಕದಲ್ಲಿ ತಲೆಯೊಡೆಸಿಕೊಂಡಂತೆ ಆಕಾಶ ರಾಜನ ಮಗಳಾದ ಪದ್ಮಾವತಿಯು ಶಿಲಾವರ್ಷದಿಂದ ತಾಡಿತನಾದ ಶ್ರೀನಿವಾಸನು, ಪದ್ಮಾವತಿಯ ಅಪರಾಧ ಕ್ಷಮಿಸಿ, ಆಕಾಶರಾಜನಿಂದ ಆ ಪುತ್ರಿಯನ್ನು ಸ್ವೀಕರಿಸಿ ಆಕೆಗೆ ಪತಿ ಎನಿಸಿದನೆಂದು ವಿಶೇಷಾರ್ಥ. ಜ್ಞಾನಿಗಳಾದ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ಅಪ್ಪಣೆ ಕೊಡಿಸಿದ್ದಾರೆ.

ಮೂಲ ವೆಂಕಟೇಶ ಮಾಹಾತ್ಮ್ಯ ಅಧ್ಯಾಯ (೭) ಶ್ಲೋಕ ೪೮ರಲ್ಲಿ ಪದ್ಮಾವತಿ "ಇತ್ಯುಕ್ತ್ವಾ ಕೋಪತಾಮ್ರಾಕ್ಷೀ ಸಖಿಭಿಃ ಪರಿವಾರಿತಾ ॥ ತರ್ಜಯಂತೀ ಜಗದ್ಯೋನಿಂ ಶಿಲಾಪಾಣಿಸ್ಸಮಾಗಮತ್ ॥ ತಾಡಯಾಮಾಸ ಗೋವಿಂದಂ ಶಿಲೌಘೈಃ ಶೀಘ್ರಗತ್ವರೈಃ॥ತಾಡ್ಯಮಾನಶ್ಶಿಲಾವರ್ಷೈರ್ನ್ಯಪತತ್ ಘೋಟರಾಟ್ ಸ್ವಯಮ್ ॥೪೯॥ ಎಂದು ಹೇಳಿದೆ. ಇಲ್ಲಿ ಶಿಲಾವರ್ಷದಿಂದ ತಲೆಯೊಡದದ್ದು ಹೇಳಿಲ್ಲ. ಮುಂದೆ ಅಧ್ಯಾಯ ೮ರಲ್ಲಿ ಬಕುಲಾದೇವಿಗೂ, ಶಿಲಾವರ್ಷದಿಂದ ತಲೆಯೊಡಿಯಿತೆಂದು ಹೇಳಿಲ್ಲ. ಕಾರಣ ಚೋಳರಾಜನ ಅಪರಾಧ ತಲೆಯೊಡೆದದ್ದು. ಒಬ್ಬ ಭಕ್ತನ ಅಪರಾಧ ಕ್ಷಮಿಸಿದ್ದು. ಶಿಲಾವರ್ಷ ಅಪರಾಧ ಪದ್ಮಾವತಿದೇವಿಯ ಅಪರಾಧ ಕ್ಷಮಿಸಿದ್ದು ಎರಡೂ ಕಥೆ ಸಮಂಜಸವೆಂದು ತೋರುತ್ತದೆ. ಸುಜ್ಞಾನಿಗಳು ವಿಚಾರಿಸತಕ್ಕದ್ದು.

**ಭಾವಸೂಚನ** ॥ಚಂಡವಿಕ್ರಮೇತಿ ॥ ಯಥೋಕ್ತಂ ಭವಿಷ್ಯೋತ್ತರಂ "ತೋಂಡಮಾನ್ನೃಪತೇರ್ದಿವ್ಯೌ ಚಕ್ರಶಂಖೌ ದದೌ ಹರಿರಿತಿ॥ಭೀಮೇತಿ॥ ಏತದಪಿ ವೇಂಕಟೇಶಮಾಹಾತ್ಮ್ಯೇ ದ್ವಾದಶೇಧ್ಯಾಯೇ ತೋಂಡಮಾನಂ ಪ್ರತಿ ಶ್ರೀನಿವಾಸ ಉವಾಚ ॥ಇತ್ಯಾದಿ॥೪॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಚಂಡ' ಇತಿ ॥ ತೋಂಡಮಾನ್ನೃಪತೇಃ ದಿವ್ಯೌ ಚಕ್ರಶಂಖೌ ದದೌ ಹರಿಃ ॥ ದ್ವಿಜಾದ್ಯಪೇಕ್ಷಕಾಯ ತನ್ಮೃಧಾ ವಿಧಾಯ ಮಾಧವಃ ॥ "ಭಾಂಡ"

ಇತಿ ॥ ಬಿಲಮಾರ್ಗೇಣ ಚಾಗತ್ಯ ತುಲಸೀಮಂಜರ್ಯೈಃ ಶುಭೈಃ ॥ ಸಹಸ್ರೈಃ ಸ್ವರ್ಣರಚಿತೈಃ ಸಂಪೂಜ್ಯ ಜಗದೀಶ್ವರಮ್ ॥ಗಚ್ಛತಿ ಸ್ಮ ನೃಪಶ್ರೇಷ್ಠೋ ತತ್ರಃ ಕಾಲಾಂತರೇ ಹರೇಃ ॥ ರಾಜಾರ್ಚಿತಾಂ ಚ ತಾಂ ಪೂಜಾಂ ತುಲಸೀದಲ ಮಂಡಲೈಃ ॥ ತಾಂ ತಿರಸ್ಕೃತ್ಯ ಗೋವಿಂದಃ ಮೃಣ್ಮಾತ್ರ ತುಲಸೀದಲಾನ್॥ ಗೃಹೀತವಾನ್ ಕುಲಾಲೇನ ಭಕ್ತ್ಯಾ ಸ್ವಸ್ಯ ಸಮರ್ಪಿತಾನ್ ॥ ಆಗತ್ಯ ತಾನ್ ದದರ್ಶಾಶು ಇದಂ ಕೇನ ವಿನಿರ್ಮಿತಮ್ ॥ಸ್ವಾಮಿನ್ ನಾಥ ಜಗದ್ವ್ಯಾಪಿನ್ ಕೇನ ಸಂಪೂಜ್ಯಸೇ ಸದಾ ॥ ಉವಾಚ ವಚನಂ ದೇವಃ ಭಕ್ತಾಃ ಸಂತಿ ಹಿ ಕೋಟಿಶಃ ॥ ಅಭಾಗ್ಯಾಶ್ಚ ಸಭಾಗ್ಯಾಶ್ಚ ಮಿಶ್ರಿತಾಃ ನೃಪಸತ್ತಮ ॥ ತೇಷಾಂ ಮಧ್ಯೇ ಕುಲಾಲೋಽಸ್ತಿ ನಾಮ್ನಾ ಭೀಮ ಇತಿ ಸ್ಮೃತಃ ॥ ಕುರ್ವನ್ ಗ್ರಾಮೇ ದರಿದ್ರೋಽಸೌ ಸ ಮೇ ಮೃತ್ತಿಕಮಂಜರೀಃ ॥ ದಾರುಮೂರ್ತೇಸ್ತು ಮತ್ಪಾದ ಪಂಕಜೇ ಹ್ಯರ್ಪಯಿಷ್ಯತಿ ॥ ಸಾಯುಜ್ಯಂ ಚ ದದೌ ತಸ್ಯ ಸಭಾರ್ಯಸ್ಯ ಜಗತ್ಪತಿಃ" ॥ ಇತ್ಯೇತತ್ ಕಥಾದ್ವಯಂ ದ್ವಾದಶತ್ರಯೋದಶಾಧ್ಯಾಯ ಭವಿ ಷ್ಯೋತ್ತರೇ ಸ್ಪಷ್ಟಮ್ ॥ "ಮಂಡೆ" ಇತಿ ॥ "ಒಡಕ" ಇತಿ ಕೇಚಿತ್ ॥ ಪ್ರಕ ರಣೋಪರೋಧಾತ್ ಇದಂ ಪದ್ಮಾವತೀ ವಿಶೇಷಣಮ್ ॥ ಇದಂ ಸ್ಪಷ್ಟಮ್ ॥ "ಅಬ್ಜ" ಶಂಖಃ ॥ ಸ್ವರತಃ ಅಪಿ ರಾಮಯಾ ಅಶ್ಮವರ್ಷ ಸಂತಾಡಿತ ಪೂರ್ವ ಕ್ಷತಮಸ್ತಕವದಾಭಾಸಕೋಽಪಿ ಭಾಸಮಾನಕಾಮುಕವತ್ ಶ್ರೀಸುಂದರೀ ಪ್ರವಿಹಾರಭಾವಂ ಭೂಸಮುತ್ಥಾಂ ಭೂಸಮಾಹ್ವಯಾಃ ವಾಣೀಭಿಃ ಊರೀ ಚಕಾರ ॥ ಸುಗುಣಃ ಪಯಾಬ್ಧಿ ಇತಿ ಭಾವಃ ॥೪॥

## ಕನ್ನಡಾರ್ಥ

ತೋಂಡಮಾನರಾಜನ ಭಕ್ತಿಗೆ ಮೆಚ್ಚಿ, ಶಂಖಚಕ್ರಗಳನ್ನು ಅವನಿಗೆ ಕೊಟ್ಟನು. ಬಿಲಮಾರ್ಗದಿಂದ (ಸುರಂಗ ಮಾರ್ಗದಿಂದ) ಬಂದು ಬಂಗಾರದ ಸಹಸ್ರ ತುಲಸೀಮಂಜರಿಗಳಿಂದ ನಾರಾಯಣನನ್ನು (ಶ್ರೀನಿವಾಸನನ್ನು) ಸಂಪೂಜಿಸಿ, ರಾಜನೊಬ್ಬನು ದಿನಾಲು ಮನೆಗೆ ಹೋಗುತ್ತಿದ್ದನು. ಕೆಲ ಕಾಲ ಕಳೆದನಂತರ ಆ ಬಂಗಾರದ ತುಲಸೀದಲಮಂಜರಿಗಳಿಂದ ಆಗುವ ಪೂಜೆ ಯನ್ನು ಶ್ರೀಹರಿಯು ಸ್ವೀಕರಿಸದೆ, ಕುಂಬಾರನಿಂದ ಭಕ್ತಿಯಿಂದ ಸಮರ್ಪಿ ಸಲ್ಪಟ್ಟ ಮಣ್ಣಿನ ತುಳಸೀದಲಗಳನ್ನು ಸ್ವೀಕರಿಸಿ ಧರಿಸಿದ್ದನು. ರಾಜನು

ಇದನ್ನು ನೋಡಿ, ಇದನ್ನು ಮಾಡಿದವರಾರು? ಜಗದ್ವ್ಯಾಪಿನ್ ಸ್ವಾಮಿನ್! ಶ್ರೀನಾಥ! ಯಾರ ಪೂಜೆಯನ್ನು ಸದಾ ನೀನು ಸ್ವೀಕರಿಸುತ್ತೀ? ಎಂದು ಕೇಳಿಕೊಂಡನು?

ಅದಕ್ಕೆ ಶ್ರೀನಿವಾಸನು ಹೇಳುತ್ತಾನೆ "ನನಗೆ ಕೋಟಿ ಕೋಟಿ ಭಕ್ತ ರಿರುತ್ತಾರೆ. ಭಾಗ್ಯವಂತರೂ ನಿರ್ಭಾಗ್ಯರೂ, ಎಲ್ಲರೂ ನನ್ನ ಭಕ್ತರೇ ಇರು ತ್ತಾರೆ. ಅವರಲ್ಲಿ ಗ್ರಾಮದಲ್ಲಿದ್ದ ದರಿದ್ರನಾದ ಭೀಮನೆಂಬ ಕುಂಬಾರನೂ ಇರುವನು. ಅವನು ನನ್ನ ಕಾಷ್ಠ ಮೂರುತಿಯ ಪಾದಪದ್ಮಗಳಲ್ಲಿ ಮಣ್ಣಿನ ತುಲಸೀ ದಳಗಳನ್ನು ಭಕ್ತಿಯಿಂದ ಅರ್ಪಿಸುತ್ತಾನೆ. ಅವನ ಪೂಜೆಯನ್ನು ನಾನು ಸ್ವೀಕರಿಸುತ್ತೇನೆ." ಎಂದು. ಹೀಗೆ ನಾರಾಯಣನು ಹೇಳಿ, ಆ ಭಕ್ತ ಕುಂಬಾರನಿಗೆ ಅವನ ಹೆಂಡತಿಗೆ ಸಾಯುಜ್ಯವನ್ನು ಕೊಟ್ಟನು.

ಇವೆರಡು ಕಥೆಗಳು ಭವಿಷ್ಯೋತ್ತರ ಪುರಾಣದ ೧೨-೧೩ ಅಧ್ಯಾಯ ಗಳಲ್ಲಿ ನಿರೂಪಿತವಾಗಿವೆ.

"ಮಂಡೆಯೊಡಕ" ಎಂದೂ ಕೆಲವರ ಪಾಠವುಂಟು.

"ಸ್ವರಮಣನಾದರೂ ಶ್ರೀರಮಣನು ಪೂರ್ವದಲ್ಲಿ ರಾಜಸೇವಕನಿಂದ ತಲೆಯೊಡಿಸಿಕೊಂಡು, ಅನಂತರ ರಮಣಿಯ ಶಿಲಾವರ್ಷದಿಂದ ತಾಡಿತನಾದವ ನಂತೆ ನಟಿಸಿ, ಕಾಮುಕನಂತೆ ತೋರುತ್ತಾ, ಭೂಮಿಯಿಂದ ಉದ್ಭವಿಸಿರುವ ರಮಾಸಮಾಕೃತಿಯಾದ ಪದ್ಮಾವತಿಯನ್ನು ಧರಣೀದೇವಿಯ ವಚನಗಳಿಂದ ಅಂಗೀಕರಿಸಿದನು" ಈ ಮಹಿಮೆಯು ಅಲ್ಲಿಯೇ ಸ್ಪಷ್ಟವಿರುತ್ತದೆ.

ಪರಮಾತ್ಮನು, ಇಷ್ಟು ಸುಗುಣನೂ, ದಯಾಸಾಗರನೂ ಇರುವ ನೆಂಬುದು ಇದರಿಂದ ಸ್ಫುಟವಾಗುತ್ತದೆ. ||೪||

**ಅವತರಣಿಕಾ :—** ಇನ್ನು ಶ್ರುತಿಯಲ್ಲಿ ಹೇಳಿದ ಕೆಲಭಕ್ತರ ಅಪರಾಧ, ಪರದಾರಗಮನ, ಬ್ರಹ್ಮಹತ್ಯ, ಸ್ವರ್ಣಸ್ತೇಯಾದಿ ಅಪರಾಧ ಕ್ಷಮಿಸಿದ ಶ್ರೀಹರಿಯ ಕಾರುಣ್ಯವನ್ನು ವರ್ಣಿಸುತ್ತಾರೆ.

**ಗೌತುಮನ ನಿಜಪತ್ನಿಯನು ಪುರು।**
**ಹೂತ ನೈದಿರೆ ಕಾಯ್ದ ವೃತ್ರನ।**
**ಘಾತಿಸಿದ ಪಾಪವನು ನಾಲ್ಕು ವಿಭಾಗ ಮಾಡಿದನು॥**
**ಶಾತಕುಂಭಾತ್ಮಕ ಕಿರೀಟವ।**
**ಕೈತವದಿ ಕದ್ದೊಯ್ದ ಇಂದ್ರಾ।**
**ರಾತಿ ಬಾಗಿಲ ಕಾಯ್ದ ಭಕ್ತತ್ವೇನ ಸ್ವೀಕರಿಸಿ ॥೫॥**

**ಪದ್ಯಾರ್ಥ** :—ಗೌತುಮನ ನಿಜಪತ್ನಿಯನು=ಗೌತುಮ ಋಷಿಗಳ ನಿಯತಪತ್ನಿಯಳಾದ ಅಹಲ್ಯಾದೇವಿಯನ್ನು, ಪುರುಹೂತನೈದಿರೆ= ಗೌತುಮ ಋಷಿಗಳ ಪುಣ್ಯವು ಅವರ ಅಧಿಕಾರಕ್ಕಿಂತಲೂ ಹೆಚ್ಚಾಗಿರುವುದ ರಿಂದ ಭಗವಂತನ ಸಂಜ್ಞೆಯಂತೆ, ರಾತ್ರಿ ವೇಳೆ ಗೌತುಮರ ಇಂದ್ರನು ಆಶ್ರ ಮಕ್ಕೆ ಬಂದು, ಕುಕ್ಕುಟದಂತೆ ಕೂಗಿದನು. ಗೌತುಮರು ಬೆಳಗಾಯಿತೆಂದು ಸ್ನಾನಕ್ಕೆ ಹೊರಡಲು, ಗೌತುಮರಂತೆ ಋಷಿವೇಷ ಧರಿಸಿ ಅಹಲ್ಯೆಯನ್ನು ಸಂಭೋಗಿಸಿದನು. ಸಂಭೋಗದಲ್ಲಿ ಅಹಲ್ಯೆಗೆ ಪರಪುರುಷನೆಂದು ಗೊತ್ತಾ ದರೂ ಸುಮ್ಮನಿದ್ದಳು. ಋಷಿಗಳು ಬಂದು ಜ್ಞಾನದೃಷ್ಟಿಯಿಂದ ತಿಳಿದು ಅಹಲ್ಯೆಗೆ ಕಲ್ಲಾಗಿ ಬೀಳೆಂದು ಶಾಪ ಕೊಟ್ಟರು. ರಾಮಾವತಾರಕಾಲದಲ್ಲಿ ಜಡವತ್ ಬಿದ್ದ ಅಹಲ್ಯೆಯನ್ನು ಶಾಪದಿಂದ ಮುಕ್ತಳನ್ನಾಗಿ ಮಾಡಿದನು. "ತೇಜೀಯಸಾಂ ನ ದೋಷಃ" ಎಂಬಂತೆ ಇಂದ್ರನಿಗೆ ಗೌತುಮರ ಪುಣ್ಯಹರಣ ಮಾಡುವ ಭಗವತ್ಕಾರ್ಯ ಸಾಧಕತ್ವದಲ್ಲಿ ಯಾವ ದೋಷವು ಶ್ರೀಹರಿಯು ಹತ್ತುಗೊಡದೆ ರಕ್ಷಿಸಿದನು. ಇದೇ ಕಾರಣದಿಂದಲೇ ಅನಾದಿ ವೇದ ಪುರುಷನು "ಅಹಲ್ಯಾಜಾರಾಯ ಸ್ವಾಹಾ" ಎಂದು ದೇವಶ್ರೇಷ್ಠನಿಗೆ ಹವಿರ್ಭಾಗವನ್ನು ಕೊಡಲಾಜ್ಞೆ ಇತ್ತಿರುವನು. ವೃತ್ರಾಸುರ ಘಾತಿಸಿದ ಪಾಪ ವನು ನಾಲ್ಕು ವಿಭಾಗ ಮಾಡಿದನು. ಇಂದ್ರದೇವರು ವೃತ್ರನನ್ನು ಹನನ ಮಾಡಿದ್ದಕ್ಕೆ ವೃತ್ರನು ಬ್ರಾಹ್ಮಣನಾದುದರಿಂದ ಬ್ರಹ್ಮಹತ್ಯಾದೋಷ ಬರಲು, ಶ್ರೀಹರಿಯು ಆ ಪಾಪವನ್ನು ೧ ಸೌಳು ಭೂಮಿಯಲ್ಲಿ ೧ ಭಾಗ. ೨ ಗಿಡದ ಅಂಟಿನಲ್ಲಿ ೧ ಭಾಗ. ೩ ನೀರಿನಲ್ಲಿ ಫೇನ ರೂಪ, ೪ ಸ್ತ್ರೀಯರಲ್ಲಿ ರಜೋ ರೂಪವಾಗಿ. ಹೀಗೆ ನಾಲ್ಕು ತರಹ ಹಂಚಿಹಾಕಿ ಇಂದ್ರನನ್ನು ಕಾಯ್ದನು.

ವೃತ್ರಾಸುರನ ಹನನವು ಭಗವತ್ಕಾರ್ಯಸಾಧಕವಾಗಿತ್ತು. ಕಾರಣ ಪಾಪ ಸಂಘಟಿಸಲಿಲ್ಲ. ಮತ್ತು ಶಾತಕುಂಭಾತ್ಮಕ ಕಿರೀಟವ=ಶ್ವೇತದ್ವೀಪಗತನಾದ ಶ್ರೀಹರಿಯು ಬಂಗಾರದಲ್ಲಿ ರತ್ನ ಕೆತ್ತಿದ ಬಂಗಾರ ಕಿರೀಟವನ್ನು, ಬಲಿ=ಬಲಿ ಚಕ್ರವರ್ತಿಯು ಅಸುರಾವೇಶದಿಂದ, ಕೈತವದಿ=ವಂಚನೆ ಚೋರತನದಿಂದ ಕದ್ದುಕೊಂಡುಹೋದನು. ಭಗವಂತನಾಜ್ಞೆಯಿಂದ ಗರುಡದೇವರು ಬಲಿಯನ್ನು ನಿಗ್ರಹಿಸಿ ಕಿರೀಟ ತಂದು ಗೋಮಂತ ಪರ್ವತದಲ್ಲಿ ಇದ್ದ ಶ್ವೇತದ್ವೀಪಗತನಾದ ಹರಿಯೇ ಶ್ರೀಕೃಷ್ಣನಿಗೆ ಅರ್ಪಿಸಲು ಶ್ರೀಕೃಷ್ಣನ ಶಿರಕ್ಕೆ ಸರಿಹೋಯಿತು. ಮುಂದೆ ಬಲಿರಾಜನ ಯಜ್ಞದಲ್ಲಿ ವಾಮನ ರೂಪದಿಂದ ಹೋಗಿ ವಂಚಿಸಿ ಮೂರು ಪಾದ ಭೂಮಿ ದಾನ ತೆಗೆದುಕೊಂಡು, ತ್ರಿವಿಕ್ರಮ ರೂಪದಿಂದ ಭೂ-ಆಕಾಶ ಎರಡು ಪಾದ ವ್ಯಾಪಿಸಿ, ಮೂರನೇ ಪಾದವನ್ನು ಬಲಿಯ ಶಿರದಲ್ಲಿ ಇಟ್ಟು ಪಿಟ್ಟಿ ಸುತಳಕ್ಕಟ್ಟಿ ಬಲಿಯ ಅಪರಾಧಗಳನ್ನೆಲ್ಲ ಪರಿಹರಿಸಿ, ಇಂದ್ರಾರಾತಿ=ಇಂದ್ರದೇವರ ಶತ್ರುವು ದೈತ್ಯನಾದರೂ, ಅವನನ್ನು ಭಕ್ತತ್ವೇನ ಸ್ವೀಕರಿಸಿದವನೆಂದು ಶ್ರೀಹರಿಯ ಕಾರುಣ್ಯವನ್ನು ಬಣ್ಣಿಸಿದ್ದಾರೆ. ಇವೆಲ್ಲ ಸಾಂಶಭಕ್ತರ ಅಪರಾಧ ಕ್ಷಮೆಯ ದೃಷ್ಟಾಂತ.

**ಭಾವಸೂಚನ** ॥ ಗೌತಮೇತಿ ॥೫॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಗೌತಮ" ಇತಿ ॥ "ಐದಿರೆ" ಗಮಿಸಲು॥"ನ ಲೋಮ" ಇತಿ ಶ್ರುತೇಃ॥ ಯದ್ವಾ ಪೂರ್ವಂ ಅನ್ವೇತಿ ॥ ಶೈಲಕರ್ಮ ವಿನಾಶ್ಯ ॥ ಪಾಪಂ ॥ ಸ್ಪಷ್ಟಂ ॥ "ಶಾತಕುಂಭಃ" ಸ್ವರ್ಣಂ ॥ "ಅರಾತಿ" ಶತ್ರುಃ ॥ ಬಲಿಶ್ಚಾಗಾತ್ ತತ್ರ ಸಂದ್ರಷ್ಟುಮ್ ಇತ್ಯತ್ರ ಸ್ಪಷ್ಟಾ ಕಥಾ ॥ ೫ ॥

## ಕನ್ನಡಾರ್ಥ

"ಐದಿರೆ" ಗಮನಮಾಡಲು ॥ "ಅಹಲ್ಯೆಯ ಅಭಿಗಮನದಿಂದ ಇಂದ್ರನ ಪ್ರಾಪ್ತವ್ಯವಾದ ಸ್ವಯೋಗ್ಯ ಕ್ಲೃಪ್ತವಾದ ಪುಣ್ಯಕ್ಕೆ ಯಾವ ಬಾಧೆಯೂ ಇಲ್ಲ." ಎಂದು ಶ್ರುತಿಯು ಹೇಳುತ್ತಿದೆ. ಅಹಲ್ಯೆಯ ಶಿಲಾಜನ್ಮವನ್ನು ಕಳೆದು ಪಾಪದಿಂದ ಉಳಿಸಿದನು. ಈ ಕಥೆಯೂ ಪ್ರಸಿದ್ಧವಿರುತ್ತದೆ. ಶಾತ

ಕುಂಭ ಬಂಗಾರ. "ಅರಾತಿ" ಶತ್ರು. ಬಲಿರಾಜನು ನಾರಾಯಣನನ್ನು ಸಂದರ್ಶಿಸಲು ಅಲ್ಲಿಗೆ ಬಂದನು" ಎಂಬ ಪುರಾಣ ಕಥಾಸಂದರ್ಭದಲ್ಲಿ ಈ ಕಥೆಯು ಬಂದಿರುತ್ತದೆ. ||೫||

**ಅವತರಣಿಕಾ :—** ಇನ್ನು ಈ ೬ನೇ ಪದ್ಯನಾರಂಭಿಸಿ ೧೦ನೇ ಪದ್ಯದ ವರೆಗೆ ಶ್ರೀಕೃಷ್ಣಾವತಾರ ಕಾಲದಲ್ಲಿ ನಾನಾ ಭಕ್ತರ ಅಪರಾಧ ಕ್ಷಮಿಸಿ ಒಲಿದು ಉದ್ಧರಿಸಿದನೆಂದು ವರ್ಣಿಸುತ್ತಾರೆ.




**ನಾರ ನಂದವ್ರಜದ ಸ್ತ್ರೀಯರ ।**
**ಜಾರಕರ್ಮಕೆ ವೊಲಿದ ಅಜ ಸುಕು ।**
**ಮಾರನೆನಿಸಿದ ನಂದಗೋಪಗೆ ನಳಿನಭವಜನಕ ॥**
**ವೈರವರ್ಜಿತ ದೈತ್ಯರನ ಸಂ ।**
**ಹಾರ ಮಾಡಿದ ವಿಪಗಮನ ಪೆಗ ।**
**ಲೇರಿದನು ಗೋಪಾಲಕರ ವೃಂದಾವನದೊಳಂದು ॥೬॥**

**ಪದ್ಯಾರ್ಥ :—** ನಾರ=ನ+ಅರ=ನಾರ, ದೋಷ ರಹಿತನಾದ ಕೃಷ್ಣನೆ, ಸರ್ವರ ಪಾಪಗಳನ್ನು ಕರ್ಷಣ ಮಾಡುವನಾದರೂ, ನೀನು ನಿರ್ದೋಷ, ಪಾಪರಹಿತನಪ್ಪಾ, ನೀನು ನಿರ್ದೋಷಿಯಾದರೂ, ನಂದವ್ರಜದ =ನಂದಗೋಪನಪಳ್ಳಿ ವ್ರಜ (ಸಮೂಹ)ದಲ್ಲಿದ್ದ, ಸ್ತ್ರೀಯರ ಜಾರಕರ್ಮಕೆ ವೊಲಿದ=ನಂದಗೋಪನ ಪಳ್ಳಿಯಲ್ಲಿದ್ದ ಅನ್ಯ ಉದ್ವಾಹಿತ ಹೆಂಗಸರ, ಜಾರ ಕರ್ಮ=ಕೆಟ್ಟ ಕೆಲಸ, ಅನ್ಯರಿಂದ ಸಂಗ ಮಾಡಿದ ದೋಷ, ಕೃಷ್ಣಯ್ಯ ಆ ಸ್ತ್ರೀಯರ ಭಕ್ತಿಗೆ ಮೆಚ್ಚಿ ನೀನು ಬಾಲಕನಿರುವಾಗಲೇ, ಜಾರಕೃತ್ಯವನ್ನು ಮಾಡಿ, ತ್ರಿಗುಣ ಸಂಪರ್ಕವಿಲ್ಲದ ರೇತಸ್ಸಾದಿಗಳಿಲ್ಲದ ಸಚ್ಚಿದಾನಂದನು. ಆ ಸ್ತ್ರೀಯರ ಕಾಮುಕತನವನ್ನು ಪರಿಹರಿಸಿದವನು, ನಿತ್ಯಬ್ರಹ್ಮಚಾರಿಯಲ್ಲವೇ ನಯ್ಯಾ? ಕೃಷ್ಣಯ್ಯಾ! ಜಾರಭಕ್ತಿಯಾದರೂ, ನೀನು ಮೆಚ್ಚಿಯೊಲಿದೆ. ಜಾರಃ=ಜಾ ರ ಯ ತೀ ತಿ ಜಾರಃ=ವೀರ್ಯಹಾನಿಯಿಂದ ವಯೋಹಾನಿ ಯಾಗುವದೇ ಜಾರ, ಈ ಜಾರತ್ವವು, ಕೃಷ್ಣಾಂಗಸಂಗದಿಂದ ಕಾಮರತಿ ಪೂರ್ಣವಾದುದಲ್ಲದೆ, ಲಿಂಗದೇಹದ ತಮಲಿಪ್ತಣದಿಪ್ಪ ಸಮಸ್ತ ಪಾಪ ಪ್ರಾರಬ್ಧ ಕಳೆದು ಬಿಟ್ಟು ಜಾರ ಸ್ತ್ರೀಯರನ್ನು ಉದ್ಧರಿಸಿ ಮುಕ್ತಿ ನೀಡಿದ

ಶ್ರೀಕೃಷ್ಣನೇ, ನೀನು ಅಜ=ಜನನ ರಹಿತನು ಆದರೂ ನಳಿನಭವಜನಕ= ನಾಭಿಕಮಲದಿಂದ ಬ್ರಹ್ಮದೇವರನ್ನು ಪಡೆದ ಲೋಕಜನಕನಾದರೂ, ನಂದ ಗೋಪಗೆ=ನಂದಗೋಪಾಲಕನಿಗೆ, ಸುಕುಮಾರನೆನಿಸಿದಿ=ನಂದನ ಕಂದ ನೆನಿಸಿದಯ್ಯಾ ಕೃಷ್ಣಾ, ಹಿಂದೆ ನಂದಗೊಲ್ಲನು ಯಶೋದಾ ದೇವಿ ಮಾಡಿದ ತಪಸ್ಸು ಭಕ್ತಿಗೆ ಒಲಿದಿಯಪ್ಪಾ, ವೈರವರ್ಜಿತ=ನೀನು ಸಮಸ್ತ ಪ್ರಾಣಿಗಳಲ್ಲಿ ಸಮನೆನಿಸಿದವನು, ಒಬ್ಬರಲ್ಲಿ ದ್ವೇಷಾಸೂಯೆಗಳಿಲ್ಲದವನು. ದೈತ್ಯರನು= ಪಾಪಕೃತ್ಯ ಉಳ್ಳ ದ್ವೇಷಬುದ್ಧಿಗಳಾದ ದೈತರನ್ನು ಅವರ ಗತಿ ಕೊಡಲು, ಸಂಹಾರ ಮಾಡಿದ=ನಾನಾ ಭಕ್ತರಿಗೆ ಬಾಧೆ ಕೊಟ್ಟ ಅನೇಕ ದೈತ್ಯರನ್ನು ಹನನ ನಾಶ ಮಾಡಿದ ಮಹಾಮಹಿಮನು, ಅಲ್ಲದೇ ನೀನು, ವಿಪಗಮನ= ಗರುಡನ ಹೆಗಲಲ್ಲಿ ಕುಳಿತು ತಿರುಗಾಡುವ ಕೃಷ್ಣಸರ್ವೋತ್ತಮನೆ, ವೃಂದಾವನ ದೊಳಂದು=ನಿನ್ನ ಕ್ರೀಡಾಸ್ಥಾನವಾದ ಬಾಲಕರ ಚೆಂಡಿನ ಆಟದಲ್ಲಿ ಗೆಲಿದು ಗೋಪಾಲಕರ ಪೆಗಲೇರಿದನು=ಗೊಲ್ಲ ಬಾಲಕರ ಹೆಗಲ ಮೇಲೆ ಹತ್ತಿ ಭಾರನಾಗಿ ಬಾಲಕರಲ್ಲಿದ್ದ ತಮಃ ಪ್ರಾಚುರ್ಯವಾದ ಪಾಪವನ್ನು ಕಳೆದ ಕೃಷ್ಣಯ್ಯಾ ರಕ್ಷಿಸು. ಧನ್ಯಧನ್ಯ ನಂದವ್ರಜ ನಾರಿಯರೇ ಧನ್ಯರು, ನಂದ ಗೋಪ-ಗೋಪಾಲಕರೇ ಧನ್ಯರು, ನಿನ್ನಂಗ, ಕರಸ್ಪರ್ಶ, ಪಾದಸ್ಪರ್ಶ ಮಾಡಿದ ಭೂಮಿಯೇ ಧನ್ಯ. ಭಕ್ತರ ಇಚ್ಛೆಯಂತೆ ನಾನಾ ಕ್ರೀಡೆಗಳ ಮಾಡಿ ಪಾಪದೂರರನ್ನಾಗಿ ಮಾಡಿದ ಕೃಷ್ಣಯ್ಯಾ ಅನಾಥನಾದ ಈ ಪಾಪಿ ಯನ್ನು ರಕ್ಷಿಸು ರಕ್ಷಿಸು.

**ಭಾವಸೂಚನ** ॥ ನಾರೇತಿ ನಿರ್ದೋಷ ॥ ಅಜ=ಉತ್ಪತ್ತಿ ವರ್ಜಿತ ॥ ವಿಪ=ಗರುಡ ॥೬॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನಾರ" ಇತಿ ॥ "ನಾರಃ" ನಿರ್ದೋಷಃ ॥ "ವಿಪಃ" ಗರುಡಃ ॥ "ಅಂದು" ಆ ಹೊತ್ತು (ಅವತ್ತು) ॥೬॥

## ಕನ್ನಡಾರ್ಥ

"ನಾರ" ನಿರ್ದೋಷ. ಅರವೆಂದರೆ ದೋಷ. ಅವುಗಳಿಲ್ಲದವನು

ನಾರ. "ವಿಪ" ಗರುಡ. ವಿ ಅಂದರೆ ಪಕ್ಷಿ. ಅವುಗಳಿಗೆ ಪತಿ ಗರುಡ "ವಿಪ" "ಅಂದು" ಆಹೊತ್ತು ಆ ದಿವಸವೆಂದು ಅರ್ಥ. ||೬||

**ಅವತರಣಿಕಾ :—**ಮತ್ತೂ ಶ್ರೀಕೃಷ್ಣಾವತಾರದಲ್ಲಿ ಭಕ್ತರನ್ನು ಸ್ವೀಕರಿಸಿ ಗತಿ ಇತ್ತುದನ್ನು ಪೇಳುತ್ತಾರೆ.

**ಶ್ರೀಕರಾರ್ಚಿತ ಪಾದಪಲ್ಲವ।**
**ಗೋಕುಲದ ಗೊಲ್ಲತಿಯರೊಲಿಸಿದ।**
**ಪಾಕಶಾಸನ ಪೂಜ್ಯ ಗೋ ಗೋವತ್ಸಗಳ ಕಾಯ್ದು॥**
**ನೀಕರಿಸಿ ಕುರುಪತಿಯ ಭೋಜನ।**
**ಸ್ವೀಕರಿಸಿದನು ವಿದುರನೌತನ।**
**ಬಾಕುಲಿದನಂದದಲಿ ತೋರಿದ ಭಕ್ತವತ್ಸಲನು ॥೭॥**

**ಪದ್ಯಾರ್ಥ :—**ಶ್ರೀಕರಾರ್ಚಿತ ಪಾದಪಲ್ಲವ=ಶ್ರೀಲಕ್ಷ್ಮೀದೇವಿಯರ ಕರದಿಂದ ಪೂಜೆಗೊಳ್ಳುವ ಪಾದಕಮಲಗಳುಳ್ಳ ಮಹಾಮಹಿಮನಾದರೂ, ಗೋಕುಲದ ಗೊಲ್ಲತೆಯರೊಲಿಸಿದ=ಗೋಕುಲವೆಂಬ ಪಳ್ಳಿಯಲ್ಲಿದ್ದ, ಗೊಲ್ಲರ ಹೆಣ್ಣುಗಳ ಭಕ್ತಿಗೆ ಮೆಚ್ಚಿ ಅವರ ಮನವನ್ನು ಒಲಿಸಿ ಅವರ ಮನದಲ್ಲಿ ಪೊಳೆದನು. ಪಾಕಶಾಸನಪೂಜ್ಯ=ಪಾಕನೆಂಬ ದೈತ್ಯನನ್ನು ಸಂಹರಿಸಿದ, ಸ್ವರ್ಗಾಧಿಪತಿಯಾದ ಇಂದ್ರನಿಂದ ಪೂಜೆಗೊಳ್ಳುವ ಮಹಾಮಹಿಮನಾದರೂ, ಗೋ ಗೋವತ್ಸಗಳ ಕಾಯ್ದು=ಸನಕಾದಿ ಋಷಿಗಳೇ ಗೋರೂಪದಿಂದ ಶ್ರೀ ಕೃಷ್ಣನ ಸೇವೆಗಾಗಿ ಆಕಳು ಆಕಳಕರವು ರೂಪ ತಾಳ್ದ ಋಷಿಕುಲವನ್ನು ಗೊಲ್ಲ ಬಾಲಕರೂಪದಿಂದ ಆಕಳ ಕಾಯ್ದುಯೋ ಕೃಷ್ಣಯ್ಯಾ ನೀನೆಂಥ ಕರುಣೆಯೋ, ಕುರುಪತಿಯ ಭೋಜನನೀಕರಿಸಿ=ಕೃಷ್ಣಾ ನೀನು ನಿನ್ನ ಭಕ್ತರಾದ ಪಾಂಡವ ರಲ್ಲಿ ದ್ವೇಷಿಸುವ ದುರ್ಯೋಧನನಲ್ಲಿ ಉಂಬುವದು ಅಯೋಗ್ಯವೆಂದು ಅವನ ಔತುನ ನಿರಾಕರಿಸಿದಿ. ವಿದುರನೌತುನ ಸ್ವೀಕರಿಸಿದನು=ಯಮದೇವರ ಅಂಶ ನಾದ ಭಕ್ತನಾದ ವಿದುರನ ಕುದಿತೆ ಪಾಲನ್ನು ಸ್ವೀಕರಿಸಿ ತೃಪ್ತಿ ಪೊಂದಿದ ನೆಂದೆನಿಸಿ ಹಾಲು ಹೊಳೆಯನ್ನೇ ಹರಿಸಿದ ಭಕ್ತಬಂಧೋ ಶ್ರೀಕೃಷ್ಣಯ್ಯಾ, ನೀನು ನಿತ್ಯತೃಪ್ತನಾದರೂ ಬಾಕುಲಿಕನಂದದಲಿ ತೋರಿದ=ಬಹಳ ಆಶೆ

ಯುಳ್ಳವನಂತೆ ತೋರಿಸಿಯುಲ್ಲಸೇ, ಇದೇ ನಿನ್ನ ಭಕ್ತರ ಮೇಲಿಕಾರುಣಿಕತೆ, ಭಕ್ತವಾತ್ಸಲ್ಯ.

**ಭಾವಸೂಚನ :**—ಶ್ರೀಕರಾರ್ಚಿತೇತಿ || ಬಾಕುಳಿಕ=ಪೂರ್ಣ ||೭||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀ" ಇತಿ||"ನೀಕರಿಸಿ"ನಿರಾಕರಿಸಿ || "ಬಾಕುಲಿಕ" ಬಹಳ ||೭||

## ಕನ್ನಡಾರ್ಥ

"ನೀಕರಿಸಿ" ನಿರಾಕರಿಸಿ, "ಬಾಕುಲಿಕ" ಬಹಳ ||೭||

**ಅವತರಣಿಕಾ :**—ಕೃಷ್ಣಾವತಾರದಲ್ಲಿ ಇನ್ನು ಅನೇಕ ಭಕ್ತರನ್ನು ರಕ್ಷಿಸಿದ ಮಾಹಾತ್ಮ್ಯ ಪೇಳುತ್ತಾರೆ.

**ಪುತ್ರನೆನಿಸಿದ ಗೋಪಿದೇವಿಗೆ ।**
**ಭರ್ತೃಯೆನಿಸಿದ ವ್ರಜದ ನಾರಿಯು ।**
**ರುತ್ರ ಲಾಲಿಸಿ ಪರ್ವತವ ನೆಗಹಿದ ಕೃಪಾಸಾಂದ್ರ ॥**
**ಶತ್ರು ತಾಪನ ಯಜ್ಞ ಪುರುಷನ ।**
**ಪುತ್ರಿಯರ ತಂದಾಳ್ದ ತ್ರಿಜಗ ।**
**ದ್ಧಾತ್ರ ಮಂಗಳಗಾತ್ರ ಪರಮ ಪವಿತ್ರ ಸುರಮಿತ್ರ ॥೮॥**

**ಪದ್ಯಾರ್ಥ :**—ಗೋಪಿದೇವಿಗೆ ಪುತ್ರನೆನಿಸಿದ=ಗೋಪೀದೇವಿಯಾದ ಯಶೋದೆಗೆ ಮಗನೆಂದು ಕರೆಸಿದ, ಸ್ವತಃ ನೀನು ಉತ್ಪತ್ತಿ ಶೂನ್ಯನಲ್ಲವೆ ಕೃಷ್ಣಾ, ಭರ್ತೃಯೆನಿಸಿದ ವ್ರಜದ ನಾರಿಯುರುತ್ರ ಲಾಲಿಸಿ=ವ್ರಜವೆಂಬ ಪಳ್ಳಿಯಲ್ಲಿದ್ದ ನಾರಿಯ ಪ್ರಾರ್ಥನೆಯನ್ನು ಮನ್ನಿಸಿ, ಆಕೆಗೆ ಗಂಡನೆನಿಸಿದನು. "ಹತ್ವಾ ಸುತಾಮಲಭದಾರು ವಿಭುರ್ಯಶೋದಾ ಭ್ರಾತುಃ ಸಕುಂಭಕ ಸಮಾಹ್ವಯಿನೋಽಪಿ ನೀಲಾಮ್ ॥ ಯಾ ಪೂರ್ವಜನ್ಮನಿ ತಪಃ ಪ್ರಥಮೈವ ಭಾರ್ಯಾ ಭೂಯಾಸಮಿತ್ಯಚರದಸ್ಯ ಹಿ ಸಂಗಮೋ ಮೇ ॥ ಸ್ಯಾತ್ ಕೃಷ್ಣ ಜನ್ಮನಿ ಸಮಸ್ತಪರಾಂಗನಾಭ್ಯಃ" ಎಂದು ತಾತ್ಪರ್ಯ ನಿರ್ಣಯ ಗಳಿನೇ

ಅಧ್ಯಾಯದಲ್ಲಿ ಹೇಳಿದಂತೆ ನೀಲಾ ಎಂಬ ಗೋಪಕನ್ಯೆಯನ್ನು ಸ್ವೀಕರಿಸಿ ಮದುವೆಯಾದನೆಂದು ಹೇಳಿದ್ದಾರೆ. ಬಾಲಕನಿರುವಾಗಲೇ ಪರಿಗ್ರಹಿಸಿದುದ್ದು. ಭಕ್ತರಕ್ಷಣ್ವ ಮಹಿಮೆತೋರಿದ್ದು. ಪರ್ವತವ ನೆಗಹಿದ ಕೃಪಾಸಾಂದ್ರ= ಗೋವರ್ಧನ ಪರ್ವತವಲ್ಲಿ ಗೋಪಾಲಕರು ಇಂದ್ರನಿಗರ್ಪಿಸಿದ ಅನ್ನವನ್ನು ಶ್ರೀಕೃಷ್ಣ ಬಾಲಕನು ಎಲ್ಲವೂ ತಾನೆ ಭುಂಜಿಸಿದನು. ಇಂದ್ರನು ಕ್ರುದ್ಧನಾಗಿ ಮಳೆಗರೆಯಲು, ಗೋಪ, ಗೋಪಾಲಕ ಸ್ತ್ರೀಯರು ಗೋವುಗಳ ಮೇಲೆ ಕರುಣಿಸಿ, ಕೃಷ್ಣ ಬಾಲರೂಪಿಯು ತನ್ನ ಕಿರುಬೆರಳಿನಿಂದ ಗೋವರ್ಧನ ಪರ್ವತವನ್ನು ಎತ್ತಿ, ಅದರಡಿ ಸಕಲರನ್ನು ಇರಿಸಿ ಸಂರಕ್ಷಿಸಿದನು. ಶತ್ರು ತಾಪನ=ಸುರಶತ್ರುವ ಏವಾಸ್ಯ ಶತ್ರುವಸ್ತಾನ್ ತ್ರೀಷಾಮೇವ ತಪನಾಚ್ಛತ್ರು ತಾಪನಃ" (ವಿ.ಸ. ವಿದ್ಯಾಧಿರಾಜೀಯ) ಸುರದೇವತೆಗಳಿಗೆ ಶತ್ರುಗಳಾದ ದೈತ್ಯಾದಿಗಳಿಗೆ ಶತ್ರುವಾಗಿ ಅವರನ್ನು ಸಂತಾಪಗೊಳಿಸುವನಾದ ಹರಿ ಶ್ರೀ ಕೃಷ್ಣನು, ಯಜ್ಞಪುರುಷನ=ಅಗ್ನಿದೇವರ ಮಕ್ಕಳು ಪೂರ್ವ ರಾಮಾವತಾರ ದಲ್ಲಿ, ಶ್ರೀಹರಿಯ ಅಂಗಸಂಗಬೇಕೆಂದು ತಪಸ್ಸ ಗೈಯ್ಯುತ್ತಿರಲು ಅವರ ತಪಸ್ಸಿಗೆ ಒಲಿದು ಮುಂದೆ ಕೃಷ್ಣಾವತಾರದಲ್ಲಿ ನೀವು ಸ್ತ್ರೀಯರಾಗಿ ಜನಿಸಿರಿ. ನಾನು ಮದುವೆಯಾಗಿ ನಿಮ್ಮ ಬಯಕೆ ಪೂರೈಪೆನೆಂದು ಇತ್ತ ವರದಂತೆ ೧೬೧೦೦ ಜನ ಅಗ್ನಿಪುತ್ರರು ಗೋಪಿಕಾಸ್ತ್ರೀಯರಾಗಿ ಜನಿಸಿರಲು, ಅವರನ್ನು ತಂದು ಆಳ್ದನು=ವಿವಾಹದಿಂದ ಸ್ವೀಕರಿಸಿ ಆಳಿದನು. ತ್ರಿಜಗದ್ಧಾತ್ರ= ಮೂರು ಲೋಕವನ್ನು ಧಾರಣ ಪೋಷಣ ಮಾಡುವನಿಗೆ ಏನಾಶ್ಚರ್ಯ? ಇಷ್ಟು ಮಂದಿ ಸ್ತ್ರೀಯರ ಗ್ರಹಿಸಿದರೆ ಆತನಿಗೆ ಏನಾದರೂ ರೋಗಾದಿ ದೋಷ ವೇನಂದರೆ ಇಲ್ಲ, ಮಂಗಳಗಾತ್ರ=ಸಚ್ಚಿನ್ಮಯ ಶರೀರಿ, ಮಂಗಳಕರ ದೇಹ ವುಳ್ಳವ, ಪರಮಪವಿತ್ರ=ಬಹು ಶುಚಿಯಾದವ, ಕಿಂಚಿತ್ತಾದರೂ ದೋಷ ಗಳಿಲ್ಲ, ಸುರಮಿತ್ರ=ದೇವತೆಗಳಿಗೆ ಗೆಳೆಯ.

**ಭಾವಸೂಚನ ||** ಪುತ್ರೇತಿ || ಉತ್ರ=ಉತ್ತರ, ನೆಗಹಿದ=ಧರಿಸಿದ, ಶತ್ರುರಿತಿ || ಶತ್ರುಜಿಚ್ಛತ್ರುತಾಪನಃ ಇತ್ಯುಕ್ತೇಃ || ಯಜ್ಞೇತಿ || ಗೋಪಿಕಾ|| ಧಾತ್ರ=ಧಾರಕ ||೮||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**("ಉತ್ರ" ಉತ್ತರ)** "ಶತ್ರುತಾಪನ" * ಓಂ || ಅಯಮು ತ್ವಾ ವಿಚರ್ಷಣೇ ಜನೀರಿವಾಭಿಸಂವೃತಃ ಪ್ರಸೋಮ ಇಂದ್ರ ಸರ್ಪತು ತುವಿಗ್ರೀವೋ ವಪೋದರಃ ಸುಬಾಹುರಂಧಸೋ ಮದೇ ||ಓಂ||*| ಶತ್ರೂನ್ ವೃತ್ರಾದೀನ್ ತಾಪಯತಿ ಇತಿ ತತ್‌ಸಂತಾಪನಃ ತಥೋಕ್ತಃ||"ಅಗ್ನಿಪುತ್ರಾಃ ಮಹಾತ್ಮಾನಃ ತಪಸಾ ಸ್ತ್ರೀತ್ವಮಾಪಿರೇ" || ಇತ್ಯುಕ್ತೇಃ || "ಅಳ್ಟ" ಆಳಿದ || "ಧಾತ್ರ" ಧಾರಕಃ ಪೋಷಕಶ್ಚ ||೮||

### ಕನ್ನಡಾರ್ಥ

**"ಶತ್ರುತಾಪನ"** ವೃತ್ರ ಮುಂತಾದ ಶತ್ರುಗಳನ್ನು ಸಂತಾಪಗೊಳಿಸುವವನು.

ಮಹಾಭಾಗ್ಯವಂತರಾದ ಅಗ್ನಿಪುತ್ರರು ತಪಸ್ಸನ್ನಾಚರಿಸಿ ಅದರ ಫಲದಿಂದ ಸ್ತ್ರೀಯರಾದರು. ಅವರೇ ಗೋಪಿಕಾಸ್ತ್ರೀಯರು || ಎಂದು ಪ್ರಮಾಣದಲ್ಲಿ ಹೇಳಲಾಗಿದೆ. ||೮||

**ಅವತರಣಿಕಾ :—**ಶ್ರೀಕೃಷ್ಣನು ಸರ್ವೋತ್ತಮ ವೇದ ಪ್ರದಿಪಾದ್ಯನೆಂದು ಅನಂತ ಮಹಿಮೆಗಳನ್ನು ಪೊಗಳುತ್ತಾರೆ.

**ರೂಪನಾಮ ವಿಹೀನ ಗರ್ಗಾ |**
**ರೋಪಿತ ಸುನಾಮದಲಿ ಕರೆಸಿದ |**
**ವ್ಯಾಪಕ ಪರಿಚ್ಛಿನ್ನ ರೂಪದಿ ತೋರ್ದ ಲೋಕರಿಗೆ ||**
**ದ್ವಾಪರಾಂತ್ಯದಿ ದೈತ್ಯರನ ಸಂ |**
**ತಾಪಗೊಳಿಸುವೆನೆಂದು ಶ್ವೇತ |**
**ದ್ವೀಪ ಮಂದಿರನವತರಿಸಿ ಸಲಹಿದನು ತನ್ನವರ ||೯||**

**ಪದ್ಯಾರ್ಥ :—**ರೂಪ=ಮನುಜರಂತೆ ಪ್ರಾಕೃತ ಶರೀರಿಯಲ್ಲ, ಅಪ್ರಾಕೃತ ಸಚ್ಚಿನ್ಮಯ ವಪು ವಾಸುದೇವಾದಿ, ವಿಶ್ವಾದಿ, ಅಜಾದಿ ಅನಂತ ರೂಪನು, ನಾಮ=ಪ್ರಾಕೃತನಾಮ ವಿಹೀನ=ಇಲ್ಲದವನು, ವೇದಗಳು

ಶ್ರೀಹರಿಯ ಅನಂತ ರೂಪಗಳನ್ನು ಪೊಗಳುತ್ತಾರೆ. ಅರ್ಥಾತ್ ಶ್ರೀಹರಿಯು ಮಾನವಲೀಲೆಯಂತೆ ಆಕಾರ ತೋರಿದ ಹರಿಯು, ಗರ್ಗಾರೋಪಿತ ಸುನಾಮ ದಲಿ ಕರೆಸಿದ=ಗಾರ್ಗ್ಯ ಋಷಿಗಳು ನಾಮಕರಣ ಮಾಡುವಾಗ್ಗೆ, ಸಮಸ್ತರ ಪಾಪಗಳನ್ನು ದೂರಗೈಸುವ ಕಾರಣ ಸಾಂಕೇತಿಕ ನಾಮ ಶ್ರೀಕೃಷ್ಣನೆಂದು ನಾಮಕರಣ ಮಾಡಲು, ಶ್ರೀಕೃಷ್ಣನೆಂದು ಕರೆಸಿದನು, ಎಲ್ಲ ರೂಪ ನಾಮ ಗಳಾನಂತ್ಯವು ಶ್ರೀಹರಿಯುವೆ, ಶ್ರೀಹರಿಯು ವ್ಯಾಪಕ=ಸಮಸ್ತ ಬ್ರಹ್ಮಾಂಡ ಬಹಿರ್ಬ್ರಹ್ಮಾಂಡ ಆವರಣ ಮೀರಿ ಅವ್ಯಾಕೃತಾಕಾಶದಲ್ಲಿ ಸಹ ವ್ಯಾಪಕ ಅಪರಿ ಚ್ಛಿನ್ನನಾದರೂ, ಲೋಕರಿಗೆ ರಾಮ, ಕೃಷ್ಣ, ದತ್ತ, ಕಪಿಲ, ಹಯಾಸ್ಯ ಮುಂತಾದ ಪರಿಚ್ಛಿನ್ನ=ವಿಶೇಷವಾದ, ಚಿಕ್ಕ ಚಿಕ್ಕ ತುಂಡಾದ ರೂಪ ಮನು ಜಾಕೃತಿಯಂತೆ ಲೋಕ ಜನರಿಗೆ ತೋರಿದ ಮಹಾಮಹಿಮನು, ದ್ವಾಪ ರಾಂತ್ಯದಿ=ಈ ೨೮ನೇ ಕಲಿಯುಗದ ಮೊದಲಿಗಿದ್ದ ೨೮ನೇ ದ್ವಾಪರಯುಗ ಕೊನೆ ಭಾಗದಲ್ಲಿ, ಶ್ವೇತದ್ವೀಪಮಂದಿರನವತರಿಸಿ=ಬ್ರಹ್ಮದೇವರು ದೈತ್ಯರ ಉಪಟಳ ತಾಳಲಾರದೆ ಶ್ವೇತದ್ವೀಪಗತನಾದ ಹರಿಯನ್ನು ಭಜಿಸಲು ಬ್ರಹ್ಮ ಪ್ರಾರ್ಥನೆಯಂತೆ ಶ್ರೀಹರಿಯು ಅವತರಿಸಿ ಶ್ರೀಕೃಷ್ಣಾಭಿಧಾನದಿಂದ, ದೈತ್ಯ ರನು ಸಂತಾಪಗೊಳಿಸುವೆನೆಂದು=ದಿತಿ ದೇವಿಯ ಮಕ್ಕಳಾದ ದೈತ್ಯರನ್ನು ಹನನ ಮಾಡಿ, ಕಂಸ ದುರ್ಯೋಧನಾದಿಗಳನ್ನು ತರಿದು, ಭೂಭಾರ ತಗ್ಗಿಸಿ ತನ್ನವರ=ವಸುದೇವ ನಂದಗೋಪಾದಿ ಎಲ್ಲ ಗೋಪಾಲಾದಿಗಳನ್ನು ಇತರ ಭಕ್ತರನ್ನು ಪಾಂಡವಾದಿಗಳನ್ನು, ಸಲಹಿದನು=ಸಂರಕ್ಷಿಸಿದನು.

**ಭಾವಸೂಚನ** ॥ ರೂಪೇತಿ ॥ ಆರೋಪಿತಾ ಸಾಂಕೇತಿತಾ ॥೯॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**"ರೂಪ"** ಇತಿ ॥ "ಅನಾಮರೂಪಮ್" ಇತ್ಯುಕ್ತೇಃ ॥ ಅನಾಮಾ "ಸೋಽಪ್ರಸಿದ್ಧತ್ವಾತ್ ಅರೂಪೋ ರೂಪವರ್ಜನಾತ್" ॥ ಇತಿ ಸ್ಮೃತೇಃ ॥ ಗರ್ಗಾರೋಪಿತ–ಸಂಕೇತಿತ–ಸ್ಥಾಪಿತ ॥ ಪ್ರಾಕೃತವತ್ ಗುಣಕರ್ಮಜನ್ಮ ನಿರೂಪಿತವ್ಯ ನಾಮರೂಪವೈಧುರ್ಯಂ ವಾ ತತ್ಪದಾರ್ಥಃ ॥ ಯಥೋಕ್ತಂ ದಶಮ ಪೂರ್ವಾರ್ಥೇ "ನ ನಾಮರೂಪೇ ಗುಣಕರ್ಮಜನ್ಮಭಿಃ ನಿರೂಪಿತವ್ಯೇ

ತವ ತಸ್ಯ ಸಾಕ್ಷಿಣಃ"॥ ಇತಿ ॥ ಟೀಕಾಯಾಂ ಚ ಅಪ್ರಾಕೃತತ್ವಾತ್ ಸತ್ತ್ವಸ್ವ
ಭಾವಾತ್ ಅಕ್ಲಿಷ್ಟಕಾರಿತ್ವಾತ್ ನಿತ್ಯತ್ವಾತ್ ಶುಕ್ಲಭಾಸ್ವರ ಕಾಷ್ಠಯೋರಪಿ
ದಹನಾತ್ಮಗುಣನಿರೂಪಣೀಯಾಗ್ನಿವತ್ ನ ಚೇತ್ ಅಪಿ ನ ಮಿಥ್ಯಾ;
ಉಭಯೋಃ ಸಾಕ್ಷಿಸಿದ್ಧತ್ವಾತ್ ॥ ಕಿಂ ತು "ಲೋಕಸಿದ್ಧಾರ್ಥಸಾಮ್ನಃ ಸಃ
ಇತ್ಯಾರಭ್ಯ "ಜಾನಂತಿ ಪರಮರ್ಷಯಃ" ಇತ್ಯಂತಂ ಆಚಾರ್ಯೋಕ್ತಾರ್ಥ
ಸನ್ನಾಮ್ನಾಂ ತದ್ವಾಚ್ಯರೂಪಾಣಾಂ ಅನಂತತ್ವಾತ್ ಅನಾಮಾದಿವಚನಮ್॥
ಜ್ಞಾನಿಮನಸಾ ಚ ಅನುಮೇಯರೂಪಾಣಿ ಸಂತಿ ॥ "ಸರ್ವನಾಮಾ ಸರ್ವ
ಕರ್ಮಾ" "ರುಕ್ಮವರ್ಣಂ ಕರ್ತಾರಂ" ಇತಿ ಶ್ರುತೇಃ ॥ "ಸ್ವಸಾಮರ್ಥ್ಯೇಽಪಿ,
ಪರದೇವಶ್ರೀನಾರಾಯಣ ಪ್ರಸಾದಾತ್ ಜ್ಞಾತುಂ ಅಶಕ್ತಸ್ಯಾಪಿ ಜಾನಂತಿ"
ಇತ್ಯರ್ಥಕೋಽಯಂ ಉತ್ತರಾರ್ಧಃ । "ಮನೋವಚೋಭ್ಯಾಂ ಅನುಮೇಯ
ವರ್ತ್ಮನಾ ದೇವಕ್ರಿಯಾರ್ಥಾಃ ಪ್ರತಿಯಂತ್ಯಥೋಽಪಿ ಹಿ" ॥ ಇತಿ ॥

ಷಷ್ಠಭಾಗವತೇ ಚ "ಯೋಽನುಗ್ರಹಾರ್ಥಂ ಭಜತಾಂ ಪಾದಮೂಲಂ
ಅನಾಮರೂಪೋ ಭಗವಾನ್ ಅನಂತಃ ॥ ನಾಮಾನಿ ರೂಪಾಣಿ ಚ ಜನ್ಮ
ಕರ್ಮಭಿಃ ಭೇಜೇ ಸ ಮಹ್ಯಂ ಪರಮಃ ಪ್ರಸೀದತು"॥೪-೩೩॥ಇತಿ॥ ಅನೇನ
"ಮೂಲರೂಪೇ" ಇತಿ ಪೂರಣೀಯಮ್ ॥ ತತ್ರ ಅನಾಮರೂಪಃ ಅಪಿ
ತತ್ಕರ್ಮರೂಪಾದೃಷ್ಟೇಃ ॥ ಅವತಾರೇ ಚ ಗರ್ಗರೋಪಿತ ನಾಮರೂಪಃ ॥
ತದುಕ್ತಮ್॥ತತ್ಕರ್ಮಣಾಂ ಅದೃಷ್ಟತ್ವಾತ್ ಅನಾಮಾ ಚಾಪ್ಯದರ್ಶನಾತ್॥
ಅರೂಪಸ್ತ್ವವತಾರೇಣ ರೂಪ ಕರ್ಮಾಣಿ ದರ್ಶಯನ್ ॥ ನಿತ್ಯರೂಪಃ ನಿತ್ಯ
ಕರ್ಮಾ ಹ್ಯವ್ಯಕ್ತತ್ವಮಪೇಕ್ಷ್ಯ ತು ॥ ಅರೂಪಕರ್ಮೇತ್ಯುದಿತಃ ರೂಪಕರ್ಮೋ
ಜ್ಝಿತೇರ್ನತು" ॥ಇತಿ॥(ಪ್ರಕಾಶಸಂಹಿತಾಯಾಂ) ಯದಿ ವಾ "ಹರೇತರಾನುಪ
ಪನ್ನಾರ್ಥವಾಚಿ ನಾಮ ಯಸ್ಯ" ಇತಿ ಸಃ ಅನಾಮಾ॥ ಯಥಾ ಮುಕ್ತಾನಾಂ
ಪರಮಾ ಗತಿಃ" "ಕಮಲಾನಾಥಃ" ॥ ಮೂಲಸ್ಯ ಅತ್ಯಂತಂ ಅವ್ಯಕ್ತತ್ವಾತ್
ಅರೂಪಃ ॥ ಲೋಕದೃಷ್ಟ್ಯಾ ಪ್ರಸಿದ್ಧಕಂಸಾರಿತ್ವ ಮುರಮಥನತ್ವಾದ್ಯರ್ಥಕ
ನಾಮ ಕೃಷ್ಣಾದಿ ರೂಪವತ್ವಾತ್ (ರೂಪಿತ್ವಾತ್) ನಾಮರೂಪಃ ॥ ಉಕ್ತಂ
ಚ "ಅನಾಮಾ ಸೋಽಧಿಕಾರ್ಥತ್ವಾತ್ ಅವ್ಯಕ್ತತ್ವಾತ್ ಅರೂಪಕಃ ॥ ಕಂಸಾ
ರಿತ್ವಾದಿ ಸಾಮರ್ಥ್ಯಃ ವ್ಯಕ್ತರೂಪೋಽವತಾರಣಃ ॥ ಲೋಕದೃಷ್ಟ್ಯಾಧಿ
ಕಾರ್ಥಾನಿ ಮೂಲನಾಮಾನಿ ಕೇಶವೇ ॥ ಅಥ ದಾಮೋದರಾದೀನಿ ಲೋಕ

ದೃಷ್ಟ್ವಾ ಸಮಾನಿ ತು ॥ ಅನಂಪ್ರೋऽವ್ಯಕ್ತರೂಪಸ್ತು ಮೂಲರೂಪಂ ಉದಾಹೃತಮ್ ॥ ಸ ಏವ ವ್ಯಕ್ತಿಮಾಪನ್ನಃ ಪ್ರಾದುರ್ಭಾವ ಉದೀರಿತಃ"॥ (ಉದಾಹೃತಃ॥) ಇತಿ ॥ ತಸ್ಮಾತ್ ಸಾಧೂಕ್ತಂ "ರೂಪನಾಮವಿಹೀನ" ಇತಿ॥೯॥

## ಕನ್ನಡಾರ್ಥ

"ರೂಪನಾಮವಿಹೀನ" ಎಂಬ ಪದವು "ಅನಾಮರೂಪಃ" ಎಂಬ ಶ್ರುತಿಯ ಅರ್ಥವನ್ನು ಹೇಳುತ್ತದೆ. ಅದರಂತೆ "ಅಪ್ರಸಿದ್ಧನಾದುದರಿಂದ ಅನಾಮನೆನಿಸುತ್ತಾನೆ. ಅವ್ಯಕ್ತನಾದುದರಿಂದ ಮೂಲದಲ್ಲಿ ಪ್ರಾಕೃತ ರೂಪಾದಿಗಳಿಲ್ಲದ್ದರಿಂದ ಅರೂಪನೆನಿಸಿಕೊಳ್ಳುತ್ತಾನೆ." ಎಂದು ಸ್ಮೃತಿಯೂ ಹೇಳುತ್ತದೆ. ಆದರೂ ಗರ್ಗಾಚಾರ್ಯರಿಂದ "ಆರೋಪಿತ" ಸಂಕೇತದಿಂದ ಇಟ್ಟ ನಾಮವುಳ್ಳವನು. ಅಂದರೆ "ಪ್ರಾಕೃತಪುರುಷನಂತೆ ಗುಣ-ಕರ್ಮ-ಜನ್ಮಗಳಿಂದ ನಾಮರೂಪಗಳಿಂದ ಹೇಳಿಸಿಕೊಳ್ಳುವವನಲ್ಲ" ಎಂದು "ರೂಪ ನಾಮ ವಿಹೀನ" ಎಂಬ ಪದದ ಅರ್ಥವೆಂದು ತಿಳಿಯಬೇಕು. ದಶಮ ಪೂರ್ವಾರ್ಧದಲ್ಲಿ ಹೀಗೆಯೇ ಹೇಳಲಾಗಿರುತ್ತದೆ. "ನ ನಾಮರೂಪೇ" ಎಂಬ ಶ್ಲೋಕದಿಂದ.

"ಗುಣ-ಜನ್ಮ-ಕರ್ಮಗಳಿಂದ ಅಗ್ನ್ಯಾದಿಗಳನ್ನು ನಿರೂಪಿಸುವಂತೆ ಹರಿಯ ನಾಮರೂಪಗಳನ್ನು ಹೇಳಲು (ನಿರೂಪಿಸಲು) ಅಶಕ್ಯವಾಗುತ್ತದೆ. ಆದರೂ ಆ ನಾಮರೂಪ ಮುಂತಾದುವುಗಳ ಸಾಕ್ಷಾತ್ ದ್ರಷ್ಟೃವೆನಿಸುವ (ಸಾಕ್ಷಿಯೆನಿಸುವ) ಅವನ ರೂಪನಾಮಗಳನ್ನು ಶಾಸ್ತ್ರದಲ್ಲಿ ಹೇಳಿದಂತೆ ದೇವನ (ಅವನ) ಪ್ರೇರಣಾರೂಪವಾದ ಅನುಗ್ರಹ ವಿಶೇಷ ರೂಪ ಪ್ರಸಾದದಿಂದ ಮನೋವಚನಗಳಿಂದ ಶ್ರವಣಮನನಾದಿಗಳಿಂದ ನಿಶ್ಚಯಿಸಿ ಜ್ಞಾನಿಗಳು ತಿಳಿದುಕೊಳ್ಳುತ್ತಾರೆ." ಎಂದು ಶ್ಲೋಕಾರ್ಥ ॥೧೦-೩-೩೭॥ ಶ್ರೀ ವಿಜಯ ಧ್ವಜೀಯ ಟೀಕಾದಲ್ಲಿ–ಅಪ್ರಾಕೃತನಾದುದರಿಂದ–ಸತ್ವಾದಿ ಪ್ರಾಕೃತ ಗುಣ ಗಳಿಲ್ಲದಿರುವುದರಿಂದ, ಕ್ಲೇಶವಿಲ್ಲದೆ (ಲೀಲಾಮಾತ್ರದಿಂದ) ಕಾರ್ಯಕರ್ತೃ ಕಾರಕನಾದುದರಿಂದ, ಹಾಗೂ ನಿತ್ಯನಾದುದರಿಂದ, ಶುಕ್ಲ-ಭಾಸ್ವರ-ವರ್ಣ (ಗುಣ)ಗಳಿಂದ ಕಟ್ಟಿಗೆಯಲ್ಲಿ ವ್ಯಕ್ತವಾಗುವ ಜನ್ಮಗಳಿಂದ ದಹನ (ಸುಡುವಿಕೆ)

ಕ್ರಿಯೆಯಿಂದ ಅಗ್ನಿಯನ್ನು ನಿರೂಪಿಸಬರುವಂತೆ ಪರಮಾತ್ಮನನ್ನು ನಿರೂಪಿಸ ಬರುವಂತೆ ಇಲ್ಲ. ಆದರೂ ರೂಪನಾಮಗಳು ಇಲ್ಲನೆಂದಾಗಲೀ, ಇದ್ದರೂ ಸುಳ್ಳು (ಆರೋಪಿತ) ಎಂದು ಮುಂತಾಗಿಯಾಗಲೀ ಹೇಳಲು ಬರುವುದಿಲ್ಲ. ಯಾಕೆಂದರೆ ಅವುಗಳು ಸಾಕ್ಷಿಯಿಂದ ಸಾಕ್ಷಿನಾಮಕ ಪರಮಾತ್ಮನ ದಿವ್ಯದೃಷ್ಟಿ ಯಲ್ಲಿ ಸಿದ್ಧವಾಗಿರುತ್ತವೆ. ಆದರೆ "ಲೋಕಸಿದ್ಧಾರ್ಥನಾಮ್ನಃ" ಎಂದು ಮುಂತಾಗಿ ಪ್ರಾರಂಭಿಸಿ, "ಜಾನಂತಿ" ಪರಮರ್ಷಯಃ" ಎಂಬಲ್ಲಿಯವರೆಗೆ ಶ್ರೀಮದಾನಂದತೀರ್ಥಭಗವತ್ಪಾದರ ತಾತ್ಪರ್ಯೋಕ್ತಿಯಂತೆ ಅಲೌಕಿಕಾರ್ಥ ವುಳ್ಳ ಸನ್ನಾಮಗಳೂ, ಅವುಗಳಿಂದ ವಾಚ್ಯಗಳಾದ ರೂಪಗಳೂ ಅನಂತ ಗಳಾದುದರಿಂದ "ಅನಾಮಾ-ಅರೂಪ" ಎಂದು ಮುಂತಾಗಿ ಪುರಾಣಾದಿಗಳಲ್ಲಿ ಹೇಳಲಾಗುತ್ತದೆ.

ಜ್ಞಾನಿಗಳ ಮನಸ್ಸಿನಲ್ಲಿ ಮನನ-ಧ್ಯಾನಾದಿಗಳಿಗೆ ಗೋಚರವಾಗುವ, ಶಾಸ್ತ್ರಯುಕ್ತಿಗಳಿಂದ ನಿರ್ಣಯಿಸಲ್ಪಡುವ ರೂಪನಾಮಗಳೂ ಇರುವವು. "ಸರ್ವನಾಮಾ", "ಸರ್ವಕರ್ಮಾ", "ರುಕ್ಮವರ್ಣಂ" (ಬಂಗಾರದ ಬಣ್ಣವುಳ್ಳ ವನು) ಕರ್ತಾರಂ" ಎಂದು ಮುಂತಾದ ಶ್ರುತಿಗಳು ಈ ಅರ್ಥವನ್ನು ಹೇಳುವವು.

ತಮಗೆ ಸಾಮರ್ಥ್ಯವಿಲ್ಲದಿದ್ದರೂ (ಸ್ವಯಂ ತಿಳಿಯಲು ಸಮರ್ಥರಲ್ಲ ದಿದ್ದರೂ) ಪರಮಾತ್ಮನ ನಾರಾಯಣನ ಮಹಾಪ್ರಸಾದಿಂದ ತಿಳಿಯಲಶಕ್ಯ ವಾದವುಗಳನ್ನೂ ಜ್ಞಾನಿಗಳು ತಿಳಿದುಕೊಳ್ಳುತ್ತಾರೆ. ಎಂಬ ಅರ್ಥವನ್ನು ಈ ಶ್ಲೋಕದ ಉತ್ತರಾರ್ಧದಲ್ಲಿ ಹೇಳಲಾಗಿದೆ.

ಇದೇ ಅಭಿಪ್ರಾಯದ ಶ್ಲೋಕವು ಷಷ್ಠಸ್ಕಂಧ ಭಾಗವತದಲ್ಲಿಯೂ ಇರುತ್ತದೆ. "ಯೋನುಗ್ರಹಾರ್ಥಂ" ಎಂಬುದಾಗಿ ॥ ಭಾ. ೬-೪-೩೩॥ ಮೂಲರೂಪದಲ್ಲಿ ಅನಾಮರೂಪನೆಂದು ಪೂರೈಸಬೇಕು. ಮೂಲರೂಪವು ಅವನ ಕರ್ಮಗಳನ್ನು ತಿಳಿಯಲು ನೋಡಲು ಅಶಕ್ಯವಾದುದರಿಂದಲೇ 'ಅರೂಪ'ವೆನಿಸಿಕೊಳ್ಳುತ್ತದೆ.

ಆದುದರಿಂದ ಕೃಷ್ಣಾವತಾರದಲ್ಲಿ ಗರ್ಗಾಚಾರ್ಯರಿಟ್ಟ ನಾಮರೂಪ ಗಳಿರುತ್ತವೆ.

ಷಷ್ಠತಾತ್ಪರ್ಯದಲ್ಲಿ ಮೂಲರೂಪದಲ್ಲಿ ಅವನ ಕರ್ಮಗಳು ಅದೃಷ್ಟ(ತಿಳಿಯಲ್ಪಡದವುಗಳು). ಆದುದರಿಂದ ಅನಾಮನೆನ್ನುತ್ತಾರೆ. ಮತ್ತು ಅವನನ್ನು ಯಾರೂ ನೋಡಿರುವುದಿಲ್ಲವಾದುದರಿಂದ ಅರೂಪನೆನಿಸುತ್ತಾನೆ. ಆದರೆ ಅವತಾರಗಳಲ್ಲಿ ರೂಪ ಹಾಗೂ ಕರ್ಮಗಳನ್ನು ತೋರಿಸಿಕೊಡುತ್ತಾನೆ. (ಅವತಾರಗಳಲ್ಲಿ) ನಿತ್ಯರೂಪವುಳ್ಳವನಾದರೂ, ನಿತ್ಯಕರ್ಮ (ಮಹಿಮಾ) ಪ್ರವೃತ್ತನಾದರೂ ಮೂಲದಲ್ಲಿ ಅವ್ಯಕ್ತನಾದುದರಿಂದ 'ಅರೂಪ', 'ಅಕರ್ಮ'ನೆನಿಸುತ್ತಾನೆಯೇ ಹೊರತು ರೂಪಕರ್ಮಗಳೇ ಪರಮಾತ್ಮನಿಗೆ ಇರುವುದಿಲ್ಲವೆಂದಲ್ಲ.

ಅಥವಾ 'ಹರಿಯನ್ನು ಬಿಟ್ಟು ಇತರರಲ್ಲಿ ಅನ್ವಿತವಾಗದ ಅರ್ಥಗಳನ್ನು ಹೇಳುವ ನಾಮಗಳುಳ್ಳವನು.' ಎಂದೇ 'ಅನಾಮಾ' ಎಂಬ ಶ್ರುತಿಯಲ್ಲಿಯ ಶಬ್ದಕ್ಕೆ ಅರ್ಥ. "ಮುಕ್ತಾನಾಂ ಪರಮಾ ಗತಿಃ", 'ಕಮಲಾನಾಥ' ಮುಂತಾದ ನಾಮಗಳು ಇದಕ್ಕೆ ಉದಾಹರಣೆಗಳು. ಮೂಲರೂಪವು ಅವ್ಯಕ್ತವಾದುದರಿಂದ 'ಅರೂಪ' ಎಂದು ತಿಳಿಯಬೇಕು.

ಲೋಕದೃಷ್ಟಿಯಿಂದ ಪಸಿದ್ಧವಾದ 'ಕಂಸಾರಿತ್ವ. ಮುರಮಥನತ್ವ' 'ಕಂಸನ ವೈರಿ', 'ಮುರಮಥನ' ಎಂದು ಮುಂತಾದ ಅರ್ಥಗಳನ್ನು ಹೇಳುವ ನಾಮಗಳೂ, ಕೃಷ್ಣ ಮುಂತಾದ ರೂಪಗಳೂ ಇರುವವು.

ಇದನ್ನೇ ಪ್ರಮಾಣಗಳಲ್ಲಿ ಹೇಳಲಾಗಿರುತ್ತದೆ. "ಅಧಿಕವಾದ ಅರ್ಥಗಳುಳ್ಳವನು, ಈ ಕಾರಣದಿಂದ 'ಅನಾಮನು'. ಮೂಲದಲ್ಲಿ ಅವ್ಯಕ್ತನಾದುದರಿಂದ 'ಅರೂಪ' ಅವತಾರಗಳಲ್ಲಿ ಕಂಸಾರಿತ್ವ ಮುಂತಾದ ಮಹಿಮೆಯೂ ಕೃಷ್ಣಾದಿ ರೂಪಗಳೂ ಇರುವವು. ಲೋಕದೃಷ್ಟಿಯಿಂದ ಅಧಿಕವಾದ ಅರ್ಥಗಳನ್ನು ಮೂಲನಾಮಗಳು ನಾರಾಯಣನಲ್ಲಿ ಹೇಳುತ್ತವೆ. 'ದಾಮೋದರ' ಮುಂತಾದುವುಗಳು ಲೋಕದೃಷ್ಟಿಯಿಂದ ಸಮಾನಾರ್ಥಕಗಳು. ಮೂಲರೂಪವು ಅವ್ಯಕ್ತವೂ ಆನಂದಾತ್ಮಕವೂ ಆಗಿದೆ. ಅದೇ ಆನಂದಾತ್ಮಕ ಮೂಲರೂಪವೇ ವ್ಯಕ್ತರೂಪವನ್ನು ಹೊಂದುವುದೇ ಪ್ರಾದುರ್ಭಾವವೆನಿಸುತ್ತದೆ ಎಂದು.

ಆದುದರಿಂದ 'ರೂಪನಾಮವಿಹೀನ' ಎಂದು ಹೇಳಿದುದು ಬಹಳ ಸಮಂಜಸ||೯||

**ಅವತರಣಿಕಾ :—** ಶ್ರೀಹರಿಯೇ ಭಕ್ತರಿಗೋಸುಗ ನಾನಾವತಾರ ಮಾಡಿದ್ದೈಯ್ಯಾ ಎಂಬ ಶ್ರೀವಿಜಯರ ವಾಕ್ಯದಂತೆ ಶ್ರೀಹರಿಯು ಅನೇಕ ಭಕ್ತರನ್ನು ಸಲಹಲು ಅನಂತ ಅವತಾರ ಮಾಡಿ ತನ್ನ ನಿಜಭಕ್ತರನ್ನು ಸಲಹಿದನೆಂದು ಮಹಿಮಾ ಸ್ತೋತ್ರ ಮಾಡುತ್ತಾರೆ.

**ಶ್ರೀವಿರಿಂಚಾದ್ಯಮರನುತನಾ ।**
**ನಾವತಾರವ ಮಾಡಿ ಸಲಹಿದ ।**
**ದೇವತೆಗಳನು ಋಷಿಗಳ ಕ್ಷಿತಿಪರನು ಮಾನವರ ॥**
**ಸೇವೆಗಳ ಕೈಕೊಂಡು ಫಲಗಳ ।**
**ನೀವ ನಿತ್ಯಾನಂದಮಯ ಸು ।**
**ಗ್ರೀವ ಧ್ರುವ ಮೊದಲಾದ ಭಕ್ತರಿಗಿತ್ತ ಪುರುಷಾರ್ಥ ॥೧೦॥**

**ಪದ್ಯಾರ್ಥ :—** ಶ್ರೀ=ಸಂಪತ್ತಿಗೆ, ಮುಕ್ತಿಸಂಪತ್ತಿಗೆ ಕಾರಣಳಾದ ಲಕ್ಷ್ಮೀದೇವಿಯರು, ವಿರಿಂಚಾದ್ಯಮರನುತ=ಬ್ರಹ್ಮಾದಿ ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳುವ ಹರಿಯು, ನಾನಾವತಾರವ ಮಾಡಿ=ಮತ್ಸ್ಯ, ಕಚ್ಛಪ, ವರಾಹ, ನಾರಸಿಂಹ, ರಾಮ, ಕೃಷ್ಣ, ದತ್ತ, ಕಪಿಲ, ಹಂಸ, ಹಯಾಸ್ಯಾದಿ ಅನಂತ ಅವತಾರಗಳನ್ನು ಮಾಡಿ, ಆಯಾ ರೂಪದಿಂದ ಪ್ರಾದುರ್ಭವನಾಗಿ "ನಮಃ ಶಾಂತಾಯ ಘೋರಾಯ ಮೂಢಾಯ ಗುಣಕರ್ಮಣೇ" ಎಂಬ ಭಾಗವತೋಕ್ತಿಯಂತೆ ಜ್ಞಾನ ಬಲಾದಿ ಅವತಾರಗಳನ್ನು ಮಾಡಿ, ದೇವತೆಗಳನ್ನು=ರುದ್ರಾದಿ ದೇವತೆಗಳಿಗೆ ಅವರ ಅಂಶಾವತರಣದ ಕಷ್ಟ ಅಜ್ಞಾನಗಳನ್ನು ದೂರೋಡಿಸಿ, ಋಷಿಗಳನು=ಭೃಗ್ವಾದಿ ಋಷಿಗಳನ್ನು, ಕ್ಷಿತಿಪರನು=ಅನೇಕ ಕರ್ಮಜ ದೇವತೆಗಳಾದ ರಾಜರನ್ನು, ಮಾನವರ=ಮಾನುಷ ರಾಜರು ಮನುಜೋತ್ತಮರನ್ನೂ, ಅವರ ಸೇವೆಗಳ ಕೈಕೊಂಡು=ದೇವತೆ, ಋಷಿ, ಕ್ಷಿತಿಪರು, ಮಾನವರು ತಮ್ಮ ಭಕ್ತಿಯಂತೆ ಮಾಡಿದ ಭಕ್ತಿರೂಪ ಸೇವಾ ಸ್ವೀಕರಿಸಿ, ಫಲಗಳನೀವ=ಅವರವರ ಯೋಗ್ಯತೆಯಂತೆ ಫಲಗಳನ್ನು ಕೊಡುವನು, ತಾನು, ನಿತ್ಯಾನಂದಮಯ=ನಿತ್ಯದಲ್ಲೂ ಸುಖ ಜ್ಞಾನ ಆನಂದಾದಿ ಗುಣಗಳಿಂದ ಪೂರ್ಣನಾದ ಹರಿಯು ಬ್ರಹ್ಮಾದಿಗಳ ಪೂಜಾ ಸೇವೆಯಿಂದ ತೃಪ್ತನಾಗುವುದಿಲ್ಲ, ಅಕಾಮ ನಿತ್ಯತೃಪ್ತನು, ಸುಗ್ರೀವ=

ಸೂರ್ಯಾಂಶನು ರಾಮಾವತಾರದಲ್ಲಿ ಕಪಿಕುಲದಲ್ಲಿ ಅವತರಿಸಿದಾಗ್ಗೆ ಶ್ರೀರಾಮನು ಅವನ ಅಪರಾಧವೆಣಿಸದೇ ಕಾಯ್ದನು, ಧ್ರುವ ಮೊದಲಾದ ಭಕ್ತರಿಗಿತ್ತ ಪುರುಷಾರ್ಥ=ಧ್ರುವನೇ ಮೊದಲಾದ ಭಕ್ತರಿಗೆ ಅವರವರ ಪ್ರಾರಬ್ಧ ಅನುಭೋಕ್ತ್ರವ್ಯಗೈಸಿ ಪುರುಷಾರ್ಥ=ಮುಖ್ಯ ಮೋಕ್ಷವನ್ನೆ ಕೊಟ್ಟನು.

**ಭಾವಸೂಚನ** ॥ ಶ್ರೀತಿ ।೧೦॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಶ್ರೀ' ಇತಿ ।। 'ನಾನಾ' ಇತಿ ।। "ಮತ್ಸ್ಯಾಸ್ಯ(ಚ್ಛ)ಕಚ್ಛಪನೃಸಿಂಹ ವರಾಹ ಹಂಸ ರಾಜನ್ಯ ವಿಪ್ರ ವಿಬುಧೇಷು ಕೃತಾವತಾರಃ॥ ತ್ವಂ ಪಾಸಿ ನಸ್ತ್ರಿಭುವನಂ ಚ ತಥಾಧುನೇಶ ಭಾರಂ ಭುವೋ ಹರ ಯದುತ್ತಮ ವಂದನಂ ತೇ ॥" ಇತಿ ಗರ್ಭಸ್ತುತೌ॥೧೦॥

## ಕನ್ನಡಾರ್ಥ

ನಾನಾ ಅವತಾರಗಳನ್ನು ಮಾಡಿ ದೇವ ಋಷಿ ಕ್ಷಿತಿಪ ಮಾನವರನ್ನು ಸಂರಕ್ಷಿಸಿ, ಅವರ ಸೇವಾನುಸಾರವಾಗಿ ಫಲವನ್ನು ಕೊಟ್ಟನೆಂಬಲ್ಲಿ ಭಾಗವತ ವಚನಗಳು ಆಧಾರವಾಗಿರುತ್ತವೆ. 'ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ಹಂಸ, ರಾಜ, ವಿಪ್ರ, ದೇವ ಮುಂತಾದ ರೂಪಗಳಿಂದ ಅವತರಿಸಿ, ಮೂರು ಲೋಕಗಳನ್ನೂ ಸಂರಕ್ಷಿಸುತ್ತೀ ! ಆದುದರಿಂದ ಹೇ ದೇವನೇ ! ಈಗಾದರೂ ಅವತರಿಸಿ ಭೂಭಾರವನ್ನು ಪರಿಹರಿಸು ! ಯದೂತ್ತಮ ! ನಿನಗೆ ನಮಸ್ಕಾರವಿರಲಿ"॥ ಎಂದು ಗರ್ಭಸ್ತುತಿಯಲ್ಲಿ ಪ್ರಾರ್ಥಿಸಿರುತ್ತದೆ. ।।೧೦।।

**ಅವತರಣಿಕಾ :—** ಮಹಾಕರುಣರಸಪೂರಿತನಾದ ಭಕ್ತಪೋಷಕ ಶ್ರೀಹರಿಯ ಅನಂತಗುಣೋತ್ಕರ್ಷಣ ಪೂರ್ವಕ ಸ್ತೋತ್ರಗೈಯ್ಯುತ್ತಾರೆ.

**ದುಷ್ಟದಾನವಹರಣ ಸರ್ವೋ।**
**ತ್ಕೃಷ್ಟ ಸದ್ಗುಣ ಭರಿತ ಭಕ್ತಾ।**
**ಭೀಷ್ಟದಾಯಕ ಭಯವಿನಾಶನ ವಿಗತ ಭಯಶೋಕ ॥**
**ನಷ್ಟ ತುಷ್ಟಿಗಳಿಲ್ಲ ಸೃಷ್ಟ್ಯಾ।**
**ದ್ಯಷ್ಟಕರ್ತನಿಗಾವ ಕಾಲದಿ।**
**ಹೃಷ್ಟನಾಗುವ ಸ್ಮರಣೆ ಮಾತ್ರದಿ ಹೃದ್ಗುಹನಿವಾಸಿ ॥೧೧॥**

**ಪದ್ಯಾರ್ಥ :—**ದುಷ್ಟದಾನವ ಹರಣ=ಕ್ರೂರರಾದ ದುರ್ಬುದ್ಧಿಯುಳ್ಳ ವಸುಪುತ್ರರಾದ ದಾನವರನ್ನು ಸಂಹಾರ ಮಾಡುವನು, ಅಂದರೆ ಅಧರ್ಮ ನಾಶಮಾಡಿ ಧರ್ಮಸ್ಥಾಪನಗೈವನು, ಸರ್ವೋತ್ಕೃಷ್ಟ ಸದ್ಗುಣಭರಿತ =ಉತ್ತಮೋತ್ತಮವಾದ ಒಳ್ಳೆ ಸಚ್ಚಿದಾನಂದ ಆತ್ಮಾದಿ ಗುಣಪರಿಪೂರ್ಣನು, ಭಕ್ತಾಭೀಷ್ಟದಾಯಕ=ತನ್ನ ಭಕ್ತರು ಇಚ್ಛಿಸುವ ಬಯಕೆಗಳನ್ನು ಪೂರೈಸುವವನು, ಭಯವಿನಾಶನ=ಭಕ್ತರಿಗೆ ಬಂದ ಭಯರೂಪವಾದ ನಾನಾ ವಿಪತ್ತು ಸಂಕಟಗಳನ್ನು ಪರಿಹರಿಸುವವನು, ವಿಗತಭಯಶೋಕ=ಭೀತಿ, ಭಯ, ಅಂಜಿಕೆ, ಶೋಕ, ದುಃಖಾದಿಗಳಿಂದ ಹೋಗಲ್ಪಟ್ಟವನು, ಭಯದುಃಖಾದಿ ದೂರ, ನಷ್ಟತುಷ್ಟಿಗಳಿಲ್ಲ ಸೃಷ್ಟ್ಯಾದ್ಯಷ್ಟನಿಗಾವ ಕಾಲದಿ=ಸೃಷ್ಟಿ, ಸ್ಥಿತಿ, ಲಯ, ಬಂಧ, ಮೋಕ್ಷಾದಿ ಅಷ್ಟ ಕರ್ತೃನಾದ ನಿಜಪೂರ್ಣಲಾಭ ನಿತ್ಯ ಸಂತುಷ್ಟನಿಗೆ ನಷ್ಟ=ಹಾನಿ, ತುಷ್ಟಿ=ಅಲಂಬುದ್ಧಿ ಸಂತೋಷಗಳು ಇಲ್ಲೇ ಇಲ್ಲ. ಕಾಲತ್ರಯದಲ್ಲೂ ಇಲ್ಲ, ಅಂದರೆ ನಿತ್ಯತೃಪ್ತನಾದ ಹರಿಗೆ ಬಂದು ವಸ್ತುವಿನಿಂದ ಒಬ್ಬರಿಂದ ಹಾನಿ ಇಲ್ಲ, ವಸ್ತುಪ್ರಾಪ್ತಿಯಿಂದ ತುಷ್ಟಿ ಸಂತೋಷ ಅಲಂಬುದ್ಧಿ ಇಲ್ಲ. ಹೃದ್ಗುಹನಿವಾಸಿ=ಹೃದ್ಗುಹದಲ್ಲಿ ಇರುವ ಬಿಂಬರೂಪಿಯು, ಸ್ಮರಣೆ ಮಾತ್ರದಿ=ಶಾಸ್ತ್ರೋಕ್ತವಾಗಿ ಭಗವನ್ಮಹಿಮೆ ತಿಳಿದು ಬಿಂಬರೂಪಿ ಹರಿಯನ್ನು ಪುನಃಪುನಃ ನೆನೆಸಲು ಹೃಷ್ಟನಾಗುವ=ತಾನು ಸರ್ವದಾ ಸಂತೋಷ ಉಳ್ಳವನು, ಭಕ್ತರ ಸ್ಮರಣೆಯಿಂದ ಶ್ರೀಹರಿಗೆ ಸಂತೋಷವಿಲ್ಲವಾದರೂ ಭಕ್ತವತ್ಸಲನು, ಹೃಷ್ಟನಾಗುವ=ಹೃಷ್ಯತಿ ಸ್ಮ ಧೃಷ್ಟ=ಭಕ್ತನಲ್ಲಿ ಪ್ರೀತಿಯುಳ್ಳ ಸಂತೋಷ ಮನಸ್ಸುಳ್ಳವನಾಗಿ ಭಕ್ತನನ್ನು ಕಾಪಾಡುತ್ತಾನೆ.

**ಭಾವಸೂಚನ** ॥ ದುಷ್ಟೇತಿ ॥೧೧॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ದುಷ್ಟ' ಇತಿ ॥ 'ನಷ್ಟ' ನಾಶ ಭಾವೇ ಪ್ರತ್ಯಯಃ ॥ 'ತುಷ್ಟಿ' ಆಗಂತುಕೀ ॥ (ಕಾ)॥ 'ಸ್ಮರಣ' ಇತಿ ॥ ಸ್ವನುರಾಗೇತಿ ಪ್ರುತಿಗೀತಾಯಾಮ್ ॥೧೧॥

## ಕನ್ನಡಾರ್ಥ

'ಸಷ್ಟ' ಎಂಬ ಶಬ್ದಕ್ಕೆ ನಾಶವೆಂದು ಅರ್ಥ. ಇಲ್ಲಿರುವ ಪ್ರತ್ಯಯವು ಭಾವಾರ್ಥದಲ್ಲಿವೆ. 'ತುಷ್ಟಿ' ಎಂದರೆ ಆಗಂತುಕವಾದ ತೃಪ್ತಿ ಎಂದು ತಿಳಿಯ ಬೇಕು. ಪರಮಾತ್ಮನಿಗೆ ವಿಷಯಗಳಿಂದ ನೂತನವಾದ ತೃಪ್ತಿಯು ಆಗು ವುದಿಲ್ಲ. 'ಸ್ಮರಣಮಾತ್ರದಿ' ಎಂದು ದಾಸರಾಯರು ಹೇಳಿದ್ದು. 'ಸ್ಮರಣಾತ್' ಸ್ವನುರಾಗ ತದ್‌ಭವಾನ್ ಭವ ಉರಗದಂಡವಿಕ್ಷಸ್ಥಯೇ" ಎಂದು ಹೇಳು ತ್ತಿರುವ ಶ್ರುತಿಗೀತೆಯ ಅರ್ಥವನ್ನೇ ಸಂಗ್ರಹಿಸುತ್ತದೆ ||೧೧||

**ಅವತರಣಿಕಾ :**—ಬ್ರಹ್ಮದೇವರು ಸುಖ ಪ್ರಾರಬ್ಧ ಭೋಕ್ತ್ರರು. ಅವರಿಗೆ ಅಜ್ಞಾನಾದಿಗಳಿಲ್ಲವಾದರೂ ರುದ್ರನೇ ಮೊದಲಾಗಿ ಎಲ್ಲ ದೇವತೆಗಳು ಪರಮಾತ್ಮನ ಬಂಧಕ ಶಕುತಿಗೆ ಒಳಪಟ್ಟವರು ಎಂಬುತಾದ ಶ್ರುತಿ ಸ್ಮೃತಿ ಉಕ್ತ ಮಹಿಮಾ ವರ್ಣಿಸುತ್ತಾರೆ.

**ಹಿಂದೆ ಪ್ರಳಯೋದಕದಿ ತಾವರೆ ।**
**ಗಂದ ನಂಜಿಸಿ ಕಾಯ್ದ ತಲೆಯುಲಿ ।**
**ಬಾಂದೊರೆಯ ಪೊತ್ತವಗೊಲಿದು ಪರಿಯಂಕ ಪದವಿತ್ತ ॥**
**ವಂದಿಸಿದ ವೃಂದಾರಕರ ಸ ।**
**ದ್ವೃಂದ ಕುಣಿಸಿದ ಸುಧೆಯ ಕರುಣಾ ।**
**ಸಿಂಧು ಕಮಲಾಕಾಂತ ಬಹು ನಿಶ್ಚಿಂತ ಜಯವಂತ ॥೧೨॥**

**ಪದ್ಯಾರ್ಥ :**—ಹಿಂದೆ=ಈ ವರ್ತಮಾನ ಕಾಲಕ್ಕಿಂತಲೂ ಪೂರ್ವ ದಲ್ಲಿ, ಪ್ರಳಯೋದಕದಿ=ಪದ್ಮಕಲ್ಪದ ಪ್ರಳಯ ಜಲಧಿಯಲ್ಲಿ, ತಾವರೆಗಂದ ನಾಜಿಸಿ=ಪದ್ಮದಲ್ಲಿ ಪುಟ್ಟಿದ ಬ್ರಹ್ಮದೇವರನ್ನು, ಭಕ್ಷಿಸಲಿಕ್ಕೆ ಶ್ರೀಹರಿಯು ಉದ್ಯುಕ್ತನಾಗಲು, ಬ್ರಹ್ಮದೇವರು ಶ್ರೀಹರಿಯ ಬಂಧನಕ್ಕೊಳಾದವನೆಂದು, ಶ್ರೀಹರಿ ಪ್ರೀತಿಗೋಸುಗ ರೋದನ ಮಾಡಿದನು. ಅಚ್ಛಿನ್ನಭಕ್ತನಾದ ಬ್ರಹ್ಮ ನನ್ನು ಸಾಂತ್ವನ ಮಾಡಿ, ಕಾಯ್ದು=ಸಂರಕ್ಷಿಸಿದ, ಮತ್ತು ಬ್ರಹ್ಮಾಂಡ ಸೃಷ್ಟಿಕಾರ್ಯದಲ್ಲಿ ಕೃಪೆ ಮಾಡಿ ನಿಯೋಜಿಸಿದನು, (ಭಾವಸೂಚನೆ ಮತ್ತು ವ್ಯಾಸದಾಸಸಿದ್ಧಾಂತಕೌಮುದಿಕಾರರು ವಿಶದವಾದ ಪ್ರಮಾಣಗಳಿಂದ ಬರೆ ದಿರುವರು. ಮುಂದೆ ನೋಡಿರಿ) ಇದೊಂದು ಹೊಸ ವಿಷಯವು.

ತ್ರಿಯಲಿ=ಶಿರಸ್ಸಿನಲ್ಲಿ, ಬಾಂದೊರೆಯ ಪೊತ್ತವಗೊಲಿದು=ಭಗೀರಥ ರಾಜನು ಭಾಗೀರಥಿ ದೇವಲೋಕದಿಂದ ಬರಲು ಪ್ರಾರ್ಥಿಸಿದಾಗ್ಗೆ, ರುದ್ರ ದೇವರು, ಆ ಭಾಗೀರಥಿ ಪ್ರವಾಹವೇಗವನ್ನು ತನ್ನ ಜಟೆಯಲ್ಲಿ ಧರಿಸಿದನು, ಇಂತಹ ಮಹಾ ಸಮರ್ಥನಾದ ರುದ್ರದೇವರಿಗೆ ಒಲಿದು=ಪ್ರಸನ್ನನಾಗಿ ಅವರ ಸಾಧನ ಪೂರ್ತಿ ಮಾಡಲು, ೯ನೇ ಕಲ್ಪಾವಸಾನ ಕೊನೆಗೆ, ಪರಿಯಂಕ ಪದವಿತ್ತ=ಪರಿಯಂಕ ಶೇಷನೆ ಎಂದು ದಾಸರ ಉಕ್ತಿಯಂತೆ ಹರಿಗೆ ಮಂಚ ರೂಪವಾದ ಶೇಷದೇವರ ಪದವಿಯನ್ನು ಕೊಟ್ಟನು. ವಂದಿಸಿದ ವೃಂದಾರಕರ ಸಮ್ಮಲಂದಕೆ=ದೈತ್ಯರ ಉಪಟಳದಿಂದ ಮೊರೆ ಇಟ್ಟ ದೇವತೆಗಳ ಪ್ರಾರ್ಥನೆಯಂತೆ ದೇವದೈತ್ಯಉಭಯರಲ್ಲಿ ಸಂಧಾನ ಕಲ್ಪಿಸಿ ಕ್ಷೀರ ಸಮುದ್ರ ಮಥನ ಗೈಸಿದನು, ಆಗ್ಗೆ ಅಮೃತಕಲಶ ಉತ್ಪನ್ನವಾಗಲು, ಪುನಃ ಉಭಯರಲ್ಲಿ ಕಲಹ ಉತ್ಪನ್ನವಾಗಲು ಮೋಹಿನಿ ರೂಪ ತಾಳಿ, ಹರಿಯು ಭಕ್ತರಾದ ದೇವಸಮೂಹಕ್ಕೆ ಅಮೃತ ಉಣಿಸಿ ಅಜರಾಮರಣರನ್ನು ಮಾಡಿ, ದೇವತೆಗಳಿಂದ ದೈತ್ಯಾದಿಗಳನ್ನು ಪರಾಜಯ ಹೊಂದಿಸಿದನು. (ಭಾಗವತ ಕಥಾ) ಇಂತು ದೇವತೆಗಳಿಗೆ ಅಮೃತವನ್ನು ಉಣಿಸಿದ, ಕರುಣಾಸಿಂಧು=ಕೃಪಾಸಾಗರ, ಕಮಲಾಕಾಂತ=ಕ್ಷೀರಸಾಗರದಲ್ಲೆ ಪ್ರಾದುರ್ಭೂತಳಾದ, ಕಮಲಾ =ಲಕ್ಷ್ಮೀದೇವಿಯನ್ನು ಸ್ವೀಕರಿಸಿ ಆಕೆಗೆ ಕಾಂತ=ಪ್ರಿಯಪತಿ ಎನಿಸಿದ ಹರಿಯು, ನಿಶ್ಚಿಂತ=ಯಾವ ಚಿಂತೆ ಇಲ್ಲದವನು, ಚಿಂತಾಸಂತಾಪದೂರನು, ಜಯವಂತ=ಸರ್ವದಾ ಸಕಲರಿಂದ ಸರ್ವಕಾಲದಲ್ಲಿ ಜಯ ಉಳ್ಳವನು, ಯಾವ ಕಾಲದಲ್ಲಿಯೂ, ಯಾರಿಂದಲೂ ಶ್ರೀಹರಿಗೆ ಎಂದೆಂದೂ ಅಪಜಯವೆಂಬುದು ಇಲ್ಲೇ ಇಲ್ಲ.

**ಭಾವಸೂಚಕ** ‖ ಹಂದೇತಿ ‖ ಅದ್ಯಸೃಷ್ಟಾ ‖ ತಾವರೆ ಗಂದ=ಕಮಲ ಸಂಭವ ‖ ಅಂಜಿಸೀತಿ ‖ ಆತನನ್ನು ತಿಳಿಯಲಿಕ್ಕೆ ಹೋದ ಪ್ರಯುಕ್ತ ‖ **"ಸಂವತ್ಸರೋ ಅಭವ ತಂ ಜಾತಮಭಿವ್ಯಾದದಾವಿತಿ ಶ್ರುತೇಃ"** ‖ ತಮುತ್ಪನ್ನಂ ವ್ಯಾದದಾದಾಸ್ಯಂ ತದಾಸಾವಿರುರಾವ ಹ ‖ ಅಥ ತಸ್ಯಭಯಾ ವಿಷ್ಣುಃ ಸೃಷ್ಟಿಕರ್ಮಣ್ಯಮೋಚಯದಿತಿ ಬ್ರಹ್ಮಾಂಡೇ ‖ ಬಾಂದೊರೆ ಗಂಗಾ ‖೨‖

**ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ**

ಹಿಂಪ ಇತಿ॥ "ತಮುಕ್ತ್ವಂ" ಇತಿ ಶ್ರುತೇಃ" "**ದೊರೆ**" ಹೋಳೆ "ವೃಂದಾರಕ" ದೇವ॥ ॥೧೨॥

## ಕನ್ನಡಾರ್ಥ

"ಪ್ರಳಯ ಕಾಲವಲ್ಲಿ ಮೃತ್ಯು ನಾಮಕನಾದ ಶ್ರೀಹರಿಯೊಬ್ಬನೇ ಸರ್ವ ಜಡ ಜೀವಂಗೆ ಆವರಕನಾಗಿದ್ದನು. ಅವನು ಆವರಕನಾದುದರಿಂದ ಜೀವ ಜಡಾದಿಗಳು ಇದ್ದರೂ ಇಲ್ಲದಂತೆಯೇ ಇದ್ದವು. ಆ ಹರಿಯು ಸ್ವೇಚ್ಛೆಯಿಂದ ನೀರನ್ನು ಸೃಷ್ಟಿಸಿದನು. ನೀರಲ್ಲಿ ಮಲಗಿ ಮಹತ್ತರವಾದ ಬ್ರಹ್ಮಾಂಡ ವನ್ನು ನಿರ್ಮಿಸಿದನು. ಮತ್ತು ಬ್ರಹ್ಮಾಂಡದಲ್ಲಿ "ಸಂವತ್ಸರ" ನಾಮಕ ನಾದ ಚತುರ್ಮುಖ ಬ್ರಹ್ಮದೇವನನ್ನು ಸೃಷ್ಟಿಸಿ, ಅವನನ್ನು ಭಕ್ಷಿಸಲು (ನುಂಗಲು) ಬಾಯಿಯನ್ನು ತೆರೆದನು. ಆಗ ಬ್ರಹ್ಮದೇವರು ರೋದನ ಮಾಡಿದರು. ಅನಂತರ ಹರಿಯು ಕೃಪೆಯಿಂದ ಬ್ರಹ್ಮದೇವನನ್ನು ಸೃಷ್ಟಿ ಕರ್ಮದಲ್ಲಿ ನಿಯೋಜಿಸಿದನು," ಎಂಬ ಕಥೆಯನ್ನು ಇಲ್ಲಿ ಸಂಗ್ರಹಿಸಿ ತಿಳಿಸುತ್ತಾರೆ. ॥೧೨॥

**ಅವತರಣಿಕಾ :—**ಸತ್ಯ ಸಂಕಲ್ಪನಾದ ಹರಿಯು, ತನ್ನ ಇಚ್ಛೆಯಂತೆ ನಡೆಯುತ್ತಾ ತನಗೆ ತಾನೇ ಸೇವಕನೆನಿಸಿ, ಭೋಗ್ಯ ಭೋಕ್ತೃಗಳಲ್ಲಿದ್ದು ತೃಪ್ತಿಪಡಿಸುತ್ತಾ ದೇವಾಸುರರಿಗೆ ಅವರವರ ತಕ್ಕ ಫಲಗಳನ್ನು ಕೊಡುವ ಶ್ರೀಹರಿಯ ಮಾಹಾತ್ಮ್ಯ ಸ್ತೋತ್ರಗೈಯ್ಯುತ್ತಾರೆ.

**ಸತ್ಯ ಸಂಕಲ್ಪಾನುಸಾರ ಪ್ರ।**
**ವರ್ತಿಸುವ ಪ್ರಭು ತನಗೆ ತಾನೆ।**
**ಭೃತ್ಯನೆನಿಸುವ ಭೋಕ್ತೃ ಭೋಗ್ಯ ಪದಾರ್ಥದೊಳಗಿದ್ದು॥**
**ತತ್ತದಾಹ್ವಯನಾಗಿ ತರ್ಪಕ।**
**ತೃಪ್ತಿ ಬಡಿಸುವ ತತ್ವಪತಿಗಳ।**
**ಮತ್ತರಾದಸುರರ್ಗೆ ಅಸಮೀಚೀನ ಫಲವೀವ ॥೧೩॥**

**ಪದ್ಯಾರ್ಥ** :—ಸತ್ಯಸಂಕಲ್ಪಾನುಸಾರ = ಸತ್ಯ = ಸತ್ಯಶಬ್ದಾರ್ಥ: ಸತ್ರಾಚ್ಚ ಸತ್ಯಃ॥ ಸತ್ಯಸಾಧು ಗುಣ ವ್ಯಾಪ್ತಿತ್ವಾದ್ವ್ಯಂತೃತ್ವಾತ್ಸತ್ಯ॥ ನಿರ್ದುಷ್ಟಾನಂದಪೂರ್ಣತ್ವಾದ್ವ್ಯವಾಹುಃ ಸತ್ಯಮುಚ್ಯತಮಿತ್ಯೃಸ್ಮರಿತ್ಯಾ ವಾ ಸತ್ಯಃ। ಪ್ರಾಣಾನಾಂ ನಿತ್ಯ ನಿಯಾಮಕತ್ವಾತ್ಸತ್ಯಃ॥ **"ತತ್ಸತ್ಯಂ ಸದಿತಿ ಪ್ರಾಣಸ್ತಂ ನಿಯಮಯತಿ ಅಸತ್ವಾದಿತ್ ಇತಿ ಶ್ರುತೇಃ"**॥ ("ವಿದ್ಯಾಧಿರಾಜೀಯ) ಸತ್ಯ=ಸ-ತ-ಯ=ನಿರ್ದುಷ್ಟ ಜ್ಞಾನ ಆನಂದ ಪರಿಪೂರ್ಣನಾದುದರಿಂದಲೂ ಶ್ರೀಹರಿಗೆ ಸತ್ಯನೆಂದು ಉಪನಿಷತ್ ವಾಕ್ಯ. ಇಂತಹ ಸತ್ಯಸಂಕಲ್ಪ ತಾನು ತನ್ನ ಇಚ್ಛೆಗೆ ಅನುಸರಿಸಿ, ಒಮ್ಮೆ ಸಂಕಲ್ಪ ಮಾಡಿದಂತೆ ಪ್ರವರ್ತಿಸುವ=ನಡೆಯುವ, ಪ್ರಭು=ಒಡೆಯನು ಇನ್ನೊಬ್ಬರಿಗೆ ಅಧೀನವಲ್ಲದ ಸರ್ವತಂತ್ರ ಸ್ವತಂತ್ರನು ತನಗೆ ತಾನೆ ಪ್ರಭು ಒಡೆಯ ತನಗೆ ತಾನೆ, ಭೃತ್ಯನೆನಿಸುವ=ಸೇವಕನೆನಿಸುತ್ತಾ ಸೇವ್ಯಸೇವಕನು ಇವಲ್ಲದೇ ಭೋಕ್ತೃ =ಭೋಜನ ಮಾಡುವವರಲ್ಲಿ, ಭೋಗ್ಯ ಪದಾರ್ಥಗಳೊಳು ಇದ್ದು= ಭೋಗ್ಯ ಭೋಜನ ಮಾಡುವ ದ್ರವ್ಯ ವಸ್ತುಗಳಲ್ಲಿ ತಾನೇ ಇದ್ದು, ತತ್ತದಾಹ್ವಯನಾಗಿ=ಭೋಕ್ತೃ, ಭೋಗ್ಯನೆಂದು ಆಯಾನಾಮದಿಂದ ಕರೆಸುತ್ತಾ, ತರ್ಪಕ=ತಾನು ತನ್ನ ಸ್ವರಸವನ್ನು ಸ್ವೀಕರಿಸಿ ಆನಂದ ಹೊಂದಿದ ನಿತ್ಯಾನಂದನು, ತತ್ವಪತಿಗಳ=ತತ್ವಾಭಿಮಾನಿ ದೇವತೆಗಳನ್ನು, ತೃಪ್ತಿಬಡಿಸುವ=ಅವರವರ ಯೋಗ್ಯರಸಗಳನ್ನುಣಿಸಿ, ಸಾಕುಸಾಕೆನ್ನುವಂತೆ ಅಲಂಬುದ್ಧಿ ಕೊಟ್ಟು ಆನಂದ ಪಡಿಸುವನು, ಮತ್ತರಾದಸುರರ್ಗೆ ಅಸನಿವಾಚೀನ ಫಲವೀವ=ಉನ್ಮತ್ತ ದ್ವೇಷಿಗಳಾದ ತಮೋಯೋಗ್ಯ ದೈತ್ಯರಿಗೆ, ಸನಿವಾಚನವಾಗದಿದ್ದ ಎಂದರೆ ಕೆಟ್ಟ ದುಷ್ಟ ಅಂಧತಮಸ್ಸಾದಿ ನಿತ್ಯನರಕಗಳನ್ನು ಹೊಂದಿಸುವ ಫಲವನ್ನು ಕೊಡುತ್ತಾನೆ.

**ಭಾವಸೂಚನ** ॥ ಸತ್ಯೇತಿ ॥ ಭೃತ್ಯೇತಿ ॥ ಭೋಕ್ತ್ರೀತಿ ॥ ಭೋಜಸಂಧೌ ವಿವೃತಮೇತತ್ ॥೧೩॥

**ಶ್ರೀವ್ಯಾಸ ದಾಸ ಸಿದ್ಧಾಂತ ಕೌಮುದೀ**

'ಸತ್ಯ' ಇತಿ ॥೧೩॥

## ಕನ್ನಡಾರ್ಥ

ಭೋಕ್ತೃಭೋಗ್ಯಗಳಲ್ಲಿದ್ದು ತತ್ತನ್ನಾಮಗಳಿಂದ ವಾಚ್ಯನಾಗಿ, ತನಗೆ ತಾನೇ ಸೇವ್ಯನಾಗಿ ತತ್ವಾಭಿಮಾನಿಗಳಿಗೆ ತೃಪ್ತಿಯನ್ನೂ, ಅಸುರರಿಗೆ ಅಸಮಿಾಚೀನ ಫಲವನ್ನೂ ಕೊಡುವನು. ||೧೩||

**ಅವತರಣಿಕಾ :—**ಶ್ರೀಹರಿಯ ನಾಮೋಚ್ಚಾರಣೆ ಮಹಿಮಾ ಬಣ್ಣಿಸುತ್ತಾರೆ. ಹರಿನಾಮೋಚ್ಚಾರವಾದರೂ ವಿಷ್ಣುಭಕ್ತಿಪುರಸ್ಸರವಾಗಿರಬೇಕು. ಹರಿಯು ತನ್ನ ಭಕ್ತರಿಗೆ ಇಂಥ ಸುಬುದ್ಧಿ ಪಾಲಿಪನು.

**ಬಿಟ್ಟಿಗಳ ನೆವದಿಂದಡಾಗಲಿ |**
**ಪೊಟ್ಟೆಗೋಸುಗವಾದಡಾಗಲಿ |**
**ಕೆಟ್ಟರೋಗ ಪ್ರಯುಕ್ತವಾಗಲಿ ಅಣಕದಿಂದೊಮ್ಮೆ ||**
**ನಿಟ್ಟುಸಿರಿನಿಂ(ಲಿಂ) ಬಾಯ್ದೆರೆದು ಹರಿ |**
**ವಿಠ್ಠಲಾ ಸಲಹೆಂದೆನಲು ಕೈ |**
**ಗೊಟ್ಟು ಕಾವ ಕೃಪಾಳು ಸಂತತ ತನ್ನ ಭಕತರನು ||೧೪||**

**ಪದ್ಯಾರ್ಥ :—**ಬಿಟ್ಟಿಗಳ ನೆವದಿಂದಡಾಗಲಿ=ಮನಸ್ಸಿಲ್ಲದೆ ಮಾಡಿದ ಕೆಲಸ, ಅಥವಾ ಸಂಬಳವಿಲ್ಲದೆ ಬಲಾತ್ಕಾರದಿಂದ ಮಾಡಿದ ಕೆಲಸ, ಮನಸ್ಥಿರವಿಲ್ಲದೆ ನಾವು ಉಚ್ಚರಿಸಿದರೂ, ಮತ್ತು ಪೊಟ್ಟೆಗೋಸುಗವಾದಡಾಗಲಿ=ಹೊಟ್ಟೆ ತುಂಬುವಗೋಸುಗ ವೇಷ ಧರಿಸಿ ನಾವು ನುಡಿಮುದಾದರೂ, ಅಥವಾ ಕೆಟ್ಟ ರೋಗ ಪ್ರಯುಕ್ತವಾಗಲಿ=ನಾನಾ ತರದ ಕೆಟ್ಟ ಜೇನೆ ಉಪದ್ರವಗಳು ಬಂದಾಗ್ಗೆ ಸಂಕಟ ಬಂದಾಗ್ಗೆ ಸಂಕಟರಮಣನೆಂದು ಉಚ್ಚರಿಸುವದು, ಅಣಕದಿಂದೊಮ್ಮೆ=ಹಾಸ್ಯ, ಕುಚೋದ್ಯದಿಂದ ಒಮ್ಮೆಯಾದರೂ, ಹೀಗೆ ನಾನಾ ತರದಿಂದ ಭಕ್ತಿರಹಿತನಾದಾಗ್ಯೂ ಎಂಬುವ ಅರ್ಥ, ಇಂತಹ ವ್ಯಾಳ್ಯಗಳಲ್ಲಿ, ನಿಟ್ಟುಸಿರಿನಿಂ=ಉದ್ದವಾದ ಉಸಿರು ಬಿಡುವುಯುಲ್ಲದಿಂದ ಉಸಿರು ಬಿಡದೇ ಬಾಯ್ದೆರದು=ಬಾಯನ್ನು ತೆರೆದು, ಒಂದೇ ದೀರ್ಘವಾದ ಉಸಿರಿನಿಂದ, ಹರಿ ವಿಠ್ಠಲಾ ಸಲಹೆಂದೆನಲು=ಹರಿ ಬಿಂಬನಾಮಕ ಪಾಪಪರಿಹಾರಕನಾದ ಹರಿಯೇ ವಿಠ್ಠಲ=ಅಜ್ಞರನ್ನು ಸುಜ್ಞಾನಮಾರ್ಗಕ್ಕೆ ಹಚ್ಚಿ ಸಾಧನ

ಮಾಡಿಸುವ ಧೊರೆಯೇ, ಸಲಹೆಂದೆನಲು=ಕಾಪಾಡು, ರಕ್ಷಿಸು ಎಂದು ಎನ್ನಲು, ತನ್ನ ಭಕತರನ್ನು=ಸ್ವಕೀಯವಾದ ನಿಜ ಭಕ್ತರನು, ಕೃಪಾಳು= ಕರುಣಾಮಯನಾದ ಹರಿಯು, ಸಂತತ ಕೈಗೊಟ್ಟು ಕಾವ=ನಿರಂತರದಲ್ಲಿ ಕೈಹಿಡಿದು=ಕರಾವಲಂಬನವಿತ್ತು ಸಂರಕ್ಷಿಸುವನು. ಇದು ಕೇವಲ ಭಕ್ತಿ ರಹಿತವಾದ ಕಾಲದಲ್ಲಿ ನಾಮೋಚ್ಚರಿಸಿದ ಕಾಲಕ್ಕೂ, ತನ್ನ ನಿಜವಾದ ಭಕ್ತರ ಮನಸ್ಸು ಅಂತರಂಗದಿ ಹರಿಯಲ್ಲೇ ಬೆರೆದಿರುವ ಕಾರಣ ಬಹಿರಂಗವಾದ ಬಿಟ್ಟಿ ಪೊಟ್ಟೆಗೋಸುಗ ಕೆಟ್ಟ ರೋಗಾದಿಗಳ ಕಾಲ, ಅಣಕವಾದಾಗ್ಯೂ, ಅಪರಾಧ ಸಹಿಸಿ ಕಾಯುವನು, ಹರಿನಾಮೋಚ್ಚಾರ ಮಹಿಮೆ ಇದು. ಅಭಕ್ತರ ವಿಷಯವಲ್ಲ.

**ಭಾವಸೂಚನ**॥ಬಿಟ್ಟೀತಿ=ಸಂಬಳ ಕೊಡದೇ ಬಲಾತ್ಕರಿಸಿ ಮಾಡಿಸಿದರೂ ಸರಿ ॥ ಅಣಕ=ಅಣಕಿಸೋಣ ॥ ನಿಟ್ಟುಸುರು=ಉದ್ದವಾಗಿ ಬಿಡುವ ಉಸರು ॥೧೪॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸರ್ವಥಾಽಘಹರಂ ವಿಷ್ಣೋಃ ನಾಮ ತದ್ಭಕ್ತಿಪೂರ್ವಕಮ್ ॥ಅಭಕ್ತ್ಯೋ ಪಾಹೃತಂ ನೈವ ಫಲದಾತೃ ಭವಿಷ್ಯತಿ" ॥ ಇತ್ಯಭಿಪ್ರೇತ್ಯ ಅರ್ಥವಾದ ಮಾಹ 'ಬಿಟ್ಟಿ' ಇತಿ ॥ 'ಅಣಕ' ಪರಿಹಾಸ ॥ ನಿಟ್ಟುಸುರು' ಗಟ್ಟಿಯಾಗಿ ॥೧೪॥

## ಕನ್ನಡಾರ್ಥ

"ವಿಷ್ಣುಭಕ್ತಿಪುರಃಸರವಾಗಿ ಉಚ್ಚರಿಸಲ್ಪಡುವ ಶ್ರೀಹರಿನಾಮವು ಎಲ್ಲ ಪಾಪಗಳನ್ನು ಅಪಹರಿಸುತ್ತದೆ. ಭಕ್ತಿಯಿಲ್ಲದೇ ಉಚ್ಚರಿಸಲ್ಪಡುವ ಆ ಹರಿ ನಾಮವು ಫಲಕಾರಿಯಾಗುವುದೇ ಇಲ್ಲ." ಎಂಬ ಅಭಿಪ್ರಾಯದಿಂದ ಅರ್ಥ ವಾದವನ್ನು ಹೇಳುತ್ತಾರೆ 'ಬಿಟ್ಟಿ' ಎಂಬ ಪದ್ಯದಿಂದ. ॥೧೪॥

**ಅವತರಣಿಕಾ :—**ಹಿಂದಿನ ಪದ್ಯದಲ್ಲಿ ಕೇವಲ ಅರ್ಥವಾದವೆಂದೇ ಭಾಸವಾದೀತೆಂದು ಪುನಃ ಪುನಃ ದಾರ್ಢ್ಯಾರ್ಥವಾಗಿ ಶ್ರೀಹರಿನಾಮಕೀರ್ತನೆ ಮಹಿಮಾ ಬಣ್ಣಿಸುತ್ತಾರೆ ಈ ಪದ್ಯದಿಂದ. ಶ್ರೀ ಹರಿ ಗುಣಕ್ರಿಯಾಸಹಿತ ಭಕ್ತರ ಉಪಾಸನೆಗೆ ಮೆಚ್ಚುವ.

**ಈ ವಸುಂಧರೆಯೊಳಗೆ ಶ್ರೀಭೂ।**
**ದೇವಿಯರಸನ ಸುಗುಣ ಕರ್ಮಗ।**
**ಳಾವ ಬಗೆಯಿಂದಾದಡಾಗಲಿ ಕೀರ್ತಿಸಿದ ನರರ॥**
**ಕಾವ ಕಮಲದಳಾಯತಾಕ್ಷ ಕೃ।**
**ಪಾವಲೋಕನದಿಂದ ಕಪಿ ಸು।**
**ಗ್ರೀವಗೊಲಿದಂದದಲಿ ಪೊರೆದಭಿಲಾಷೆ ಪೂರೈಪ ॥೧೫॥**

**ಪದ್ಯಾರ್ಥ :**—ಈ ವಸುಂಧರೆಯೊಳಗೆ= ಈ ಭೂಲೋಕದಲ್ಲಿ, ಸಾಧನ ಮಾಡತಕ್ಕ ಭಕ್ತ ಜನರು, ಅಥವಾ ಭೂಲೋಕದಲ್ಲಿ ಅವತರಿಸಿ ಭಗವದನುಜ್ಞೆಯಿಂದ ಕಾರ್ಯಸಾಧಕರಾದ ದೇವಾಂಶರು, ಶ್ರೀಭೂದೇವಿ ಯರಸನ=ಶ್ರೀದೇವಿಯರು, ಶ್ರೀ ಭೂದೇವಿಯರ ಒಡೆಯನಾದ ಶ್ರೀಭೂ ಆಲಿಂಗಿತನಾದ ಬಿಂಬರೂಪಿಯ, ಸುಗುಣ=ಜ್ಞಾನಾನಂದಾದಿ ಅನೇಕ ಸುಗುಣಗಳನ್ನೂ, ಕರ್ಮಗಳ=ರಾಮಕೃಷ್ಣಾದಿ ಅವತಾರಗಳಲ್ಲಿ ಭಕ್ತರಿ ಗೋಸುಗ ಮಾಡಿದ ಅನೇಕ ಚರಿತ್ರ ರೂಪ ಕ್ರಿಯಾದಿಗಳನ್ನೂ, ಆವ ಬಗೆ ಯಿಂದಡಾಗಲಿ=ಯಾವ ಬಗೆ ರೀತಿಯಿಂದಾಗಲಿ, "ಸಾಂಕೇತಿಕ ಪರಿಹಾ ಸ್ಯೇನ ವಾ" ಕೀರ್ತಿಸಿದ ನರರ=ಕೀರ್ತನೆ ಮಾಡುವ ಸ್ತೋತ್ರ ಗೈದು ಪಾಡುವ ಮನುಜರನ್ನು, ಕಾವ ಕಮಲದಳಾಯತಾಕ್ಷ=ಕಮಲದಂತೆ ವಿಸ್ತೃತವಾದ ನೇತ್ರವುಳ್ಳ ಪ್ರಸನ್ನ ಕರುಣಾದೃಷ್ಟಿಯುಳ್ಳ ಹರಿಯು, ಕಾವ=ಕಾಪಾಡುವ ಸಂರಕ್ಷಿಸುವನು, ಹೇಗೆಂದರೆ ಹಿಂದೆ ಕಪಿ ಸುಗ್ರೀವಗೊಲಿದಂದದಲಿ=ರಾಮಾವ ತಾರ ಕಾಲದಲ್ಲಿ ಕೋತಿಗಳ ಕುಲದಲ್ಲಿ ಅವತರಿಸಿದ ದೇವಾಂಶ ಸೂರ್ಯಾಂಶ ಸುಗ್ರೀವನೆಂಬ ಕಪಿಗೆ, ಶ್ರೀಹನುಮಂತನೆಂಬ ವಾಯುಕಪಿ ಅನುಗ್ರಹದಿಂದ ರಾಮಕೃಪೆ ಸಖ್ಯವಾಗಲು, ಆ ಸುಗ್ರೀವನಿಗೆ ಪೊಲಿದು ಕಪಿರಾಜ್ಯವನ್ನು ಪಾಲಿಸಿದಂತೆ, ಯಾವ ರೀತಿಯಿಂದಾದರೂ, ಗುಣ ಕರ್ಮ ಕೀರ್ತನೆಮಾಡುವ ನರನನ್ನು ಕಾಯುವನೆಂದು ಶ್ರೀಹರಿಯ ಕಾರುಣ್ಯ ಬಣ್ಣಿಸಿದ್ದಾರೆ.

**ಭಾವಸೂಚನ ॥** ಈ ವಸುಂಧರೇತಿ ॥ ೧೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"**ಈ**" ಇತಿ ॥ "ಸುಗ್ರೀವ" ಇತಿ ಸ್ಫುಟಮ್ ॥೧೫॥

## ಕನ್ನಡಾರ್ಥ

ಸುಗ್ರೀವನಿಗೆ ಶ್ರೀರಾಮನು ಒಲಿದು ಅನುಗ್ರಹಿಸಿದ ಕಥೆಯು ಸುಪ್ರಸಿದ್ಧವೇ ಆಗಿರುತ್ತದೆ. ||೧೫||

**ಅವತರಣಿಕಾ :—** ಬಿಂಬರೂಪಿಯಾದ ಹರಿಯು, ಜೀವರ ಸೃಷ್ಟ್ಯಾರಂಭಿಸಿ, ಪ್ರಾರಬ್ಧ ತೀರುವವರೆಗೆ ಎಷ್ಟು ಸ್ಥೂಲದೇಹಗಳು ಕೊಡುವನೋ, ಅಷ್ಟು ಸ್ಥೂಲದೇಹದೊಡನೆ ಕಾರ್ಯ ನಡೆಸಲು ಪ್ರಾದುರ್ಭೂತನಾಗಿ ಸಕಲ ಮನೋರಥವಾದ ಮುಕ್ತಿಯನ್ನೀವನೆಂದು ಹೇಳುತ್ತಾರೆ.

**ಚೇತನಂತರ್ಯಾಮಿ ಲಕ್ಷ್ಮೀ।**<br>
**ನಾಥ ಕರ್ಮಗಳನುಸರಿಸಿ ಜನಿ।**<br>
**ತೋಥ ವಿಷ್ಣೋ ಎಂಬ ಶ್ರುತಿ ಪ್ರತಿಪಾದ್ಯ ಯೆಮ್ಮೊಡನೆ॥**<br>
**ಜಾತನಾಗುವ ಜನ್ಮರಹಿತಾ।**<br>
**ಕೂತಿ ನಂದನ ಭಕ್ತರಿಂದಾ।**<br>
**ಹೂತನಾಗಿ ಮನೋರಥವ ಬೇಡಿಸಿಕೊಳದೆ ಈವ॥೧೬॥**

**ಪದ್ಯಾರ್ಥ :—** ಚೇತನಾಂತರ್ಯಾಮಿ=ಸಕಲ ಜೀವರುಗಳ ಅಂತರ್ಯಾಮಿಯಾದ ಬಿಂಬರೂಪಿ ಹರಿಯು, ಜೀವರುಗಳ ಸೃಷ್ಟ್ಯಾರಂಭಿಸಿ, ಲಿಂಗ, ಅನಿರುದ್ಧ ಪ್ರಾಕೃತದೇಹಗಳ ಕಾರ್ಯ ನಡೆಸುವನಲ್ಲದೆ, ಮುಂದೆ ಸ್ಥೂಲಶರೀರಕೊಟ್ಟು ಸಾಧನ ಮಾಡಿಸಲು, ಸ್ಥೂಲ ಶರೀರದ ಪ್ರತಿಯೊಂದು ಅಂಗ ಉಪಾಂಗ ಅವಯವಗಳ ನಿರ್ಮಾಣ ಮಾಡುವ ಕಾಲದಲ್ಲಿಯೂ, ಆಯಾ ಅಂಗಾಂಗಗಳಲ್ಲಿಯೂ ಇದ್ದು ಸರ್ವಾಂಗ ರಚನಾ ಮಾಡಿ, ಸ್ಥೂಲ ಶರೀರ ಅಸ್ತಿತ್ವಕ್ಕೂ ತಾನಾಗಿದ್ದು. ಲಕ್ಷ್ಮೀನಾಥ=ಶ್ರೀಹರಿಯು ತಾನೊಬ್ಬನಲ್ಲ, ನಿತ್ಯಾವಿಯೋಗಿನಿಯಾದ ಶ್ರೀಲಕ್ಷ್ಮೀದೇವಿಯಿಂದ ಕೂಡಿದ ಬಿಂಬನಾದ ಹರಿಯು, ಕರ್ಮಗಳನುಸರಿಸಿ=ಜೀವರುಗಳ ಅನಾದಿಕರ್ಮಗಳ ಅನುಸಾರವಾಗಿಯೇ ಸತ್ಯಸಂಕಲ್ಪನು, ತನ್ನ ಒಂದು ಸಂಕಲ್ಪ ವಿಶೇಷದಂತೆ ತಾನು ಜನ್ಮರಹಿತನಾದಾಗ್ಯೂ=ಶ್ರೀಹರಿಗೆ ಜನನಾದಿಗಳು ಇಲ್ಲವಾದರೂ, ಯೆಮ್ಮೊಡನೆ ಜಾತನಾಗುವ=ನಮ್ಮ ಸ್ಥೂಲದೇಹದೊಡನೆ ಪ್ರಾದುರ್ಭೂತನಾಗುವ, ಜನಿ

=ಪ್ರಾದುರ್ಭಾವವೆಂದು ಹೇಳಿದೆ. ಎಲ್ಲೆಂದರೆ 'ಜನಿತೋಽಥ ವಿಷ್ಣೋಃ' ಎಂಬೋ ಶ್ರುತಿಪಾಠ್ಯನಾಗಿ='ಜನಿತೋಽಥ ವಿಷ್ಣೋಃ' 'ಅಜಾಯಮಾನೋ ಬಹುಧಾ ವ್ಯಜಾಯತ' ಎಂಬ ಶ್ರುತಿಗಳಲ್ಲಿ ಹೇಳಿದಂತೆ ನಮ್ಮ ಸ್ಥೂಲದೇಹದೊಡನೆ ಶ್ರೀಹರಿಯ ಜನನ ಪ್ರಾದುರ್ಭಾವವೆಂದು ಐತರೇಯಶ್ರುತಿಯಲ್ಲಿ ಶ್ರೀಹರಿಗೆ ಪ್ರಥಮ ದ್ವಿತೀಯ ಜನ್ಮವೆಂದು ಹೇಳಿದೆ. ಶ್ರೀಹರಿಯು ಯಾವ ರೂಪ ನಾಮದಿಂದ ಪ್ರಾದುರ್ಭಾವನಾಗುವನೆಂದರೆ ಆಕೂತಿ ನಂದನ=ಯಜ್ಞನಾಮಕ ಪರಮಾತ್ಮ, ಯಜ್ಞ='ಯದ್ವಿಧತ್ತೇ ಯಜ್ಞಾನಾತೀತಿ ಯಜ್ಞಃ ಸರ್ವಜ್ಞಾತ್ ಪುರುಷೋತ್ತಮಾತ್ ಇತಿ' (ವಿದ್ಯಾಧಿರಾಜೀಯ) ಇಂತಹ ಯಜ್ಞರೂಪವಾದ ಕಾರ್ಯದಲ್ಲಿ ಭಕ್ತರಿಂದ ಆಹೂತನಾಗಿ=ತನ್ನ ನಿಜ ಭಕ್ತರಾದಿ ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥಿತನಾಗಿ ಬ್ರಹ್ಮಾದಿದೇವತೆಗಳೊಡನೆ, ಎಮ್ಮೊಡನೆ ಪ್ರಾದುರ್ಭಾವನಾಗುವನು, ಬೇಡಿಸಿಕೊಳದೆ=ಗರ್ಭದಲ್ಲಿ ಜೀವನು ಅಜ್ಞದಶೆಯಲ್ಲಿರುವನಾದುದರಿಂದ ಅವನಿಂದ ಪ್ರಾರ್ಥಿಸಿಕೊಳದೇ ದೇವತೆಗಳ ಪ್ರಾರ್ಥನೆಯಿಂದ ಅವನ ಕರ್ಮಾನುಸರಿಸಿ ದೇಹಕೊಟ್ಟು ತಾ ನಿಂದು, ಸಾಧನ ಮಾಡಿಸಿ, ಮನೋರಥವೀವ=ಭಕ್ತರ ಮನೋಬಯಕೆಯನ್ನು ಕೊಡುವನು.

**ವಿಶೇಷ ಸೂಚನೆ :—** ಇದೇ ವಿಷಯವನ್ನು ಶ್ರೀವಿಷ್ಣುತೀರ್ಥಪೂಜ್ಯಪಾದರು ಷೋಡಶಿ ಗ್ರಂಥ ಸ್ಥೂಲಶರೀರ ೫ನೇ ಪ್ರಕರಣದಲ್ಲಿ ಹರಿಯ **ಪ್ರಾದುರ್ಭಾವ ಹೇಳುತ್ತಾರೆ.**

(೧) ತತಃ ಪುರುಷಸ್ಥೋ ಭಗವಾನ್ ಪ್ರದ್ಯುಮ್ನೋ ರೇತಸ್ಸ್ಥಂ ಸಜೀವಂ ಸಂಕರ್ಷಣಾಖ್ಯಸ್ವರೂಪಂ ರೇತಸಾ ಸಹ ಸ್ತ್ರಿಯಮ್ ಸಿಂಚತಿ॥ **ತದೇ** ತದ್ಭಗವತೋ ಹರೇಃ **ಪ್ರಥಮಂ ಜನ್ಮೇತ್ಯುಚ್ಯತೇ** ಪೂರ್ವಸ್ಮಾತ್ಸ್ಥಾನಾತ್ ಸ್ಥಾನಾಂತರಂ ಪ್ರತಿ ಗತತ್ವಾತ್ ॥

(೨) ಅಥ ಮಾತೃಸ್ಥೋ ಭಗವಾನನಿರುದ್ಧೋ ರೇತಸಾ ಸಹ ಗತಂ **ಸಜೀವಂ** ಸಂಕರ್ಷಣಾಖ್ಯಸ್ವರೂಪಂ ಬಿಭರ್ತಿ ॥ ಸಂಕರ್ಷಣಾಧಿಷ್ಠಿತ ಮಹಿಮ್ನೈಕ ರಾತ್ರೇಣ ಕಲಿಲಂ ಭವತಿ॥

ಇತ್ಯಾರಭ್ಯ ಸೂತಿಕಾವಾಯುತಾಡನೇ ಪ್ರಸವಪರ್ಯಂತಂ ಗರ್ಭೇ **ಸ್ಥೂಲ**ಶರೀರಾಂಗೋಪಾಂಗೇ ಸ್ವಯಂ ಸಂಕರ್ಷಣರೂಪೇ ಸೃಷ್ಟ್ವಾ ನವ

ಮಾಸ ಪೂರಿತೇ ಸತಿ ಸೂತಿವಾತಾಖ್ಯೇನ **ಸ್ವಾಂಶೇನ ಗರ್ಭಂ** ಮಾತುರುದರಾದ್ಬಹಿರ್ನಿಷ್ಕಾಸಯಾಮಾಸ।ತದ್ವಾಯುವೇಗಾತಿಶಯೇನ ಗರ್ಭಸ್ಥೋ ಜೀವೋ ಗರ್ಭಕೋಷ್ಠಂ ವಿಹಾಯ ಕ್ರಮಾದಧೋ ಗಚ್ಛನ್ ಯೋನಿದ್ವಾರಮಾಗತ್ಯೇಕ್ಷುರ್ಯಂತ್ರಾದಿವ ಯೋನೇರ್ನಿಗಚ್ಛನ್ನತಿಶ್ರಾಂತೋ ಭೂಮ್ಯಾಂ ಪತಿತಃ ಕ್ಷಣೇನ ಬಾಹ್ಯವಾಯುಸ್ಪರ್ಶೇನ ಕಿಂಚಿದ್ವಿಶ್ರಾಂತಃ ಸಜೀತನೋ ಭವತಿ ॥ **ತದೇತದ್ಭಗವತೋ ಹರೇಃ ದ್ವಿತೀಯಂ ಜನ್ಮೇತ್ಯುಚ್ಯತೇ ॥**

(೩) ಪೂರ್ವವದೇವ ಪೂರ್ವಸ್ಮಾತ್ಸ್ಥಾನಾಂತರಂ ಪ್ರತಿ ಗತತ್ವಾತ್ ಏವಂ ಪಿತೃಸ್ಥೋ ಭಗವಾನ್ ಪ್ರದ್ಯುಮ್ನೋ ಜೀವಕರ್ಮಕಾರಣಾದ್ಯೈ ತದ್ರೂಪಂ ನಿಧಾಯಾಪಿ ಮರಣಾನಂತರಂ ಪಿತುರನ್ಯಜನನೇ ಪಿತ್ರಾ ಸಹ ಸ್ವಯಮಪಿ ಯಜ್ಞಾಯತೇ ॥ **ತದೇತದ್ಭಗವತೋ ಹರೇಸ್ತೃತೀಯಂ ಜನ್ಮೇತ್ಯುಚ್ಯತೇ ॥** ಇತ್ಯನುಸಂಧೇಯಮ್ ॥ ಇತ್ಯಾದಿ ಇಂತು ಪಿತೃ ರೇತೋದ್ವಾರಾ ಮಾತೃಗರ್ಭಕ್ಕೆ ಬರುವದು–ಶ್ರೀಹರಿಗೆ **ಮೊದಲನೇ ಜನಿ ಪ್ರಾದುರ್ಭಾವ.** ಮಾತೃಯೋನಿಯಲ್ಲಿ ನವಮಾಸ ಇದ್ದು ಭೂಮಿಯಲ್ಲಿ ಜನಿಸಿದ ಜೀವನೊಡನೆ ಪ್ರಾದುರ್ಭವನಾಗುವದು ಶ್ರೀಹರಿಗೆ ಎರಡನೇ ಜನ್ಮ. ಪುನಃ ಮರಣಾನಂತರ ಅನ್ಯಪಿತೃ ರೇತಃ ಪ್ರವೇಶ ಜೀವನನ್ನು ಮಾಡಿಸುವದು ಹರಿಗೆ ಮೂರನೇ ಜನ್ಮವೆಂದು ಹೇಳಿದ್ದಾರೆ. ಇದೇ ಯಜ್ಞ ಅನುಸಂಧಾನ ಮಾಡುವದು. ಶ್ರೀಹರಿಗೆ ಜನ್ಮವಿಲ್ಲವಾದರೂ ಎಲ್ಲೊಡನೆ ಜಾತನಾಗುವನೆಂಬ ಶ್ರುತಿ ಅರ್ಥವನ್ನು ವಿಶದೀಕರಿಸಿದ ಜ್ಞಾನಿಗಳ ಪಾದಕ್ಕೆ ನಮೋ ನಮಃ. ಇನ್ನು ಯಾವ ರೂಪದಿಂದ ಪ್ರಾದುರ್ಭಾವನಾಗುವನೆಂಬುದು ವಿಚಾರಾಂಶವಾಗಿದೆ. ದಾಸರಾಯರು ಆಕೂತಿನಂದನ, ಆಕೂತಿದೇವಿಯಲ್ಲಿ ಅವತರಿಸಿದ ಯಜ್ಞನಾಮಕ ಹರಿಯೆಂದು ಬಹು ರಹಸ್ಯವಾಗಿ ಹೇಳಿದ್ದಾರೆ.

ಇದನ್ನೇ ವಿಷ್ಣುತೀರ್ಥರು ವಿಶದೀಕರಿಸಿದ್ದಾರೆ. "ಅತ್ರ ನ ಕೇವಲಂ ಭಗವಾನ್ ಸ್ವಯಮೇವಾಜಾಯತ **ಕಿನ್ನಾಮ ಪ್ರಜಾತ್ಮಕಂ ಪುರುಷಾಖ್ಯಂ ಯಜ್ಞಂ ಚ ಜನಯಾಮಾಸೇತಿ ಸ್ವಸ್ಮಿನ್ ಭಗವತ್ಪ್ರಜಾತ್ಮಕ ಯಜ್ಞರೂಪತ್ವಂ ಚಾನುಸಂಧೇಯಮ್**॥ಯಜ್ಞರೂಪಾರ್ಥವು ವಿದ್ಯಾಧಿರಾಜರು ವಿವರಿಸಿದಂತೆ ಪದ್ಯಾರ್ಥದಲ್ಲಿ ವಿವರಿಸಿ ದಾಸಾರ್ಯರು

ಬರೆಸಿದ್ದಾರೆ. ಇಂತಹ ಸೂಕ್ಷ್ಮಜ್ಞಾನವಿತ್ತು ಬರೆಸಿ ಆನಂದವಿತ್ತರು ದಾಸರು. ಈ ಪ್ರಕಾರ ಸಮಿಾಚೀನವಾಗಿ ಅರ್ಥ ತಿಳಿಯುವದೆ ಮುಖ್ಯ. ಟೀಕಾಕಾರರ ವಿವರ ದಾಸರ ಹೃದಯ. ದಾಸರ ಅನುಗ್ರಹದಿಂದಲೇ ಜ್ಞಾನ ವಾಗಬೇಕು, ಇಷ್ಟು ಸವಿಸ್ತರ ಬರಿಸುವಾಗ್ಗೆ ಆನಂದವಿತ್ತ ದಾಸರ ಕರುಣ.

**ಭಾವಸೂಚನ ||** ಚೇತನೇತಿ || ಜನಿತೇತಿ" ಶ್ರುತಿಯಲ್ಲಿ ಪರಮಾತ್ಮನು ಹುಟ್ಟುತ್ತಾನೆ ಯೆಂತ ತೋರುತ್ತದೆ. ಅದು ನಾವು ಹುಟ್ಟಿದರೆ ನಮ್ಮಲ್ಲಿದ್ದ ಭಗವದ್ರೂಪವು ಪ್ರಾದುರ್ಭೂತವಾಗುತ್ತದೆ || ಆಕಾಶಾದಿ ಸೃಷ್ಟಿಯಂತೆ ಅದಕ್ಕೆ ಉತ್ಪತ್ತಿ ಮುಖ್ಯವಲ್ಲ || ಆಕೂತಿನಂದನ=ಯಜ್ಞನಾಮಕ ||೧೬||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಚೇತನ' ಇತಿ || 'ಹರೇಃ' 'ಜನಿತಾ' 'ಜನಿತಃ' ಇತ್ಯುಚ್ಯತೇ ಇತಿ ಸಮಾಶಂಕ್ಯ, 'ವಿಷ್ಣು' ಇತಿ ಯಜ್ಞಸ್ಯ ಯಜಮಾನಸ್ಯ ವಾ ನಾಮ" ಇತಿ ಸುಧೋಕ್ತ್ಯಾ ತದರ್ಥಸ್ಯ ಪ್ರಕೃತೇಽಯೋಗಾತ್ "ಕಥಮೇತತ್ ಪ್ರಥಮಂ ಜನ್ಮ ದ್ವಿತೀಯಂ ಜನ್ಮ ತದ್ಧರೇಃ ಇತಿ ಮಹಿದಾಸಭಾಷ್ಯಂ ಅಭಿಪ್ರೈತಿ || ಇಯಂ ಅಪರಾವೃತ್ತಿಃ || 'ನಂದನಃ' ಯಜ್ಞಃ || 'ಈವ' 'ಧ್ರುವಾದೇಃ' ||೧೬||

## ಕನ್ನಡಾರ್ಥ

'ಜನಿತೋಥ ವಿಷ್ಣೋಃ' ಎಂಬ ಶ್ರುತಿಯಲ್ಲಿ 'ವಿಷ್ಣುವಿಗೂ ಸಹ ಜನನ ವಿದೆಯೆಂದು ಹೇಳಿದೆಯಲ್ಲ?' ಎಂದು ಆಶಂಕಿಸಿ, ಶ್ರೀಮನ್ನ್ಯಾಯ ಸುಧೆಯಲ್ಲಿ 'ವಿಷ್ಣು ಶಬ್ದಕ್ಕೆ ನಾರಾಯಣನೆಂದು ಅರ್ಥವಲ್ಲ, ಯಜಮಾನ ಅಥವಾ ಯಜ್ಞ ವೆಂದು ಅರ್ಥ. ಆದುದರಿಂದ ನಾರಾಯಣನಿಗೆ ರುದ್ರಾದಿಗಳಂತೆ ಜನನವಿಲ್ಲ, ಎಂದು ಮುಂತಾಗಿ ಹೇಳಿರುತ್ತಾರೆ. ಸುಧೆಯಲ್ಲಿ ನಿರೂಪಿಸಿದಂತೆ ವಿಷ್ಣುವಿಗೆ ಜನ್ಮವಿಲ್ಲ. ಆದುದರಿಂದ ಐತರೇಯ ಭಾಷ್ಯದಲ್ಲಿ 'ತದಸ್ಯ ಪ್ರಥಮಂ ಜನ್ಮ' ಎಂದು ಮುಂತಾಗಿ ಪರಮಾತ್ಮನಿಗೆ ಜನ್ಮವನ್ನು ಹೇಳಿದುದು ಹೇಗೆ ಯುಕ್ತ ವಾಗುತ್ತದೆ?' ಎಂದು ಸಂಶಯವು ಮೂಡುತ್ತದೆ. ಆದರೆ 'ಜಾತೋ ಜಾತಃ' 'ಬಹುಧಾ ವಿಜಾಯತೇ' ಇತ್ಯಾದಿ ವಾಕ್ಯಗಳಲ್ಲಿ ಜನನವನ್ನೂ ಹೇಳಿರುತ್ತಾರೆ. ಆದುದರಿಂದ "ಜನಿತೋಥ ವಿಷ್ಣೋಃ" ಎಂಬ ಶ್ರುತಿಯಲ್ಲಿ

ಹೇಳುವ ಜನ್ಮ ಶಬ್ದಕ್ಕೆ ದೇಹಸಂಯೋಗ, ಅಭಿಮಾನ, ವಿಕಾರ, ಈ ಮುಂತಾದ ರೂಪವಾದ ಉತ್ಪತ್ತಿಯೆಂದು ಅರ್ಥ. ಇಂಥ ಜನ್ಮವು ನಾರಾಯಣನಿಗೆ ಇರುವುದಿಲ್ಲ. ಶುಕ್ಲಶೋಣಿತ ಸಂಪರ್ಕ ಮುಂತಾದುವು ಜನ್ಮವಿಲ್ಲವೆಂದು ಈ ಶ್ರುತಿಯು ಅಜಾಯಮಾನ ಎಂದು ಮುಂತಾದ ವಾಕ್ಯಗಳಿಗೆ ಅರ್ಥ. ಇಂಥ ಜನ್ಮವಿಲ್ಲವೆಂದು ಹೇಳಲು ವಿರೋಧ ಬಾರದಂತೆ "ಬಹುಧಾ ವಿಜಾಯತೇ, ಜಾತೋ ಜಾತಃ, ತದಸ್ಯ ಪ್ರಥಮಂ ಜನ್ಮ" ಎಂದು ಮುಂತಾದ ವಾಕ್ಯಗಳಲ್ಲಿ ಜನ್ಮ ಶಬ್ದಕ್ಕೆ "ಪ್ರಾದುರ್ಭಾವ", "ಅವತಾರ"ವೆಂದು ಅರ್ಥ ಮಾಡಬೇಕು. "ಪ್ರಾದುರ್ಭಾವೋ ಹರೇರ್ಜನಿಃ" ಎಂದು ಶ್ರೀಮದಾಚಾರ್ಯ ವಚನವಿದೆ. ಆದುದರಿಂದ 'ಜಾತನಾಗುವ' 'ಜನ್ಮರಹಿತ' ಈ ಎರಡು ವಾಕ್ಯಗಳಲ್ಲಿ ಪರಸ್ಪರ ವಿರೋಧವಿಲ್ಲ. "ಆಕೂತಿ ನಂದನ" ಯಜ್ಞ. 'ಬೇಡಿಕೊಳ್ಳದೆ ಈವ' ಎಂಬ ಮಾತು ಧ್ರುವ ಮುಂತಾದವರಲ್ಲಿ ಕಂಡುಬಂದ ಸಂಗತಿಯಾಗಿರುತ್ತದೆ. ॥೧೬॥

**ಅವತರಣಿಕಾ :**—ಹಿಂದಿನ ಪದ್ಯದಲ್ಲಿ ಶ್ರೀಹರಿಯೇ ಎಮ್ಮೊಡನೆ ಜಾತನಾಗಿ ದೇಹಧಾರನಾಗಿ ದೇಹಕಾರ್ಯ ನಡಿಸುವನಿರಲು, ದೇಹಾದಿಗಳು ಭಗವದಧೀನವೆಂದು ತಿಳಿದು ಮಮತಾಹಂಕಾರವನ್ನು ಜ್ಞಾನಿಯಾದವ ತ್ಯಜಿಸಿ ಅಪರೋಕ್ಷ ಜ್ಞಾನಿಯು ಚಿಂತಿಸುವ ರೂಪಗಳನ್ನು ಹೇಳುತ್ತಾರೆ.

**ವೃಷತು ಯೆನಿಸುವ ಮನುಜರೊಳು ಸುರ।**
**ಋಷಭ ಇಂದ್ರಿಯಗಳೊಳು ತತ್ತ್ವ।**
**ವಿಷಯಗಳ ಭುಂಜಿಸುತ ಹೋತಾಹ್ವಯನು ತಾನಾಗಿ॥**
**ವೃಷರಹಿತ ವೇದದೊಳು ಋತಸತು।**
**ಪೆಸರಿನಿಂದಲಿ ಕರೆಸುವ ಜಗ।**
**ತ್ರಸವಿತ ನಿರಂತರದಿ ಸಂತೈಸುವನು ಭಕತರನು ॥೧೭॥**

**ಪದ್ಯಾರ್ಥ :**—ಈ ಪದ್ಯದಲ್ಲಿ ಜಾತನಾದಾರಭ್ಯ ಜೀವನು ಜ್ಞಾನ ಪೊಂದಿ ಪ್ರಾರಬ್ಧಾವಸಾನ ಪರಿಯಂತರ ಮಮತಾದಿಗಳನ್ನು ನಿಶ್ಶೇಷವಾಗಿ ಬಿಡುತ್ತಾನೆ. "ದೇಹೇಂದ್ರಿಯಾದಿ ನೇತೃತ್ವ ಮುಕ್ತಿ ಪ್ರದತ್ವಗುಣಕಂ"

ಎಂದು ಕಾ. ಉ. ಖಂಡಾರ್ಥ=ಹರಿಯು ಜಾತನಾದ ಮೇಲಿಯೂ, ಸಕಲ ವಸ್ತುಗಳಲ್ಲಿದ್ದು ಕಾರ್ಯ ಮಾಡುವ ರೂಪ ಹೇಳುತ್ತಾರೆ. ನೃಷತು ಎನಿಸುವ ಮನುಜರೊಳು=ನೃಷು ಸೀದತೀತಿ ನೃಷತ್=ಮನುಜರಲ್ಲಿರುವನಾದುದ ರಿಂದ ಶ್ರೀಹರಿಗೆ ನೃಷತ್ ಎಂತಲೂ, ಸುರಋಷಭ=ಉತ್ತಮರಾದ ಬ್ರಹ್ಮಾದಿ ದೇವತೆಗಳಲ್ಲಿ ಋಷಭ=ಶ್ರೇಷ್ಠನೆಂದರೆ ವರಸತ್ ನಾಮದಿಂದಲೂ, ವರೇಷು ಬ್ರಹ್ಮಾದಿದೇವೇಷು ಸೀದತೀತಿ ವರಸತ್" ನಾಮಕ್ಕೆ ದಾಸಾರ್ಯರು ಸುರಋಷಭನೆಂತ ಸಾರ್ಥಕ್ಯ ಪದಪ್ರಯೋಗ ಮಾಡಿದ್ದಾರೆ. ಇಂದ್ರಿಯ ಗಳೊಳು ತತ್ತದ್ವಿಷಯಗಳ ಭುಂಜಿಸುತ ಹೋತಾಹ್ವಯನು ತಾನಾಗಿ= "ಜುಹೋತಿ ಶಬ್ದಾದಿ ವಿಷಯಾನ್ ಅನುಭವತೀತಿ ಇಂದ್ರಿಯಾದಿಸ್ಥಃ॥ ಹೋತಾ ॥ ಶ್ರೋತ್ರಾದಿ ಆಯಾ ಇಂದ್ರಿಯಗಳ ಶಬ್ದಾದಿ ಸ್ಪರ್ಶ, ರೂಪ, ರಸ, ಗಂಧಾದಿ ವಿಷಯಗಳನ್ನು, ಹೋತಾ ನಾಮಕನಾಗಿ ತಾನು ತನ್ನ ಸ್ವಾಖ್ಯರಸಗಳನ್ನು ಭುಂಜಿಸುತ್ತ ಜೀವರಿಗೆ ಆ ಇಂದ್ರಿಯಾಭಿಮಾನಿಗಳ ದ್ವಾರಾ ವಿಷಯಗಳನ್ನು ಅನುಭವಕ್ಕೆ ತಂದೀವನಾದುದರಿಂದ ಹೋತಾ ನೃಪರಹಿತ ವೇದದೊಳು=ಕಾಲತ್ರಯದಲ್ಲಿಯೂ ಅಪದ್ಧ ಸುಳ್ಳು ಇಲ್ಲದೇ ಸತ್ಯನಾದ ಜ್ಞಾನಪ್ರದ ವೇದಗಳಲ್ಲಿ, ಋತಸತ್ "ಋತೇ ಯಥಾರ್ಥರೂಪೇ ವೇದೇ ಸೀದತೀತಿ ಋತಸತ್" ಎಂಬುವ ಹೆಸರಿನಿಂದಲಿ ಕರೆಸುವ=ಮೇಲೆ ವಿವರಿಸಿದ ಈ ನಾಮಗಳಿಂದಲಿ ಕರೆಸುವನಾಗಿದ್ದಾನೆ. ಜಗತ್ಪ್ರಸವಿತ ನಿರಂತರದಿ="ಗುಣೈಸ್ತತಃ ಪ್ರಸವಿತಾ ವರಣೀಯಾನ್ ಗುಣೋನ್ನತೇಃ" ಎನ್ನುವ ಶ್ರೀಸರ್ವಜ್ಞರ ವಾಕ್ಯವನ್ನನುಸರಿಸಿ "ಗಾಯತ್ರೀ ಮಂತ್ರ ಪ್ರತಿಪಾದ್ಯ ಸ್ತ್ರೀರೂಪಿ ಹಯಶೀರ್ಷಕನು, ಹಯವದನ ಹರಿಯು, ನಿರಂತರದಿ=ನಿತ್ಯದಲ್ಲಿ ಭಕತರನು ಸಂತೈಸುವನು=ತನ್ನ ಭಕ್ತರಿಗೆ ಜ್ಞಾನವನ್ನು ಕೊಟ್ಟು ಕಾಪಾಡು ವನೆಂದು ಬಹು ರಹಸ್ಯ ಪದಪ್ರಯೋಗ ಮಾಡಿದ ಜ್ಞಾನಪಿತ್ತಮ ದಾಸರ ದಯವು.

ಹಂಸಶುಚಿಷತ್=ಎಂಬ ಶ್ರುತ್ಯರ್ಥಬೋಧಕ. ಹಂಸ ಮೊದಲು ಹದಿನೆಂಟು ರೂಪಗಳ ಸಂಸ್ಥಾನವ ತಿಳಿದು" ದಾಸರ ಉಕ್ತಿಯಂತೆ ಈ ಪದ್ಯ ದಲ್ಲಿ ೧ ನೃಷತ್ ೨ ವರಸತ್ ೩ ಹೋತಾ ೪ ಋತಸತ್ ನಾಲ್ಕು ರೂಪಗಳ ಕಾರ್ಯ ವಿವರಿಸಿದ್ದಾರೆ.

**ಭಾವಸೂಚನ :**—ನೃಷದಿತಿ ನೃಷು ಸೀದತಿ ವಸತೀತಿ ನೃಷತ್ ನೃಷದ್ವ್ಯಸದಿತಿ ಶ್ರುತೇಃ ॥೧೭॥

**ಸೂಚನೆ :** ಮುಂದೆ ೨೦ನೇ ಪದ್ಯದಲ್ಲಿ ಈ ೧೮ ರೂಪಗಳ ಕಾರ್ಯ ವನ್ನು ಶ್ರೀವ್ಯಾಸದಾಸಸಿದ್ಧಾಂತ ಕೌಮುದಿಕಾರರು ವಿಶದೀಕರಿಸಿದ್ದಾರೆ. ನೋಡಿ ಆನಂದ ಪಡುವದು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಹಂಸ ಮೊದಲು" ಇತಿ ಸಂಕ್ಷಿಪ್ಯೋಕ್ತಂ ವ್ಯನಕ್ತಿ 'ನೃಷತು' ಇತಿ ॥ 'ಜಗತ್ಪ್ರಸವಿತ' **"ಸವಿತಾ"** * ಓಂ * ಪನ್ಯತೇ ಗಿರ್ವಣಸ್ತೋಮೋ ಅಧ್ರಿಗುಃ ಸನೋ ಸಿಯುದ್ಭಿರಾಪೃಣ ಕಾಮಂ ವಾಜೇಭಿರಶ್ವಿಭಿಃ ಗೋಮದ್ಭಿರ್ಗೋಪತೇ ಧೃಷತ್ ॥ ಓಂ * ॥ ಕಾಮ್ಯಾಪತ್ಯಾದಿ ಪ್ರಸವಿತೃತ್ವಾತ್ ಸಃ ॥ ಸ 'ಮಸುಜ ರೊಳು' ಇದ್ದು ॥ ನೃಷ ಇತಿ ಋತ ಪದಾರ್ಥಃ ॥ 'ಜಗತ್' ಇತಿ ॥ ಸ್ತ್ರೀ ರೂಪಃ ಹಯಶೀರ್ಷಃ ಗಾಯತ್ರೀ ಪ್ರತಿಪಾದ್ಯಃ ಇತ್ಯನೇನ ತಂ ಮೂಲಂ ತದಭಿ ವ್ಯಕ್ತ ಸಪ್ತದಶಮೇಲನೇ ಅಷ್ಟಾದಶೇತಿ ॥ ಬೃಹತಾಷ್ಟಾದಶೇತಿ ಕೇಚಿತ್ ॥೧೭॥

## ಕನ್ನಡಾರ್ಥ

"ಹಂಸ ಮೊದಲು ಹದಿನೆಂಟು ರೂಪಗಳ" ಎಂಬುದಾಗಿ "ಫಲವಿದು ಬಾಳ್ದುದಕೆ" ಎಂಬ ಪದದಲ್ಲಿ ಸಂಕ್ಷಿಪ್ತವಾಗಿ ಹೇಳಿದುದನ್ನು ವಿವರಿಸುತ್ತಾರೆ 'ನೃಷತು' ಎಂಬ ಪದ್ಯದಿಂದ.

**"ಸವಿತ"** ಕಾಮ್ಯ ಪುತ್ರ ಮುಂತಾದವರನ್ನು ಹುಟ್ಟಿಸುವುದರಿಂದ 'ಸವಿತೃ' ಎನಿಸುತ್ತಾನೆ.

'ನೃಷದಹಿತ' ಎಂಬ ಪದವು 'ಹಂಸಃಶುಚಿಃ' ಮಂತ್ರದಲ್ಲಿರುವ ಋತ ಎಂಬ ಪದದ ಅರ್ಥವನ್ನು ಹೇಳುತ್ತದೆ.

"ಗಾಯತ್ರೀ ಪ್ರತಿಪಾದ್ಯನಾದ ಸ್ತ್ರೀರೂಪ ಹಯಶೀರ್ಷನು" ಇದರಿಂದ ಅಭಿವ್ಯಕ್ತವಾದ ೧೭ ರೂಪಗಳನ್ನು ಸೇರಿಸಿದರೆ ಹದಿನೆಂಟು ರೂಪಗಳಾಗು ವುವು. 'ಬೃಹತ್' ಎಂಬುದನ್ನು ಸೇರಿಸಿದರೆ ಹದಿನೆಂಟು ರೂಪಗಳೆಂದೂ ಕೆಲವರು ಹೇಳುತ್ತಾರೆ. ॥೧೭॥

**ಅವತರಣಿಕಾ :—** ಈಗ ಕ್ರಮೇಣ "ವ್ಯೋಮಸದಬ್ಜಾ, ಗೋಜಾ, ಅದ್ರಿಜಾ ಈ ನಾಲ್ಕು ರೂಪಗಳ ಇರುವಿಕೆಯು ಕಾರ್ಯ ವಿವರಣೆಯನ್ನು ಹೇಳುತ್ತಾರೆ. ||ಕಾಠಕ ಶ್ರುತಿಯಂತೆ||




**ಅಬ್ಜಭವಪಿತ ಜಲಧರಾದ್ರಿಯೊ।**
**ಳಬ್ಜ ಗೋಜಾದ್ರಿಜನೆನಿಸಿ ಜಲ।**
**ದುಬ್ಬಳೀ ಪೀಯೂಷ ದಾವರಿ ಶ್ರೀಶಶಾಂಕರೊಳು ॥**
**ಕಬ್ಬುಕದಳಿ ಲತಾತೃಣದ್ರುಮ।**
**ಹೈಬ್ಬಗೆಯ ಮಾಡುತಿಹ ಗೋಜನು।**
**ಇಬ್ಬಗೆ ಪ್ರತೀಕ ಮಣಿಮೃಗ ಸೃಜಿಪ ಅದ್ರಿಜನು ॥೧೮॥**

**ಪದ್ಯಾರ್ಥ :—** ಅಬ್ಜಭವಪಿತ=ಅಬ್ಜ ಕಮಲದಿಂದ ಹುಟ್ಟಿದ ಬ್ರಹ ದೇವರ ತಂದೆಯು, ಅಬ್ಜನಾಮದಿಂದ, ಕ್ರಮೇಣ ಜಲ, ಧರಾ, ಅದ್ರಿ, ಯೊಳಬ್ಧ ಗೋಜ, ಆದ್ರಿಜನೆನಿಸುತ್ತಾ, ಜಲದಿ ಅಬ್ಜನಾಮದಿಂದ "ಅಪ್ಸು ಜಾಯಂತ ಇತ್ಯಬ್ಜಾನಿ ತೇಷ್ವಾಸ್ತ ಇತ್ಯಬ್ಜಃ। ಜಲದಲ್ಲಿ ಉತ್ಪನ್ನವಾದ ಶಂಖ, ಶುಕ್ತಿ, ಮುತ್ತುಗಳು ಮೊದಲಾದ ಸಮಸ್ತ ಪದಾರ್ಥಗಳಲ್ಲಿರುವನ್ನು **ಅಬ್ಜನು** ॥ ಧರಾ=ಭೂಮಿಯಲ್ಲಿ ಉಂಟಾಗುವ ವ್ರೀಹಿಯವಾದಿಗಳಲ್ಲಿಯೂ, ಮತ್ತು ಗೋಜಾ=ಗೋಷು ಜಾತೇಷ್ವಾಸ್ತ ಇತಿ ಗೋಜನು=ಭೂಮಿಯಲ್ಲಿ ಪುಟ್ಟುವ ಪದಾರ್ಥಗಳಲ್ಲಿಯೂ, ಗೋವುಗಳಲ್ಲಿಯೂ **ಗೋಜ** ರೂಪದಿಂದ ಇರುವನು. "ಅದ್ರಿಷು ಜಾತೇಷು ಇತ್ಯದ್ರಿಜಾಃ॥ ಅಬ್ಜ=ಮೇಘ ಆಕಾಶಾದಿ "ವ್ಯೋಮಸತ್ ಪ್ರಕೃತಿಸ್ಥಃ। ವ್ಯೋತಪಸ್ಯಾಂ ಜಗದಿತಿ ಜಗದಾಧಾರಭೂತಾ ಶ್ರೀಃ ವ್ಯೋಮೇತ್ಯುಚ್ಯತೇ ॥" (ಕಾಠಕ ಖಂಡಾರ್ಥ) ಈ ಅಬ್ಜ, ಗೋಜಾ, ಅದ್ರಿಜಾ, ವ್ಯೋಮಸತ್, ನಾಲ್ಕು ಕ್ರಮಗಳಿಂದ ಕ್ರಮೇಣ ಜಲದುಬ್ಬಳಿ ಪೀಯೂಷ ದಾವರಿ=ಜಲದಿಂದ ಹೊರಡುವ ತೆರೆಗಳಲ್ಲಿ, ಪೀಯೂಷ ಅಮೃತದಲ್ಲಿ, ದಾವರಿ=ತಾವರೆ ಕಮಲಗಳು ನೀರಿನಿಂದ ಹುಟ್ಟುವ ವಸ್ತು ಗಳಲ್ಲಿ **ಅಬ್ಜನು.** ಮತ್ತು ಶ್ರೀಶಶಾಂಕರೊಳು ಅಬ್ಜ=ವ್ಯೋಮಸತ್ ಮೇಲೆ ವಿವರಿಸಿದಂತೆ ಶ್ರೀ ಲಕ್ಷ್ಮೀದೇವಿಯಲ್ಲಿ ಆಕಾಶಗತನಾದ ಶಶಾಂಕ ಮೊಲದ ಚಿಹ್ನೆಯುಳ್ಳ ಚಂದ್ರಮರಲ್ಲಿ ವ್ಯೋಮಸತ್, ಮತ್ತು ಭೂಮಿಯಲ್ಲಿ ಹುಟ್ಟತಕ್ಕ

ಕಬ್ಬು, ಕದಳಿ=ಬಾಳೆ, ಲತಾ=ಬಳ್ಳಿ, ತೃಣ=ಹುಲ್ಲು, ದ್ರುಮ=ಗಿಡಮರ ಗಳನ್ನು ಹೃಬ್ಬಗೆಯ ಮಾಡುತಿಹ **ಗೋಜನು**=ಗೋಜನಾಮಕನು, ಲತಾ ತೃಣಾದಿ ಸರ್ವಪದಾರ್ಥಗಳನ್ನು ಹೃಬ್ಬಗೆ ದೊಡ್ಡ ಬಗೆ ಎಂದರೆ ಬೆಳೆಸುವನು. ಇಬ್ಬಗೆ ಪ್ರತೀಕ=ಎರಡು ವಿಧವಾದ ವಸ್ತುಗಳನ್ನು ಅಂದರೆ ಮೂರ್ತಿಮಣಿ= ಜಡಮೂರ್ತಿ, ಅದ್ರಿಪರ್ವತಗಳಲ್ಲಿ ಮಣಿಗಳು ಹುಟ್ಟುವವು. ಅಂದರೆ ಪರ್ವತದಿಂದ ನದ್ಯಾದಿಗಳ ಉತ್ಪತ್ತಿ ಆ ನದಿಗಳಲ್ಲಿ ಮಣಿಗಳನ್ನು ಮತ್ತು ಮೃಗ=ಹುಲಿ, ಕರಡಿ, ಸಿಂಹ, ಶಾರ್ದೂಲಾದಿ ಕ್ರೂರ ಪಶುಗಳನ್ನು ಪರ್ವತ ದಲ್ಲಿಯೇ ಸೃಜಿಸುವನು. ಈತನೇ ಅದ್ರಿಜಾ ಎಂದು ಶ್ರುತಿ ಪೊಗಳುತ್ತದೆ. ಇಂತು ದಾಸಾರ್ಯರು ಶ್ರುತಿ ಪ್ರತೀಕವಂತೆ ಪದ್ಯವನ್ನು ರಚಿಸಿದ್ದು ಇದರ ಭಾವವು ತಿಳಿಯಲು ಶ್ರೀ ಮಂತ್ರಾಲಯ ಪ್ರಭುಗಳ ಕಾಠಕ ಖಂಡಾರ್ಥವೇ ತಾರಕವು ಗತಿ. ಜ್ಞಾನಪ್ರದವು. ಉಭಯ ಬಂಧುಗಳಲ್ಲಿ ಸಂತತ ಇಪ್ಪ ಅವರಪ್ಪ ವಾಯುದೇವನು, ದ್ವಿರೂಪದಿಂದ ವಿಹರಿಸಿ ಜ್ಞಾನಾಯು ರೂಪನ ಅನುಗ್ರಹ ಬೇಕು.

**ಭಾವಸೂಚನ**॥ಅಬ್ಜೇತಿ॥ ಉಬ್ಬಳಿ ತೆರೆ ॥ ಹೆಬ್ಬಗೆ ದೊಡ್ಡ ಬಗೆ, ಇಬ್ಬಗೆ ಎರಡು ಬಗೆ ॥೧೮॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಅಬ್ಜ' ಇತಿ॥'ಉಬ್ಬಳಿ' ಗುಳ್ಳೆ(ಳ್ಳಿ) 'ಪೀಯೂಷ' ಅಮೃತಂ 'ತಾವರೆ' ಕಮಲಂ ಏತೇಷಾಂ ಜಲೋತ್ಪತ್ತೇಃ ॥ ಹೃಬ್ಬಗೆ ಬಹು ಪ್ರಕಾರಃ 'ಪ್ರತೀಕ' ತತ್ರ ಸಂಸ್ಥಿತಃ ॥೧೮॥

## ಕನ್ನಡಾರ್ಥ

ಜಲದ ಗುಳ್ಳೆ ಅಮೃತ ಕಮಲ ಮುಂತಾದವುಗಳು ಜಲದಲ್ಲಿ ಹುಟ್ಟಿರು ತ್ತವೆ. ಆದುದರಿಂದ ಪರಮಾತ್ಮನು ಅವುಗಳಲ್ಲಿ 'ಅಬ್ಜ'ನಾಮದಿಂದ ಇರು ತ್ತಾನೆ. 'ಹೃಬ್ಬಗೆ' ಹಲವು ಪ್ರಕಾರಗಳು. ಪ್ರತೀಕ ಎಂದರೆ ಪ್ರತಿಮೆಗಳು. ಚೇತನಾಚೇತನಗಳೆಂಬ ಎರಡು ತರಹದ ಪ್ರತೀಕದಲ್ಲಿ ಇರುವನೆಂದು ಅಭಿಪ್ರಾಯ. ॥೧೮॥

**ಅವತರಣಿಕಾ :—**ವೇದ ಪ್ರತಿಪಾದ್ಯವಾದ 'ಶುಚಿಷತ್' ಎಂಬ ಭಗವದ್ರೂಪಕಾರ್ಯ ವಿವರಿಸುತ್ತಾ, ಇದೇ ಪ್ರಾಣಾಂತರ್ಯಾಮಿಯಾದ ಅಚ್ಯುತನು ಚಿದ್ದೇಹದೊಳಿದ್ದು ಪ್ರೇರಿಸುತ್ತಾನೆಂತಲೂ ಬಿಂಬರೂಪಿ ಹರಿಯ ಮಹಿಮಾ ಕೊಂಡುತ್ತಾರೆ.

**ಶ್ರುತಿ ವಿನುತ ಸರ್ವತ್ರದಲಿ ಭಾ।**
**ರತಿ ರಮಣನೊಳಗಿದ್ದು ತಾ ಶುಚಿ।**
**ಷತುಯೆನಿಸಿ ಜಡಚೇತನರನ ಪವಿತ್ರ ಮಾಡುತಿಹ॥**
**ಅತುಳ ಮಹಿಮಾನಂತ ರೂಪಾ।**
**ಚ್ಯುತನೆನಿಸಿ ಚಿದ್ದೇಹದೊಳು ಪ್ರಾ।**
**ಕೃತ ಪುರುಷನಂದದಲಿ ನಾನಾ ಚೇಷ್ಟೆಗಳ ಮಾಳ್ಪ॥೧೯॥**

**ಪದ್ಯಾರ್ಥ :—**ಶ್ರುತಿ ವಿನುತ="ಹಂಸಃ **ಶುಚಿಷದ್ವ**ಸುರಂತರಿಕ್ಷ" ಎಂಬ ಕಾಠಕ ಶ್ರುತಿಯಿಂದ ಪೊಗಳಿಸಿಕೊಳ್ಳುವನಾಗಿ, ಸರ್ವದಲಿ=ಸರ್ವ ದೇಶ ಕಾಲಗಳಲ್ಲಿ ನಿರಂತರ, ಭಾರತಿ ರಮಣನೊಳಿದ್ದು=ಭಾ=ವಿಶೇಷವಾಗಿ ಪ್ರಕಾಶಮಾನನಾಗಿ ರತಿ ಭಕ್ತಿ=ಪರಮಾತ್ಮನಲ್ಲಿ ಭಕ್ತಿಯುಳ್ಳ ಭಾರತಿದೇವಿಯರ ರಮಣ ಮುಖ್ಯ ಪ್ರಾಣದೇವರಲ್ಲಿ, ತಾ=ತಾನು ಸ್ವತಃ ಇದ್ದು "**ಶುಚಿಷತ್**"ಯೆನಿಸಿ="ಶುಚೌ ವಾಯಾವಸ್ತೀತಿ ಶುಚಿಷತ್ ವಾಯುಸ್ಥಃ" (ಖಂಡಾರ್ಥ) ವಾಯುವಿನಲ್ಲಿ ಇರತಕ್ಕ ಹರಿಗೆ ಶುಚಿಷತ್ ಎಂದು ವೇದ ಪ್ರಣೀತ ನಾಮ. ಇಂತಹ ಪವಿತ್ರನಾದ ವಾಯುವಿನಲ್ಲಿ ಇದ್ದು ಪವಿತ್ರ ಮಾಡುವನು. ಜಡ ಚೇತನರ ಪವಿತ್ರ ಮಾಡುತಿಹ=ಕೇವಲ ಪ್ರಕೃತ್ಯಾತ್ಮಕ ಜಡ, ಜಡಸ್ಥಾವರ ಜೀವರು ಜಡ, ಚೇತನರನ್ನು=ಜೀವರನ್ನು ಪವಿತ್ರ ಮಾಡುತಿಹ=ಜಡ ಜೀವಿಗಳನ್ನು (ವಾಯುವಿನಲ್ಲಿಪ್ಪ ಪವಿತ್ರನಾದ ಹರಿಗೆ) ಶುಚಿ ಮಾಡುವದು ಅಚ್ಚರಿಯವೆ? ಅತುಳಮಹಿಮಾನಂತರೂಪಾ=ಬಹಳ ಮಹಾ ಮಾಹಾತ್ಮ್ಯೆಯುಳ್ಳವನು, ಅನಂತರೂಪ=ಅನೇಕ ನಾನಾ ರೂಪ ದಿಂದ ಪ್ರಾದುರ್ಭೂತನಾದ ಹರಿಯು, ಅಚ್ಯುತನೆನಿಸಿ=ಜೀವಜಡರ ಅಸ್ತಿತ್ವಕ್ಕೆ ಕಾರಣನಾಗಿ, ಜೀವರಿಂದ ಅರಲವ ತ್ರುಟಿಯಾದರೂ ಚ್ಯುತಿರಹಿತ ನಾಗದೇ ಇರುವನು ಅಚ್ಯುತನಾಮದಿಂದ ಚಿದ್ದೇಹದೊಳು=ಜೀವರ ಸ್ವರೂಪ

ದೇಹದಲ್ಲಿದ್ದು, ಬಹಿರಂಗ ಸ್ಥೂಲದೇಹದಲ್ಲಿಪ್ಪ ದೇವಾದಿಗಳಿಗೆ ಪ್ರೇರಿಸಿ, ನಾನಾ ಚೇಷ್ಟೆಗಳ ಮಾಳ್ಪ=ನಾನಾ ವಿಲಾಸ ವ್ಯಾಪಾರಗಳನ್ನು ಮಾಡುವನು.

**ಭಾವಸೂಚನ ||** ಶ್ರುತೀತಿ || ಶುಚಿಷದಿತಿ ವಾಯುಸ್ಥಃ ಶುಚಿಷ ತ್ಸ್ಮೃತಃ || ಬಲರತಿಪ್ರದ ||೧೯||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

'ಶ್ರುತಿ' ಇತಿ || 'ಅತುಳ' ಅಸದೃಶ ||೧೯||

**ಕನ್ನಡಾರ್ಥ**

'ಶುಚಿಷತ್' ಎಂಬ ಭಗವದ್ರೂಪವನ್ನು ವಿಶದೀಕರಿಸಿ ತಿಳಿಸುತ್ತಾರೆ 'ಶ್ರುತಿವಿನುತ' ಎಂಬ ಪದ್ಯದಿಂದ. 'ಅತುಲ' ಅಸದೃಶ ||೧೯||

**ಅವತರಣಿಕಾ :—** ಇನ್ನು ಅನ್ನ ಮಯಾದಿ ಐದು ಭಗವದ್ರೂಪಗಳು ಇರುವಿಕೆ ಸ್ಥಾನ, ತತ್ಕಾರ್ಯ ವಿವರಿಸುತ್ತಾರೆ. ಈ ರೂಪಗಳು ಬೃಹದಾರಣ್ಯ ಉಪನಿಷತ್ತಿನಲ್ಲಿ ಹೇಳಿದಂಥ ಮಾನಸ ಸ್ಮೃತಿಗತ ರೂಪಗಳ ಚಿಂತನೆ ಕ್ರಮ.

**ಅತಿಥಿಯೆನಿಸುವ ಅನ್ನಮಯ ಭಾ |**
**ರತಿ ರಮಣನೊಳು ಪ್ರಾಣಮಯ ಪ್ರಾ |**
**ಕೃತ ವಿಷಯ ಚಿಂತನೆಯ ಮಾಡಿಸುವನು**
**ಮನೋಮಯನು||**
**ಯತನ ವಿಜ್ಞಾನಮಯ ಬರಲದ |**
**ಜತನ ಮಾಡಿಸಿ ಆತ್ಮಜಾಯಾ |**
**ಸುತರ ಸಂಗದಿ ಸುಖವನೀವಾನಂದಮಯನೆನಿಸಿ ||೨೦||**

**ಪದ್ಯಾರ್ಥ :—** ಅನ್ನಮಯ=ಸರ್ವಪ್ರಾಣಿಗಳಿಗೆ ಜೀವಾಧಾರನಾದ ಅನಿರುದ್ಧನೇ ಅನ್ನಮಯನು, ಅತಿಥಿಯೆನಿಸುವ="ಅತಿಥಿ ದುರೋಣಸತ್" ಎಂದು ಶ್ರುತಿಯಲ್ಲಿ ಹೇಳಿದಂತೆ ಅತಿಥಿ="ಅತಿ ಅತಿಶಯಿತಂ ಥಮನ್ನಂ ಸೋಽತಿಥಿಃ ಸ ಏವಾತಿಥಿಃ"=ಲೋಕ ವಿಲಕ್ಷಣವಾದ ಬಹು ಅನ್ನಭೋಜನ ಪ್ರಿಯನಾದುದರಿಂದ ಅತಿಥಿಯೆಂದು ಅನ್ನಮಯನು ಕರೆಸುತ್ತಾನೆ. ಭಾರತಿ

ರಮಣನೊಳು ಪ್ರಾಣಮಯ=ವಾಯುದೇವರಿಂದ ಅಥವಾ ವಾಯುಕರ್ತೃಕ ನಾದ ಕಾರಣ, ವಾಯುವಿನಲ್ಲಿ ಪ್ರಾಣಮಯ ರೂಪ, ಮತ್ತು ಮನೋ ಮಯ=ಸರ್ವವನ್ನು ತಿಳಿಯೋ ರೂಪನಾದುದರಿಂದ ಮನೋಮಯ ರೂಪನು, ಪ್ರಾಕೃತ ವಿಷಯ ಚಿಂತನೆ ಮಾಡಿಸುವನು, ಧನಕನಕಭೂಮ್ಯಾದಿ ಪ್ರಕೃತಿಸಂಬಂಧವಾದ ವಿಷಯಗಳನ್ನು ಚಿಂತನ ಮಾಡಿಸುವನು ಮನೋ ಮಯ, ಈ ವಿಷಯಗಳು ಯತನ ಬರಲದ=ಈ ವಿಷಯ ಚಿಂತನಾದಿ ಬರಲು, ಅದನ್ನು ವಿಜ್ಞಾನಮಯ=ಜ್ಞಾನ ಸ್ವರೂಪನಾದುದರಿಂದ ವಿಜ್ಞಾನ ಮಯನು, ಮಾಡಿಸುವನು, ಇಂತಹ ವಿಷಯಾದಿಗಳ ಜ್ಞಾನವನ್ನು ಜತನ ಮಾಡಿಸಿ=ರಕ್ಷಕನಾಗಿ, ಆತ್ಮ=ತನ್ನ ಸಂತೋಷ, ಜಾಯಾ=ಹೆಂಡತಿ, ಸುತರ=ಪುತ್ರಾದಿಗಳ, ಸಂಗದಿ=ಸಂಯೋಗದಿಂದ, ಒಳ್ಳೆ ಆನಂದದಿಂದ ಪತ್ನಿಪುತ್ರರಿಂದ ಲೋಲಾಡಿಸುವನು. ಆನಂದಮಯನು=ಆನಂದಕೊಡು ವನು. ಹೀಗೆ ಅನುದಿನ ಚಿಂತಿಸಲು, ವಿಷಯಾದಿಗಳಿಂದ ದೂರಮಾಡಿ ದೇಹ ದಲ್ಲಿ ಅಹಂಮಮತಾದಿಗಳ ದೂರಮಾಡುವನು.

**ಭಾವಸೂಚನ** ॥ ಅತಿಥೇತಿ ಬಹಳ ಅನ್ನಪ್ರದ "ಅನ್ನಥಮಿತಿ ಶ್ರುತೇಃ" ಬರಲದ=ಬರಲತಿಪ್ರದ॥೨೦॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಅತಿಥಿ' ಇತಿ ॥ ವಾಯೌ ಪ್ರಾಣಮಯಃ ॥ 'ಯತನ' ಯತ್ನಗಃ ॥ 'ಅದು' ಪೂರ್ವವಿಷಯಾಃ ॥ ಕಾಠಕೇ ಚ ಶ್ರೂಯತೇ ಓಂ ॥ ಹಂಸಃ ಶುಚಿ ಷತ್ ವಸುರಂತರಿಕ್ಷಸದ್ಧೋತಾ ವೇದಿಷತ್ ಅತಿಥಿಃ ದುರೋಣಸತ್ ॥ ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಅದ್ರಿಜಾ ಋತಂ ಬೃಹತ್॥ ಇತಿ ॥ ಪೂಜ್ಯಚರಣಾಶ್ಚ "ನಿತ್ಯಂ ಹೀನೋಜ್ಝಿತೈಃ ದೋಷೈಃ ಸಾರರೂಪಃ ಯತೋ ಹರಿಃ ॥ ಹಂಸ ಇತ್ಯುಚ್ಯತೇ ತಸ್ಮಾತ್ ವಾಯುಸ್ಥಃ ಶುಚಿಷತ್ ಸ್ಮೃತಃ॥ ವರಸುರ್ವಸುರಿತ್ಯುಕ್ತಃ ಸ ಏವಾಪ್ಯಂತರಿಕ್ಷಗಃ ॥ ಹೋತಾ ಸರ್ವೇಂ ದ್ರಿಯಾದಿಸ್ಥಃ ವೇದ್ಯಾಂ ಪೂಜ್ಯಶ್ಚ ವೇದಿಷತ್ ॥ ಅತ್ಯನ್ನಶ್ಚಾತಿಥಿಃ ಪ್ರೋಕ್ತಃ ಯಸ್ಮಾದನ್ನಂ ಥಮುಚ್ಯತೇ ॥ ಸ ದ್ರೋಣಕಲಶೇ ಸೋಮೇ ಸ್ಥಿತ ಉಕ್ತಃ ದುರೋಣಸತ್ ॥ ನೃಷು ಸ್ಥಿತಶ್ಚ ದೇವೇಷು ವರೇಷ್ವಪಿ ಸ ಏವ ತು ॥ ಋತ

ರೂಪೇ ತಥಾ ವೇದೇ ವ್ಯೋಮಾಖ್ಯಪ್ರಕೃತಾವಪಿ ॥ ಪ್ರೋಕ್ತಂ ಜಗದಿದಂ ಯಸ್ಮಾತ್ ಸದ್ವ್ಯೋಮ ಶ್ರೀರುದಾಹೃತಾ ॥ ಅಬ್ಜಗೋಜಾದ್ರಿಜೇಷ್ವೇವ ವಾಸ್ತೇಬ್ಜಾದ್ಯಾದಿಕಸ್ತ್ವತಃ ॥ ತಥೈವ ತೇಷು ಮುಕ್ತೇಷು ಗತಾಸ್ತೇ ವಿಷ್ಣುವಿತ್ಯೃತಃ ॥ ವೇದೈಃ ಮುಖ್ಯತಯಾ ಪ್ರೋಕ್ತಃ ಋತಮಿತ್ಯೇವ ಚೋಚ್ಯತೇ ॥ ಬೃಹತ್ ಪೂರ್ಣಗುಣತ್ವಾಚ್ಚ ಸ ಏವ ಪುರುಷೋತ್ತಮಃ" । ಇತಿ ॥೨೦॥



## ಕನ್ನಡಾರ್ಥ

ವಾಯುದೇವನಲ್ಲಿ ಪ್ರಾಣವಾಯುರೂಪ. ಯತ್ನದಲ್ಲಿ ವಿಜ್ಞಾನರೂಪ. 'ಅವು' ಎಂದರೆ ಪೂರ್ವದ ವಿಷಯಗಳೆಂದು ತಿಳಿಯಬೇಕು. ಕಾಠಕ ಉಪನಿಷತ್ತಿನಲ್ಲಿ "ಹಂಸಃ ಶುಚಿಷತ್" ಎಂಬುದಾಗಿ ಈ ರೂಪಗಳನ್ನು ನಿರೂಪಿಸಲಾಗಿರುತ್ತದೆ.

ಶ್ರೀಮದಾನಂದತೀರ್ಥ ಭಗವತ್ಪಾದರು ಆ ಭಾಷ್ಯದಲ್ಲಿ ಈ ರೀತಿಯಾಗಿ ನಿರೂಪಿಸಿರುತ್ತಾರೆ.

"ಹಂಸಃ" ಸದಾ ದೋಷಗಳಿಂದ ವಿಹೀನನು ಹಾಗೂ ಸಾರಸ್ವರೂಪನು. ಅದರಂತೆ ಶುಚಿ–ವಾಯು, ಇವರಲ್ಲಿ ಇರುವುದರಿಂದ ಶ್ರೀಹರಿಯು 'ಶುಚಿಷತ್' ಎಂದು ಹೇಳಿಸಿಕೊಳ್ಳುವನು ಉತ್ತಮ ಸುಖರೂಪನಾದುದರಿಂದ 'ವಸು' ಎಂದು ಕರೆಯಲ್ಪಡುವನು. ಅಂತರಿಕ್ಷದಲ್ಲಿ ಇರುವುದರಿಂದ ಅಂತರಿಕ್ಷ ನಾಮಕನು ಸರ್ವೇಂದ್ರಿಯಗಳಲ್ಲಿದ್ದು ವಿಷಯಗಳನ್ನು ಹೋಮಿಸುವುದರಿಂದ ಹೋತೃನಾಮಕನು. ಯಜ್ಞವೇದಿಗಳಲ್ಲಿ ಪೂಜಿತನಾದುದರಿಂದ 'ವೇದಿಷತ್' ಎಂದು ಕರೆಯಿಸಿಕೊಳ್ಳುವನು. ಅತಿಶಯಿತವಾದ ಅನ್ನವುಳ್ಳವನಾದುದರಿಂದ 'ಅತಿಥಿಃ' ಎಂದು ಹರಿಯನ್ನು ಕರೆಯುತ್ತಾರೆ. ಯಾಕೆಂದರೆ ಛಂದೋಗ ಶ್ರುತಿಯಲ್ಲಿ 'ಅನ್ನಂಥ' ಎಂದು ಶ್ರೀಹರಿಗೆ ಕರೆಯುವರೆಂದು ಹೇಳಲಾಗಿರುತ್ತದೆ. ದ್ರೋಣಕಲಶಗಳಲ್ಲಿರುವ ಸೋಮದಲ್ಲಿ ಇರುವುದರಿಂದ 'ದುರೋಣಸತ್' ಎಂದು ಹರಿಯ ಹೆಸರು. ವರಿಷ್ಠರಾದ ದೇವತೆಗಳಲ್ಲಿ ಹಾಗೂ ನರರಲ್ಲಿ ಇರುವುದರಿಂದ 'ನೃಷದ್ವರಸತ್' ಎಂದು ಹೆಸರು. 'ಋತ' (ನಿಯಮೇನ ಯಥಾರ್ಥಗಳಾದುದರಿಂದ) ನಾಮಕಗಳಾದ ವೇದ

ಗಳಲ್ಲಿ ಇರುವುದರಿಂದ 'ಋತಸತ್' ಎಂದು ಹೆಸರು. 'ವ್ಯೋಮ'ವೆಂಬ ಪ್ರಕೃತಿಯೆನಿಸಿದ ಲಕ್ಷ್ಮೀದೇವಿಯಲ್ಲಿ ಇರುವುದರಿಂದ 'ವ್ಯೋಮಸತ್'ವೆನ್ನು ತ್ತಾರೆ. ಅಬ್ಜ-ಜಲದಲ್ಲಿ ಜನಿಸುವ ವಸ್ತು 'ಗೋಜ' ಭೂಮಿಯಲ್ಲಿ ಹುಟ್ಟುವ ವಸ್ತು, 'ಅದ್ರಿಜ' ಪರ್ವತಗಳಲ್ಲಿ ಹುಟ್ಟುವ ವಸ್ತುಗಳು. ಇವು ಗಳಲ್ಲಿ ಇರುವುದರಿಂದ ಹರಿಯನ್ನು ಕ್ರಮವಾಗಿ 'ಅಬ್ಜ, ಗೋಜ, ಅದ್ರಿಜ' ಎಂದು ಕರೆಯುತ್ತಾರೆ. ಅದರಂತೆಯೇ ಋತ ಮುಕ್ತರಲ್ಲಿ ನಿಯಾಮಕನಾಗಿ ಜಾತನಾಗಿ ಇರುವುದರಿಂದ 'ಋತಜಾ' ಎನ್ನುತ್ತಾರೆ. 'ಋ-ಗತೌ' ಎಂಬ ಧಾತುವಿನಿಂದ ಸಿದ್ಧವಾದ ಋತ ಶಬ್ದಕ್ಕೆ ಹೊಂದಿದವರು ಎಂದು ಅರ್ಥ ವಾಗುತ್ತದೆ. ಅಂದರೆ ನಾರಾಯಣನನ್ನು ಹೊಂದಿದವರು-ಮುಕ್ತರು ಎಂದು ಅಭಿಪ್ರಾಯ. ಆದುದರಿಂದ ಮುಕ್ತರೆಂಬೇ 'ಋತ' ಶಬ್ದಾರ್ಥ. ಅವರಲ್ಲಿ ನಿಯಾಮಕನಾಗಿ ಪ್ರಾದುರ್ಭವಿಸುವುದರಿಂದ 'ಋತಜಾ' ಎಂದು ಹೆಸರು. ವೇದಗಳಿಗೆ ಋತಗಳೆಂದೂ ಕರೆಯುವುದುಂಟು. ಆದುದರಿಂದ ವೇದಗಳಿಗೆ ಮುಖ್ಯ ಪ್ರತಿಪಾದ್ಯನಾದುದರಿಂದ 'ಋತ' ಎಂದು ಶ್ರೀಹರಿಯನ್ನು ಕರೆ ಯುತ್ತಾರೆ. ಗುಣಪರಿಪೂರ್ಣನಾದುದರಿಂದ 'ಬೃಹತ್' ಎಂದು ಹೇಳು ತ್ತಾರೆ. ಆ ಪುರುಷೋತ್ತಮನೆ ತತ್ತ್ವದಂತರ್ಗತನಾದುದರಿಂದ ತತ್ತ್ವ ನ್ನಾಮಕನು. ಎಂಬುದಾಗಿ ಕೂರ್ಮಪುರಾಣದ ವಚನಗಳಿವೆಯೆಂದು ನಿರೂಪಿ ಸಿರುತ್ತಾರೆ. ||೨೦||

**ಅವತರಣಿಕಾ :—**ಹಿಂದಿನ ಪದ್ಯದಲ್ಲಿ, ವಿಷಯಾದಿಗಳಲ್ಲಿ ಜೀವರನ್ನು ಪ್ರೇರಿಸಿ ಪ್ರಾಕೃತ ವಿಷಯ ಆನಂದವೀವ ಹರಿಗೆ ತ್ರಿಗುಣ ವಿಷಯಗಳು ಸಂಬಂಧವಿಲ್ಲ ದೋಷರಹಿತನೆಂದು ಶ್ರೀಹರಿಯ ಸ್ತೋತ್ರಗೈಯ್ಯುತ್ತಾರೆ.

**ಇನಿತು ರೂಪಾತ್ಮನಿಗೆ ದೋಷಗ ।**
**ಳೆನಿತು ಬಪ್ಪವು ಪೇಳಿರೈ ಬ್ರಾ ।**
**ಹ್ಮಣ ಕುಲೋತ್ತಮರಾದವರು ನಿಷ್ಕಪಟ ಬುದ್ಧಿಯಲಿ ॥**
**ಗುಣನಿಯಾಮಕ ತತ್ತ್ವದಾಪ್ತಯ ।**
**ನೆನಿಸಿ ಕಾರ್ಯವ ಮಾಳ್ಪ ದೇವನ ।**
**ನೆನೆದ ಮಾತ್ರದಿ ದೋಷರಾಶಿಗಳೆಲ್ಲ ಕೆಡುತಿಹವು ॥೨೧॥**

**ಪದ್ಯಾರ್ಥ :—** ಇನಿತು ರೂಪಾತ್ಮಸಿಗೆ= ಹಿಂದಿನ ಪದ್ಯಗಳಲ್ಲಿ ಹೇಳಿದಂತೆ, ವಿವರಗೈಸಿದ ಇಷ್ಟುರೂಪದಿಂದ ಕಾರ್ಯವಮಾಡಿ, ಮಾಡಿಸುವ ಹರಿಗೆ ದೋಷಗಳೆನಿತು ಬಪ್ಪದು ಪೇಳಿರೈ ನಿಷ್ಕಪಟ ಬುದ್ಧಿಲಿ, ಬ್ರಾಹ್ಮಣ ಕುಲೋತ್ತಮರಾದವರು ಪೇಳಿರೈ= ಶ್ರೇಷ್ಠವಾದ ಬ್ರಾಹ್ಮಣ ಕುಲದಲ್ಲಿ ಪುಟ್ಟಿ, ಬ್ರಹ್ಮಜ್ಞಾನವುಳ್ಳ ಜ್ಞಾನಿಗಳು ಚನ್ನಾಗಿ ತಿಳಿದು ಹೇಳಿರಿ ನೋಡೋಣ. ಆದರೆ ನಿಷ್ಕಪಟ ಬುದ್ಧಿಯಲಿ= ಬ್ರಹ್ಮಜ್ಞಾನಿಗಳಲ್ಲಿ ಕಾಪಟ್ಯ ವಂಚನಾ ಬುದ್ಧಿ ಇಲ್ಲ, ಅಂದರೆ ಜ್ಞಾನಿಗಳಿಗೆ ಶ್ರೀಹರಿಯಲ್ಲಿ ದೋಷಲೇಶವಿಲ್ಲೆಂದು ಜ್ಞಾನವಿರುವ ಕಾರಣ ಜ್ಞಾನಿಗಳನ್ನು ಕುರಿತು ದಾಸಾರ್ಯರು ಪ್ರಶ್ನೆ ಮಾಡಲು ಆ ಜ್ಞಾನಿಗಳು ಉತ್ತರಕೊಡಲುವರೆಂದು ಎರಡನೆಯ ಅರ್ಧ ಪದ್ಯದಿಂದ ವಿವರಿಸುತ್ತಾರೆ. ಗುಣನಿಯಾಮಕ= ಶ್ರೀಹರಿಯು ತಾನು ತ್ರಿಗುಣ ಬದ್ಧನಾಗದೇ ತ್ರಿಗುಣ ನಿಯಮನ ಮಾಡುವನು, ತತ್ತದಾಹ್ವಯನೆನಿಸಿ= ತ್ರಿಗುಣಕಾರಣನಾಗಿ ಆಯಾ ನಾಮದಿಂದ ಕರೆಸುತ್ತ, ಕಾರ್ಯವ ಮಾಳ್ಪ ದೇವನ= ತಾನು ಕ್ರೀಡಾದಿ ಗುಣ ವಿಶಿಷ್ಟನಾದರೂ, ಸತ್ವ-ರಜಃ-ತಮೋ ಜೀವರ ಯೋಗ್ಯತೆಯಂತೆ ಕಾರ್ಯವನ್ನು ಮಾಡುವ ದೇವೋತ್ತಮನಾದ ಹರಿಯನ್ನು, ನೆನೆದ ಮಾತ್ರದಿ ದೋಷರಾಶಿಗಳೆಲ್ಲ ಕೆಡುತಿಹವು= ಕೃಷ್ಣಾ, ನರಹರೇ, ವೇಂಕಟನೆಂದು ಪುನಃ ಪುನಃ ನೆನೆಯುವನು ಚಿಂತನೆ ಮಾಡುವುದರಿಂದ, ಎಲ್ಲ ಪಾಪರಾಶಿಗಳು ಕೆಡುತಿಹವು, ನಾಶವಾಗುತ್ತವೆಂದು ಜ್ಞಾನಿಗಳ ಉತ್ತರ ಬಹುಸಮ್ಮತವಾದುದು.

**ಭಾವಸೂಚನ** ॥ ಇನಿತ್ವಿತಿ ॥ ಗುಣಾ= ವಿಷಯಗಳು ॥೨೧॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಇನಿತು' ಇತಿ ॥ 'ನೆನೆದ' ಇತಿ ॥ "ಮಾಮೇವ ಯೇ ಪ್ರಪದ್ಯಂತೇ ಮಾಯಾಂ ಏತಾಂ ತರಂತಿ ತೇ" ॥ ಇತಿ ಸ್ವಪ್ರಸನ್ನಮಾಯಾನಿರಸನ ಸಮರ್ಥಸ್ಯ ತದಸಂಭವ ಇವ (ಏವ) ಇತಿ ಭಾವಃ ॥೨೧॥

## ಕನ್ನಡಾರ್ಥ

"ನನ್ನನ್ನೇ ಯಾರು ಶರಣುಬರುತ್ತಾರೋ ಅವರೇ ನಾನು ಹಾಕಿದ ಈ

ಮಾಯಾ (ಪ್ರಕೃತಿಬಂಧ)ವನ್ನು ದಾಟುತ್ತಾರೆ." ಎಂದು ಹೇಳಿದಂತೆ ತನ್ನನ್ನು ಶರಣು ಹೊಂದಿದವರ ಸಂಸಾರಬಂಧವನ್ನು ಕಳೆಯಲು ಸಮರ್ಥನಾದ ಶ್ರೀಹರಿಯು ಭಕ್ತರ ದೋಷರಾಶಿಗಳನ್ನು ನೆನೆದ ಮಾತ್ರದಿ ಇಲ್ಲದಂತೆ ಅವುಗಳಿಂದ ಯಾವ ಪಾಪ ಮುಂತಾದ ಬಾಧಕಗಳಾಗದಂತೆ ಮಾಡುತ್ತಾನೆ" ಎಂದು ಈ ಪದ್ಯದ ಭಾವವಿರುತ್ತದೆ. ||೨೧||

ಅವತರಣಿಕಾ :—ಹೇಹಾತ್ ಬಹಿರಂಗದಲ್ಲಿದ್ದು ಕಾರ್ಯ ನಡೆಸುವ ದೇವನ ನಾಮಗಳನ್ನು ಹೇಳುತ್ತಾರೆ.

**ಕುಸ್ಥನೆನಿಸುವ ಭೂಮಿಯೊಳು ಆ ।**
**ಶಾಸ್ಥನೆನಿಸುವ ದಿಗ್ವಲಯದೊಳು ।**
**ಖಸ್ಥನೆನಿಪಾಕಾಶದೊಳು ಒಬ್ಬೊಬ್ಬರೊಳಗಿದ್ದು ॥**
**ವ್ಯಸ್ತನೆನಿಸುವ ಸರ್ವರೊಳಗೆ ಸ ।**
**ಮಸ್ತನೆನಿಸುವ ಬಳಿಯಲಿದ್ದು ಉ ।**
**ಪಸ್ಥನೆನಿಪ ವಿಶೋಧನ ವಿಶುದ್ಧಾತ್ಮ ಲೋಕದೊಳು ॥೨೨॥**

**ಪದ್ಯಾರ್ಥ :**—ಕು+ಸ್ಥ=ಕು=ಭೂಮಿಯಲ್ಲಿ ಕುಸ್ಥನಾಮದಿಂದಿರುವನು. ಆಶಾಸ್ಥ=ಆ+ಶಾ, "ಆ ಅಸ್ರುತ ಇತ್ಯಾಶಾ" ಸರ್ವತ್ರ ವ್ಯಾಪ್ತನಾದುದರಿಂದ, ದಿಗ್ವಲಯದೊಳು=ಹದದಿಕ್ಕುಗಳಲ್ಲಿ, ಆಶಸ್ಥ=ದಿಕ್ಕುಗಳಲ್ಲಿರುವನೆಂದು ಹೆಸರು. ಖಸ್ಥ=ಖ=ಆಕಾಶದಲ್ಲಿರುವನಾದುದರಿಂದ ಖಸ್ಥನೆಂದು ಹರಿಗೆ ನಾಮ. ಒಬ್ಬೊಬ್ಬರೊಳಗಿದ್ದು ವ್ಯಸ್ತನೆನಿಸುವ=ಬೇರೆ ಬೇರೆ ಪ್ರಾಣಿಗಳಲ್ಲಿ ಒಬ್ಬೊಬ್ಬರ ರೂಪಾದಿಗಳಂತೆ ಒಂದೇ ರೀತಿಯಾಗಿರದೆ ವಿಪರೀತನಾಗಿ ಬೇರೆ ರೂಪದಂತೆ ವಿಭಾಗಿಸಲ್ಪಟ್ಟವನಾಗಿರುವನು. ವ್ಯಸ್ತನೆಂದು ಕರೆಸುತ್ತಾನೆ, ಸರ್ವರೊಳಗೆ ಸಮಸ್ತನೆನಿಸುವ=ಸಕಲ ಜನರ ಸಮೂಹದಲ್ಲಿ ಪೂರ್ಣನಾಗಿದ್ದು, ಸಮಸ್ತನೆಂದು ಕರೆಸುತ್ತಾನೆ, ಬಳಿಯಲಿದ್ದು ಉಪಸ್ಥನೆನಿಸುವ=ಹತ್ತಿರ ಸಮೀಪದಲ್ಲಿದ್ದು ಉಪ=ಸಮೀಪಸ್ಥನಾಗಿ ಇರುವನಾದುದರಿಂದ ಉಪಸ್ಥನೆಂದು ನಾಮ, ವಿಶೋಧನ=ಸ್ಮೃತಿಮಾತ್ರೇಣ ಪಾಪಾನಾಂ ಕ್ಷಪಣಾದ್ವಿಶೋಧನ (ವಿ.ಸ. ವಿದ್ಯಾಧಿರಾಜೀಯ) ಯಾವಾತನ ಸ್ಮರಣಧ್ಯಾನ

ಚಿಂತನ ಮಾತ್ರದಿಂದ, ಪಾಪಗಳು ನಾಶವಾಗುತ್ತವೋ, ಆತನೆ ವಿಶೋಧನ ಹರಿ, ವಿಶುದ್ಧಾತ್ಮ=ಗುಣತ್ರಯಗತತಯಾ ವಿಶುದ್ಧಃ, ಆತ್ಮಾ ದೇಹೋ ಅಸ್ಯೇತಿ ವಿಶುದ್ಧಾತ್ಮಾ" (ವಿದ್ಯಾಧಿ) ಸತ್ವಾದಿಗುಣಗಳಿಂದ ಬಿಟ್ಟು ದೂರ ನಾಗಿರುವನು ವಿಶುದ್ಧ, ಇಂತಹ ಪರಿಶುದ್ಧ ಸಚ್ಚಿದಾನಂದಮಯ ದೇಹ ಉಳ್ಳವನು, ಎಂದು ಲೋಕದೊಳು=ಈ ಚತುರ್ದಶ ಲೋಕಗಳಲಿ ಆಯಾ ನಾಮದಿಂದ ಕರೆಸುತ್ತಾನೆ.

**ಭಾವಸೂಚನ** ॥ ಕುಸ್ಥೇತಿ ॥ ವ್ಯಸ್ತೇತಿ । ಅರ್ಥಕೌತಸ್ತ್ವಾದಿತಿ ವಚನಾತ್ ॥ ವಿಶೋಧನೇತಿ ॥ ವಿಶೋಧನ ವಿಶುದ್ಧಾತ್ಮಾ ಇತ್ಯುಕ್ತೇಃ ॥೨೨॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕುಸ್ಥ" ಇತಿ ॥ 'ಕುಃ' ಭೂಮಿಃ ॥ 'ಆಶಾ' ದಿಶಃ ॥ ಅನೇನ 'ಕುಸ್ಥನಮೋ', ಆಶಾಸ್ಥನಮೋ ಸ್ವಸ್ಥನಮೋ ವ್ಯಸ್ತನಮೋ ಸರ್ವಸ್ಥನಮೋ" ಇತ್ಯಾದಿ ಸ್ವಪನಾನಿ ವಿವೃತಾನಿ ॥ 'ಬಳಿ' ಸಮೀಪಃ.

**"ವಿಶೋಧನ"**—* ಓಂ * ಪ್ರಸು ಗೋಪಾ ಯಶಸಂ ಧೇನವೋ ಯಥಾ ಹ್ರದಂ ಕುಲ್ಯಾ ಇವಾಶತ ॥ ಆನಸ್ತ್ರುಜಂ (ತಂ) ರಯಿಂ ಬರಾಂಶಂ ನ ಪ್ರತಿಜಾನತೇ ವೃಕ್ಷ ॥ ಓಂ ॥ (ಧನಪ್ರಾಪಕಃ)

**"ವಿಶುದ್ಧಾತ್ಮಾ"**—* ಓಂ * ಸ್ಥಾತಾ ರಥಸ್ಯ ಹರ್ಯೋರಭಿಸ್ವರ ಇಂದ್ರೋ ದೃಹಳಾ ಚಿದಾರುಜಃ ಗಂಭೀರಾಂ ಉದಧೀರಿವ ಕ್ರತುಂ ಪುಷ್ಯಸಿ ಗಾ ಇವ ॥ * ಓಂ * ॥ ವಿಶುದ್ಧಂ ಕ್ರತುಫಲಂ ದಾನೇನ ವಿಸ್ತಾರಯತಿ ಪೋಷಯತಿ ಇತಿ ವಿಶುದ್ಧಾತ್ಮಾ ॥೨೨॥

## ಕನ್ನಡಾರ್ಥ

ಕು ಎಂದರೆ ಭೂಮಿ. 'ಆಶಾ' ಎಂದರೆ ದಿಕ್ಕುಗಳು. ಇವುಗಳಲ್ಲಿ ಇರುವವನು ಎಂದು ಅರ್ಥ. 'ಕುಸ್ಥ ಆಶಾಸ್ಥ' ಎಂದು ಹೇಳುವುದರಿಂದ "ಶ್ರೀವೆಂಕಟಶೈಲಾಧಿಪ" ಎಂಬ ತಾನೇ ರಚಿಸಿದ ಪದ್ಯದಲ್ಲಿರುವ "ಕುಸ್ಥನಮೋ" ಎಂದು ಮುಂತಾದ ನುಡಿಗಳನ್ನು ವಿವರಿಸುತ್ತಾರೆ.

**"ವಿಶೋಧನ"**—ಧನಗಳನ್ನು ಹೊಂದಿಸುವವನು, ದೊರಕಿಸಿಕೊಡುವವನು.

"ವಿಶುದ್ಧಾತ್ಮ"—ವಿಶುದ್ಧವಾದ ಯಜ್ಞಫಲಗಳನ್ನು ಕೊಟ್ಟು ವಿಸ್ತರಿಸುವವ ಹಾಗೂ ಪೋಷಿಸುವವನಾದುದರಿಂದ ವಿಶುದ್ಧಾತ್ಮನೆನ್ನುತ್ತಾರೆ.॥೨೨॥

**ಅವತರಣಿಕಾ :**—ಈ ಪದ್ಯದಿಂದ ಜೀವರುಗಳಿಗೆ ಜ್ಞಾನಮಾನ, ವದಾನ್ಯಗುಣಗಳನ್ನೀಯುವದಕ್ಕೆ ಆಯಾ ವಸ್ತುಗಳಲ್ಲಿ ಇರುವ ಶ್ರೀಹರಿಯನ್ನು ಭಜಿಸುತ್ತಾರೆ.

**ಜ್ಞಾನದನುಯೆಂದೆನಿಪ ಶಾಸ್ತ್ರದಿ।**
**ಮಾನದನುಯೆಂದೆನಿಪ ವಸನದಿ।**
**ದಾನಶೀಲ ಸುಬುದ್ಧಿಯೊಳಗೆ ವದಾನ್ಯನೆನಿಸುವನು॥**
**ವೈನತೇಯವರೂಥ ತತ್ತ್ರತ್।**
**ಸ್ಥಾನದಲಿ ತತ್ತತ್ಸ್ವಭಾವಗ।**
**ಳಾನುಸಾರ ಚರಿತ್ರೆ ಮಾಡುತ ನಿತ್ಯನೆಲಸಿಪ್ಪ॥೨೩॥**

**ಪದ್ಯಾರ್ಥ :**—ಶಾಸ್ತ್ರದಿ="ಶಿಷ್ಯತೇನೇನ ಶಾಸ್ತ್ರಂ" ಯಾವುದು ಮಂತ್ರಾದಿ ಪ್ರಯೋಗದಿಂದ ಶಾಸನ ಮಾಡುತ್ತದೆಯೋ ಅದು ಶಾಸ್ತ್ರವೆಂದು ಮತ್ತು ಶಾಸ್ತಾ="ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಮಿತಿ ಶ್ರುತೇಃ" ಶಾಸ್ತ್ರದ್ವಾರಾ ಜನರಿಗೆ ಶಾಸನ ಮಾಡಿ ಧರ್ಮ ತಿಳುವಳಿಕೆಯನ್ನು ತಂದು ಕೊಡುವನಾದುದರಿಂದ, ಜ್ಞಾನದನು ಯೆಂದೆನಿಪ=ಅವಬೋಧರೂಪತ್ವಾ ಜ್ಜ್ಞಾನಂ ತಸ್ಯೇತಿ ವಿಶೇಷಃ=ತಿಳುವಳಿಕೆ ತಂದುಕೊಡುವದೆ ಜ್ಞಾನ= ಇಂತಹ ಸಮೀಚೀನವಾದ ಉತ್ತಮ ತಿಳುವಳಿಕೆಯನ್ನು ತಂದುಕೊಡುವನಾದುದರಿಂದ ಜ್ಞಾನದನು ಎಂದು ಕರೆಸುತ್ತಾನೆ, ವಸನದಿ=ವಸ್ತ್ರದಲ್ಲಿ, ಮಾನದನುಯೆಂದೆನಿಪ="ಮಾನಿ ಮಾನಪನೇ ಅಭಿಮಾನ ರಕ್ಷಕನೇ" ಎಂದು ದಾಸರ ವಚನ. ವಸ್ತ್ರದಲ್ಲಿದ್ದು ಅಭಿಮಾನವ ರಕ್ಷಕನಾದುದರಿಂದ, ಮಾನದ= ಅಥವಾ ತಾನು ಶರೀರಾದ್ಯಭಿಮಾನಹೀನನಾಗಿರುವದರಿಂದ, "ಮಾನಮಹಂಕಾರಂ ಸಂಸ್ಕಾರಂ ಯಥಾ ಸಂಭವಂ ದದಾತೀತಿ ಮಾನದಃ (ವಿ.ರಾಜೀಯ)

ದಾನಶೀಲ ಸುಬುದ್ಧಿಯೊಳಗೆ ವದಾನ್ಯನೆನಿಸುವನು=ದಾನಮಾಡತಕ್ಕಂಥಾ ಸತ್ಪಾತ್ರರಲ್ಲಿ ಸದ್ದಾನ ಮಾಡತಕ್ಕ ಸದ್ಬುದ್ಧಿಯಲ್ಲಿ ವದಾನ್ಯನೆನಿಸುವನು= "ಮಾಂ ಯಾಚಸ್ವೇತಿ ವದತಿ ವದಾನ್ಯಃ"=ನನ್ನನ್ನು ಯಾಚನೆ ಮಾಡಿರಿ, ಕೇಳಿರಿ ಎಂದು ಯಾವನು ಹೇಳುವನೋ ಅವನು ವದಾನ್ಯನೆಂದು ನಿಘಂಟು, ದಾನಶೂರ=ಹರಿಯು ಬಿಟ್ಟು ಅನ್ಯರನು ಯಾಚಿಸುದು ಸಲ್ಲ, ವೈನತೇಯ ವರೂಥ=ವಿನತಾದೇವಿ ಪುತ್ರನಾದ ಗರುಡದೇವರೇ ರಥವಾಗಿ ಉಳ್ಳ ಹರಿ, ಕಾಲನಾಮಕ ಪರಮಾತ್ಮ, ತತ್ತತ್ಸ್ಥಾನದಲಿ=ಆಯಾ ಸ್ಥಾನ ಸ್ಥಳಗಳಲ್ಲಿ, ತತ್ತತ್ಸ್ವಭಾವಗಳನುಸಾರ=ತ್ರಿವಿಧ ಜೀವರ ಅವರವರ ಸ್ವಭಾವಕ್ಕೆ ಅನುಗುಣ ವಾಗಿ, ಚರಿತ್ರೆ ಮಾಡುತ=ವ್ಯಾಪಾರ ಮಾಡುತ್ತಾ, ನಿತ್ಯ=ನಿರಂತರದಲ್ಲಿ ನೆಲಸಿರುವನು, ಲೋಕದ ಆಯಾ ಸ್ಥಾನ ಮಾನ ಜ್ಞಾನದನಾಗಿ ಇರುವನು.

**ಭಾವಸೂಚನ** ॥ ಜ್ಞಾನೇತಿ ಮಾನದೇತಿ ॥ ಆಚ್ಛಾದನಾದ್ವಸ್ತ್ರನಾಮೇತಿ ವಿಷ್ಣುರಹಸ್ಯೋಕ್ತೇಃ ॥ ವೈನತೇಯವರೂಥ=ಗರುಡವಾಹನ ॥೨೩॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಜ್ಞಾನ' ಇತಿ ॥ 'ಶಾಸ್ತಿ' ಇತಿ ವ್ಯುತ್ಪತ್ತೇಃ ॥ ವದಾನ್ಯಃ ದಾನಶೌಂಡಃ ॥ ವರೂಥಃ ಗುಪ್ತಿಃ ವಾಹನಂ ಇತಿ ಯಾವತ್ ॥೨೩॥

## ಕನ್ನಡಾರ್ಥ

'ವದಾನ್ಯ' ಎಂದರೆ ದಾನಶೌಂಡನೆಂದು ಅರ್ಥ. 'ವೈನತೇಯ ವರೂಥ' ಎಂದರೆ ಗರುಡವಾಹನನೆಂದು ಅರ್ಥ. 'ಶಾಸನ ಮಾಡುವವನು ಶಾಸ್ತ್ರ' ಎಂಬ ವ್ಯುತ್ಪತ್ತಿಯಿದ್ದುದರಿಂದ ಅಂತರ್ಯಾಮಿರೂಪದಿಂದ ಅಲ್ಲಲ್ಲಿ ಇದ್ದು ಆ ಆ ಶಬ್ದಗಳಿಂದ ವಾಚ್ಯನಾಗಿರುತ್ತಾನೆ.' ಎಂದು ತಾತ್ಪರ್ಯ॥೨೩॥

**ಅವತರಣಿಕಾ :—**ಲೋಕದಲ್ಲಿ ಇರುವ ಗ್ರಾಮ, ಉಪಗ್ರಾಮ, ಗ್ರಾಮಾಧಿಪತಿ ಗ್ರಾಮದಲ್ಲಿ ವಾಸ ಮಾಡಿದ ಜನರಲ್ಲಿ ಯಾವ ಯಾವ ನಾಮದಿಂದ ಯೋಗಕ್ಷೇಮಕನಾಗಿ ಸಲಹುವನೆಂದು ಶ್ರೀಹರಿಯು ಸ್ತೋತ್ರ ಮಾಡುತ್ತಾರೆ. ಈ ಪದ್ಯವು ದ್ವಂದ್ವಾರ್ಥ ಬೋಧಕವಾಗಿದೆ.

**ಗ್ರಾಮಪನೊಳಗ್ರಣಿಯೆನಿಸುವನು।**
**ಗ್ರಾಮಣೀಯೆನಿಸುವನು ಜನರೊಳು।**
**ಗ್ರಾಮಮುಪಗ್ರಾಮಗಳೊಳಗೆ ಶ್ರೀಮಾನ್ಯನೆನಿಸುತಿಪ್ಪ॥**
**ಶ್ರೀಮನೋರಮ ತಾನೆ ಯೋಗ।**
**ಕ್ಷೇಮನಾಮಕನಾಗಿ ಸಲಹುವ।**
**ಈ ಮಹಿಮೆ ಮಿಕ್ಕಾದ ದೇವರಿಗುಂಟೆ ಲೋಕದೊಳು॥೨೪॥**

**ಪದ್ಯಾರ್ಥ:—**ಗ್ರಾಮಪನೊಳಗ್ರಣಿಯೆನಿಸುವನು ಗ್ರಾಮಪ= ಊರು ಅಧಿಕಾರಿಯಲ್ಲಿ ಅಗ್ರಣಿ ಎನಿಸುವನೆಂಬ ಒಂದು ಅರ್ಥ, ಮತ್ತು ಗ್ರಾಮಃ="ಗ್ರಸತೇ ಗ್ರಸ್ಯತೇ" ವಾ ಗ್ರಾಮಃ" ಶುಭಾಶುಭಕರ್ಮಗಳನ್ನು ತಾನು ಭುಂಜಿಸಿ, ಜೀವರಿಗೆ ಭೋಜನ ಮಾಡಿಸುತ್ತಾನಾದುದರಿಂದ ಗ್ರಾಮಪಃ ಶ್ರೇಷ್ಠ (ಎಂದು ವಿಗ್ರಹಕೋಶ) ಅಗ್ರಣೀ=ಅಗ್ರಂ ಪ್ರಕೃಷ್ಟಂ ಪದಂ ನಯತಿ ಮುಕ್ತಾನಿತಿ ಅಗ್ರಣೀ (ವಿದ್ಯಾಧಿರಾಜೀಯ) ಉತ್ತಮ ಶುಭ ಕರ್ಮಗಳಿಂದ ಉತ್ತಮ ಜೀವರಿಗೆ ಶ್ರೇಷ್ಠವಾದ ಮುಕ್ತಿಯನ್ನು ಕೊಡುವ ನೆಂದು ಮುಖ್ಯಾರ್ಥ, ಗ್ರಾಮಣೀ ಎನಿಸುವನು ಜನರೊಳು=ಊರಲ್ಲಿಪ್ಪ ಜನರೊಳಗೆ, ಗ್ರಾಮಣಿ ಎನಿಸುವನು, ಅಥವಾ ಗ್ರಾಮಣೀ=ಗ್ರಾಮಂ ನಯ ತೀತಿ ಗ್ರಾಮಣೀ (ವಿ.ಕೋಶ) ಭೂತ ಗ್ರಾಮಸ್ಯ ನೇತೃತ್ವಾದ್ಗ್ರಾಮಣೀ= ಭೂತ ಪ್ರಸಿದ್ಧ ಗ್ರಾಮಗಳನ್ನು ಜನರಿಗೆ ಹೊಂದಿಸುವನಾದುದರಿಂದ ಗ್ರಾಮಣಿ ಎಂದು ಹರಿಯ ನಾಮ, ಗ್ರಾಮಮುಪಗ್ರಾಮಗಳೊಳಗೆ=ಗ್ರಾಮ ದೊಡ್ಡ ಊರು ಉಪಗ್ರಾಮಗಳಲ್ಲಿ ತಾನಿದ್ದು, ಶ್ರೀಮಾನ್ಯನೆನಿಸುತಿಪ್ಪ=ಭೂಯಿಷ್ಠಾ ಕಾಂತಿರಸ್ಯಾಸ್ತೀತಿ ಶ್ರೀಮಾನ್, ಅಥವಾ, ಸರ್ವೋತ್ತಮತ್ವೇನ ಸರ್ವೈಃ ಪೂಜ ನೀಯತ್ವಾತ್ ಮಾನ್ಯ=ಪ್ರಭುತ್ವದ ವಿಶೇಷ ಕಾಂತಿ ಬಲ ಓಜಸ್ಸು ತೇಜಸ್ಸಿ ನಿಂದ ಯುಕ್ತನಾದುದರಿಂದಲೂ, ಮತ್ತು, ಸರ್ವೋತ್ತಮತ್ವೇನ ಸರ್ವ ರಿಂದಲೂ ಪೂಜೆಗೊಳ್ಳುವನಾದುದರಿಂದ, ಭೂತ ಗ್ರಾಮ ಉಪಗ್ರಾಮಗಳಿಗೂ ಮುಕ್ತಲೋಕಗಳಲ್ಲಿ ಮುಖ್ಯವಾದ ಧಾಮತ್ರಯವಲ್ಲದೇ ಇತರ ಮುಕ್ತಸ್ಥಾನ ಗಳಾದ ಮೇರುಪರ್ವತ ಪರಿಯಂತ (ಉಪಗ್ರಾಮ) ದಲ್ಲಿ ಶ್ರೀಮಾನ್ಯನೆಂದು ಎನಿಸುತಿಪ್ಪ, ಶ್ರೀಮನೋರಮ=ತನ್ನ ಶ್ರೀರೂಪದಲ್ಲಿ ತಾನು ರಮಿಸುವ

ಸ್ವರೂಪಗಳನ್ನು, ಅಥವಾ ಲಕ್ಷ್ಮೀರೂಪಗಳನ್ನು. ತಾನೇ=ಸ್ವತಃ, ಯೋಗ ಕ್ಷೇಮಕನಾಗಿ="ಯೋಗಕ್ಷೇಮಂ ವಹಾಮ್ಯಹಂ" ಎಂಬ ಗೀತೋಕ್ತಿಯಂತೆ, ಯೋಗ=ಸರ್ವಕಾಮಸಿಯೋಜನಾದ್ಯೋಗಃ ಭಕ್ತರುಗಳನ್ನು ಸಿಯೋಜನ ಹೊಂದಿಸುವನಾದುದರಿಂದ ಯೋಗನೆಂತಲೂ, ಕ್ಷೇಮಕನು ತಾನಾಗಿ= ಕ್ಷೇಮಕೃತ್=(ಎಂದು ವಿಷ್ಣು ಸಾಸಿರ ನಾಮ) ಉಪಾತ್ತಸ್ಯ ರಕ್ಷಣಂ ಕ್ಷೇಮಂ ಕರೋತೀತಿ ಕ್ಷೇಮಕೃತ್ ॥ ಎಂದರೆ ಭಕ್ತರ ಸಕಲ ಆಪತ್ತು ಹರಿಸಿ, ಸಕಲ ಇಷ್ಟಾರ್ಥಗಳನ್ನು ಪೂರೈಸಿ, ಸುಖದಿಂದ ಇರಿಸುವನಾದುದರಿಂದ ಯೋಗಕ್ಷೇಮನಾಮಕನಾಗಿ, ಈ ಪೆಸರಿನಿಂದ, ಸಲಹುವ=ಇಹ ಪರದಲ್ಲಿ ರಕ್ಷಿಸುವನು, ಕಾಪಾಡುವನು, ಈ ಮಹಿಮೆ=ಮೇಲೆ ವಿವರಿಸಿದ ಶ್ರೀಹರಿಯ ಇಂತಹ ಉತ್ತಮ ಮಹಿಮೆ, ಮಾಹಾತ್ಮ್ಯ ಶಕ್ತಿ, ಲೋಕದೊಳು= ಚತುರ್ದಶ ಭುವನಗಳಲ್ಲಿ, ಮಿಕ್ಕಾದ ದೇವರಿಗುಂಟೆ?=ಶ್ರೀಸರ್ವೋತ್ತಮ ನಾದ ಶ್ರೀಹರಿಯ ವ್ಯತಿರಿಕ್ತವಾಗಿ, ಎರಡನೇದವರಾದ ಬ್ರಹ್ಮಾದಿದೇವತೆಗಳಿಗೆ ಇಂತಹ ಮಹಿಮೆಯುಂಟೇನು, ಇರುವದೇನು? ಇಲ್ಲೇ ಇಲ್ಲವೆಂದು ನಿರ್ಣಯ. ವ್ಯಾ. ದಾ. ಸಿ. ಕೌ.ಕಾರರು ಬಹು ವಿಶದ ರಹಸ್ಯಾರ್ಥ ಬರೆ ದಿರುವರು.

**ಭಾವಸೂಚನ** ॥ ಗ್ರಾಮೇತಿ ॥ ಅಗ್ರಣೀರ್ಗ್ರಾಮಣೀಃ ಶ್ರೀಮಾನಿತಿ ವಚನಾತ್ ॥೨೪॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

**"ಕ್ಷೇಮ"** ॥ * ಓಂ * ಅಮೃತಂ ದಿವಿ ಯಸ್ಮೈ ತ್ವಂ ಮಘವನ್ನಿಂದ್ರ ಗಿರ್ವಣಃ ॥ ಶಿಕ್ಷೋ ಶಿಕ್ಷಸಿ ದಾಶುಷೇ ಅಸ್ಮಾಕಂ ಗಿರ ಉತ ಸುಷ್ಟುತಿಂ ವಸೋ ॥ * ಓಂ * ಕ್ಷಿಣೋತಿ ವಾಸಯತಿ ಸುಖಂ ನಿವಸನ್ ಇತಿ ಕ್ಷೇಮಃ ॥ "ಅಗ್ರಣೀ" *ಓಂ *ಅನ್ಯದದ್ಯ(ಕರ್ಮ)ಮನ್ಯದುಶ್ವೋ ಸತ್ರಜ್ಜ ಸನ್ ಮುಹು ರಾಚಕ್ರಿರಿಂದ್ರಃ॥ಮಿತ್ರೋ ನೋ ಅತ್ರ ವರುಣಶ್ಚ ಪೂಷಾರ್ಯಃ ॥ * ಓಂ *॥ ಅಗ್ರಾಣಿ ಶುಭಾಶುಭ ರೂಪಾಣಿ ಕರ್ಮಾಣಿ ನಯತಿ ಇತಿ ಅಗ್ರಣೀಃ॥

**"ಗ್ರಾಮಣೀಃ"**—* ಓಂ * ವಿದಸ್ಯ ಪರ್ಯೇತಾಸ್ತಿ ವಿ ತ್ವದಾಪ್ತೋ ನ ಪರ್ವತಸ್ಯ ಪೃಷ್ಠೇಮುಕ್ಥೇಭಿರಿಂದ್ರಾನಯಂತ ಯಜ್ಞೈಃ ತಂ ತ್ವಾಭಿಃ

ಸುಷ್ಟುತಿಭಿರ್ನ ಜಯಂತಃ * ಓಂ * || ಕಮನೀಯಂ ಅಭೀಷ್ಟ ಗ್ರಾಮಂ ನಯತಿ ಇತಿ ಗ್ರಾಮಣೀಃ ||

"ಶ್ರೀಮಾನ್"—* ಓಂ * ಆಜಿಂ ನ ಜಗ್ಮುರ್ಗಿರಾವಾಹೋ ಅಶ್ವಾಃ ನ ಯಂ ಜರಂತಿ ಶರದೋ ನ ಮಾಸಾ ನ ದ್ಯಾವ ಇಂದ್ರಮವಕರ್ಶಯಂತಿ || * ಓಂ * || ಶ್ರಯತೇ ಇತಿ ಶ್ರೀಃ ಕಾಂತಿಃ || ಶರನ್ಮಾಸದಿವಸಾದಿಭಿಃ ಅನಪಕ್ಷೀಣ ಕಾಂತಿಃ ಅಸ್ಯ ಅಸ್ತಿ ಇತಿ ಶ್ರೀಮಾನ್ || ಅಪ್ರಾಪ್ತಲಾಭೋ ಯೋಗಃ || ಪ್ರಾಪ್ತರಕ್ಷಣಂ ಕ್ಷೇಮಃ ||೨೪||

## ಕನ್ನಡಾರ್ಥ

ಕ್ಷೇಮ(ಕ್ಷೇಮಕೃತ್)—ಸುಖದಿಂದ ಇರಿಸುವವನು.

"ಅಗ್ರಣೀಃ"—ಶುಭಾಶುಭರೂಪಗಳಾದ ಅಗ್ರಗಳನ್ನು ಕರ್ಮಗಳನ್ನು ಮಾಡಲು ಪ್ರೇರಿಸುವವನು || (ಹೊಂದಿಸುವವನು)

"ಗ್ರಾಮಣೀ"—ಮನೋಹರವಾದ ಅಭೀಷ್ಟಗಳ ಸಮೂಹವನ್ನು ತಂದುಕೊಡುವವನು.

"ಶ್ರೀಮಾನ್"—ಶ್ರೀಮಂತರಲ್ಲಿ ಇರುವುದು. ಶ್ರೀ ಎಂದರೆ ಕಾಂತಿ|| ವರ್ಷ, ಮಾಸ, ದಿವಸಗಳು ಕಳೆದುಹೋದರೂ ಅವುಗಳಿಂದ ಕ್ಷೀಣವಾಗದೇ ಇರುವ ಕಾಂತಿಯುಳ್ಳವನು.

ಮೊದಲು ದೊರೆಯದಿರುವುದು ಅನಂತರದಲ್ಲಿ ದೊರೆತರೆ ಅದಕ್ಕೆ ಯೋಗವೆನ್ನುತ್ತಾರೆ. ಪ್ರಾಪ್ತವಾದ ವಸ್ತುವು ಉಳಿಯುವಂತೆ ರಕ್ಷಿಸುವುದಕ್ಕೆ ಕ್ಷೇಮವೆನ್ನುತ್ತಾರೆ. ||೨೪||

**ಅವತರಣಿಕಾ :**—ಭಕ್ತಿಪೂರ್ವಕ ಭಕ್ತರು ಭಜಿಸಬೇಕು. ಅಂದರೆ ವಿಜಯನಾದ ಅರ್ಜುನನಿಗೆ ಸಾರಥ್ಯ ಕರ್ಮ ಮಾಡಿ ಜಯವನ್ನು ತಂದು ಕೊಟ್ಟಂತೆ ಸಕಲ ಕಾಲದೇಶಗಳಲ್ಲಿ, ಭಕ್ತರಿಗೆ ವಿಜಯವನ್ನು ಕೊಟ್ಟು ರಕ್ಷಿಸುವನೆಂದು ಹರಿಯ ಸ್ತೋತ್ರ ಗೈಯ್ಯುತ್ತಾರೆ.

ವಿಜಯಸಾರಥಿಯೆಂದು ಗರುಡ।
ಧ್ವಜನ ಮೂರ್ತಿಯ ಭಕ್ತಿಪೂರ್ವಕ।
ಭಜಿಸುತಿಪ್ಪ ಮಹಾತ್ಮರಿಗೆ ಸರ್ವತ್ರದಲಿ ವೊಲಿದು॥
ವಿಜಯದನು ತಾನಾಗಿ ಸಲಹುವ।
ಭುಜಗಭೂಷಣ ಪೂಜ್ಯ ಚರಣಾಂ।
ಬುಜ ವಿಭೂತಿದ ಭುವನಮೋಹನರೂಪ ನಿರ್ಲೇಪ॥೨೫॥

**ಪದ್ಯಾರ್ಥ :**—ವಿಜಯ=ಅರ್ಜುನನಿಗೆ ರಥ ನಡೆಸಿ ಸಾರಥಿ ಕರ್ಮವನ್ನು ಮಾಡಿದ, ಶ್ರೀಕೃಷ್ಣನೇ ಯೆಂದು ಗರುಡಧ್ವಜನ ಮೂರ್ತಿಯ=ಗರುಡದೇವರೇ ಧ್ವಜವಾಗಿವುಳ್ಳ ಶ್ರೀಕೃಷ್ಣಮೂರ್ತಿಯೇ ಪ್ರಾಜ್ಞನಾಮಕ ಬಿಂಬನೆಂದು ತಿಳಿದು, ಭಕ್ತಿಪೂರ್ವಕ=ಪರಮಪ್ರೀತಿ ಸ್ನೇಹಯುಕ್ತನಾಗಿ ಭಜಿಸುತಿಪ್ಪ ಮಹಾತ್ಮರಿಗೆ=ಪ್ರಾಜ್ಞನಾಮಕ ಬಿಂಬನನ್ನು ಧ್ಯಾನೋಪಾಸನೆ ಕ್ರಮದಿಂದ ಪೂಜಿಸುತಿಪ್ಪ, ಮಹಾತ್ಮರಿಗೆ=ಭಗವಂತನನ್ನು ಭಜಿಸುವ ಕೀರ್ತಿಗೆ ಕಾರಣವಾದ ಸದ್ಗುಣ ಉಳ್ಳವರು ಯಾರೋ ಇವರೇ ಮಹಾತ್ಮರು, ಇವರಿಗೆ ಸರ್ವತ್ರದಲಿ ವೊಲಿದು=ಸರ್ವ ದೇಶಕಾಲಗಳಲ್ಲಿ ಪ್ರೀತನಾಗಿ ಸುಪ್ರಸನ್ನತೆಯಿಂದ, ಕಣ್ಣಿಗೆ ಕಾಣಿಸಿಕೊಳ್ಳುತ್ತ, ಅಪರೋಕ್ಷೀಕೃತ ಶ್ರೀಶನು, ವಿಜಯದನು ತಾನಾಗಿ ಸಲಹುವ="ಸ್ವಮಹಿಮ್ನಾ ಜಗದ್ವಿಜಯತಿ ವಿಜಯಃ" ವಿಶಿಷ್ಟ ಜಯೋ ಯಸ್ಯೇತಿ ವಾ ವಿಜಯಃ" ।। (ವಿದ್ಯಾಧಿರಾಜೀರು) ಸ್ವಮಾಹಾತ್ಮ್ಯಯಿಂದ ಸಕಲ ಜಗತ್ತು ಜಯಿಸುವನಾದುದರಿಂದ ವಿಜಯನು ಯಾವಾತನಲ್ಲಿ ವಿಶಿಷ್ಟವಾಗಿ ಜಯವೇ ಇದೆಯೋ ಅಪಜಯಾದಿಗಳು ಇಲ್ಲೇ ಇಲ್ಲವೋ, ಇಂಥವನು, ವಿಜಯದ=ತಾನಾಗಿ ನಿಂದು ವಿಜಯವನ್ನು ಕೊಟ್ಟು, ಸಲಹುವ=ಸಂರಕ್ಷಿಸುವನು, ಯಾಕಂದರೆ ಈ ವಿಜಯಪ್ರದವು ಸದಾ ಗರುಡಧ್ವಜನಾದ ಕಾರಣ ಜ್ಞಾನವಂತನಾದವನು, ಯುದ್ಧದಲ್ಲಿ ಜಯ ಧ್ವಜ ಅಥವಾ ಚಿಹ್ನವುಳ್ಳವನೇ ಗರುಡಧ್ವಜನೆಂದು ವ್ಯಾ.ದಾಸ ಸಿ ಕೌಮುದಿ ಕಾರರ ವಚನ. ಭುಜಗಭೂಷಣ=ಶೇಷನೇ ಅಲಂಕಾರವಾಗಿರುವ ರುದ್ರ ದೇವರಿಂದ=ಪೂಜ್ಯ=ಪೂಜೆ ಮಾಡಿಸಿಕೊಳ್ಳುವ ಶ್ರೇಷ್ಠ, ಚರಣಾಂಬುಜ=ಪಾದಕಮಲಗಳುಳ್ಳಾತ, ವಿಭೂತಿದ=ಅಷ್ಟ ಐಶ್ವರ್ಯವನ್ನು ಕೊಡುವವನು,

ಭುವನ ಮೋಹನರೂಪ=ಜಗತ್ತನ್ನೇ ಮೋಹಗೊಳಿಸುವ ಮೋಹಿನೀ ಶ್ರೀ ರೂಪನು, ನಿರ್ಲೇಪ=ಗುಣತ್ರಯದಿಂದ ಲೇಪವಾಗದೇ ಇದ್ದ ಪೋಷದೂರನು.

**ಭಾವಸೂಚನ** ॥ ವಿಜಯೇತಿ ॥ ಅರ್ಜುನ ॥೨೫॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ವಿಜಯ' ಇತಿ ॥ **"ಗರುಡಧ್ವಜಃ"** * ಓಂ * ಮನಾಂಸಿ ಆತೂಷಿಂ ಚ ಕಣ್ವಮಂತಂ ನ ಘಾ ವಿಶದ್ಮವಸಾನಾತ್ ಯಶಸ್ತರಂ ಶತಮೂತೇಃ ಜ್ಯೇಷ್ಠೇನ ಸೋ ತೋರಿಂದ್ರಾಯ ॥ * ಓಂ * ॥ ಗಚ್ಛತಿ ಅವಗಚ್ಛತಿ ಇತಿ ಗೋ ಜ್ಞಾನೀ॥ ತೇನ ರುಃ ಯುದ್ಧಂ ತತ್ರ ಡೋ ಧ್ವನಿಃ ॥ ಸ್ವಾಪೇಕ್ಷಯಾ ಅಧಿಗುಣಪುಂಸಾ ನಿಯುಧ್ಯ ತಜ್ಜಯೇನ ನದತಿ ಸ್ವಾಧಿಕಪುಮಸಹಿಷ್ಣುಃ ॥೨೫॥

## ಕನ್ನಡಾರ್ಥ

**"ಗರುಡಧ್ವಜ"**—'ಗ' ಎಂದರೆ ಜ್ಞಾನವಂತನು, ಅದುದರಿಂದ 'ರು' ಯುದ್ಧದಲ್ಲಿ 'ಡಃ' ಧ್ವನಿಯೆಂಬ ಚಿಹ್ನವುಳ್ಳವನು ಎಂದು ಅರ್ಥ. ತನ ಗಿಂತಲೂ ಅಧಿಕ ಗುಣವುಳ್ಳವನೊಡನೆ ಯುದ್ಧಮಾಡಿ, ಅವನನ್ನು ಜಯಿಸಿ, ಅದರಿಂದ ನಾದಮಾಡುತ್ತಾನೆ. ಎಂದರೆ ಯುದ್ಧದಲ್ಲಿ ತನಗಿಂತ ಅಧಿಕ ಪುರುಷನಿಲ್ಲದಂತೆ ಮಾಡುವವನೆಂದು ತಾತ್ಪರ್ಯ. ॥೨೫॥

**ಅವತರಣಿಕಾ :**—ಸೃಷ್ಟಿಕಾಲಕ್ಕಿಂತಲೂ ಮುಂಚೆ ಅನಂತ ಜೀವ ರಾಶಿಗಳು ಅಸೃಜ್ಯಾವಸ್ಥೆಯಲ್ಲಿ ಕರ್ಮಫಲಗಳುಣ್ಣದೇ ಶ್ರೀಹರಿಯ ಸೃಷ್ಟ್ಯಾ ರಂಭದಿಂದ ಕರ್ಮಫಲಗಳನ್ನು ಉಣಿಸಲು ಯೋಗ್ಯತೆ ನೀಡಲು ಕರ್ಮಫಲ ಉಣಲು ಶಕ್ತರಾಗುವರೆಂದು ಪೇಳುತ್ತಾರೆ.

**ಅನಭಿಮತ ಕರ್ಮ ಪ್ರವಹದೊಳ ।**
**ಗನಿಮಿಷಾದಿ ಸಮಸ್ತ ಚೇತನ ।**
**ಗಣವಿಹದು ತತ್ಫಲಗಳುಣ್ಣದೆ ಸೃಷ್ಟಿಸಿದ ಮುನ್ನ ॥**
**ವನಿತೆಯಿಂದೊಡಗೂಡಿ ಕರುಣಾ ।**
**ವನಧಿ ನಿರ್ಮಿಸೆ ತಮ್ಮತಮ್ಮಯ ।**
**ಅನುಚಿತೋಚಿತ ಕರ್ಮಫಲಗಳ ಉಣುತ ಚರಿಸುವರು॥೨೬॥**

**ಪದ್ಯಾರ್ಥ :**—ಅನಭಿಮತ=ಅಭಿಮತವಾಗದೇ ಇದ್ದ ಅಂದರೆ ಕರ್ಮಫಲ ಉಣ್ಣಲಿಕ್ಕೆ ಅಶಕ್ತರಾಗಿದ್ದ, ಇಂತಹ ಕರ್ಮಪ್ರವಾಹದೊಳು= ಅನಾದಿನಿತ್ಯವಾದ ಕರ್ಮನಿಯು ಪ್ರವಾಹರೂಪದಿಂದ ಇದ್ದರೂ, ಅಸೃಜ್ಯ ಕಾಲ ದಲ್ಲಿ ಜೀವರಿಂದ ಭೋಕ್ತೃತ್ವವಾಗಿಲ್ಲದ ಅನಂತಾನಂತ ಕರ್ಮದ ಪ್ರವಾಹ ದಲ್ಲಿ ಅನಿವಿಂಷಾದಿ ಸಮಸ್ತ ಚೇತನಗಣವಿಹುದು=ರೆಪ್ಪೆ ಹಾಕದಿದ್ದ, ನಿದ್ರಾ ಇಲ್ಲದಿರುವ, ದೇವತಾಸಮೂಹವೂ ಮತ್ತು ಇತರ ಜೀವರುಗಳು ಅನಾದಿ ಯಿಂದ ಬಂದ ಕರ್ಮರೂಪ ಫಲವನ್ನು ಸೃಷ್ಟಿಸಿದ ಮುನ್ನ=ಸೃಷ್ಟಿಗೆ ತರದ ಮುಂಚೆ ಆ ಅನಾದಿ ಕರ್ಮಫಲ ಉಣಲಿಕ್ಕೆ ಶಕ್ತರಲ್ಲವಾದರೂ ಕರುಣಾವನಧಿ =ದಯಾಸಮುದ್ರನಾದ ಬಿಂಬರೂಪಿ ಹರಿಯು, ವಸಿತೆ=ಹೆಂಡತಿಯಿಂದೊಡ ಗೂಡಿ, ನಿರ್ಮಿಸೆ=ಪ್ರಕೃತಿದ್ವಾರಾ ಜೀವರನ್ನು ಸೃಷ್ಟಿಗೆ ತರಲು, ತಮ್ಮ ತಮ್ಮಯ=ಜೀವರುಗಳು ತಮ್ಮ ತಮ್ಮ ಅನುಚಿತ=ಉಚಿತವಾಗದಿದ್ದ, ಪಾಪಕರ್ಮಗಳು, ಉಚಿತ=ಯೋಗ್ಯವಾದ ಪುಣ್ಯಕರ್ಮಫಲಗಳನ್ನು, ಉಣುತ ಚರಿಸುವರು=ಅನುಭೋಗಿಸುತ್ತಾ ಸೃಷ್ಟ್ಯಾರಂಭದಿಂದ ಅನೇಕ ಜನ್ಮಗಳಲ್ಲಿ ಕರ್ಮಫಲ ಭೋಗಿಸುತ್ತ ತಿರುಗುವರು. ತಾತ್ಪರ್ಯವೇನಂದರೆ ಅನಾದಿಯಿಂದ ಕರ್ಮವಿದ್ದರೂ ಸೃಷ್ಟಿಯಾಗದ ಮುಂಚೆ ಜೀವರಿಗೆ ಆ ಕರ್ಮ ಫಲ ಭೋಕ್ತೃತ್ವವಿಲ್ಲವೆಂದು ಹೇಳಿದ್ದಾರೆ

**ಭಾವಸೂಚನ** ॥ ಅನಭಿಮತೇತಿ ॥ ಮುನ್ನ=ಮುಂಚೆ ॥ ವನಧಿ= ಸಮುದ್ರ ॥೨೬॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಅನಭಿಮತ' ಇತಿ ॥ ಅಸೃಜ್ಯಕಾಲೇ ಮುನ್ನ ಮುಂಚೆ ॥೨೬॥

## ಕನ್ನಡಾರ್ಥ

"ಸೃಷ್ಟಿಸಿದ ಮುನ್ನ" ಎಂದರೆ "ಅಸೃಜ್ಯಕಾಲದಲ್ಲಿ" ಎಂದು ಅರ್ಥ.

ಅಸೃಜ್ಯ ಅವಸ್ಥೆಯಲ್ಲಿ ಕರ್ಮಗಳಿದ್ದರೂ ಅವುಗಳ ಫಲಗಳನ್ನು ಉಪ ಭೋಗಿಸದೇ ಚೇತನಗಣಗಳಿರುತ್ತವೆ. ಸೃಷ್ಟಿಯಿಂದ ಅವರವರ ಕರ್ಮಫಲ ಗಳನ್ನು ಅವರವರು ಉಪಭೋಗಿಸುತ್ತ ಸಂಸಾರನಿರತರಾಗುತ್ತಾರೆ. ಎಂದು ತಾತ್ಪರ್ಯ. ॥೨೬॥

**ಅವತರಣಿಕಾ :—**ಸಂಸಾರವಶೆಯಲ್ಲಿ ಭವದ ಸೌಖ್ಯವು ಸುಖದುಃಖ ಸಮ್ಮಿಶ್ರವಾದುದು, ಜೀವರ ಬೆನ್ನು ಬಿಡದೆ ಹತ್ತಿಹುದು. ಅದು ಪರಿಹರಿಸುವ ಭಗವದ್ಭಕ್ತ ಸಹವಾಸ ಮಾಡು ಎಂದು ಶಿಷ್ಯರನ್ನು ಶಿಕ್ಷಿಸುತ್ತಾರೆ.

**ಝಲ್ಲಡಿಯ ನೆಳಲಂತೆ ತೋರ್ಪುದು।**
**ಎಲ್ಲ ಕಾಲದಿ ಭವದ ಸೌಖ್ಯವು।**
**ಎಲ್ಲಿ ಪೊಕ್ಕರು ಬಿಡದು ಬೆಂಬತ್ತಿಹುದು ಜೀವರಿಗೆ॥**
**ಒಲ್ಲೆನೆಂದರೆ ಬಿಡದು ಹರಿ ನಿ।**
**ರ್ಮಾಲ್ಯ ನೈವೇದ್ಯವನೆ ಭುಂಜಿಸಿ।**
**ಬಲ್ಲವರ ಕೂಡಾಡು ಭವದುಃಖಗಳನೀಡಾಡು॥೨೭॥**

**ಪದ್ಯಾರ್ಥ :—**ಝಲ್ಲಡಿಯ ನೆಳಲಂತೆ ತೋರ್ಪುದು=ಸೂರ್ಯನ ಬಿಸಿಲಿಗೆ ಬಿದುರಿನ ಅಥವಾ ತಂತಿಯಿಂದ ಹೆಣೆಯಲ್ಪಟ್ಟ ಝಲ್ಲಡಿ, ಕಾಳು ಕಡ್ಡಿ ಹಸನು ಮಾಡುವದು ಅಥವಾ ಹಿಟ್ಟು ಸೋಸುವ ಝಲಡಿ ನೆಳಲು ಅರ್ಧ ನೆಳಲು ಅರ್ಧ ಬಿಸಿಲು ಹೇಗೆ ಕಾಣುತ್ತದೋ ಅದರಂತೆಯೇ, ಎಲ್ಲ ಕಾಲದಿ ಭವದ ಸೌಖ್ಯವು=ಎಲ್ಲ ಕಾಲದಿ ಎಂದರೆ ಸೃಷ್ಟ್ಯಾರಂಭದಿಂದ ಪ್ರಾರಬ್ಧಕರ್ಮ ಉಂಡು ತೀರಿಸುವವರೆಗೆ, ಭವದ ಸೌಖ್ಯ=ಸಂಸಾರದಲ್ಲಿ ಸಮ್ಮಿಶ್ರವಾದ ಸುಖದುಃಖಾತ್ಮವಾದುದಾದರೂ, ಇದು ಸಂಸಾರಸುಖವು, ಜೀವರಿಗೆ ಬೆಂಬತ್ತಿಹುದು=ಜೀವರು ಯಾವ ಜನ್ಮ ಯಾವ ಜನ್ಮದಲ್ಲಿ ಜನಿಸಿದರೂ ಬೆನ್ನುಹತ್ತಿಯೇ ಇರುವುದು, ಒಲ್ಲೆನೆಂದರೆ ಬಿಡದು=ಅಪ್ಪಾ ಹರಿಯೇ ಈ ಸುಖದುಃಖದಿಂದ ಪಾರು ಮಾಡಪ್ಪಾ ಎಂದು ಗೋಳಿಟ್ಟರೂ ಬಿಡದು, ಕರ್ಮವು ಬೆನ್ನಟ್ಟಿಯೇ ಇರುವುದು. ಇದರ ಪರಿಹಾರಕ್ಕೆ ಉಪಾಯವೇನೆಂದರೆ ಬಲ್ಲವರ ಕೂಡಾಡು=ಭಗವದ್ಭಕ್ತರಾದವರ, ಭಗವಂತನ ಮಹಿಮೆಯನ್ನು ಚೆನ್ನಾಗಿ ತಿಳಿದ ಜ್ಞಾನಿಗಳಲ್ಲಿ, ಕೂಡಾಡು=ಭಕ್ತಿಪುರಸ್ಸರವಾಗಿ ನಮಿಸಿ ಅವರಿಂದ ಜ್ಞಾನ ಸಂಪಾದಿಸು, ಮತ್ತು ಹರಿ ನಿರ್ಮಾಲ್ಯ ನೈವೇದ್ಯವನೆ ಭುಂಜಿಸಿ=ಶ್ರೀ ಬಿಂಬರೂಪಿ ಪ್ರಾಣಾಂತರ್ಯಾಮಿಯಾದ ಶ್ರೀಹರಿಗೆ ಸಮರ್ಪಿತವಾದ ತುಳಸಿದಳ, ನಿರ್ಮಾಲ್ಯ ಮತ್ತು ತೀರ್ಥ ಸಮ್ಮಿಶ್ರಿತವಾದ ನೈವೇದ್ಯವನೆ ಭುಂಜಿಸಿ=ನಿವೇದನ ಮಾಡಿದ ಚತುರ ವಿಧ ಅನ್ನವನ್ನು

ಪ್ರಾಣಾಗ್ನಿಹೋತ್ರ ಕ್ರಮದಿಂದ ಭೋಜನ ಮಾಡುತ್ತ ಭವದುಃಖಗಳ ನೀಡಾಡು=ಸಂಸಾರದಲ್ಲಿ ಪದೇ ಪದೇ ಬರುವ ದುಃಖಗಳನ್ನು ಕಳೆದುಕೊ ॥೨೭॥

ಭಾವಸೂಚನ ॥ ಝಲ್ಲಿದೀತಿ ॥೨೭॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಝಲ್ಲಡಿ' ಇತಿ ॥ ಝರಡಿ ॥ 'ಬೆಂ' ಬೆನ್ನು ॥ ಪೂರ್ವೇಣ ಅನ್ವಯಃ ॥೨೭॥

## ಕನ್ನಡಾರ್ಥ

'ಬೆಂಬಿಡದು' ಎಂದರೆ ಬೆನ್ನು ಬಿಡಲಾರದು ಎಂದು ಅರ್ಥ. ಇಲ್ಲಿ "ಬೆಂಬಿಡದೆ ಹತ್ತಿಹುದು" ಎಂದು ಯೋಜಿಸಬೇಕು. ಅಂದರೆ ಬೆನ್ನನ್ನು ಬಿಡಲಾರದೇ ಇರುವುದೆಂಬ ಅರ್ಥವು ಲಭಿಸುತ್ತದೆ. ॥೨೭॥

**ಅವತರಣಿಕಾ** :—ಹಿಂದಿನ ಪದ್ಯದಲ್ಲಿ ಶ್ರೀಹರಿ ನೈವೇದ್ಯ ಭುಂಜಿಸಲು ಹೇಳಿದಂತೆ ಶ್ರೀಹರಿ ನಿವೇದನೆಗೋಸುಗ ಮಾಡುವ ಅನ್ನಸಂಸ್ಕಾರಕ್ಕೆ, ಪಂಚ ಸೂನ ದೋಷ ಪ್ರಾಯಶ್ಚಿತ್ತ ರೂಪವಾದ ಯಜ್ಞಕ್ರಮವನ್ನು ವಿಸ್ತರಿಸಿ ಅದರ ಫಲವನ್ನು ಹೇಳುತ್ತಾರೆ.

**ಕುಟ್ಟಿಕೊಯಿಂದದನಟ್ಟು ಇಟ್ಟದ ।**
**ಸುಟ್ಟುಕೊಟ್ಟದ ಮುಟ್ಟಲಘ ಹಿ ।**
**ಟ್ಟಿಟ್ಟು ಮಾಳ್ಪದು ವಿಟ್ಠಲುಂಡುಚ್ಛಿಷ್ಟ ಸಜ್ಜನರ ॥**
**ಬಿಟ್ಟು ತನ್ನಯ ಹೊಟ್ಟೆಗೋಸುಗ ।**
**ಥಟ್ಟನುಣುತಿಹ ಕೆಟ್ಟ ಮನುಜರ ।**
**ಕಟ್ಟಿ ವೈದೆಮಪಟ್ಟಣದೊಳೊತ್ತಟ್ಟಲಿಡುತಿಹರು ॥೨೮॥**

**ಪದ್ಯಾರ್ಥ** :—ಕೊಯ್ದುದು ಕುಟ್ಟಿ=ಧಾನ್ಯಗಳ ಬೆಳೆ ಕೊಯುವದನ್ನು ಇದು ಕೊಯ್ದ ದೋಷ, ಕುಟ್ಟಿ=ಭತ್ತ ನೆಲ್ಲು ಕುಟ್ಟಿ ಅಥವಾ

ಬೀಸಿದ್ದು ಇದು ಎರಡನೇ ದೋಷ, ಅಟ್ಟು=ಆ ಧಾನ್ಯಗಳನ್ನು ಅಟ್ಟು ಅಡಿಗೆ ಮಾಡಿದದ್ದು ಬೇಯಿಸಿದ್ದು ಮೂರನೇ ದೋಷ, ಇಟ್ಟದ=ನೀರಿನಲ್ಲಿ ಇಟ್ಟು ತೊಳೆದು, ಹಿಟ್ಟು ನೀರಿನಲ್ಲಿ ಕಲಿಸಿ, ಧಾನ್ಯಗಳನ್ನು ನೀರಿನಲ್ಲಿ ನೆನಸಿದ್ದು, ಶೂರ್ಪಾದಿಗಳಿಂದ ಹಸನ ಮಾಡಿಟ್ಟದ್ದು, ಮತ್ತು ನೀರಿನಲ್ಲಿ ಕಾಳುಕಡಿ ತೊಗರಿ ಹೆಸರು ನೀರಿನಲ್ಲಿ ನೆನಿ ಹಾಕಿ ಬ್ಯಾಳಿ ಮಾಡುವದು, ವ್ರೀಹ್ಯಾದಿಗಳನ್ನು ನೆನಸಿ ಸಸಿ ಮಾಡಿ ಗದ್ದೆಯಲ್ಲಿ ಹಚ್ಚುವುದು. ನೀರಿನಲ್ಲಿ ಹೆಸರು, ಕಡ್ಲಿ, ಉದ್ದಿನ ಬ್ಯಾಳಿ ನೆನಸಿ, ವರಳಿನಿಂದ ರುಬ್ಬಿ ಕೋಸುಂಬರಿ ಚಟ್ನಿ ಅರೆಯುವುದು, ಸುಟ್ಟು=ಗದ್ದೆಗೆಣಸುಗಳನ್ನು ಸುಟ್ಟದ್ದು, ಕಾಳು ಗಳು ಹುರಿಯುವುದು, ಕರೆಯುವುದು, ಹಪ್ಪಳ ರೊಟ್ಟಿಗಳನ್ನು ಸುಟ್ಟು ಈ ಐದು ಹಿಂಸಾಸ್ಥಾನೀಯ ದೋಷಗಳು. ಈ ದೋಷಗಳ ಪರಿಹಾರಾರ್ಥವಾಗಿ ಅಡಿಗೆ ಮಾಡಿದ ನಾನಾ ವಿಧ ಪದಾರ್ಥಗಳನ್ನು, ಕೊಟ್ಟದು=(೧) ಶ್ರೀಹರಿ ರಮಾದೇವಿಯರಿಗೆ, ಪ್ರಾಣ ಭಾರತಿಯರಿಗೆ ನೈವೇದ್ಯ ಕೊಟ್ಟದ್ದು (೨) ಕೊಟ್ಟದು=ಅಗ್ನಿದ್ವಾರಾ ಯಜ್ಞಪುರುಷ ಪರಶುರಾಮದೇವರಿಗೆ, ವೈಶ್ವ ದೇವ ಮುಖೇನ ಆಹುತಿ ಕೊಟ್ಟದ್ದು (೩) ಕೊಟ್ಟದು=ಗುರುಗಳಿಗೆ ಪೂಜಾನಂತರ "ಯತಿಹಸ್ತೇ ಜಲಂ ದದ್ಯಾತ್" ........ತದನ್ನಂ ಮೇರುಣಾ ತುಲ್ಯಂ" ಎಂಬುವಂತೆ "ಕುಟುಂಬಾಭರಣರಿಗೆ ಎರಡರಷ್ಟು | ಬ್ರಾಹ್ಮಣರಿಗೆ ಗಡಿಗಡಿಸಿತ ಮೂರು ವಾನಪ್ರಸ್ಥರಿಗೆ ವಿಧಿಸಿ | ಜಡಮತಿಯು ಬಿಟ್ಟು ಯತಿ ಗಳಿಗೆ ನಾಲ್ಕಷ್ಟು | ಕುಂಡಲಿಶಯನ ಪುರಂದರ ವಿಠಲ | ಈ ಪರಿ ಪೊಡವಿ ಜನರಿಗೆ ವಿಧಿ ಕರ್ಮ ನಿರ್ಮಿಸಿದ ‖ ಎಂಬ ಮಂತ್ರದಿಂದ ಗುರುಗಳಿಗೆ ಹಸ್ತೋದಕ ಕೊಟ್ಟದು, (೪) ನಂತರ ಕೊಟ್ಟದು=ಬ್ರಾಹ್ಮಣರ ಮುಖದಿಂದ ಅನ್ನವನ್ನು ಕೊಟ್ಟು ಶ್ರೀಹರಿ ಪ್ರೀತಿ ಬಡಿಸಿದ್ದು ನಂತರ (೫) ಕೊಟ್ಟದ್ದು= ತಾನು ಪ್ರಾಣಾಗ್ನಿ ಹೋತ್ರಕ್ರಮದಿಂದ ತನ್ನಲ್ಲಿದ್ದ ಪಂಚಾಗ್ನಿಯಲ್ಲಿಪ್ಪ ಅನಿರುದ್ಧಾದಿ ಪಂಚಮೂರ್ತಿಗಳಿಗೆ ಪ್ರಾಣಾಹುತಿ ಕೊಟ್ಟರೆ, ಭಗವಂತ ತೃಪ್ತ ನಾಗಿ ಉಂಡ ಅನ್ನ ರಸದಿಂದ ಸದ್ಬುದ್ಧಿ, ಹುಟ್ಟಿ ಹರಿಯಲ್ಲಿ ದಿನೇ ದಿನೇ ಭಕ್ತಿ ಪುಟ್ಟುತ್ತದೆ. ಕಾರಣ ಪವಿತ್ರವಾದ ಅನ್ನ ಊಟ ಮಾಡಿದರೆ ಅಂದರೆ ನೈವೇದ್ಯ ಭುಂಜಿಸಿದರೆ, ವಿಠಲುಂಡುಚ್ಛಿಷ್ಟ ಸಜ್ಜನರ=ಮೇಲೆ ವಿವರಿಸಿದೆ. ಅಜ್ಞಾನಿಗಳನ್ನು ಜ್ಞಾನಮಾರ್ಗಕ್ಕೆ ಹಚ್ಚುವ ವಿಠಲನಾಮಕ ಹರಿಯು

ಊಟ ಮಾಡಿದ, ಉಚ್ಛಿಷ್ಟ=ಎಂಜಲು ಅರ್ಥಾತ್ ನೈವೇದ್ಯ ಶೇಷ ಸಕ್ರಮ ವಾಗಿ ಭೋಜನ ಮಾಡಿದರೆ, ಅಘಗಳು=ಪಾಪಗಳು, ಮುಟ್ಟಲರಿಯವು= ಪಾಪಗಳು ಒಂದು ವೇಳೆ ಅಕಸ್ಮಾತ್ ತಗಲಿದರೆ, ಹಿಟ್ಟಿಟ್ಟು ಮಾಳ್ಪದು =ಆ ಪಾಪದೋಷಗಳೆಲ್ಲ ಅರೆದು, ಕುಟ್ಟಿದು ಚೂರುಚೂರು ಆಗಿ ಬೀಸಿದ ಸಣ್ಣ ಹಿಟ್ಟಿನಂತೆ ನಾಶವಾಗುವದು. ಇಂತು ನೈವೇದ್ಯ ವೈಶ್ವದೇವ ಮಾಡಿದ ಅನ್ನವನ್ನು ಉಣದೇ ಬಿಟ್ಟು, ತನ್ನಯ ಹೊಟ್ಟೆಗೋಸುಗ=ಕೇವಲ ತನ್ನ ಉದರ ಪೂರ್ತಿಗಾಗಿ ಹಸಿದ ಆಗಿದೆ, ನೈವೇದ್ಯ ವೈಶ್ವದೇವವೇನು ಇದೆಲ್ಲಾ ಮುದಿಹುಚ್ಚು ಎಂದು ತಿಳಿದು ತನ್ನ ಹಸಿವೆಗೆ ಹೊಟ್ಟೆ ತುಂಬಿಕೊಳ್ಳಲು, ಥಟ್ಟನುಣುತಿಹ=ನನಗೆ ಊಟದ ವೇಳೆ ಮೀರಿತೆಂದು ಬೇಗನೆ ಅವಸರದಿಂದ ಊಟ ಮಾಡುತ್ತಿರುವ, ಕೆಟ್ಟ ಮನುಜರ=ಕುಹಕಯುಕ್ತಿಯುಳ್ಳವರು, ಹರಿ ಗುರುಗಳಲ್ಲಿ ಭಕ್ತಿ ಇಲ್ಲದ ಮನುಷ್ಯರನ್ನು ಯಮದೂತರು, ಹರಿಯಾಜ್ಞೆ ಯಂತೆ ಕಟ್ಟಿವೈದೆಮಪಟ್ಟಣದೊಳೊತ್ತಟ್ಟಲಿಡುತಿಹರು=ಅಂತ್ಯ ಕಾಲಕ್ಕೆ ಭಗವಂತನ ವಿಸ್ಮೃತಿ ಇತ್ತು ಯಮಪಾಶಗಳಿಂದ ಬಿಗಿದುಕಟ್ಟಿ, ಜೀವನನ್ನು ದೇಹದಿಂದ ಸೆಳೆದು ಯಾತನಾ ದೇಹದಿ ಯಮ=ದಂಡಧಾರಿಯಾಗಿ ದುಷ್ಟ ರನ್ನು ಶಿಕ್ಷಿಸುವ ಯಮದೇವರ ಪಟ್ಟಣದಲ್ಲಿಗೆ ನೂಕುತ್ತವೈದು ಒಂದು ಭಾಗ ದಲ್ಲಿ ಇಡುವರು. ಕಾರಣ ಹರಿನೈವೇದ್ಯ ವೈಶ್ವದೇವಾನ್ನ ಭುಂಜಿಸಬೇಕು.

**ವಿಶೇಷ ಸೂಚನೆ :—**"ಪಂಚಸೂನಾ ಗೃಹಸ್ಥಸ್ಯ ವರ್ತಂತೇಽಹರ ಹಸ್ಸದಾ || ಖಂಡಿನೀ ಪೇಷಿಣೀ ಚುಲ್ಲೀ ಜಲಕುಂಭ ಉಪಸ್ಕರಃ || ಏತಾ ಭಿರ್ವಾಹಯನ್ವಿಪ್ರೋ ಬಧ್ಯತೇ ನ ಮುಹುರ್ಮುಹುಃ ಏತಾಸಾಂ ಪಾವ ನಾರ್ಥಾಯ ಪಂಚಯಜ್ಞಾಃ ಪ್ರಕಲ್ಪಿತಾಃ || ಇತಿ || ಸೂನಾಃ ಹಿಂಸಾ ಸ್ಥಾನಾನಿ || ಸೂಯತೇ ಸವನಂ ವಾ ಸೂನಾ || ಪ್ರಾಣಿಗರ್ಭವೋಚನ, ಅಥವಾ ಹಿಂಸಾ ವಧಸ್ಥಾನ, ಯಾವದೋ ಅದು ಸೂನಾ,

೧ ಖಂಡಿನೀ=ಮುಸಲೋಲುಖಾದಿಃ || ಕೊಯ್ದದ್ದು, ವರಳೊಳಗೆ ಹಾಕಿ ಕುಟ್ಟಿದ್ದು, ಕಟ್ಟಿಗಿ ಬೀಸುಕಲ್ಲಿನಲ್ಲಿ ಒಡೆದದ್ದು ಇತ್ಯಾದಿ

೨ ಪೇಷಿಣೀ=ದೃಷದುಪಲಾದಿ=ಬೀಸುಕಲ್ಲಲ್ಲಿ ಹಾಕಿ ಬೀಸಿದ್ದು, ಕಲ್ಲ ಒರಳಲ್ಲಿ ಹಾಕಿ ರುಬ್ಬಿದ್ದು ಇತ್ಯಾದಿ

೩ ಚುಲ್ಲೀ=ಪಾಕಸ್ಥಾನಂ=ಪಾಕಮಾಡಿ ಬೇಯಿಸುವದು, ರೊಟ್ಟಿ ಬೇಯಿಸುವದು, ಹುರಿಯುವದು, ಕರೆಯುವದು, ಇತ್ಯಾದಿ

೪ ಜಲಕುಂಭಃ=ಉದಧಾನಃ=ತಂಡುಲಾದಿ ನೀರಲ್ಲಿ ನೆನಸುವದು ಬೇಳೆ ನೀರಿನಲ್ಲಿ ನೆನಸಿ ಕೋಸುಂಭರ‍್ಯಾದಿ ಮಾಡುವದು, ನೀರಿನ ಸಂಪರ್ಕದಿಂದ ಧಾನ್ಯಗಳಿಗೆ ಆಗುವ ಪರಿಣಾಮ, ಇತ್ಯಾದಿ.

೫ ಉಪಸ್ಕರಃ=ಶೂರ್ಪಾದಿ=ಮೊರದಿಂದ ಕೇರುವದು, ರಘುಲ್ಲಡಿಯಿಂದ ಹಸನು ಮಾಡುವದು, ಇತ್ಯಾದಿ. ಇವೇ ಮೊದಲಾದ ಪಂಚ ಸೂನ ದೋಷ ಪ್ರಾಯಶ್ಚಿತ್ತಾರ್ಥವಾಗಿ ವೈಶ್ವದೇವ ಯಜ್ಞ ಮಾಡುವದೆಂದು ಶಾಸ್ತ್ರಸಮ್ಮತವಾಗಿದೆ (ಯಾಜುಷ ಪೂರ್ವ ಪ್ರಯೋಗ)

**ಭಾವಸೂಚನ ||** ಕೊಟ್ಟೇತಿ || ಅಟ್ಟು ಅಡಿಗೆ ಮಾಡಿ, ಇಟ್ಟದ=ಇಟ್ಟದು=ಇವೈದು ಪಂಚ ಸೂನು ||೨೮||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪಂಚಸೂನಾಃ ಆಹ 'ಕುಟ್ಟಿ' ಇತಿ || ಅಟ್ಟು ಬೀಸೋದು ||೨೮||

## ಕನ್ನಡಾರ್ಥ

ನಿತ್ಯನಡೆಯುವ ಜೀವನಾಧಾರಕ ಪಂಚಹಿಂಸೆಗಳನ್ನು ಹೇಳಿ ಅವುಗಳ ನಾಶೋಪಾಯವನ್ನು ತಿಳಿಸುತ್ತಾರೆ 'ಕುಟ್ಟಿ' ಎಂಬುದಾಗಿ. ಅಟ್ಟುವುದು. ಬೀಸುವುದು. (ಪದ್ಯಾರ್ಥವು ಸುಲಭವಿದೆ.) ||೨೮||

**ಅವತರಣಿಕಾ :—**ಹಿಂದಿನ ಪದ್ಯದಲ್ಲಿ ಹೇಳಿದಂತೆ ಕೇವಲ ಹೊಟ್ಟೆ ತುಂಬಿಕೊಳ್ಳುವದು ದೇಹಸೌಖ್ಯ ಉಪಭೋಗದಾಶೆ ಬಿಡು. ಶ್ರೀಹರಿ ಮಂದಿರದ ಹೆಬ್ಬಾಗಲಲ್ಲಿ ನಿಂದು ಶ್ರೀಹರಿಯನ್ನು ಪ್ರಾರ್ಥಿಸು. ಎಂದರೆ ಹರಿಯು ಬೇಗನೆ ದೊರಕಿ ಭವರೋಗ ಕಳೆಯುವನೆಂದು ಹೇಳುತ್ತಾರೆ.

ಜಾಗುಮಾಡದೆ ಭೋಗದಾಶೆಯ।
ನೀಗಿ ಪರಮನುರಾಗದಿಂದಲಿ।
ಭೋಗಿಶಯನನ ಆಗರದ(ಮಂದಿರದ) ಹೆಬ್ಬಾಗಿಲಲಿ ನಿಂದು।
ಕೂಗುತಲಿ ಶಿರಬಾಗಿ ಕರುಣಾ।
ಸಾಗರನೆ ಭವರೋಗ ಭೇಷಜ।
ಕೈಗೊಡೆಂದೆನೆ ಬೇಗನೊದಗುವ ಭಾಗವತರರಸ॥೨೯॥

**ಪದ್ಯಾರ್ಥ** :—ಜಾಗು ಮಾಡದೇ=ಆಲಸ್ಯ ಮಾಡದೇ ಆದಷ್ಟು ಬೇಗನೆ ತ್ವರೆಯಿಂದ, ಭೋಗದಾಶೆಯ ನೀಗಿ=ಸಂಸಾರ ಸುಖ, ದಾರಾ ಪುತ್ರಾದಿಗಳ ಪ್ರೇಮ, ಊಟ ಉಡಿಗೆ ರತಿಕ್ರೀಡಾದಿ ಭೋಗದ ಸುಖಬಡುವ ಇಚ್ಛೆಯನ್ನು ಕಳೆದುಬಿಡು, ಪರಮನುರಾಗದಿಂದಲಿ=ಪುತ್ರಾತ್ ಪ್ರಿಯ, ಮಿತ್ರಾತ್ ಪ್ರಿಯ, ದಾರೇಭ್ಯಃ ಪ್ರಿಯ ಸರ್ವರಿಂದಲೂ ಸಾರವಸ್ತು ಶ್ರೀಹರಿಯೆ ಇರುವನೆಂದು ಮಹಾಭಕ್ತಿಯಿಂದ, ಭೋಗಿಶಯನನ=ಸರ್ಪಶಯನನ ಆಗರದ ಅಥವಾ ಮಂದಿರದ ಆಗಾರ ಮನೆ ಮಂದಿರ ಮನೆ ಗುಡಿಯು, ಯಾವ ಪ್ರಸಿದ್ಧವಾದ ಧಾಮತ್ರಯ ಶ್ವೇತದ್ವೀಪಾನಂತಾಸನ ವೈಕುಂಠದ ಮಹಾದ್ವಾರ ದಲ್ಲಿ ನಿಲ್ಲು, ಹೌದಪ್ಪಾ ಈಗೆಲ್ಲಿ ನೀನು ಇರುವದು ಭೂಲೋಕ ಮರ್ತ್ಯದೇಹ ದಲ್ಲಿ. ನಿನಗೆಲ್ಲಿ ಆ ವೈಕುಂಠಾದಿಗಳ ಹೆಬ್ಬಾಗಿಲು ಪ್ರಾಪ್ತಿ ಎಂದರೆ "ಹೃದಯ ಸದನವೇ ವೈಕುಂಠ, ಅಲ್ಲಿಪ್ಪ ಬಿಂಬನಾಮಕ ಹರಿಯೇ ಮೂಲ ನಾರಾಯಣ ಇಂತಹ ದೇಹಾಖ್ಯ ಹೃದಯ ಮಹಾದ್ವಾರ ಯಾವುದು? ಶ್ರೀಹರಿಯನ್ನು ಸ್ತೋತ್ರ ಮಾಡಲಿಕ್ಕೆ ಯೋಗ್ಯವಾದ ಮುಖವೇ ಮಹಾದ್ವಾರದ ಮುಖದಲ್ಲಿ ಶ್ರೀಹರಿನಾಮವನ್ನು ಇಟ್ಟು, ನಾಲಿಗೆಯಿಂದ, ಕೂಗುತ,=ಹರೇ ದುರಿತಾರೆ ಮುರಾರೇ ಕರುಣಾಸಾಗರ, ಭವರೋಗ ಭೇಷಜ=ಭವ ಸಂಸಾರ ರೋಗಕ್ಕೆ ವೈದ್ಯನೇ "ಸಂಸಾರರೋಗ ನಿವರ್ತಕ ವಿದ್ಯೋಪದೇಷ್ಟೃತ್ವಾದ್ಭಿಷಕ್" (ವಿದ್ಯಾಧಿ ರಾಜೀಯ), ಎಂದು ನಾಚದೆ, ಕೂಗುತ=ಉಚ್ಚ ಸ್ವರದಿಂದ ಕೂಗಿ, ಅಪ್ಪಾ ಇನ್ನಾದರೂ ಕೈಗೊಡು, ಕೈಹಿಡಿಯಪ್ಪಾ, "ಕರಾವಲಂಬನಂ ದೇಹಿ" ಎಂದು ಪ್ರಾರ್ಥಿಸಲು, ಭಾಗವತರರಸ=ಭಗವದ್ಭಕ್ತರು ಯಾರೋ ಅವರೆ ಭಾಗವತರು ಬ್ರಹ್ಮ ವಾಯ್ವಾದಿ ತತ್ವದೇವತೆಗಳಿಗೆ ಒಡೆಯ=ರಾಜನಾದ ಶ್ರೀಹರಿಯು,

ಬೇಗನೊಪಗುವ=ಬೇಗನೆ ತ್ವರಿತವಾಗಿ ಅಂತ್ಯ ಕಾಲದಲ್ಲಿ ಈ ಸ್ಮರಣೆಯು ತಂದಿತ್ತು ಒಪಗುವ=ಶಿಗುವ ಭಕ್ತರ ವಶನಾಗುವನು.

**ಭಾವಸೂಚನ** ॥ ಜಾಗು ಮಾಡದೇ ಆಲಸ್ಯ ಮಾಡದೇ । ಆಗರದ ಹೆಬ್ಬಾಗಿಲು=ಅಗಸಿಯ ಬಾಗಿಲು ॥ ೨೯ ॥

## ಶ್ರೀವ್ಯಾಸ ದಾಸ ಸಿದ್ಧಾಂತ ಕೌಮುದೀ

'ಜಾಗು' ಇತಿ ॥ ಆಲಸ್ಯ ॥ 'ನೀಗಿ' ಬಿಟ್ಟು ॥ ಭವರೋಗ ಭೇಷಜ **ವೈದ್ಯ** * ಓಂ * ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ಆನ ಇಂದ್ರೋ ದುರಾದಾನ ಆಸಾದಭಿಷ್ಟಿಕೃದವಸೇ ಯಾಸದುಗ್ರಃ ಓಜಿಷ್ಠೇಭಿಃ ॥ ಓಂ ॥ ಅಸ್ಮದಜ್ಞಾನಾದಿರುಜಾಂ, ಉಗ್ರಃ ಕ್ರೂರಶ್ಛೇತಿ ವೈದ್ಯಃ ॥ ೨೯ ॥

## ಕನ್ನಡಾರ್ಥ

ಜಾಗು ಎಂಬುದಕ್ಕೆ ಆಲಸ್ಯವೆಂದು ಇಲ್ಲಿ ಅರ್ಥ. 'ನೀಗಿ' ಎಂದರೆ ಬಿಟ್ಟು ಎಂದು ಅರ್ಥ. ಭವರೋಗಭೇಷಜವೆಂಬ ಪದವು ಸಹಸ್ರನಾಮಗಳಲ್ಲಿಯ 'ವೈದ್ಯ' ಎಂಬುದರ ಅರ್ಥ. ಅಂದರೆ ಅಜ್ಞಾನ ಮುಂತಾದ ನಮ್ಮಲ್ಲಿರುವ ರೋಗಗಳಿಗೆ ಉಗ್ರವಾದ ಪರಿಹಾರಕನು ಎಂದು ಅರ್ಥ. ॥೨೯॥

**ಅವತರಣಿಕಾ :—** ಮತ್ತೂ ಮತ್ತೂ ಶ್ರೀಹರಿಯ ಕಾರುಣಿಕತೆ ಭಕ್ತಾಪರಾಧ ಸಹಿಷ್ಣುತೆಯನ್ನು ವಾಲ್ಮೀಕಿ ಋಷಿಯು ದೃಷ್ಟಾಂತಪೂರ್ವಕವಾಗಿ ಹರಿಯ ಸ್ತೋತ್ರಗೈಯ್ಯುತ್ತಾರೆ.

**ಏನು ಕರುಣವೋ ತನ್ನವರಲಿ ದ ।**
**ಯಾನಿಧಿಗೆ ಸದ್ಭಕ್ತಜನರತಿ ।**
**ಹೀನ ಕರ್ಮವ ಮಾಡಿದರು ಸರಿ ಸ್ವೀಕರಿಸಿ ಪೊರೆವ ॥**
**ಪ್ರಾಣಹಿಂಸಕ ಲುಬ್ಧಕಗೆ ಸು ।**
**ಜ್ಞಾನ ಭಕ್ತಿಗಳಿತ್ತು ದಶರಥ ।**
**ಸೂನು ವಾಲ್ಮೀಕಿಋಷಿಯ ಮಾಡಿದ ಪರಮಕರುಣಾಳು॥೩೦॥**

**ಪದ್ಯಾರ್ಥ :—** ಶ್ರೀಹರಿಯು ದಯಾನಿಧಿಯು, ಕರುಣಾಸಮುದ್ರನು. ಇಂತಹ ದಯಾಮಯನಿಗೆ ತನ್ನವರಲಿ ಏನು ಕರುಣವೋ=ತನ್ನ ನಿಜ ಭಕ್ತರಾಗಿ ಸಾಧನ ಸಂಪನ್ನರೂ, ಪ್ರಾರಬ್ಧಕರ್ಮ ತೀರಿಸಿ, ಅವರನ್ನು "ವಿಮೋಚಯಾಮಿ" ಎಂಬ ಮಹಾ ಉತ್ತಮ ಪ್ರಸಾದದಿಂದ ಭವಮೋಚನ ಮಾಡುವೆನೆಂಬ ದಯಾದೃಷ್ಟಿ ಯಾವ ಜೀವಿಯ ಮೇಲೆ ಬಿದ್ದಿದೆಯೋ ಅವನನ್ನೇ, ಹರಿಯು ತನ್ನವನೆಂದು ನೋಡುವನು, ಇಂತಹ ತನ್ನ ಭಕ್ತರಾದ ಸಮೀಚೀನ ಜ್ಞಾನ ಉಳ್ಳವರು, ಸದ್ಭಕ್ತಜನರತಿಹೀನ ಕರ್ಮವ ಮಾಡಿದರೂ=ಪ್ರಾರಬ್ಧ ಅನುಭೋಗ ಕಾಲದಲ್ಲಿ ಅತಿ ಹೀನ ಕರ್ಮವ ಮಾಡಿದರೂ, ವಾಲ್ಮೀಕಿಯು ಬೇಡನು ಪಶುಹಿಂಸಾದಿ ಕೆಟ್ಟ ಕರ್ಮವನ್ನು ಮಾಡಿದರೂ, ಸರಿಯೇ=ಅಹಿಂಸಾ ಕರ್ಮವೇ ಪ್ರಾರಬ್ಧ ಕೊನೆಯ ಕರ್ಮವೆಂದು ಸ್ವೀಕರಿಸಿ=ತಾನು ತನ್ನಿಚ್ಛೆಯಿಂದ ಉಪಮರ್ದನ ಮಾಡುವದೆ, ಹೀನಕರ್ಮವಾದರೂ ಹರಿಗೆ ಸ್ವೀಕೃತವಾಗುವುದು, ಹೀಗೆ ಭಕ್ತರ ಹೀನ ಕೆಟ್ಟ ಕರ್ಮವನ್ನು ಸ್ವೀಕಾರ ಮಾಡಿ, ಪೊರೆವ=ರಕ್ಷಣೆ ಮಾಡುವನು, ಯಾರಿಗೆಂದರೆ, ಪ್ರಾಣ ಹಿಂಸಕ ಲುಬ್ಧಕಗೆ=ಬೇಡರಜಾತಿಯಲ್ಲಿ ಪುಟ್ಟ ಪ್ರಾಣಿಗಳನ್ನು ವಧೆ ಮಾಡುತ್ತ ಪ್ರಾಣಿಗಳ ಹಿಂಸಾ ಮಾಡುವನಿಗೆ ಪ್ರಾರಬ್ಧಕರ್ಮ ತೀರಿದ್ದು ನೋಡಿ, ಲುಬ್ಧಕಗೆ=ಆ ಜಾತಿ ಬೇಡರವನಿಗೆ, ಸುಜ್ಞಾನಭಕ್ತಿಗಳಿತ್ತು=ಸಮೀಚೀನವಾದ ಒಳ್ಳೆ ಜ್ಞಾನ, ಭಕ್ತಿ ವಿರಕ್ತ್ಯಾದಿಗಳನ್ನು ಕೊಟ್ಟು, ದಶರಥ ಸೂನು=ದಶರಥರಾಜನಲ್ಲಿ ಅವತರಿಸಿದ (ಪುತ್ರ) ರಾಮದೇವರು ಬೇಡರವನಿಗೆ ಜ್ಞಾನ ಭಕ್ತಿ ಪಾಲಿಸಿ, ವಾಲ್ಮೀಕಿ ಋಷಿಯು ಮಾಡಿದ ಪರಮ ಕರುಣಾಳು=ಆ ವಾಲ್ಮೀಕಿ=ಬೇಡರವನನ್ನೇ=ಋಷಿ ಜ್ಞಾನವಂತನನ್ನಾಗಿ ಮಾಡಿ ರಾಮಾಯಣ ಸಂಪೂರ್ಣ ಬರೆಸಿದ ಕರುಣಾಳು ಭಕ್ತಾಪರಾಧಸಹಿಷ್ಣು ಎಂದು ಹರಿಯ ಸ್ತೋತ್ರ ಮಾಡಿದ್ದಾರೆ.

**ಭಾವಸೂಚನ ||** ಏನೇತಿ || ಲುಬ್ಧಕ=ವಾಲ್ಮೀಕರು. "ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ || ಯತ್ ಕ್ರೌಂಚ ಮಿಥುನಾದೇಕ ಮವಧೀಃ ಕಾಮ ಮೋಹಿತಮ್ || ೧೫ || ಇತ್ಯುಕ್ತೇಃ || ಪುರಾಣ ರಾಮಾಯಣ ||೩೦||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಏನು' ಇತಿ ‖ ೩೦ ‖

### ಕನ್ನಡಾರ್ಥ

ದಯಾಮಯ ಸ್ವಭಾವವಿದ್ದುದರ ಮೂಲಕ ಭಕ್ತರ ಅಪರಾಧಗಳನ್ನೆಲ್ಲ ಕ್ಷಮಿಸಿ ಅವರನ್ನು ಅನುಗ್ರಹಿಸಿ ಉದ್ಧರಿಸುವನೆಂಬ ಮಹಿಮೆಯನ್ನು ದೃಷ್ಟಾಂತಪುರಃಸರವಾಗಿ ವರ್ಣಿಸುತ್ತಾರೆ ಈ ಪದ್ಯದಿಂದ.‖೩೦‖

**ಅವತರಣಿಕಾ :—** ಹಿಂದೆ ಹೇಳಿದಂತೆ ಭಕ್ತರ ಅಪರಾಧಗಳನ್ನು ಕ್ಷಮಿಸಿ ಪ್ರಾರಬ್ಧ ಉಣಿಸಿ, ಕಡೆಗೆತ್ತುವ ಶ್ರೀಹರಿಯ ಹೊರತಾಗಿ, ಇನ್ನಾರನ್ನೂ, ಏನನ್ನೂ ಬೇಡಕೂಡದು, ಬೇಡಿದರೆ, ಹರಿಭಕ್ತರಾದ ಭಾಗವತರ ಸಹವಾಸ ಕೊಡೆಂದು ಶ್ರೀಹರಿಯನ್ನೇ ಬೇಡುವದೆಂದು ಉಪದೇಶಿಸುತ್ತಾರೆ.

**ಮೂಢ ಮಾನವ ಎಲ್ಲ ಕಾಲದಿ ।**
**ಬೇಡಿಕೊಂಬೆನಿತೆಂದು ದೈನ್ಯದಿ ।**
**ಬೇಡದಂದದಿ ಮಾಡು ಪುರುಷಾರ್ಥಗಳ ಸ್ವಪ್ನದಲಿ ‖**
**ನೀಡುವರೆ ನಿನ್ನಮಲ ಗುಣ ಕೊಂ ।**
**ಡಾಡಿ ಹಿಗ್ಗುವ ಭಾಗವತರೊಡ ।**
**ನಾಡಿಸೆನ್ನನು ಜನ್ಮಜನ್ಮಗಳಲ್ಲಿ ದಯದಿಂದ ‖೩೧‖**

**ಪದ್ಯಾರ್ಥ :—** ಮೂಢ ಮಾನವ=ಮೂಢ=ಮುಹ್ಯತೀತಿ ಮೂಢಃ =ಯಾವನು ಅವಿವೇಕನಾಗುವನೋ ಅವನೆ ಮೂಢ ಮೂರ್ಖ, ಮಾನವ =ಮನುಜ ಜನ್ಮದಲ್ಲಿ ಪುಟ್ಟಿ ದೊಡ್ಡವರಾದು ಎಂಬ ವಿವೇಕ ತಿಳಿಯದೇ, ವಿಜಯದಾಸರನ್ನು ನಿಂದಿಸಿದ ಪೂರ್ವದಯದ ಮೂರ್ಖನೆಂಬುದು ಜ್ಞಾಪಕಕ್ಕೆ ತಂದುಕೊಂಡು, ಶ್ರೀಹರಿಯೇ ನಾನು ಮೂರ್ಖನು, ಒಂದೂ ತಿಳಿಯದ ದಡ್ಡನು, ಎಲ್ಲ ಕಾಲದಿ=ಸರ್ವ ಕಾಲದಲ್ಲಿ ಅವಸ್ಥಾತ್ರಯದಲ್ಲಿ ಮತ್ತು ಮುಂದೆ ಯಾವ ಜನ್ಮ ಕೊಟ್ಟರೂ ಆ ಜನ್ಮದಲ್ಲಿಯೂ ನಾನು ದೈನ್ಯದಿ

ಇನಿತೆಂದು ಬೇಡಿಕೊಂಬೆನು=ದೀನನಾಗಿ ಆರ್ತಭಕ್ತಿಯುತನಾಗಿ ಪ್ರಾರ್ಥಿಸುತ್ತೇನೆ. ಹೇ ಸ್ವಾಮಿ, ಕರುಣಾಳು, ಜೇಡದಂಪದಿ ಮಾಡು ಪುರುಷಾರ್ಥಗಳ ಸ್ವಪ್ನದಲಿ=ಕನಸಿನಲ್ಲಿಯೂ ಸಹ ಧರ್ಮ-ಅರ್ಥ-ಕಾಮ-ಮೋಕ್ಷವನ್ನು ಸಹ ಯಾವ ಜನ್ಮದಲ್ಲಿಯೂ ಬಯಸದಂತೆ ಮಾಡು, ಇದನೆ ಬೇಡುವೆ. ಏನಿವಚ್ಚರ ಮೋಕ್ಷವನ್ನು ಸಹ ದಾಸರು ಬೇಡಲಿಲ್ಲವಯ್ಯಾ ಹೌದು. ಶ್ರೀಹರಿಯೇ ಮುಖ್ಯ ಮೋಕ್ಷಪ್ರದಾತನಲ್ಲೇ ಇಚ್ಛೆ ಹೊರ್ತಾಗಿ ದೇವತೆಗಳಿಗೆ ಅನ್ಯ ಅಪೇಕ್ಷವಿಲ್ಲ, ಕಾರಣ ಸ್ವಾಮಿ ನಾನೇನು ನಿನ್ನ ಬೇಡುವುದಿಲ್ಲವಯ್ಯಾ ಆದರೆ ನೀನು ಎನ್ನನು ಉದ್ಧರಿಸಲು ನೀಡುವರೆ=ಪ್ರಸಾದರೂ ಕೊಡುವುದಾದರೆ, ದಯದಿಂದ=ಅಂತಃಕರುಣದಿಂದ, ಜನ್ಮಜನ್ಮಗಳಲ್ಲಿ=ಮುಂದೆ ಯಾವ ಜನ್ಮಗಳು ಬರಲಿ ಆ ಜನುಮಗಳಲ್ಲಿ, ನಿನ್ನಮಲ ಗುಣ ಕೊಂಡಾಡಿ ಹಿಗ್ಗುವ=ಹರೇ ನಿನ್ನ ನಿರ್ಮಲವಾದ ಸಚ್ಚಿದಾನಂದಾದಿ ಜ್ಞಾನಾದಿ ಅನಂತ ಪೂರ್ಣನೆಂದು ಸ್ತೋತ್ರ ಮಾಡುತ್ತ ಸಂತೋಷಪಡುತ್ತ ಪರವಶರಾಗಿ ನಲಿಯುತ್ತಿರುವ, ಭಾಗವತರೊಡನಾಡಿಸು=ಷಡ್ಗುಣೈಶ್ವರ್ಯ ಸಂಪನ್ನನಾದ ಹರಿಗುಣಗಳನ್ನು ಸಂತತ ನೆನೆದು ಭಗವತ್ಪರರಾದವರಲ್ಲಿ ಆಡಿಸು=ಅವರ ದಾಸನಾಗಿ ಅವರಲ್ಲಿ ಭಕ್ತಿಯಿಂದ ಅವರ ಜಿಸ್ಥತ್ರಿ ತಿರುಗಿಸು, ಭಾಗವತರ ಸಂಗ ಕೊಡು ವಿಜಯಗೋಪಾಲರ ಸಂಗ ಕೊಡು.

**ಭಾವಸೂಚನ** ॥ ಮೂಢೇತಿ ॥ ನೀಡುವರಾ=ಕೊಡುವರಾ ॥೩೧॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮೂಢ" ಇತಿ ॥ ೩೧ ॥

## ಕನ್ನಡಾರ್ಥ

ಸ್ವಪ್ನದಲ್ಲಿಯೂ ಸಹ ಪುರುಷಾರ್ಥಗಳನ್ನು ಕೇಳುವಂತೆ ಮಾಡದೇ, ಭಗವದ್ಗುಣಗಾನ ನಿರತರಾದ ಭಾಗವತರ ಸಂಗವೊಂದನ್ನು ಜನ್ಮಜನ್ಮಗಳಲ್ಲಿಯೂ ದಯಪಾಲಿಸೆಂದು ಕೇಳಬೇಕೆನ್ನುತ್ತಾರೆ ಈ ಪದ್ಯದಿಂದ. ॥೩೧॥

**ಅವತರಣಿಕಾ :**—ಹಿಂದಿನ ಪದ್ಯಾರ್ಥವನ್ನೇ ದೃಢೀಕರಿಸುತ್ತಾ ನೀನು

ಅನ್ಯ ದೇವತೆಗಳನ್ನು ಭಜಿಸದೇ ನಾಲ್ಕು ವಿಧ ಪುರುಷಾರ್ಥ ಕೊಡುವ ಹರಿಯನ್ನೇ ಭಜಿಸೆಂದು ಶಿಷ್ಯರನ್ನು ಶಿಕ್ಷಿಸುತ್ತಾರೆ.

**ಚತುರವಿಧ ಪುರುಷಾರ್ಥರೂಪನು ।**
**ಚತುರ ಮೂರ್ತ್ಯಾತ್ಮಕನಿರಲು ಮ ।**
**ತ್ತಿತರ ಪುರುಷಾರ್ಥಗಳ ಬಯಸುವರೇನು ಬಲ್ಲವರು ॥**
**ಮತಿ ವಿಹೀನರು ಅಲ್ಪಸುಖ ಶಾ ।**
**ಶ್ವತವಿದೆಂದರಿವನುದಿನದಿ ಗಣ ।**
**ಪತಿಯೇ ಮೊದಲಾದನ್ಯ ದೇವತೆಗಳನೆ ಭಜಿಸುವರು ॥೩೨॥**

**ಪದ್ಯಾರ್ಥ :—**ಚತುರ ವಿಧ ಪುರುಷಾರ್ಥರೂಪನು=ಧರ್ಮ-ಅರ್ಥ-ಕಾಮ-ಮೋಕ್ಷ ಈ ನಾಲ್ಕು ವಿಧವಾದ ಕಾಮನಾ ಕೊಡುವವನು, ಅದೇ ನಾಲ್ಕು ರೂಪ ಪುರುಷಾರ್ಥನಾಗಿ ಚತುರ್ಮೂರ್ತ್ಯಾತ್ಮಕನಿರಲು=ಅನಿರುದ್ಧ-ಪ್ರದ್ಯುಮ್ನ-ಸಂಕರ್ಷಣ.ವಾಸುದೇವ, ಈ ನಾಲ್ಕು ರೂಪನು ಶ್ರೀಹರಿ ಸ್ವಯಂ ತಾನಿರಲು, ಇಂತಹ ಪರಮಪುರುಷನೇ ಪುರುಷಾರ್ಥರೂಪದಿಂದ ಇರುವಾಗ, ಬಲ್ಲವರು=ಜ್ಞಾನಿಗಳು, ಮತ್ತಿತರ ಪುರುಷಾರ್ಥಗಳ ಬಯಸುವರೇನು=ಜಡವಾದ ಧರ್ಮ-ಅರ್ಥ-ಕಾಮ-ಮೋಕ್ಷ ಇವುಗಳನ್ನು ಜ್ಞಾನಿಗಳು ಇಚ್ಛಾ ಮಾಡುವರೇನು? ಹರಿಭಕ್ತರು ಹರಿಯನ್ನು ಬಿಟ್ಟು ಮೋಕ್ಷವನ್ನು ಸಹ ಅಪೇಕ್ಷಿಸರು, ಆದರೆ ಇದರ ವಿರುದ್ಧವಾಗಿ, ಮತಿ ವಿಹೀನರು=ಬುದ್ಧಿ ತಿಳುವಳಿಕೆಯಿಲ್ಲದ ಅಜ್ಞಾನಿಗಳು, ಅಲ್ಪಸುಖ=ಈ ಸಂಸಾರ ಸುಖವೇ, ಶಾಶ್ವತವೆಂದನುದಿನದಿ=ದುಃಖಮಯ ಸಂಸಾರ ಅನಿತ್ಯವೆಂದು ತಿಳಿಯದೇ ಇದೇ ಸುಖವೇ ನಮಗೆ ಶಾಶ್ವತ ಸುಖ=ನಿರಂತರ ಇರುವ ಸುಖವೆಂದು ತಿಳಿದು, ಗಣಪತಿಯೇ ಮೊದಲಾದನ್ಯ ದೇವತೆಗಳನೆ ಭಜಿಸುವರು=ಕ್ಷುದ್ರ ದ್ರವ್ಯಲಾಭ ಮಾಡುವ ಉಚ್ಛಿಷ್ಟ ಗಣಪತಿ, ಎಕ್ಕೆಬೆನಿಕ, ಯಲ್ಲಮ್ಮ, ಏಕನಾಥಿ, ಬನ್ನದಶಂಕರಿ ಮೊದಲಾಗಿ ಉಳ್ಳ ಭಗವದ್ಭಕ್ತಿ ವಿಹೀನರಾದವರನ್ನು, ದೇವತೆಗಳನ್ನು ಭಜಿಸುವರು, ಪೂಜಿಸುವರು, ಅನ್ಯ ದೇವತೆಗಳು ಯಾರೆಂಬುದನ್ನು ಶ್ರೀಕೃಷ್ಣಾಚಾರ್ಯ ಸ್ಮೃತಿ ಮುಕ್ತಾವಳಿ ಮತ್ತು ಶ್ರೀ ಪುರಂದರದಾಸರ ಪದ ಶ್ರೀ ವಿಜಯದಾಸರ ಸುಳಾದಿ “ಅನ್ಯ

ದೇವತೆಗಳ ಕಣ್ಣೆತ್ತಿ ನೋಡದಿರಿ" ಎಂಬ ಸುಳಾದಿಲಿ ಹೇಳಿದ್ದಾರೆ. ಅವು ಗಳನ್ನು ನೋಡಿರಿ.

**ಭಾವಸೂಚನ** ॥ ಚತುರೇತಿ ॥ ಜಗತ್ಪತೀತ್ಯನಂತರಂ ಪ್ರಾರ್ಥನೆಯು ಮಾಡುವರು "ಸತ್ಕರ್ಮಗಳಾಚರಿಸೇತಿ ಪಾಠಃ (ಪ್ರಕ್ಷಿಪ್ತಃ) ॥೩೨॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಚತುರ' ಇತಿ ॥ "ಅನಿರುದ್ಧಾದಿಃ" ॥೩೨॥

## ಕನ್ನಡಾರ್ಥ

ನಾರಾಯಣನನ್ನೇ ಚತುರ್ವಿಧಪುರುಷಾರ್ಥರೂಪನೆಂದು ಚತುರ್ಮೂರ್ತಿ ಗಳಿಂದ ಸಜ್ಜನರು ಭಜಿಸುವರು. ಅನಿರುದ್ಧ ಮುಂತಾದುವುಗಳೇ ಆ ಚತುರ್ಮೂರ್ತಿಗಳು. ॥೩೨॥

**ಅವತರಣಿಕಾ** —ಕರುಣಾಳುವಾದ ಹರಿಗೆ ಜೀವರಲ್ಲಿ ವೈಷಮ್ಯ ಗಳಿಲ್ಲದ ಸುಧರ್ಮನಾಮ ಹರಿಯು, ಪ್ರಾರಬ್ಧ ತೀರಿಸಿ ಬ್ರಹ್ಮಕಲ್ಪಾಂತ್ಯದಲ್ಲಿ ತ್ರಿವಿಧರಿಗೆ ಅವರವರ ಗತಿ ಕೊಡುವನೆಂದು ಶ್ರೀಹರಿಯ ಸ್ತೋತ್ರಪೂರ್ವಕ ಸಂಧಿಯನ್ನು ಮುಗಿಸುತ್ತಾರೆ.

ಒಮ್ಮೆಗಾದರು ಜೀವರೊಳು ವೈ ।
ಷಮ್ಯ ದ್ವೇಷಾಸೂಯವಿಲ್ಲ ಸು ।
ಧರ್ಮನಾಮಕ ಸಂತಯಿಸುವನು ಸರ್ವಗನು ನಿತ್ಯ ।
ಬ್ರಹ್ಮ ಕಲ್ಪಾಂತದಲಿ ವೇದಾ ।
ಗಮ್ಯ ಶ್ರೀಜಗನ್ನಾಥ ವಿಟ್ಠಲ ।
ಸುಮ್ಮನೀವನು ತ್ರಿವಿಧರಿಗೆ ಅವರವರ ನಿಜಗತಿಯಾ ॥೩೩॥

ಅಂತು ಸಂಧಿ ೨೩ಕ್ಕೆ ಪದ್ಯ ೬೭೧
ಭಕ್ತಾಪರಾಧ ಸಹಿಷ್ಣು ಸಂಧಿ ಸಮಾಪ್ತ ಮಂಗಳಮಾಹ ॥
ಶ್ರೀಗುರುಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :—**ಜೀವರೊಳು=ತ್ರಿವಿಧರಾದ ಚೇತನರಾಶಿಗಳಲ್ಲಿ ಒಮ್ಮಿಗಾದರೂ=ಹಿಂದೆ, ಇಂದೆ, ಮುಂದೆ ಯಾವ ಕಾಲದಲ್ಲಿಯೂ, ಯಾವ ನಿಮಿತ್ತದಿಂದಲೂ, ವೈಷಮ್ಯ=ವಿಷಮತೆ, ಸಮಾನತೆಯಿಲ್ಲದಿರುವಿಕೆ, ಕಷ್ಟ ತೊಂದರೆ ಇರುವಿಕೆ, ದ್ವೇಷ=ವೈರಿತನ, ಹಗೆತನ, ಅಸೂಯ=ಹೊಟ್ಟೆಕಿಚ್ಚುಗಳು ಶ್ರೀಹರಿಯು ವೈಷಮ್ಯಾದಿ ರಹಿತನು, "ಸುಧರ್ಮನಾಮಕ ಸಂತೈಸುವನು ಸರ್ವರನು ನಿತ್ಯ=ನಿತ್ಯದಲ್ಲಿಯೂ, ಎಲ್ಲ ಜೀವರನ್ನು ಅಂದರೆ ಮೂರು ವಿಧ ಜೀವರನ್ನು, ಅವರವರ ಯೋಗ್ಯತೆಯಂತೆ ಸುಧರ್ಮ ನಾಮಕ=ಸಮೀಚೀನವಾದ, ನಿಯಮ, ಕರ್ತವ್ಯ, ನ್ಯಾಯ, ನೀತಿ, ಸತ್ಕರ್ಮ, ಪುಣ್ಯ, ಪ್ರಕೃತಿಸ್ವಭಾವಾದಿ ಧರ್ಮವನ್ನು ಚನ್ನಾಗಿ ತಿಳಿದ ಹರಿಗೆ ಸುಧರ್ಮನಾಮಕನೆಂದು ಹೆಸರು. ಇಂತು ಜೀವರ ಸ್ವಭಾವ ಯೋಗ್ಯತೆ ಬಲ್ಲ ಧರ್ಮನಾಮಕನು. ಸಂತೈಸುವನು=ರಕ್ಷಿಸುವನು, ನಿತ್ಯ ಕಾಪಾಡು ವನು, ಹೇಗೆ ಕಾಪಾಡುವನೆಂದರೆ, ಪ್ರಾರಬ್ಧ ಕರ್ಮ ತೀರಿಸಿಪನಂತರ, ಪುನಃ ಜನ್ಮಗಳನ್ನು ಕೊಡದೇ ಮಹರಾದಿ ಲೋಕಗಳಲ್ಲಿ ಇಟ್ಟು ಬ್ರಹ್ಮ ಕಲ್ಪಾಂತ ದಲಿ=ಈಗಿನ ಬ್ರಹ್ಮದೇವರ ೧೦೦ ಕಲ್ಪ ಮುಗಿಯುವವರೆಗೆ ಮಹಾಪ್ರಳ ಯಾನಂತರದಲ್ಲಿ ಬ್ರಹ್ಮಣಾ ಸಹಾ ವಿರಜಾ ಸ್ನಾನ ಮಾಡ್ಸಿ, ಲಿಂಗಭಂಗಗೈಸಿ ಅನಿಷ್ಟ ನಿವೃತ್ತಿ ಮಾಡಿ ವೇದಾಗಮ್ಯ=ವೇದಗಳಿಗೂ ಸಿಲುಕದ ಮಹಾ ಮಹಿಮನು, ಶ್ರೀಜಗನ್ನಾಥವಿಠಲನು=ಜಗತ್ತಿಗೆ ಸ್ವಾಮಿಯಾದ, ಅಜ್ಞರಿಗೆ ಸಾಧನದಿಂದ ಸುಜ್ಞಾನವನ್ನು ಕೊಡುವ ವಿಠ್ಠಲ ಬಿಂಬರೂಪಿ ಹರಿಯು ಸುಮ್ಮನೀವನು=ತ್ರಿವಿಧ ಜೀವರ ಸ್ವಭಾವವನ್ನರಿತವನಾದುದರಿಂದ ಅವರವರ ಯೋಗ್ಯತಾನುಸರಿಸಿ ತ್ರಿವಿಧರಿಗೆ=ತ್ರಿವಿಧ ಜೀವರಿಗೆ, ಅವರ ನಿಜವಾದ ಗತಿ ಗಮನ ಆನಂದಾನುಭವ, ಸತ್ವರಿಗೆ, ಸುಖದುಃಖ ಮಿಶ್ರಗತಿ, ರಜೋ ಜೀವರಿಗೆ ದುಃಖಾವಿರ್ಭಾವ ತಮಸ್ಸು, ತಮೋ ಜೀವರಿಗೆ ಸುಮ್ಮನೀವನು=ದ್ವೇಷಾ ಸೂಯುವಿಲ್ಲದೆ, ಸುಮ್ಮನೀವನು=ಜೀವರುಗಳಿಂದ ಯಾಚಿಸದೇ ಸುಮ್ಮನೇ ಅವರ ತಕ್ಕ ನಿಜವಾದ ಗತಿ ಮೋಕ್ಷ-ಆನಂದ-ಮಿಶ್ರ ಸುಖ, ತಮೋದುಃಖ ರೂಪವಾದ ಅಂಧಂತಮಸ್ಸನ್ನು ಕೊಡುವನು.

ಇಂತು ದಾಸರೇ ಈ ಮಂದನಲ್ಲಿ ನಿಂದು ಪದ್ಯಾರ್ಥವನ್ನು ವಿವರಿಸಿ ಬರೆಸಿದ
ದಾಸರ ಹೃದ್ಗತನಾದ ಮಧ್ವೇಶನಡಿಗಳಿಗೆ ಅರ್ಪಿತ

**ಭಾವಸೂಚನ** ॥ ಸಂಧಿಮುಪಸಂಹರತಿ ॥ ಒಮ್ಮೆಗೇತಿ ॥ ಸುಧರ್ಮ ನಾಮಕ ದಯದಿ ಸಂತೈಸುವನೇತಿ ವಾ ಪಾಠಃ ॥ ಬ್ರಹ್ಮಕಲ್ಪಾಂತದಲ್ಲಿ ಮಹಾ ಪ್ರಳಯದಲ್ಲಿ ॥ ೩೩ ॥

ಶ್ರೀಹರಿಕಥಾಮೃತಸಾರ ಭಾವಸೂಚನೆ
(ಭಕ್ತಾಪರಾಧ ಸಹಿಷ್ಣು) ಸರ್ವದುರಿತ ನಿವಾರಣ ಸಂಧಿಃ ಸಮಾಪ್ತಃ ॥
ಸರ್ವಪಾಪಹಾರ್ಯರ್ಪಣಮಸ್ತು ॥ ಶ್ರೀರಾಮರಾಮಃ

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ "ಒಮ್ಮೆ" ಇತಿ ॥ ಯೋಗ್ಯತಾತಿರೇಕೇಣ ॥ ವಿಷಮತ್ವಂ ಭವೇತ್ ಕ್ವಾಪಿ ಶುಭಾಶುಭವಿಪರ್ಯಯೇ ॥ ೩೩ ॥

ಇತಿ ಶ್ರೀ ಹರಿಕಥಾಮೃತಸಾರ ಟೀಕಾಯಾಂ
ಭಕ್ತಾಪರಾಧ ಸಹಿಷ್ಣು ಸಂಧಿಃ ಸಮಾಪ್ತಃ ॥

## ಕನ್ನಡಾರ್ಥ

ಈ ಸಂಧಿಯನ್ನು ಮುಗಿಯಿಸುತ್ತಾರೆ 'ಒಮ್ಮೆ' ಎಂಬ ಪದ್ಯದಿಂದ.

ಇಲ್ಲಿಗೆ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಯಲ್ಲಿ
ಭಕ್ತಾಪರಾಧ ಸಹಿಷ್ಣು ಸಂಧಿಯ ಕನ್ನಡಾರ್ಥವು ಮುಗಿದುದು

ಶ್ರೀ ಗುರುರಾಜೋ ವಿಜಯತೇ

# ಬೃಹತ್ತಾರತಮ್ಯ ಸಂಧಿಯ ಸಾರ

"ವಿಷ್ಣೋಃ ಸರ್ವೋತ್ತಮತ್ವಸ್ಯ ಜ್ಞಾನಾರ್ಥಂ ಶಾಸ್ತ್ರಮಿಷ್ಯತೇ ॥ ಅತಸ್ತತ್ಸಾಧಕಂ ಶಾಸ್ತ್ರಂ ದುಶ್ಶಾಸ್ತ್ರಂ ತದ್ವಿರೋಧಿ ಯತ್ ॥ ಇತಿ ಬ್ರಹ್ಮಾಂಡೇ ॥ ವಿಷ್ಣೋಃ ಸರ್ವೋತ್ತಮತ್ವಂ ಚ ತದ್ಭಕ್ತಾ ಮೋಕ್ಷ ಏವ ಚ ॥ ಶಾಸ್ತ್ರಾರ್ಥ ಇತಿ ನಿರ್ದಿಷ್ಟಃ ಸರ್ವಶಾಸ್ತ್ರಾರ್ಥನಿರ್ಣಯಾತ್ ॥ ಇತಿ ಪಾದ್ಮೇ ॥ ಎಂದು ಶ್ರೀ ಸರ್ವಜ್ಞರು ಬೃಹದ್ಭಾಷ್ಯದಲ್ಲಿ ಆಜ್ಞೆ ಕೊಡಿಸಿರುವದಲ್ಲದೇ ಛಾಂದೋಗ್ಯ ಭಾಷ್ಯ ೭ನೇ ಅಧ್ಯಾಯ ೧ಳನೇ ಖಂಡದಲ್ಲಿಯೂ **"ತಾರ ತಮ್ಯಪರಿಜ್ಞಾನಾತ್ತೇಷು ಧ್ಯಾತೋ ವಿಮುಕ್ತಿದಃ । ಪ್ರೀತಿಂ ನ ಚಾನ್ಯಥಾ ಯಾಯಾದಿತಿ ಶಾಸ್ತ್ರಸ್ಯ ನಿರ್ಣಯಃ॥** ಇತಿ ತತ್ವವಿವೇಕೇ॥ ಎಂದು ಹೇಳಿದಂತೆ ಸಕಲ ಶಾಸ್ತ್ರಾರ್ಥ ಮಥಿಸಿ ಚತುರ್ದಶ ವಿಧ ತಾರತಮ್ಯ ತಿಳಿಯುವುದು ಅತ್ಯಾವಶ್ಯ. ಅದರಲ್ಲಿಯೂ ಈ ಅಂಶ ಆವೇಶ ಬೃಹತ್ತಾರ ತಮ್ಯ ತಿಳಿಯುವುದು ಬಹು ಕಷ್ಟ. ಬೃಹದ್ಭಾಷ್ಯ-ಛಾಂದೋಗ್ಯ-ತೈತ್ತಿರೀಯ ಪ್ರಕಾರ ಸಂಹಿತಾ-ವಿಷ್ಣುರಹಸ್ಯ-ಸತ್ತತ್ವರತ್ನಮಾಲಾ-ಗಾರುಡ ಬ್ರಹ್ಮ ಕಾಂಡ-ಭಾರತ ತಾತ್ಪರ್ಯ ನಿರ್ಣಯ,ಭಾಗವತಾದಿ ಅನೇಕ ಗ್ರಂಥಗಳು ಅನೇಕ ಪುರಾಣಾದಿಗಳಲ್ಲಿ ಅಂಶಾವೇಶ ವಿಧವಿಧವಾಗಿ ವಚನಗಳನ್ನು ಸರಿ ಪಡಿಸಿಕೊಂಡು ದಾಸರ ಉಕ್ತಿಗೆ ಅನ್ವಯಿಸಿಕೊಳ್ಳಲು ಮೊದಲು ಪ್ರಾರ್ಥನೆ.

**ಸಂಧಿ ವಿವೇಚನೆ :—** ಹಿಂದೆ ೧೯ನೇ ಗುಣತಾರತಮ್ಯ ಸಂಧಿಯು ಅವರೋಹ ಕ್ರಮ ಉಪಾಸನಾ ೨೦ನೇ ಸಂಧಿಯಲ್ಲಿ ಸ್ಥಾವರ ಜೀವರಾರಂಭಿಸಿ ಆರೋಹಣ ತಾರತಮ್ಯ, ಸೃಷ್ಟಿ, ಸ್ಥಿತಿ, ಲಯ ಪ್ರಕಾರ ಉಪಾಸನೆ ಮಾಡಿದರೆ ಶ್ರೀಹರಿಯ ಬಿಂಬದರ್ಶನವಾಗಿ, ಸಂಚಿತಾಗಾಮಿ ಕರ್ಮನಾಶ ಪ್ರಾರಬ್ಧ ಅನುಭೋಕ್ತವ್ಯವಾಗುವದೆಂಬ ವಿಷಯ ಶಾಸ್ತ್ರ ಸಮ್ಮತಿಯಿಂದ ೨೧, ೨೨ನೇ ಸಂಧಿಯಲ್ಲಿ ಪ್ರಸಂಗ ಸಂಗತ್ಯಾನುವರ್ಣಿಸಿ, ಮುಂದೆ ಈ ೨೩ನೇ ಸಂಧಿಯಿಂದ ಅಧಿಕಾರ ವಿವಕ್ಷಾ ಭೇದದಿಂದ ಧ್ಯಾನೋಪಾಸನೆ ಮಾಡುವ ಕ್ರಮ ವಿವರಣೆ,

ಮಾನಸ ಸ್ಮೃತಿ ಶ್ರೀವಿಜಯದಾಸರ ಉಪಾಸನಾ ಭಾಗ ಸುಳಾದಿ (೬) ಧ್ರುವ ತಾಳದಲ್ಲಿ "ಶ್ವೇತದ್ವೀಪವಾಸಿ ವಾಸುದೇವ ಮುಖ್ಯ | ವಾತ ಖದ್ಯೋತ ಗುರು ಇವರಲ್ಲಿಟ್ಟು | ಆ ತರುವಾಯ ತನ್ನ ಹೃತ್ಕಮಲದಲ್ಲಿದ್ದ | ಶ್ರೀ ತರುಣೀಶನ್ನ ಧ್ಯಾನಗೈದು | ಈ ತನುಮಧ್ಯದಲ್ಲಿ **ಅನಂತ ಅಂಶಾತ್ಮಕ | ಆತನ್ನ ತಂದು ಏಕ ಚಿಂತನಗೈದು** || ಮತ್ತು ಸುಳಾದಿ (೧೧) ೧೮ನೇ ತ್ರಿವಿಡಿ ತಾಳದಲ್ಲಿ ಮತ್ತು ಸುಳಾದಿ ೧೬ (ತ್ರಿವಿಡಿ ತಾಳ ೩) ಮತ್ತು ಸುಳಾದಿ ೨೩ ಧಾರಣ ಧ್ಯಾನಯೋಗ ಮಾಡು ಮನವೇ || ಧ್ರುವತಾಳದಲ್ಲಿ ಮೇರೆ ಇಲ್ಲದ **ದೇವತೆಗಳ ಅಂಶ | ಅವತಾರ ಎಣಿಸಿ ಇವರ ಪ್ರಸಾದವ ಮೂರು ಬಗೆಯಿಂದ ಸಂಪಾದಿಸಿ** ಲಕುಮಿ | ನಾರಾಯಣನನ್ನ ಧ್ಯಾನಗೈದು ಮುಕ್ತಿ | ಸೂರೆಗೊಂಡು ಸುಖಿಸೋದು || (ಎಂತಲೂ ಮತ್ತು) **ಶಾರೀರದೊಳಗಿದ್ದ ಮಾನಿಗಳೇ ಸರ್ವಾಕಾರವಾಗಿಪ್ಪರೆಂದು** ಚಿಂತಿಸು ನಿತ್ಯ | ಕಾರಣಕಾರ್ಯರೂಪ ಒಂದೊಂದು ನೆಲಸಿ ಉಪ ಸಂ | ಹಾರದಿಂದಲಿ ಸರ್ವ ವಿಳಿತ ಗೈದ್ಯೋ ಚಾರುಚರಿತ್ರ ನಮ್ಮ ವಿಜಯ ವಿಠ್ಠಲನಂಘ್ರಿ ವಾರಿಜದಳವನ್ನು ಭಕ್ತಿಯಿಂದ ನೋಡು ||೧|| **ಮಟ್ಟತಾಳದಿಂದ** ಶ್ರೀಹರಿ ರಮಾದೇವಿ ತಾತ್ವಿಕ ಕಾವಿ ೯ಕ ಮನುಜಾ ತೃಣಜೀವಿ ಮುಂತಾದ ಸಾತ್ವಿಕ ಗುಣದವರು ಜಾತಿಭೇದದಿಂದ ಜಗದೊಳಗೆ ಪಾತಾಳಾರಭ್ಯ ಸತ್ಯಲೋಕ ಪರಿಯಂತರ ಗಾತ್ರರ ಭೇದದಿಂದಲಿ ತುಂಬಿಕೊಂಡಿರುವರು. ಧಾತ ಮೊದಲು ಮಾಡಿ ಶತಸ್ಥ ಪರಿಯಂತ

| | | |
|---|---|---|
| ೧ | ತಾತ್ವಿಕರು ತ್ರಿಶೋತ್ತರ ತ್ರಿಸಹಸ್ರ | ೩೩೦೦ |
| ೨ | ಪಾವಕ ಪರ್ಜನ್ಯ ವಹ್ನ್ಯನಿಲ ಪುತ್ರರಾರಂಭಿಸಿ ಬುಧ ಉಷಾ ಪರಿಯಂತರ ವಿಂಶತಿ ನವ ಸಾವಿರದ ಏಳು ನೂರು | ೨೯೭೦೦ |
| ೩ | ಬುಧ ಶನಿ ಪತ್ನೀರು ತೀರ್ಥಾಭಿಮಾನಿಗಳು ಇವರ ತರುವಾಯ ಪುಷ್ಕರ ಕರ್ಮಾಭಿಧರು | ೮೯೯೬೭೦೦೦ |
| ೪ | ಅಗ್ನಿಪುತ್ರರು ಹದಿನಾರು ಸಾವಿರ ಇವರನ್ನೆಲ್ಲ ಕೂಡಿಸಿ ಶತಕೋಟಿಗೆ ಶತ ನ್ಯೂನ ಋಷಿಗಳು | ೧೦೦೦೦೦೦೦೦೦ |

೫ ತ್ರಿದಶ ಗಂಧರ್ವ ಅಪ್ಸರ ಚಿರಪಿತೃ ಕೆಲ ಪಿತೃ
ಸಿದ್ಧಚಾರಣಾದಿ ವಿದ್ಯಾಧರ, ಕಿನ್ನರ ಕಿಂಪುರುಷ ೨೪೦೦೦೦೦೦

ಅದು ಭೂತ-ಭೂತ-ಪ್ರೇತ-ಯಕ್ಷ ಕೆಲ ಅಪ್ಸರ
ನರ ಗ ಧರ್ವ ಪರಿಯಂತ ಋಷಿಗಳ ಕೂಡಿಸಿ
ಒಂದು ನೂರಾ ಮೂವತ್ತುಮೂರು ಕೋಟಿ
ದೇವತೆಗಳು ೧,೩೩,೦೦೦೦೦೦೦

ಈ ಪ್ರಕಾರ ಅನೇಕ ಕಳಾಸಹಿತವಾಗಿ ಸರ್ವದಾ, ಸಮಸ್ತ ಸ್ಥಳವಲ್ಲಿ ಪೊಂದಿದ ಅಭಿಮತ ದಿವಿಜರ ಬಳಿವಿಡಿಪು **ಅವತಾರಾವೇಶಗಳನು ಚಿಂತಿಸಿ ಓರ್ವೊರ್ವರ ಪ್ರತಾಪ** | ಒಲುಮೆಯಿಂದಲಿ ಚಿಂತಿಸುತ್ತ ಹಿಗ್ಗುತ್ತ ಚಂಚಲತನವನೆ ಬಿಟ್ಟು ಸರ್ವ ಏಕೀಭೂತ | ತಿಳಿವದು ಆವ್ಯಾಲೆ ಉತ್ತಮರಾಧೀನ ಚಿಂತಿಸಿ ನಲಿನಲಿದು ಮಾಡುವದು || ಮತ್ತು ಮುಂದೆ ೨೩ನೇ ಸುಳಾದಿಯ ಧ್ರುವ ತಾಳದಲ್ಲಿಯೂ (ಪುಟ ೭೪) **"ಧ್ಯಾನವ ಮಾಡು ಮನವೇ ಮನೋಹರದಿಂ| ನೀ ನೆನೆದು ಧನ್ಯನಾಗು ಪ್ರಥಮದಲ್ಲಿ ಸಿರಿ| ಪ್ರಾಣನಾಥನಾದ ನಾರಾಯಣನ | ನಾನಾವತಾರಾವೇಶ ಅಂಶ ಅಂಶಿ ಅದಿಷ್ಠಾನವನ್ನು ಚಿಂತಿಸು ||** ೧.೩೩ ಕೋಟಿ ದೇವತೆಗಳು ಶತ ಊನ ಶತಕೋಟಿ ಋಷಿಗಳ ವಿವರವು ಎಂದು ಶ್ರೀವಿಜಯದಾಸಾರ್ಯರು ಅಪ್ಪಣೆ ಕೊಡಿಸಿದ್ದು. ಇದಕ್ಕೆ ಮೂಲಾಧಾರವಾದ ಬೃಹದಾರಣ್ಯ ಉಪನಿಷತ್ ಭಾಷ್ಯ ಮೂರನೇ ಅಧ್ಯಾಯ-ಅವ್ಯಾಕೃತ-ಬ್ರಾಹ್ಮಣದಲ್ಲಿ ಶ್ರೀ ಸರ್ವಜ್ಞರು ನವ ವಿಧ ದ್ವೇಷಗಳನ್ನು ತ್ಯಜಿಸಿ ಜೀವರಿಂದ ಜಡರಿಂದ ಭಿನ್ನನಾದ ಸರ್ವೋತ್ತಮನಾದ ವಿಷ್ಣುವಿನ ಅನಂತಾವತಾರ ಆವೇಶ ಶ್ರೀ ಲಕ್ಷ್ಮೀದೇವಿಯ ಅನಂತ ಅವತಾರಾದಿ ಬ್ರಹ್ಮಾದಿ ಸಕಲ ತತ್ವೇಶರು ಸಾಂಶದೇವತೆಗಳ ಅವತಾರಾವೇಶಗಳನ್ನು ತಿಳಿದು ಸರ್ವರಲ್ಲಿರುವ ಪರಮಾತ್ಮನ ರೂಪ ಏಕೀಭೂತವಾಗಿ ಬಿಂಬನಲ್ಲಿ ಚಿಂತಿಸಲು ಮುಕ್ತಿಯಾಗುತ್ತದೆಂದು ಹೇಳಿದ್ದಾರೆ. **ಬೃಹದಾರಣ್ಯ ಭಾಷ್ಯ** "ಸರ್ವೋತ್ತಮ ಇತಿ ಜ್ಞಾತೋ ವಿಷ್ಣುರ್ಮೋಕ್ಷ ಮಿಮಂ ನಯೇತ್" ಎಂದು ಅಪ್ಪಣೆ ಕೊಡಿಸಿ ಮುಂದೆ ಶ್ರೀಹರಿಯ ಅವತಾರಕ್ಕೆ ಭೇದ ತಿಳಿಯುವವನು ಅಂಧಂತಮಸ್ಸು ಹೊಂದುತ್ತಾನೆ.

"ಪ್ರಾದುರ್ಭಾವತಯಾ ಯೇ ಚ ತದನ್ಯಾನ್ ಜಾನತೇ ವಿಭೂಃ॥ ತೇಽಪಿ ಯಾಂತಿ ತಮೋ ಘೋರಂ ತಸ್ಮಾನ್ನೈವಂ ವಿದೋ ವಿದುಃ॥ ಎಂದು ಹೇಳುತ್ತಾ

ಹರಿಯು ಪ್ರಾದುರ್ಭಾವ (ಅವತಾರ ರೂಪಗಳನ್ನೂ, ಶ್ರೀ ಲಕ್ಷ್ಮಿ ಶ್ರೀ-ಬ್ರಹ್ಮ ವಾಯು.ಸರಸ್ವತೀ ಭಾರತೀ ದೇವಿಯರು ಶೇಷ-ರುದ್ರಾದಿ-ಷಣ್ಮಹಿಷಿಯರು ಪಾರ್ವತ್ಯಾದಿಗಳು ಇಂದ್ರ ಕಾಮರು ಸಕಲ ತತ್ತ್ವೇಶರ ಅವತಾರಾದಿಗಳು ಪೇಳಿದ್ದಾರೆ. ಇದರಿಂದಲೇ ಅಂದರೆ ಚತುರ್ದಶ ವಿಧ ತಾರತಮ್ಯ ಜ್ಞಾನದಿಂದ ಸರ್ವೋತ್ಕೃಷ್ಟ ಶ್ರೀಹರಿಯೆಂದು ಉಪಾಸನೆ ಮಾಡುವುದೇ ಮುಖ್ಯವು.

## ಬೃಹದ್ಭಾಷ್ಯ*

"ಭಕ್ತಿರ್ಜ್ಞಾನಂ ತಥಾ **ಧ್ಯಾನಂ** ಮುಕ್ತಾನಾಮಪಿ ಸರ್ವಶಃ। ನಿಯಮೇನ ನ ಹೀಯಂತೇ ಮುಕ್ತಾನಾಂ ತೇ ಸ್ವರೂಪಕಃ॥೫॥ **ಸಾಧನಾನಿ ತು ಸರ್ವಾಣಿ** ಭಕ್ತಿಜ್ಞಾನಪ್ರವೃದ್ಧಯೇ॥ ನೈವಾನ್ಯಸಾಧನಂ ಭಕ್ತಿಃ ಫಲರೂಪಾ ಹಿ ಸಾ ಯತಃ॥ ಸ್ವಾತ್ಮೋತ್ತಮೇಷು ವಿದ್ವೇಷಾತ್ತಮೋ ನಿಯಮತೋ ವ್ರಜೇತ್ ॥೨೪॥

ಇದರ ಸಾರಾಂಶವೇನಂದರೆ ಭಕ್ತಿಯು ಜ್ಞಾನವು ಮತ್ತು **ಧ್ಯಾನವೂ** ಕೂಡ ಮುಕ್ತರ ಸ್ವರೂಪವಾಗಿರುವುದರಿಂದ ನಿಯಮದಿಂದ ಎಲ್ಲ ಮುಕ್ತರುಗಳಲ್ಲಿ ತಪ್ಪದೇ ಇದ್ದೇ ಇರುತ್ತವೆ. ಮತ್ತು **ಎಲ್ಲ ಸಾಧನಗಳಿಂದ ಭಕ್ತಿ ಜ್ಞಾನಾದಿಗಳು ಅಭಿವೃದ್ಧಿಯಾಗುತ್ತವೆ.** ಈ ಸಾಧನಗಳಿಗೆ ಭಕ್ತಿಯೇ ಫಲವು. ಹೊರತಾಗಿ ಬೇರೆ ಯಾವದಿಲ್ಲ. ಭಕ್ತಿಯಿಂದಲೇ ಮುಕ್ತಿ, ಉತ್ತಮರಲ್ಲಿ ದ್ವೇಷದಿಂದ ತಮಸ್ಸಾಗುವುದು. ಕಾರಣ ಈ ಬೃಹತ್ತಾರತಮ್ಯವು ಬೃಹದಾರಣ್ಯ ಭಾಷ್ಯದಲ್ಲಿ, ಶ್ರೀ ಸರ್ವಜ್ಞರು ನಿರೂಪಿಸಿದಂತೆ ದಾಸರಾಯರು ಶ್ರೀಹರಿ ಸಿರಿ ವಿರಿಂಚ್ಯಾದಿಗಳ ಅವತಾರ ಅನೇಕಾದಿಗಳನ್ನು ಚಿಂತಿಸಿ ಧ್ಯಾನ

---

* ಎಲ್ಲ ಮೂಲ ಶ್ಲೋಕಗಳನ್ನು ಪದ್ಯಾರ್ಥದ ಕೊನಿಗೆ ಕೊಟ್ಟಿದೆ.

ಮಾಡಬೇಕು. ಅಂದರೆ ಮೋಕ್ಷವಾಗುತ್ತದೆ. ಅಲ್ಲದೆ ವಿರಂಚಿ ಆರಂಭಿಸಿ ತೃಣಜೀವರಿಗೆ ಮೋಕ್ಷ ಲಭಿಸಬೇಕಾದರೆ ಅವರವರ ಸಾಧನದ ಬಗೆ ವಿವಿಧ ವಾಗಿದೆ. ಸಾಧನಕಲ್ಪಗಳು ಬೇರೆ ಇವೆ. ಆಯಾ ಜೀವರುಗಳು ಯೋಗ್ಯತೆ ಯಂತೆ ಎಷ್ಟೆಷ್ಟು ಕಲ್ಪಸಾಧನ ಮಾಡುವದೆಂಬುವನ್ನು ಮುಂದೆ ೨೪ನೇ ಸಾಧನಕಲ್ಪ ಸಂಧಿಯಲ್ಲಿ ವಿವರಿಸುತ್ತಾರೆ. ಇಂಥ ಸಾಧನದಿಂದ ಸುಜ್ಞಾನ ಭಕ್ತಿಯಿಂದ ಶ್ರೀಹರಿ ಪ್ರಸನ್ನನಾಗಿ "ಏನಂ ಮೋಚಯಾಮಿ" ಎಂಬ ಉತ್ತಮ ಪ್ರಸಾದದಿಂದ ನಿರ್ದುಃಖಾನಂದ ಮುಕ್ತಿಕೊಡುವನು ಎಂದು ಹೇಳಿದ್ದಾರೆ. ಮತ್ತು ಬೃಹದ್ಭಾಷ್ಯದಲ್ಲಿಯೇ ಮುಂದೆ ಶ್ರೀ ಸರ್ವಜ್ಞರು,

"ನಿರ್ದುಃಖಂ ತು ಸುಖಂ ನಿತ್ಯಂ ಮೋಕ್ಷ ಇತ್ಯಭಿಧೀಯತೇ । ಚಿದಾನಂದ ಶಿರೋದೇಹಪಾಣಿ ಪಾದಾತ್ಮಕಾಃ ಸದಾ ॥ **ಸರ್ವದೋಷ ವಿನಿರ್ಮುಕ್ತಾ ಮುಕ್ತಾಃ ಕ್ರೀಡಂತಿ ನಿತ್ಯಶಃ** । ಅನಾದಿಕಾಲಾದಾರಭ್ಯ ಯಾ ಭಾರ್ಯಾ ಸಾ ಸದೈವ ತು ॥ ಮೋದಂತೇ ಸಹಿತಾಸ್ಸರ್ವೇ ಸದಾ ವಿಷ್ಣುಪರಾಯಣಾಃ ॥ ಇತಿ ಪೈಂಗಿ ಶ್ರುತಿಃ ॥

ವಚನವಂತೆ ದಾಸಾರ್ಯರು ೨೪ನೇ ಸಂಧಿಯಲ್ಲಿ ಸಾಧನಕಲ್ಪ ವಿಸ್ತಾರ ಹೇಳಿ, ಮುಂದೆ ಮುಕ್ತಿಯಲ್ಲಿ ಮುಕ್ತರು ಸದಾ ಕ್ರೀಡಿಸುವ ವಿಚಾರವನ್ನೇ ಬೃಹದ್ಭಾಷ್ಯದಂತೆ ೨೫ನೇ ಕ್ರೀಡಾವಿಲಾಸ ಸಂಧಿಯಲ್ಲಿ ಸರ್ವಕರ್ತಾ ಕಾರಯಿತಾ ಸರ್ವತಂತ್ರ ಸ್ವತಂತ್ರನೆಂಬ ಮುಕ್ತರ ಜ್ಞಾನಾ ನಂದ ಕ್ರೀಡೆಯನ್ನು ವರ್ಣಿಸಿದ ದಾಸಾರ್ಯರ ಭಾವವನ್ನರಿಯದೇ ದಾಸರು ರಚಿಸಿದಂತೆ ದಾಸಾರ್ಯರ ಶಿಷ್ಯಲಿಖಿತ ಪ್ರತಿಗಳನ್ನು ನೋಡದೆ, ಪ್ರಚುರವಾಗಿದ್ದ ಅನೇಕ ಮೂಲ ಹರಿಕಥಾಮೃತಸಾರ, ಪ್ರತಿಗಳು ೩-೪ ವ್ಯಾಖ್ಯಾನಕಾರರು ಮನಬಂದಂತೆ ತಿದ್ದಿ ಗ್ರಂಥಗೌರವ, ಮರ್ಯಾದೆ ಉಲ್ಲಂಘಿಸಿ ಶ್ರೀ ದಾಸಾರ್ಯರ ವಚನಗಳನ್ನೇ ಅರಿಯದೇ, ತಿಳಿಯದೇ ಅಪಾರ್ಥಗಳನ್ನು ಕಲ್ಪಿಸಿ ಬರೆದು ಸ್ವೋತ್ತಮದಾಸಾರ್ಯರ ಏದ್ವೇಷಕ್ಕೆ ಕಾರಣರಾಗಿರುತ್ತಾರೆ. ಇಲ್ಲಿ ಪರಿಸಂತ ಸಂಧಿ ಸಂಬಂಧ ಕ್ರಮ ವಿವರ ವನ್ನು ನಿವೇದನೆಗೈದುದಾಯಿತು.

ಇನ್ನು ಮುಂದೆ ಸೃಷ್ಟಿ ಕಾಲದಲ್ಲಿಯೇ ಅಂಶಾವೇಶ ಮೊದಲಾದ ೧೪

ವಿಧ ತಾರತಮ್ಯ ತಿಳಿಯಬೇಕು. ಎಂದು ಪ್ರಕಾಶ ಸಂಹಿತೆ, ಪ್ರಥಮ ಪರಿಚ್ಛೇದ, ಅಧ್ಯಾಯ ೧೦-೧೧ರಲ್ಲಿ ಸವಿಸ್ತರ ಚತುರ್ದಶ ವಿಧ ತಾರ ತಮ್ಯ ವರ್ಣಿಸಿದ್ದಾರೆ. ಬೃಹತ್ತಾರತಮ್ಯಕ್ಕೆ ಅನುಕೂಲ.

"ಅಂಡೋರ್ಧ್ವದೇಶ ತತ್ಪೇಶಾ ಅತ್ರ ಪೂರ್ವೋಕ್ತರೀತಿತಃ ॥ ಸುಪ್ರಾರಬ್ಧ ಬಹುವಿಧಾ ದೋಷಸಂಬಂಧವರ್ಜಿತಾಃ ॥ ಸರ್ವೇ ಸ್ಥೂಲ ಶರೀರಿಣಃ ॥ ಅಂಶಾ (೧) ನಂದ (೨) ಬಲ (೩) ಜ್ಞಾನ (೪) ದೇಶ (೫) ಕಾಲ (೬) ಪರೋಕ್ಷ್ಯಾಃ (೭) ಲಯ (೮) ಸೃಷ್ಟಿ (೯) ಪದಾ (೧೦) ವೇಶ (೧೧) ಗುಣ (೧೨) ಲಕ್ಷಣ (೧೩) ಕಾಂತಯಃ (೧೪) ಏವಂ ಚತುರ್ದಶ ಮಹಾತಾರತಮ್ಯಂ ಪ್ರಕೀರ್ತಿತಂ ॥ ಹೀಗೆ ೧೪ ವಿಧ ಅಂಶಾವೇಶಾದಿ ತಾರತಮ್ಯ ಪೇಳಿದೆ. ಇದನ್ನೇ ಶ್ರೀ ವಿಜಯದಾಸಾರ್ಯರು, ನಂ. (೧೨) ತಾರತಮ್ಯ ಸುಳಾದಿಯಲ್ಲಿ, ಧ್ರುವತಾಳದಲ್ಲಿ,

"ಇಂದಿರೆಯರಸ ಪರತತ್ವ ನಾನಾ ರೂಪ ಸುಪ್ರತಾಪ । ಎರಡೊಂದು ಯೋಗ್ಯರನ್ನ ನೋಡಿ, ಮುಕ್ತಿಜೀವರ ತಾರತಮ್ಯ ಚತುರ್ದಶ ಬಗೆ ನೇಮಿಸಿ । ಹಿರಿದಾಗಿ—೧. ಅಂಶ, ೨. ಆನಂದ, ೩. ಬಲ, ೪. ಜ್ಞಾನ, **೫.** ದೇಶ, **೬.** ಕಾಲಮರಳೆ, ೭. ಅಪರೋಕ್ಷ, ೮. ಲಯ, ೯. ಸೃಷ್ಟಿ, **೧೦.** ಪದ, ತರುವಾಯ ೧೧. ಆವೇಶ, ೧೨. ಗುಣ, ೧೩. ಲಕ್ಷಣ, **೧೪. ಕಾಂತಿ.** ಪರಿಯಿಂತು ಮಾಡಿದ ಸ್ವಾಂಶಜನಕೆ । ಎಂದು ಸಾಧನ ಸ್ವಾಂಶಜೀವಿಗಳ ಅಂಶಾವೇಶ ಹೇಳಿದ್ದಾರೆ. ಈ ಸುಳಾದಿ (೧೦) ಪುಟ ಮೇಲಿದೆ. ಮುಂದೆ ೨೪ನೇ ಸಾಧನಕಲ್ಪ ಸಂಧಿಯಲ್ಲಿ ಕೊಡಲಾಗುವುದು. ಮತ್ತು ಪ್ರಕಾಶ ಸಂಹಿತಾ ೧ನೇ ಪರಿಚ್ಛೇದ ೧೦-೧೧ನೇ ಅಧ್ಯಾಯ ೧೪ ವಿಧ ತಾರತಮ್ಯ ವಿಚಾರ ೨೫ ಪುಟ ಮೇಲಾಗುತ್ತದೆ. ಇದನ್ನೆಲ್ಲ ಅತ್ಯಾವಶ್ಯವಾಗಿ ತಿಳಿಯಲಿಕ್ಕೆ ಬೇಕು. ಇಲ್ಲಿ ಅಂಶ ತಾರತಮ್ಯ, ಆವೇಶ ತಾರ ತಮ್ಯ ಎರಡು ಮಾತ್ರ ಕಿಂಚಿತು ವಿವರಿಸುತ್ತದೆ. ಅವತಾರ, ಆವೇಶ ತಿಳಿಯುವುದು ಮುಖ್ಯ.

## ಅಂಶ ತಾರತಮ್ಯ

ವೇದೇಷು ದೇಶಕಾಲೇಷು ಲಿಂಗದೇಹೇಷು ಚಾಕ್ಷರೇ ॥ ಪ್ರಕೃತೌ

ಸರ್ವಜೀವಾನಾಂ ಮಹತ್ತತ್ವ ಗುಣತ್ರಯೇ ॥ ಅಂಶಾ ಋಜೂನಾಂ ಸಂತ್ಯೇವ ವಿಪಾವ್ಯಂಶಾ ನ ತೇಷು ಹಿ ॥ ಅಹಂಕಾರೇ ವಿಪಾವ್ಯಂಶಾ ನ ತತ್ರೇಂದ್ರಾದಿಕಾಂಶಕಾಃ ॥ ನೀಚ ನೀಚಾಮರ ಮನೋದೇಹಾದಿಷು ಸುರೋತ್ತಮಾಃ ॥ ವಸಂತ್ಯಂಶೈರ್ನನೀಚಾಸ್ತು ಸ್ವೋತ್ತಮೇಷು ವಸಂತಿ ಹಿ ॥ ಅಂಡಾಂತರ್ಬಹಿಸ್ತ್ರೈವಮುಂಶೋತ್ಥಾ ತಾರತಮ್ಯಧೀಃ ॥ ವಿಧೇಃ ಸರ್ವಾಂಗಸಾಯುಜ್ಯಂ ವಾಣ್ಯಾ ವಾಚಿಮತಿಷ್ವಪಿ ॥ ಸ್ವೋತ್ಪತ್ಯಂಗೇಷು ದೇವಾನಾಂ ಸಾಯುಜ್ಯಂ ದಿಶತೀಶ್ವರಃ ॥

## ಇದರ ಅರ್ಥವೇನೆಂದರೆ

ಸರ್ವಜೀವರಲ್ಲಿ ಶ್ರೇಷ್ಠರಾದ ವಾಯು ಬ್ರಹ್ಮರಿಗೆ, ವೇದಗಳಲ್ಲಿ, ದೇಶ-ಕಾಲಗಳಲ್ಲಿ, ಲಿಂಗದೇಹ, ನಾಶರಹಿತ ಸ್ವರೂಪವು ಪ್ರಕೃತಿಯಲ್ಲಿ ಸರ್ವ ಜೀವರುಗಳೂ, ಮಹತ್ತತ್ವವೂ, ಗುಣತ್ರಯಾತ್ಮಕ ಅವ್ಯಕ್ತ ತತ್ವದಲ್ಲಿ, ಬ್ರಹ್ಮ-ವಾಯ್ವಾದಿ ಋಜುಗಳ ಅಂಶವು ಒಂದೇ ಪ್ರಕಾರ ಇದ್ದೇ ಇರುವುದು. ಋಜುಗಳ ಅಂಶಿ-ಅಂಶಗಳಿಗೆ ಕಿಂಚಿತ್ತಾದರೂ ಭೇದವಿಲ್ಲ. ಗರುಡಾದಿಗಳ ಅಂಶದ ಮಹತ್ತತ್ವ-ಅವ್ಯಕ್ತ ತತ್ವಾದಿಗಳಲ್ಲಿ ವ್ಯಾಪ್ತಿಯಿಲ್ಲ. ಅಹಂಕಾರ ತತ್ವದಲ್ಲಿ ಮಾತ್ರ ಗರುಡಾದಿಗಳ ಅಂಶದ ವ್ಯಾಪ್ತಿ. ಅಹಂಕಾರದಲ್ಲಿ ಇಂದ್ರಾದಿಗಳ ಅಂಶ ವ್ಯಾಪ್ತಿಯಿಲ್ಲ. ಇಂದ್ರಾದಿತದವರ ಅವರರಾದ ದೇವತೆಗಳ ಅಂಶವು ಮನೋದೇಹ, ಮನಸ್ಸು ಮನಸತತ್ವವರಿಗೆ ವ್ಯಾಪ್ತಿ ಇಂದ್ರಾದಿಗಳಿಗೆ ಇರುವುದು. ಅವರರಾದ ದೇವತೆಗಳ ಅಂಶವು ಉತ್ತಮರಾದ ದೇವತೆಗಳಲ್ಲಿ ಕೂಡುವುದಿಲ್ಲ. ಉತ್ತಮರ ಅಂಶವೂ, ಆವೇಶವೂ ನೀಚರು ಅಂದರೆ ಅವರಲ್ಲಿ ಇರಲು ಶಕ್ಯ. ವಿಧೇಃ ಬ್ರಹ್ಮ-ವಾಯುಗಳ ಅಂಶವು ಬ್ರಹ್ಮಾಂಡ ಬಹಿರದಲ್ಲಿಯೂ ಇರುವುದು. ಬ್ರಹ್ಮದೇವರಿಗೆ ಸರ್ವಾಂಗಸಾಯುಜ್ಯವು, ವಾಣಿದೇವಿಯರಿಗೂ ಪತಿಗಳಂತೆ ತಿಳಿಯುವುದು ಶ್ರೀಹರಿಯ ಯಾವ ಯಾವ ಅಂಗದಲ್ಲಿ ದೇವತೆಗಳ ಉತ್ಪತ್ತಿಯೋ ಆಯಾ ಅಂಗಗಳಲ್ಲಿ ದೇವತೆಗಳಿಗೆ ಸಾಯುಜ್ಯ. ಶ್ರೀಹರಿ ರಮಾ ಅಂಶ ಸರ್ವತ್ರ ಅಂಶಾಂಶಿಗಳಿಗೆ ಯಾವ ಪ್ರಕಾರ ಭೇದವಿಲ್ಲ. ವಾಯುವಾಣ್ಯಾದಿಗಳ ಅಂಶ-ಅವತಾರಾದಿಗಳಿಗೆ ಕಿಂಚಿತ್ತು ಭೇದವಿಲ್ಲ. "ಮೂಲದಲ್ಲಿದ್ದ ಮಹತ್ವ

ಶ್ರೀಲೋಲನ ಅವತಾರದಲಿ ಉಂಟು । ಕಾಳೀಶಗೆ ಕೊಂಡರೆ ಒದುತಿಪ್ಪುದು
ನೀಲಕಂಠ ಪ್ರಮುಖರಿಗಿಲ್ಲೆಂಬುದೀ ॥ ಸಜ್ಜನಸಡತಿದು ಪ್ರಾಣೇಶಪ॥

ಮುಖ್ಯವಾಗಿ ಬ್ರಹ್ಮ, ವಾಯು, ಋಜುಗಳು, ಗರುಡಾದಿಗಳು ತತ್ವ ದೇವತೆಗಳ ಅಂಶ ಸ್ವರೂಪಾನಂದ ತಾರತಮ್ಯಾನುಗುಣವಾಗಿರುವರು. ಸಾಂಶದೇವತೆಗಳಾದ ಪುಷ್ಕರನ ಪರಿಯಂತವಾಗಿ ಸ್ವರೂಪ, ಅದರ ಅಂಶಗಳು ಬೇರೆಯಾಗಿ ವಿಹಾರ ಮಾಡತಕ್ಕ ಶಕ್ತಿಯಿರುವುದು. ಇದೇ ಸ್ವರೂಪಾಂಶದ ತಾರತಮ್ಯ. ಆಯಾ ಜೀವರ ಯೋಗ್ಯತೆಯಂತೆ ಪರಮಾತ್ಮ ಸ್ವರೂಪಾಂಶಗಳ ಶಕ್ತಿ ಇಟ್ಟಿರುವನು. ಇನ್ನು **ಮುಖ್ಯವಾದುದು ಆವೇಶ ತಾರತಮ್ಯ.** ಈ ಸಂಧಿಯಲ್ಲಿ ತಿಳಿಯತಕ್ಕ ಅಂಶ ೧೧ನೇ ಅಧ್ಯಾಯ, ಪ್ರಥಮ ಪರಿಚ್ಛೇದ ಪ್ರಾರಂಭದಲ್ಲಿಯೇ ಹಂಸನಾಮಕ ಪರಮಾತ್ಮನು ಉದಾಹರಿಸಿದುದು. ವಿಸ್ತಾರ ಪ್ರಮೇಯವೂ ಅತ್ಯಾವಶ್ಯ ತಿಳಿಯಲಿಕ್ಕೆ ಬೇಕು. ಅಂದರೆ ಅವತಾರಾದಿಗಳಲ್ಲಿ ಜೀವರ ಯೋಗ್ಯತಾನುಗುಣ ಆವೇಶ ಕ್ರಮವಾಗಿ ಹೇಗಿರುವುದೆಂಬುದು ಗೊತ್ತಾಗುತ್ತದೆ.

## ಆವೇಶ ತಾರತಮ್ಯ

ಪುರುಷೇಷು ಬ್ರಹ್ಮ ವಾಯು ವಿಪಾದಿಷು ರಮಾಪತಿಃ ॥ ಪುಂರೂಪೇಣ ವಿಶೇಷಾವೇಶಾದಿಕಂ ಸರ್ವದಾ ಹರಿಃ ॥ ಕರೋತಿ ಸ್ತ್ರೀಷು ಮಾವಾಗೀರ್ವಾಣ್ಯುಸ್ತ್ರೀಷು ಸ್ವರೂಪತಃ ॥ ವಿಶೇಷಾವೇಶ ಕೃದ್ವಿಷ್ಣುಃ ಯೋಗ್ಯತಾಯಾನುಯೋಗ್ಯತಃ॥ ಅವಿಷ್ಟಸ್ತೂತ್ತಮೇಷ್ವೇಕಃ ವಿಶೇಷಾತ್ಮಾತು ತ್ರೈಃ ಸುರೈಃ ॥ ಜೀವೈರಸಾಧ್ಯಸುಮಹತ್ಕರ್ಮ ಕಾರಯತೀಶ್ವರಃ ॥ ಉತ್ತಮೋತ್ತಮ ಜೀವೇಷು ಆವೇಶೋ ಯಾದೃಗಿಷ್ಯತೇ ॥ ನ ತಥಾ ನೀಚ ಜೀವೇಷು ತಸ್ಮಾತ್ತ್ರೇತ್ಯಲ್ಪಶಕ್ತಯಃ ॥ ಪದಸ್ಥೇಷು ಸುರೇಷ್ವೇವ ಮಾವೇಶೋ ನೈವ ಮುಕ್ತಿಗಃ ॥ ನ ನಿರಂಶೇಷು ಚಾವೇಶಃ ಸಾಂಶೇಷ್ವಾಜಾನಜೇಷ್ವಪಿ ॥ ವಾಯೋಃ ಸರ್ವಾವತಾರೇಷು ವಿಶೇಷಾವೇಶ ಏವ ಹಿ ॥ ಸ್ವರೂಪ ಲಿಂಗ ಸೂಕ್ಷ್ಮೇಷು ಸ್ಥೂಲದೇಹೇಷು ಸರ್ವದಾ ॥ ರಕ್ಷಾರ್ಥಂ ಸರ್ವತತ್ವೇಷು ಸರ್ವದಾ ವಸತೀಶ್ವರಃ ॥ ಆವೇಶೋ ನ ತಥಾ ವಿಷ್ಣೋಃ ವಿಶೇಷಾಖ್ಯಂ ಸುರೇಷ್ವಪಿ ॥ ಕ್ವಚಿದ್ವ್ಯಕ್ತಿಃ ಕ್ವಚಿದ್ಧ್ರಾಸಂ ಸಾಸ್ತ್ರಾ

ವೇಶೋಂಡಜೇಷ್ವಪಿ || ಅಂಡಾದೂರ್ಧ್ವಂ ಸದಾವೇವೇಷ್ವಂತ ಋಜುಷು ಚೋಚ್ಯತೇ || ನೀಚೇಷೂತ್ತಮದೇವಾನಾಮಾವೇಶಃ ಕ್ವಚಿದಿಷ್ಯತೇ || ಬಲಾರ್ಥಂ ನ ಸುರೇಷ್ವೀಶಃ ಆವೇಶಂ ಕುರ್ವತಿ ಪ್ರಭುಃ||ಆದಾದಾಜ್ಞಾಂ ತೇನ ದೃಷ್ಟಾತ್ಸುರೈರ್ನಷ್ಟಾ ಹರೀಚ್ಛಯಾ || ಭವತಿ ನಿತ್ಯದಾ ವಿಷ್ಣುಃ ಸುರೇಷ್ವಂತರ್ಹಿತೋಽಪಿ ಸಃ || **ಇತಿ ಪ್ರಕಾಶಸಂಹಿತಾಯಾಮ್** ||

**ಇದರ ಅಭಿಪ್ರಾಯವೇನೆಂದರೆ**

ಅನಾದಿಯಿಂದ ಜೀವರುಗಳ ಸ್ವರೂಪ, ಯೋಗ್ಯತೆಯಲ್ಲಿ ಒಂದು ಶಕ್ತಿಯು ಏರ್ಪಟ್ಟಿರುತ್ತದೆ. ಇವಕ್ಕೆ ಹೆಚ್ಚು ಜ್ಞಾನ-ಬಲಾದಿಗಳು ತೋರಿದರೆ, ಅಲ್ಲಿ ಪರಮಾತ್ಮನು ಅಥವಾ ದೇವತೆಗಳು ಹೆಚ್ಚು ಆವಿಷ್ಟರಾಗಿದ್ದಾರೆಂದು ತಿಳಿಯುವುದು. ಇದಕ್ಕೇನೆ ಆವಿಷ್ಟ ಬಲವೆಂದು ಕರೆಯುತ್ತಾರೆ.

ಈ ಆವಿಷ್ಟ ಆವೇಶವೆಂದರೆ, ಸ್ವರೂಪಯೋಗ್ಯತಾನುಗುಣ ಆಗತಕ್ಕ ಕಾರ್ಯಕ್ಕಿಂತಲೂ ಅಧಿಕ ಕಾರ್ಯನಿರ್ವಾಹಕ ಶಕ್ತಿ ವಿಶಿಷ್ಟರೂಪವೇ ಆವೇಶ ರೂಪವು.

ಬ್ರಹ್ಮ, ವಾಯು, ಋಜುಗಳು ಮತ್ತು ವಾಣೀ, ಭಾರತೀ, ಋಜು ಪತ್ನಿಯರು ಅಷ್ಟು ಜನರಲ್ಲಿ ಪುರುಷ ಋಜುಗಳಲ್ಲೆಲ್ಲಾ ಪುರುಷಾವೇಶವು ಇರುವುದು. ಸ್ತ್ರೀಯರುಗಳಲ್ಲೆಲ್ಲಾ ಶ್ರೀಹರಿಯ ಶ್ರೀರೂಪ ಶ್ರೀಲಕ್ಷ್ಮೀದೇವಿಯರ ನೀತ ಆವೇಶವೆಂದು ಹೇಳಿದೆ. ನೀತವೆಂದರೆ ಸ್ವರೂಪ-ಲಿಂಗ ಸ್ಥೂಲಗಳಲ್ಲಿ ರಕ್ಷಣಾರ್ಥ ನಿಯತವಾಗಿ ಸರ್ವದಾ ಇರೋಣವು.

ಇನ್ನು ಗರುಡ, ಶೇಷಾದಿ ಪುರುಷ ಸ್ತ್ರೀಯರಲ್ಲಿ ಮತ್ತು ಇತರ ತಾತ್ವಿಕ ದೇವತಾ ಅವತಾರಗಳಲ್ಲಿ ಪ್ರಾಯಶಃ ಇದರಂತೆ ವಿಶೇಷ ಆವೇಶವೂ ಇರುತ್ತದೆ. ಆದರೆ ಪ್ರತಿಯೊಬ್ಬ ದೇವತೆಗಳ ಎಲ್ಲ ಶರೀರಗಳಲ್ಲಿ ಶ್ರೀಹರಿ-ಲಕ್ಷ್ಮಿ ಆವೇಶವಿದ್ದರೂ, ಅವತರಿಸಿ ಕೆಳಗೆ ಸ್ವರ್ಗಾದಿಗಳಲ್ಲಿ ಬಂದ ದೇವತೆಗಳಲ್ಲಿ ವಿಶೇಷ ಆವೇಶ ಕಡಿಮೆಯಾಗುತ್ತಲಿದೆ. ಸುಖ, ಪ್ರಾರಬ್ಧ ದೇವತೆಗಳಲ್ಲಿ ವಿಶೇಷ ಆವೇಶ, ದುಃಖ-ಪ್ರಾರಬ್ಧ ದೇವತೆಗಳ ಅವತಾರಗಳಲ್ಲಿ ಕಡಿಮೆ ಆವೇಶವೆಂದು ತಾರತಮ್ಯಾನುಗುಣವಾಗಿ ತಿಳಿಯು

ವುದು. ಅಂದರೆ ಋಜುಗಳೆಲ್ಲರೂ ಸುಖ ಪ್ರಾರಬ್ಧ ಭೋಗಿಗಳು; ಇತರರು ಅವರವರ ಜೀವ ಯೋಗ್ಯತೆಯಂತೆ ಕಿಂಚಿತು ದುಃಖಸ್ಪೃಷ್ಟರು.

ತಾತ್ವಿಕರಾದ ಶೇಷಾದಿಗಳಿಗೆ ಸ್ಮರಣೆ ಮಾತ್ರ ಕಾರಣಪರತ್ವೇನ ಆವೇಶ ಬರುತ್ತದೆ. ಇಂದ್ರಾದಿಗಳಿಗೆ ಕಾರಣ ಪರತ್ವೇನ ದೇವರು ಮನು ಪಾಲಿಸಿದರೆ ಬರುತ್ತದೆ. ಇದು ದೇವರ ಆವೇಶವು.

ಇನ್ನು ಉತ್ತಮ ದೇವತೆಗಳ ಆವೇಶವು ಅಧಮ ದೇವತೆಗಳಲ್ಲಿಯೂ ಇರುವುದು.

ನಿರಂಶರಲ್ಲಿ ಆವೇಶವಿಲ್ಲ. ಸಾಂಶ ದೇವತೆಗಳಲ್ಲಿ ಮುಕ್ತಿಪರಿಯಂತ ಆವೇಶವಿರಬಹುದಾಗಿದೆ. ಮುಕ್ತರಾದ ನಂತರ ಶುದ್ಧ ಸ್ವರೂಪ ಜೀವಿಗಳಲ್ಲಿ ಆವೇಶವಿರುವುದಿಲ್ಲ.

ದೈತ್ಯರಲ್ಲಿಯೂ ದೇವರುಮತ್ತು ದೇವತೆಗಳ ಆವೇಶ ಉಂಟು. ಮತ್ತು ದುಷ್ಟರಾದ ಹೆಚ್ಚಿನ ದೈತ್ಯರ ಆವೇಶವು ಋಜುಗಳ ವಿನಾ, ಇತರ ದೇವತೆಗಳು ಭೂಮಿಯಲ್ಲಿ ಅವತಾರ ಮಾಡಿದಾಗ್ಗೆ ಕಿಂಚಿತ್ ಅಸುರಾವೇಶ ಉಂಟು. ಹೊರ್ತಾಗಿ ಮೂಲದಲ್ಲಿ ದೇವತೆಗಳಿಗೆ ಅಸುರಾವೇಶವಿಲ್ಲ.

ಇನ್ನು ದೈತ್ಯರಲ್ಲಿ ಆವೇಶ ರೂಪದಿಂದ, ಮಾದಕ ಐಶ್ವರ್ಯದಿಂದ ಮದೋನ್ಮತ್ತರೂ ದುಷ್ಟರಾಗಿ ಉನ್ಮತ್ತರಾಗಿ ಶ್ರೀಹರಿಯನ್ನು ಹರಿಯ ಭಕ್ತರಾದ ಸಾಧುಗಳನ್ನು ದ್ವೇಷಿಸಿ ತಮೋಭಾಗಿಗಳಾಗುವರು. ಇದು ದೈತ್ಯರಲ್ಲಿದ್ದ ಹೆಚ್ಚಿನ ದೈತ್ಯರ ಆವೇಶದಿಂದ ಒದಗುವುದು.

ಮತ್ತು ದೈತ್ಯರಲ್ಲಿದ್ದ ದೇವರು ಮತ್ತು ದೇವತೆಗಳ ಆವೇಶ ಫಲವು ದೈತ್ಯರಿಗೆ ಜ್ಞಾನ, ಭಕ್ತಿ, ವಿರಕ್ತಿ ವ್ಯತಿರಿಕ್ತವಾಗಿ ಇತರ ನಶ್ವರವಾದ ಸುಖವನ್ನು ಒದಗಿಸಿ ಕೊಡುವುದು.

ದೇವತೆಗಳಲ್ಲಿ ಶ್ರೀಹರಿಯ ವಿಶೇಷ ಆವೇಶ ಉಂಟು. ಇನ್ನು ನಿರಂಶರಲ್ಲಿ ಅಂದರೆ, ಮನುಜರಲ್ಲಿ ಸತ್ಕಾರ್ಯ ಮಾಡುವುದು, ಮಾಡಿ

ಸುವುದು ಈ ಸತ್ಕಾರ್ಯದಲ್ಲಿ ಕ್ವಚಿತ್ ವ್ಯಕ್ತತಯಾ ದೇವತೆಗಳೂ, ದೇವರ ಪ್ರೇರಕತ್ವ ರೂಪವಾದ ಒಂದು ಶಕ್ತಿ ಇಟ್ಟಿರುವನು. ಕ್ವಚಿತ್ ದೇವತೆಗಳ ಪ್ರೇರಕತ್ವ ಹ್ರಾಸಕಾಲದಲ್ಲಿ, ದುಷ್ಕರ್ಮ ಮಾಡಿಸಲು ದೈತ್ಯಾದಿಗಳ ಪೈಶಾಚ ಆವೇಶವೂ ಉಂಟಾಗುವುದು.

**ಸಾರಾಂಶ :**— ಋಜುಗಳಲ್ಲಿ ಸದಾ ಅತಿರೋಹಿತ ಜ್ಞಾನಾದಿಗಳು, ಕಲ್ಯಾವೇಶ ರಹಿತರು, ರುದ್ರಾದಿಗಳಿಂದ ಇತರ ದೇವತೆಗಳು, ಮನುಜರಾಗಿ ಅವತರಿಸಿದ ಕಾಲ; ದುಷ್ಟಾನ್ನ-ಭೋಜನಾದಿಗಳಿಂದ ಕಲ್ಯಾವೇಶ ನಿಮಿತ್ತ ದೇವತಾದ್ರೋಹ; ಕೆಲಕಾಲ ಅಪರೋಕ್ಷತಿರೋಭಾವವಾದರೂ, ಪ್ರಾರಬ್ಧ ಅನುಭೋಕ್ತೃತ್ವ ಕಾಲದಲ್ಲಿಯೂ, ಕೆಲದಿನ ಅಪರೋಕ್ಷರಾಹಿತ್ಯರಾಗಿರುವುದು; ಅಂಶ-ಅವತಾರಾದಿಗಳಿಗೆ ಪ್ರಬಲ ಶಾಪನಿಮಿತ್ಯ ಒದಗುವುದು. ದೋಷಭಾಗಿಗಳೆಲ್ಲ ಕಲ್ಯಾದಿ ದೈತ್ಯರು; ಸುಖ ಭಾಗಿಗಳೆಲ್ಲ ದೇವತೆಗಳೆಂದು ಶಾಸ್ತ್ರಸಿದ್ಧ. ಆವೇಶ ಅವತಾರಾದಿ ಹೆಚ್ಚಿನ ವಿಷಯಗಳನ್ನು ಶ್ರೀ ಸರ್ವಜ್ಞರ ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ನೋಡಬಹುದು.

ಮತ್ತು ಅಪರೋಕ್ಷ ಜ್ಞಾನಿಗಳಾದ **ಶ್ರೀ ರಘುಪತಿ ವಿಠಲರು ಅಧ್ಯಾತ್ಮ ಮಾಲಾ ಗ್ರಂಥದಲ್ಲಿ,** ೧೪ ವಿಧ ತಾರತಮ್ಯ ವಿಚಾರ ಮಾಡಿದ್ದಾರೆ. ಅದರಲ್ಲಿಯೂ ಬ್ರಹ್ಮ, ವಾಯುಗಳು ಚತುರ್ದಶವಿಧ ತಾರತಮ್ಯದಿಂದ ಪ್ರಸಿದ್ಧರು. ಚತುರ್ದಶ ವಿಧದಿಂದಲೂ ಕೊರತೆಯಾಗದಲೆ ಪರಮಾತ್ಮನ ಸೇವೆ ಮಾಡಿದ ಬ್ರಹ್ಮ ವಾಯುಗಳೇ ಸಂಪೂರ್ಣ ಉಪಾಸನೆ ಮಾಡಿ ಶತಾನಂದವನ್ನು ಐದುತ್ತಾರೆ. ಇತ್ಯಾದಿ ೫-೬ ಪುಟ ಇದೆ. ಅಧ್ಯಾತ್ಮ ಮಾಲಾ ಭಾಗ (೨) ೧೩೮, ೧೩೯, ೧೪೦ ನೋಡಿ ಮನನ ಮಾಡುವುದು. ಮತ್ತು ಶ್ರೀ ವಿಜಯದಾಸರ ಬೃಹತ್ತಾರತಮ್ಯ ಸುಳಾದಿ ೧೭, ತಾರತಮ್ಯ ಸುಳಾದಿ ಪುಟ ೮೬ ರಿಂದ ೧೦೯ ರವರೆಗೆ ೨೦ ಪುಟ ಮತ್ತು ಸುಳಾದಿ ೧೨, ಚತುರ್ದಶ ವಿಧ ತಾರತಮ್ಯ ಕರ್ಮಜ್ಞಾನಯೋಗಿಗಳ ಸಾಧನ ವಿಚಾರ, ಪುಟ ೪೭ ರಿಂದ ೫೪ ರವರೆಗೆ ನೋಡುವುದು. § ಬಹುಶಾಸ್ತ್ರಾರ್ಥಪೂರಿತವಾಗಿ ಅರ್ಥಗರ್ಭಿತವಾಗಿವೆ. ಶ್ರೀ ಜಗನ್ನಾಥ

§ ಗ್ರಂಥಬಾಹುಲ್ಯ ಭಯದಿಂದ ಇಲ್ಲಿ ಕೊಟ್ಟಿಲ್ಲ.

ದಾಸಾರ್ಯರ ಬೃಹತ್ತಾರತಮ್ಯ ಪದದ ೭೩ ನುಡಿ, ಆಯಾ ಪದ್ಯಗಳ ಅಡಿ ಕೊಟ್ಟಿದೆ. ಹರಿಕಥಾಮೃತಸಾರಕ್ಕಿಂತಲೂ, ಕೆಲ ಬೃಹತ್ತಾರತಮ್ಯ ವಿಶದ ವಾಗಿ ಪೇಳಿದ್ದಾರೆ.

ಬೃಹತ್ತಾರತಮ್ಯವೆಂದರೆ ದೊಡ್ಡ ತಾರತಮ್ಯ. ದೇವತೆಗಳು ಸಾಂಶರು ನಾನಾ ಅವತಾರಗಳನ್ನು ಒಬ್ಬ ದೇವತೆಗಳು ಒಂದೊಂದು ಬೇರೆ ಬೇರೆ ಅಂಶದಿಂದ ಮಾಡುತ್ತಾರೆ. ಅವರ ದೇವತೆಗಳಲ್ಲಿ, ಉತ್ತಮ ದೇವತೆಗಳ ಆವೇಶ ಪರಿಪರಿ ವಿಧವಾಗಿವೆ. ಅರ್ಜುನನಲ್ಲಿ ನರ-ವಾಯು ಆವೇಶ, ಶೇಷನಲ್ಲಿ ಎರಡು ಆವೇಶ, ಲಕ್ಷ್ಮಣ-ಬಲರಾಮಾದಿಗಳಲ್ಲಿ ರುದ್ರಾವತಾರ, ಅಶ್ವತ್ಥಾಮ-ದೂರ್ವಾಸ ಇವರಲ್ಲಿ ಬೇರೆ ಆವೇಶ, ಅಭಿಮನ್ಯುವಿನಲ್ಲಿ ೪-೫ ಜನರ ಆವೇಶವು ಹೇಗೆ ಇರುವುದೆಂಬುದು ಮಹಾ ಶಾಸ್ತ್ರಾರ್ಥ ವಿಚಾರ. ಅಂತಹ ಎಷ್ಟು ಜನರ ಆವೇಶ ಕಾರ್ಯಪರತ್ವವಾಗಿದ್ದರೂ ಮುಖ್ಯ ಆವೇಶ ದಿಂದಿರುವ ಶ್ರೀಹರಿಯು ಎಲ್ಲರ ಆವೇಶ ಕಾರ್ಯ ನಡೆಸುತ್ತಾನೆ. ಇದನ್ನು ಸರ್ವಥಾ ಮರೆಯಲಾಗದು. ಸೃಷ್ಟಿ ಆರಂಭಿಸಿ ಮೋಕ್ಷ ಪರಿಯಂತ ಅವತಾರ ಆವೇಶಾದಿಗಳು ಪ್ರತಿ ದಿನಕಲ್ಪ-ಮನುಕಲ್ಪಗಳಲ್ಲಿ ವಿವಿಧವಾಗಿ ಇರುವುದು. ಕಾರಣ, ಇದಕ್ಕೇನೆ ಬೃಹತ್ ಮಹಾ ತಾರತಮ್ಯವೆಂದು ವೇದಗಳು ಘೋಷಿಸುತ್ತವೆ.

ಶ್ರೀ ಜಗನ್ನಾಥ ದಾಸಾರ್ಯರು ಬೃಹದ್ಭಾಷ್ಯ, ಬೃಹತ್ತಾರತಮ್ಯ ದಂತೆ ಸಂಕ್ಷಿಪ್ತವಾಗಿ ಅವತಾರ ಆವೇಶಗಳನ್ನು ತತ್ವೇಶರ ಪರಿಯಂತ ಮಂದಮತಿಗಳಿಗೂ ತಿಳಿಯುವಂತೆ ಪೇಳಿದ್ದಾರೆ. ಮುಂದೆ ಶೇಷಶತಸ್ಥರು ಕರ್ಮಜ ದೇವತೆಗಳು, ಆಜಾನುಜ ದೇವತೆಗಳು ಈ ಮೂರು ಪಕ್ಷದಲ್ಲಿ ಬಹ್ವರ್ಥಗರ್ಭಿತ ಶಾಸ್ತ್ರಾರ್ಥ ವಿಚಾರದೊಂದಿಗೆ ತಾರತಮ್ಯ ಹೇಳಿರುವರು. ತಿಳಿಯಲು ಬಹು ಕಷ್ಟ. ಎಚ್ಚರಿಕೆಯಿಂದ, ಪ್ರಮಾಣ-ಪ್ರಮೇಯಗಳ ನ್ನನುಸರಿಸಿ ಸ್ವೋತ್ತಮ ಗುರುಗಳಿಂದ ತಿಳಿಯುವುದು.

ಉಪನಿಷತ್ತು, ಭಾಷ್ಯಗಳಲ್ಲದೇ ಬ್ರಹ್ಮಸೂತ್ರ ಭಾಷ್ಯ, ಅನು ವ್ಯಾಖ್ಯಾನ, ಸುಧಾ ಪರಿಮಳ ಭಾಷ್ಯದೀಪಿಕಾ, ತಾರತಮ್ಯ ಸ್ತೋತ್ರಕ್ಕೆ

ಕೆಲವು ಟೀಕಾಗಳು ಕೆಲವರು ಜ್ಞಾನಿಗಳು ಸ್ವತಂತ್ರವಾಗಿ ತಾರತಮ್ಯ ಸಂಗ್ರಹಿಸಿದ್ದಾರೆ. ಸುಮಾರು ೪೦-೪೧ ವಹಿಗಳು ಸಂಗ್ರಹಿಸಿದ ಕೋಷ್ಟಕ ಮೊದಲಿಗೆ ತಾರತಮ್ಯ ಸುಳಾದಿಯಲ್ಲಿ ಕೊಟ್ಟಿದೆ.

ಮುಖ್ಯವಾಗಿ ಶ್ರೀಹರಿಯೇ ಸರ್ವೋತ್ತಮನೆಂದು ತಿಳಿಯಲು ಪರ ಮತ ನಿರಾಕರಣ ಪೂರ್ವಕ ಸ್ವಮತ ಏಳಿಗೆಗೆ,

ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥

ಬೃಹದ್ಭಾಷ್ಯ **ಕಾರ್ಯತಾವಾದ**ದಲ್ಲಿ ಸಕಲ ದುರ್ಮತ ನಿರಾಕರಣ ಪೂರ್ವಕ ಶಾಸ್ತ್ರಾರ್ಥ ವಿಚಾರಗೈದು ಶ್ರೀವಿಷ್ಣುವೇ ಸರ್ವೋತ್ತಮನೆಂದು ಉಪಾಸಿಸಲು ಮೋಕ್ಷಾನಂದವು ಹೆಚ್ಚಿನದಾಗುವುದು. ಎಂಬ ವಚನವನ್ನು ಸ್ಮರಿಸಿ ಬೃಹತ್ತಾರತಮ್ಯ ಸಂಧಿಯ ಪೀಠಿಕೆಯನ್ನು ಮಮ ಗುರ್ವಂತರ್ಗತ ಮಧ್ವೇಶನಿಗೆ ಅರ್ಪಿಸುವೆ. ಶ್ರೀಹರಿ, ಲಕ್ಷ್ಮಿ, ಬ್ರಹ್ಮಾದಿ ದೇವತೆಗಳ ವಿವರ ಪಟ್ಟಿಯನ್ನು ಕೊಟ್ಟಿದೆ. ನೋಡುವುದು. ೧೮೮೩ ಪುಷ್ಯವದಿ ೮ ಶ್ರೀ ಗೋಪಾಲದಾಸರ ಪುಣ್ಯದಿನ.

॥ ಶ್ರೀಲಕ್ಷ್ಮೀ ನರಸಿಂಹಾತ್ಮಕ ಶ್ರೀಲಕ್ಷ್ಮೀವೆಂಕಟೇಶ ಪ್ರಸನ್ನ ॥
॥ ಶ್ರೀಗುರುರಾಜೋ ವಿಜಯತೇ ॥

ಶ್ರೀರಾಘವೇಂದ್ರ ಗುರು ಶ್ರೀ ವರದೇಂದ್ರ ಗುರು
ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪ. ॥




**ಸಂಧಿಸೂಚನೆ**

ಹರಿ ಸಿರಿ ವಿರಂಚೀರ ಮುಖ ನಿ- ।
ರ್ಜರರ ಆವೇಶಾವತಾರಗಳ ।
ಸ್ಮರಿಸು ಗುಣಗಳ ಸರ್ವಕಾಲದಿ ಭಕ್ತಿಪೂರ್ವಕ ॥

**ಮೀನ ಕೂರ್ಮ ಕ್ರೋಡ ನರಹರಿ ।**
**ಮಾಣವಕ ಭೃಗುರಾಮ ದಶರಥ ।**
**ಸೂನು ಯಾದವ ಬುದ್ಧ ಕಲ್ಕೀ ಕಪಿಲ ವೈಕುಂಠ ॥**
**ಶ್ರೀನಿವಾಸ ವ್ಯಾಸ ಋಷಭ ಹ- ।**
**ಯಾನನಾ ನಾರಾಯಣೀ ಹಂ- ।**
**ಸಾನಿರುದ್ಧ ತ್ರಿವಿಕ್ರಮಃ ಶ್ರೀಧರ ಹೃಷಿಕೇಶ ॥ ೧ ॥**

**ಅವತರಣಿಕಾ**

ತಾರತಮ್ಯಪರಿಜ್ಞಾನಾತ್ತೇಷು ಧ್ಯಾತೋ ವಿಮುಕ್ತಿದಃ ॥
ಪ್ರೀತಿಂ ನ ಚಾನ್ಯಥಾ ಯಾಯಾದಿತಿ ಶಾಸ್ತ್ರಸ್ಯ ನಿರ್ಣಯಃ ॥

॥ ಇತಿ ತತ್ವವಿವೇಕೇ ॥ ( ಛಾಂದೋಗ್ಯಭಾಷ್ಯ ೧೫ನೇ ಖಂಡ ) ಶ್ರೀಮದಾಚಾರ್ಯರು ಆಜ್ಞೆ ಕೊಡಿಸಿದಂತೆ, ಸರ್ವೋತ್ತಮನಾದ ಹರಿಯು ತಾರತಮ್ಯ ಧ್ಯಾನದಿಂದಲೇ ಮುಕ್ತನಾಗುತ್ತಾನೆ. ಈ ತಾರತಮ್ಯವು ಶ್ರೀ ಬ್ರಹ್ಮಾದಿ ತೃಣಪರಿಯಂತವು ಸ್ವಜವಾದುದು. ಆದಿ ಸೃಷ್ಟಿಯಲ್ಲಿ ಮತ್ತು ಮುಕ್ತಿಯಲ್ಲಿ ನಿಜವಾದ ತಾರತಮ್ಯ ಉಂಟು. ಇದನ್ನ ಹಿಂದೆ ೧೯ನೇ ಗುಣ ತಾರತಮ್ಯದಲ್ಲಿ ಅವರೋಹಣ ಕ್ರಮದಿಂದ ೨೦ನೇ ಸಂಧಿಯಲ್ಲಿ ಆರೋಹಣ ಕ್ರಮದಿಂದ ಶ್ರೀಹರಿ ಸರ್ವೋತ್ಕರ್ಷ ಪೂರ್ವಕ ಉಪಾಸನಾಧ್ಯಾನ ಮಾಡಲು, ಸಂಚಿತಾಗಾಮಿನಾಶ, ಪ್ರಾರಬ್ಧ ಉಪಮರ್ದವೆಂದು ಹಿಂದಿನ ಸಂಧಿಗಳಲ್ಲಿ ಹೇಳಿದರು. ಈಗ ಸಾಧನ ಕಾಲವಾದ ಸಂಸಾರಾವಸ್ಥೆಯಲ್ಲಿ ಅಂದರೆ ಬ್ರಹ್ಮಾಂಡ ಸೃಷ್ಟಿ ಆದಮೇಲೆ ದ್ವಿಪರಾರ್ಧ ಕಲ್ಪ ಸಾಧನ ಕಾಲ, ಎಲ್ಲ ಸಾಂಶ ದೇವತೆಗಳು ದೇವತೆಗಳಲ್ಲಿ ಆವೇಶ ಮತ್ತು ಅವತಾರ ಉಂಟೆಂದು ಬೃಹದ್ಭಾಷ್ಯಾನುಸರಿಸಿ ಶ್ರೀ ವಿಜಯದಾಸಾರ್ಯರು ಬೃಹತ್ತಾರತಮ್ಯ ಸುಳಾದಿಯಲ್ಲಿ “ಚಿನ್ನುಮಯ ಚಿನ್ನಾಂಬರಚನ್ನ ಅಚ್ಛಿನ್ನ ಜೈವ । ಗವ್ಯ ಗರುಡಗಮನ ಗಂಗಾಜನಕ । ಅಮಿತ ಜೀವಿಗಳ ಅಂತ ಅಂಶಾವೇಶ । ಸಮ್ಯಪರ್ಕವಾಗಿ ನಡೆವ ತೆರದಿ । **ಕರ್ಮಾನುಸಾರದಿಂದ ಸಂಸಾರಾವಸ್ಥಿ** ಮುಕ್ತಿ । ಇಮ್ಮಹಿಯಲ್ಲಿ ಯೋಗ್ಯತವಂತೆವೆ । ಸಮ್ಮತಿ ಇದೆ ಸತ್ಯ ಮುಕ್ತಿಲಾವೇಶ ಯಾಕೆ । **ಹಮ್ಮು ಸಂಸಾ**

**ರಾವಸ್ಥೆ**ಯಲ್ಲಿ ಉಂಟು। ಹಿಮ್ಮೆಟ್ಟದಲಿ ಸೀಜೋಜ್ಞ ಆವೇಶ ಜೇಕು। ತಮ್ಮ ತಮ್ಮೊಳಗೆ ವೈಷಮ್ಯವೊದಗೆ ಉ। ತ್ತುಮ್ಮ ಮಧ್ಯಮ ಜನಕೆ ಆವೇಶಕ್ಕೆ ಮನುಜೋ। ತ್ತುಮ ವಿಕ್ಕಾದ ಇದೆ (ನರ) ಗಂಧರ್ವರಿಗೆ ಒಮ್ಮೆಗಾದರು ಪ್ರಯೋಜನವಿಲ್ಲ ಅಂಶಗಳಿಲ್ಲ ಉ। ತ್ತಮರಾವೇಶ ಸೀಚರೊಳು ಸ್ವಭಾವ। ಧಮ್ಮರಿಗೆ ಬಪ್ಪದು ಪರಬಲದಿಂದ ತಾರತಮ್ಯವೆ ಕೇಳುವುದು ಸುಜನ। ತಮ್ಮೊಯೋಗ್ಯರಾವೇಶಾ ಮುಕ್ತರೊಳಗೆ ಉಂಟು। ಹಮ್ಮಿನಿಂದಲಿ ಕರ್ಮ ಮಾಳ್ಪರಜ್ಞ್ಯಾ। ಜೊಮ್ಮಮಾತುರ ಓರ್ವ ಅಜ್ಞ ಬುಧಿಯಲಿಪ್ಪ। ನಮ್ಮಿಸಿಕೊಂಬ ಜೀವಕೋಟೀಶನು। ಸೌಮ್ಯಗುಣಾಂಬುಧಿ ವಿಜಯವಿಠ್ಠಲ। ಪುರುಷೋತ್ತಮ ಏಕಮೇವ ಸರ್ವಗುಣಾಧಿಕನು ॥ ೧ ॥ ತಾರತಮ್ಯಸು ॥ಪುಟ ೮೭॥

ಇಂತು ದೇವತೆಗಳ ತಾರತಮ್ಯ ಆವೇಶ ಅವತಾರಗಳನ್ನು ಅವರವರ ಬಲ, ವೀರ್ಯ, ಓಜಸ್ಸು ಸಾಧನಗಳನ್ನು ತಿಳಿದು ಧ್ಯಾನೋಪಾಸನೆ ಪೂರ್ವಕ ಅವರಲ್ಲಿ ಬಿಂಬನ ಅಂಶಗಳನ್ನು ಸ್ವಬಿಂಬನಲ್ಲಿ ಐಕ್ಯ ಚಿಂತಿಸಲು ಸಂಧಿಸಾರದಲ್ಲಿ ವಿಸ್ತಾರ ಪೇಳಿದಂತೆ ಬೃಹದ್ಭಾಷ್ಯಾನುಸರಿಸಿ, ಶ್ರೀಹರಿಯೇ ಸರ್ವರಿಂದ ಶ್ರೇಷ್ಠನೆಂಬುವ ಉಪಾಸನೆ ಮಾಡಲು ಈ ಬೃಹತ್ತಾರತಮ್ಯ ಸಂಧಿಯನ್ನು ಉಪಕ್ರಮಿಸಿದ್ದಾರೆ.

ಈ ಬೃಹತ್ತಾರತಮ್ಯ ಉಪಾಸನೆಗೆ ಮುಖ್ಯ ಕಾರಣವೇನೆಂದರೆ, ಶ್ರೀಹರಿಯ ಅಂಶಿ, ಅಂಶ, ಅವತಾರ, ಆವೇಶಾದಿ-ಗುಣ ರೂಪ ಕ್ರಿಯೆಗಳಿಗೆ ಭೇದವಿಲ್ಲ. ಇದರಂತೆ ರಮಾದೇವಿಯರಿಗೂ ಅನಂತ ಗುಣ ತಾರತಮ್ಯಾದಿ ಕಡಿಮೆ. ರಮಾ, ಬ್ರಹ್ಮವಾಯು, ಸರಸ್ವತೀ ಭಾರತೀಯರ ಅಂಶ ಅವತಾರಗಳಿಗೆ ಎಂದೂ ಭೇದ ಚಿಂತಿಸಬಾರದು. ಭೇದ ಚಿಂತಿಸಿದರೆ ತಮಸ್ಸೆ ಆಗುತ್ತದೆಂಬ ಪ್ರಮಾಣಗಳನ್ನು ಉದಾಹರಿಸುತ್ತಾ, ಶ್ರೀ ಸರ್ವಜ್ಞರು **"ತಸ್ಮಾತ್ ಸರ್ವೋತ್ತಮಂ ವಿಷ್ಣುಂ ಪೂರ್ಣಸರ್ವಗುಣೋಚ್ಛ್ರಿತಮ್। ವಿಜಾನೀಯಾದ್ವಿಮುಕ್ತ್ಯರ್ಥೀ ಸರ್ವತಶ್ಚ ವಿಲಕ್ಷಣಮ್॥"** ಎಂದುಬೃಹದ್ಭಾಷ್ಯ ೩।೪।೧೯ರಲ್ಲಿ। ಹೇಳಿದ್ದಾರೆ.

## ಸಂಧಿ ಸೂಚನೆ ಅರ್ಥ

ಹರಿ=ಸರ್ವೋತ್ತಮನಾದ ಬಿಂಬನಾಮಕ ಹರಿ,ಮೂಲನಾರಾಯಣನ ಸಿರಿ=ಲಕ್ಷ್ಮೀದೇವಿಯರ, ಅನಂತ ಅವತಾರಗಳು ಮತ್ತು ಈ ನಿತ್ಯಮುಕ್ತ ರಾದ ಮುಖ=ಮೊದಲಾಗಿ, ನಿರ್ಜರರ=ಜರ ಮುಪ್ಪು=ನಿರ್ಜರ ಮುಪ್ಪು ಇಲ್ಲದ ದೇವತೆಗಳ, ಆವೇಶ=ತಮಗಿಂತಲೂ, ಅವರರಾದ ಜೀವರುಗಳಲ್ಲಿ, ಆವಿಷ್ಟರೂಪ, ಆವೇಶರೂಪ, ಅವತಾರ=ಮೂಲರೂಪ ಅಂಶಿಯಿಂದ ಪ್ರಾದುರ್ಭಾವ ಅಂಶರೂಪ ಗುಣಗಳ=ಅವರಲ್ಲಿ ಇರುವ ಸ್ವಭಾವ ಗುಣ ಗಳನ್ನು ಭಕ್ತಿಪೂರ್ವಕ=ಬಹು ಆದರಾತಿಶಯ=ಪ್ರೀತಿಯಿಂದ, ಸರ್ವ ಕಾಲದಿ=ಎಲ್ಲ ಕಾಲದಲ್ಲಿ=ಎಡಬಿಡದೆ ಸಂತತ, ಸ್ಮರಿಸು=ಚಿಂತನೆಮಾಡು.

**ಪದ್ಯಾರ್ಥ** :—ಆದಿಯಲ್ಲಿ-ಶ್ರೀ ಭಗವಂತನ ಅವತಾರಗಳನ್ನು ಸ್ಮರಿಸುತ್ತಾರೆ. ಮೀನ=ಮತ್ಸ್ಯಾವತಾರ, ಕೂರ್ಮ=ದೇವತೆಗಳು ದೈತ್ಯರು ಅಮೃತಮಥನ ಕಾಲ ಮಂದರಗಿರಿ, ಪಾಲ್ಗಡಲಲ್ಲಿ ಮುಳುಗುತ್ತಿರಲು, ಆಮೆರೂಪದಿಂದ ಅವತರಿಸಿ-ಬೆನ್ನಿಲಿ ಮಂದರಗಿರಿ ಎತ್ತಿದನು. ಕ್ರೋಡ= ವರಾಹ ಅವತಾರ, ನರಹರಿ=ನರಸಿಂಹಾವತಾರ, ಮಾಣವಕ=ಬ್ರಹ್ಮಚಾರಿ ವಾಮನಾವತಾರ, ಭೃಗುರಾಮ=ಪರಶುರಾಮ ಭೃಗುಕುಲೋದ್ಭವ ಪಾರಾ ಶರ ಋಷಿಗಳಲ್ಲಿ ಪ್ರಾದುರ್ಭೂತನಾದವ, ದಶರಥಸೂನು=ದಶರಥರಾಜನ ಮಗನಾಗಿ ಅವತರಿಸಿದ ಶ್ರೀರಾಮಚಂದ್ರ, ಯಾದವ=ಯದುಕುಲದಲ್ಲಿ ಅವತರಿಸಿದ ಶ್ರೀಕೃಷ್ಣ, ಬುದ್ಧ=ಜಿನನಲ್ಲಿ ಅವತರಿಸಿ, ದೈತ್ಯಾದಿ ಗಳಿಗೆ ಮೋಹಪ್ರದನಾದ ಬೌದ್ಧರೂಪ, ಕಲ್ಕಿ=ಕಲ್ಕಿರೂಪ ಈ ದಶಾವತಾರ ರೂಪಗಳು, ಆಯಾ ಭಕ್ತರಿಗೋಸುಗ ಅವತರಿಸಿ ಧರ್ಮರಕ್ಷಿಸಿದ್ದು ಸುಪ್ರ ಸಿದ್ಧವಿದೆ. ಕಪಿಲ=ದೇವಹೂತಿಯಲ್ಲಿ ಅವತರಿಸಿ ಜ್ಞಾನೋಪದೇಶ ಕರ್ತೃರೂಪ, ವೈಕುಂಠ=ವಿಕುಂಠಾದೇವಿಯಲ್ಲಿ ಅವತರಿಸಿದ ರೂಪ, ಶ್ರೀನಿವಾಸ=ಶ್ರೀಲಕ್ಷ್ಮಿ ಬಿಂಬರೂಪ-ಅಥವಾ (ವೆಂಕಟೇಶರೂಪ) ವ್ಯಾಸ= ಬ್ರಹ್ಮಸೂತ್ರಾದಿ ಕರ್ತೃರೂಪ-ಋಷಭ=ನಾಭಿರಾಜನಲ್ಲಿ ಅವತರಿಸಿದ ರೂಪ ಹಯಾನನಾ=ಹಯಗ್ರೀವರೂಪ, ಆದಿಯಲ್ಲಿ ಮುಕ್ತರಿಗೆ ಜ್ಞಾನವನ್ನು ಉಪದೇಶ ಮಾಡಿದ ರೂಪ (ಪ್ರಕಾಶ ಸಂಹಿತಾ) ನಾರಾಯಣೀ=ದೇವತೆ

ಗಳಿಗೆ ಅಮೃತ ಉಣಿಸಿದ ಮೋಹಿನೀರೂಪ, ಹಂಸ=ನಿರ್ದುಷ್ಟವಾದ ಹಂಸ ರೂಪ ಬ್ರಹ್ಮದೇವರಿಗೆ ಉಪದೇಶಕ ರೂಪ, ಸರ್ವಜೀವರಲ್ಲಿ ಪ್ರಾಣ ದ್ವಾರಾ ಶ್ವಾಸೋಚ್ಛ್ವಾಸಕಾರಣರೂಪ, ಅನಿರುದ್ಧ=ಅನಿರುದ್ಧಾದಿ ಚತುರ ರೂಪ, ತ್ರಿವಿಕ್ರಮ=ವಾಮನ ಅಪರ ರೂಪ, ಶ್ರೀಧರ=ಚತುರ್ವಿಂಶತಿ ರೂಪಾದಿಗಳು, ಹೃಷಿಕೇಶ=ಇಂದ್ರಿಯ ನಿಯಾಮಕಾದಿ ರೂಪ, ಇಂತು ಅನಂತ ರೂಪಗಳಿಗೆ ಕಿಂಚಿತ್ತಾದರೂ ಭೇದವಿಲ್ಲ.

**ವಿಶೇಷ ಸೂಚನೆ :**—ಬೃಹದ್ಭಾಷ್ಯ ಪ್ರಮಾಣ ಅ. ೩-೫-೨೦ ॥ ಮತ್ಸ್ಯ, ಕೂರ್ಮ, ಕ್ರೋಡ, ಸಿಂಹ, ವಟು, ಭಾರ್ಗವ ರಾಘವಾಃ ॥ ಕೃಷ್ಣ, ಬೌದ್ಧ, ಕಲ್ಕಿ, ದತ್ತ, ಹಯಶೀರ್ಷೈತರೇಯಕಾಃ ॥ ಪಾರಾಶರ್ಯಶ್ಚ ಕಪಿಲೋ ವೈಕುಂಠೋ ಋಷಭಸ್ತಥಾ ॥ ಯಜ್ಞೋ ಧನ್ವಂತರಿಶ್ಚೈವ ಸ್ತ್ರೀರೂಪಸ್ತಾಪಸೋ ಮನುಃ ॥ ನಾರಾಯಣೋ ಹರಿಃ ಕೃಷ್ಣ ಉಪೇಂದ್ರಾ ದ್ಯಾಸ್ಸರ್ವ ಏವ ಚ ॥ ಏವಮಾದ್ಯಾ ಹರೇಃ ಸಾಕ್ಷಾತ್ ಪ್ರಾದುರ್ಭಾವಾಃ ಪ್ರಕೀರ್ತಿತಾಃ ॥ ೨೦ ॥

**ಶ್ರೀ ಜಗನ್ನಾಥದಾಸಾರ್ಯಕೃತ ಬೃಹತ್ತಾರತಮ್ಯಪದ** ॥ ವ್ಯಾಖ್ಯಾನರೂಪವಾಗಿದೆ.

“ಆನಮಿಪೆ ವಿಷ್ಣು, ಶ್ರೀ ಬ್ರಹ್ಮವಾಯು । ವಾಣಿ ಭಾರತಿ ಮುಖ್ಯ ರವತಾರ ಆವೇಶಕಾನಮಿಪೆ ॥ ಪ. ॥ ಶ್ರೀಮತ್ಸ್ಯ ಕೂರ್ಮ ಭೂವರಹ ನರಸಿಂಹ ದಧಿ । ವಾಮನ ತ್ರಿವಿಕ್ರಮಃ ಭೃಗುಕುಲೋದ್ಭವ । ರಾಮ ಯಾದವ ಕೃಷ್ಣ ಬುದ್ಧ ಕಲ್ಕಿ ಹಯಾಸ್ಯ। ನಾಮತಾಪಸ ಮನು ಉಪೇಂದ್ರ ಅಜಿತಾದಿಗಳಿಗಾನಮಿಪೆ ॥ ೧ ॥ ವಾಸುದೇವಾಚ್ಯುತಾನಂತ ಗೋವಿಂದ ಮಹಿ । ದಾಸ ಧನ್ವಂತ್ರಿ ಹರಿ ಹಂಸದತ್ತಾ । ವ್ಯಾಸ ಕಪಿಲಾತ್ಮಂತರಾತ್ಮ ಪರಮಾತ್ಮ ಯ । ಜ್ಞೇಶ ವೈಕುಂಠ ನಾರಾಯಣಾದ್ಯವತಾರ ಕಾನಮಿಪೆ ॥ ೨ ॥ ನಾರಾಯಣೀ ಋಷಭ ಐತರೇಯ ಶಿಂಶು । ಮಾರ ಯಜ್ಞ ಪ್ರಾಜ್ಞ ಸಂಕರುಷಣಾ ॥ ಕ್ಷೀರಾಬ್ಧಿ ನಿಲಯ ಯಮನಂದನಾ ಕೃಷ್ಣ ಹರಿ ನಾರಾ ಯಣಾ ಧರ್ಮ ಸೇತು ರೂಪಗಳಿಗಾನಮಿಪೆ ॥ ೩ ॥

**ಭಾವ ಸೂಚನ** :—ಈಗ್ಗೆ ನಮ್ಮ ದಾಸಪರ್ಯರು ಪೂರ್ವದ ಸಂಧಿಗಳಲ್ಲಿ ದೇವ ತಾರತಮ್ಯ ಹೇಳಿ, ಅದು ವಿಸ್ತರವಾಯಿತು ಎಂದರೆ ಆರೋಹಣ ತಾರತಮ್ಯ ಸಂಕ್ಷಿಪ್ತವಾಗಿ ಹೇಳಿ ಈಗ ಅಂಶಾವತಾರ ಸಹಿತವಾಗಿ, ತರತಮಭಾವ ತಿಳಿಯಬೇಕೆಂತೆಂದರೆ ಅದು ಹೇಳುವ ಉದ್ದಿಶ್ಯ ಶ್ರೋತೃಗಳನ್ನು ಅಭಿಮುಖಕರಿಸುತ್ತಾರೆ. **ಹರೇತಿ ॥ ಮಂಜೂಷಾಯಾಂ ಚ ॥ ಭಾಮಿನಿ** ॥ ಧಾತು ಮುಖ ದೇವತೆಗಳಂಶವ । ಸೀತದಲಿ ಜನ ತಿಳಿಯಲೋಸುಗ । ಪ್ರೀತಿಯಲಿ ರಚಿಸಿರುವ ಈ ಬೃಹತ್ತಾರತಮ್ಯವನು ॥ ಪ್ರಾತನಾಗಿ ತ್ರಿಕಾಲವಲಿ ಸಂ । ಧ್ಯಾತನಾದವಗೊಲಿದು ಹರಿ ತ । ನ್ನಾತನೆನಿಸಿ ಸದಾ ಪರೋಕ್ಷವನಿತ್ತು ಸಲಹುವನೈ ॥ ೨೩ ॥ ಈರ=ವಾಯು, ನಿರ್ಜರ=ದೇವತೆಗಳು.

**ಮೀನೇತಿ** ॥ ಮತ್ಸ್ಯಃ ಕ್ರೋಡೋ ವರಾಹಃ ॥ ಮಾಣವಕೋ ವಾಮನಃ । ಭೃಗುರಾಮಃ ಪರಶುರಾಮಃ । ಯಾದವಃ ಕೃಷ್ಣಃ । ವೈಕುಂಠಃ ವಿಕುಂಠನಾಮ ಋಷಿಪತ್ನಿಪುತ್ರಃ ॥

**ತದುಕ್ತಂ ಬೃಹದ್ಭಾಷ್ಯೇ** ॥ ಪ್ರಾದುರ್ಭಾವತಯಾ ಯೇ ಚ ತದನ್ಯಾನ್ ಜಾನತೇ ವಿಭೋ । ತೇಽಪಿ ಯಾಂತಿ ತಮೋ ಘೋರಂ । ತಸ್ಮಾನ್ನೈವಂ ವಿದೋ ವಿದುಃ ॥ ಮತ್ಸ್ಯ ಕೂರ್ಮ ಕ್ರೋಡ ಸಿಂಹ ॥ ಇತ್ಯಾದಿ ॥

### ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ

ಶ್ರೀರಸ್ತು ॥ ಬೃಹತ್ತಾರತಮ್ಯ ಸಂಧಿಃ ಆರಭ್ಯತೇ ॥

ಅನಂತಂ ಪದ್ಮನಾಭಂ ಚ ತತ್ರಾವಿಷ್ಟಂ ರಮಾಸತಿಮ್ ॥ ಕೌಂಡಿನ್ಯ ಮುಖದಾರಿದ್ರ್ಯಹರಂ ಶ್ರೀಹರಿಂ ಆಶ್ರಯೇ ॥ ೧ ॥ ಶ್ರೀ, ಶಾಲಿನೀ ಸಮಾಶ್ಲಿಷ್ಟೋಽವತೀರ್ಯ ನಿಜಮಂದಿರಾತ್ ॥ ಕಾಂಚ್ಯಾದಾವಿಶ್ಯ ಚಾನಲ್ಪಧಿಷಣೋ ಯೋ ಬಭೂವ ಹ ॥ ೨ ॥ ನಾರಾಯಣ ರಮಾ ಮುಖ್ಯ ಲೇಖಾನಾಂ ಚಾರಿಣಾಂ ಭುವಿ ॥ ಆವೇಶಾನವತಾರಾಂಶ್ಚ ಜ್ಞಾತ್ವಾ ಮುಕ್ತಿಃ ನ

ಚಾನ್ಯಥಾ ॥ ೩ ॥ "ಅವತಾರಾನ್ ಹರೇಃ ಜ್ಞಾತ್ವಾ" ಇತಿ ॥ "ತದಾವೇಶಾನ್ ತಥಾ ಸಮ್ಯಕ್ ಜ್ಞಾತ್ವಾ" ಇತಿ ಚ ವಚನೇನ-"ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಃ ತಥಾ ॥ ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ ॥" ಇತಿ ಪುರಾತನಾಚಾರ್ಯ ವಚಸಾ ಆವೇಶಾವತಾರೋಚ್ಚತ್ವಧಿಯಾಂ ಪರಮುಖ್ಯಂಗತ(ತಾ)ಯಾ ಅವಗಮಾತ್ ತತ್ತ್ರಯಂ ತತ್ವತಃ ಅವಗತಂ ಚೇತ್ ಅಲಂ ಪ್ರಾಯಣಾಯ ನಾನ್ಯಥಾ ॥ ತಸ್ಯ ಚ ಅಬಾಧಿತ=ಮಾನಸಾಪೇಕ್ಷತ್ವಾತ್ ॥ ತತ್ರ ಬೃಹದ್ಭಾಷ್ಯಂ, ತದರ್ಥಕ ಪ್ರಮಾದಾದ್ಯರ್ಥಂ ಕೃತರತ್ನಮಾಲಾ ದೀಪಿಕಾ ಸಾಮಾನಾಧಿಕರಣ್ಯೇ ಕಥಾಮೃತಸುಧಾಪ್ಲುತಾನಾಂ ಪರೀಕ್ಷ್ಯ ಕಂಠೇಽರ್ಪಯಿತುಂ ಕೃತಾವಸರಾ ಮಾಲಾ ಇತಿ ಗ್ರೈವೇಯನಿರ್ಮಾಣಾಯ, "ಶ್ರೀಹರೀತರ ದಿವಿಜನಾಮಾನಿ ಅರ್ಥವಂತಿ ಮತಾನ್ಯೇವ; "ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್; " ಇತಿ ನ್ಯಾಯೇನ ಹರೌ ಗುಣೋತ್ಕರ್ಷಮವಗಮ್ಯ ಪ್ರಸನ್ನತಾಂ ಭಜೇರನ್" ಇತಿ ಮನಸಾ ವಿಚಾರ್ಯ ಬಹುಗ್ರಂಥಸಂದರ್ಭಾಂ ದರ್ಶಯಿಮುಖಾವೇಶಾವತಾರ ಪ್ರಕ್ರಿಯಾಂ ಆತ್ಮಗ್ರಂಥಸಂಬದ್ಧಾಂ ದರ್ಶಯಿಷ್ಯನ್ ತಾವತ್ ಚಿಕೀರ್ಷಿತಂ ಪ್ರತಿಜಾನೀತೇ— "ಹರಿ" ಇತಿ ॥

"ಗ್ರಂಥ ಬಾಹುಲ್ಯಭೀತ್ಯಾಹಂ ಪರಿತ್ಯಾಗೇಪ್ಯನೀಶ್ವರಃ ॥ ಮಾನ್ಯೈಕಾರ್ಥ್ಯೇ ಮಾನಮೇಕಂ ಉಕ್ತ್ವಾ ಪ್ರವೃತ್ತಿಃ ಪ್ರದರ್ಶ್ಯತೇ ॥" "ವೈಕುಂಠ" —ಓಂ ಮೃಳಯಾಸಿ ನಃ ಉಪ ನೋ ಹರಿಭಿಃ ಸುತಂ. ಯಾಹಿ ಮದಾನಾಂ ಪತೇ ಉಪನೋ ಹರಿಭಿಃ ಸುತಂ ದ್ವಿತಾ ಯೋ ವೃತ್ರಹಂತಮಃ ॥ ಓಂ ॥ ವಿಗತಃ ಕುಂಠಃ ಸರ್ವಲೋಕಸಂಚಾರಪ್ರತಿಹತಿಃ ಯಸ್ಮಾತ್ ಸಃ ವೈಕುಂಠಃ ॥ ತನ್ನಿರ್ಮಾತಾ ವಿಕುಂಠಾಖ್ಯಋಷಿಪತ್ನ್ಯಾಂ ಅವತೀರ್ಣಃ ವಾ "ಮಾಣವಕಃ" —ವಾಮನಃ ॥ ಏವಂ ಶ್ರೋತೄನ್ ಅಭಿಮುಖೀ ಕೃತ್ಯ ಶ್ರೀಭಗವದವತಾರಾನ್ ನಿರ್ದಿಶತಿ— "ಮೀನ" ಇತಿ ॥ "ಶ್ರೀನಿವಾಸ" ಇತಿ ॥ "ನಾರಾಯಣೀ" -ಮೋಹಿನೀ ॥" ತ್ರಿವಿಕ್ರಮಃ ವಾಮನ ಪ್ರಭಿನ್ನಃ॥ಅತ್ರ ಉಪಲಕ್ಷಣಯಾ ಪ್ರದ್ಯುಮ್ನಾದಿತ್ರಯಾಣಾಂ ಅನಿರುದ್ಧ ಪದೇನ, ಶ್ರೀಧರಪದೇನ ಚತುರ್ವಿಂಶತಿ ಮೂರ್ತೀನಾಂ, ವೇಕಾಲಾದಿ

ಪದೇನ ವಿಶ್ವಾದಿ ಸಾಹಸ್ರಸ್ಯ (ಸಹಸ್ರಾಣಾಂ) ಪರಾದಿರೂಪಾಣಾಂ ಅಜಿತಾದೀನಾಂ ಆಧ್ಯಾತ್ಮಿಕಾನಾಂ ಅನಂತಾನಾಂ ಗ್ರಹಣಮ್ ॥೧॥

## ಕನ್ನಡಾರ್ಥ

ಅನಂತ(ಶೇಷ)ನಲ್ಲಿ ಅಂತಃ ಸನ್ನಿಹಿತನಾದ ಕೌಂಡಿನ್ಯ ಮುಂತಾದ ವರ ದಾರಿದ್ರ್ಯಹರನಾದ ಅನಂತಪದ್ಮನಾಭರೂಪೀ ಶ್ರೀರಮಾಪತಿ ಯನ್ನು ಆಶ್ರಯಿಸುತ್ತೇನೆ. ॥ ರಮಾಸಮಾಲಿಂಗಿತನಾದ ಶ್ರೀಹರಿಯು ವೈಕುಂಠದಿಂದ ಅವತರಿಸಿರುತ್ತಾನೆ. ಪೂರ್ಣಜ್ಞಾನಾನಂದಮಯನಾದ ಶ್ರೀಹರಿಯು ಕೆಲವರಲ್ಲಿ ತನ್ನ ಆವೇಶಗಳನ್ನೂ ಇಟ್ಟಿರುತ್ತಾನೆ. "ಅಂಥ ಶ್ರೀಮನ್ನಾರಾಯಣ, ಶ್ರೀಲಕ್ಷ್ಮೀದೇವಿ, ಇವರುಗಳ, ಇವರೇ ಮುಖ್ಯ ವಾಗಿವುಳ್ಳ - ಭೂಮಿಯಲ್ಲಿ ಅವತರಿಸಿರುವ ದೇವತೆಗಳ ಆವೇಶ ಹಾಗೂ ಅವತಾರಗಳನ್ನು ಸರಿಯಾಗಿತಿಳಿಯಬೇಕು. ಇಲ್ಲದಿದ್ದರೆ ಮುಕ್ತಿಯಾಗು ವುದಿಲ್ಲ". "ಹರಿಯ ಅವತಾರಗಳನ್ನು ತಿಳಿದು;" "ಆ ಹರಿಯ ಅವತಾರ- ಆವೇಶಗಳನ್ನು ಸರಿಯಾಗಿ ತಿಳಿದು;" "ತಾರತಮ್ಯವನ್ನು ಅದರಿಂದ ತಿಳಿಯ ಬೇಕು. ಹಾಗೂ ಹರಿಯ ಸರ್ವೋತ್ತಮತ್ವವನ್ನೂ ತಿಳಿದುಕೊಳ್ಳಬೇಕು. ಇಲ್ಲದಿದ್ದರೆ- ಯಾರಿಗೂ ಹೇಗೂ ಎಂದಿಗೂ ಮುಕ್ತಿಯಾಗುವುದಿಲ್ಲ." ಎಂದು ಮುಂತಾಗಿ ಪುರಾತನಾಚಾರ್ಯರ ವಚನಗಳಿರುವವು. ಅವುಗಳಿಂದ —"ಹರಿಯ ಅವತಾರ - ಆವೇಶ - ಸರ್ವೋತ್ತಮತ್ವಗಳ ಜ್ಞಾನದಿಂದ ಮೋಕ್ಷಾದಿಗಳಾಗುವವೆಂದು ತಿಳಿದುಬರುತ್ತದೆ. ಆದುದರಿಂದ ಈ ಮೂರು ವಿಷಯಗಳನ್ನು ಯಥಾರ್ಥವಾಗಿ ತಿಳಿದರೆ ಮೋಕ್ಷಕ್ಕೆ ಸಾಧನಗಳು ಪೂರ್ಣ ವಾಗುವವು. ಇಲ್ಲದಿದ್ದರೆ ಮೋಕ್ಷವಿಲ್ಲ. ಆದುದರಿಂದ ಅತಿಮಹತ್ತರ ವಾದ ಈ ಮೂರು ವಿಷಯಗಳು ಅಬಾಧಿತಪ್ರಮಾಣಗಳಿಂದಲೇ ಸಿದ್ಧ ವಾಗುವವು. ಅದರಲ್ಲಿ "ಬೃಹದ್ ಭಾಷ್ಯ", ಅದರ ಅರ್ಥವನ್ನು ವಿವರಿಸುವ "ರತ್ನಮಾಲಾ" - "ದೀಪಿಕಾ ಮುಂತಾದವುಗಳನ್ನು ಸಮಾನವಿಷಯಕ ಗಳಾಗುವಂತೆ ವಿಮರ್ಶಿಸಿ, ಹರಿಕಥಾಮೃತದಲ್ಲಿ ಮುಂದವರ ಕಂಠನಲ್ಲಿ ಕಂಠಾಭರಣವಾಗಲು ರತ್ನಮಾಲೆಯು ಅರ್ಹವಾಗಿರುತ್ತದೆ.

"ಹರಿಯ ವ್ಯತಿರಿಕ್ತರಾದ ದೇವತೆಗಳ ನಾಮಗಳಿಗೂ ಸಹ "ಸ್ವಾತಂತ್ರ್ಯವು ಶಬ್ದಪ್ರವೃತ್ತಿನಿಮಿತ್ತಗಳಲ್ಲಿ ಮುಖ್ಯವಾದುದು" ಎಂದು ಹೇಳುವ ಅನುವ್ಯಾಖ್ಯಾನದ ವಚನದಂತೆ ಪ್ರಯೋಜನಗಳಿರುತ್ತದೆ; ಅದರಿಂದ ಶ್ರೀಹರಿಯು ಸರ್ವಗುಣೋತ್ಕೃಷ್ಟನೆಂಬ ಜ್ಞಾನವು ಹುಟ್ಟುತ್ತದೆ. ಆದುದರಿಂದ ಮನಸ್ಸಿಗೆ ಪ್ರಸನ್ನತೆಯಾಗುವುದು ಹೀಗೆಂದು ವಿಚಾರಿಸಿ ಬಹುಗ್ರಂಥಗಳ ಸಂದರ್ಭಗಳಿಗೆ ಅನ್ವಯಿಸುವ ನಾರಾಯಣ ಮುಂತಾದವರ ಅವತಾರ-ಆವೇಶ ಪ್ರಕ್ರಿಯೆಯು ತಮ್ಮ ಗ್ರಂಥದಲ್ಲಿ ನಿರೂಪಿತವಾಗುವುದೆಂದು ತೋರಿಸುತ್ತಾರೆ. ಅದರಲ್ಲೂ ಮೊದಲು ತಮಗೆ ಮಾಡಲಿಷ್ಟವಾದುದನ್ನು ಮುಂಚೆಯೇ ತಿಳಿಸುತ್ತಾರೆ–'ಹರಿ' ಎಂಬ ಸೂಚನಾ ಪದ್ಯದಿಂದ.

"ಬಹಳ ವಿಷಯಗಳನ್ನು ನಿರೂಪಿಸಿದರೆ ಗ್ರಂಥವು ಬೆಳೆಯುತ್ತದೆಂಬ ಭಯವು ಮೂಡುತ್ತದೆ. ಆದರೂ ಆ ವಿಷಯಗಳನ್ನು ಬಿಡಲು ಶಕ್ತನಲ್ಲ. ಪ್ರಮಾಣ ಸಂವಾದಗಳುಳ್ಳ ಅರ್ಥಗಳಲ್ಲಿ ಒಂದೊಂದು ಪ್ರಮಾಣವನ್ನು ಹೇಳಿ ಪದಪದಾರ್ಥವನ್ನಷ್ಟೇ ಪ್ರದರ್ಶಿಸುತ್ತೇನೆ"'ವೈಕುಂಠ' ಯಾವನಿಗೆ ಸರ್ವಲೋಕಸಂಚಾರದ ತಡೆಯೆಂದಿಗೂ ಇರುವುದಿಲ್ಲವೋ ಅವನು ವೈಕುಂಠನು. (೧) ವೈಕುಂಠಲೋಕವನ್ನು ನಿರ್ಮಿಸಿದವನು. ನಿತ್ಯವಾದ ವೈಕುಂಠಲೋಕಕ್ಕೆ ಆಶ್ರಯನು. (೨) ವಿಂಕುಂಠಾ ಎಂಬ ಋಷಿಪತ್ನಿಯಲ್ಲಿ ಅವತರಿಸಿದವನು. (೩)

'ಮಾಣವಕಃ'=ವಟುವಾದ ವಾಮನ.

ನಾರಾಯಣನ ಅವತಾರಗಳನ್ನು ಹೇಳುತ್ತ ಶ್ರೋತೃಗಳನ್ನು ಗ್ರಂಥದ ಕಡೆಗೆ ಮನವೊಲಿಸುತ್ತಾರೆ–'ಮೀನ' ಎಂಬ ಪದ್ಯದಿಂದ.

'ನಾರಾಯಣೀ'=ಮೋಹಿನೀರೂಪ. ತ್ರಿವಿಕ್ರಮರೂಪವು ವಾಮನಾವತಾರದಲ್ಲಿಯ ಪ್ರಭೇದ. ಅಂದರೆ ವಾಮನನೇ ತ್ರಿವಿಕ್ರಮನಾಗಿರುತ್ತಾನೆ ಎಂದು ಭಾವ.

ಇಲ್ಲಿ ಮಿಕ್ಕ ರೂಪಗಳನ್ನು ಸಂಗ್ರಹಿಸಬೇಕು. 'ಅನಿರುದ್ಧ' ಪದದಿಂದ ಪ್ರದ್ಯುಮ್ನ ಮುಂತಾದ ನಾಲ್ಕು ರೂಪಗಳನ್ನು ತಿಳಿಯಬೇಕು. 'ಶ್ರೀಧರ' ಪದದಿಂದ ಇಪ್ಪತ್ತುನಾಲ್ಕು ರೂಪಗಳನ್ನು ಸಂಗ್ರಹಿಸಬೇಕು. ಮೂಲಪಲ್ಲಿರುವ ಆದಿ ಪದದಿಂದ ವಿಶ್ವ ಮುಂತಾದ ಸಹಸ್ರ ರೂಪಗಳನ್ನೂ, ಪರಾದಿರೂಪಗಳನ್ನೂ, ಅಜಿತ ಮುಂತಾದ ಆಧ್ಯಾತ್ಮಿಕ ಅನಂತ ರೂಪಗಳನ್ನೂ ಸಂಗ್ರಹಿಸಬೇಕು ॥ ೧ ॥

**ಅವತರಣಿಕಾ:**—ಈ ಪದ್ಯದಲ್ಲಿಯೂ ಶ್ರೀಹರಿಯು ಯಮದೇವರಲ್ಲಿ ಅವತರಿಸಿದ ನಾಲ್ಕು ರೂಪಗಳನ್ನು ಹೇಳುತ್ತ ಶ್ರೀಹರಿಯ ಗುಣಪೂರ್ಣಾದಿ ಮಹಿಮೆ ಹೇಳುತ್ತಾರೆ.

**ಹರಿಯು ನಾರಾಯಣನು ಕೃಷ್ಣಾ ।**
**ಸುರಕುಲಾಂತಕ ಸೂರ್ಯ ಸಪ್ರಭ ।**
**ಕರಿಸುವನು ನಿರ್ದುಷ್ಟ ಸುಖಪರಿಪೂರ್ಣ ತಾನೆಂದು ॥**
**ಸರುವ ದೇವೋತ್ತಮನು ಸರ್ವಗ ।**
**ಪರಮ ಪುರುಷ ಪುರಾತನ ಜರಾ ।**
**ಮರಣ ವರ್ಜಿತ ವಾಸುದೇವಾದ್ಯಮಿತ ರೂಪಾತ್ಮಾ ॥ ೨ ॥**

**ಪದಾರ್ಥ :**—ಹರಿಯು, ಹರಿರೂಪ, ನಾರಾಯಣ, ಇವೆರಡೂ ಮೂಲರೂಪವಲ್ಲವೆ ಮೂಲರೂಪಕ್ಕೆ ಅತ್ಯಂತ ಅಭಿನ್ನವಾಗಿ ಯಮಧರ್ಮನಲ್ಲಿ ಅವತರಿಸಿದ ರೂಪಗಳು. ಹರಿ, ನಾರಾಯಣ, ಕೃಷ್ಣ, ಧರ್ಮಸೇತು ಈ ನಾಲ್ಕು ರೂಪಗಳು. ಅಸುರಕುಲಾಂತಕ=ಪ್ರಾಣದೇವರನ್ನು ದ್ವೇಷಿಸುವ ದೈತ್ಯರ ಕುಲವನ್ನೇ ನಾಶಮಾಡುವವನು, ಸೂರ್ಯಸಪ್ರಭ=ಅನಂತಾನಂತ ಕೋಟಿ ಸೂರ್ಯರಂತೆ ಕಾಂತಿಯುಳ್ಳ ಪ್ರಕಾಶಮಾನ ರೂಪಗಳು ಅಂದರೆ ಜ್ಞಾನಾನಂದ ರೂಪಿಯು, ನಿರ್ದುಷ್ಟ=ದೋಷದೂರನು, ಸುಖಪರಿಪೂರ್ಣ ತಾನೆಂದು=ಶ್ರೀಹರಿಯು ಅನಂತಾವತಾರಗಳಲ್ಲಿಯೂ ಸುಖಪೂರ್ಣನು, ದುಃಖಾದಿ ದೋಷಗಳಿಲ್ಲದವನು, ಸಚ್ಚಿದಾನಂದ ಆತ್ಮಾದಿ ಅನಂತ ಕಲ್ಯಾಣಗುಣ ಪರಿಪೂರ್ಣ ರೂಪಗಳೆಲ್ಲವೂ

ಒಂದೇ, ಅವತಾರಗಳಲ್ಲಿ ಭೇದವಿಲ್ಲ. ಸರ್ವದೇವೋತ್ತಮನು=ಬ್ರಹ್ಮಾದಿ ಸಕಲ ದೇವತೆಗಳಿಗೆ ಶ್ರೇಷ್ಠನು, ಸರ್ವಗ=ಸರ್ವಕಾಲದಲ್ಲಿ ತ್ರಿಕಾಲಾಬಾಧಿತ ಸನಾತನನೂ, ಪರಮಪುರುಷ=ಪರಮ ಉತ್ತಮಳಾದ ಶ್ರೀದೇವಿಯರಿಂದಲೂ, ಉತ್ತಮ ಪುರುಷ ಶಬ್ದವಾಚ್ಯನು. ಪುರಾತನ=ಬಹುಕಾಲದಿಂದ ಒಂದೇ ಪ್ರಕಾರವಾಗಿರುವನು, ಜರಾಮರಣವರ್ಜಿತನು=ಮುಪ್ಪು ಸಾವು ದೇಹವಿಯೋಗಾದಿರಹಿತನು,ಸದಾಚಿದಾನಂದ ಶರೀರಿ ಎಂದರ್ಥ, ವಾಸುದೇವಾದ್ಯಮಿತ ರೂಪಾತ್ಮ=ಸೃಷ್ಟಿ ಪ್ರಾರಂಭದಲ್ಲಿ ಮೂಲರೂಪ ನಾರಾಯಣನಿಂದ ಮೊದಲು ಪ್ರಾದುರ್ಭಾವವಾದ ವಾಸುದೇವನೇ ಮೊದಲಾಗಿ ಅನಂತ ಲೆಕ್ಕವಿಲ್ಲದ ರೂಪಗಳಿಂದ ಅವತಾರ ಮಾಡಿದ ಹರಿಯ ರೂಪಗಳು ಸಕಲವೂ ಸುಖಪೂರ್ಣ,ಕಿಂಚಿತ್ತಾದರೂ ಭೇದವಿಲ್ಲ.

**ಭಾವಸೂಚನ** :—'ಹರಿ' ಇತಿ ||೨||

## ವ್ಯಾಸದಾಸಸಿದ್ಧಾಂತ ಕೌಮುದೀ

ಹರಿಃ ಇತಿ 'ಸಪ್ರಭಃ' ಸಮಾನ ಕಾಂತಿಃ || 'ವಾಸುದೇವಾದಿ' ಇತ್ಯನೇನ ಇದಮತ್ರ ಅಭಿಪ್ರೈತಿ || ಮೂಲನಾರಾಯಣೇತಿ ಪೂರ್ವಂ ಗ್ರಹಣೇನ 'ಶೂನ್ಯನಾಮಾ ಸಃ || ತಸ್ಮಾತ್ ಪುರುಷಃ || ತಸ್ಮಾತ್ ವಾಸುದೇವಾದೇಃ ಆವಿರ್ಭಾವಃ' ಇತಿ || ಸ್ತ್ರೀಶೂದ್ರಾದೀನಾಂ ಪಾಠಯೋಗ್ಯತಾರ್ಥಂ ಇತಿ ತದ್ದೀಪಿಕೋಕ್ತೇಃ ಕೇವಲಮರ್ಥಗ್ರಹಣಮಕಾರಿ || 'ನತ್ವಾ ನಾರಾಯಣಂ ವಿಷ್ಣೋರಾವೇಶಂ ಚ ದಿವೌಕಸಾಂ' ಇತ್ಯಾದಿನಾ ತಾರತಮ್ಯ ಸದ್ರತ್ನಮಾಲಾಯಾಂ ವಿಠಲಾರ್ಯೈಃ || ವ್ಯಾಖ್ಯಾಯಾಂ ಚ ಮೂಲಾನಿ ಊರೀಚಕಾರ ಸಂವಾದತಯಾ || ದಿವೌಕಃ ಶಬ್ದವೃತ್ತಿಃ ಗಾರುಡಾತ್ ಅವಸಿತಃ । ಅತಃ ಏತತ್ ಸರ್ವ ಮೂಲಕತ್ವಾತ್ ಭಾಗವತವತ್ ಸರ್ವಾಸೂಯಾದಿ ತ್ರಿಂಶದ್‌ದೋಷಾತಿದೂರ ಭಕ್ತಿರಸ ಪ್ರಸರ ಯುಕ್ತಾನಾಂ ವಿದುಷಾಂ ಕಂಠಭೂಷಾ ಇಯಂ ಏತತ್ಸಂಧ್ಯುಕ್ತಾವೇಶಾದಿಮಾಣಿಕ್ಯಮಾಲಾ ಇತಿ ಸ್ಥಿತೇಽಪಿ ಲಘೀಯಸ್ಯುಪಾಯೇ ಹಂತ ಆಗ್ರಹಗೃಹೀತಾತ್ಮಾನಃ ಶಂಕಾಪಂಕಸಂಕ್ಷಾಲನಾಕ್ಷಮಾಃ ನ ಕದಾಪಿ ಸ್ವಾತ್ಮಾನಂ ಉದ್ಧರ್ತುಮಿಚ್ಛಂತಿ ಭಗವನಾಯ್ಯಾ

ಮೋಹಿತಾಃ ॥ ಕಿಮನ್ಯೈಃ ಪಶುಸನ್ನಿಭೈಃ ॥ ಇತಿ ಟೀಕಾಚಾರ್ಯೈಃ ಉಪೇಕ್ಷಿತಾಃ” ಇತಿ ಅಲಮುಪಹಸನೀಯ ಪ್ರಕ್ರಿಯಾ ನಿರಾಕ್ರಿಯಾ ವಿಸ್ತರೇಣ ॥

“ಮತ್ಸ್ಯ ಕೂರ್ಮ ಕ್ರೋಡ ಸಿಂಹ ವಟುರಾಘವ ಭಾರ್ಗವಾಃ ॥ ಕೃಷ್ಣ ಬುದ್ಧೌ ಕಲ್ಕಿದತ್ತ ಹಯಶೀರ್ಷೈತರೇಯಕಾಃ ॥ ಪಾರಾಶರ್ಯಶ್ಚ ಕಪಿಲಃ ವೈಕುಂಠಃ ಋಷಭಃ ತಥಾ ॥ ಯಜ್ಞಃ ಧನ್ವಂತರಿಶ್ಚೈವ ಸ್ತ್ರೀರೂಪಃ ತಾಪಸೋ ಮನುಃ ॥ ನಾರಾಯಣಃ ಹರಿಃ ಕೃಷ್ಣಃ ಉಪೇಂದ್ರಃ ಸರ್ವ ಏವ ಚ । ಏವಮಾದ್ಯಾಃ ಹರೇಃ” ಸಾಕ್ಷಾತ್ ಪ್ರಾದುರ್ಭಾವಾಃ ಪ್ರಕೀರ್ತಿತಾಃ ॥ ಪೃಥ್ವಾದಿವದಾವೇಶಾವತಾರತ್ವಂ ನಿವಾರಯತಿ ॥ (ದೀಂ) ॥ ೨ ॥

## ಕನ್ನಡಾರ್ಥ



‘ಸೂರ್ಯಸಪ್ರಭ’=ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯುಳ್ಳವನು. ‘ವಾಸುದೇವಾದ್ಯಮಿತ’ ಎಂದು ಹೇಳುವುದರಲ್ಲಿ ಇರುವ ರಹಸ್ಯವಿದು. ‘ನಾರಾಯಣ’ ಎಂಬ ಪದವನ್ನು ಮೊದಲು ಪರಿಗ್ರಹಿಸಿರುತ್ತಾರೆ. ಇದರಿಂದ ‘ಶೂನ್ಯ’ನಾಮಕನು ನಾರಾಯಣನು. ಆತನಿಂದ ಪುರುಷರೂಪವು ಉದಯಿಸಿತು. ಅದರಿಂದ ವಾಸುದೇವ ಮುಂತಾದ ರೂಪಗಳು ಆವಿರ್ಭವಿಸಿದವು.

ಸ್ತ್ರೀ ಶೂದ್ರರಿಗೆ ಪಾಠಯೋಗ್ಯವಾಗಲು ವೇದಪ್ರತೀಕಗಳನ್ನು ಉಲ್ಲೇಖಿಸದೇ ಅವುಗಳ ಅರ್ಥಗಳನ್ನಷ್ಟೇ ಉಲ್ಲೇಖಿಸಲಾಗಿರುತ್ತದೆ.

“ಸತ್ತ್ವಾ ನಾರಾಯಣಂ ವಿಷ್ಣೋರಾವೇಶಂ ಚ ದಿವೌಕಸಾಂ” ಎಂಬುದಾಗಿ ತಾರತಮ್ಯರತ್ನಮಾಲೆಯ ವ್ಯಾಖ್ಯಾನದಲ್ಲಿ ಶ್ರೀ ವಿಠ್ಠಲಾಚಾರ್ಯರು ‘ದಿವೌಕಸ’ ಶಬ್ದವನ್ನು ವಿವರಿಸಿರುತ್ತಾರೆ. ಅದನ್ನು ಅನುಸರಿಸಿಯೇ ‘ನಿರ್ಜರರ ಆವೇಶ’ ಎಂಬಲ್ಲಿ ನಿರ್ಜರ ಶಬ್ದವನ್ನು ಉಪಯೋಗಿಸಿರುತ್ತಾರೆ. ಅಲ್ಲಿ ದಿವೌಕಸ ಶಬ್ದದ ಉತ್ಪತ್ತಿಯನ್ನು ಗರುಡ ಪುರಾಣದಲ್ಲಿ ಹೇಳಿರುತ್ತಾರೆ.

ಆದುದರಿಂದ ಈ ಸಂಧಿಯಲ್ಲಿ ಹೇಳಲಾಗಿರುವ ಆವೇಶ ಮುಂತಾದವುಗಳ ಬೃಹತ್ತಾರತಮ್ಯ ಮುಕ್ತಾಮಾಲೆಯು ನಿರ್ಮತ್ಸರ ವಿದ್ವಜ್ಜನರ ಕೊರಳಿಗೆ ಒಪ್ಪುವ ಭೂಷಣವಾಗಿರುತ್ತದೆ. ಹೀಗೆ ಈ ಲಘು ಉಪಾಯವಿದ್ದರೂ ಕೆಲವರು ಆಗ್ರಹದ ಮನಸ್ಸಿನಿಂದ ಇವನ್ನು ಪರಿಗ್ರಹಿಸುವುದಿಲ್ಲ. ಸಂಶಯಗ್ರಸ್ತರಾಗಿ ಉದ್ಧಾರವನ್ನು ಹೊಂದುವುದಿಲ್ಲ. ಇದಕ್ಕೆ ಭಗವಂತನ ಮೋಹಕವಾದ ಇಚ್ಛಾಶಕ್ತಿಯೇ ಮೂಲ. ಇಂಥ ಪಶುಸಮಾನರಿಂದೇನು ? ಎಂಬುದಾಗಿ ಟೀಕಾಕಾರರು ಹೇಳಿದಂತೆ ಅವರನ್ನು ಉದಾಸೀನತೆಯಿಂದ ನೋಡುವುದೇ ಉಚಿತ. ಆದುದರಿಂದ ಅಪಹಾಸ್ಯವಾದ ಅವರ ಪ್ರಕ್ರಿಯೆಯನ್ನು ನಿರಾಕರಿಸಿ ಪ್ರಬಂಧದ ವಿಸ್ತಾರ ಮಾಡುವ ಕಾರಣವಿಲ್ಲ.

ಮತ್ಸ್ಯ(ಮೀನ), ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ದಾಶರಥಿ ರಾಮ, ಕೃಷ್ಣ, ಬುದ್ಧ, ಕಲ್ಕಿ, ದತ್ತ, ಹಯಗ್ರೀವ ಮಹಿದಾಸ, ಬಾದರಾಯಣ, ಕಪಿಲ, ವೈಕುಂಠ, ಋಷಭ, ಯಜ್ಞ, ಧನ್ವಂತರಿ, ಮೋಹಿನೀ, ತಾಪಸಮನು, ನಾರಾಯಣ (ಋಷಿರೂಪ) ಹರಿ, ಕೃಷ್ಣ, ಉಪೇಂದ್ರ. ಈ ಮುಂತಾದ ರೂಪಗಳು ಸಾಕ್ಷಾದವತಾರ ರೂಪಗಳು. ಪೃಥು ಮುಂತಾದವುಗಳಂತೆ ಆವಿಷ್ಟ ರೂಪಗಳಲ್ಲ. ॥ ೨ ॥

**ಅವತರಣಿಕಾ:—** ಶ್ರೀ ಹರಿಗೆ ಸಮಾಸಮಳೆನಿಸಿದ ಶ್ರೀ ಲಕ್ಷ್ಮೀದೇವಿಯ ನಿತ್ಯಮುಕ್ತಳ ಮಹಿಮೆ ವರ್ಣಿಸುತ್ತಾರೆ.

**ಈ ನಳಿನಭವ ಜನನಿ ಲಕ್ಷ್ಮೀ ।**
**ಜ್ಞಾನ ಬಲ ಭಕ್ತ್ಯಾದಿ ಗುಣ ಸಂ ।**
**ಪೂರ್ಣಳೆನಿಪಳು ಸರ್ವಕಾಲದಿ ಹರಿಕೃಪಾಬಲದಿ ॥**
**ಹೀನಳೆನಿಪನಂತಗುಣದಿ ಪು ।**
**ರಾಣ ಪುರುಷಗೆ ಪ್ರಕೃತಿಗಿನ್ನು ಸ ।**
**ಮಾನರೆನಿಸುವರಿಲ್ಲ ಮುಕ್ತಾಮುಕ್ತಸುರರೊಳಗೆ ॥ ೩ ॥**

**ಪದ್ಯಾರ್ಥ:—** ಈ ನಳಿನಭವ=ಪದ್ಮ ಈಗಿನ ಬ್ರಹ್ಮಕಲ್ಪದ-ಪದ್ಮ

ಕಲ್ಪವಲ್ಲಿ, ಶ್ರೀ ಹರಿಯ ನಾಭಿಕಮಲವೇ ಶ್ರೀ ಲಕ್ಷ್ಮೀ ದೇವಿಯ ರೂಪ. ಇಂತಹ ಕಮಲರೂಪಳು ಬ್ರಹ್ಮದೇವರಿಗೆ ಜನನಿಯು, ತಾಯಿಯು, ಶ್ರೀ ರಮಾದೇವಿಯವರು, ಜ್ಞಾನ=ತಿಳುವಳಿಕೆ, ಬಲ=ಶಕ್ತಿ, ಭಕ್ತ್ಯಾದಿಗುಣ= ಭಾವೋಭಕ್ತಿ ಎಂಬುವಂತೆ-ಮುಂತಾದ ಗುಣಗಳಿಂದ, ಶ್ರೀಹರಿಕೃಪಾ ಬಲದಿ=ಶ್ರೀ ಹರಿಯ ಪ್ರಸಾದದಿಂದ, ಸರ್ವಕಾಲದಿ=ಎಲ್ಲ ಕಾಲದಲ್ಲಿ ಅಂದರೆ ಅನಾದ್ಯನಂತ ಕಾಲದಿಂದ ಶ್ರೀ ಹರಿಯೊಡನೆ ಅಧೀನಳಾಗಿದ್ದು, ಬ್ರಹ್ಮಾದಿಗಳ ಜ್ಞಾನ ಭಕ್ತ್ಯಾದಿಗಳಿಗಿಂತಲೂ ಹೆಚ್ಚಿನ ಜ್ಞಾನ-ಬಲಭಕ್ತಿ ಯುಳ್ಳಾಕೆ.ಅಥವಾ,ಭಗವಂತನಲ್ಲಿ ಅತಿಶಯವಾದ ಮಾಹಾತ್ಮ್ಯ, ಜ್ಞಾನ, ಭಗವಂತನ ಅನುಗ್ರಹದಿಂದ"ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ಇತ್ಯಾದಿ ಬಲ ಉಳ್ಳಾಕೆ" ಶ್ರೀಹರಿಯ ಮಹಿಮಾ ಬಲ್ಲಕಾರಣ ಪೂರ್ಣ ಭಕ್ತಿಯುಳ್ಳಾಕೆ ಎಂದು ಭಾವ. ಹೀನಳೆನಿಪ ಅನಂತಗುಣದಿ ಪುರಾಣ ಪುರುಷಗೆ=ಸನಾತನನಾದ- ಪುರುಷನಾಮಕ ಹರಿಗೆ ಅನಂತಾನಂತ ಬಹು ಕೋಟಿ ಗುಣಗಳಿಂದ,ಹೀನಳು ಎನಿಪಳು=ಕಡಿಮೆಯೆನಿಸುತ್ತಾಳೆ.ಪ್ರಕೃತಿಗೆ ಇನ್ನ=ಇಂತಹ ಪುರಾಣಪುರುಷನ ಭಾರ್ಯಳೇ ಚೇತನ ಪ್ರಕೃತಿ ನಾಮ ಕಳು, ಅಥವಾ, ಅಚೇತನ ಪ್ರಕೃತಿಗೆ ಅಭಿಮಾನಿ ನಿಯಾಮಕಳು. ಈ ಪ್ರಕೃತಿ ಇಂದಿರೆಗೆ, ಮುಕ್ತಾ ಮುಕ್ತ ಸುರರೊಳಗೆ, ಮುಕ್ತ ಅನಂತಕಲ್ಪ ದಲ್ಲಿ ಮುಕ್ತರಾದ ದೇವತೆಗಳಲ್ಲಿ. ಅಮುಕ್ತರಾದ ದೇವತೆಗಳಲ್ಲಿ ಶ್ರೀ ಲಕ್ಷ್ಮೀದೇವಿಯರಿಗೆ ಯಾರು ಸಮಾನರೆಂದುಕರೆಸುವರಿಲ್ಲ.

**ಭಾವಸೂಚನ:**— ಈ ನಳಿನೇತಿ ॥ ಉಕ್ತಂ ಚ ಭಗವತ್ಪಾದೈಃ । ಪ್ರಕೃತಿಸ್ತೇನ ಚಾವಿಷ್ಟಾ ತದ್ವಶಾ ನ ಹರಿಃ ಸ್ವಯಂ ॥ ತತೋನಾ ತದ ಧೀನಾ ಚ ಬಲಜ್ಞಪ್ತಿಸುಖಾದಿಭಿಃ ॥ ಗುಣೈಃ ಸರ್ವೈಸ್ತಥಾಪ್ಯಸ್ಯ ಪ್ರಸಾದ ದ್ದೋಷವರ್ಜಿತಾ ॥ ಸರ್ವದಾ ಸುಖ ರೂಪಾ ಚ ಸರ್ವದಾ ಜ್ಞಾನರೂಪಿ ಣೀತಿ ॥ ೩ ॥

**ವಿಶೇಷ ಸೂಚನೆ:**— ಪ್ರಕಾಶ ಸಂಹಿತೆಯಲ್ಲಿ ಹೇಳಿರು ಪ್ರಮಾಣ-ದೇಶತಃ ಕಾಲತೋ ವ್ಯಾಪ್ತಾ ಚಿದ್ರೂಪಾ ಶ್ರೀ ಹರೇ ಸದಾ ॥ ಅನಂತ ಗುಣತೋ ನೀಚಾ ಇತಿ ಪ್ರಕಾಶ ಸಂಹಿತಾಯಾಮ್

ಪುರುಷಸ್ಯ ಭಾರ್ಯಾ ಪ್ರಕೃತಿಃ ಪ್ರಕೃತೇಶ್ಚಾಭಿಮಾನಿನೀತಿ ಗಾರುಡೇ॥ ೩ ॥

**ವ್ಯಾಸದಾಸ ಸಿದ್ಧಾಂತಕೌಮುದೀ**

ರಮಾವತಾರಾನುವಾದಾಯ ತಾರತಮ್ಯಮಪಿ ಕೀರ್ತಯತಿ— "ಅನಂತ" ಇತಿ" "ಅನಂತಾನಂತ ಗುಣತಃ ಇಂದಿರಾಯಾಃ ಪರಃ ಹರಿಃ" ಇತಿ ತತ್ವರತ್ನಮಾಲಾಯಾಮ್॥ ಪ್ರಕೃತಿಪದೇನ "ಪುರುಷಸ್ಯ ಭಾರ್ಯಾ ಪ್ರಕೃತಿಃ ॥" "ಪ್ರಕೃತೇಶ್ಚಾಭಿಮಾನಿನೀ" ಇತ್ಯುಕ್ತಾದ್ಯರೂಪಾ (ಇತ್ಯಾದ್ಯುಕ್ತಾ) ಭಾರ್ಯಾ ಉಚ್ಯತೇ ॥ ೩ ॥

**ಕನ್ನಡಾರ್ಥ**

ರಮಾದೇವಿಯ ಅವತಾರಗಳನ್ನು ಅನುವಾದಿಸಲು ಹರಿಯಿಂದ ತಾರತಮ್ಯವನ್ನೂ ತಿಳಿಸುತ್ತಾರೆ. "ಅನಂತ" ಎಂಬ ಶ್ಲೋಕದಿಂದ. ಈ ಶ್ಲೋಕದ ಅರ್ಥವನ್ನೇ "ಈ ನಳಿನಭವಜನನಿ" ಎಂಬ ಪದ್ಯದಿಂದ. ತತ್ವ ರತ್ನಮಾಲೆಯಲ್ಲಿ - "ಅನಂತಾನಂತ ಗುಣಗಳಿಂದ ಲಕ್ಷ್ಮೀದೇವಿಗಿಂತ ಹರಿಯು ಉತ್ತಮನು; ಎಂದು ಹೇಳಲಾಗಿರುತ್ತದೆ. ಈ ಪದ್ಯದಲ್ಲಿ ಇರುವ "ಪ್ರಕೃತಿ" ಶಬ್ದಕ್ಕೆ ಪುರುಷರೂಪೀ ಹರಿಯ ಪತ್ನಿಯೂ ಜಡಪ್ರಕೃತಿಗೆ ಅಭಿಮಾನಿಯೂ ಆದ "ರಮಾದೇವಿ" ಎಂದು ಅರ್ಥ. ॥ ೩ ॥

**ಅವತರಣಿಕಾ:**— ಹಿಂದಿನ ಪದ್ಯದಲ್ಲಿ ಶ್ರೀ ರಮಾದೇವಿಯ ಮಾಹಾತ್ಮ್ಯ ಹೇಳಿ ಈಗ ಶ್ರೀ ಲಕ್ಷ್ಮೀದೇವಿಯವರ ಅವತಾರ ರೂಪಗಳನ್ನು ಹೇಳುತ್ತಾರೆ.

**ಗುಣಗಳತ್ರಯಮಾನಿ ಶ್ರೀ ಕಂ ।**
**ಭಿಣಿ ಮಹಾ ದುರ್ಗಾಂಭ್ರಣೀ ರು ।**
**ಗ್ಮಿಣಿಯು (ಸು) ಸತ್ಯಾ ಶಾಂತಿ ಕೃತಿ ಜಯೆ ಮಾಯೆ**
**ಮಹಲಕುಮಿ ॥**
**ಜನಕಜಾಕಮಲಾಲಯಾದ ।**
**ಕ್ಷಿಣೆಸುಪದ್ಮಾ ತ್ರಿಲೋಕೇಶ್ವರಿ ।**
**ಅಣು ಮಹತ್ತಿನೊಳಿದ್ದು ಉಪಮಾರಹಿತಳೆನಿಸುವಳು ॥ ೪ ॥**

**ಪದ್ಯಾರ್ಥ:**— ಗುಣಗಳ ತ್ರಯಮಾನಿ=ಸತ್ವ ರಜೋಗುಣಗಳ ಮೂರಕ್ಕೆ (ಜಡ ಪ್ರಕೃತಿ.) ಶ್ರೀ ಲಕ್ಷ್ಮೀದೇವಿಯರು ಅಭಿಮಾನಿಗಳು, ಶ್ರೀ = ಶ್ರೀ ದೇವಿ, ಕುಂಭಿಣಿ = ಭೂದೇವಿ, ದುರ್ಗಾ = ದುರ್ಗಾದೇವಿ, ಶ್ರೀ = ಭೂ-ದುರ್ಗಾ ಮೂರು ರೂಪಗಳಲ್ಲದೆ, ಅಂಭೃಣಿ = ತನ್ನಾಮಿಕ ಅವಾಂತರದುರ್ಗಾ – ಸಕಲವೇದಾಭಿಮಾನಿನೀ ರುಗ್ಮಿಣಿಯು=ಭೀಷ್ಮಕ ರಾಜನ ಮಗಳಾಗಿ ಅವತರಿಸಿ ಶ್ರೀಕೃಷ್ಣಗೆ ಪತ್ನಿಯಾದ ರಮೆಯ ರೂಪವೇ ರುಗ್ಮಿಣಿಯು, ಸತ್ಯಾ=ಸತ್ಯಭಾಮಾದೇವಿ, ಸತ್ರಾಜಿತರಾಯನಲ್ಲಿ ಅವತರಿಸಿ ಶ್ರೀ ಕೃಷ್ಣದೇವರಿಗೆ ನಿಯತ ಪತ್ನಿಯಾದ ರಮೆಯ ರೂಪವು. ಶಾಂತಿ= ಅನಿರುದ್ಧನ ಪತ್ನಿ, ಕೃತಿ=ಪ್ರದ್ಯುಮ್ನ ಪತ್ನಿ, ಜಯ=ಸಂಕರುಷಣ ಪತ್ನಿ, ಮಾಯಾ=ವಾಸುದೇವ ಪತ್ನಿ, ಮಹಲಕುಮಿ=ಮೂಲರೂಪಿ ನಾರಾಯಣ ಪತ್ನಿ. ಜನಕಜಾ=ಜನಕರಾಯನಲ್ಲಿ ಅವತರಿಸಿದ ಸೀತಾದೇವಿ ಶ್ರೀರಾಮ ಪತ್ನಿ, ಕಮಲಾಲಯಾ= ಶ್ರೀ ಮಧುಸೂಧನ ಪತ್ನಿ, ದಕ್ಷಿಣಾ =ಯಜ್ಞ ನಾಮಕ ಪರಮಾತ್ಮನ ಪತ್ನಿ, ಪದ್ಮಾ= ಗೋವಿಂದನ ಪತ್ನಿ(೨೪ಮೂರ್ತಿ ಯಲ್ಲಿಪ್ಪ, ಮಧುಸೂದನ ಗೋವಿಂದನ ರೂಪ), ಪದ್ಮಾ =ಕನ್ಯೇತಿ ಪಾಠಃ ( ವ್ಯಾ. ದಾ. ಸಿ. ಕೌ. ) ತ್ರಿಲೋಕೇಶ್ವರಿ = ತ್ರಿಲೋಕೇಶ ಭಾರ್ಯಾ "ತ್ರಯಾಣಾಂ ಲೋಕನಾಮಧಿಪತಿಃ ತ್ರಿಲೋಕೇಶಃ" (ವಿದ್ಯಾಧಿ ರಾಜೀಯ) ಅಣು =ಬಹು ಸೂಕ್ಷ್ಮವಾದ ಜೀವನಲ್ಲಿ, ಮತ್ತು ಪ್ರಕೃತಿ ರೂಪವಾದ ಸೂಕ್ಷ್ಮ ಅಣು, ಮಹತ್ತಿನೊಳು, ಬ್ರಹ್ಮಾಂಡನದಾವರಣಬಹಿಃ ಅವ್ಯಾಕೃತಾಕಾಶ ಮೀರಿದ ಮಹತ್ತಿನಲ್ಲಿ ಮಹದ್ರೂಪದಿಂದ ಶ್ರೀ ಹರಿ ಯೊಡನೆ ಹರಿಯ ಅಧೀನಳಾಗಿ ಇದ್ದು, ಉಪಮಾರಹಿತಳೆನಿಸುವಳು = ಅಸಾಧಾರಣಳು ಶ್ರೀಹರಿಗೆ ದೇಶಕಾಲದಿಂದ ಸಮಳೆನಿಸುವಳ್ಳಿ, ಬ್ರಹ್ಮಾದಿ ಚೇತನರೂ ಯಾರೂ, ಶ್ರೀಲಕ್ಷ್ಮಿಗೆ ಸಮಾನರಿಲ್ಲ ಸದಾ ಶ್ರೀ ರಮೆಯ ಅಂಶಾಂಶಿಗಳಿಗೆ ಕಿಂಚಿತ್ತಾದರೂ ಭೇದವಿಲ್ಲ. ವ್ಯಾ. ದಾ. ಸಿ. ಕೌ. ಕಾರರು ವಿಸ್ತಾರವಾಗಿ ಬರೆದಿರುವರು.

**ಭಾವಸೂಚನ:**— ಕುಂಭಿಣೀ ವರಾಹ ಭಾರ್ಯಾ ಭೂದೇವಿ ಅಂತರ್ಗತ॥ ಅಂಭೃಣೀ=ತನ್ನಾಮಿಕಾ ಅವಾಂತರದುರ್ಗಾ ವ್ಯಾವೃತ್ತ್ಯರ್ಥಂ

ಮಹೇತಿ ॥ "ಶ್ರೀ ಭೂದುರ್ಗಾಂಭೃಣೀ ಹ್ರೀ ಚ ಮಹಾಲಕ್ಷ್ಮೀಶ್ಚ ದಕ್ಷಿಣಾ ॥ ಸೀತಾ ಜಯಂತೀ ಸತ್ಯಾ ಚ ರುಗ್ಮಿಣೀ ಇತ್ಯಾದಿ ಭೇದಿತಾ ಪ್ರಕೃತಿರಿತಿ ವಚನಾತ್" ಆದಿಪದ ಗ್ರಹೀತರು ಮಾಯಾದಿಗಳು ॥೪॥

**ವಿಶೇಷಸೂಚನೆ:—** ಬೃಹದ್ಭಾಷ್ಯ ಸವಿಸ್ತರ ಪ್ರಮಾಣ. "ಶ್ರೀ ಭೂದುರ್ಗಾಽಂಭೃಣೀ ಹ್ರೀಶ್ಚ ಮಹಾಲಕ್ಷ್ಮೀಶ್ಚ ದಕ್ಷಿಣಾ । ಸೀತಾ ಜಯಂತೀ ಸತ್ಯಾ ಚ ರುಕ್ಮಿಣೀತ್ಯಾದಿಭೇದಿತಾ॥ ಪ್ರಕೃತಿಸ್ತೇನ ಚಾವಿಷ್ಟಾ ತದ್ವಶಾ ನ ಹರಿಃ ಸ್ವಯಂ ॥ ತತೋಽನಂತಾಂಶ ಹೀನಾ ಚ ಬಲಜ್ಞಪ್ತಿ ಸುಖಾದಿಭಿಃ ॥ ಗುಣೈಃ ಸರ್ವೈಸ್ತಥಾಽಪ್ಯಸ್ಯ ಪ್ರಸಾದಾದ್ದೋಷವರ್ಜಿತಾ । ಸರ್ವದಾ ಸುಖರೂಪಾ ಚ ಸರ್ವದಾ ಜ್ಞಾನರೂಪಿಣೀ॥ ೩ ॥

**ಶ್ರೀ ಜಗನ್ನಾಥದಾಸಾರ್ಯರ ಪದ:—** ಗುಣಗಳಭಿಮಾನಿ ಶ್ರೀ ಭೂದುರ್ಗ ದಕ್ಷಿಣಾಂ। ಭೃಣಿ ಮಹಾಲಕ್ಷ್ಮಿ ಶ್ರೀ ವಿಷ್ಣುಪತ್ನೀ ॥ ಜನನಿ ಮಾಯಾ ಜಯಕೃತಿ ಶಾಂತಿ ಶುದ್ಧ ರುಗ್ಮಿಣಿ ಸತ್ಯ ಸೀತಾದ್ಯಮಿತರೂಪ ಗಳಿಗಾನಮಿಪೆ ॥ ೪ ॥ ಹೀನಳೆನಿಸುವಳನಂತಾಂಶದಲಿ ಸುಖ ಬಲ ಜ್ಞಾನಾದಿ ಗುಣದಿ ಮಹಲಕ್ಷ್ಮಿ ಹರಿಗೆ ॥ ಆನಂದ ವಿಜ್ಞಾನ ಮಯನ ವಕ್ಷ ಸ್ಥಳವೆ ಸ್ಥಾನವಾಗಿಹುದು. ಇಂದಿರೆಗೆ ಆವಾಗ ॥ ೫ ॥ ಬೃಹತ್ತಾರತಮ್ಯ ಪದ ॥

## ಶ್ರೀ ವ್ಯಾಸದಾಸಸಿದ್ಧಾಂತಕೌಮುದೀ

"ಗುಣ" ಇತಿ" "ಶ್ರೀಃ ಸತ್ವಂ ಭೂ ರಜೋ ದುರ್ಗಾ ತಮ ಇತ್ಯಾದಿಕಾ ಚ ಸಾ" ॥ ಶ್ರೀಃ ಸತ್ವವತ್ ॥ ಸದ್ಗುಣಪ್ರಭಾ" ॥ "ರಜೋಭಿಮಾನಿ ಭೂದೇವೀ ಭಾರ್ಯಾ ವೈ ಸೂಕರಸ್ಯ" ಇತ್ಯಾವೇಶಃ ॥ ಸರ್ವವೇದಾಭಿಮಾನೀ ಚ ಅಂಭೃಣೀ ಪರಿಕೀರ್ತಿತಾ ॥ ರುಕ್ಮಿಣೀಸತ್ಯಭಾಮೇ ಚ ಭಾರ್ಯೇ ಕೃಷ್ಣಸ್ಯ ಇತಿ ॥ ವಾಸುದೇವಸ್ಯ ಭಾರ್ಯಾ ಮಾಯಾ ॥ ಸಂಕರ್ಷಣಸ್ಯ ಭಾರ್ಯಾ ಜಯಾ ॥ ಅನಿರುದ್ಧಸ್ಯ ಭಾರ್ಯಾ ಶಾಂತಿ ನಾಮ್ನೀ ॥ ಪ್ರದ್ಯುಮ್ನಸ್ಯ ಭಾರ್ಯಾ ಕೃತಿಃ ॥ ನಾರಾಯಣಸ್ಯ ಭಾರ್ಯಾ ತು ಲಕ್ಷ್ಮೀಃ ವರುಣಜಾ ॥ ಕಮಲಾಲಯಾ ಪದ್ಮಾವತೀತ್ಯಾವೇಶಃ ॥

ಯಜ್ಞಾಖ್ಯಸ್ಯ ಹರೇಃ ಭಾರ್ಯಾ ದಕ್ಷಿಣಾ॥ಪದ್ಮೇತ್ಯತ್ರ ಕನ್ಯೇತಿ ಪಾಠಃ॥ "ಕೃಷ್ಣಾವತಾರೇ ಕನ್ಯೈವ ನಂದಪುತ್ರ್ಯಸುಜಾ ಹರೇಃ" ॥ ಇತಿ ಮೂಲೇ ದುರ್ಗಾಯಾಃ ಪೃಥಗವತಾರತ್ವೋಕ್ತೇಃ ॥ ಲಜ್ಜಾಭಿಮಾನಿನೀ ಹ್ರೀರಪಿ ಗ್ರಾಹ್ಯಾ ॥ "ಶ್ರೀ ಭೂ ದುರ್ಗಾಂಭೃಣೀ-ಹ್ರೀಶ್ಚ ಮಹಾಲಕ್ಷ್ಮೀಶ್ಚ ದಕ್ಷಿಣಾ ॥ ಸೀತಾ ಜಯಂತೀ ಸತ್ಯಾ ಚ ರುಕ್ಮಿಣೀತ್ಯಾದಿ ಭೇದಿತಾ ॥ ಪ್ರಕೃತಿಃ ತೇನ ಚಾವಿಷ್ಟಾ ತದ್ವಶಾ ನ ಹರಿಃ ಸ್ವಯಮ್ ॥ ತತೋಽನಂತಾಂಶ ಹೀನಾ ಚ ಬಲಜ್ಞಪ್ತಿಸುಖಾದಿಭಿಃ" ॥ ಇತಿ ॥

ಆದಿಪದೇನ, ವೇದಾ ದೇವತಾ ಧಾತ್ರೀ ಮಹಾಲಕ್ಷ್ಮೀಃ ಸುಖಾಲಯಾ ಭಾರ್ಗವೀ ಸೀತಾ ರುಕ್ಮಿಣೀ ಸತ್ಯಾ ರೇವತೀ ಪ್ರಭಾಪ್ರಮುತ್ಸ್ಯಾದಿ ರಮಣೀನಾಮ್ ॥ "ಶ್ರೀಃ ಲಕ್ಷ್ಮೀಃ ಕಮಲಾ ಪದ್ಮಾ ಪದ್ಮಿನೀ ಕಮಲಾಲಯಾ ॥ ರಮಾ ವೃಷಾಕಪೀ ಧನ್ಯಾ ಬುದ್ಧಿರ್ಯಜ್ಞಾ ಚ ಇಂದಿರಾ ॥ ಹಿರಣ್ಯಾ ಹರಿಣೀ ಸತ್ಯಾ ನಿತ್ಯಾ ಚಾನಂದನಾಮಿಕಾ ॥ ಅಪ್ರಜ್ಞಾ, ಚ ಸುಖಾ ಚೈವ ಸುಗಂಧಾ ಸುಂದರೀ ತಥಾ ॥ ವಿದ್ಯಾಸುಶೀಲಾ ಸುಲಕ್ಷಣಾ" ಇತಿ ತತ್ವಸುಧಾಸಿಧ್ಯುಕ್ತ ಕೇಶವಾದಿ ಚತುರ್ವಿಂಶತಿ ಹರಿಲಲನಾನಾಂ ಗ್ರಹಣಮ್ ॥ ಏತದ್ರೀತ್ಯಾ ಪದ್ಮೇತ್ಯೇವ ವಾ ಪಾಠಃ ॥ ಗೋವಿಂದ ಭಾರ್ಯಾ ॥ ಮಧುಸೂದನ ಭಾರ್ಯಾ ಕಮಲಾಲಯಾ ಗ್ರಹಣೇನ ಶಿಷ್ಟ ದ್ವಾವಿಂಶತಿಂ ಅಭಿಪ್ರೈತಿ ಮೂಲಕಾರಃ ॥"ತಚ್ಚ ಮಾಘೂಲಶಾಖಾಯಾಂ" ಇತಿ ಮೂಲಸುಧಾಯಾಂ ಬಹುಶಾಖಾವಿದಾಮೇವ ಅತ್ರ ಅಧಿಕಾರಃ ಇತ್ಯುಕ್ತಮ್ ॥ ತಸ್ಮಾತ್ ಬಹು ಗ್ರಂಥ ಸಂದರ್ಭ ವಿದಾಮೇವ ಅತ್ರ ಸಮ್ಯಕ್ ಪ್ರವೇಶಃ ಇತಿ ದ್ಯೋತನಾನುದ್ವಯಂ ಜಗ್ರಾಹ ॥ ೨ ॥ (೪)

ನನು ಪ್ರಥಮ ಸೃಷ್ಟ ರಾಮ ಸೀತಾದ್ಯಾವಿರ್ಭಾವೇ ತ್ರೇತಾದಿ ಕಾಲ ನಿಯಮಪ್ರವಾದಃ ಕಥಂ? ಇತಿ ತನ್ನ ॥ ಏತಾನಿ ಮೂಲೇ ಕೃತ್ಯ ಆವಿರ್ಭೂತ ರಾಮ ಜಾನಕ್ಯಾದಿ ರೂಪಾಂತರವಿಷಯಃ ॥ ಇತಿ ಉಕ್ತಮಸ್ಮಾತ್ ಕೃತಲಯ ಚಿಂತನ ಪ್ರಕರಣೇ ॥ ೨ ॥ ೪ ॥

## ಕನ್ನಡಾರ್ಥ

"ಗುಣತ್ರಯಗಳಭಿಮಾನಿ"-ಎಂಬಲ್ಲಿ ಸತ್ವಗುಣಕ್ಕೆ ಶ್ರೀ ಲಕ್ಷ್ಮೀ

ರಜೋಗುಣಕ್ಕೆ ಭೂದೇವಿಯು ಅಭಿಮಾನಿ.
ದೇವಿಯು ಅಭಿಮಾನಿ.
ತಮೋಗುಣಕ್ಕೆ ದುರ್ಗಾದೇವಿಯು ಅಭಿಮಾನಿ. || ಸತ್ವಗುಣದ ಅಭಿ
ಮಾನಿಯಾದ ಶ್ರೀದೇವಿಯು ಸದ್ಗುಣ ಪ್ರಭಾ ಮುಂತಾದ ಗುಣವುಳ್ಳ
ವಳು; ಹಾಗೂ ಅವುಗಳನ್ನು ಅಭಿವ್ಯಕ್ತಿಸುವಳು. ರಜೋಗುಣಾಭಿಮಾನಿ-
ಭೂದೇವಿಯು ವರಾಹಪತ್ನಿಯೆನಿಸಿದ್ದು-ಲಕ್ಷ್ಮೀದೇವಿಯ ಆವೇಶಯುಕ್ತ
ವಾಗಿರುವಳು. ಸರ್ವವೇದಾಭಿಮಾನಿಯಾದ ರಮಾರೂಪವು ಅಂಭ್ರಣೀ"
ಎನಿಸುತ್ತದೆ. ರುಕ್ಮಿಣೀ ಸತ್ಯಭಾಮೆಯರು ಶ್ರೀಕೃಷ್ಣನ ಹೆಂಡತಿಯರು.
ವಾಸುದೇವನ ಹೆಂಡತಿ "ಮಾಯಾ." ಸಂಕರ್ಷಣನ ಪತ್ನಿ "ಜಯಾ."
ಅನಿರುದ್ಧನ ಹೆಂಡತಿ "ಶಾಂತಾ." ಪ್ರದ್ಯುಮ್ನನ ಹೆಂಡತಿ "ಕೃತಿ."
ನಾರಾಯಣನ ಹೆಂಡತಿ "ಲಕ್ಷ್ಮೀ."-ವರುಣಕುವರಿ. ಕಮಲಾಲಯಾ-
ಪದ್ಮಾವತಿ; ಅಲ್ಲಿ ಆವೇಶ. ಯಜ್ಞನಾಯಕ ಹರಿಯ ಪತ್ನಿ "ದಕ್ಷಿಣಾ."
"ಪದ್ಮಾ" ಎಂಬುದರ ಬದಲು "ಕನ್ಯಾ" ಎಂದೂ ಪಾಠ ಭೇದವುಂಟು.
"ಕೃಷ್ಣಾವತಾರ ಕಾಲದಲ್ಲಿ ಕನ್ಯಾನಾಮಕ ಲಕ್ಷ್ಮೀಯೇ ನಂದನ ಪುತ್ರಿ.
ಶ್ರೀ ಕೃಷ್ಣನ ತಂಗಿಯಾದವಳು" ಎಂದು ದುರ್ಗಾದೇವಿಗೆ ಪ್ರತ್ಯೇಕವಾದ
ಅವತಾರವಿದೆಯೆಂದು ಹೇಳಲಾಗಿರುತ್ತದೆ. ಲಜ್ಜೆಗೆ ಅಭಿಮಾನಿ ರೂಪವು
"ಹ್ರೀ" ಎಂಬುದು. ಶ್ರೀ-ಭೂ-ದುರ್ಗಾ-ಅಂಭ್ರಣೀ-ಹ್ರೀ-ಮಹಾಲಕ್ಷ್ಮೀ-
ದಕ್ಷಿಣಾ. ಸೀತಾ - ಜಯಂತೀ - ಸತ್ಯಭಾಮಾ - ರುಕ್ಮಿಣೀ ಎಂದು
ಮುಂತಾಗಿ ರಮಾದೇವಿಯರ ರೂಪಗಳು. ಅವಳೇ ಪುರುಷ ಪತ್ನಿಯಾದ
ಪ್ರಕೃತಿಯೆನಿಸುವಳು. ಅಲ್ಲಿ ಶ್ರೀ ಹರಿಯು ಆವಿಷ್ಟನಾಗಿದ್ದಾನೆ.
ಪ್ರಕೃತಿಯು ಹರಿಯ ಅಧೀನಳು. ಹರಿಯು ಪರಾಧೀನನಲ್ಲ; ಸ್ವತಂತ್ರನು.
ಬಲ ಜ್ಞಾನ ಸುಖ ಮುಂತಾದುವುಗಳಲ್ಲಿ ಅನಂತಾಂಶಗಳಿಂದ ಹರಿಗಿಂತ
ಲಕ್ಷ್ಮೀಯು ಕಡಮೆಯಾದವಳು || ೧ ||

"ಆದಿ" ಪದದಿಂದ-ವೇದಾ, ದೇವತಾ, ಧಾತ್ರೀ, ಮಹಾಲಕ್ಷ್ಮೀಃ,
ಸುಖಾಲಯಾ, ಭಾರ್ಗವೀ, ಸೀತಾ, ರುಕ್ಮಿಣೀ-ಸತ್ಯಭಾಮಾ, ರೇವತೀ-
ಪ್ರಭಾ ಮುಂತಾದ ಮತ್ಸ್ಯಾದಿಪತ್ನಿ ರೂಪಗಳನ್ನು ಪರಿಗ್ರಹಿಸಬೇಕು.
"ಶ್ರೀಃ, ಲಕ್ಷ್ಮೀಃ, ಕಮಲಾ, ಪದ್ಮಾ-ಪದ್ಮಿನೀ-ಕಮಲಾಲಯಾ-ರಮಾ

ವೃಷಾಕಪಿ-ಧನ್ಯಾ-ಬುದ್ಧಿ, ಯಜ್ಞಾ, ಇಂದಿರಾ-ಹಿರಣ್ಯಾ ಹರಿಣೀ-ಸತ್ಯಾ, ನಿತ್ಯಾ, ಆನಂದಾ, ಆಪ್ರಜ್ಞಾ, ಸುಖಾ, ಸುಗಂಧಾ, ಸುಂದರೀ-ಸಿದ್ಧಾ, ಸುಶೀಲಾ, ಸುಲಕ್ಷಣಾ" ಎಂಬುದಾಗಿ ಕೇಶವಾದಿ ಇಪ್ಪತ್ತನಾಲ್ಕು ರೂಪಗಳ ಪತ್ನೀರೂಪಗಳನ್ನು "ತತ್ವಸುಧಾನಿಧಿ" ಯೆಂಬ ಗ್ರಂಥದಲ್ಲಿ ಹೇಳಿರುತ್ತಾರೆ. ಅವುಗಳನ್ನು ಇಲ್ಲಿ ಪರಿಗ್ರಹಿಸಬೇಕು. ಈ ರೀತಿಯಲ್ಲಿ "ಪದ್ಮಾ" ಎಂಬುದಾಗಿಯೇ ಮೂಲಪಾಠವಿರಬೇಕು. ಗೋವಿಂದಪತ್ನಿ ಹಾಗೂ ಮಧುಸೂಧನಪತ್ನಿ (ಪದ್ಮಾ, ಕಮಲಾಲಯಾ) ಇವರ ನಾಮಗ್ರಹಣವಿದ್ದುದರಿಂದ ಉಳಿದ ಇಪ್ಪತ್ತೆರಡು ರೂಪಗಳನ್ನು ಸೂಚಿಸಿರುತ್ತಾರೆ. ಮಾಘೂಲ ಶಾಖೆಯಲ್ಲಿ ಎಂಟು ರೂಪಗಳು ಹೇಳಲಾಗಿದೆ ; ಎಂದು ಮೂಲ ಸುಧಾ ಗ್ರಂಥದಲ್ಲಿ "ಬಹು ಶಾಖಾ ಜ್ಞಾನಿಗಳೇ ಅನುವ್ಯಾಖ್ಯಾನ-ಬ್ರಹ್ಮ ಸೂತ್ರಾರ್ಥಗಳಲ್ಲಿ ನಿಜವಾದ ಅಧಿಕಾರಿಗಳು" ಎಂದು ಜಯತೀರ್ಥರು ಹೇಳಿರುತ್ತಾರೆ. ಅದರಂತೆ ಬಹುಗ್ರಂಥವೇತ್ತರೇ ಇಲ್ಲಿ ಅಧಿಕಾರಿಗಳು ಎಂದು ತಿಳಿಸಲು, ಎರಡೇ ರೂಪಗಳನ್ನು ಹೇಳಿರುತ್ತಾರೆ. ಪ್ರಕೃತಿನಾಮಕ ಲಕ್ಷ್ಮಿಗೆ ಪ್ರಥಮ ಸೃಷ್ಟಿಯಲ್ಲಿ ಈ ರೂಪಪ್ರಾದುರ್ಭಾವವಾದವೆಂದು ಹೇಳಿದಾರೆ. ತ್ರೇತಾ ಮುಂತಾದ ಕಾಲ ನಿಯಮಗಳನ್ನು ಹೇಳುವುದು ವಿರುದ್ಧವಾಗುತ್ತದೆ. ಆದುದರಿಂದ ಮೂಲ ರೂಪಗಳಲ್ಲಿ ಏಕೀಕೃತವಾದುದರಿಂದ ಹಾಗೆ ಹೇಳುವೆವು ಎಂದು ನಾವು ಮಾಡಿರುವ ಲಯಚಿಂತನ ಪ್ರಕರಣದಲ್ಲಿ ಹೇಳಿರುತ್ತೇವೆ ‖ ೨ ‖ ೪ ‖

**ಅವತರಣಿಕಾ:—** ಈ ಪದ್ಯದಿಂದ - ಬ್ರಹ್ಮದೇವರು, ವಾಯುದೇವರು, ಶ್ರೀ ರಮಾದೇವಿಗೆ ಸಜಾತೀಯ ಒಂದು ಕೋಟಿ ಗುಣದಿಂದ ಕಡಿಮೆ, ಗರುಡ ಶೇಷಾದಿಗಳ ಲಕ್ಷ್ಯವಿಲ್ಲದೆ, ಸರ್ವ ಜೀವರಲ್ಲಿ ವ್ಯಾಪಾರ ಮಾಡುತ್ತಾರೆಂದು ಈರ್ವರ ಮಹಿಮಾ ಹೇಳುತ್ತಾರೆ.

**ಘೋಟಕಾಸ್ಯನ ಮಡದಿ ಗಿಂದಲಿ ।**
**ಹಾಟಕೋದರ ಪವನರೀರ್ವರು ।**
**ಕೋಟಿ ಗುಣದಿಂದಧಮರೆನಿಪರು ಆವ ಕಾಲದಲಿ ‖**

**ಖೇಟಪತಿ ಶೇಷಾಸುರೇಂದ್ರರ ।**
**ಪಾಟಿ ಮಾಡದೆ ಶ್ರೀಶನ ಕೃಪಾ ।**
**ನೋಟದಿಂದಿಲಿ ಸರ್ವರೊಳು ವ್ಯಾಪಾರ ಮಾಡುವರು ॥ ೩ ॥**

**ಪದ್ಯಾರ್ಥ:**— ಘೋಟಕ ಆಸ್ಯ=ಕುದುರೆ ಮುಖವುಳ್ಳ, ಹಯವದನನು, ಜ್ಞಾನ ರೂಪನು, ಈ ಜ್ಞಾನರೂಪಿ ಹಯಗ್ರೀವದೇವಮಡದಿ= ಹೆಂಡತಿ. ಶ್ರೀ ಲಕ್ಷ್ಮೀದೇವಿಯರಿಗಿಂತಲೂ, ಹಾಟಕೋದರ = ಹಿರಣ್ಯಗರ್ಭ, ಬಂಗಾರದೊಡಲ ಬ್ರಹ್ಮದೇವರು, ಪವನ=ವಾಯುದೇವರು. ಪವತ ಇತಿ ಪವನಃ ಲೋಕೈಃ ವನನೀಯತ್ವಾತ್ಪವನಃ (ವಿದ್ಯಾಥಿ). ಮುಖ್ಯವಾಗಿ ದೇವರಿಗೆ ಪವನ, ಶಬ್ದ, ಅಮುಖ್ಯ ವೃತ್ತ್ಯಾ ವಾಯುದೇವರಲ್ಲಿ ಇದೆ. ಈರ್ವರು, ಇಬ್ಬರು ಬ್ರಹ್ಮವಾಯುಗಳು, ಕೋಟಿ ಗುಣದಿಂದಧಮರೆಸಿಪರು ಆವಕಾಲದಲಿ=ಸರ್ವ ಕಾಲದಲ್ಲಿಯೂ, ನಿತ್ಯದಲ್ಲಿ, ರಮಾದೇವಿಯರಿಗಿಂತಲೂ ಸಜಾತೀಯುವಾದ ಕೋಟಿ ಗುಣದಿಂದ ಕಡಿಮೆಯೆನಿಸುವರು. ಖೇಟಪತಿ=ಖೇ ಆಕಾಶದಲ್ಲಿ ಸಂಚರಿಪ ಪಕ್ಷಿಗಳಲ್ಲಿ ಪತಿಶ್ರೇಷ್ಠಗರುಡದೇವರು, ಶೇಷ=ಶೇಷದೇವರು, ಅಸುರೇಂದ್ರ ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರದೇವರೇ ಮೊದಲಾದವರನ್ನು, ಪಾಟಿ ಮಾಡದೆ=ಲೆಕ್ಕಿಸದೆ, ಶ್ರೀಶನ=ಶ್ರೀ ಲಕ್ಷ್ಮೀದೇವಿಗೆ ಈಶನಾದ ಶ್ರೀಹರಿಯ, ಕೃಪಾನೋಟದಿಂದಲಿ=ಅಂತಃಕರಣದ ದೃಷ್ಟಿಯಿಂದ, ಹರಿ ಕೃಪಾವಲೋಕದಿಂದ, ಸರ್ವರೊಳು ವ್ಯಾಪಾರ ಮಾಡುವರು=ಸರ್ವಜೀವರಲ್ಲಿ ಅಂದರೆ, ಸತ್ವ-ರಜಃ – ತಮೋ ಜೀವರುಗಳಲ್ಲಿ ಶ್ರೀಹರಿಯೊಡನೆ, ಶ್ರೀ ಹರಿಯಾಜ್ಞೆಯಂತೆ ಸಕಲ ಕ್ರಿಯಾ ರೂಪ ವ್ಯಾಪಾರ ಮಾಡುತ್ತಾರೆ. ಶೇಷಾದಿಗಳಿಗೆ ಇಂತಹ ಶಕ್ತಿ ಇಲ್ಲವೆಂತ ಪಾಟು ಮಾಡದಲೇ ಈ ಶಬ್ದ ಪ್ರಯೋಗಿಸಿದ್ದಾರೆ.

**ಭಾವಸೂಚನ ॥ ಘೋಟಕೇತಿ.** ಕುದುರಿ । ಹಾಟಕೋದರ– ಹಿರಣ್ಯಗರ್ಭ ॥ ಕೋಟೀತಿ ॥ "ಲಕ್ಷ್ಮ್ಯಾ ಅಹಂ ಕೋಟಿ ಗುಣೈರ್ವಿಹೀನ ಇತಿ-ಗಾರುಡೇ, ವಾಯು ಬ್ರಹ್ಮವಚನಂ । ಖೇಟ ಪಕ್ಷಿ । ಪಾಟಿಮಾಡದೆ ಲಕ್ಷ್ಯಮಾಡದೆ ॥ ೩ ॥

**ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ**

ತದಧಃಕಕ್ಷಾಃ ಬ್ರೂತೇ- "ಘೋಟಕ" ಇತಿ ॥ ಹಯನಾಮ ॥ "ಹಾಟಕಂ"-ಸುವರ್ಣಂ. ಷಟ್ಪದೀರಕ್ಷಣಾಯ ಏವಮುಕ್ತಿಃ॥ "ಖೇಟಃ" ಪಕ್ಷೀ ॥ ಪಾಟಿ-ಲಕ್ಷ್ಯ ॥ ೫ ॥

## ಕನ್ನಡಾರ್ಥ

ರಮಾದೇವಿಯವರಿಗಿಂತಲೂ ಕಡಿಮೆಯ ಕಕ್ಷೆಯಲ್ಲಿ ಇರುವವರನ್ನು ತಿಳಿಸುತ್ತಾರೆ-"ಘೋಟಕ" ಎಂಬ ಪದ್ಯದಿಂದ. ಅಶ್ವಕ್ಕೆ ಘೋಟಕವೆಂದು ಹೆಸರು. ಅಂದರೆ "ಹಯಗ್ರೀವ" ಎಂದು ಅಭಿಪ್ರಾಯ ॥ ಸುವರ್ಣಕ್ಕೆ ಹಾಟಕವೆಂದು ಹೆಸರು. ಷಟ್ಪದೀವೃತ್ತವನ್ನು ಸಂರಕ್ಷಿಸಲು ಹಾಟಕ ವೆಂಬುದಾಗಿ ಹೇಳಲಾಗಿದೆ. ಖೇಟ-ಆಕಾಶದಲ್ಲಿ ಸಂಚರಿಸುವದು-ಪಕ್ಷಿ. ಪಾಟಿಮಾಡದೆ ಎಂದರೆ- "ಲಕ್ಷ್ಯಕ್ಕೆ ತಾರದೇ" ಎಂದು ಅರ್ಥ ॥ ೫ ॥

**ಅವತರಣಿಕಾ:**— ಬ್ರಹ್ಮದೇವರ ನಾಲ್ಕು ರೂಪಗಳನ್ನು ಮತ್ತು ವಾಯುದೇವರ ಅವತಾರಗಳನ್ನು ೬-೭ ಈ ಎರಡು ಪದ್ಯಗಳಿಂದ ಹೇಳುತ್ತಾರೆ.

**ಪುರುಷ ಬ್ರಹ್ಮ ವಿರಿಂಚಿ-ಮಹಾ ।**
**ನ್ಮರುತ ಮುಖ್ಯಪ್ರಾಣ ಧೃತಿ ಸ್ಮೃತಿ ।**
**ಗುರುವರ ಮಹಾಧ್ಯಾತ ಬಲವಿಜ್ಞಾನ (ತ) ವಿಖ್ಯಾತ ।**
**ಗರಳ ಭುಗ್ಭವರೋಗ ಭೇಷಜ ।**
**ಸ್ವರವರಣ ವೇದಸ್ಥ ಜೀವೇ ।**
**ಶ್ವರ ವಿಭೀಷಣ ವಿಶ್ವ ಚೇಷ್ಟಕ ವೀತಭಯ ಭೀಮ ॥ ೬ ॥**

**ಪದ್ಯಾರ್ಥ:**— ಪುರುಷ ನಾಮಕ ಬ್ರಹ್ಮಗೆ ಕೆಲವರು ಮೂರು ರೂಪ, ಕೆಲವರು ನಾಲ್ಕು ರೂಪವೆಂದು ಹೇಳುತ್ತಾರೆ. ಪ್ರಕಾಶ ಸಂಹಿತಾ ಮತ್ತು ಗರುಡ ಪುರಾಣದಲ್ಲಿ "ರೂಪೈಃ ಚತುಷ್ಟಯೈಶ್ಚೈವ ಬ್ರಹ್ಮಣಃ ಪರ ಮೇಷ್ಠಿನಃ" ಎಂದು ಪ್ರಮಾಣದಂತೆ, ಶ್ರೀ ವಿಜಯದಾಸಾರ್ಯರು

ಸೂಕ್ಷ್ಮ ಸೃಷ್ಟಿ ಸುಳಾದಿಯಲ್ಲಿ. ದ್ವಿತೀಯ ವ್ಯೂಹ ವಾಸುದೇವೋದ್ಭೂತ ನಾರಾಯಣಾದಿ ಪಂಚರೂಪದೃಷ್ಟಿಗೆ-ಕಾರಣ. ಇದರಲ್ಲಿ ಸೃಷ್ಟಿ ಪ್ರಾರಂಭ ಸಮಯ, ಮೊದಲಿಗೆ ನಾರಾಯಣ-ಲಕ್ಷ್ಮಿಯಿಂದ (೧) ಕಾಲ ನಾಮಕ (೧) **ಬ್ರಹ್ಮನ ಉತ್ಪತ್ತಿ. ಇದೇ ಅವ್ಯಕ್ತ ದೇಹ.**

(೨) ತರುವಾಯ – ವಾಸುದೇವೋದ್ಭೂತ ವಾಸುದೇವನಿಂದ-ಮಾಯಿಯಲ್ಲಿ–**ಪುರುಷ ನಾಮಕ ಬ್ರಹ್ಮನ ಉತ್ಪತ್ತಿ.**

(೩) ಪುನಃ ೮ ನೇ ವರುಷ ಪ್ರದ್ಯುಮ್ನ ಕೃತಿಯಲ್ಲಿ **ವಿರಂಚಿ. ನಾಮಕ** ಬ್ರಹ್ಮನಾಗಿ ಪುಟ್ಟಿದ, "ಮಗನಾದನು ಪ್ರದ್ಯುಮ್ನಗೆ ಪುನರಪಿ ವಿರಂಚಿ ನಾಮಕನಾಗಿ, ಪುನಃ ೨೧ ನೇ ವರುಷ, ಅನಿರುದ್ಧ ಶಾಂತಿಯಲ್ಲಿ ವಿರಂಚಿ ಪುಟ್ಟಿ ಮಹತ್ತತ್ವಾತ್ಮಕ ದೇಹನಾದನು.

(೪) ಪುನಃ ಪದ್ಮಕಲ್ಪದಲ್ಲಿ–ಪದ್ಮನಾಭರೂಪಿ ಪುರುಷನಿಂದ-ಪದ್ಮೋದ್ಭವ-ಚತುರ್ಮುಖ ಬ್ರಹ್ಮನೆಂದು. ನಾಲ್ಕು ರೂಪಗಳು ಬಹಿರ್ಬ್ರಹ್ಮಾಂಡದಲ್ಲಿ ಉತ್ಪತ್ತಿ. ಈ ಬ್ರಹ್ಮಾಂಡದಲ್ಲಿ ಭುವಿಯಲ್ಲಿ ಬ್ರಹ್ಮದೇವಗೆ ಅವತಾರವಿಲ್ಲ. ಹೀಗೆ ಪುರುಷ-ವಿರಂಚಿ-ಮಹಾ, ಬ್ರಹ್ಮನೆಂದು ನಾಲ್ಕು ಸಲ ಉತ್ಪತ್ತಿಯಾದ ಪೆಸರು ಎಂದು ತಿಳಿಯಬೇಕು. ಸೃಷ್ಟಿ ಪ್ರಕರಣ ಸುಳಾದಿಯಲ್ಲಿ ವಿಸ್ತಾರ ಹೇಳಿದ್ದಾರೆ.

ಗರುಡ ಪುರಾಣ ಬ್ರಹ್ಮಕಾಂಡ ಅಧ್ಯಾಯ ೧೬ ರ ಪ್ರಮಾಣ ||

"ವಾಸುದೇವಾತ್ ಸಮುತ್ಪನ್ನೋ ಮಾಯಾಯಾಂ ಚ ಖಗೇಶ್ವರ || ಸ ಏವ ಪುರುಷೋ ನಾಮ್ನಾ೨ ವಿರಂಚಿಃ-ಸಂಪ್ರಕೀರ್ತಿತಃ || ಅನಿರುದ್ಧಾತ್ತು ಶಾಂತಾಯಾಂ ಮಹತ್ತತ್ವತನುರ್ಹ್ಯಭೂತ್ || ತದಾ ಮಹಾ ವಿರಂಚೇ೩ ತ್ರಿಸಂಜ್ಞಾಮಾಪ ಖಗೇಶ್ವರ || ೧೭ || ರಜಸ್ತವನೌ ಸಮುತ್ಪನ್ನೌ ಮಾಯಾಯಾಂ ವಾಸುದೇವತಃ ||ವಿಧಿಸಂಜ್ಞಾ- ೪ ವಿರಿಂಚೇತಿ-ಜ್ಞಾತವ್ಯಂ ಪಕ್ಷಿಸತ್ತಮ || ಬ್ರಹ್ಮಾಂಡಾಂತಃ ಪದ್ಮನಾಭಾದ್ಯೋ ಜಾತಃ ಕಮಲಾ

ಸನಃ ॥ ಚತುರ್ಮುಖೇತಿ ಹ ಸಂಜ್ಞಾಂ ಚ-ಅವಾಪ ಖಗಸತ್ತಮ ॥ ಏತೇ ಚತ್ವಾರಸ್ತು ಬ್ರಹ್ಮಾಂಶಾಃ **ಪರಿಕೀರ್ತಿತಾ**॥

ಈ ವಿಷಯದಲ್ಲಿ ಶ್ರೀ ಪುರಂದರದಾಸಾರ್ಯರ ಸುಳಾದಿಯುಂಟು. ಪುರುಷನಾಮಕವಿಧಿ ಕಾಲನಾಮಕವಿಧಿ.ತುರಿಯ ರೂಪನಾದ ವಾಸುದೇವ ನಿಂದ ಜನಿತರಾಗಿಹರಯ್ಯಾ। ಸಿರಿ ಶಾಂತಿ ಅನಿರುದ್ಧದೇವನಾತ್ಮನೆನಿಸಿ-ಪರನು ಮಹತತ್ವದೇವನು ಪುಟ್ಟಿಹನು। ಕರಿವರದ ನಾರಾಯಣನ ನಾಭಿ ಕಮಲದಿಂದ ಚ । ತುರಾನನ ವಿಧಿ ಜನಿಸಿಹ ಕೇಳೋ ಮನವೆ। ವಿರಂಚಿಗೆ ಅವತಾರ ಭುವಿಯಲ್ಲಿ ಇಲ್ಲ ಕಾಣೋ । ನಿರದುಷ್ಟ ರೂಪಗಳು ಸದಾಕಾಲ। ಕರುಣಾಕರ, ಶ್ರೀ ಪುರಂದರ ವಿಠಲನ ಚರಣವ ಮನದಲ್ಲಿ ಮೆರೆಯುವ ರೂಪ ಕಂಡ್ಯಾ ॥ ಎಂದು ಹೇಳಿದ್ದಾರೆ. ದ್ವಿತೀಯ ವ್ಯೂಹಗತ ವಾಸುದೇವ ನಿಂದ-ಕಾಲ-ಪುರುಷ ರೂಪವೆಂದು ಹೇಳಿದ್ದಾರೆ. ಶ್ರೀ ವಿಜಯರು ಇದರ ಅರ್ಥವನ್ನೇ ವಾಸುದೇವೋದ್ಭೂತ ನಾರಾಯಣನಿಂದ ಕಾಲನಾಮಕ ಬ್ರಹ್ಮ ನೆಂದು ಪ್ರಕಾಶ ಸಂಹಿತೆ ವಾಕ್ಯದಂತೆ ರಚಿಸಿದ್ದಾರೆ, ಏನೂ ವ್ಯತ್ಯಾಸ ವಿಲ್ಲ."ಬೃಹದ್ಭಾಷ್ಯದಲ್ಲಿ **ಮಹಾನ್ ಬ್ರಹ್ಮ** ಎಂಬುವ ಪದಕ್ಕೆ ಮಹತ್ತತ್ವಾ ಭಿಮಾನಿ ಬ್ರಹ್ಮನೆಂದು ಹೇಳಿದ್ದಕ್ಕೆ. ಶ್ರೀ ವಿಜಯ ಪುರಂದರರು ವಿವರಿಸಿ ದಂತೆ. ದಾಸಾರ್ಯರು (೪) ರೂಪಗಳನ್ನೇ ಹೇಳಿದ್ದಾರೆ.

### ಇನ್ನು ಪ್ರಾಣದೇವರ ರೂಪಗಳನ್ನು ಹೇಳುತ್ತಾರೆ.

**ಮಹಾನ್ಮರುತ**=ಪಂಚಾಶತ್ ಮರುತಗಳಲ್ಲಿ ಶ್ರೇಷ್ಠನು. ಮತ್ತು ಮಹತ್ತತ್ವಾಭಿಮಾನಿ.

**ಮುಖ್ಯಪ್ರಾಣ**=ಸರ್ವಜೀವ ಚೇಷ್ಟಕನಾದುದರಿಂದ ಮುಖ್ಯಪ್ರಾಣ

**ಧೃತಿ**=ರುದ್ರಾದ್ಯಪೇಕ್ಷಯಾ ಹೆಚ್ಚಿನ ಧೈರ್ಯ ಉಳ್ಳವ. ಧೈರ್ಯಾಭಿ ಮಾನಿ.

**ಸ್ಮೃತಿ**= ಭಗವದ್ವಿಷಯಕ ಜ್ಞಾನ ತಿರೋಭಾವ ಇಲ್ಲದವರು. **ಗುರು ವರ** ॥ ಸಕಲ ದೇವತೆಗಳಿಗೆ ಶ್ರೇಷ್ಠಗುರು.

**ಮಹಾಧ್ಯಾತ** = ಸಕಲ ಚೇತನರಿಂದಲೂ ಹೆಚ್ಚಿಗೆ ಸಂತತವಾಗಿ, ಶ್ರೀಹರಿಯನ್ನು ಗುಣರೂಪ ಕ್ರಿಯಾದಿ ಗುಣಗಳನ್ನು ಧ್ಯಾನಮಾಡುವ.

**ಬಲ** = ವಾಯುಬಲಾಭಿಮಾನಿ-ಶೇಷಾದಿಗಳಿಗೆ ಬಲಪ್ರದರೂಪ.

**ವಿಜ್ಞಾತ**= ವಿಜ್ಞಾನಾಭಿಮಾನಿ-ಶ್ರೀಹರಿಯ ವಿಶೇಷ ಜ್ಞಾನವುಳ್ಳ ವಾಯು.

**ವಿಖ್ಯಾತ**=ಚತುರ್ದಶ ಲೋಕದಲ್ಲಿಯೂ, ನಿತ್ಯವಾದ ವೇದಗಳಲ್ಲಿಯೂ ಶ್ರೀಹರಿಯನಂತರ ಸಕಲ ದೇವಪ್ರಖ್ಯಾತ ದ್ವಿತೀಯ ಈಶ್ವರ.

**ಗರಳಭುಗ್**=ಕ್ಷೀರಸಮುದ್ರದಲ್ಲಿ ಉತ್ಪನ್ನ ಹಾಲಾಹಲ ವಿಷವನ್ನು ಉಂಡವ.

**ಭವರೋಗ ಭೇಷಜ**=ಸಂಸಾರವೆಂಬ ರೋಗಕ್ಕೆ ವೈದ್ಯನಾದವ.

**ಸ್ವರವರಣ ವೇದಸ್ಥ**=ವೇದಗಳಲ್ಲಿಪ್ಪ ಪ್ರತ್ಯಕ್ಷರ ಉದಾತ್ತಾದಿ ಸ್ವರಕ್ಕೆ ಅಭಿಮಾನಿ ಸ್ವರದಿಂದ ಗಾನಮಾಡುವ.

**ಜೀವೇಶ್ವರ**=ಸಕಲ ಜೀವರಿಗೆಲ್ಲ ಹಿರಿಯ ಒಡೆಯ.

**ವಿಭೀಷಣ**=ಭಗವದ್ವೇಷಿಗಳಾದ ಶತ್ರುಗಳಿಗೆ ಭಯವನ್ನುಂಟು ಮಾಡುವ.

**ವಿಶ್ವಚೇಷ್ಟಕ**=ಚರಾಚರ ಜಗತ್ತಿಗೆ ಚೇಷ್ಟಾಪ್ರದ ರೂಪ.

**ವೀತಭಯ**=ಒಂದು ಕಾಲದಲ್ಲಿಯೂ, ಒಬ್ಬರಿಂದಲೂ ವಾಯುವಿಗೆ ಭಯವೆಂದರೆ-ಅಂಜಿಕೆ, ಅಜ್ಞಾನಾದಿ ದೋಷಗಳೇ ಇಲ್ಲ.

**ಭೀಮ**=ದೈತ್ಯರಿಗೆ ಬಹು ಭಯಂಕರನಾಗಿ ತೋರುವ ರೂಪ.

ಇವೆಲ್ಲವೂ ವಾಯು ರೂಪಗಳು. ಆಯಾ ಕಾರಣಗಳಿಗೆ ಅಭಿಮಾನಿಗಳಾಗಿ ಕಾರ್ಯ ನಡೆಸುತ್ತಾರೆ. ಮುಂದಿನ ಪದ್ಯದಲ್ಲಿಯೂ ವಾಯು ರೂಪಗಳನ್ನು ಹೇಳುತ್ತಾರೆ. ವಿಶೇಷ ಸೂಚನೆಯಲ್ಲಿ ಗರುಡಪುರಾಣ ಪ್ರಮಾಣ ಕೊಟ್ಟದೆ.

**ಭಾವಸೂಚನ** :— ಬ್ರಹ್ಮದೇವರ ಅವತಾರ ಹೇಳುತ್ತಾರೆ—

ಪುರುಷೇತಿ॥ ಮುರ್ಹಾ ಮಹತ್ತತ್ವಾಂತರ್ಗತ ॥ ವಾಯು ಅವತಾರರೂಪ ॥ ಗರಳಭುಗಿತಿ ॥ ವಿಷಪ್ರಾಶನ ಕಾಲದ ರೂಪ ವೇದಸ್ಥ-ವೇದಪ್ರತಿಪಾದ್ಯ ॥ ವಿಭೀಷಣ ದೈತ್ಯರಿಗೆ ವಿಶೇಷದಿಂದ ಭಯಂಕರ ॥ ೬ ॥

## ವ್ಯಾಸದಾಸ ಸಿದ್ಧಾಂತಕೌಮುದೀ

ಬ್ರಹ್ಮಾವತಾರಾಃ ಚತ್ವಾರಃ ॥ ವಾಸುದೇವನಾಮ್ನಾ ॥ ವಿರಿಂಚಿಂ ಸುಷುವೆ॥ ಬ್ರಹ್ಮಾ ಪುರುಷಃ ವಿರಿಂಚಿಃ ಮಹಾನ್ ವಿರಿಂಚಿಃ ಇತ್ಯನ್ವಯಃ॥ 'ಮುಖ್ಯಪ್ರಾಣಃ ಮಹಾನ್ ಮರುತ್(ತ್ತಃ) ಪ್ರಧಾನವಾಯುಃ ಧೃತ್ಯಾದಿಃ ಇತ್ಯನ್ವಯಃ ॥ ಮಹತ್ತತ್ವತನುಃ ವಿರಿಂಚಿಃ ಇತ್ಯುಕ್ತೇಃ ॥ 'ಗರಲಂ' ವಿಷಂ ಪಪೌ ॥ ಸ ವಾಯುಃ ತಮುತಾಸ್ಯ ಜೀರ್ಣವರ್ ಇತ್ಯುಕ್ತೇಃ ॥ 'ವೇದಸ್ಥಃ' ತತ್ಪ್ರತಿಪಾದ್ಯಃ ॥ ವಿಶೇಷಾತ್ ಭೀಷಕಃ ॥ 'ವಿಶ್ವಚೇಷ್ಟಕ' ಇತಿ ಸೂತ್ರ ಪದಾರ್ಥಾನುವಾದಃ ॥ ೬ ॥

## ಕನ್ನಡಾರ್ಥ

ಬ್ರಹ್ಮನಿಗೆ ನಾಲ್ಕು ರೂಪಗಳು (ಜನ್ಮಗಳು) (ಈ ಅವತಾರಗಳು ಭೂಮಿಯಲ್ಲಿ ಆಗಿಲ್ಲ) ವಾಸುದೇವ ರೂಪದಿಂದ ವಿರಿಂಚಿಯು ಹುಟ್ಟಿದನು. ಅವನೇ ಬ್ರಹ್ಮಾಂಡಕ್ಕೆ ಅಭಿಮಾನಿಯಾದ ಪುರುಷನು. ಅವನೇ ನಾಭಿ ಕಮಲದಿಂದ ಮತ್ತೆ ಅನಿರುದ್ಧನ ವಶೆಯಿಂದ ಶಾಂತಿಯಲ್ಲಿ ಹುಟ್ಟಿದನು. ಈ ಬ್ರಹ್ಮದೇವರೇ ಮಹತ್ತತ್ವಾಭಿಮಾನಿಗಳಾದುದರಿಂದ 'ಮಹಾನ್' ಎನಿಸಿಕೊಂಡರು. "ಬ್ರಹ್ಮ-ಪುರುಷ-ವಿರಿಂಚಿ-ಮಹಾನ್" ಎಂಬುದಾಗಿ ಕ್ರಮಾನ್ವಯ. ಮುಖ್ಯಪ್ರಾಣ, ಮಹಾನ್ ಮರುತ ಪ್ರಧಾನವಾಯು, ಧೃತಿ ಮುಂತಾದವುಗಳು ಎಂಬುದಾಗಿ ಕ್ರಮಾನ್ವಯ. ಮಹತ್ತತ್ವತನುಃ ವಿರಿಂಚಿ ಎಂದು ಮುಂತಾದ ವಚನಗಳು ಇಲ್ಲಿ ಆಧಾರಗಳು. 'ಗರಲಭುಕ್' ವಿಷವನ್ನುಂಡವನು. "ವಾಯುದೇವನೇ ವಿಷವನ್ನು ಮೊದಲು ಸಂಪೂರ್ಣ ವಾಗಿ ಕುಡಿದನು. ಅದು ಅವನಿಗೆ ಜೀರ್ಣವಾಯಿತು" ಎಂದು ಮುಂತಾದ ವಚನಗಳು ನಿರ್ಣಯದ ಪ್ರಮಾಣಗಳು. 'ವೇದಸ್ಥ' ಎಂದರೆ ವೇದ ಪ್ರತಿಪಾದ್ಯ. ವಿಶೇಷವಾಗಿ ಭಯಗೊಳಿಸುವುದರಿಂದ 'ವಿಭೀಷಕ' ಎಂದು

ವಾಯುದೇವರನ್ನು ಕರೆಯುವರು. ವಿಶ್ವಚೇಷ್ಟಕವೆಂಬ ಪದವು ಸೂತ್ರ ಪದಾರ್ಥವನ್ನು ಹೇಳುತ್ತದೆ. ॥ ೬ ॥

**ಅವತರಣಿಕಾ :**— ಈ ಪದ್ಯದಿಂದ ಪ್ರಾಣದೇವರ ಅವತಾರ ರೂಪಗಳನ್ನು ನಿರೂಪಿಸುತ್ತಾರೆ. ಈ ಎಲ್ಲ ರೂಪಗಳಿಂದ ಎಲ್ಲ ಗುಣಗಳಿಗೆ ಅಭಿಮಾನಿಗಳಾಗಿದ್ದು ಶ್ರೀಹರಿಯೊಡನೆ ಎಲ್ಲ ಜೀವಿಗಳಲ್ಲಿ, ಜಗತ್ತಿನಲ್ಲಿ ಕಾರ್ಯಮಾಡುವ ವಾಯು ರೂಪಗಳು.

**ಅನಳಸ್ಥಿತಿ ವೈರಾಗ್ಯನಿಧಿ ರೋ- ।**
**ಚನ ವಿಮುಕ್ತಿಗನಂದ ದಶಮತಿ ।**
**ಅನಿಮಿಷೇಶಾನಿದ್ರ ಶುಚಿ ಸತ್ವಾತ್ಮಕ ಶರೀರ ॥**
**ಅಣುಮಹದ್ರೂಪಾತ್ಮಕಾನ್ವಿತ ।**
**ಹನುಮದಾದ್ಯವತಾರ ಪದ್ಮಾ- ।**
**ಸನ ಪದವಿ ಸಂಪ್ರಾಪ್ತ ಪರಿಸರ ಆಖಣಾಶ್ಮಸಮ ॥ ೭ ॥**

**ಪದ್ಯಾರ್ಥ :**— ವೇದಗಳಲ್ಲಿ ಪ್ರಸಿದ್ಧವಾದ ರೂಪಗಳನ್ನು ವರ್ಣಿಸುತ್ತಾರೆ.

೧. **ಅನಳ**=ವಾಯುದೇವರು.

೨. **ಸ್ಥಿತಿ**=ನಾಮಕವಾಯು-ಪ್ರಾಣಿಗಳ, ದೇಹಗಳ ಅಸ್ತಿತ್ವಕ್ಕೆ ಕಾರಣನಾದ ಸ್ಥಿತಿ ನಾಮಕಹರಿ ಪ್ರತಿಬಿಂಬ.

೩. **ವೈರಾಗ್ಯನಿಧಿ**=ವಿರಕ್ತಿ ಸಮುದ್ರರು, ಜ್ಞಾನೇ ವಿರಾಗೇ ಹರಿ ಭಕ್ತಿಭಾವೇ ಧೃತಿ.

೪. **ರೋಚನ**=ನಾಮಕವಾಯು – ಸ್ವಾರೋಚಿಷಮನ್ವಂತರದಲ್ಲಿ ಇಂದ್ರಪದವಿ ಆಳಿದವರು.

೫. **ವಿಮುಕ್ತಿಗ**=ಭಗವದಾಜ್ಞೆಯಿಂದ ಅವರರಿಗೆ ಸಮೀಚೀನ ಮುಕ್ತಿಪ್ರದಾತರು.

೬. **ಆನಂದ**=ಆನಂದನಾಮಕ ಹರಿಗೆ ಪ್ರತಿಬಿಂಬರು. ಜೀವರಲ್ಲಿ ಶತಾನಂದರು.

೭. **ದಶಮತಿ**=ಪೂರ್ಣಜ್ಞಾನ ಉಳ್ಳವರು. ಪೂರ್ಣಪ್ರಜ್ಞರು, ಸರ್ವಜ್ಞರು.

೮. **ಅನಿಮಿಷೇಶ**=ನಿಮಿಷ ರೆಪ್ಪೆ ಹಾಕದಿರುವ ದೇವತೆಗಳಿಗೆ ಒಡೆಯ.

೯. **ಅನಿದ್ರ**=ನಿದ್ರೆ ಇಲ್ಲದವರು, ಜೀವರ ನಿದ್ರಾಕಾಲ ಎಚ್ಚತ್ತು ಶ್ವಾಸ ಜಪಮಾಡುವರು. ಮತ್ತು ಪ್ರಳಯೇಪಿ ಪ್ರತಿಭಾತ ಪರಾಪರ.

೧೦. **ಶುಚಿ**=ಶುಚಿ-ಪವಿತ್ರನಾದ ಶುಚಿನಾಮಕನ ಪ್ರಥಮಾಂಗರು

೧೧. **ಸತ್ವಾತ್ಮಕ ಶರೀರ**=ಸೂಕ್ಷ್ಮಸೃಷ್ಟಿಯಲ್ಲಿಯೂ, ಪದ್ಮಸೃಷ್ಟಿಯಲ್ಲಿಯೂ ವಿಶೇಷವಾಗಿ ಸತ್ವಪ್ರಾಚುರ್ಯ ಶರೀರಿ.

೧೨. **ಅಣು ರೂಪಾತ್ಮಕ**=ಸ್ಥೂಲ ಮಹತ್ತತ್ವಾತ್ಮಕ ಶರೀರ, ಅಣುವಾಗುವ ರೂಪ.

೧೩. **ಮಹದ್ರೂಪಾತ್ಮಕ**=ಸ್ಥೂಲವಾದ ಮಹತ್ತತ್ವವ್ಯಾಪ್ತರೂಪ

೧೪. **ಅಮೃತ**=ಸ್ಥೂಲ ಸೂಕ್ಷ್ಮ ಶರೀರ ನಾಶರಹಿತರು, ಸದಾ ಮಹತ್ತತ್ವಶರೀರವೇ ಉಳ್ಳವರು. ವಾಯುರಪ್ಯಮೃತ ಉಚ್ಯತೇ.

೧೫. **ಹನುಮದಾದ್ಯವತಾರ**=ಹನುಮ, ಭೀಮ, ಮಧ್ವ ಮುಂತಾದ ಅನೇಕ ಅವತಾರವುಳ್ಳವರು.

೧೬. **ಪದ್ಮಾಸನಪದವಿ ಸಂಪ್ರಾಪ್ತ**=ಮುಂದಿನ ಬ್ರಹ್ಮಕಲ್ಪದಲ್ಲಿ ಬ್ರಹ್ಮದೇವರ ಪದವಿಹೊಂದತಕ್ಕವರು.

೧೭. **ಪರಿಸರ**=ಪರಿತಃ ಸರತಿ, ಗಚ್ಛತೀತಿ, ವಾಯು.

೧೮. **ಆಖಣಾಶ್ಮಸಮ**=ವಜ್ರಸಮಾನ ದೇಹವುಳ್ಳವರು.

ಜ್ಞಾನೇ ವಿರಾಗೇ ಹರಿಭಕ್ತಿಭಾವೇ ಧೃತಿ-ಸ್ಥಿತಿ-ಪ್ರಾಣ-ಬಲೇಷು ಯೋಗೇ ॥ ಇತ್ಯಾದಿ ತತ್ತದ್ಗುಣಪ್ರವರ್ತಕರು, ತದ್ಗುಣಾಭಿಮಾನಿಗಳು,

ತತ್ತದ್ರೂಪರು ಎಂದು ಉಪನಿಷತ್ತು. ವ್ಯಾ. ದಾ. ಸಿ. ಕೌಮುದೀಕಾರರು ವಿಸ್ತಾರ ಬರೆದಿದ್ದಾರೆ.

**ಭಾವಸೂಚನ** :—ಅನಳೇತಿ ॥ ಸ್ಥಿತಿ **ವೈ**ರಾಗ್ಯ ತನ್ಮಾತ್ರಕ ತತ್ಪದ ರೂಪಗಳು ॥ ಅಣುರಿತಿ ಸ ಸೂಕ್ಷ್ಮಮುಕ್ಷ್ಮಕೋಪಮಃ ॥ "ಅವರ್ಥತಾಶುಪ್ರ ವಿಚಿಂತ್ಯ ರಾಮಮಿತಿ ಚ" ಭಾರತತಾತ್ಪರ್ಯೇ ॥ ಬೃಹದ್ಭಾಷ್ಯೇ ಚ ॥ "ಪ್ರಾಣಸೂತ್ರಂ ಮಹಾನ್ ಬ್ರಹ್ಮಾ ಚಿತ್ತಂ ವಾಯುರ್ಬಲಂ ಧೃತಿಃ ॥ ಸ್ಥಿತಿರ್ಯೋಗಶ್ಚ ವೈರಾಗ್ಯಂ ಜ್ಞಾನಂ ಪ್ರಜ್ಞಾ ಸ್ಮೃತಿಃ ಸುಖಂ ॥ ಮೇಧಾ ಮುಕ್ತಿರ್ವಿಷ್ಣುಭಕ್ತಿರತಿರೂಪಾ (ರಾದಿಗೋಪ್ಯೋ ಉಡುಪಿಪಾಠ) ಮಹಾನ್ ಪ್ರಭುಃ ॥ ಋಜು ಸಮಾನೋ ವಿಜ್ಞಾತಾ ಮಹಾಧ್ಯಾತಾ ಮಹಾಗುರುಃ ॥ ಹನೂಮಾನ್ ಭೀಮ ಆನಂದ ಇತ್ಯಾದಿ ಬಹುರೂಪಿಣಃ" ॥ ಇತಿ ॥ ಮಹಾಧ್ಯಾತಾ ಚ ವಿಜ್ಞಾತಾ ವೈರಾಗ್ಯಂ ರೋಚನ ಸುಖಮಿತಿ ವ್ಯಾಸ ರಾಜೀಯೇ ॥ ಪರಿಸರಃ ಪರಿತಃ ಸರತಿ ಗಚ್ಛತೀತಿ ಪರಿಸರೋ ವಾಯುಃ ಸರ್ವಸಂಚಾರಿ ಆವ ಪ್ರಯುಕ್ತ ಪರಿಸರ ಪದ್ಧತಮಿತಿ ಗೀತೋಕ್ತೇಃ ॥ ಅಖಣಾತ್ಮಾ ನಿರ್ದಿಷ್ಟ ಪಾಷಾಣಃ ॥ ೭ ॥

**ಶ್ರೀಜಗನ್ನಾಥದಾಸಾರ್ಯರ ಬೃಹತ್ತಾರತಮ್ಯಪದ** :—ಪುರುಷ ನಾಮಕ ವಿಧಿ ವಿರಂಚಿ ಮಹನ್ ಬ್ರಹ್ಮ । ಸುರುಚಿ ಮುಖ್ಯ ಪ್ರಾಣಸೂತ್ರ ಸ್ಮೃತಿ । ಗುರು ಮಹಪ್ರಭು ಋಜು ಸಮಾನ ವಿಜ್ಞಪ್ರಾಜ್ಞ । ಹರಿಭಕ್ತ ಮೇಧಾವಿ ಮುಕ್ತಿಧೃತಿ ಅಮೃತನಿಗೆ ॥ ೬ ॥ ಸ್ಥಿತಿ ಯೋಗ ವೈರಾಗ್ಯ ಚಿಂತ್ಯ ಬಲ ಸುಖ ಬುದ್ಧಿ ವಿತತಾದಿ ಗೋಪ ಹನುಮ ಭೀಮ ॥ ವೃತಿ ವರಾನಂದ ಮುನಿ ಮೊದಲಾದ ರೂಪ ಶ್ರೀ । ಪತಿ ಗದಿಷ್ಮಾನ ಕೋಟ ಗುಣಾಧಮರು ರಮೆಗೆ ಆನಮಿಪೆ ಶ್ರೀಬ್ರಹ್ಮವಾಯು ॥ ೭ ॥ ಶ್ರೀ ವಿಜಯ ದಾಸರ ಸುಳಾದಿಯೂ ಇದರಂತೆ ಇದೆ. ತಾರತಮ್ಯ ಸು॥ ಪುಟ ೯೨.

**ವಿಶೇಷಸೂಚನೆ** :—**ಗರುಡ ಬ್ರಹ್ಮಕಾಂಡ** ೧೬ನೇ ಅಧ್ಯಾಯ ದಲ್ಲಿಯ ವಾಯು ಅವತಾರ ಪ್ರಮಾಣಗಳು ಶ್ರೀಕೃಷ್ಣ ಗರುಡ ಸಂವಾದ.
**ವಾಯೋ ರೂಪಾನ್ ಪ್ರವಕ್ಷ್ಯೇಽಹಂ ಶೃಣು ಪಕ್ಷೀಂದ್ರ ಸತ್ತಮ ॥**

ಸಂಕರ್ಷಣಾಚ್ಚ ಗರುಡ ಜಾಯಾಯಾಂ ಯೋ ಬಭೂವ ಹ ॥
ಸ ವಾಯುಃ ಪ್ರಥಮೋ ಜ್ಞೇಯೋ ೧ **ಪ್ರಧಾನೇತಿ** ಚ ಕೀರ್ತಿತಃ ॥ ೨೧ ॥

ಲೋಕಚೇಷ್ಟಾ ಪ್ರದತ್ವಾತ್ಸ ೨ **ಸೂತ್ರನಾಮೇತಿ** ಕೀರ್ತಿತಃ ॥
ಬದರ್ಯಾಂ ಸ್ಥಿತಂ ವಿಷ್ಣುಂ ಧೈರ್ಯೇಣ ಸ್ತೋತವೇವ ಸಃ ॥ ೨೨ ॥

೩ **ಧೃತಿ** ರೂಪಂ ಯಯೌ ವಾಯುಃ ತಸ್ಮಾತ್ ಧೃತಿರಿತಿ ಸ್ಮೃತಃ ॥
ಯೋಗ್ಯಾನಾಂ (ಜ್ಞಾನಿನಾಂ) ಹರಿಭಕ್ತಾನಾಂ ಧೃತಿರೂಪೇಣ ಸಂಸ್ಥಿತಃ ॥
ಅತೋ ಹೃದಿ ಸ್ಥಿತೋ ವಾಯುರತೋಽಸೌ **ಧೃತಿ**ಸಂಜ್ಞಕಃ ॥
ಸರ್ವೇಷಾಂ ಚ ಹೃದಿ ಸ್ಥಿತ್ವಾ ಸ್ಮರ್ಯತೇ ಸರ್ವದಾ ಹರಿಮ್ ॥ ೨೩ ॥

ಅತೋ ವಾಯುಃ ೪ **ಸ್ಮೃತಿ**ರ್ನಾಮ ಅವಾಪ ಪಕ್ಷಿಸತ್ತಮ ॥
ಅಥವಾ ವಾಯುರೇವೈಕೋ ಶ್ವೇತದ್ವೀಪಗತಂ ಹರಿಮ್ ॥ ೨೪ ॥

ಸ್ಮರ್ಯತೇ ಚ ಸದಾವೀಂದ್ರ ಅತೋಽಸೌ ಸ್ಮೃತಿ ಸಂಜ್ಞಕಃ ॥
ಸರ್ವೇಷಾಂ ಚ ಹೃದಿ ಸ್ಥಿತ್ವಾ ಜ್ಞಾನಂ ವಿಷ್ಣೋರುದೀರಣಾತ್ ॥ ೨೫ ॥

ಅತೋ ೫ **ಮೇಧೇತಿ** ನಾಮಾಭೂದ್ವಾಯುರೇವ ನ ಸಂಶಯಃ ॥
ಜ್ಞಾನದ್ವಾರೇಣ ಭಕ್ತಾನಾಂ ಮುಕ್ತಿದೋ ಹ ಯದಾಜ್ಞಯಾ ॥ ೨೬ ॥
ಯತೋಽತೋ ವಾಯುರೇವೈಕೋ ೬ ಮುಕ್ತಿನಾಮಾ ಬಭೂವ ಹ ॥
ವಿಷ್ಣೋರ್ಭಕ್ತಿಂ ವರ್ಧಯತಿ ಭಕ್ತಾನಾಂ ಹೃದಿ ಸಂಸ್ಥಿತಃ ॥ ೨೭ ॥
ಅತೋಽಸೌ ೭ **ವಿಷ್ಣುಭಕ್ತೇತಿ** ಕೀರ್ತ್ಯತೇ ನಾತ್ರ ಸಂಶಯಃ ॥
**ಯತೋ**ಽಸೌ ಸರ್ವ ಜೀವಾನಾಂ ಚಿತ್ತಸ್ಥಂ ಜ್ಞಾತಮೇವ ತು ॥ ೨೮ ॥

೮ ಚಿತ್ತರೂಪಂ ಯಯೌ ವಾಯುರ**ತಶ್ಚಿತ್ತ**ಮಿತಿ ಸ್ಮೃತಮ್ ॥
ಪ್ರಭುಃ ಸ್ವಭೂನಾಂ ಗರುಡ ಸ್ವದಾರಾಣಾಂ ಚ ಸರ್ವಶಃ ॥ ೨೯ ॥
ಅತಸ್ತು ವಾಯುರೇವೈಕೋ ೯ **ಮಹಾಪ್ರಭು**ರಿತಿ ಸ್ಮೃತಃ ॥
ಸರ್ವೇಷಾಂ ಚ ಹೃದಿ ಸ್ಥಿತ್ವಾ ದದಾತಿ ಬಲಮುತ್ತಮಮ್ ॥ ೩೦ ॥
ಅತೋ ೧೦ **ಬಲ** ಇತಿ ಖ್ಯಾತಿಮವಾಪ ವಿನತಾಸುತ ॥
ಸರ್ವೇಷಾಂ ಚ ಹೃದಿ ಸ್ಥಿತ್ವಾ ಪುತ್ರಪೌತ್ರಾದಿಕಾನ್ ಜನಾನ್ ॥ ೩೧ ॥

ಪಾಲನಂ ಕುರುತೇ ನಿತ್ಯಮತೋಽಸೌ ೧೧ **ಸ್ಥಿತಿಸಂಜ್ಞಕಃ** ॥
**ಅ**ನಂತಕಲ್ಪಮಾರಭ್ಯ ವಾಯುಪರ್ಯಂತಮೇವ ಚ ॥ ೩೩ ॥
ವಕ್ರತ್ವಂ ನಾಸ್ತಿ ಯೋಗ್ಯಸ್ಯ **ಋಜುಯೋಗಸ್ಥಃ** ಸ್ಮೃತಃ ॥

ಇತ್ಯಾದಿ ಇವೆಲ್ಲ ವಾಯುರೂಪ ನಾಮಗಳು. ಶ್ರೀವಾಯುದೇವರು ತತ್ತ್ವತ್ಕಾರ್ಯ ಪರಿಪಾಜ್ಞೆಯಿಂದ ಮಾಡುವರಾದುದರಿಂದ ಆಯಾ ನಾಮಗಳಿಂದ ಕರೆಸುತ್ತಾರೆ. ಬೃಹದ್ಭಾಷ್ಯವಲ್ಲಿಯೂ ಶ್ರೀಸರ್ವಜ್ಞರೂ ಸಂಕ್ಷೇಪವಾಗಿ ವಾಯುರೂಪ ವರ್ಣಿಸಿರುತ್ತಾರೆ. ಶ್ಲೋಕಗಳ ಅರ್ಥ ಸುಲಭವಾಗಿದೆ. ಗ್ರಂಥಬಾಹುಲ್ಯ ಭಯದಿಂದ ಕನ್ನಡ ಅರ್ಥ ಬರೆದಿಲ್ಲ. ಮುಂದೆ **ಗರುಡ ಪುರಾಣ ಬ್ರಹ್ಮಕಾಂಡ** ಅ. ೧೬. ಶ್ಲೋಕ ೧೬ರಿಂದ ಪ್ರಮಾಣಗಳು.

ಪ್ರಾಣಾದಿ ಸುಖ ಪರ್ಯಂತಾ ಏಕೋನವಿಂಶ ಸಂಖ್ಯಕಾಃ ॥
ಪ್ರವಿಷ್ಟಾಸ್ಸಂತಿ ಲೋಕೇಷು ಪೃಥಕ್ ಸಂತಿ ಖಗೇಶ್ವರ ॥ ೧೬ ॥
"ಮಾರುತೇರವತಾರಾಂಶ್ಚ ಶೃಣು ಪಕ್ಷೀಂದ್ರಸತ್ತಮ ॥
ಚತುರ್ದಶೇಷು ಚೇಂದ್ರೇಷು ಯೋ ದ್ವಿತೀಯಸ್ತು **ರೋಚನಃ** ॥ ೧೭ ॥

ಸ ವಾಯುರಿತಿ ವಿಖ್ಯಾತ ಇಂದ್ರಾದೀನಾಂ ಖಗೇಶ್ವರ ॥
ಚರಿತ್ರೇಷು ಸರ್ವೇಷು ರುಚಿಮುತ್ಪಾದ್ಯತೇ ಸದಾ ॥ ೧೮ ॥
ಅತೋ ರೋಚನನಾಮಾಸೌ ಮರುದಂಶಃ ಪ್ರಕೀರ್ತಿತಃ ॥
ರಾಮಾವತಾರೇ **ಹನುಮಾನ್** ರಾಮಕಾರ್ಯಾರ್ಥಸಾಧಕಃ ॥ ೧೯ ॥

ಸ ಏವ **ಭೀಮಸೇನಸ್ತು** ಜಾತೋ ಭೂಮ್ಯಾಂ ಮಹಾಬಲಃ ॥
ಕೃಷ್ಣಾವತಾರೇ ವಿಜ್ಞೇಯೋ ಮರುದಂಶಃ ಪ್ರಕೀರ್ತಿತಃ ॥ ೨೦ ॥
ಮಣಿಮಾನ್ನಾಮದೈತ್ಯಸ್ತು ಸಂಕರಾಖ್ಯೋ ಭವಿಷ್ಯತಿ ॥
ಸರ್ವೇಷಾಂ ಸಂಕರಂ ಯಸ್ತು ಕರಿಷ್ಯತಿ ನ ಸಂಶಯಃ ॥ ೨೧ ॥

ತೇನ ಸಂಕರನಾಮಾಸೌ ಭವಿಷ್ಯತಿ ನ ಸಂಶಯಃ ॥
ಧರ್ಮಾನ್ ಭಾಗವತಾನ್ ತತ್ರ್ವಾನ್ನಾಶಯಿಷ್ಯತಿ ಸರ್ವಥಾ ॥ ೨೨ ॥

ತದಾ ಭೂಮೌ ವಾಯುರೇವ ಭವಿಷ್ಯತಿ ನ ಸಂಶಯಃ ॥
ಪ್ರಜ್ಞಯಾ ಸದೃಶೋ ಯಸ್ಯ ನಾಸ್ತಿ ಲೋಕೇ ಚತುರ್ದಶೇ ॥ ೨೩ ॥

ಅತಃ ಸ **ಪ್ರಜ್ಞಯಾ ಪೂರ್ಣೋ ಭವಿಷ್ಯತಿ** ನ ಸಂಶಯಃ ॥
ಅವತಾರತ್ರಯೇ **ವಾಯುರ್ಮತಂ ಭಾಗವತಾಭಿಧಮ್** ॥ ೭೪ ॥

**ಸ್ಥಾಪನಂ ದುಷ್ಟದಮನಂ** ದ್ವಯಮೇವ ಪ್ರಯೋಜನಮ್ ॥
ನಾನ್ಯತ್ಪ್ರಯೋಜನಂ ವಾಯೋರ್ದೇವೇ ವೈರೋಚನಾತ್ಮಕೇ ॥ ೭೫ ॥
ಅವತಾರತ್ರಯೇ ವೀಂದ್ರ ದುಃಖಂ ಗರ್ಭಾದಿಸಂಭವಮ್ ॥
ನಾಸ್ತಿ ನಾಸ್ತ್ಯೇವ ವಾಯೋಸ್ತು ತಥಾ ರೋಚನಜನ್ಮನಿ ॥ ೭೬ ॥
ಶುಕ್ಲಶೋಣಾದಿ ಸಂಬಂಧೋ ಅವತಾರ ಚತುಷ್ಟಯೇ ॥
ನಾಸ್ತಿ ನಾಸ್ತ್ಯೇವ ಪಕ್ಷೀಂದ್ರ ಯತೋ ನಾಸ್ತ್ಯಶುಭಂ ತ್ವತಃ ॥ ೭೭ ॥
**ಪೂರ್ಣಗರ್ಭಂ ಸಮಾಶೋಷ್ಯ ಸಮಯೇ ಪ್ರಸವಸ್ಯ ಚ** ॥
ಪ್ರಾದುರ್ಭವತಿ ದೇವೇಶೋ ಅವತಾರಚತುಷ್ಟಯೇ ॥ ೭೮ ॥
ತ್ರಯೋ ವಿಂಶತಿ (ತ್ರಿಂಶತಿ) ರೂಪಾಣಾಂ ವಾಯೋಶ್ಚೈವ ಖಗೇಶ್ವರ
ರೂಪೈಃ ಚತುಷ್ಟಯೈಶ್ಚೈವ ಬ್ರಹ್ಮಣಃ ಪರಮೇಷ್ಠಿನಃ ॥ ೭೯ ॥
ಸಮ ಏವ ನ ಸಂದೇಹೋ ಜ್ಞಾನಾನಂದಸುಖಾದಿಕೇ ॥
ಏವಮೇವ ವಿಜಾನೀಯಾನ್ನಾನ್ಯಥಾ ತು ಕಥಂಚನ ॥ ೮೦ ॥
ನಿರ್ಣಯಶ್ರವಣಾದೇವ ಮೋಕ್ಷಂ ಯಾತಿ ನ ಸಂಶಯಃ ॥

## ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ

"ಅನಿಲ" ಇತಿ॥ ವಾಯುಃ ಇತಿ ಕತ್ರಾರ್ಥತ್ವಾನಾ ಅನ್ವಯಃ ॥ ಗಮಯತಿ ಇತಿ ಗಃ ॥ ಏತದಪಿ ಅರ್ಥಾನುವಾದಪರಮ್ ॥ 'ಆನಂದಃ' ಸುಖಂ ॥ 'ದಶಮತಿಃ' ಮಧ್ವಾಚಾರ್ಯಃ ॥ 'ಅನಿದ್ರಃ' ಸರ್ವದಾ ಜಾಗ್ರತೇಃ ॥ 'ಪರಿಸರ' ಸರ್ವತ್ರ ಗಂತೃತ್ವಾತ್ ॥ 'ಅಖಿಣ' ಅವಿದಾರಣೀಯಃ ॥ ಅಸುರೈಃ ಅಭೇದ್ಯಃ ಇತಿ ಯಾವತ್ ॥ ವಿಧಿ-ಚತುರ್ಮುಖಾಖ್ಯೌ ಅಪರೌ ಬ್ರಹ್ಮಣಃ ಅವತಾರೌ॥ ಬ್ರಹ್ಮಣಃ ನಾವತಾರಃ ಇತ್ಯೇತತ್ ಭಗವದನ್ಯಸ್ಮಾತ್ ಇತಿ ಪರಮ್ ॥ ವಾಯೋಸ್ತು ಪ್ರಧಾನಃ (೧) ಸೂತ್ರಂ (೨) ಧೃತಿಃ (೩) ಸ್ಮೃತಿಃ (೪) ಮೇಧಾ (೫) ಮುಕ್ತಿಃ (೬) ವಿಷ್ಣುಭಕ್ತಿಃ (೭) ಚಿತ್ತಂ (೮) ಮಹಾನ್ ಪ್ರಭುಃ (೯) ಬಲಂ (೧೦) ಸ್ಥಿತಿ

(೧೧) ಋಜುಃ ಯೋಗಃ (೧೨) ಪ್ರಾಜ್ಞಃ (೧೩) ಪ್ರಾಣ (೧೪) ಮಹಾ
ಗುರುಃ (೧೫) ಮಹಾಧ್ಯಾತಾ (೧೬) ವಿಜ್ಞಾನಂ (೧೭) ವೈರಾಗ್ಯಂ (೧೮)
ರೋಚನಂ(೧೯)ಸುಖಂ (೨೦) ಹನೂಮಾನ್ (೨೧) ಭೀಮಸೇನಃ (೨೨)
ಆನಂದತೀರ್ಥಃ (೨೩) ಮೂಲೇ ಕೇಷಾಂಚಿದನುಕ್ತಾನಾಮಪಿ ಗ್ರಹಣಂ
ಉಪಲಕ್ಷಣಯಾ ॥ ವಾಸುದೇವಾತ್ ಸಮುತ್ಪನ್ನಃ ಮಾಯಾಯಾಂ ಪುರು
ಷಾಖ್ಯಃ ವಿರಿಂಚಿಃ ॥ ಅನಿರುದ್ಧಾತ್ ಶಾಂತ್ಯಾಂ ತು ಮಹತ್ತತ್ತ್ವತನುಃ ॥
ಮಹಾವಿರಿಂಚಿಃ ಇತಿ ಸಂಜ್ಞಾ ॥ ೨ ॥ ರಜಸ್ತನೋಃ ವಾಸುದೇವಾತ್
ಮಾಯಾಯಾಂ ಜಾತಃ ವಿಧಿಸಂಜ್ಞಃ ॥ ೩ ॥ ಬ್ರಹ್ಮಾಂಡಾಂತಃ ಪದ್ಮ
ನಾಭಾತ್ ಜಾತಃ ಚತುರ್ಮುಖಃ ॥ ೪ ॥ ಸಂಕರ್ಷಣಾಚ್ಚ ಜಯಾ
ತ್ಮಜಃ ಸ ವಾಯುಃ ಪ್ರಥಮೋ ಜ್ಞೇಯಃ ॥ 'ಪ್ರಧಾನ' ಇತಿ ಲೋಕ
ಚೇಷ್ಟಾಪ್ರದತ್ವಾತ್ ಸೂತ್ರನಾಮಾ ॥ ಬನಯಾರ್ಣಂ ಸ್ಥಿತಂ ವಿಷ್ಣುಂ
ಧೈರ್ಯೇಣ ಸ ಸ್ತೋತುಮೋಽವ ಸಃ । ಧೃತಿರೂಪಂ ಯದಿದಂ ವಾಯುಃ
ತಸ್ಮಾತ್ ಧೃತಿಃ । ಸರ್ವೇಷಾಂ ಚ ಹೃದಿ ಸ್ಥಿತ್ವಾ ಸ್ಮರತೇ ಸರ್ವದಾ
ಹರಿಮ್ ॥ ಅತಃ ವಾಯುಃ ಸ್ಮೃತಿಃ ॥ "ಪಯೋಬ್ಧಿಮಧ್ಯಗಂ ಚ ಮೇ
ಸುಪದ್ಮ ಯಥೇಷ್ಟತಃ ಗಮಿಷ್ಯಸಿ" ಇತ್ಯುಕ್ತನ್ಯಾಯೇನ ॥ ಅಥವಾ
ವಾಯುರೇವೈಕಃ ಶ್ವೇತದ್ವೀಪಗತಂ ಹರಿಂ ಸ್ಮರತೇ ತತಃ ಸ್ಮೃತಿಃ ॥
ಸರ್ವೇಷಾಂ ಚ ಹೃದಿ ಸ್ಥಿತ್ವಾ ಜ್ಞಾನಂ ವಿಷ್ಣೋಃ ಉದೀರಯನ್
ಮೇಧಾ ॥ ಜ್ಞಾನದ್ವಾರೇಣ ಭಕ್ತಾನಾಂ ಆಜ್ಞಯಾ ಮುಕ್ತಿದಃ ಹರೇಃ ॥
ಮುಕ್ತಿಃ ॥ ವಿಷ್ಣೋಃ ಭಕ್ತಿಂ ವರ್ಧಯತಿ ಭಕ್ತಾನಾಂ ಹೃದಿ ಸಂಸ್ಥಿತಃ
ವಿಷ್ಣುಭಕ್ತಿಃ ॥ ಅಸೌ ಸರ್ವಜೀವಾನಾಂ ಚಿತ್ತಸ್ಥಂ ಜ್ಞಾತುಂ ಚಿತ್ರರೂಪಂ
ಯಯೌ ವಾಯುಃ ಚಿತ್ರವರ್ ॥ ಸದಾರಾಣಾಂ ಪ್ರಭೂಣಾಂ ದೇವಾನಾಂ
ಪ್ರಭುತ್ವಾತ್ ಮಹಾಪ್ರಭುಃ ॥ ಸರ್ವೇಷಾಂ ಹೃದಿ ಸ್ಥಿತ್ವಾ ದದಾತಿ
ಬಲಮುತ್ತಮಮ್ ಅತಃ ಬಲಃ ॥ ಸರ್ವ ಹೃದಿ ಸ್ಥಿತ್ವಾ ಪುತ್ರಪೌತ್ರಾದಿ-
ಕಾನ್ ಜನಾನ್ ಪಾಲಯತಿ ತಸ್ಮಾತ್ ಸ್ಥಿತಿಃ ॥ ಅನಾದ್ಯನಂತಕಾಲೇ
ಕಾಮ್ಯಪ್ರಜಾರಾಹಿತ್ಯಾತ್ ಋಜುರ್ಯೋಗಃ ॥ ಹರಿಂ ವಾಯುಃ ದರ್ಶ
ಯತಿ ಹ್ಯಪರೋಕ್ಷ್ಯೇಣ ಚಾಂಡಜ ॥ ಮೋಕ್ಷಾಧಿಕಾರಿಣಾಂ ಕಾಲೇ ತತಃ
ಪ್ರಾಜ್ಞಃ ॥ ಪರೋಕ್ಷೇಣಾಪಿ ಸರ್ವೇಷಾಂ ಹರಿಂ ದರ್ಶಯತೇ ಸದಾ ॥

ಜ್ಞಾನಂ ॥ ಹಿತಾಹಿತೋಪದೇಷ್ಟೃತ್ವಾತ್ ಭಕ್ತಾನಾಂ ಹೃದಿ ಸಂಸ್ಥಿತಃ । ಅತಃ ಗುರುಃ ॥ ಯೋಗಿನಾಂ ಹೃದಯೇ ಸ್ಥಿತ್ವಾ ಸದಾ ಧ್ಯಾತಿ ಹರಿಂ ಪರಂ ॥ ಪಾರ್ಥಕ್ಯೇನಾಪಿ ತಂ ಧ್ಯಾತಿ ಅತಃ ಮಹಾಧ್ಯಾತಾ ॥ ಯಾವದ್ಯೋಗ್ಯಾನುಸಾರೇಣ ವಿಜಾನಾತಿ ಹರಿಂ। ರುದ್ರಾದ್ಯಜ್ಞಾಯಮಾನಾಂಶ್ಚ ಗುಣಾನ್ ವಿಜಾನಾತಿ ॥ ಅತಃ ವಿಜ್ಞಾನಃ ॥ ಕಾಮ್ಯಕರ್ಮತ್ಯಾಗಾತ್ ವೈರಾಗ್ಯಃ ॥ ಯದ್ವಾ ಯೋಗಿನಾಂ ಹೃದಯೇ ಸ್ಥಿತ್ವಾ ವೈರಾಗ್ಯಂ ಸಂಜನಯತಿ ॥ ತಸ್ಮಾತ್ ವೈರಾಗ್ಯಂ ॥ ದೇವರ್ಷಿ ನರಾಂತಸುಖಾಂಶಂ ಭಜತೇ ವಾಯುಃ॥ ತತಃ ಸುಖಂ ॥ ಚತುರ್ದಶಸು ಇಂದ್ರೇಷು ದ್ವಿತೀಯಃ ॥ ಸ ವಾಯುಃ ಹರಿತತ್ತ್ವೇಷು ರುಚಿಂ ಹ್ಯಾಪಾದಯತೇ ಸದಾ ॥ ಅತಃ ರೋಚನಃ ॥ ೭ ॥

## ಕನ್ನಡಾರ್ಥ

ವಾಯುವು ಇಂಥವನೆಂಬುದಾಗಿ ವಿಶೇಷ್ಯ ಅಥವಾ ಕರ್ತೃಭಾವದಿಂದ ಅನ್ವಯವನ್ನು ತಿಳಿಯಬೇಕು. ವಿಮುಕ್ತಿಯನ್ನು 'ಗಮಯತಿ' ಹೊಂದಿಸುವನು. ಆದುದರಿಂದ 'ವಿಮುಕ್ತಿಗ' ಎಂದು 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ವೇದಾರ್ಥ ಅನುವಾದ ರೂಪವಾಗಿರುತ್ತದೆ. 'ಆನಂದ' ಸುಖ, 'ದಶಮತಿ' ಮಧ್ವಾಚಾರ್ಯರು, 'ಅನಿದ್ರ' ಸರ್ವದಾ ಜಾಗ್ರತರಾದುದರಿಂದ ಅನಿದ್ರರೆನಿಸುವರು. ಸರ್ವತ್ರ ಸಂಚರಿಸುವುದರಿಂದ 'ಪರಿಸರ' ಎನಿಸುವರು. ಸೀಳಲು ಅಸಾಧ್ಯವಾದ ಕಲ್ಲಿನಂತಿರುವವನಾದುದರಿಂದ 'ಅಖಣಾಶ್ಮ' ಎಂದು ಹೆಸರು. ಅಂದರೆ ಅಸುರರಿಂದ ಅಭೇದ್ಯನೆಂದು ತಾತ್ಪರ್ಯ. 'ವಿಧಿ', 'ಚತುರ್ಮುಖ' ಇವೆರಡು ಚತುರ್ಮುಖನ ಹೆಸರುಗಳು. ಬ್ರಹ್ಮನ ಅವತಾರಗಳು. ಬ್ರಹ್ಮನಿಗೆ ಅವತಾರವಿಲ್ಲವೆಂದು ಹೇಳುವ ವಚನಗಳಿಗೆ ಪರಮಾತ್ಮನ ಹೊರತಾಗಿ ಬೇರೆಯವರಿಂದ ಉತ್ಪತ್ತಿ ಎಂಬ ಅವತಾರವಿಲ್ಲವೆಂದು ತಾತ್ಪರ್ಯ. ಪ್ರಧಾನ, ಸೂತ್ರ, ಧೃತಿ, ಸ್ಮೃತಿ, ಮೇಧಾ, ಮುಕ್ತಿ, ವಿಷ್ಣುಭಕ್ತಿ, ಚಿತ್ತ, ಮಹಾಪ್ರಭು, ಬಲ, ಸ್ಥಿತಿ, ಋಜುಯೋಗ, ಪ್ರಾಜ್ಞ, ಜ್ಞಾನ, ಮಹಾಗುರು, ಮಹಾಧ್ಯಾತಾ, ವಿಜ್ಞಾನ, ವೈರಾಗ್ಯ, ರೋಚನ, ಸುಖ, ಹನೂಮಾನ್, ಭೀಮಸೇನ,

ಆನಂದತೀರ್ಥ ಎಂಬುದಾಗಿ ವಾಯುದೇವರಿಗೆ ರೂಪಗಳಿರುವುದಾಗಿ ತಿಳಿಯಬೇಕು. ಮೂಲ ಪದ್ಯದಲ್ಲಿ ಕೆಲವೇ ರೂಪಗಳನ್ನು ಹೇಳಿದ್ದರೂ ಈ ಎಲ್ಲ ರೂಪಗಳನ್ನು ಉಪಲಕ್ಷಣಾವೃತ್ತಿಯಿಂದ ಸಂಗ್ರಹಿಸಿ ತಿಳಿದು ಕೊಳ್ಳಬೇಕು.

ವಾಸುದೇವನಿಂದ ಮಾಯಾನಾಮಕ ಲಕ್ಷ್ಮಿಯಲ್ಲಿ ಹುಟ್ಟಿದವನು ಪುರುಷನೆಂಬ ವಿರಿಂಚಿಯು. ಅನಿರುದ್ಧನಿಂದ ಶಾಂತಾನಾಮಕ ಲಕ್ಷ್ಮಿ ಯಲ್ಲಿ ಜನಿಸಿದವನು ಮಹತ್ತತ್ತ್ವಾಭಿಮಾನಿಯಾದ ವಿರಿಂಚಿಯು. ಅವನಿಗೆ ಮಹಾವಿರಿಂಚಿಯೆಂದು ಹೆಸರು. ರಜೋನಿಯಾಮಕನಾದ ವಾಸುದೇವ ನಿಂದ ಮಾಯಾದಲ್ಲಿ ಹುಟ್ಟಿದವನಿಗೆ ವಿಧಿಯೆಂದು ಹೆಸರು. ಬ್ರಹ್ಮಾಂಡ ದಲ್ಲಿ ಪದ್ಮನಾಭನಿಂದ ಹುಟ್ಟಿದವನಿಗೆ ಚತುರ್ಮುಖನೆಂದು ಹೆಸರು.

ಸಂಕರ್ಷಣನಿಂದ ಜಯಾದಲ್ಲಿ ಉತ್ಪನ್ನನಾದ ವಾಯುವಿಗೆ ಪ್ರಧಾನ ನೆಂದು ಹೆಸರು. ಲೋಕಚೇಷ್ಟಾಪ್ರದರಾದುದರಿಂದ ಸೂತ್ರನಾಮಕನು.

ಬದರಿಕಾಶ್ರಮದಲ್ಲಿರುವ ನಾರಾಯಣನನ್ನು ಧೈರ್ಯದಿಂದ ಸ್ತುತಿ ಸಲು ಆ ರೂಪವನ್ನು ಹೊಂದಿದರಾದುದರಿಂದ ಅವರಿಗೆ ಧೈರ್ಯ (ಧೃತಿ) ಎಂದು ಹೆಸರು ಬಂದಿರುತ್ತದೆ. ಸರ್ವರ ಹೃದಯದಲ್ಲಿದ್ದು ಸರ್ವದಾ ಹರಿಯನ್ನು ಸ್ಮರಿಸುವುದರಿಂದ ಸ್ಮೃತಿಯೆಂದು ವಾಯುದೇವರಿಗೆ ಹೆಸರು ಬಂದಿದೆ. ಅಥವಾ ತಾತ್ಪರ್ಯನಿರ್ಣಯದಲ್ಲಿ ಹೇಳಿದಂತೆ ಶ್ವೇತದ್ವೀಪ ದಲ್ಲಿರುವ ಹರಿಯ ರೂಪವನ್ನು ಶ್ರೀ ವಾಯುದೇವರೊಬ್ಬರೇ ಸದಾ ಸ್ಮರಿ ಸುತ್ತಿರುವುದರಿಂದ 'ಸ್ಮೃತಿ' ಎಂದು ಅವರಿಗೆ ಹೆಸರು. ಸರ್ವರ ಹೃದಯ ದಲ್ಲಿದ್ದು ಜ್ಞಾನವನ್ನು ಜನಯಿಸುವುದರಿಂದ 'ಮೇಧಾ' ಎನ್ನುತ್ತಾರೆ. ಜ್ಞಾನದ ಮುಖಾಂತರವಾಗಿ ಭಕ್ತರಿಗೆ ಮುಕ್ತಿಯನ್ನು ಹರಿಯ ಆಜ್ಞೆಯಿಂದ ಕೊಡುವುದರಿಂದ 'ಮುಕ್ತಿ' ಎಂದು ಹೆಸರು.

ಭಕ್ತರ ಹೃದಯದಲ್ಲಿದ್ದು ಅವರಿಗೆ ವಿಷ್ಣುವಿನಲ್ಲಿ ಭಕ್ತಿಯನ್ನು ಹೆಚ್ಚಿ ಸುವುದರಿಂದ 'ವಿಷ್ಣುಭಕ್ತಿ'ಯೆಂದು ಹೆಸರು.

ಸರ್ವಜೀವರ ಚಿತ್ತಸ್ಥ ಹರಿಯನ್ನು ತಿಳಿದ ಆ ಚಿತ್ತರೂಪನಾದುದ ರಿಂದ ಚಿತ್ತವೆನ್ನುತ್ತಾರೆ.

ಸತೀಸಮೇತರಾದ ಪ್ರಭುಗಳಾದ ಸಮಸ್ತ ದೇವತೆಗಳಿಗೂ ಸದಾ ಪ್ರಭುವದುದರಿಂದ ಮಹಾಪ್ರಭು ಎಂದು ಹೆಸರು.

ಸರ್ವರ ಹೃದಯದಲ್ಲಿದ್ದು ಉತ್ತಮ ಬಲವನ್ನು ಕೊಡುವುದರಿಂದ ಬಲವೆಂದು ಹೆಸರು.

ಸರ್ವರ ಹೃದಯದಲ್ಲಿದ್ದು ಪುತ್ರ-ಪೌತ್ರ ಮುಂತಾದ ಜನರನ್ನು ಪಾಲಿಸುವುದರಿಂದ ಸ್ಥಿತಿಯೆಂದು ಹೆಸರು.

ಅನಾದ್ಯನಂತಕಾಲದಲ್ಲಿ ಕಾಮ್ಯಪೂಜಾ ರಹಿತರಾದುದರಿಂದ 'ಋಜುಯೋಗ'ವೆನಿಸುವರು. ಅಪರೋಕ್ಷ ಜ್ಞಾನದಿಂದ ಹರಿಯನ್ನು ವಾಯುದೇವರು ತೋರಿಸಿ ತಿಳಿಸಿಕೊಡುವುದರಿಂದ ಪ್ರಾಜ್ಞರೆಂದು ಅವರಿಗೆ ಹೆಸರು. ಪರೋಕ್ಷ ಜ್ಞಾನವನ್ನು ಎಲ್ಲರಿಗೂ ಕೊಟ್ಟು ಅದರಿಂದ ಹರಿಯನ್ನು ತೋರಿಸುವುದರಿಂದ ಅವರಿಗೆ 'ಜ್ಞಾನ'ವೆನ್ನುತ್ತಾರೆ. ಭಕ್ತರ ಹೃದಯ ದಲ್ಲಿದ್ದು ಅವರಿಗೆ ಹಿತಾಹಿತಗಳನ್ನು ಉಪದೇಶಿಸುವುದರಿಂದ ಗುರುಗಳೆನಿ ಸುತ್ತಾರೆ. ಯೋಗಿಗಳ ಹೃದಯದಲ್ಲಿದ್ದು ಸದಾ ಹರಿಯನ್ನು ಧ್ಯಾನಿ ಸುವುದರಿಂದಲೂ, ಪೃಥಕ್ಕಾಗಿಯೂ ಶ್ರೀಹರಿಯನ್ನು ಸದಾ ಧ್ಯಾನಿಸುವುದ ರಿಂದಲೂ ವಾಯುದೇವರಿಗೆ ಮಹಾಧ್ಯಾತವೆಂದೆನ್ನುತ್ತಾರೆ. ರುದ್ರ ಮುಂತಾದವರಿಂದ ತಿಳಿಯಲಾಗದ ಗುಣಗಳನ್ನು ತಿಳಿಯುವುದರಿಂದಲೂ, ಯೋಗ್ಯತಾನುಸಾರವಾಗಿ ಹರಿಯನ್ನು ತಿಳಿಯುವುದರಿಂದಲೂ 'ವಿಜ್ಞಾನ' ವೆನ್ನುತ್ತಾರೆ. ಕಾಮ್ಯಕರ್ಮಗಳನ್ನು ಬಿಟ್ಟಿರುವುದರಿಂದ ವೈರಾಗ್ಯವೆನ್ನು ತ್ತಾರೆ. ಅಥವಾ ಯೋಗಿಗಳ ಹೃದಯದಲ್ಲಿದ್ದು ನಿತ್ಯದಲ್ಲಿಯೂ ವೈರಾಗ್ಯ ವನ್ನು ಹುಟ್ಟಿಸುವುದರಿಂದ ವೈರಾಗ್ಯವೆನ್ನುತ್ತಾರೆ.

ದೇವ, ಋಷಿ, ನರ ಮುಂತಾದವರೆಲ್ಲರ ಸುಖಾಂಶಗಳಲ್ಲಿಯ ತನ್ನ ಸಾರಾಂಶವನ್ನು ಸ್ವೀಕರಿಸುವುದರಿಂದ 'ಸುಖ'ವೆನಿಸಿಕೊಳ್ಳುತ್ತಾರೆ.

ಹದಿನಾಲ್ಕು ಇಂದ್ರರಲ್ಲಿ ಎರಡನೆಯ ಇಂದ್ರನು ರೋಚನನಾಮ ಕನು–ವಾಯುದೇವರೇ ! ಅವನು ಹರಿತತ್ವ ವಿಷಯದಲ್ಲಿ ಸದಾ ರುಚಿ ಯುಕ್ತನೂ, ರುಚಿಯನ್ನು ಹುಟ್ಟಿಸುವವನೂ ಆದುದರಿಂದ ರೋಚನ ನೆನಿಸುತ್ತಾನೆ. ॥ ೭ ॥

**ಅವತರಣಿಕಾ:** – ಹಿಂದೆ ಪದ್ಯ೬-೭ ಹೇಳಿದ ರೂಪಗಳ ಮಾಹಾತ್ಮ್ಯ ಬೃಹದಾರಣ್ಯ ಭಾಷ್ಯದಂತೆ ವಾಯುರೂಪಗಳ ಮಹಿಮೆ ವರ್ಣಿಸುತ್ತಾರೆ.

**ಮಾತರಿಶ್ವ ಬ್ರಹ್ಮರು ಜಗ- ।**
**ನ್ಮಾತೆ ಗಧವಮಾಧೀನರೆನಿಪರು ।**
**ಶ್ರೀತರುಣಿವಲ್ಲಭನು ಈರ್ವರೊಳಾವ ಕಾಲದಲಿ ॥**
**ನೀತ ಭಕ್ತಿ ಜ್ಞಾನ ಬಲರೂ ।**
**ಸಾತಿಶಯದಿಂದಿದ್ದು ಚೇತಾ ।**
**ಚೇತನಗಳೊಳು ವ್ಯಾಪ್ತರೆನಿಪರು ತತ್ತದಾಹ್ವಯದಿ ॥ ೮ ॥**

**ಪದ್ಯಾರ್ಥ :**—ಮಾತರಿಶ್ವ=ಮಾತರಿ ಶ್ವದತೀತಿ,ಮಾತುರಿಶ್ವ=ಅಂತ ರಿಕ್ಷದಲ್ಲಿ ಸಂಚಾರಮಾಡುವ ವಾಯು, ಗತಿಗಮನಪ್ರದ ವಾಯುದೇವರು ಬ್ರಹ್ಮರು, ಚತುರ್ಮುಖ ಪ್ರಸಿದ್ಧರು. ವಾಯು ಬ್ರಹ್ಮದೇವರಿಬ್ಬರು. ಜಗನ್ಮಾತೆ ಗಧಮಾಧೀನರೆನಿಪರು=ಜಗತ್ತಿಗೆ ತಾಯಿಯಾದ ಶ್ರೀ ರಮಾ ದೇವಿಯರಿಗೆ ಸದಾ ಕಡಿಮೆ ಎನಿಸುತ್ತಾರಲ್ಲವೆ, ಸದಾ ರಮೆಯು ಮತ್ತು ಶ್ರೀಹರಿಯ ಅಧೀನರಾಗಿ ವಶದಲ್ಲಿರುವರು. ಶ್ರೀತರುಣಿವಲ್ಲಭನು=ನಿತ್ಯ ಮುಕ್ತಳು, ಸನಾತನಳು ಆಗಿ ಸದಾ ತಾರುಣ್ಯಾವಸ್ಥೆಯಲ್ಲಿ ಇರುವ ರಮಾ ದೇವಿ ಪತಿಯು. ಶ್ರೀಹರಿಯು ಈರ್ವರೊಳು=ವಾಯು ಬ್ರಹ್ಮರೂ ಇಬ್ಬ ರಲ್ಲಿ ಆವಕಾಲದಲಿ=ನಿತ್ಯದಲ್ಲಿ, ಬ್ರಹ್ಮಾಂಡಗತ ರೂಪಗಳಲ್ಲಿಯೂ, ಮುಕ್ತಿ ಯಲ್ಲಿಯೂ ಸದಾ ನೀತ=ನಿಯತ ಒಂದೇ ಸಮಾನವಾಗಿ ಸರ್ವಜೀವರಿಂದ ಅಧಿಕವಾದ, ಭಕ್ತಿ=ಭಾವೋ ಭಕ್ತಿರುಚ್ಯತೇ ॥ ವಿಶೇಷ ಭಕ್ತಿ, ಜ್ಞಾನ, ಬಲ ಇತ್ಯಾದಿ ಗುಣ ರೂಪದಿಂದ ಬ್ರಹ್ಮವಾಯು ದೇವರಲ್ಲಿ ಅತಿಶಯ ದಿಂದಿದ್ದು, ಹೆಚ್ಚಿನ ರೂಪದಿಂದ ಇದ್ದುದಾದುದರಿಂದ. ಚೇತಾಚೇತನ

ರೊಳು=ಸರ್ವ ಜಂಗಮ ಸ್ಥಾವರ ಜೀವಿಗಳಲ್ಲಿ ಅಚೇತನವಾದ ಜಡಗಳಲ್ಲಿ ತತ್ತದಾಖ್ಯ ಯುದಿ=ಶ್ರೀಹರಿಯಂತೆ ಶ್ರೀಹರಿಯ ರಮೆ ವಶರಾಗಿ ಆಯಾ ನಾಮಗಳಿಂದ ಕರೆಸುತ್ತ, ವ್ಯಾಪ್ತರೆನಿಸಿರು ಸಕಲರಲ್ಲಿ, ಸರ್ವಸ್ಥಳದಲ್ಲಿ ವ್ಯಾಪಿಸಿಕೊಂಡಿಹರು.

**ಭಾವಸೂಚನ** :—ಮಾತರಿಶ್ವೇತಿ ‖ ಜಗನ್ಮಾತಾ ಲಕ್ಷ್ಮೀಃ‖ ನೀತಾ ನಿಯಮೇನ ‖೮‖ ವ್ಯಾ. ದಾ. ಸಿ. ಕೌ. ಕಾರರು ಬೃಹದ್ಭಾಷ್ಯ ಪ್ರಮಾಣ ಕೊಟ್ಟಿದ್ದಾರೆ.

## ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ

'ಮಾತರಿಶ್ವ' ಇತಿ ‖ ವಾಯುಃ ‖ 'ಈರ್ವ' ಇವರು ‖ 'ನೀತಃ ನಿತ್ಯದಿಂ ‖ ತತ್ಪ್ರವರ್ತ್ಯೇನ ತತ್ತದಿತ್ಯಸ್ಯ ವ್ಯಾಪ್ತಪದೇನ ಅನ್ವಯಃ ‖ 'ಪ್ರಾಣಃ ಸೂತ್ರಂ ಮಹಾನ್ ಬ್ರಹ್ಮಾ ಚಿತ್ತಂ ವಾಯುಃ ಬಲಂ ಧೃತಿಃ ‖ ಸ್ಥಿತಿಃ ಯೋಗಶ್ಚ ವೈರಾಗ್ಯಂ ಜ್ಞಾನಂ ಪ್ರಜ್ಞಾ ಸ್ಮೃತಿಃ ಸುಖಮ್ ‖ ಮೇಧಾ ಮುಕ್ತಿಃ ವಿಷ್ಣುಭಕ್ತಿಃ ಆದಿಗೋಪೋ ಮಹಾಪ್ರಭುಃ ‖ ಋಜುಃ ಸಮಾನಃ ವಿಜ್ಞಾತಾ ಮಹಾಧ್ಯಾತಾ ಮಹಾಗುರುಃ ‖ ಹನೂಮಾನ್ ಭೀಮ ಆನಂದ' ಇತ್ಯಾದಿ ಬಹುರೂಪಿಣಃ ‖ ಆವಿಷ್ಟಃ ವಿಷ್ಣುರೇತೇಷು ನ ವಿಷ್ಣುಃ ತತ್ಸ್ವರೂಪಕಃ ‖ ವಿಷ್ಣೋಃ ಪ್ರಿಯತ್ವೇ ತದ್ಭಕ್ತೌ ತದ್ ಜ್ಞಾನೇ ಚ ಶ್ರಿಯಶ್ಚ ತೇ ‖ ಮುಕ್ತಾಃ ಅಪ್ಯವರಾ ನಿತ್ಯಂ ಸರ್ವೇ ಕೋಟಿಗುಣೇನ ಚ ‖ ೮ ‖

## ಕನ್ನಡಾರ್ಥ

'ಮಾತರಿಶ್ವ' ವಾಯು. 'ಈರ್ವರೊಳು' ಎಂಬುದಕ್ಕೆ 'ಇವರಿಬ್ಬರೊಳು' ಎಂದು ಅರ್ಥ. 'ನೀತ' ನಿತ್ಯದಲ್ಲಿಯೂ ಮುಂತಾದವು ಬಲ, ಜ್ಞಾನ ರೂಪಾತಿಶಯದಿಂದ ಚೇತನರೊಳು 'ತತ್ಪ್ರದತ್ತ್ವೇನ ನಿತ್ಯಂ ಇದ್ದು' ಅವರಲ್ಲಿ ಬಲ, ಜ್ಞಾನ, ರೂಪಾತಿಶಯಗಳನ್ನು ಕೊಡುತ್ತ ನಿತ್ಯವಲ್ಲಿಯೂ ಇರುತ್ತ ಎಂದು ಅನ್ವಯಿಸಿ ಅರ್ಥವನ್ನು ತಿಳಿಯಬೇಕು. ಅದರಂತೆ 'ತತ್ತದಾಖ್ಯಯುದಿ' ಎಂಬುದಕ್ಕೂ ಸಹ 'ಚೇತನರೊಳು ವ್ಯಾಪ್ತ' ಎಂಬುದ

ರಿಂದ ಅನ್ವಯವನ್ನು ಹೇಳಬೇಕು. ಪ್ರಾಣ, ಸೂತ್ರ, ಮಹಾನ್, ಬ್ರಹ್ಮ, ಚಿತ್ತ, ವಾಯು, ಬಲ, ಧೃತಿ, ಸ್ಥಿತಿ, ಯೋಗ, ವೈರಾಗ್ಯ, ಜ್ಞಾನ, ಪ್ರಜ್ಞಾ, ಸ್ಮೃತಿ, ಸುಖ, ಮೇಧಾ, ಮುಕ್ತಿ, ವಿಷ್ಣುಭಕ್ತಿ, ಆದಿಗೋಪ್ತ ಮಹಾಪ್ರಭು, ಋಜು, ಸುಖ, ಸಮಾನ, ವಿಜ್ಞಾತಾ, ಮಹಾಧ್ಯಾತಾ, ಮಹಾಗುರು, ಹನೂಮಾನ್, ಭೀಮಸೇನ, ಆನಂದತೀರ್ಥ" ಈ ಮುಂತಾದ ಬಹಳ ರೂಪಗಳು ಇರುವವು. ಶ್ರೀವಿಷ್ಣುವು ಈ ರೂಪಗಳಲ್ಲಿ ಆವೇಶಿಸಿರುತ್ತಾನೆ. ಆದರೆ ವಿಷ್ಣುವಿಗೂ, ವಾಯುವಿಗೂ ಅಭೇದವಿರುವುದಿಲ್ಲ. ಭೇದವೇ ಉಂಟು. ವಿಷ್ಣುವಿಗೆ ಪ್ರಿಯತಮರಾದ ಭಕ್ತರೆಂದರೆ ವಾಯುದೇವರೊಬ್ಬರೇ ! ಅವರಿಗೆ ಸಮಾನರಾದ ವಿಷ್ಣುಪ್ರಿಯರೂ, ವಿಷ್ಣುವಿನಲ್ಲಿ ಭಕ್ತಿಯನ್ನು ಮಾಡತಕ್ಕವರೂ ಯಾರೂ ಇರುವುದಿಲ್ಲ. ಪರಮಾತ್ಮನ ಜ್ಞಾನದಲ್ಲಿಯೂ ಅವರಿಗೆ ಸದೃಶರೂ ಯಾರೂ ಇಲ್ಲ. ಆದರೆ ರಮಾದೇವಿಯರಿಗೆ ವಾಯುದೇವರಿಂದಾಗಲೀ, ಅವರ ಈ ಮುಂತಾದ ರೂಪಗಳಿಂದಾಗಲೀ ಇವೆಲ್ಲ ಗುಣಗಳ ವಿಷಯದಲ್ಲಿ ಕೋಟಿ ಗುಣಗಳಿಂದ ಕಡಮೆಯಾದವುದಳು ॥ ೮ ॥

**ಅವತರಣಿಕಾ** :—ಇನ್ನು ಈ ಪದ್ಯದಿಂದ ಪರಮೇಷ್ಠಿ ಪತ್ನಿರೂಪಗಳ ನಾಮಗಳನ್ನೂ ಗುಣಕ್ರಿಯಾಗಳನ್ನೂ ಸ್ತೋತ್ರಮಾಡುತ್ತಾರೆ.

**ಸರಸ್ವತೀ ವೇದಾತ್ಮಿಕಾ ಭುಜಿ ।**
**ನರಹರೀ ಗುರುಭಕ್ತಿ ಬ್ರಾಹ್ಮೀ ।**
**ಪರಮಸುಖ ಬಲಪೂರ್ಣೆ ಶ್ರದ್ಧಾ ಪ್ರೀತಿ ಗಾಯತ್ರೀ ॥**
**ಗರುಡ ಶೇಷರ ಜನನಿ ಶ್ರೀ ಸಂ- ।**
**ಕರುಷಣನ ಜಯ ತನುಜ ವಾಣೀ ।**
**ಕರಣ ನಿಯಾಮಕೆ ಚತುರ್ದಶ ಭುವನ ಸನ್ಮಾನ್ಯೇ ॥ ೯ ॥**

**ಪದ್ಯಾರ್ಥ** :—ಸರಸ್ವತೀ=ಸೂಕ್ಷ್ಮ ಸೃಷ್ಟಿಯಲ್ಲಿ ಪ್ರಕೃತಿಯೇ ಮೂರನೇ ರೂಪದಿಂದ ಆಸೇ ವರುಷ ಪ್ರದ್ಯುಮ್ನನಲ್ಲಿ ಅವತರಿಸಿದ ರೂಪ. ಪ್ರೀತ್ಯಭಿಮಾನಿ. ವೇದಾತ್ಮಿಕಾ=ಸರ್ವ ವೇದಾಭಿಮಾನಿಗಳಾದ ಕಾರಣ

ವೇದಾತ್ಮಿಕಾ, ವೇದಮಯ ರೂಪಳು, ಭುಜಿ=ವಿಷ್ಣುವಿನ ಪ್ರೀತಿಗಾಗಿಯೇ ಸರ್ವ ಭೋಗಗಳನ್ನು ಅನುಭವಿಸಿ ಸದಾ ಹರಿಗರ್ಪಿಸುವುದರಿಂದ ಭುಜಿ ಎಂದು "ಭುಜ್ಯಂತೇ ಸರ್ವಭೋಗಾ ವಿಷ್ಣುಪ್ರೀತ್ಯರ್ಥಮೇವ ಚ" ಎಂದು ಬ್ರಹ್ಮಾಂಡ ಗರುಡಪುರಾಣ ನರಹರೀ=ನರ ವಿಷ್ಣುವಿನ ರೂಪ, ಹರಿ ಬಿಂಬರೂಪ ಇವೆರಡೂ ಭಗವದ್ರೂಪ ನಾರಸಿಂಹ ಸ್ವರೂಪದಲ್ಲಿರುವ ಹರಿ ಯಲ್ಲಿ ಗುರುಗಳಾದ ಬ್ರಹ್ಮವಾಯುಗಳಲ್ಲಿ ಅತಿಶಯ ಭಕ್ತಿಯುಳ್ಳಾಕೆ. ಬ್ರಾಹ್ಮೀ=ಬ್ರಹ್ಮದೇವರ ಹೆಂಡತಿ, ಪರಮ=ಉತ್ತಮಳಾದ, ಸುಖಪೂರ್ಣೆ= ಸುಖದಿಂದ ಭರಿತವಾದ, ಸುಖರೂಪಿ, ಸುಖಕ್ಕೆ ಅಭಿಮಾನಿ, ಸುಖಾತ್ಮಿಕಾ, ಶ್ರದ್ಧಾ=ಇದು ಭಾರತೀರೂಪವಾದರೂ, ಭಕ್ತಿಯಲಿ ಭಾರತಿಯು ಮುಂದಿನ ಕಲ್ಪದಲ್ಲಿ ಈ ಶ್ರದ್ಧಾದೇವಿಯೇ ಸರಸ್ವತೀ ಪದಕ್ಕೆ ಬರುವ ವಿಶೇಷ ಭಕ್ತಿಯುಳ್ಳವಳಿಗೆ ಶ್ರದ್ಧಾ ಎಂತಲೂ ಕರೆಸುತ್ತಾಳೆ. ಪ್ರೀತಿ= ಪ್ರೀತಿಗೆ ಅಭಿಮಾನಿ ರೂಪವು. ಗಾಯತ್ರೀ=ಸೂಕ್ಷ್ಮ ಸೃಷ್ಟಿಲಸೇ ವರುಷ ಪ್ರದ್ಯುಮ್ನ, ಕೃತಾದ್ವಾರಾ, ಪುರುಷಬ್ರಹ್ಮ, ವಿರಿಂಚಿ ಪ್ರಕೃತಿ ಸಹಿತ ವಾಗಿ ಹುಟ್ಟಲು, ಪ್ರಕೃತಿಯಲ್ಲಿ ವೀರ್ಯವಿಟ್ಟು, ತ್ರಿಭಾಗಮಾಡಿ, ಸತ್ವ ಗಾಯತ್ರೀ, ಸಾವಿತ್ರೀ, ಸರಸ್ವತಿ ಎಂದು ಪ್ರಕೃತಿ ಮೂರು ರೂಪ ತಾಳಿದಳು. ಈ ಗಾಯತ್ರಿಯಲ್ಲಿಯೇ ವಿರಿಂಚಿ, ಬ್ರಹ್ಮ. ವಾಣೀ. ಆವಿರ್ಭೂತ ಗಾಯತ್ರಿ ಯಿಂದ ಜನಿಸಿದ ರೂಪವೇ ವಾಣೀ=ವಾಗಭಿಮಾನಿ ಸರಸ್ವತಿ, ಗರುಡ, ಶೇಷರ ಜನನಿ. ಗಾಯತ್ರಿಯಲ್ಲಿ ಜೀವನಾಮಕ ಶೇಷ, ಸಾವಿತ್ರಿಯಲ್ಲಿ ಕಾಲ ನಾಮಕ ಗರುಡ ಜನಿಸಿದರು. ಕಾರಣ ಗರುಡ ಶೇಷರ ಜನನಿ ಎಂದು ಪ್ರಖ್ಯಾತಿ ಇದೆ. ಶ್ರೀಸಂಕರ್ಷಣ, ಜಯತನುಜ=ಜಯಾದೇವೀಪುತ್ರ, ಸೂತ್ರ ನಾಮಕ ವಾಯುವಿನಲ್ಲಿ ಕಾಲನಾಮಕ ಗರುಡ, ಪ್ರಕೃತಿಯಲ್ಲಿ ಜೀವ ನಾಮಕ ಶೇಷ ಪುಟ್ಟಿದರು. "ಉರುಗಾಕಾರ ಜೀವ, ಕಾಲನಾಮಕನೆಂಬೋ ಗರುಡರುದ್ಭವಿಸಿದರು. ಅಜವಾಯುವಿನಿಂದ" ಎಂದು ವಿಜಯದಾಸರ ಸೃಷ್ಟಿ ಸುಳಾದಿ ಪುಟ ೮೫. ಕರಣನಿಯಾಮಕೆ= ಇಂದ್ರಿಯಗಳು, ಇಂದ್ರಿಯಾಭಿ ಮಾನಿ ದೇವತೆಗಳಿಗೆಲ್ಲ ನಿಯಮನ ಮಾಡುವಳು, ಚತುರ್ದಶ ಭುವನ ಸನ್ಮಾನ್ಯೆ= ಹದಿನಾಲ್ಕು ಲೋಕದಲ್ಲಿಪ್ಪ ಸಕಲರಿಂದ ಮಾನ್ಯಮಾಡಿಸಿ ಕೊಳ್ಳುವಳು. ಈ ಸರಸ್ವತೀ ಅಂಶಿ ಅಂಶಗಳಿಗೆ ಕಿಂಚಿತ್ತು ಭೇದವಿಲ್ಲ.

**ವಿಶೇಷ ಸೂಚನೆ** :—ಸರಸ್ವತೀ ಗಾಯತ್ರಿ ಬುದ್ಧಿ ವಿದ್ಯಾ ಪ್ರೀತಿ ಗುರುಭಕ್ತಿ ಸರ್ವ ವೇದಾತ್ಮಿಕಭುಜಿ ॥ ಪರಮಾನುಭೂತಿ ಸಾವಿತ್ರಿ ಸುಖಾತ್ಮಿಕಾ । ಪರಮೇಷ್ಠಿ ಪತ್ನಿ ನಾಮಗಳೆಂದರಿಮ ಆನಮಿಪೆ ॥ ೮ ॥ ಶ್ರೀಜಗನ್ನಾಥದಾಸರ ಬೃಹತ್ತಾರತಮ್ಯ ಪದ ॥

**ಗರುಡಪುರಾಣ ಬ್ರಹ್ಮಕಾಂಡ** ಅಧ್ಯಾಯ ೧೭ರಲ್ಲಿಯ ಪ್ರಮಾಣ ಶ್ರೀಕೃಷ್ಣ ಉವಾಚ ॥ ಕೃತೌ ಪ್ರದ್ಯುಮ್ನತಶ್ಚೈವ ಸಮುತ್ಪನ್ನೋ **ಖಗೇ**ಶ್ವರ ॥ ಸ್ತ್ರಿಯೌ ದ್ವೇ ಯಮಲೇ ಮದ್ಧ್ಯೇ ಯದೇಕಾ ಯಾ ತಯೋಃ ಸ್ಮೃತಾ॥ ೧ ॥ ವಾಣೇತಿಸಂಜ್ಞಿಕಾ ವೀಂಪ್ರ ಬ್ರಹ್ಮಾಣೀತಿ ಪ್ರಕೀರ್ತಿತಾ ॥ (೧) **ಪುರುಷಾಖ್ಯ** ವಿರಿಂಚಸ್ಯ ಭಾರ್ಯಾ ಹ್ಯಾದ್ಯಸ್ಯ **ವೈ ಸ್ಮೃತಾ ॥ ೨॥** (೨) **ಮಹಾವಿರಿಂಚಿ** ಭಾರ್ಯಾ ತು ಗಾಯತ್ರೀ ಪರಿಕೀರ್ತಿತಾ ॥ ವಿಧಿ ಸಂಜ್ಞಾ ವಿರಿಂಚಸ್ಯ ಭಾರ್ಯಾ (೩) **ಸಾವಿತ್ರಿ** ನಾಮಿಕಾ ॥ ೪ ॥ (೪) ಚತುರ್ಮುಖಸ್ಯ ಭಾರ್ಯಾ ತು **ಸರಸ್ವತೀ** ಪ್ರಕೀರ್ತಿತಾ ॥ ಇತಿ ॥

**ಭಾವಸೂಚನ** :—ಸರಸ್ವತ್ಯವತಾರಾನಾಹ ॥ ಸರಸ್ವತೀತಿ ॥ ತದುಕ್ತಂ ॥ ಸರಸ್ವತೀ ಗಾಯತ್ರೀ ಶ್ರದ್ಧಾ ವಿದ್ಯಾ ಪ್ರೀತಿರೇವ ಚ । ಸರ್ವ ವೇದಾತ್ಮಿಕಾ ಬುದ್ಧಿರನುಭಕ್ತಿ ಸುಖಾತ್ಮಿಕಾ ॥ ಗುರುಭಕ್ತಿ ಹರೌ ಪ್ರೀತಿಃ ಸರ್ವಮಂತ್ರಾತ್ಮಿಕಾ ಭುಜಿ ॥ ೯ ॥

## ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ

ಸರಸ್ವತ್ಯವತಾರಾನಾಹ 'ಸರಸ್ವತಿ' ॥ ಚತುರ್ಮುಖಸ್ಯ ಭಾರ್ಯಾ ವಾಣೀ ಪ್ರದ್ಯುಮ್ನಾತ್ ಕೃತಿಜಾ ॥ ಪುರುಷ ವಿರಿಂಚಿ ಭಾರ್ಯಾ ॥ ಮಹಾವಿರಿಂಚಿ ಭಾರ್ಯಾ ಗಾಯತ್ರೀ ॥ ವಿಧಿನಾಮ ವಿರಿಂಚಿ ಭಾರ್ಯಾ ಸಾವಿತ್ರೀ ॥ ಭಾರತ್ಯವತಾರಾನ್ ಆಹ 'ವೇದ' ಇತಿ ॥ ಸರ್ವವೇದಾಭಿ ಮಾನಿತ್ವಾತ್ ವೇದಾತ್ಮಿಕಾ ಮಹಾಧ್ಯಾತ್ಮ ವಾಯು ಭಾರ್ಯಾ॥ಯಥಾ-ನುಭೂತಂ ಹರಿಂ ಸಮ್ಯಕ್ ದರ್ಶಯತಿ ಇತಿ ಅನುಭೂತಿಃ ॥ ಜ್ಞಾನ ವಾಯುಪತ್ನೀ ॥ ಸದಾ ಸುಖಾತ್ಮಕತ್ವಾತ್ ಸುಖಾತ್ಮಿಕಾ ಸುಖರೂಪ ವಾಯುಭಾರ್ಯಾ॥ ಗುರುಸ್ತು ವಾಯುರೇವೋಕ್ತಃ ತಸ್ಮಿನ್ ಭಕ್ತಿಯುತಾ

ಸದಾ ॥ ಅತಃ ಗುರುಭಕ್ತಿಃ ಮಹಾಗುರು ವಾಯುಪತ್ನೀ ॥ 'ನರಹರಿ' ಇತಿ ಭಕ್ತಿಪದಾನ್ವಯಿ ॥ ಹರಿ ಗುರು ಭಕ್ತಿಃ ಇತ್ಯುಕ್ತಂ ಭವತಿ ॥ ವಿಷ್ಣು ಪ್ರೀತ್ಯರ್ಥಂ ಸರ್ವಭೋಗಾಃ ಭುಜ್ಯಂತೇ ಅತಃ ಭುಜಿಃ ಚಿತ್ತವಾಯೋಃ ಭಾರ್ಯಾ ॥ ರೋಚನೇಂದ್ರಭಾರ್ಯಾ ಶ್ರದ್ಧಾ ॥ ೯ ॥

## ಕನ್ನಡಾರ್ಥ

ಸರಸ್ವತಿಯ ಅವತಾರಗಳನ್ನು ಹೇಳುತ್ತಾರೆ–'ಸರಸ್ವತಿ' ಎಂಬ ಪದ್ಯದಿಂದ ಚತುರ್ಮುಖನ ಪತ್ನಿ ವಾಣೀ ॥ ಅವಳು ಪ್ರದ್ಯುಮ್ನನಿಂದ ಕೃತಿಯಲ್ಲಿ ಹುಟ್ಟಿದವಳು. ಪುರುಷ ವಿರಿಂಚಿಯ ಹೆಂಡತಿಯು ॥ ಪ್ರಧಾನ ನಾಮಕಳು. ಮಹಾ ವಿರಿಂಚಿಯ ಪತ್ನಿ ಗಾಯತ್ರೀ ॥ ವಿಧಿನಾಮಕ ವಿರಿಂಚಿಯ ಹೆಂಡತಿ ಸಾವಿತ್ರಿ ॥ ಭಾರತೀದೇವಿಯ ಅವತಾರಗಳನ್ನು ಹೇಳುತ್ತಾರೆ 'ವೇದಾತ್ಮಿಕಾ' ಎಂಬುದಾಗಿ.

ಸರ್ವವೇದಗಳಿಗೆ ಅಭಿಮಾನಿಯಾದುದರಿಂದ 'ವೇದಾತ್ಮಿಕಾ' ಎಂದು ಭಾರತಿಯ ಹೆಸರು. ವೇದಾತ್ಮಿಕೆಯು ಮಹಾಧ್ಯಾತ್ಮ ವಾಯುಪತ್ನೀ. ಶಾಸ್ತ್ರಗಳಲ್ಲಿ ತಿಳಿದು ಬರುವಂತೆ ಶ್ರೀಹರಿಯನ್ನು ತೋರಿಸುವವಳು ಅನುಭೂತಿಯು–ಜ್ಞಾನವಾಯುವಿನ ಹೆಂಡತಿ. ಸದಾ ಸುಖಸ್ವರೂಪಳಾದುದರಿಂದ ಸುಖಾತ್ಮಕಳು–ಸುಖನಾಮಕ ವಾಯುವಿನ ಪತ್ನಿ. ವಾಯುವೇ ಗುರುವು; ಅವನಲ್ಲಿ ಸದಾ ಭಕ್ತಿವಂತಳಾದುದರಿಂದ ಗುರುಭಕ್ತಿಯು ಗುರು ಭಕ್ತಿನಾಮಕ ವಾಯುಪತ್ನೀ. 'ನರಹರಿ' ಎಂಬ ಪದವು 'ಭಕ್ತಿ' ಎಂಬುವಕ್ಕೆ ಅನ್ವಿತವಾಗುತ್ತದೆ. ವಿಷ್ಣುಪ್ರೀತಿಗಾಗಿ ಸರ್ವಭೋಗಗಳನ್ನು ಭುಂಜಿಸುವುದರಿಂದ 'ಭುಜಿ' ಎಂದು ಹೆಸರು. ಇವರು ಚಿತ್ತನಾಮಕ ವಾಯುವಿನ ಪತ್ನಿಯು. 'ರೋಚನ'ನೆಂಬ ಇಂದ್ರರಾದ ವಾಯುದೇವರ ಪತ್ನಿಯು ಶ್ರದ್ಧಾ ॥ ೯ ॥

**ಅವತರಣಿಕಾ** :— ಈ ಪದ್ಯದಿಂದ ಶ್ರೀ ವಾಯುದೇವರ ಪತ್ನಿ ಭಾರತೀದೇವಿಯರ (ಶ್ರದ್ಧೆ) ಇನ್ನೂ ಅವತಾರಗಳನ್ನು ಹೇಳುತ್ತಾರೆ.

**ಕಾಳಿ ಕಾಶಿಜ ವಿಪ್ರಜೆ ಪಾಂ- ।**
**ಚಾಲಿ ಶಿವಕನ್ಯೇಂದ್ರಸೇನಾ ।**
**ಕಾಲಮಾನೀ ಚಂದ್ರ ದ್ಯುಸಭಾನಾಮ ಭಾರತಿಗೆ ॥**
**ಫಾಳಿ ಬ್ರಹ್ಮರ ಯುವತಿಯರು ಏ- ।**
**ಳೇಳು ಐವತ್ತೊಂದು ಗುಣದಿಂ ।**
**ಕೀಳರೆನಿಪರು ತಮ್ಮ ಪತಿಗಳಿಗಿಂದಲಾವಾಗ ॥ ೧೦ ॥**

**ಪದ್ಯಾರ್ಥ** :—ಕಾಶಿಜ=ಕಾಶೀರಾಜನ ಮಗಳಾದ ಕಾಳಿದೇವಿಯು ಅಚ್ಚ ಭಾರತೀದೇವಿಯರ ಅವತಾರ, ಈ ಕಾಳೀ ಸ್ವಯಂವರದಲ್ಲಿ ಭೀಮ ಸೇನ ದೇವರು ಪರಿಗ್ರಹಿಸಿದರು. ಕಾಶಿಜ, ಕಾಳಿ ವಿಪ್ರಜೆ, ಶಿವಕನ್ಯಾ= ಶಿವನಾಮಕ ಬ್ರಾಹ್ಮಣನಲ್ಲಿ ಅವತರಿಸಿದ ರೂಪ, ಪಾಂಚಾಲಿ=ದ್ರುಪದ ರಾಜನಲ್ಲಿ ಅವತರಿಸಿದ ದ್ರೌಪದಿ ದೇವಿಯರು, ಇಂದ್ರಸೇನಾ=ನಳ ದಮಯಂತಿಯರಲ್ಲಿ ಅವತರಿಸಿದ ರೂಪ, ಕಾಲಮಾನೀ=ಕಾಲಕ್ಕೆ ಮುಖ್ಯ ಅಭಿಮಾನಿಯಾದ ಭಾರತಿಯರು ಅಮುಖ್ಯ. ಕಾಲನಾಮಕ ಗರುಡನನ್ನು ಪೆತ್ತವರು ಇವರೆ. ಚಂದ್ರ=ಚಂದ್ರನಾಮಕರಾಗಿ ಕಾಲಡೀ ಗ್ರಾಮದಲ್ಲಿ ಅವತರಿಸಿದ ರೂಪ, ದ್ಯು=ಆಕಾಶಾಭಿಮಾನಿ, ಸಭಾ=ಪೃಥ್ವ್ಯಭಿಮಾನಿಗಳು ಭಾರತಿ ದ್ಯು ನಾಮಕಳು. ಪೃಥ್ವಿನಾಮಕಳು ಎಂದು ಎರಡು ರೂಪ. "ಪೃಥಿವೀನಾಮಿಕಾ ಶ್ರೀಸ್ತು ದ್ಯೋ ದಿಶೋವಿದ್ಯುದೇವಚೇತಿ.ಛಾಂದೋಗ್ಯ ಭಾಷ್ಯೇ"(ಈ ಸರಿಯಾದ ಅರ್ಥವನ್ನು ತಿಳಿಯದೆ ಹಿಂದೆ ಅಚ್ಚಾದ ಟೀಕಾ ಗಳಲ್ಲಿ "ಕಾಳಿ ದ್ರೌಪದಿ ಕಾಶಿಜಾ ಪಾಂಚಾಲಿ ಶಿವಕನ್ಯೇಂದ್ರ ಸೇನಾಕಾಲ ಮಾನಿಚಂದ್ರ **ವಿದ್ಯುನ್ನಾಮ ಭಾರತಿಗೆ**" ಎಂದು ಮೊದಲಿನ ಅರ್ಥ ಪದ್ಯ ವನ್ನು ತಿದ್ದಿದ್ದಾರೆ) ಫಾಳಿ ಬ್ರಹ್ಮರ ಯುವತಿಯರು=ವಾಯುದೇವರು, ಬ್ರಹ್ಮದೇವರ ಪತ್ನಿಯರು, ಸರಸ್ವತೀ ಭಾರತೀ ದೇವಿಯರು, ಏಳೇಳು= ೭x೭=೪೯+೫೧ ಐವತ್ತೊಂದು ಕೂಡಿಸಿದರೆ ೧೦೦ ಗುಣದಿಂದ, ತಮ್ಮ ಪತಿಗಳಿಂ=ಬ್ರಹ್ಮವಾಯುಗಳಿಗಿಂತಲೂ, ಆವಾಗ ಕೀಳರೆನಿಪರು=ನಿತ್ಯ ದಲ್ಲಿಯೂ ೧೦೦ ಗುಣದಿಂದ ಕಡಿಮೆ ಎನಿಸುತ್ತಾರೆ.

**ಭಾವಸೂಚನ** :—ಕಾಳೀತಿ ॥ ತದುಕ್ತಂ ॥ ಶಿವಕನ್ಯೇಂದ್ರ ಸೇನಾ

ಚ ದ್ರೌಪದೀ ಕಾಶಿಜಾ ತಥಾ ॥ ಚಂದ್ರೇತ್ಯಾದಿಸ್ವರೂಪಾ ಯಾಸ್ತ್ರಾಭ್ಯಾಂ ಶತವರಾ ಇತಿ ॥ ಘಾಳಿ ವಾಯು ॥ ಏಳೇಳು ಐವತ್ತೊಂದು ೭×೭=೪೯+೫೧ =೧೦೦ ಗುಣ-ಕೀಳು ಕಡಿಮೆ.

**ವಿಶೇಷ ಸೂಚನೆ** :—ಗರುಡ ಪುರಾಣ ಬ್ರಹ್ಮಕಾಂಡ ಅಧ್ಯಾಯ ೧೭.. ಪ್ರಮಾಣಗಳು.

ವಕ್ಷ್ಯೇವತಾರಾನ್ ಭಾರತ್ಯಾಃ ಸಾವಧಾನಮನಾಃ ಶೃಣು ॥
ಸರ್ವವೇದಾಭಿಮಾನಿತ್ವಾತ್ ಸರ್ವವೇದಾತ್ಮಿಕಾ ಸ್ಮೃತಾ ॥ ೬ ॥
ಮಹಾಧ್ಯಾತಸ್ಯ ವಾಯೋಸ್ತು ಭಾರ್ಯಾ ಸಾ ಪರಿಕೀರ್ತಿತಾ ॥
ಸುಬುದ್ಧಿಜನಕತ್ವಾತ್ಸಾ ಸಜ್ಜನಾನಾಂ ಖಗೇಶ್ವರ ॥ ೭ ॥
ಅತೋ ಸಾ **ಬುದ್ಧಿ** ನಾಮ್ನೀತಿ ಭಾರತೀ ಸಂಪ್ರಕೀರ್ತಿತಾ ॥
ಮಹಾಧ್ಯಾತಸ್ಯ ವಾಯೋಸ್ತು ಭಾರ್ಯಾ ಸಾ ಪರಿಕೀರ್ತಿತಾ ॥ ೮ ॥

ಯಥಾನುಭೂತಂ ಚ ಹರಿಂ ಸಮ್ಯಗ್ ದರ್ಶಯತಿ ಯತಃ ॥
**ಅತೋಽನುಭೂತಿ ಸಂಜ್ಞಾ** ಸಾ ಭಾರತೀ ಪರಿಕೀರ್ತಿತಾ ॥ ೯ ॥
ಜ್ಞಾನರೂಪಸ್ಯ ವಾಯೋಸ್ತು ಭಾರ್ಯಾ ಸಾ ಪರಿಕೀರ್ತಿತಾ ॥
ಸದಾ ಸುಖಸ್ವರೂಪತ್ವಾದ್ಭಾರತೀತಿ ಸುಖಾತ್ಮಿಕಾ ॥ ೧೦ ॥
ಸುಖರೂಪಸ್ಯ ವಾಯೋಸ್ತು ಭಾರ್ಯಾ ಸಾ ಪರಿಕೀರ್ತಿತಾ ॥
ಗುರುಸ್ತು ವಾಯುರೇವೋಕ್ತಸ್ತಸ್ಮಿನ್ ಭಕ್ತಿಯುತಾ ಸದಾ ॥ ೧೧ ॥

ಅತಸ್ತು ಭಾರತೀ ನಿತ್ಯಂ **ಗುರುಭಕ್ತಿರಿತಿ** ಸ್ಮೃತಾ ॥
ಮಹಾಗುರೋಸ್ತು ವಾಯೋಶ್ಚ ಭಾರ್ಯಾ ವೈ ಸಂಪ್ರಕೀರ್ತಿತಾ ॥೧೨॥
ಹರೌ ಸ್ನೇಹಯುತತ್ವಾಚ್ಚ **ಹರಿಪ್ರೀತಿರಿತಿ** ಸ್ಮೃತಾ ॥
ಧೃತಿರೂಪಸ್ಯ ವಾಯೋಶ್ಚ ಭಾರ್ಯಾ ಸಂಪರಿಕೀರ್ತಿತಾ ॥ ೧೩ ॥

ಸರ್ವ ಮಂತ್ರಾಭಿಮಾನಿತ್ವಾತ್ **ಸರ್ವಮಂತ್ರಾತ್ಮಿಕಾ ಸ್ಮೃತಾ** ॥
ಮಹಾಪ್ರಭೋಸ್ತು ವಾಯೋಶ್ಚ ಭಾರ್ಯಾ ಸಂಪರಿಕೀರ್ತಿತಾ ॥ ೧೪ ॥

ಭುಂಕ್ತೇ ಸಾ ಸರ್ವಭೋಗಾಂಸ್ತು ವಿಷ್ಣುಪ್ರೀತ್ಯರ್ಥಮೇವ ಚ ||
ಅತಸ್ತು ಭಾರತೀ ಜ್ಞೇಯಾ ಭುಜಿ ಸಂಜ್ಞೇತಿ ಕೀರ್ತಿತಾ || ೧೫ ||

ಚಿತ್ತರೂಪಸ್ಯ ವಾಯೋಶ್ಚ ಭಾರ್ಯಾ ಸಾ ಪರಿಕೀರ್ತಿತಾ ||
ರೋಚನೇಂದ್ರಸ್ಯ ಭಾರ್ಯಾ ಸಾ ಶ್ರದ್ಧೇತಿ ಸಂಪ್ರಕೀರ್ತಿತಾ || ೧೬ ||

ಮುಂದೆ ೧೭ ಶ್ಲೋಕದಿಂದ ಇರುವ ಎಲ್ಲ ಪ್ರಮಾಣಗಳನ್ನು ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ಕೊಟ್ಟಿರುತ್ತಾರೆ. ಪಂಪು ಬಿಟ್ಟು ಮುಂದೆ ನೋಡಿರಿ. ಹನುಮದಾದ್ಯವತಾರಗಳಲ್ಲಿ ಭಾರತೀ ರೂಪಗಳನ್ನು ಹೇಳುತ್ತಾರೆ.

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯಪದ :—**

ಶಿವಕನ್ಯ ಇಂದ್ರಸೇನಾ ಕಾಶಿಜಾ ಚಂದ್ರ || ಯುವತಿ ದ್ರೌಪತಿಯು ಭಾರತಿ ರೂಪವೂ || ಪವಮಾನ ಬ್ರಹ್ಮರಿಗೆ ಶತಗುಣಾಧಮು ಸದಾ | (ಮುಂದೆ) ಶಿವನ ರೂಪಗಳ ಈ ಪರಿಯು ಚಿಂತಿಸುತ || ೯ || ಅನಮಿಷೆ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಹನೂಮಜ್ಜನ್ಮನಿ ಶಿವಾತ್ ಜಾತಾ ಭರ್ತೃಯೋಗಂ ನಾಪ || ತ್ರೇತಾಂತೇ ಶಚ್ಯಾದಿಯುತಾ ದಮಯಂತ್ಯಾಂ ನಲಾತ್ ಜಾತಾ ಇಂದ್ರ ಸೇನಾ ಮುದ್ಗಲಗವಾಯುನಾ ವಿಕ್ರೀಡ್ಯ ಮೃತಿಮಾಪ್ಯ ಪೂರ್ವಸ್ತ್ರೀಯುತಾ ಪಂಚಾಲವೇದಿಮಧ್ಯಾದ್ ಉದ್ಭೂತಾ ದ್ರೌಪದೀ|| ಏವಂ ಚ ಪಾಂಚಾಲಿ ಪದಂ ದ್ರೌಪದೀತ್ಯನ್ವೇತಿ || 'ಕಾಶಿ' ಇತಿ ಪ್ರಥಮಪದೇ ಅನ್ವೇತಿ || ತದುಕ್ತಂ ಕೇವಲಾ ಭಾರತೀ ಜ್ಞೇಯಾ ಕಾಶಿರಾಜಸ್ಯ ಕನ್ಯಕಾ || ಕಾಳೀನಾಮ್ನೀ ಭೀಮಪ್ರಿಯಾ || ಏಶಿಷ್ಟೈವ ಕಾಲಡೀಗ್ರಾಮೇ ಸಂಕರಗೃಹೇ ಅವತೀರ್ಣಾ ವಾಯೋಃ ತೃತೀಯರೂಪಾರ್ಥಮ್ ಇತಿ || ಕಾಲಮಾನಿನೀ ಚಂದ್ರಾ || ದ್ಯುಸಭಾಮಾನಿನೀ ದ್ಯೌಃ || ಏಳೇಳು' =೪೯|| ಐವತ್ತೊಂದು ಒಟ್ಟಿಗೆ ೧೦೦ || ಸರಸ್ವತೀ ಚ ಗಾಯತ್ರೀ ಶ್ರದ್ಧಾ ಯಾ ಪ್ರೀತಿರೇವ ಚ || ಸರ್ವವೇದಾತ್ಮಿಕಾ ಬುದ್ಧಿಃ ಅನುಭೂತಿಃ ಸುಖಾತ್ಮಿಕಾ||

ಗುರುಭಕ್ತಿಃ ಹರೌ ಪ್ರೀತಿಃ ಸರ್ವಮಂತ್ರಾತ್ಮಿಕಾ ಭುಜಿಃ ॥ ಶಿವಕನ್ಯೇಂದ್ರ ಸೇನಾ ಚ ದ್ರೌಪದೀ ಕಾಶಿಜಾ ತಥಾ ॥ ಚಂದ್ರೇತ್ಯಾದಿ ಸುರೂಪಾಖ್ಯಾಃ ತೇಭ್ಯಃ ಶತಗುಣಾವರಾಃ ॥ ೧೦ ॥

## ಕನ್ನಡಾರ್ಥ

ಹನುಮಂತ ದೇವರ ಅವತಾರದಲ್ಲಿ ಶಿವನೆಂಬ ಬ್ರಾಹ್ಮಣನಿಂದ ಜನಿಸಿದ ಭಾರತಿಯು ಪತಿಯ ಸಂಬಂಧವನ್ನು ಹೊಂದಲಿಲ್ಲ. ತ್ರೇತಾಯುಗದ ಕೊನೆಯಲ್ಲಿ ದಮಯಂತಿಯಲ್ಲಿ ನಳನಿಂದ ಇಂದ್ರಸೇನಾ ಎಂಬ ಹೆಸರಿನಿಂದ ಭಾರತೀದೇವಿಯು ಪಾರ್ವತಿ, ಶಚೀ, ಶಾಮಳಾ, ಉಷಾ ಈ ನಾಲ್ಕು ದೇವಸ್ತ್ರೀಯರಿಂದ ಯುಕ್ತಳಾಗಿ ಒಂದೇ ದೇಹದಲ್ಲಿ ಅವತರಿಸಿದರು. ಆ ಇಂದ್ರಸೇನಯು 'ಮುದ್ಗಲ'ನೆಂಬ ಬ್ರಾಹ್ಮಣನಲ್ಲಿರುವ ವಾಯುದೇವರಿಂದ ಸಂಬಂಧವನ್ನು ಪಡೆದು, ವಿಹರಿಸಿ ದೇಹ ವಿಯೋಗಿಸಿದಳು. ಮತ್ತು ಹಿಂದಿನಂತೆ ಶಚಿ ಮುಂತಾದವರೊಡನೆ ಕೂಡಿಕೊಂಡು ಭಾರತೀದೇವಿಯೇ (ಇಂದ್ರಸೇನೆಯೇ) ದ್ರುಪದರಾಜನ ಕುಮಾರಿಯೆನಿಸಿ ಅವತರಿಸಿ ದ್ರೌಪದಿಯೆನಿಸಿದಳು. ಮೂಲ ಪದ್ಯದಲ್ಲಿರುವ ಪಾಂಚಾಲಿ ಪದವು 'ದ್ರೌಪದಿ' ಎಂಬ ಪದದೊಡನೆ ಅನ್ವಿತವಾಗಿರುತ್ತದೆ. ಅದರಂತೆ 'ಕಾಶಿಜಾ' ಎಂಬ ಪದವು 'ಕಾಳಿ' ಎಂಬ ಪದಕ್ಕೆ ವಿಶೇಷಣ ವಾಚಕವಾಗಿರುತ್ತದೆ.

ಕಾಶಿರಾಜನಲ್ಲಿ ಭಾರತೀದೇವಿಯು 'ಕಾಳಿ' ಎಂಬ ನಾಮದಿಂದ ಅವತರಿಸಿ ಭೀಮಸೇನ ದೇವರನ್ನು ಸ್ವಯಂವರದಲ್ಲಿ ಮದುವೆಯಾದ ಇತಿಹಾಸವು ಪುರಾಣಪ್ರಸಿದ್ಧವಾದದ್ದು. ಅದರಂತೆ ದ್ರೌಪದಿಯಲ್ಲಿ ಭಾರತೀದೇವಿ ಹಾಗೂ ಪಾರ್ವತಿ, ಶಚಿ, ಶಾಮಲಾ, ಉಷಾ ಇವರುಗಳಿರುವುದು ಭಾರತ ಹಾಗೂ ತಾತ್ಪರ್ಯನಿರ್ಣಯಗಳಲ್ಲಿ ಸ್ಪಷ್ಟವಾಗಿರುತ್ತದೆ. ಪಾರ್ವತೀ ಮುಂತಾದವರು ಬ್ರಹ್ಮದೇವರೆದುರು ವಿಲಾಸಾತಿಶಯವನ್ನು ತೋರಿಸಿದ್ದರಿಂದ ಮನುಷ್ಯರಾಗಿ ಹುಟ್ಟಿದರೆಂದೂ, ಒಂದೇ ದೇಹದಲ್ಲಿದ್ದು ಇವರೆಲ್ಲರೂ ಬ್ರಹ್ಮದೇವರನ್ನು ಮೋಹಗೊಳಿಸಲು ಪ್ರಯತ್ನಿಸಿದ್ದರಿಂದ ಒಂದೇ ದೇಹದಲ್ಲಿಯೇ ಜನಿಸಿರೆಂದೂ ಬ್ರಹ್ಮದೇವರು ಶಾಪವನ್ನು ಕೊಟ್ಟರು. ಪಾರ್ವತೀ

ಮುಂತಾದವರು ಭಾರತೀದೇವಿಯನ್ನು, ಅವರು ಭೂಮಿಯಲ್ಲಿ ಅವತರಿಸಿದಲ್ಲಿ ಅವರ ಶರೀರದಲ್ಲಿ ತಾವಿದ್ದು ಉತ್ತಮರಾದ ವಾಯುದೇವ ಸ್ಪರ್ಶವನ್ನು ಪಡೆದು, ಶಾಪವನ್ನು ಅನುಭೋಗಿಸಿ, ತಮ್ಮನ್ನು ಉದ್ಧರಿಸಬೇಕೆಂದು ಬೇಡಿಕೊಂಡರು. ಆಗ ಭಾರತೀದೇವಿಯರು ಇವರನ್ನು ಅನುಗ್ರಹಿಸಲು ಇವರೊಡನೆ ತಾವು ಅವತರಿಸಿದರು. ಅವುಗಳಲ್ಲಿ ಮೊದಲನೆಯದು ಶಿವ ಕನ್ಯಾ ಎಂಬುದು. ಎರಡನೆಯದು ನಳನಲ್ಲಿ ಹುಟ್ಟಿದುದು–ಇಂದ್ರಸೇನಾ ಎಂಬುದು. ಮೂರನೆಯದು 'ದ್ರೌಪದೀ' ಎಂಬುದು. ನಾಲ್ಕನೆಯದು ಶ್ರೀಮದಾನಂದತೀರ್ಥರ ಅವತಾರ ಕಾಲದಲ್ಲಿ ಆದ 'ಚಂದ್ರಾ' ಎಂಬುದು. ಹನುಮದವತಾರದಲ್ಲಿ ಅವತರಿಸಿದ ಶಿವಕನ್ಯೆಯು ಬಾಲ್ಯದಲ್ಲಿಯೇ ಮೃತಳಾದುದರಿಂದ ಹನುಮಂತನನ್ನು–ಪತಿಯನ್ನು ಹೊಂದಲಿಲ್ಲ. ಅದರಂತೆ ಶ್ರೀಮದಾಚಾರ್ಯರ ಕಾಲದಲ್ಲಿಯೂ ಭಾರತೀದೇವಿಯು ಶಂಕರನೆಂಬ ಬ್ರಾಹ್ಮಣನಲ್ಲಿ 'ಚಂದ್ರಾ' ಎಂಬ ಹೆಸರಿನಿಂದ ಹುಟ್ಟಿ ಬಾಲ್ಯದಲ್ಲಿಯೇ ಮೃತಳಾದಳು. ಹೀಗೆ ಇವುಗಳು ನಾಲ್ಕರು ದೇವಿಯರೊಡನೆಯಾದ ಅವತಾರಗಳು. ಕಾಶಿರಾಜನಲ್ಲಿ ಅವತರಿಸಿದ ಕಾಳೀದೇವಿಯಲ್ಲಿ ಮಾತ್ರ ಹಿಂದಿನಂತೆ ಯಾವ ದೇವಸ್ತ್ರೀಯರೂ ಇರುವುದಿಲ್ಲ. ಆದುದರಿಂದ ಕೇವಲ ಭಾರತೀ ಅವತಾರವೆನಿಸುವುದು.

ಕಾಲಡೀಗ್ರಾಮದಲ್ಲಿ ಶಂಕರನೆಂಬ ಬ್ರಾಹ್ಮಣನ ಮನೆಯಲ್ಲಿ ಚಂದ್ರಾದೇವಿಯು ವಾಯುದೇವರ ಮೂರನೆಯ ರೂಪದ ಸಲುವಾಗಿ ಅವತರಿಸಿದಳು. ಈ ಚಂದ್ರಾರೂಪವೂ ಸಹ ವಿಶಿಷ್ಟವೇ. ಪಾರ್ವತಿ ಮುಂತಾದ ದೇವಸ್ತ್ರೀಯರಿಂದ ಕೂಡಿದುದೇ !

ಕಾಲಾಭಿಮಾನಿನಿಯಾದ ಚಂದ್ರಾದೇವಿಯೊಂದು ರೂಪ, ದ್ಯು–ಸಭಾಭಿಮಾನಿಯಾದ 'ದ್ಯು' ನಾಮಕ ಭಾರತಿಯದೊಂದು ರೂಪ. ಹೀಗೆ ಭಾರತೀದೇವಿಯರ ಎರಡು ರೂಪಗಳು. 'ಏಳೇಳು ಐವತ್ತೊಂದು ಎಂದರೆ ೪೯+೫೧=೧೦೦ ನೂರು ಗುಣಗಳು. ಸರಸ್ವತಿ, ಗಾಯತ್ರಿ, ಶ್ರದ್ಧಾ, ಪ್ರೀತಿ, ಗುರುಭಕ್ತಿ, ಸರ್ವವೇದಾತ್ಮಿಕಾ, ಬುದ್ಧಿ, ಅನುಭೂತಿ, ಸುಖಾತ್ಮಿಕಾ

ಗುರುಭಕ್ತಿ, ಹರಿಪ್ರೀತಿ, ಸರ್ವಮಂತ್ರಾತ್ಮಿಕಾ, ಛಾಜಿ. ಶಿವಕನ್ಯಾ, ಇಂದ್ರ ಸೇನಾ, ದ್ರೌಪದೀ, ಕಾಳೀ, ಚಂದ್ರಾ, ಈ ಮುಂತಾದ ಭಾರತಿ ಹಾಗೂ ತದ್ರೂಪಗಳು ವಾಯುದೇವರು ಹಾಗೂ ಬ್ರಹ್ಮದೇವರಿಂದ ನೂರಗಳಿಗೆ ಕಡಮೆಯುವೆನಿಸುತ್ತವೆ. ॥ ೧೦ ॥

**ಅವತರಣಿಕಾ** :—ಇನ್ನು ಈ ಪದ್ಯದ ಅರ್ಧರುಚಿಯಿಂದ ಶೇಷ ದೇವರ ಅವತಾರಗಳನ್ನು ಮುಂದಿನ ಅರ್ಧ ಪದ್ಯದಿಂದ ರುದ್ರದೇವರ ಅವತಾರ ಹೇಳುತ್ತಾರೆ. ಸೂಕ್ಷ್ಮಸೃಷ್ಟಿಯಲ್ಲೀ ಗರುಡ ದೇವರಿಗೆ ಉತ್ಪತ್ತಿ ಭುವಿಯಲ್ಲಿ ಅವತಾರವಿಲ್ಲ.

**ಹರಿ ಸಮೀರಾವೇಶ ನರ ಸಂ ।**
**ಕರುಷಣಾವೇಶಯುತ ಲಕ್ಷ್ಮಣ ।**
**ಪರಮ ಪುರುಷನ ಶುಕ್ಲ ಕೇಶಾವೇಶ ಬಲರಾಮ ॥**
**ಹರ ಸದಾಶಿವ ತಪ ಅಹಂ ಕೃತು ।**
**ಮರುತಯುಕ್ತ ಶುಕೋರ್ಧ್ವ ಪಟು ತ- ।**
**ತ್ಪುರುಷ ಜೈಗೀಷೌರ್ವ ದ್ರೌಣೀ ವ್ಯಾಧ ದುರ್ವಾಸ ॥ ೧೧ ॥**

**ಪದ್ಯಾರ್ಥ** :—ಶೇಷದೇವರಿಗೆ ಮೂರು ಅವತಾರ. ನರ=ಶಾಮಲಾ ದೇವಿಯಲ್ಲಿ-ಯಮಧರ್ಮನಿಂದ ಅವತರಿಸಿದ ನರನಾಮಕಶೇಷನು, ಹರಿ ಪರಮಾತ್ಮ ಹರಿ, ಸಮೀರ ವಾಯು ಆವೇಶವುಳ್ಳವರು. ಲಕ್ಷ್ಮಣ=ತ್ರೇತೇ ಯಲ್ಲಿ ಶ್ರೀರಾಮ ದೇವರ ತಮ್ಮನಾಗಿ ಜನಿಸಿದ ಲಕ್ಷ್ಮಣ, ಇವರಲ್ಲಿ ಶ್ರೀ ಸಂಕರ್ಷಣ ನಾಮಕ ದೇವರ ಆವೇಶ, ಬಲರಾಮ=ಶ್ರೀಕೃಷ್ಣದೇವರ ಅಣ್ಣನಾದ ಬಲರಾಮ ದೇವರು ಸಹ ಶೇಷಾಂಶರು. ಇವರು ಶ್ರೀಹರಿಯ ಶುಕ್ಲಕೇಶಾವೇಶವುಳ್ಳವರು. ಈ ಮೂವರಲ್ಲಿಯೂ ಶೇಷ ಅಂಶ ಮತ್ತು ವಾಯು, ವಿಷ್ಣುವಿನ ಆವೇಶವೆಂದು ಪ್ರ್ಯಾ. ದಾ. ಸಿ. ಕೌಮುದೀವಚನ.

**ಇನ್ನು ರುದ್ರದೇವರಿಗೆ ಅವತಾರ ಹೇಳುತ್ತಾರೆ.**

೧. ಹರ=ಲೋಕರ ಅಮಂಗಲವನ್ನು ಸದಾ ಹರಣ ಮಾಡುವುದ ರಿಂದ ಹರ.

೨. ಸದಾಶಿವ=ತಮೋಽಭಿಮಾನೀ ವಿಜ್ಞೇಯಃ ಅಶಿವಾತ್ಮಾ ಸದಾಶಿವಃ ॥

೩. ತಪ=ಲವಣಸಮುದ್ರದಲ್ಲಿ ಹತ್ತು ಕಲ್ಪ ತಪಸ್ಸು ಮಾಡಿದ್ದರಿಂದ ತಪನಾಮ.

೪. ಅಹಂಕೃತು=ಅಹಂಕಾರ ತತ್ವಾಭಿಮಾನಿಯಾದುದರಿಂದ ಅಹಂಕೃತು.

೫. ಮರುತ್-ಯುಕ್ತ ಶುಕ=ವಾಯು ಆವೇಶಯುಕ್ತರಾದ ವೇದವ್ಯಾಸರ ಪುತ್ರರಾದ ಶುಕಾಚಾರ್ಯರು.

೬. ಊರ್ಧ್ವ=ಊರ್ಧ್ವರೇತಾ ಇತಿ ಊರ್ಧ್ವಃ ॥ ಅಲಂಪಟರಾದುದರಿಂದ=ಅಪಟ.

೭. ತತ್ಪುರುಷ=ಆ ಬ್ರಹ್ಮಯಜ್ಞದಲ್ಲಿ ಪಶುವಾದುದರಿಂದ ಪುರುಷ

೮. ಜೈಗೀಷೌರ್ವ=ಉರ್ವೋಃ ಪುತ್ರಃ ಔರ್ವಃ ರುದ್ರಃ.

೯. ದ್ರೌಣೀ=ದ್ರೋಣಾಚಾರ್ಯರ ಪುತ್ರ ಅಶ್ವತ್ಥಾಮಾಚಾರ್ಯರು

೧೦. ವ್ಯಾಧ=ಕಿರಾತರೂಪಿಯಾದ ವ್ಯಾಧನು ರುದ್ರಾವತಾರ.

೧೧. ದುರ್ವಾಸ ಅತ್ರಿಯ ಪತ್ನಿ ಅನಸೂಯಾ ದೇವಿಯಲ್ಲಿ ಅವತರಿಸಿದ ದುರ್ವಾಸ ಋಷಿಗಳು.

ಇನ್ನು ಬಹು ನಾಮಗಳನ್ನು ವ್ಯಾ. ದಾ. ಸಿ. ಕೌಮುದೀಯಲ್ಲಿ ವಿಶದವಾಗಿ ಹೇಳಿದ್ದಾರೆ.

**ಭಾವಸೂಚನ** :—ಶರೀರಯುಕ್ತನರಃ । ಶುಕ್ಲ ಕ್ಲೇಶ ಯುಕ್ತೋ ಬಲಸ್ತಥಾ ॥ ಸಂಕರ್ಷಣಾವೇಶಯುತೋ ಲಕ್ಷ್ಮಣಃ ಪರಿಕೀರ್ತಿತ ಇತ್ಯುಕ್ತೇಃ ॥ ಹರೇತಿ ॥ "ಸದಾಶಿವಸ್ತಪೋಽಹಂಕಾರ ವಾಯುವಿಷ್ಟಃ ಶುಕಃ ಸ್ತಥಾ॥ ಊರ್ಧ್ವಪಟೋ ವಾಮದೇವಃ ಸದ್ರೋಣಜಾತೋ ದ್ವಿಜೋತ್ತಮಃ॥ ತತ್ಪುಮಾನ್ ದ್ರೌಣಿರೌರ್ವಶ್ಚ ದುರ್ವಾಸಾ ಮುನಿರೇವ ಚ ॥ ಜೈಗೀಷ ವ್ಯಾದಿರೂಪತ್ವಾದ್ರುದ್ರ ಇತ್ಯುಕ್ತೇಃ ॥ ೧೧ ॥

**ವಿಶೇಷ ಸೂಚನೆ :**—ಶೇಷಸ್ಸದಾಶಿವಶ್ಚೋರ್ಧ್ವಸ್ತ್ರ್ಯೋಽಹಂಕಾರ ಏವ ಚ ॥ ನರೋಽಪಟೋ ಲಕ್ಷ್ಮಣಶ್ಚ ರೌಹಿಣೇಯಃ ಶುಕಸ್ತಥಾ ॥ ಸದ್ಯೋ ಜಾತೋ ವಾಮದೇವಶ್ಚ ಘೋರಸ್ತತ್ಪುಮಾನಪಿ । ದೂರ್ವಾಸಾ ದ್ರೌಣಿರೌರ್ವಶ್ಚ ಜೈಗೀಷವ್ಯಾಧರೂಪಕಾಃ (ಕಃ) ॥ ಪೂರ್ವೋಕ್ತೈಶ್ಚ ಗುಣೈಃ ಸರ್ವೈಸ್ತಾಭ್ಯಃ ಶತಗುಣಾವರಾ ॥ ಮುಕ್ತೇಃ ಪಶ್ಚಾದಪಿ ಸದಾ । ಅತೀತಾನಾಗತಾಶ್ಚ ಯಾಃ ॥ ಅತೀತಾನಾಗತಾ ಯೇ ಚ ಸರ್ವಶೋಽಪ್ಯವರಾಃ ಸದಾ॥ಏವಂ ಸುಪರ್ಣಾಃ ಸರ್ವೇಽಪಿ ಸಮಾಃ ಶ್ರೈಷ್ಟೈಃ ಸಪ್ತೈವ ತು॥ ಇತಿ ಬೃಹದ್ಭಾಷ್ಯೇ ತೃತೀಯಾಧ್ಯಾಯೇ ॥

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ** (ರುದ್ರ ರೂಪಗಳು)

(ಹಿಂದಿನಿಂದ) ಶಿವನ ರೂಪಗಳ ಈ ಪರಿಯ ಚಿಂತಿಸುತ । ತತ್ಪುಮಾನ್ ಊರ್ಧ್ವಾಪಟ ದುರ್ವಾಸ ವ್ಯಾಧ ಅಶ್ವತ್ಥಾಮ ಜೈಗೀಷವ್ಯ ತಪ ಅಹಂಕೃತು । ನಿತ್ಯ ವಾಯ್ವಿಷ್ಟ ಶುಕ ವಾಮದೇವ ಗುರು । ಮೃತ್ಯುಂಜಯರೌರ್ವ ಸದ್ಯೋಜಾತ ತತ್ಪುರುಷ ॥ ೧೦ ॥

(ಶೇಷಾವತಾರಗಳು) ನರವಾಯು ಶುಕ್ಲ ಕೇಶಾವೇಶ ಬಲಗೆ ಸಂ। ಕರುಷಣಾವೇಶ ಲಕ್ಷ್ಮಣ ದೇವಗೆ ॥ ಗರುಡ ಶೇಷಾಘೋರ ಸಮರು । ಶತಗುಣದಿಂದ ಕೊರತೆಯೆನಿಸುವರು ಮೂವರು ವಾಣಿದೇವಿಗೆ ॥ ೧೧ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಶೇಷಾವತಾರಾನ್ ಆಹ 'ಹರಿ' ಇತಿ ॥ ನರ, ಬಲ, ಸೌಮಿತ್ರಯಃ ಶೇಷಸ್ಯ ಅವತಾರಾಃ ॥ ಶಾಮಲಾಯಾಂ ಮೂರ್ತ್ಯಾಂ ಧರ್ಮೋತ್ಪನ್ನಃ ನರಃ ॥ 'ವಿಷ್ಣೋಃ ವಾಯೋಃ ಅನಂತಸ್ಯ ತ್ರಿಭಿಃ ಅಂಶೈಃ ನರಃ ಸ್ಮೃತಃ। ಸೌಮಿತ್ರಿರಪಿ ತ್ರ್ಯಂಶಃ ॥ ವಾಯ್ವನಂತಾಂಶಸಂಯುತಃ ॥ ತಾಭ್ಯಾಂ ಬಲ ಲಕ್ಷ್ಮಣೌ ॥ ಅಪಿಷ್ಟ್ವಾ ಶ್ವೇತಕೇಶಾತ್ಮಾ ಶೇಷಾಂಶಂ ರೋಹಿಣೀಸುತಂ ॥ ವಸುದೇವಾತ್ ರೋಹಿಣ್ಯಾಂ ಜಾತಃ ಅಪಿ ವಾಯ್ವನಂತಾಂಶವಾನ್ ॥

**ನ ವೀಂದ್ರಸ್ಯಾವತಾರೋಽಸ್ತಿ ಭೂಮ್ಯಾಂ ಚಾಜ್ಞಾ ತಥಾ ಹರೇಃ ॥**
**ಶಂಭ್ವವತಾರಾನ್** ಆಹ 'ಹರ' ಇತಿ ॥ ಮಾನೀ ತಮೋಗುಣಸ್ಯಾಯಂ॥
ಸದಾಶಿವಃ ಕಪಾಲಮಾಲಾಮಶಿವಾಂ ಸದಾ ಧಾರಯತೇ ಹರಃ ॥ ಅತಃ
ಸದಾಶಿವಃ ಜ್ಞೇಯಃ ನತ್ವಭಾಗವತಃ ಶಿವಃ ।' ಗಜಾಜಿನಂ ತ್ವಪಾವಿತ್ರ್ಯಂ
ಯತೋ ಧಾರಯತೇ ಹರಃ ॥ ಅತಃ ಸದಾಶಿವಃ ಜ್ಞೇಯಃ ನತ್ವಭಾಗವತಃ
ಶಿವಃ ॥ ಅಂಭಸಿ ದಶಕಲ್ಪಂ ತಪಃ ಕರಣಾತ್ ತಪಃ ॥ ಅಹಂಕಾರಾತ್ಮಕಃ
ರುದ್ರಃ ಇತ್ಯುಕ್ತಂ ಅನುಸರತಿ "ಅಹಂಕ್ರತುರಿತಿ ॥ 'ಮರುತ ಯುಕ್ತ' ಇತಿ॥
ಶುಕಂ ತಮಾಶು ಪ್ರವಿವೇಶ ವಾಯುಃ ಜ್ಞಾನಾರ್ಥಂ ಹ್ಯಭವದ್ ಭುವಿ ।
ದಕ್ಷಾಧ್ವರೇ ಸತೀ ದಗ್ಧಾ ಮೇನಕಾತನಯಾ ಸತೀ ॥ (ಔರ್ವಂ ಲೇಭೇ
ಪತಿಂ ॥) ಅದ್ಯ ಪ್ರಭೃತಿ ಹ್ಯೂರ್ಧ್ವರೇತಾ ಭವಾನಿ ಇತ್ಯುಕ್ತತ್ವಾತ್
ಊರ್ಧ್ವಃ ॥ ಅಪಟಃ ಅಲಂಪಟಃ । (ತಸ್ಯಾಂ ಬಭೂವಾತಸ್ತಥಾ ।) ತತ್ರ
ಯಜ್ಞೇ ಬ್ರಾಹ್ಮೇ ಪುರುಷಃ ಪಶುಃ ಆಸೀತ್ । ತಥಾ ಜೈಗೀಷವ್ಯಾತ್
ರುದ್ರರೂಪಾತ್ ಶಕ್ರೋ ದ್ರೌಣಿಶ್ಚ ತತ್ತ್ವಸೂ ॥ ಗಿರಿಶೋಽಜನಿಷ್ಟ ಅಶ್ವ-
ತ್ಥಾಮಾ ॥ ತನುಸ್ತ್ವಪರಾ ಹರಸ್ಯ ದುರ್ವಾಸಾ ನಾಮೇತಿ ಅತ್ರೇಃ
ಅನಸೂಯೋತ್ಥಃ ॥ ವ್ಯಾಧಃ ಕಿರಾತರೂಪಃ ॥ ತಮನು ಸಭಾರ್ಯಶ್ಚ
ತ್ರ್ಯಂಬಕಃ ॥ ಭೂಭೃತಾಂ ಮಾನಭಂಗಾಯ ದೂರ್ವಾಸೋದಯ
ಇಷ್ಯತೇ ॥ ಪ್ರಾರಬ್ಧಂ ಭೋಕ್ತುಕಾಮೋಽಸೌ ಪರಪಕ್ಷ ಪ್ರಕಾಶಕಃ
ದ್ರೌಣಿಃ ॥ ಐಶಾನ್ಯಾಂ ಸ್ವನಾಮಸ್ಥ ಹರ್ಯರ್ಜನಾತ್ ವಾಮದೇವಃ ॥
ನ ಸೌಂದರ್ಯಾತ್ ॥ ವಿಷ್ಣ್ವೋಗ್ರಧೃತ್ತ್ರಿ ಪುರದಾಹೇಽ ಘೋರರೂಪ
ಸ್ವೀಕಾರಾತ್ ತಥೋಕ್ತಃ ॥ ಸ್ವೇಚ್ಛಯಾ ತಪಸಾ ಕ್ಲಿಶ್ಯಮಾನಂ
ಕೃಪಯಾ ಸದ್ಯ ಏವ ವರದಾನಾಯ ಆವಿರಾಸೀತ್ ಅತಃ ಸದ್ಯೋ ದೇವಃ॥
ಔರ್ವಃ ಉರೋಃ ಪುತ್ರಃ ಔರ್ವಃ ರುದ್ರಃ ॥ ಉ ಇತ್ಯತ್ರ ತೃಷ್ಣವಾಚೀ-
ಸ್ಯಾತ್ ರುಶ್ಚ ರೋದನವಾಚಕಃ ॥ ಉರೋಃ ರುದ್ರಃ ತತಃ ಪ್ರೋಕ್ತಃ
ತತ್ಪುತ್ರಶ್ಚೌರ್ವ ಸಂಜ್ಞಿತಃ ॥ ಪಿತಾ ಸದಾ ರುರೋದ ॥ ಉರ್ವರಿತ್ಥಂ
ರೋದನಂ ಕರ್ತುಂ ಔರ್ವೋಽಭೂತ್ ರುದ್ರ ಏವ ಸಃ॥ಶ್ರೀರುದ್ರ ತತ್ಸುತ
ರೋದನ ಕ್ರಮಃ ಅನ್ಯತ್ರ ವಿಸ್ತೃತಃ ಬಹು ಪದ್ಯೈಃ ॥ ಸ್ವಪದಾಸ್ವದಾ-
ನಂದಮಪಿ ಕಾತ್ಕೃತ್ಯ ಅತೀವ ಆಹ್ಲಾದಂ ಜನಯತಿ ಪೃದೋತಃ ॥

ವಿಸ್ತೃತಿ ಶತ್ರುಸೃಷ್ಟಿ ನಿರೂಪಣಾತ್ ॥ ಹಿತಸ್ಮಾತ್ ತತ್ಕ್ರಮಂ 'ಶುಶ್ರೂ
ಷುಭಿಃ ತತ್ಕ್ಷಣಾತ್' ಇತ್ಯುಕ್ತರೀತ್ಯಾ ಅತಿಪಕ್ವ ಮನಸಾಂ ಪರಮ
ವೈರಾಗ್ಯ ಶ್ರೀಬಿಂಬೇಕ್ಷಣ ತತ್ಸಾಧಕೋಪಾಸ್ತೌ ಚ ನಿರವಧಿಕತ್ವರಾಂ
ಜನಯೇತ್ ಇತ್ಯಾಲೋಚ್ಯ ಪದ್ಯಾರ್ಥಮೇವ ಸಂಗೃಹ್ಯ ಬ್ರವೀಮಿ ಶತ್ರು
ಮಾಪತ್ಯ ದೂರತಃ ॥ ತಥಾ ಹಿ ಕಥಾಪ್ರಸಕ್ತಿಃ ಪುರಾ ಕಿಲ ಪ್ರೋಥಾರಂ
ವಾಹಃ ಪಪ್ರಚ್ಛ ॥ ಭೋ ನಾಥ ! ಯದುಕುಲ ಲಲಾಮ ! ಪರಮಧೀರಃ
ರುದ್ರಃ ವಿಷಾಶನೇಪಿ ಅವಿಷಣ್ಣಃ ಕಿಮರ್ಥಂ ರುರೋದ ? ಏನ ಔರ್ವ
ಶರ್ಮಾ ಹ್ಯಭವತ್ ತತ್ಸುತಃ ತಸ್ಯೋರುಸಮಾಚಾರಾಗತಾಶ್ರು
ಮೋಚನಂ ತನ್ಮಾನಃ ಇತಿ ॥ ಆಕಲಯ್ಯ ತುಷ್ಟಃ ಕರುಣಾಕರಃ ಕೃಷ್ಣಃ
ಊಚೇ 'ರೇ ವೈನತೇಯ ! ಗುರುಃ ಮಹಾನ್ ಪ್ರಾಕ್ ಏಕದಾ ಸುಗುಣ
ಮಣಿ ಸುಪೂರ್ಣಮಾಲಾಲಿಂಗಿತ ಪರಮ ಸುಂದರದೇಹಂ ಅರವಿಂದರಸ
ರಾಮಾಶೇಷ ಸುರಲಾಲಿತಾಂಘ್ರಿಂ ಆತ್ಮಬಿಂಬಂ ಶ್ರೀಸಂಕರ್ಷಣಂ ನಿರೀಕ್ಷ್ಯ
ಅಪರೋಕ್ಷಕಾಲೇ ಹೃಷ್ಯತ್ ತನೂರುಹನಿಕರಃ ನೃತ್ಯನ್ ಪ್ರನೃತ್ಯನ್
ಬಾಷ್ಪಪೂರಿತಾಕ್ಷಃ ಆಶ್ರುವರಿರಕ್ತಾಂಗಃ ಕಂಠಸುರುದ್ಧಃ ಅಮೃತಕಲಶಮ
ವಾಣ್ಯಾ ಆತ್ಮನಾ ಸಾಧನಾರ್ಥಂ ಭಾರತಾಜಿರಾ ಉದಯಕಾಲೀನಾ
ಖಿಲಾವಸ್ಥಾಃ ಸಂಕ್ಷಿಪ್ಯ ವಿಜ್ಞಾಪಯಾಂಚಕಾರ ॥ "ಬಹುಕಲ್ಪೇಷು
ಅನವಲೋಕಿತಂ ಇದಾನೀಂ ಸುರಕ್ತನಖಮಣಿಚಂದ್ರಿಕಾಂ ಅದ್ರಾಕ್ಷಮ್॥
ತತ್ ಕೇನ ಭಾಗಧೇಯೇನ ನರಹರೇ ನೈವಂವಿಧಸ್ಯ ಭಾವ್ಯಮೇತದ್
ವಾರಿಜದಲನಯನ!" ಇತಿ ಉಚ್ಚೈಃ ಅರುದತ್॥ಹೇ ಮುರಹರ! ಪ್ರಾಣ
ಸಖೇ ! ಕದಾಪಿ ಸದಾವಹಿತ ಮಾನಸೇನ ತ್ವಚ್ಛ್ರವಣಂ ನಾಕರವಮ್॥
ಪಾದಪದ್ಮಮೀಕ್ಷ್ಯ ಪುನಃ ಪುನಃ ಕಂಠಸಂರುದ್ಧಃ ರುರಾಪ್ರೋರುಃ ಭಯ
ಕಂಪಿತಾಂಗಃ ॥ ಹೇ ಮುಕುಂದ ! ನಾರಾಯಣ ! ಪಾದದರ್ಶನೇ ಸತಿ
ಗುರ್ವರ್ಥಗತ್ಪರಾ ಸ್ತುತಿಃ ಪುನಃ ಕಥಮಭೂನ್ಮಮ ॥ ಮದಕ್ಷಿಣೇ
ಪಾಪರಮೇ ಮಹಾತ್ಮನ್ ವಾಗಿಂದ್ರಿಯಂ ಪಾಪಯುಕ್ ಸರ್ವದೈವ ॥
ಮದ್ದರ್ಶನಂ ಸರ್ವದಾ ಸ್ತ್ರೀಷು ಸಕ್ತಂ ವಾಗಿಂದ್ರಿಯಂ ದುಷ್ಟವಾರ್ತಾಭಿ
ವಾದೇ । ಶ್ರೋತ್ರೇಶ ಭವಾನ್ ಸಾಕ್ಷೀ ನ ಶ್ರುತಾ ಹರಿಕಥಾ ಕದಾಪಿ
ಸದಾ ಶ್ರುತಾ ಬಹುಧಾ ಲೋಕವಾರ್ತಾಃ॥ ಶ್ರುತ್ವಾ ಸ್ಮೃತ್ವಾ ಪಾದಪೀಠಂ

ಹರೇಶ್ಚ ಪುನಃ ಪುನಃ ಕಂಠಸಂರುದ್ಧ ಏವ ॥ ಭೋ ಭೋಗಿಪ ಭೋಗ ಶಾಯಿನ್ ! "ಮದ್ಬಾಹುದಂಡೇ ತೇಽರ್ಪಿತಂ ದಿವ್ಯಗಂಧಂ ಅಧೃತ್ವಾಹಂ ಫಣಿನಃ ಧಾರಯಿತ್ವಾ ॥ ಪ್ರದೂಷಿತೌ ಮಮ ಭಾಹೂ ಸರ್ವೈವ ಭುಜಂಗ ವಿಷ್ಟಾಮೂತ್ರೈಶ್ಚ ತತ್ಸ್ವೇದೈಃ ॥ ಸ್ತ್ರೀಣಾಂ ಕುಚೋದಕಕಚೋದಕ ಕ್ಷೋದೈಃ ಅಂಗಾಃ ಹಿ ಅನರ್ಪಿತವಸ್ತ್ರಗಂಧೈಶ್ಚ ಲಿಪ್ತಂ ಗಾತ್ರಂ ಶ್ರೀ ಕಮಲಾಸುಕಲತ್ರಾ ಸ್ಪೃಷ್ಟಂ ಸ್ಪೃಷ್ಟ್ವಾವ ಹರಿನಿರ್ಮಾಲ್ಯಗಂಧಂ ॥ ಹೇ ನೃಹರೇ ! ಅನರ್ಪಿತಾಗ್ರಾಹಕ ನಾಸಸ್ತಿಲಕುಸುಮನಾಸಿಕಾ ಅವಲೋಕ್ಯ ಘ್ರಾತ್ವಾ ಅಘ್ರಾತ್ವಾ ಹರಿ ನಿರ್ಮಾಲ್ಯಗಂಧಮ್ ॥ ಹೇ ಮುರಹರೇ ! ತುಲಸೀರಜಃ ಸಂಸ್ಪೃಷ್ಟಮನ್ನಂ ಕಥಮಿತ ಊರ್ಧ್ವಂ ಜಿಹ್ವಾ ಅಂಗೀಕುರ್ಯಾತ್ ॥ ಅನರ್ಪಿತಮೇವ ಬಹುಶೋ ಭುಕ್ತಂ ಭುಕ್ತ್ವಾವ ಭುಕ್ತ್ವಾವ ಹರಿನ್ನೈವೇದ್ಯಜಾತಮ್ ॥ ಅನೇಕ ಜನ್ಮಾರ್ಜಿತ ಪಾಪಸಂಚಯೈಃ ಅದೃಷ್ಟ ತತ್ಕುಂಡಲ ಕುಂಡಲಾಢ್ಯಮ್ ॥ ಅನೇಕ ಜನ್ಮಾರ್ಜಿತ ಪುಣ್ಯ ಸಂಚಯೈಃ ಅದ್ರಾಕ್ಷಮಂಬಾತಿವಿಚುಂಬಿತಂ ಮುಖಮ್ ॥ ಇತ್ಯೇವ ಭಕ್ತ್ಯಾ ಚ ರುರಾವ ರುದ್ರಃ ದೃಷ್ಟ್ವಾವ ದೃಷ್ಟ್ವಾ ॥ ಹರಿವಕ್ತ್ರಂ ಸುಪೂರ್ಣಮ್ ॥ ಪಿತೃರೋದನಂ ಚ ಅತ್ರ ಪೂರ್ಣಮ್ ವ ಪುತ್ರರೋದನಂ ದಯಯಾ "ಭೋ ! ರಮಯಾಽಲಿಂಗಿತಮಂಗಲಾಂಗ ! ವಿಷಯವ್ಯಾಪೃತಧಿಯಃ ಯೋಗ್ಯಾಃ ದುರ್ವಿಷಯಲಾಭೇ ಯತಂತಃ ಏತೇ ಹಿ ಮೂರ್ಖಾಃ ಪರಮಾದರೇಣ ಕದಿಂದ್ರಿಯಾರ್ಥೇ ಧನದಾನ್ಯೈಕ ನಿಷ್ಠಾಃ ॥ ಕಥಂ ಹಿ ಏನಾನ್ ಮೋಕ್ಷ್ಯಸೇ ವಿಶ್ವಮೂರ್ತೇ ಸ್ಮೃತ್ವಾ ಸ್ಮೃತ್ವಾ ವಾಸುದೇವಸ್ಯ ಮಾಯಾಂ ರುರಾವೌರ್ವೀ ಭಯಕಂಪಿತಾಂಗಃ॥ ಶೃಣು ಮುರುಹರ ಹೀನ ದೀನ ಧೈನ್ಯ (ದೈನ್ಯಂ) ಅತೀವ ಕಷ್ಟೇನ ಸುಲೋಭ ಬುದ್ಧ್ಯಾ ॥ ಪಾಥೇಯಮೌರ್ಧ್ವಂ ತ್ವಪಧೀರ್ಯ ದೈವ- ಯಶೋವಿತತ್ಯಾಲ್ಪಜನೇಷು ದತ್ವಾ ॥ ತ್ವದೀಯಲೋಕೇಷು ಕಿಮಪಿ ಅದತ್ವಾ ಏತೇಷು ಕೃಷ್ಣಾ ನ ಜರಾ ಸುತೃಷ್ಣಾ ॥ ಸ್ಕಂಧಸ್ಥಮೃತ್ಯುಃ ಹಸತೇ ತಾನ್ ನಿರೀಕ್ಷ್ಯ ಕೋ ಮತ್ಸಮೋಽಹಂ ಶತವರ್ಷಜೀವೀ ॥ ಮದೀಯವತ್ಸಾಶ್ಚ ತ್ವದೀಯವತ್ಸಾಃ॥ ಸುಲಕ್ಷಣಾ ಚಾರುಮುಖೀ ಮಮೇ ಷ್ಟಾ ಹರ್ಮ್ಯೇ ಕೃತೇಽತಿ ವಿರುವಂತಿ ತತ್ರ॥ ಪುತ್ರೀ ವಿವಾಹ್ಯಾ ಹಿ ಧನಂ

ತದರ್ಥಂ ಪುತ್ರೋ ವಿವಾಹ್ಯೋತ ಇದಂ ಧನಂ ಭೋ ॥ ಹೇ ಕೃಷ್ಣ ! ವಿಷ್ಣೋ!ಶ್ವಪಚಾಃ ಬಭೂವುಃ ಭೃತಾಃ ತತಃ ಯಾಮ್ಯಪಾಶೈಃ ಸುಬದ್ಧಾಃ॥ ಹರೇ ತವಾಂಘ್ರಿಂ ನ ಕದಾಪಿ ಸ್ಮೃತ್ವಾ ಗತೇಷು ವತ್ಸಾದಿಷು ತನ್ಮೃತೇಷು ॥ ಧನಂ ಕ್ವ ವಸ್ತ್ರಂ ಕ್ವ ತದೀಯವೃತ್ತಿಃ ಆಯುರ್ವ್ಯರ್ಥಂ ವ್ಯರ್ಥಂ ಮೇವಂ ಸತಾಂ ಹಿ ॥ ಕಷ್ಟಂ ನಷ್ಟಾಃ (ಇತಿ) ಸಮ್ಯಕ್ ರುರಾವ ॥ ಏತಾದೃಶಾನ್ ಮೂರ್ಖಜನಾಂಶ್ಚ ದೃಷ್ಟ್ವಾ ರುರಾವೌರ್ವೋ ವಾಸುದೇವೈಕನಿಷ್ಠಃ ॥ ಇತಿ ವೃತ್ತಿನಿಮಿತ್ತಂ ವತ್ಸರೋದನಂ ಅವಸಿತಮ್ ॥

ಶೇಷಃ ಸದಾಶಿವಶ್ಚೋರ್ಧ್ವಃ ತಪೋಽಹಂಕಾರ ಏವ ಚ ॥ ನರೋಽಪಟೋ ಲಕ್ಷ್ಮಣಶ್ಚ ರೌಹಿಣೇಯಃ ಶುಕಃ ತಥಾ ॥ ಸದ್ಯೋಜಾತಃ ವಾಮದೇವಃ ಚಾಽಘೋರಃ ತತ್ಪುಮಾನಪಿ ॥ ದುರ್ವಾಸಾ ದ್ರೌಣಿರೌರ್ವಶ್ಚ ಜೈಗೀಷವ್ಯಾದಿರೂಪಕಾಃ ॥ ಪೂರ್ವೋಕ್ತೈಶ್ಚ ಗುಣೈಃ ಸರ್ವೈಃ ತಾರ್ಕ್ಷ್ಯಃ ಶತಗುಣಾವರಾಃ ॥ ಏವಂ ಸುಪರ್ಣಃ ಸರ್ವೇಽಪಿ ಸಮಾಃ ಶೇಷೈಃ ಸದೈವ ತು ॥ ೧೧ ॥

## ಕನ್ನಡಾರ್ಥ

ಶೇಷದೇವರ ಅವತಾರಗಳನ್ನು ಹೇಳುತ್ತಾರೆ–'ಹರಿ' ಎಂಬ ಪದ್ಯದಿಂದ ನರ, ಬಲರಾಮ, ಲಕ್ಷ್ಮಣ ಇವರು ಶೇಷನ ಅವತಾರರು. ಶಾಮಲಾ ಸ್ವರೂಪಳಾದ ಮೂರ್ತಿದೇವಿಯಲ್ಲಿ, ಧರ್ಮ (ಯಮ) ನಿಂದ ಉತ್ಪನ್ನನಾದವನು ನರನು. ನರನಲ್ಲಿ ವಿಷ್ಣು, ವಾಯು, ಶೇಷ ಇವರುಗಳ ಮೂರು ಅಂಶಗಳಿರುವುವೆಂದು ಪ್ರಸಿದ್ಧವಿದೆ. ಲಕ್ಷ್ಮಣನಲ್ಲಿಯೂ ಸಹ ಮೂರು ಅಂಶಗಳು. ವಾಯು, ಶೇಷಾಂಶಗಳಿಂದ ಬಲರಾಮ, ಲಕ್ಷ್ಮಣರೀರ್ವರೂ ಸಂಯುಕ್ತರಾದವರು. ವಸುದೇವನಿಂದ ರೋಹಿಣಿಯಲ್ಲಿ ಹುಟ್ಟಿದ್ದರೂ ಸಹ ಬಲರಾಮನಲ್ಲಿ ಶೇಷ, ವಾಯುಗಳ ಅಂಶವಿದ್ದು, ನಾರಾಯಣನ ಶುಕ್ಲಕೇಶದ ಆವೇಶವಿರುತ್ತದೆ.

ಗರುಡನಿಗೆ ಭೂಮಿಯಲ್ಲಿ ಅವತಾರವಿಲ್ಲ; ಪರಮಾತ್ಮನ ಅಪ್ಪಣೆಯು ಇರುವುದಿಲ್ಲ. **ರುದ್ರದೇವರ ಅವತಾರಗಳನ್ನು ಹೇಳುತ್ತಾರೆ**– 'ಹರ'

ಎಂಬುದಾಗಿ ರುದ್ರದೇವರು ತಾಮಸಗುಣದ ಅಭಿಮಾನಿಗಳು 'ಸದಾಶಿವ' ಕಪಾಲಮಾಲೆಯನ್ನು ಯಾವಾಗಲೂ ಧರಿಸಿರುವುದರಿಂದ ಸದಾಶಿವನೆಂದು ಹೆಸರು. ಹೊರತು ಭಗವದ್ಭಕ್ತರಲ್ಲವೆಂದಲ್ಲ. ಅಪವಿತ್ರಕರವಾದ ಗಜ ಚರ್ಮವನ್ನು ಧರಿಸಿದುದರಿಂದ ಸದಾಶಿವನೆನ್ನುತ್ತಾರೆಯೇ ವಿನಃ ಭಗವದ್ಭ ಕ್ತನಲ್ಲವೆಂದಲ್ಲ. ನೀರಿನಲ್ಲಿ ಹತ್ತು ಕಲ್ಪಗಳನ್ನು ತಪಸ್ಸಿನಿಂದ ಕಳೆದಿದ್ದ ರಿಂದ 'ತಪ' ಎಂದು ಹೆಸರು. ರುದ್ರದೇವರು ಅಹಂಕಾರಾತ್ಮಕರಾದುದ ರಿಂದ 'ಅಹಂಕಾರ' ಎಂದು ಹೆಸರು. ಮರುತಯುಕ್ತ ಶುಕಾಚಾರ್ಯರು ರುದ್ರದೇವರು, ವಾಯುದೇವರು ರುದ್ರಾಂಶರಾದ ಶುಕಾಚಾರ್ಯರನ್ನು ಆವೇಶಿಸಿದರು. ಆದುದರಿಂದ ಅವರು ಭೂಮಿಯಲ್ಲಿ ಜ್ಞಾನಪ್ರಸಾರಕ್ಕಾಗಿ ಅವತರಿಸಿದರು. ದಕ್ಷಯಜ್ಞದಲ್ಲಿ ತಮ್ಮ ಹೆಂಡತಿಯಾದ ಸತಿಯು ದಹಿಸಲ್ಪಟ್ಟು ಮೃತಳಾದುದರಿಂದ ಅಂದಿನಿಂದ ಊರ್ಧ್ವರೇತಸ್ವಿಯಾಗಿ ಉಳಿಯುವೆನೆಂದು ಪ್ರತಿಜ್ಞೆಮಾಡಿದ್ದರಿಂದ ರುದ್ರದೇವರಿಗೆ 'ಊರ್ಧ್ವ', 'ಊರ್ಧ್ವರೇತ' ಎಂಬ ಹೆಸರು ಬಂದಿತು. ಅಲಂಪಟರಾದುದರಿಂದ ಅಪಟ ಎಂದು ಕರೆಯುತ್ತಾರೆ. ಬ್ರಹ್ಮದೇವರು ಮಾಡಿದ ಆದಿಯಜ್ಞದಲ್ಲಿ ರುದ್ರ ದೇವರು ಪಶುವಾದುದರಿಂದ 'ಪುರುಷ' ಎಂದು ಹೆಸರು. ಅದರಂತೆ ಜೈಗೀಷವ್ಯರು ರುದ್ರರೂಪರು. ಅಶ್ವತ್ಥಾಮ ಹಾಗೂ ಇಂದ್ರ (ಶಕ್ರ) ರು ರುದ್ರಾಂಶರು. ರುದ್ರದೇವರದೇ ಇನ್ನೊಂದು ರೂಪ 'ದುರ್ವಾಸ' ಎಂಬುದು. ಅವರು ಅತ್ರಿ ಋಷಿಗಳಿಂದ ಅನುಸೂಯಾನಲ್ಲಿ ಉದಿಸಿದರು. ರಾಜರ ಮಾನಭಂಗ ಮಾಡಲು ದುರ್ವಾಸರಾಗಿ ರುದ್ರದೇವರು ಅವತರಿ ಸಿದರು. ಕಿರಾತರೂಪಿಯಾದ ವ್ಯಾಧನೂ ರುದ್ರಾವತಾರ. ಅದೇ ಕಾಲ ದಲ್ಲಿ ತ್ರ್ಯಂಬಕನಾಗಿ ತೋರಿದುದು. ಪ್ರಾರಬ್ಧವನ್ನು ಅನುಭೋಗಿಸಲು ಶತ್ರುಪಕ್ಷವನ್ನು ಪ್ರಕಾಶಗೊಳಿಸುವ ಅಶ್ವತ್ಥಾಮರಾಗಿ ರುದ್ರದೇವರು ದ್ರೋಣನಲ್ಲಿ ಅವತರಿಸಿದರು. ಈಶಾನ್ಯ ದಿಕ್ಕಿನಲ್ಲಿ ತಮ್ಮ ಎಡಗಡೆಯಲ್ಲಿ ಇರುವ ಶ್ರೀಹರಿಯನ್ನು ಅರ್ಚಿಸಿದುದರಿಂದ ವಾಮದೇವರೆಂದೆನಬೇಕು. ಹೊರತಾಗಿ ಕೇವಲ ಸುಂದರರಾದುದರಿಂದ ಅಲ್ಲ. ವಿಷ್ಣುದ್ರೋಹಿಗಳಾದ ತ್ರಿಪುರರನ್ನು ದಹಿಸುವ ಸಮಯದಲ್ಲಿ ಅಘೋರ ರೂಪವನ್ನು ಸ್ವೀಕರಿಸಿದ್ದ ರಿಂದ 'ಅಘೋರ' ಎಂದು ಹೆಸರು. ಸ್ವೇಚ್ಛೆಯಿಂದ ತಪಸ್ಸಿನಲ್ಲಿ ಕೃಶ

ನಾದವನನ್ನು ದಯೆಯಿಂದ ಸದ್ಯದಲ್ಲಿಯೇ ಆವೇಶಿಸಿದುದರಿಂದ ಸದ್ಯೋ ದೇವನೆಂದು ಹೆಸರು. ಉರುಪುತ್ರನಾದುದರಿಂದ 'ಔರ್ವ' ಎಂದು ಹೆಸರು 'ಉ' ಎಂದರೆ ಉತ್ತಮವಾದ 'ರು' ಎಂದರೆ ರೋದನವುಳ್ಳವನು. ಆದುದ ರಿಂದ ಉತ್ಕೃಷ್ಟವಾದ ರೋದನವುಳ್ಳವನು ಎಂದು ಉರುಪದಾರ್ಥ. ರುದ್ರ ದೇವರಿಗೆ 'ಉರು' ಎಂದು ಹೆಸರು. ಯಾಕೆಂದರೆ ಅವನು ಉತ್ತಮವಾಗಿ ರೋದಿಸಿರುತ್ತಾರೆ. ಅವರ ಪುತ್ರರೇ 'ಔರ್ವ'ನಾಮಕರು.

ತಂದೆಯಾದ ರುದ್ರದೇವರು ಉರು ನಾಮಕರು. ಸದಾ ರೋದಿಸು ತ್ತಿದ್ದರು. ಇನ್ನುಳಿದ ರೋದನವನ್ನು ಮಾಡಲು ಔರ್ವರಾಗಿ ಅವತರಿಸಿದರು ರುದ್ರದೇವರು. ಅವರ ಪುತ್ರರು ಇಬ್ಬರೂ ಮಾಡುವ ರೋದನವು ಬೇರೆ ಕಡೆಯಲ್ಲಿ ಬಹಳ ಪದ್ಯಗಳಿಂದ ವಿಸ್ತೃತವಾಗಿ ವರ್ಣಿತವಾಗಿರುತ್ತದೆ. ಅವರ ರೀತಿಯನ್ನೇ 'ಶುಶ್ರೂಷುಭಿಃ ತತ್‌ಕ್ಷಣಾತ್' ಹೇಳಿದಂತೆ **ಅತಿ ಪಕ್ವ ಮನಸ್ಸಿನವರಾದ ಭಗವದ್ಭಕ್ತರಿಗೆ ವಿರಕ್ತಿ ಪೂರ್ವಕವಾಗಿ ಬಿಂಬೋಪಾಸನವನ್ನು ಮಾಡಲು ಅತಿಶಯವಾದ ತ್ವರಾವನ್ನು ಹುಟ್ಟಿಸುವುದರಿಂದ** ಅದನ್ನೇ ವಿಸ್ತರಿಸದೇ ಕೇವಲ ಪದ್ಯಾರ್ಥವನ್ನಷ್ಟೇ ಸಂಗ್ರಹಿಸಿ, ವಿಸ್ತಾರ ಭೀತಿಯಿಂದ ಸಂಕ್ಷೇಪದಿಂದಲೇ ತೋರಿಸುತ್ತೇವೆ. ಕಥಾಪ್ರಸಂಗವು ಹೀಗೆ ಇರುತ್ತದೆ---

"ಪೂರ್ವದಲ್ಲಿ ಗರುಡ ದೇವರು ಶ್ರೀಕೃಷ್ಣನನ್ನು ಪ್ರಶ್ನಿಸಿದರು :—

"ಹೇ ನಾಥ ! ಯದುಕುಲಲಲಾಮನೇ ! ಪರಮ ಧೈರ್ಯಶಾಲಿ ಗಳಾದ ರುದ್ರದೇವರು ವಿಷವನ್ನುಂಡರೂ ವಿಷಾದವನ್ನು ಹೊಂದದೆ ಇದ್ದರು. ಅಂಥವರು ಯಾಕೆ ರೋದಿಸಿದರು ? ಹೀಗೆ ರೋದಿಸಿರುವುದೇ ಅವರಿಗೆ ಉರು, ಔರ್ವ ಎಂದು ಹೆಸರು ಬರಲು ಕಾರಣವಾಯಿತು. ಆದುದ ರಿಂದ ಈ ವೃತ್ತಾಂತವನ್ನು ವಿಶದೀಕರಿಸಿ ತಿಳಿಸಬೇಕು" ಎಂದು. ಅದಕ್ಕೆ ಶ್ರೀಕೃಷ್ಣನು ಕರುಣೆಯಿಂದ ಹೀಗೆ ನುಡಿದನು—

"ಹೇ ಗರುಡ ! ಮಹಾತ್ಮನಾದ ಉರುವು ಒಂದು ದಿವಸ ಸಕಲ ಗುಣಗಣಪರಿಪೂರ್ಣನಾದ ಜ್ಞಾನಾನಂದವಿಗ್ರಹನೂ, ದೋಷವಿದೂರನೂ

ಅಶೇಷಸುರಲಾಲಿತ ಪಾದಪಲ್ಲವನೂ ಆದ **ತನ್ನ ಬಿಂಬಮೂರುತಿ ಸಂಕರ್ಷಣ ರೂಪಿಯಾದ ಹರಿಯನ್ನು ಸಂದರ್ಶಿಸಿದರು. ಪರಮಾತ್ಮನ ಸಾಕ್ಷಾತ್ಕಾರದಿಂದ ಪುಲಕಾಂಚಿತರಾಗಿ** ಕುಣಿಕುಣಿದು ಆನಂದಬಾಷ್ಪಗಳಿಂದ ಅವರ ಕಣ್ಣುಗಳು ಪೂರ್ಣವಾದವು. ಬಿಗಿದ ಕಂಠದ ಗದ್ಗದ ಅಮೃತಮಯವಾಣಿಯಿಂದ ತನ್ನ ಸಾಧನವನ್ನು ಮಾಡಿಕೊಳ್ಳಲು ಆ ಕಾಲದಲ್ಲಿ ಆದ ತಮ್ಮ ಅವಸ್ಥೆಯನ್ನು ಸಂಕ್ಷಿಪ್ತವಾಗಿ ಬೇಡಿಕೊಳ್ಳುತ್ತಾರೆ.

"ಬಹು ಕಲ್ಪಗಳಲ್ಲಿ ಕಾಣದ ತಮ್ಮ ಪಾದ ಪದ್ಮದಲ್ಲಿ ಸೂರ್ಯನಂತೆ ಹೊಳೆಯುವ ನಖಮಣಿ ಕಿರಣವನ್ನು ಇಂದು ನಾನು ನೋಡಿದೆನು. ಸ್ವಾಮಿಯೇ ! ಇದು ಯಾವ ಪುಣ್ಯ ಮಹಿಮೆಯಿಂದಲೋ ನಾನರಿಯೆ.? ಹೇ ವಾರಿಜನಯನ ! **ಇಂಥ ದರ್ಶನವೇ ನನಗಾಗಿರಲಿಲ್ಲ;" ಎಂಬುದಾಗಿ ಉಚ್ಚವಾಗಿ ರೋದನ ಮಾಡಿದರು.**"ಹೇ ಮುರಹರನೇ! ಪ್ರಾಣಪ್ರಿಯನೇ ! ಒಮ್ಮೆಯಾದರೂ ವೃಥ-ಏಕಚಿತ್ತದಿಂದ ನಿನ್ನ ಮಹಿಮೆಯನ್ನು ಶ್ರವಣಮಾಡಲಿಲ್ಲ." ಹೀಗೆ ಪರಮಾತ್ಮನ ಪಾದಪದ್ಮವನ್ನು ಮತ್ತೂ ಮತ್ತೂ ನೋಡಿ ಭಯದಿಂದ ನಡುಗುತ್ತ ಬಿಗಿದ ಕಂಠದಿಂದ ಮತ್ತಷ್ಟೂ ರೋದಿಸ ಹತ್ತಿದನು."ಮುಕುಂದ! ನಾರಾಯಣ ! ನಿನ್ನ ಪಾದ ದರ್ಶನವಾದರೂ ಈ ನಿನ್ನ ಅಗಾಧ ಗುಣಭರಿತವಾದ ಸ್ತುತಿಯನ್ನು ನಾನು ಹೇಗೆ ಮಾಡೇನು ? ನನ್ನ ಕಣ್ಣು-ನಾಲಿಗೆಗಳು ಪಾಪಮಯವಾದವುಗಳು. ನನ್ನ ಕಣ್ಣು ಸದಾ ಸ್ತ್ರೀಯರಲ್ಲಿ ನಟ್ಟಿರುತ್ತದೆ. ನಾಲಿಗೆಯೂ ಸಹ ದುಷ್ಟ ವಾರ್ತೆಯನ್ನು ನುಡಿಯುವುದರಲ್ಲಿಯೇ ತೊಡಗಿರುತ್ತದೆ. ಶ್ರೋತ್ರ ನಿಯಾಮಕನೇ ! ನನ್ನ ಕಿವಿಗಳು ಒಮ್ಮೆಯಾದರೂ ನಿನ್ನ (ಹರಿಯ) ಕಥೆಗಳನ್ನು ಕೇಳಲುತ್ಸುಕಗಳಿಲ್ಲ. ಆದರೆ ಲೋಕವೃತ್ತಾಂತಗಳನ್ನು ಸದಾ ಪುನಃ ಪುನಃ ಕೇಳುತ್ತಲೇ ಇರುತ್ತವೆ." ಹೀಗೆ ಹರಿಯ ಪಾದಪೀಠವನ್ನು ಪದೇ ಪದೇ ಸ್ಮರಿಸಿ ರುದ್ರದೇವರ ಕಂಠವು ಮತ್ತಷ್ಟು ಬಿಗಿದುಬ್ಬಿತು"ಭೋ-ಭೋಗಿಶಾಯಿಯೇ ! ಭುಜದಂಡದಲ್ಲಿ-ನಿನ್ನ ಚರಣಾರ್ಪಿತವಾದ ಗಂಧವನ್ನು ಧರಿಸದೆ-ಶೇಷ- (ಸರ್ಪ) ನನ್ನು ಧರಿಸಿ, ಅದರ ವಿಷ್ಟಾ ಮೂತ್ರಗಳಿಂದ ಬಾಹುಗಳು ದೂಷಿತವಾಗಿವೆ. ಸ್ತ್ರೀಯರ ಕುಚೋದಕ ಕಚೋ

ದಕಗಳಿಂದ ಅಂಗಗಳು ಮಲಿನವಾಗಿರುತ್ತವೆ. ಹರಿಯಲ್ಲಿ ಅನರ್ಪಿತವಾದ ಗಂಧಕ ವಸ್ತ್ರಗಳಿಂದ ಲಿಪ್ತವಾದ ಈ ಶರೀರವು ಹರಿಯ ನಿರ್ಮಾಲ್ಯ ಶೇಷ ಗಂಧವನ್ನು ಮುಟ್ಟಲಿಲ್ಲ. ಅನರ್ಪಿತವಾದುದನ್ನೇ ನಾಸಿಕೆಯು ಸ್ವೀಕರಿಸುತ್ತದೆಯೇ ಹೊರತು ಹರಿಸಮರ್ಪಿತ ಪುಷ್ಪದ ಸುವಾಸನೆಯನ್ನು ಸೇವಿಸುವುದಿಲ್ಲ. ಹೇ ನರಹರನೇ ! ತುಲಸೀದಲ ಪವಿತ್ರಿತವಾದ ಅನ್ನವನ್ನು ನನ್ನ ನಾಲಿಗೆಯು ಹೇಗೆ ಇನ್ನು ಮುಂದೆ ಅಂಗೀಕರಿಸೀತು ? ಯಾಕೆಂದರೆ ಅನರ್ಪಿತಾನ್ನವನ್ನೇ ಬಹುಶಃ ಉಂಡು ಅದನ್ನೇ ಸ್ವಾಗತಿಸುವ ದುಷ್ಟಸಂಸ್ಕಾರದಿಂದ ಜಿಹ್ವೆಯು ಜುಗುಪ್ಸಿತವಾಗಿದೆ. ಹರಿ ನೈವೇದ್ಯವನ್ನು ಸೇವಿಸಿದರೂ ಅದರಲ್ಲಿ ದೃಢಾಸಕ್ತಿಯು ಹುಟ್ಟುವದಿಲ್ಲ. ಅನೇಕ ಜನ್ಮಗಳಲ್ಲಿ ಆರ್ಜಿತವಾದ ಪಾಪ ಸಮೂಹಗಳಿಂದ ಹೀಗೆ ಆಗಿ ನಿನ್ನ ರೂಪವು ಮರೆಯಾಗಿದೆ. ಈಗ ಅನೇಕ ಜನ್ಮಾರ್ಜಿತ ಪುಣ್ಯಪುಂಜಗಳಿಂದ ಈ ನಿನ್ನ ವಿಗ್ರಹವನ್ನು ನೋಡಿರುತ್ತೇನೆ." ಹೀಗೆ ಭಕ್ತಿಯಿಂದ ರುದ್ರದೇವರು (ಉರುವು) ಹರಿಮುಖವನ್ನು ನೋಡಿ ನೋಡಿ ಅತ್ಯಂತವಾಗಿ ರೋದನ ಮಾಡಿದರು. ಇದು ತಂದೆಯಾದ ಉರುವಿನ ರೋದನವು.

**ಇನ್ನು ಮಗನಾದ ಔರ್ವನ ರೋದನವು**-ದಯಾಯುಕ್ತವಾದುದು. "ರಮಾಸಮಾಲಿಂಗಿತ ಮಂಗಳಾಂಗನೇ ! ಸಜ್ಜನರೂ ಮುಕ್ತಿಯೋಗ್ಯರೂ ಸಹ ವಿಷಯವ್ಯಾಸಕ್ತರಾಗಿದ್ದಾರೆ. ವಿಷಯಸುಖ ಸಂಪಾದನದಲ್ಲಿಯೇ ಪ್ರಯತ್ನಿಸುತ್ತಿದ್ದಾರೆ. ಇವರು ಮೂರ್ಖರು. ದುಷ್ಟೇಂದ್ರಿಯಗಳ ತೃಪ್ತಿಗಾಗಿ ಧನ ದಾನ ಆರ್ಜನಗಳಲ್ಲಿ ಪರಮಾದರದಿಂದ ತತ್ಪರರಾಗಿರುತ್ತಾರೆ. ಇವರನ್ನು ಈ ಸಂಸಾರಪಾಶದಿಂದ ಹೇಗೆ ಬಿಡಿಸುವಿಯೋ ?" ಹೀಗೆ ಶ್ರೀಹರಿಯ ಅದ್ಭುತ ಬಂಧಕ ಶಕ್ತಿಯನ್ನು ಸ್ಮರಿಸಿ ಸ್ಮರಿಸಿ ಪುತ್ರನಾದ ಔರ್ವನು ರೋದಿಸಹತ್ತಿದನು. "ಹೇ ಮುರಹರನೇ! ದೀನಜನರ ಹೀನತೆ-ದೀನತೆಗಳನ್ನು ಕೇಳು. ಅತಿ ಕಷ್ಟಪಟ್ಟು, ಮಹಾ ಕಾರ್ಪಣ್ಯದಿಂದ ಗಳಿಸಿದ ದ್ರವ್ಯವನ್ನು ಪರಲೋಕ ಮಾರ್ಗದ ಬುತ್ತಿಯನ್ನು ಧಿಕ್ಕರಿಸಿ, ಅಲ್ಪ ಜನರಲ್ಲಿ-ಅಪಾತ್ರರಲ್ಲಿ ವಿನಿಯೋಗಿಸುತ್ತಾರೆ. ನಿನ್ನ ಪ್ರಿಯರಾದ ಭಕ್ತರಲ್ಲಿ ಸ್ವಲ್ಪವನ್ನೂ ವಿನಿಯೋಗಿಸುವುದಿಲ್ಲ. ಹೀಗಾಗಿಯೇ ಇವರ ಆಯುಷ್ಯವು ಅಳಿದು ಮುಪ್ಪು ಆವರಿಸಹತ್ತಿದೆ; ಆದರೆ ತೃಷ್ಣೆಗೆ ಪಾತ್ರ

ಮುಪ್ಪೇ ಇಲ್ಲ. ಇವರನ್ನು ನೋಡಿ ಬೆನ್ನು ಹತ್ತಿ ಮೃತ್ಯುವು ನಗುತ್ತಲಿದೆ-ಆದರೆ ಇದನ್ನು ನೋಡದೆ-"ನನ್ನ ಸಮರಾರು ? ನಾನು ನೂರು ವರ್ಷ ಜೀವಿಸುವೆ ! ಇವರು ನನ್ನ ಮಕ್ಕಳು; ಇವರು ನಿನ್ನ ಮಕ್ಕಳು ! ನನ್ನ ನಲ್ಲೆಯು ಸುಲಕ್ಷಣಳು; ಮನೋಹರ ಮುಖಿಯು ಮಗಳಿಗೆ ಮದುವೆಯಾಗ ಬೇಕು; ಮಗನಿಗೆ ಮದುವೆಯಾಗಬೇಕು. ಇದು ಮಗಳ ಮದುವೆಯ ಧನ; ಇದು ಮಗನ ಮದುವೆಯ ಧನ !" ಎಂದು ಮುಂತಾಗಿ ಕೂಗುತ್ತ ಲಿರುವರು. ಶ್ರೀ ಕೃಷ್ಣನೇ ! ವಿಷ್ಣುವೇ ! ಹೀಗೆ ನಿನ್ನವರು ಶ್ವಪಚ ರಾಗಿರುತ್ತಾರೆ· ಯಮಪಾಶದಲ್ಲಿ ಸಿಲುಕಿ ಬದ್ಧರಾಗಿದ್ದಾರೆ. ಮೃತರಾದ ನಂತರ-ಧನ-ವಸ್ತ್ರ-ಪುತ್ರ-ಮಿತ್ರ-ಕಲತ್ರರಾರೂ ನಮ್ಮೊಡನೆ ಬರುವುದಿಲ್ಲ ಧನವೆಲ್ಲಿ ? ವಸ್ತ್ರವೆಲ್ಲಿ ? ಹೀಗಾಗಿ ಇವರ ಆಯುಷ್ಯವು ವ್ಯರ್ಥವಾಗಿ ಹೋಗುತ್ತಲಿದೆ.ಅಯ್ಯೋ ಇವರು ಹೀಗೆ ನಷ್ಟರಾದರಲ್ಲ; ಇದು ಕೆಟ್ಟದು!" ಎಂದು ಔರ್ವರು ವಿಷಯ ಮೂಢರನ್ನು ನೋಡಿ ವಾಸುದೇವೈಕ ನಿಷ್ಠೆ ಯಿಂದ ದಯೆಯಿಂದ ರೋದಿಸಿದರು. ಆದುದರಿಂದ ಅವರು ತಂದೆಯಾದ. ಉರುವಿನ ಶೇಷ ರೋದನವನ್ನು ಪೂರೈಸಿದರು.ಇಲ್ಲಿಗೆ ಮಗನ ರೋದನವು ಮುಗಿದುದು.

ಶೇಷ-ಸದಾಶಿವ-ಊರ್ಧ್ವ, ತಪ-ಅಹಂಕಾರ ನರ-ಅಪಟ-ಲಕ್ಷ್ಮಣ-ಬಲರಾಮ - ಶುಕ - ಸದ್ಯೋಜಾತ – ವಾಮದೇವ ಅಘೋರ-ಪುರುಷ ದುರ್ವಾಸಾ-ಅಶ್ವತ್ಥಾಮಾ–ಔರ್ವ–ಜೈಗೀಷವ್ಯ-ಈ ಮುಂತಾದ ರುದ್ರ ರೂಪಗಳು, ಹಿಂದೆ ಹೇಳಿದ ಭಾರತೀ ಸರಸ್ವತಿ, ತದ್ರೂಪಗಳಿಂದ ನೂರುಗಳಿಂದ ಕಡಿಮೆಯವೆಂದು ತಿಳಿಯಬೇಕು. ಅದರಂತೆ ಗರುಡ ಹಾಗೂ ಶೇಷ-ತದ್ರೂಪಗಳೆಲ್ಲವು ಇವುಗಳಿಗೆ ಸಮಾನವೆಂದು ತಿಳಿಯ ಬೇಕು. ॥ ೧೧ ॥

**ಅವತರಣಿಕಾ:**— ಈ ಪದ್ಯದಲ್ಲಿ ಗರುಡ ಶೇಷಾದಿಗಳು (ರುದ್ರರು) ಮೂವರು ಸಮರು. ಭಾರತ್ಯಾದಿಗಳಿಂದ ನೂರು ಗುಣ ಕಡಿಮೆ ಎಂದೂ, ತರುವಾಯ ೬ನೇ ಕಕ್ಷ್ಯದಲ್ಲಿಪ್ಪ ಜಾಂಬವತ್ಯಾದಿಷಣ್ ಮಹಿಷಿಯರರೂಪ ೭ ನೇ ಪದ್ಯದವರೆಗೆ ಹೇಳುತ್ತಾರೆ.

**ಗರುಡ ಶೇಷ ಶಶಾಂಕದಳ ಶೇ।**
**ಖರರು ತಮ್ಮೊಳು ಸಮರು ಭಾರತಿ।**
**ಸರಸಿಜಾಸನ ಪತ್ನಿಗಧಮರು ನೂರು ಗುಣದಿಂದ॥**
**ಹರಿ ಮಡದಿ ಜಾಂಬವತಿಯೊಳು ಶ್ರೀ।**
**ತರುಣಿಯಾವೇಶ ವಿಹುದೆಂದಿಗು।**
**ಕೊರತೆಯೆನಿಪರು ಗರುಡ ಶೇಷರಿಗೈವರೈದು ಗುಣ ॥೧೨॥**

**ಪದ್ಯಾರ್ಥ:—** ಗರುಡ=ಗರುಡದೇವರು, ಶೇಷ=ಶೇಷದೇವರು, ಶಶಾಂಕದಳ ಶೇಖರರು=ಚಂದ್ರಮೌಳೀಶ್ವರ ರುದ್ರದೇವರು, ಈ ಮೂರು ಜನರು ತಮ್ಮ ತಮ್ಮಲ್ಲಿ ಸಮಾನರೆನಿಸಿ ಕೊಳ್ಳುತ್ತಾರೆ. ಆದರೆ, ಭಾರತೀ-ಮರುತ್ಪತ್ನಿ ಭಾರತೀದೇವಿಯರಿಗೆ, ಮತ್ತು ಸರಸಿಜಾಸನಪತ್ನಿ=ಕಮಲವೇ ಪೀಠವಾಗಿವುಳ್ಳ ಬ್ರಹ್ಮದೇವರ ಹೆಂಡತಿ ಇವರಿಬ್ಬರಿಗೆ, ನೂರು ಗುಣದಿಂದ=ಒಂದುನೂರು ಗುಣಗಳಿಂದ. ಅಧಮರು=ಕಡಿಮೆ ಎನಿಸುತ್ತಾರೆ.

ಇನ್ನು ಮುಂದೆ ೬ ನೇ ಕಕ್ಷದಲ್ಲಿಪ್ಪ ಷಣ್ಮಹಿಷಿಯರನ್ನು ಸ್ತುತಿಸುತ್ತಾರೆ. ಹರಿಮಡದಿ=ನೀತವಾಗಿ-ಸದಾ ಸರ್ವಕಾಲದಲ್ಲಿರುವ ಶ್ರೀದೇವರ ಆರುಮಂದಿ ಹೆಂಡಂದಿರು. ಜಾಂಬವತಿ=ಜಾಂಬವತೀ ದೇವಿಯಲ್ಲಿ, ಎಂದೆಂದಿಗೂ=ಸದಾ ಸರ್ವಕಾಲ, ಶ್ರೀತರುಣಿ ಆವೇಶವಿಹದು=ಶ್ರೀ ಲಕ್ಷ್ಮೀ ದೇವಿಯರ ಆವೇಶ ಉಂಟು. ಮಿಕ್ಕಾದ ಐದು ಜನರು, ಗರುಡ ಶೇಷರಿಗೆ, ಐದು ಗುಣ ಕೊರತೆಯೆನಿಸುತ್ತಾರೆ=ಐದು ಗುಣಗಳಿಂದ ಕಡಿಮೆ ಎನಿಸುತ್ತಾರೆ. ಜಾಂಬವತಿದೇವಿ ಮಾತ್ರ ಶ್ರೀ ಲಕ್ಷ್ಮಿ ಆವೇಶ ಇದ್ದರಿಂದ ಶೇಷದೇವರಿಗೆ ಸಮಾನರೆನಿಸುತ್ತಾರೆ. ಉಳಿದ ಐದು ಜನರನ್ನು ಮುಂದಿನ ಪದ್ಯದಲ್ಲಿ ಸ್ತೋತ್ರಗೈಯ್ಯುತ್ತಾರೆ.

**ಭಾವಸೂಚನ** ॥ ಗರುಡೇತಿ॥ ಶೇಷರುದ್ರೌ ಪ್ರಕೀರ್ತಿತಾ ಗರುಡಷ್ಚ ತ್ರಯಸ್ತ್ವೇತೇ ಪರಸ್ಪರತ್ಯಾಃ ಶತಾವರಾ ಇತಿ ॥ ತಾರತಮ್ಯಸ್ತೋತ್ರೇ। ಎಂದಿಗೂ ಸರ್ವದಾ ॥ ಅಗ್ಗೆ ಶೇಷಸಮಳು ಶ್ರೀತರುಣಿ ಆವೇಶಾಧಿಕ್ಯ

ಬಲದಿಂದ ॥ ಜಾಂಬವತ್ಯಧಿಕಾವೇಶೇ ಲಕ್ಷ್ಮ್ಯಾಃ ಶೇಷಸಮಾ ಇತ್ಯುಕ್ತೇಃ ॥ ಗರುಡಾದಿ ತ್ರಿಕಾದ್ವಿಷ್ಣ(ಷ್ಣು)ಜಾಯಾಃ ಪಂಚ ಗುಣಾಧಮಾ ಇತಿ॥ವಿಷ್ಣು ಜಾಯಾ ಜಾಂಬವತ್ಯತಿರಿಕ್ತಾಃ ಕೃಷ್ಣಾಂಗಸಂಗಾಭಾವಕಾಲೇ ಯತ್ತತ್ ॥ ಸಪ್ತಮಾಧ್ಯಾಯೇ ಛಾಂದೋಗ್ಯಭಾಷ್ಯೇ ಸ್ಪಷ್ಟಂ ತತ್ರೈವಾವ ಧೇಯಂ ॥ ೧೨ ॥

**ವಿಶೇಷ ಸೂಚನೆ** ॥ ಗರುಡ ಪುರಾಣ ಬ್ರಹ್ಮಕಾಂಡ ಅಧ್ಯಾಯ೨೪ ರಲ್ಲಿ **ಜಾಂಬವತೀ** ॥ ಸೋಮಸ್ಯ ಪುತ್ರೀ ಪೂರ್ವಸರ್ಗೇ ಬಭೂವ ॥ ಭಾರ್ಯಾ ಮದೀಯಾ ಜಾಂಬವತೀ ಮಮ ಪ್ರಿಯಾ॥ಎಂದು ಶ್ರೀಕೃಷ್ಣನ ವಚನದಂತೆ ಸೋಮಪುತ್ರಿಯಾಗಿ ಅವತರಿಸಿವಳು. ಕುಮಾರಿ ಕನ್ಯಾ ಅವಸ್ಥೆಯಲ್ಲಿ ಮಹಾ ವೈರಾಗ್ಯಯುಕ್ತಳಾಗಿ ಸರ್ವೇಂದ್ರಿಯಗಳಿಂದ ಆಗುವ ಕ್ರಿಯೆಯನ್ನು ಹರಿಗೆ ಅರ್ಪಿಸುವಳು, ಬ್ರಾಹ್ಮಣರನ್ನು ವಿಷ್ಣುಭಕ್ತಿ ಯಿಂದ ಪೂಜಿಸಿವಳು.

**"ಪಂಚಾಶತ್ಕಲ್ಪಂ ಕಾರಯಾಮಾಸ ದೇವೀ ವಿಷ್ಣೋಃ ಯಾತ್ರಾಂ** ತೀರ್ಥಯಾತ್ರಾಂ ಚಕಾರ"ಎಂಬುವಂತೆ ಶ್ರೀನಿವಾಸನ ಸಂದರ್ಶನಕ್ಕೆ ಪೋಗಿ, ಶ್ರೀನಿವಾಸನ ಸಂದರ್ಶನದಿಂದ ಆವಶ್ಯಕಪಾದವರಿಗೆ ಸ್ತೋತ್ರ ಮಾಡಿ, ಜೈಗೀಷವ್ಯರ ಉಪದೇಶದಂತೆ ಸದಾ ಶ್ರೀನಿವಾಸ ಮಗ್ನಳಾಗಿ, ಶ್ರೀನಿವಾಸ ಸ್ತೋತ್ರ ರಾತ್ರಿ ಕಾಲವಲ್ಲಿಯೂ ಶ್ರೀನಿವಾಸದರ್ಶನ, ಪ್ರಭಾತ ಸ್ತೋತ್ರದಿಂದ ಶ್ರೀನಿವಾಸನನ್ನು ಮೆಚ್ಚಿಸಿ ಋಷಿ ತೀರ್ಥದಲ್ಲಿ ಕೃಷ್ಣಾವತಾರ ಪರ್ಯಂತ ತಪಸ್ಸುಮಾಡಿ, ಯೋಗಧಾರಣೆ ಶಕ್ತಿಯಿಂದ ದೇಹ ತ್ಯಜಿಸಿ **ಜಾಂಬವಾನನ ಮನೆಯಲ್ಲಿ ಜಾಂಬವತಿ ನಾಮ**ದಿಂದೇ ಅವತರಿಸಿದಳು. ಪಿತಾ ಜಾಂಬುವಾನನು ಶ್ರೀಕೃಷ್ಣಗೆ ಪಾಣಿಗ್ರಹಣ ಮಾಡಿ ಕೊಟ್ಟನು. (ಅಧ್ಯಾಯ ೨೪ ರಿಂದ ೨೮ ಅಧ್ಯಾಯವರಿಗೆ ವರ್ಣನವಿದೆ)

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯಪದ :—**
ಶೇಷಗೆ ಸಮಾನನೆನಿಪಳು ಜಾಂಬವತಿ ರಮಾ। ವೇಶಕಾಲದಿ ಷಣ್ಮಹಿಷಿ ಯರ ವೊಳಗೆ। ಹ್ರಾಸಕಾಲದಿ ಸಮಳು ಐವರಿಗೆ ಜಾಂಬವತಿ। ವಿಂಶಾದ್ಯರಿಗೆ ಹರಿಸ್ತ್ರೀಯರಧಮಳೈದುಗುಣ ॥ ೧೨ ॥

ರೇವತಿ ಶ್ರೀಯುತ ಶ್ರೀಪೇಯ ರೂಪತ್ರ। ಯಾವ ಕಾಲದಿ ವಾರು ಣಿಗೆ ಪಾರ್ವತೀ ॥ ದೇವಿ ಸೌಪರಣಿಗೆ ಸಮ ಷಣ್ಮಹಿಷಿಗೆರಡು। ಮೂಪ ರಿರೈಗುಣ ಕಡಿಮೆ ಪತಿಗಳಿಗೆ ॥ ೧೩ ॥

## ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ

"ಗರುಡ" ಇತಿ ॥ "ಹರಿ" ಇತಿ॥ "ದೇವ್ಯಾವೇಶಾತ್ ವರಾ ತಾಭ್ಯಃ" ಇತಿ ಟೀಕಾಯಾಮ್ ॥ "ದೇವಿ" ಇತಿ ಶ್ರೀರುದ್ರಾಹೃತಾ॥ ಅಯಂ ಭಾವಃ ಜಾಂಬವತ್ಯಾದಿ ಷಟ್ಕೇ (ಟ್ಕಂ) ಜಾಂಬವತೀ ಸ್ವರೂಪೇಣಾಪ್ಯಧಿಕಾ ॥ ಅನ್ಯಾಃ ಜಾಂಬವತ್ಯಾಃ ಕಿಂಚಿತ್ ಊನಾಃ ॥ ದೇವ್ಯಾವೇಶಯುತಾಃ ಅಪಿ ತಾಃ ಪರಸ್ಪರಂ ಸಮಾಃ ॥ ಸರ್ವಾಃ ಅಪಿ ಗರುತ್ಮತ್ಪ್ರಮುಖೇಭ್ಯಃ ಪಂಚ ಗುಣಾವರಾಃ ॥ **ರಮಾವೇಶಾಧಿಕ್ಯಕಾಲೇ ಜಾಂಬವತೀ ಶೇಷಸಮಾ** ॥ ಅನ್ಯಾಃ ಕಿಂಚಿದೂನಾಃ ॥ ರಮಾವೇಶಹ್ರಾಸಕಾಲೇ ಪ್ರದ್ಯುಮ್ನಾತ್ ವಿಂಶದ್ಗುಣಾಧಿಕಾಃ ॥ ಜಾಂಬವತೀ ತಾಭ್ಯಃ ಶೇಷಸಮಾ ॥ ಇತಿ ಮೂಲರೂಪಾಪೇಕ್ಷಯಾ ಮುಕ್ತ್ಯಪೇಕ್ಷಯಾ ಚ ಪ್ರದ್ಯುಮ್ನಾದಿತ್ರ್ಯವ ತಾರಪೇಕ್ಷಯಾ ಕಿಂಚಿದಧಿಕಾ ॥ ತಥೈವಾನ್ಯಾಃ ಸರ್ವದಾಸುಪ್ರವಿಷ್ಟಾಃ ತಾಸಾಂ ಮಧ್ಯೇ ಜಾಂಬವತೀ ಪ್ರಧಾನಾ ॥ ರಾಮೇಣ ತುಲ್ಯಾ ಜಾಂಬ ವತೀ ಪ್ರಿಯತ್ವೇ ಕೃಷ್ಣಸ್ಯಾನ್ಯಾಃ ಕಿಂಚಿದೂನಾಶ್ಚ ತಸ್ಯಾಃ ॥ ಯದ್ಯಾ ವೇಶಃ ಬಹುಲಃ ಸ್ಯಾತ್ ರಮಾಯಾಃ ತದಾ ತಾಸು ಪ್ರೀಯತೇ ಕೇಶವೋಽ ಲಮ್ ॥ ಯದ್ಯಾವೇಶಃ ಹ್ರಾಸಮುಪೈತಿ ತತ್ರ ಪ್ರದ್ಯುಮ್ನತಃ ವಿಂಶ ಗುಣಾಧಿಕಾಸ್ಸ್ಯುಃ ॥ ೧೩ ॥



## ಕನ್ನಡಾರ್ಥ

"ಹರಿಮುಡದಿ" ಎಂಬ ಉತ್ತರಾರ್ಧದಲ್ಲಿ ತಿಳಿಯಬೇಕಾದ ವಿಶೇಷ "ದೇವಿಯ ಆವೇಶದಿಂದ ಜಾಂಬವತಿಯು ಮಿಕ್ಕವರಿಗಿಂತ ಉತ್ತಮಳು." ಎಂದು ಟೀಕಾವಾಕ್ಯದ ಅರ್ಥ. ದೇವಿಯೆಂದರೆ ಶ್ರೀ ಲಕ್ಷ್ಮೀ ಎಂದೇ ಪ್ರಸಿದ್ಧವಿದೆ. ಜಾಂಬವತೀ ಮುಂತಾದ ಆರು ಮಹಿಷಿಯರಲ್ಲಿ ಜಾಂಬ ವತಿಯು ಸ್ವರೂಪದಿಂದಲೂ ಅಧಿಕಳು. ಮಿಕ್ಕವರು ಜಾಂಬವತಿಗಿಂತಲೂ

ಸ್ವಲ್ಪ ಕಡಮೆಯುವರು. ಲಕ್ಷ್ಮೀದೇವಿಯ ಆವೇಶಯುಕ್ತರಾದವರೂ ಅವರು ಪರಸ್ಪರ ಸಮರು. ಇವರೆಲ್ಲರೂ ಗರುಡ ಮುಂತಾದವರಿಂದ ಐದು ಗುಣ ಗಳಿಗೆ ಕಡಮೆಯಾದವರು. ರಮಾದೇವಿಯ ಆವೇಶವಿರುವ ಸಮಯದಲ್ಲಿ ಜಾಂಬವತಿಯು ಮಾತ್ರ ಶೇಷನಿಗೆ ಸಮಳಾಗುತ್ತಾಳೆ; ಉಳಿದವರು ಸ್ವಲ್ಪ ಕಡಮೆಯಾಗುತ್ತಾರೆ. ರಮಾವೇಶಹ್ರಾಸ ಕಾಲದಲ್ಲಿ ಪ್ರದ್ಯುಮ್ನನಿಗಿಂತ ಇಪ್ಪತ್ತು ಗುಣಗಳಿಂದ ಅಧಿಕರು "ತಾಭ್ಯಃ ಶೇಷಸಮಾ ಮತಾ" ಎಂಬು ದಕ್ಕೆ ಮೂಲರೂಪದಲ್ಲಿಯೂ ಮುಕ್ತಿಯಲ್ಲಿಯೂ ಪ್ರದ್ಯುಮ್ನಾದಿತ್ಯಾವತಾರ ದಿಂದಲೂ ಸ್ವಲ್ಪ ಅಧಿಕಳು." ಎಂದು ತಾತ್ಪರ್ಯ. "ಅದರಂತೆ ಉಳಿದ ಐದು ಸ್ತ್ರೀಯರಲ್ಲೂ ಸಹ ಲಕ್ಷ್ಮೀದೇವಿಯು ಅನುಪ್ರವೇಶಿಸುವಳು. ಅವರಲ್ಲಿ ಜಾಂಬವತಿಯು ಶ್ರೇಷ್ಠಳು. ಜಾಂಬವಂತಿಯು ಬಲರಾಮನಿಗೆ ಸಮಳು. ಕೃಷ್ಣಪ್ರಿಯತ್ವದಲ್ಲಿ ಉಳಿದವರು ಸ್ವಲ್ಪ ಕಡಮೆಯಾದವರು. ರಮಾವೇಶವು ಅಧಿಕವಾಗಿರಲು ಅವರಲ್ಲಿ ಕೇಶವನು ಹೆಚ್ಚಿಗೆ ಪ್ರೀತನಾಗು ವನು. ರಮಾವೇಶವು ಹ್ರಾಸವಾದಾಗ ಅವರು ಪ್ರದ್ಯುಮ್ನನಿಗಿಂತ ಇಪ್ಪತ್ತು ಗುಣಗಳಿಂದ ಅಧಿಕರಾಗಿರುತ್ತಾರೆ;" ಎಂಬ ವಚನಗಳು ಆಧಾರ ವಾಗಿರುತ್ತವೆ. ॥ ೧೨ ॥

**ಅವತರಣಿಕಾ:**— ಷಣ್ಮಹಿಷಿಯರಲ್ಲಿ ಉಳಿದ ಐದುಜನರ ಹೆಸರು ಬಣ್ಣಿಸಿ, ವಾರುಣಿ ಸೌಪರಣಿ ಪಾರ್ವತೀ ಮೂರು ಜನರನ್ನು ತುತಿಸು ತ್ತಾರೆ.

**ನೀಲಭದ್ರಾ ಮಿತ್ರವಿಂದಾ ।**
**ಲೋಲೆನಿಪ ಕಾಳಿಂದಿ ಲಕ್ಷಣ ।**
**ಬಾಲೆಯರಿಗಿಂದಧಮ ವಾರುಣಿ ಸೌಪರಣಿ ಗಿರಿಜಾ ॥**
**ಶ್ರೀ ಲಕುಮಿಯುತರೇವತೀ ಶ್ರೀ ।**
**ಮೂಲರೂಪದಿ ಪೇಯಳೆನಿಪಳು ।**
**ಶೈಲಜಾದ್ಯರು ದಶಗುಣಾಧಮ ತಮ್ಮ ಪತಿಗಳಿಗೆ ॥೧೩॥**

**ಪದ್ಯಾರ್ಥ:**— ನೀಲಾ=ನೀಲಾದೇವಿ, ಮಿತ್ರವಿಂದಾ=ಮಿತ್ರ

ವಿಂದಾದೇವಿ, ಮೇಲೆನಿಪ=ಶ್ರೇಷ್ಠಳಾದ, ಕಾಳಿಂದಿ=ಯಮುನಾದೇವಿ ತಂಗಿ ಕಾಳಿಂದಿದೇವಿ, ಲಕ್ಷಣ=ಲಕ್ಷಣಾದೇವಿ, ಹಿಂದೆ ವರ್ಣಿಸಿದಂತೆ, ಜಾಂಬವತಿ ಇವರಿಂದ ಮೇಲೆನಿಸಿದವಳ=ಶ್ರೇಷ್ಠಳು. ಇಲ್ಲಿಗೆ ತಮ್ಮಯ, ಈ ಆರು ಜನರು ಹರಿಯ ರಾಣಿಯರು.

ಈ ಷಣ್ಮಹಿಷಿಯರಿಗಿಂತ, ವಾರುಣೀ=ಶೇಷದೇವರ ಪತ್ನಿ ವಾರುಣೀ ದೇವಿಯರು, ಸೌಪರಣೀ=ಗರುಡದೇವರ ಪತ್ನಿ ಸೌಪರಣೀ ದೇವಿಯರು, ಗಿರಿಜಾ=ಗಿರಿರಾಜಪುತ್ರಿ ಪಾರ್ವತಿ ರುದ್ರಪತ್ನಿ, ಈ ಮೂವರು ಸಮರು. ರೇವತಿ=ಬಲರಾಮನ ಪತ್ನಿ ರೇವತಿಯು, ಶ್ರೀ ಲಕುಮಿ ಆವೇಶದಿಂದ ಯುಕ್ತಳು. ಈಕೆಯು, ಮೂಲರೂಪದಿ=ಮೂಲದಲ್ಲಿ, ಪೇಯಳೆನಿಪಳು= ಪೇಯಾಭಿಮಾನಿ ಎಂದು ಕರೆಸುವಳು, ಶೈಲಜಾದ್ಯರು=ಗಿರಿ ರಾಜನಲ್ಲಿ ಪುಟ್ಟಿದ ಪಾರ್ವತಿ, ವಾರುಣಿ, ಸೌಪರಣಿಗಳು ತಮ್ಮ ಪತಿಗಳಿಗೆ=ರುದ್ರ, ಶೇಷ, ಗರುಡ ದೇವರಿಗೆ, ದಶಗುಣಾಧಮರು=ಹತ್ತು ಗುಣದಿಂದ ಕಡಿಮೆ ಎನಿಸುವರು.

**ಭಾವಸೂಚನ** ॥ ನೀತೀತಿ ವಾರುಣೀತಿ ॥ ಶೇಷ ಭಾರ್ಯಾಧಮರು ದ್ವಿಗುಣದಿಂದ ॥ ತಾಭ್ಯಸ್ತು ದ್ವಿಗುಣಾಧಮಾಃ ॥ ಸೌಪರಣೀ ವಾರುಣೀ ಗೌರ್ಯಾ ವ್ಯಾಸಾಚಾರ್ಯೋಕ್ತಿಮಾನತ ಇತಿ ತಾರತಮ್ಯಸಂಗ್ರಹೇ ॥ ರೇವತೀ=ರೇವತೀ ಶ್ರೀಯುತಾ ಶ್ರೀಶ್ಚೇತಿ; ವ್ಯಾಸರಾಜ ಪೂಜ್ಯ ಚರಣೋಕ್ತೇಃ ॥ ದಶೇತಿ ॥ ಇತಿ ತೇ ಗರುಡಾದ್ಯಾಸ್ತು, ಸ್ವಭಾರ್ಯಾಭ್ಯೋ ದಶಾಧಿಕಾಃ ಇತಿ ಭಾರತತಾತ್ಪರ್ಯ ನಿರ್ಣಯಸ್ತು ಯತೋ ವಚಃ ಇತಿ ಸಂಗ್ರಹೇ ॥ ತ್ಯಾಭ್ಯಶ್ಚೈತೇ ಶತಗುಣೈರ್ದಶತೋ ವರಿಷ್ಠಾ ಇತಿ ಶ್ರೀ ನಿರ್ಣಯೇ ॥ ೧೩ ॥

**ವಿಶೇಷ ಸೂಚನೆ** ॥ ನೀಲಾದಿ ೫ ಜನರ ಪೂರ್ವ ವೃತ್ತಾಂತ ಬ್ರಹ್ಮ ಕಾಂಡ ಗಾರುಡದಲ್ಲಿ ವಿವರಿಸಿದ್ದೇನೆಂದರೆ, ೨೦ ರಿಂದ ೨೫ ಅಧ್ಯಾಯ ಸಂಕ್ಷೇಪ.

೧ **ನೀಲಾದೇವಿ** ॥ ಪೂರ್ವ ಸರ್ಗದಲ್ಲಿ, ಕಾವ್ಯ ಬಾಲ ಪುತ್ರಿ.

ಕುಮಾರಿ ಅವಸ್ಥಾದಲ್ಲಿ ಶ್ರೀಕೃಷ್ಣನೇ ಪತಿಯಾಗಬೇಕೆಂಬ ಇಚ್ಛೆಯಿಂದ ಶೇಷ ಪರ್ವತದಲ್ಲಿ ತಪಸ್ಸು ಮಾಡಲು, ಶ್ರೀಹರಿಯು ಪ್ರಸನ್ನನಾಗಿ ತಥಾಸ್ತು ಎಂದು ವರಕೊಟ್ಟನು. ಮತ್ತು ಆ ತೀರ್ಥವು ಕುಮಾರ ಧಾರಾ ತೀರ್ಥವೆಂದು ಹರಿಯಿಂದ ಪ್ರಸಿದ್ಧವಾಯಿತು. ಶ್ರೀಕೃಷ್ಣಾವತಾರ ದಲ್ಲಿ ಮೊದಲು ನಿನ್ನನುಗ್ರಹಿಸುವೆನೆಂದು ವರವಿತ್ತನು. ಆ ಕುಮಾರಿಯು ತಪಸ್ಸಿನಲ್ಲೇ ದೇಹತ್ಯಾಗಮಾಡಿ ದ್ವಾಪರ ಕೃಷ್ಣಾವತಾರದಲ್ಲಿ, **ನಂದ ಗೋಪನ ಶಾಲಕನಾದ, ಕುಂಭಕನಲ್ಲಿ ನೀಲಾನಾಮ**ದಿಂದೇ ಅವತಾರ ಮಾಡಿದಳು. ಆ ನಗ್ನಜಿತರಾಯನಲ್ಲಿ ನೀಲಾದೇವಿ ಸ್ವಯಂವರದಲ್ಲಿ ಶಿವವರದಿಂದ ಉನ್ಮತ್ತ ಏಳು ಗೂಳಿಗಳನ್ನು ನಿಗ್ರಹಿಸಿ ಶ್ರೀ ಕೃಷ್ಣನು ಮದುವೆಯಾದನು. "ಭೂಮೌ ದ್ವಿಧಾ ಸಂಪ್ರಜಾತಾ ಕುಮಾರ್ಯೇವ ನ ಸಂಶಯಃ" ||

**೨ ಭದ್ರಾದೇವಿಜನ್ಮ** || ೨೧ ನೇ ಅಧ್ಯಾಯ. ಗಾರುಡ ಬ್ರಹ್ಮ ಕಾಂಡ ಪೂರ್ವ ಸರ್ಗದಲ್ಲಿ ಸಲನೆಂಬ ನಾಮನ ಪುತ್ರಿಯಾಗಿ, ವಿಷ್ಣುಪತ್ನಿ ಕಾಮದಿಂದ ಕನ್ಯಾವಸ್ಥೆಯಲ್ಲಿಯೇ ಗಾತ್ರಶೋಷಣ ಮಾಡಿದಳು. ತಂದೆಯು ವೃಥಾ ಗಾತ್ರಶೋಷಣವೇಕೆಂದು ಕೇಳಿದನು. ಸದಾ ನನಗೆ ನೀತಪತಿಯು ಶ್ರೀಹರಿಯೇ ಎಂದು, ದಂಡ ಪ್ರಣಾಮಾದಿಗಳಿಂದ ಶ್ರೀಹರಿ ಯನ್ನು ನಮಿಸಿ, ಶ್ರೀ ಹರಿನಾಮ ಪ್ರಶಂಸೆ ಮಾಡಿ ಹರಿನಾಮ ಸ್ಮರಣೆ ಯಿಂದ ದೇಹತ್ಯಾಗಮಾಡಿ, **ಮತ್ಪಿತೃ, (ಶ್ರೀ ಕೃಷ್ಣನ ತಂದೆ) ವಸು ದೇವನ ಭಗಿನಿಯಲ್ಲಿ ಕೈಕೇಯಿ ಸಂಜ್ಞ**ದಿಂದ, ಭದ್ರಾ ನಾಮಕಳಾಗಿ ಜನಿಸಿದಳು. "ಯಸ್ಮಾದ್ಭದ್ರಗುಣೈರ್ಯುಕ್ತಾ ಅತಃ ಸಾ ಭದ್ರನಾಮಿಕಾ|| ತಸ್ಯ ಭ್ರಾತೃಭಿಃ ಕೈಕೇಯೈ ಪಂಚಭಿಃ ಖಗಸತ್ತಮ || ಭಕ್ತ್ಯಾ ದತ್ತಾ ಮಿಮಾಂ ಭದ್ರಾಂ ಜಗೃಹೇ ಖಗಸತ್ತಮ"|| ಶ್ರೀ ಕೃಷ್ಣನು ಭದ್ರೆಯನ್ನು ಸ್ವೀಕರಿಸಿದನು.

**೩ ಮಿತ್ರ ವಿಂದಾದೇವಿ** || (ಗರುಡ ಪು. ಬ್ರ. ಕಾಂಡ) ಅ ೨೧ ಶ್ಲೋಕ ೨೨ ರಿಂದ | ಯಾ ಪೂರ್ವಸರ್ಗೇ ಪಿತೃಪುತ್ರಿಕಾ ಸತೀ **ಅಗ್ನಿ ಷ್ವಾತಾಖ್ಯ ಮಿತ್ರಾಸುವಿಂದಾ** || ಎಂಬುವ ವಚನದಂತೆ ಪೂರ್ವ ಸರ್ಗ

ದಲ್ಲಿ ಅಗ್ನಿಷ್ವಾತ್ ರಾಜನಲ್ಲಿ ಮಿತ್ರವಿಂದಾ ನಾಮದಿಂದೇ ಅವತರಿಸಿ ದಳು. ಸದಾ ಮಿತ್ರನಾದ ಶ್ರೀಹರಿಯ ಪ್ರಾಪ್ತಿಕಾಮದಿಂದ, ಸರ್ವಕಾಲ ಪುರಾಣ ಶ್ರವಣ ಮಾಡಿದಳು. ಸಾತ್ವಿಕ ಪುರಾಣಗಳಲ್ಲಿ ಶ್ರೀ ವಿಷ್ಣು ಸರ್ವೋತ್ಕರ್ಷವನ್ನೇ ಮರಣ ಪರಿಯಂತರವೂ ಕೇಳಿದಳು. ದೇಹತ್ಯಾಗ ಮಾಡಿ **ನನ್ನ ತಂದೆ ವಸುದೇವನ ಭಗಿನಿಯಲ್ಲಿ** ಅವತರಿಸಿ ಮಿತ್ರವಿಂದಾ ನಾಮಕಳೆಂದೇ ಕರಿಸಿ, ಶ್ರವಣ ಫಲದಿಂ ಮಿತ್ರನಾದ ಶ್ರೀಕೃಷ್ಣನನ್ನು ಹೊಂದಿದಳು.

**೪ ಕಾಳಿಂದಿ** ॥ ಗರುಡಪುರಾಣ ಬ್ರಹ್ಮಕಾಂಡ ಅ ೨೨ ರಲ್ಲಿ "ವಿವಸ್ವಾನ್ ನಾಮ ಸೂರ್ಯೋಽಭೂತ್ತಸ್ಯ ಪುತ್ರೀ ವ್ಯಜಾಯತ ॥ ಕಾಲಿಂದಿ ಸಂಜ್ಞಕಾ ವೀಂದ್ರ ಯಮುನಾ ಅನುಜಾ ಸ್ಮೃತಾ ॥ ಎಂಬುವ ವಚನ ದಂತೆ; ಪೂರ್ವೇ ವಿವಸ್ವಾನ್ ನಾಮಕ ಸೂರ್ಯಪುತ್ರಿ ಯಮುನಾದೇವಿಯ ತಂಗಿಯಾಗಿ ಜನಿಸಿ, ಶ್ರೀಕೃಷ್ಣನ ಪತ್ನಿಯಾಗಬೇಕೆಂದೇ, ಚಿತ್ತನಿಗ್ರಹ ದಿಂದ ಹರಿನಾಮಸ್ಮರಣೆ ಅರಿತು ತಪಸ್ಸುಮಾಡಿದಳು. ಹರಿತತ್ವಮಗ್ನ ಳಾಗಿ ಸರ್ವೋತ್ತಮನೆಂದು, ಸರ್ವಗುಣಪರಿಪೂರ್ಣನೆಂದರಿದು ಯಮುನಾ ತೀರದಲ್ಲಿ, ತಪಸ್ಸುಮಾಡುವ ಸಮಯ ಕೃಷ್ಣಸಖನಾದ ಅರ್ಜುನನು, ಮೃಗಯಾತ್ರೆಗೆ ಹೋದಾಗ್ಗೆ ಕಾಳಿಂದಿಯು ತಪಸ್ಸು ಮಾಡುವ ಉದ್ದೇಶ ಕೇಳಿದ ಪಾರ್ಥನು ಶ್ರೀಕೃಷ್ಣನನ್ನು ಪ್ರಾರ್ಥಿಸಲು ಸಖನಾದ ಅರ್ಜುನನ ಪ್ರಾರ್ಥನೆಯಂತೆ ಕನ್ನಿಕೆಯಾದ ಕಾಳಿಂದಿ ದೇವಿಯನ್ನು ಶ್ರೀ ಕೃಷ್ಣನು ಸ್ವೀಕರಿಸಿದನು.

**೫ ಲಕ್ಷಣಾದೇವಿ** ॥ ಪೂರ್ವ ಸರ್ಗೇ ಖಗೇಂದ್ರಬರ್ಹಿಷ್ಪದಸ್ಯ ವೈ ಪಿತುಃ ॥ ಸುಲಕ್ಷಣಸಂಯುತತ್ವಾದ್ಯತಃ ॥ ಸಾ ಲಕ್ಷಣಾ ನಾಮ ಚಕ್ರೀ ಖಗೇಂದ್ರ ಎಂಬ ವಚನಾನುಸಾರ, ಬರ್ಹಿಷ್ಪತು ರಾಜನಲ್ಲಿ ಜನಿಸಿದ ಪುತ್ರಿಯು ಲಕ್ಷಣಯುಕ್ತಳಾದುದರಿಂದ **ಲಕ್ಷಣಾ ಎಂದು ಹೆಸರು** ಇಟ್ಟನು. ಲಕ್ಷಣೆಯು, ತಾನು ೩೭ ಲಕ್ಷಣದಿಂದ ಯುಕ್ತಳಾದಾಗ್ಯೂ, ರಮಾ ಬ್ರಹ್ಮಾದಿಗಳಿಂದ ಉತ್ತಮ ಸಲ್ಲಕ್ಷಣನಾದ ಶ್ರೀಹರಿಯ ಪ್ರತಿಮೆಗೆ ಸರ್ವಾಲಂಕಾರ ಮಾಡಿ ಶ್ರೀಹರಿಗೆ ಅರ್ಪಿತವಾದ ಹಾಲು,ಬೆಣ್ಣೆ,ಕಿಂಚಿತ್

ಅನ್ನ ಭೋಜನ ಮಾಡುವಳು, ಮತ್ತು ಗೋಬ್ರಾಹ್ಮಣರಲ್ಲಿರುವ ಸಲ್ಲಕ್ಷಣ ಯುಕ್ತನಾದ ಅಂತರ್ಯಾಮಿ ಹರಿಯನ್ನೂ, ಸಕಲಾಂತರ್ಯಾಮಿ ಸಲ್ಲ ಕ್ಷಣ ಹರಿಯನ್ನೂ ಧ್ಯಾನಿಸುವಳು. ಶ್ರೀ ಹರಿಯೇ ಪತಿಯಾಗಲೆಂದು ಪ್ರಾರ್ಥಿಸುವಳು. ಹೀಗೆ ಶ್ರೀಹರಿಯೇ ಪತಿಯಾಗಲೆಂಬ ಕಾಮ ದಿಂದ ದೇಹತ್ಯಾಗಮಾಡಿ, **ಮದ್ರರಾಜನಲ್ಲಿ ಮದ್ರಪುತ್ರಿಯಾಗಿ** ಅವತರಿಸಿದಳು. **ಶ್ರೀಕೃಷ್ಣನು** ಸ್ವಯಂವರ ಕಾಲದಲ್ಲಿ ಸಕಲರಾಜರನ್ನು ಭೀತಿಗೊಳಿಸಿ, ಜಯಿಸಿ, ಲಕ್ಷಣಾಯುಕ್ತಳಾದ ಲಕ್ಷಣಾದೇವಿಯನ್ನು ಪಾಣಿ ಗ್ರಹಣಮಾಡಿದನು. (ಗರುಡ ಪು. ಬ್ರ. ಕಾಂಡ)

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನೀಲ" ಇತಿ ॥ "ಅಧಮ"- ದ್ವಿಗುಣೇನ ॥ "ಶ್ರೀ" ಇತಿ ॥ ಅತ್ರ ವಿಶೇಷಃ- "ವಾರುಣ್ಯಾಃ ಶ್ರೀಃ ಇತಿ ಆಖ್ಯಾ ಅಸ್ತಿ । ತದ್ರೂಪೇಣ ರಮಾ ರೂಪೇಣ ಚಾವಿಷ್ಟಾ ಯಾ ರೇವತೀ ತಯಾ ಭೋಗಸ್ತು ಯದಾವೇಶಃ ಬಹುಲಃ ಸ್ಯಾತ್ ಹರೇಃ ತದೈವ ॥ ಸದಾ ತು ವಾರುಣ್ಯವತಾರ ರೇವತೀ ಭೋಗಃ ಇತಿ ॥ "ತಪಃ ಕರ್ತುಂ ನರಃ ವಿಷ್ಣುಃ ಜಗಾಮ ಫಣಿನಃ ಪ್ರಿಯಾ ॥ ರಮಾ ಪ್ರೀತ್ಯೈ ತಪಶ್ಚಕ್ರೇ ಪ್ರೀತಾ ಸಾಪಿ ವರಂ ದದೌ ॥ ರೌಹಿಣೇಯಃ ಯದಾ ನಾಥಃ ತದಾ ಸ್ಯಾತ್ ಅಂಶವಾನ್ ಹರೇಃ ॥ ಬಲಭದ್ರಸ್ಯ ರಂತುಂ ತ್ವಂ ಮದಾವಿಷ್ಟಾ ಭವಿಷ್ಯಸಿ"ಇತ್ಯಂತೇನ ಇಂದಿರಾ ವೇಶ ಬೀಜಮುಕ್ತಂ ಅನ್ಯತ್ರ ॥ "ಮೂಲ ರೂಪದಿ" ಸಪ್ತಮೀ ॥ ಶ್ರೀ ತದಾಖ್ಯಾ ತದಾವಿಷ್ಟಾ ಸದಾ ರೇವತೀತ್ಯರ್ಥಃ ॥ "ಪೇಯ" ಮಧ್ಯ - ತನ್ನಾಮತ್ವಂ ತನ್ಮಾನಾತ್" ಸ ವಾರುಣೀಸಮಾಹ್ವಯಾಂ ಅವಾಪ ರೇವತೀಮ್ ॥ ಭಾರ್ಯಾಪ್ಯಾಯಾತ್ ವಾರುಣೀನಾಮ ಪೂರ್ವಾ ಸೈವಾ ಪರಂ ರೂಪಮಾಸ್ಥಾಯ ಚಾಗಾತ್ ॥ ಶ್ರೀರಿತ್ಯಾಖ್ಯಂ ಸೇಂದಿರಾವೇಶ ಮಗ್ರ್ಯಂ ತಸ್ಯಾಃ ವಾರುಣ್ಯಾಃ ಪ್ರತಿಮಾ ಪೇಯರೂಪಾ ॥ ನೀಲವರ್ಣ ಕೃಷ್ಣಮಾಪ್ತಾ ನೀಲಾ ॥ ಗುಣೈಃ ಭದ್ರಾ ॥ ಮಿತ್ರಂ ಹರಿಂ ಪ್ರಾಪ್ತ ಕಾಮಾ ಮಿತ್ರವಿಂದಾ ॥ ಶ್ರವಣೇನ ಹರಿಂ ಮಿತ್ರಂ ಪ್ರಾಪ್ತಾ ಚ ॥

ಕಾಲಿಂದೀ ಯಮುನಾನುಜಾ। ಲಕ್ಷಣಾಸ್ತ್ಯದೀರ್ಯ ಕ್ರಮಾತ್ ಸಪ್ತಮಿಃ ಲ್ಲಕ್ಷಣೋಪೇತಾ ಲಕ್ಷಣಾ ॥ ೧೩ ॥

## ಕನ್ನಡಾರ್ಥ

ನೀಲಾ, ಭದ್ರಾ, ಮಿತ್ರವಿಂದಾ, ಕಾಳಿಂದೀ, ಲಕ್ಷ್ಮಣಾ ಇವರುಗಳಿಂದ ವಾರುಣಿ, ಸೌಪರ್ಣಿ, ಪಾರ್ವತೀ ದೇವಿಯರು ಎರಡು ಗುಣಗಳಿಂದ ಕಡಮೆಯಾದವರು. "ಶ್ರೀ" ಎಂಬಲ್ಲಿ ತಿಳಿಯಬೇಕಾದ ವಿಶೇಷ. ವಾರುಣೀದೇವಿಗೆ "ಶ್ರೀ" ಎಂದು ಹೆಸರು ಇದೆ. ಶ್ರೀದೇವಿಯು ಈ ರೂಪದಿಂದ ವಾರುಣಿಯಲ್ಲಿ ಆವಿಷ್ಟರಿರುತ್ತಾರೆ. ರೇವತಿಯು ವಾರುಣಿಯ ಅವತಾರಳೂ, ರಮಾವೇಶಯುಕ್ತಳೂ ಆಗಿರುತ್ತಾಳೆ. ರಮಾವೇಶವು ಅಧಿಕವಾದಾಗ ಶ್ರೀಹರಿಯು. (ಬಲರಾಮನಲ್ಲಿರುವ ಶುಕ್ಲಕೇಶಾತ್ಮಕ ಹರಿರೂಪ) ವಾರುಣ್ಯವತಾರಳಾದ ರೇವತಿಯಲ್ಲಿ ರಮಾಸಂಭೋಗ ಮಾಡುತ್ತಾನೆ. ಇಲ್ಲಿ ಹೀಗೆ ಕಥಾಪ್ರಸಂಗವಿದೆ. "ನರನು ತಪಸ್ಸನ್ನು ಆಚರಿಸಲು ಹೊರಟನು. ಶೇಷಪತ್ನಿಯಾದ ವಾರುಣಿಯೂ ಸಹ ರಮಾದೇವಿಯ ಪ್ರೀತಿಗಾಗಿ ತಪಸ್ಸನ್ನು ಆಚರಿಸಿದಳು. ಆಗ ಪ್ರೀತಳಾಗಿ ರಮಾದೇವಿಯು "ನಿನ್ನ ಪತಿ ಹರಿಯ ಆವೇಶಯುಕ್ತನಾಗಿ ಬಲಭದ್ರನಾಗಿ ಅವತರಿಸಲು, ಆವಾಗ ನನ್ನ ಆವೇಶದಿಂದ ಯುಕ್ತಳಾಗುವಿ" ಎಂದು ವರವನ್ನಿತ್ತಳು. ಹೀಗೆ ಬೇರೆ ಕಡೆಯಲ್ಲಿ ಇಂದಿರಾವೇಶ ಕಾರಣವನ್ನು ಹೇಳುತ್ತಾರೆ ಮೂಲ ರೂಪದಲ್ಲಿ ಅವಳು ಪೇಯ ರೂಪಳಾಗಿದ್ದವಳು. ಎಂದರೆ, ಪೇಯಾಭಿಮಾನಿನಿಯಾದುದರಿಂದ ಪೇಯಳೆನಿಸುವಳು. "ಬಲರಾಮನು ವಾರುಣೀ ಅವತಾರಳಾದ ರೇವತಿಯನ್ನು ಮದುವೆಯಾದನು. ಅವಳು "ಶ್ರೀ" ಎಂಬ ಲಕ್ಷ್ಮೀದೇವಿಯ ಆವೇಶಯುಕ್ತಳು. ಹಾಗೂ ಮೂಲರೂಪದಲ್ಲಿ ಪೇಯಾಭಿಮಾನಿಯಾದವಳು. ನೀಲವರ್ಣದ ಕೃಷ್ಣನನ್ನು ಹೊಂದಿದ್ದರಿಂದ ನೀಲಾ, ಗುಣಗಳಿಂದ ಭದ್ರಳಾದವಳು ಭದ್ರಾ ; ಪವಿತ್ರನಾದ ಹರಿಯನ್ನು ಹೊಂದಿರುವಳು. ಅಥವಾ ಶ್ರವಣದಿಂದ ಹರಿಯನ್ನು ಮಿತ್ರನನ್ನಾಗಿ ಹೊಂದಿದವಳು. ಮಿತ್ರವಿಂದಾ; ಯಮುನೆಯ ತಂಗಿಯೇ ಕಾಳಿಂದೀ; ಲಕ್ಷಣಗಳನ್ನು ಹೇಳಿಸಿಕೊಂಡು ಕ್ರಮದಿಂದ ಚಪ್ಪತ್ತೇಳು

ಲಕ್ಷಣವುಳ್ಳವಳು ಲಕ್ಷಣಾ; ಹೀಗೆ ಷಣ್ಮಹಿಷಿಯರ ನಾಮಾರ್ಥಗಳನ್ನು ತಿಳಿಯಬೇಕು ॥ ೧೩ ॥

**ಅವತರಣಿಕಾ:—** ಇಂದ್ರದೇವರು ಕಾಮದೇವರ ಅವತಾರಗಳನ್ನು ವರ್ಣಿಸುತ್ತಾರೆ.

**ನರಹರೀಶಾವೇಶ ಸಂಯುತ ।**
**ನರ ಪುರಂದರ ಗಾಧಿ ಕುಶ ಮಂ ।**
**ದರದ್ಯುಮ್ನ ವಿಕುಕ್ಷ ವಾಲೀ ಇಂದ್ರನವತಾರ ॥**
**ಭರತ ಬ್ರಹ್ಮಾವಿಷ್ಟ ಸಾಂಬ ಸು ।**
**ದರುಶನ ಪ್ರದ್ಯುಮ್ನ ಸನಕಾ ।**
**ದ್ಯರೊಳಗಿಪ್ಪ ಸನತ್ಕುಮಾರನು ಷಣ್ಮುಖನು ಕಾಮ ॥ ೧೪ ॥**

**ಪದ್ಯಾರ್ಥ:—** ನರ=ಪಾರ್ಥ ಅರ್ಜುನನು ಇಂದ್ರಾವತಾರ ಅರ್ಜುನನಲ್ಲಿ, ವಿಷ್ಣು ವಾಯು ಆವೇಶದಿಂದ, ಸಂಯುತ=ಯುಕ್ತನಾದವನು. ಪಾರ್ಥನು ನರ = ಶೇಷಾವೇಶದಿಂದಲೂ ಸಹಿತನಾದವನು. (೨) **ಪುರಂದರ**=೧೪ ಮಂದಿ ಇಂದ್ರರಲ್ಲಿ ೭ನೇ ಇಂದ್ರನ ಅವತಾರವೇ ಪುರಂದರ ನಾಮಕನು. (೩) **ಗಾಧಿರಾಜ**=ವಿಶ್ವಾಮಿತ್ರನ ತಂದೆ ಇಂದ್ರಾವತಾರ. (೪) **ಕುಶ**=ಶ್ರೀರಾಮಚಂದ್ರದೇವರಲ್ಲಿ ಅವತರಿಸಿದ ಕುಶನು ಇಂದ್ರಾವತಾರ, (೫) **ಮಂದ್ರದ್ಯುಮ್ನ**=ಆರನೇ ಇಂದ್ರನೇ ಮಂದರಪ್ಯುಮ್ನನು. (೬) **ವಿಕುಕ್ಷ**=ಇಕ್ಷ್ವಾಕು ರಾಜಪುತ್ರ, (೭)**ವಾಲೀ**= ವಾಲಿನಾಮಕ ಕಪಿ ಇಂದ್ರಾವತಾರ. ಹೀಗೆ ಇಂದ್ರವತಾರಗಳನ್ನು ಪೇಳುತ್ತಾ, **ಕಾಮದೇವರ ಅವತಾರವನ್ನು ಪೇಳುತ್ತಾರೆ.** (೧) **ಭರತ**=ಕಾಮದೇವರೇ ಶ್ರೀರಾಮಚಂದ್ರ ದೇವರ ತಮ್ಮ ಭರತನಾಗಿ ಅವತರಿಸಿದ್ದಾರೆ. (೨) **ಸಾಂಬ**=ಕಾಮನು, ಈತನಲ್ಲಿ ಬಹ್ಮಾವಿಷ್ಟ=ಬ್ರಹ್ಮ ದೇವರಆವೇಶ, (೩) **ಸುದರಶನ**=ಸುದರ್ಶನ ಚಕ್ರಾಭಿಮಾನಿ ಕಾಮನು, (೪) **ಪ್ರದ್ಯುಮ್ನ**=ಶ್ರೀಕೃಷ್ಣ ಪುತ್ರ, ಸನಕಾದಿ (೪) ಜನ ಋಷಿಗಳಲ್ಲಿರುವ **ಸನತ್ಕುಮಾರ** = ಋಷಿಯು ಕಾಮಾಂಶ, (೫) **ಷಣ್ಮುಖನು**=

(**ಕುಮಾರನು**) ಸಹ ಕಾಮದೇವರ ಅಂಶಯುಕ್ತರಾಗಿರುವರನ್ನು ಸ್ತೋತ್ರ ಮಾಡಿದ್ದಾರೆ.

**ಭಾವಸೂಚನ:**— ನರೇತಿ ॥ ಅವತಾರೇತಿ ॥ "ಪುರಂದರೋ ಮಂಪ್ರದ್ಯುಮ್ನ, ಅರ್ಜುನೋ ನರಪರಿಯುಕ್ ॥ ವಾಲೀ ಗಾಧಿಃ ವಿಕುಕ್ಷಿಶ್ಚ ಕುಶಾದ್ಯಾ ಇಂದ್ರ ಉಚ್ಯತ ಇತ್ಯುಕ್ತೇಃ ॥ ಭರತೇತಿ ॥ ಬ್ರಹ್ಮೋದ್ಭವ ಶಂಖಿತನುಃ ಪ್ರಮಾತ್ಮಾ ತಾವೇವ ಜಾತೌ ಭರತಶ್ಚೇತಿ ॥ ಶ್ರೀ ನಿರ್ಣಯೇ ॥ ಸಾಂಬೇತಿ ಪ್ರದ್ಯುಮ್ನಯುಕ್ತಃ ॥ ಪ್ರದ್ಯುಮ್ನೋ ಭರತಶ್ಚ ಸುದರ್ಶನಃ ॥ ಬ್ರಹ್ಮಯುಕ್ ಸಾಂಬಸ್ಕಂದಸ್ಯ ಕುಮಾರಕಾಮ ಇತ್ಯುಕ್ತೇಃ ॥ ೧೪ ॥

**ವಿಶೇಷ ಸೂಚನೆ ಶ್ರೀ ಜಗನ್ನಾಥದಾಸರ-ಬೃ. ತಾ. ಪದ :—** ಕುಶವಾಲಿ ಗಾಧಿ ಮಂಪ್ರದ್ಯುಮ್ನನು ವಿಕುಕ್ಷಿ। ಶ್ವಸನ ಹರಿ ಶೇಷ ಸಂಯುಕ್ತಾರ್ಜುನಾ ॥ ಅಶನಿಧರನ ಸುರೂಪಂಗಳಿವು ಮನ್ಮಥನ ಪೆಸರು ಪೇಳುವೆನು ಅವತಾರಗಳ ನಿತ್ಯ ॥೧೪॥ ಪ್ರದ್ಯುಮ್ನ ಸಂಯುಕ್ತರುಗ್ಮಿಣೀ ದೇವಿಸುತ। ಪ್ರದ್ಯುಮ್ನ ಭರತನು ಸನತ್ಕುಮಾರ ॥ ಪದ್ಮಜಾವಿಷ್ಟ ಸಾಂಬ ಸುದರಶನ। ರುದ್ರನರ್ಧಾಂಗಿನಿಯರಿಗೆ ದಶಗುಣಾಧಮರೆಂದು ॥ ೧೫ ॥

## ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ

ಕ್ರಮಾಗತೇಂದ್ರಾವತಾರಾಂಶಾನ್ ಆಹ-"ನರ" ಇತಿ ॥ ಶೇಷಃ ॥ ನರಃ ಪಾರ್ಥಃ॥ಸ ಚಾರ್ಜುನೋ ನಾಮ ನರಾಂಶಯುಕ್ತಃ ವಿಷ್ಣ್ವಾವೇಶೀ॥ ಯುಧಿಷ್ಠಿರಾದ್ಯೇಷು ಚತುರ್ಷು ವಾಯುಃ ಸಮಾವಿಷ್ಟಃ ಇತಿ ॥ ಗಾಧಿಃ ವಿಶ್ವಾಮಿತ್ರಪಿತಾ ॥ ಇಂದ್ರಃ ಸಪ್ತಮಃ ಪುರಂದರಃ ॥ ಮಂಪ್ರದ್ಯುಮ್ನಃ ಷಷ್ಠಃ॥ ಕುಶಃ ರಾಮನಂದನಃ॥ದೇವ್ಯಾಂ ಸ ಚಾಜನಯದಿಂಪ್ರಹುತಾಶನಾದ್ಯೌ ಪುತ್ರೌ ಕುಶಲವೌ ॥ ವಿಕುಕ್ಷಿಃ ಇಕ್ಷ್ವಾಕುಜಃ ॥ ವಾಲೀ ಸ್ವತ ಏವ ವಾಸವಃ ॥ ಇಂದ್ರಾವತಾರೋತ್ತರಂ ಕಾಮಾವತಾರಾನ್ ವಕ್ತಿ "ಭರತ" ಇತಿ ॥ ಶ್ರೀ ರಾಮಾನುಜಃ॥ ಅತ್ರ ವಿಶೇಷಃ-"ಪ್ರದ್ಯುಮ್ನಪರತಂತ್ರವ್ ॥ ಆದ್ಯವ್ಯೂಹಗಃ ಪ್ರದ್ಯುಮ್ನಃ, ದ್ವಿತೀಯಃ ಕೃಷ್ಣಜನ್ಯಃ ॥ ಪ್ರದ್ಯುಮ್ನ

ಭರತೌ ಹರಿಪ್ರದ್ಯುಮ್ನಯುಕ್ತೌ ॥ ಸುದರ್ಶನಂ ತನ್ಮಾನೀ ಕಾಮಃ ಭರತಃ ಇತಿ=ಭರತೇ ಮಾನವಮ್॥ "ಸಂಕರ್ಷಣಾದ್ಯೈಃ ತ್ರಿಭಿರೇವ ರೂಪೈಃ ಆವಿಷ್ಟ ಆಸೀತ್ ತ್ರಿಷು ತೇಷು ವಿಷ್ಣುಃ" ಪ್ರದ್ಯುಮ್ನೇನ ಪ್ರದ್ಯುಮ್ನಃ ಇತ್ಯತ್ರ ಚತುಸ್ತನೋಃ ಹರೇಃ ಪ್ರಭೋಃ ತೃತೀಯರೂಪಸಂಯುತಃ ॥ "ಸಾಂಬೇ" ಬ್ರಹ್ಮಾವೇಶೇ, "ಅಥಾಪ ಸಾಂಬನಾಮಕಂ ಸುತಂ ಚ ರೋಹಿಣೀ ಹರೇಃ॥ ಚತುರ್ಮುಖಾಂಶ ಸಂಯುತಂ ಕುಮಾರಮೇವ ಷಣ್ಮುಖಮ್" ಇತಿ ॥ ನನು ಸಾಂಬಸ್ಯ ಜಾಂಬವತೀಜನಿ ವಿರೋಧಃ "ತತಃ ಕ್ಷಮಾಪಯನ್ ಸುತಾಂ ಪ್ರದಾಯ ರೋಹಿಣೀಂ ಸುತಾಂ । ಮಣಿಂ ಚೇತಿ ರೋಹಿಣೀತ್ಯುಕ್ತೇಃ ॥ ವಾಲಿರ್ಗಾಧಿರ್ವಿಕುಕ್ಷಿಶ್ಚ ಪಾರ್ಥ ಇಂದ್ರಃ ಪುರಂದರಃ ॥ ಸುದರ್ಶನಶ್ಚ ಭರತಃ ಪ್ರದ್ಯುಮ್ನಃ ಸ್ಕಂದ ಏವ ಚ॥ ಸನತ್ಕುಮಾರಃ ಕಾಮಶ್ಚೇತ್ಯೇಕ ಏವ ವ್ಯವಸ್ಥಿತಃ॥ ತಾಭ್ಯಃ ಶತವರಾಃ ತ್ವಿಂದ್ರಾಃ ಪುರಂದರ ಇತೀರಿತಾಃ॥ ಪುರಂ ವೃತ್ರಾದಿ ಶರೀರಂ ದಾರಯತಿ ಇತಿ ಪುರಂದರಃ ॥ ಮಂದಾನ್ ದೇವಾನ್ ಆಚಷ್ಟ ಅತಃ ಮಂಪ್ರದ್ಯುಮ್ನಃ ॥ ತತ್ರ ವಿಶೇಷಃ, ಮಂಪ್ರದ್ಯುಮ್ನ ಏವ ಅರ್ಜುನಃ॥ ಪುರಂದರಃ ವಾಲೀ ॥ ಚಂದ್ರವಂಶಃ ಗಾಧಿಃ ಮಂಪ್ರದ್ಯುಮ್ನಃ॥ ವೇದೋಕ್ತಮಂತ್ರಾಃ ಗಾಃ ಪ್ರೋಕ್ತಾಃ ಧಿಯಾ ಧಾರಯತೇ ಸುತಃ ॥ ವಿಶೇಷೇಣ ಪರಿಂ ಕುಕ್ಷೌ ವಿಜಾನಾತಿ॥ ವಾಲ್ಮೀಕಿ ಋಷಿಣಾ ಯಸ್ಮಾತ್ ಕುಶೇನೈವ ವಿನಿರ್ಮಿತಃ॥ ಪ್ರಕೃಷ್ಟ ಪ್ರಕಾಶರೂಪತ್ವಾತ್ ಪ್ರದ್ಯುಮ್ನಃ ॥ "ರಾಮಾಜ್ಞಾಂ ಭರತಃ" ಇತಿ॥ ರಿಪೂಣಾಂ ಸಾಮರ್ಥ್ಯಂ ಯಸ್ಮಾತ್ ಸ್ಕಂದತೇ ॥ ೧೪ ॥

## ಕನ್ನಡಾರ್ಥ

ಕ್ರಮಪ್ರಾಪ್ತವಾದ ಇಂದ್ರಾವತಾರಗಳನ್ನು ಹೇಳುತ್ತಾರೆ—"ನರ" ಎಂಬ ಪದ್ಯದಿಂದ. ಇಲ್ಲಿರುವ ಮೊದಲನೆಯ ನರ ಪದಕ್ಕೆ ಶೇಷನೆಂದು ಅರ್ಥ. ಎರಡನೆಯ ನರಪದಕ್ಕೆ ಪಾರ್ಥ-ಅರ್ಜುನನೆಂದು ಅರ್ಥ. ಪಾರ್ಥನು ಅರ್ಜುನನು. ಅವನು ವಿಷ್ಣುವಿನ ಆವೇಶವುಳ್ಳವನು. ಯುಧಿಷ್ಠಿರ ಮುಂತಾದ ನಾಲ್ವರಲ್ಲಿ ವಾಯುದೇವರು ಸಮಾವಿಷ್ಟರು" ಎಂದು ಮುಂತಾದ ವಚನಗಳಿರುತ್ತವೆ. ವಿಶ್ವಾಮಿತ್ರನ ತಂದೆಯು—ಗಾಧಿ.

ಪುರಂದರ ನಾಮಕ ಇಂದ್ರನು ಏಳನೆಯ ಮನ್ವಂತರದಲ್ಲಿ ಇಂದ್ರನಾಗಿರುವನು. ಆರನೆಯ ಮನ್ವಂತರದ ಇಂದ್ರನು ಮಂತ್ರದ್ಯುಮ್ನನು ಕುಶನು ರಾಮಪುತ್ರನು. "ಲಕ್ಷ್ಮೀಸ್ವರೂಪಳಾದ ಸೀತಾದೇವಿಯಲ್ಲಿ ಇಂದ್ರಾಗ್ನಿ ಸ್ವರೂಪರಾದ ಕುಶ—ಲವರೆಂಬ ಇಬ್ಬರು ಪುತ್ರರನ್ನು ಹುಟ್ಟಿಸಿದರು" ಎಂಬ ವಚನವು ಇದರಲ್ಲಿ ಆಧಾರ. ಇಕ್ಷ್ವಾಕುವಿನ ಮಗನು ವಿಕುಕ್ಷಿಯು. ಇಂದ್ರಾವತಾರನೇ ವಾಲಿಯು.

ಇಂದ್ರಾವತಾರಗಳನ್ನು ಹೇಳಿದನಂತರ **ಕಾಮಾವತಾರಗಳನ್ನು ಹೇಳುತ್ತಾರೆ**-"ಭರತ" ಎಂಬ ಉತ್ತರಾರ್ಧದಿಂದ. ರಾಮನ ತಮ್ಮನು ಭರತನು ಕೈಕೇಯಿಯ ಮಗನು. ಇಲ್ಲಿ ವಿಶೇಷ-ಪ್ರದ್ಯುಮ್ನ ಪದವನ್ನು ತಂತ್ರದಿಂದ ಆವರ್ತಿಸಬೇಕು. ಪ್ರಥಮ ವ್ಯೂಹದಲ್ಲಿ ಸೇರಿರುವ ಪ್ರದ್ಯುಮ್ನನು ಮನ್ಮಥನು. ಅವನೇ ಶ್ರೀಕೃಷ್ಣಪುತ್ರನಾದ ಪ್ರದ್ಯುಮ್ನನು, ಪ್ರದ್ಯುಮ್ನರೂಪೀ ಹರಿಯ ಆವೇಶಯುಕ್ತನು. ಭರತನು ಕಾಮಾಂಶನು ಹಾಗೂ ಹರಿಯ ಆವೇಶಯುಕ್ತನು. ಪ್ರದ್ಯುಮ್ನನು-ಕಾಮನು ತಪಸ್ಸನ್ನು ಮಾಡಿ ವರದಿಂದ ಹರಿಚಕ್ರಸ್ವರೂಪನಾದನು. ಅಂದರೆ ಅದಕ್ಕೆ ಅಭಿಮಾನಿಯಾದನು." ಎಂದು ಪ್ರಮಾಣವಿರುತ್ತದೆ. ಕಾಮನೇ ಭರತನು. **ಈ** ವಿಷಯದಲ್ಲಿ- "ಸಂಕರ್ಷಣ ಮುಂತಾದ ಮೂರು ರೂಪಗಳಿಂದ ಆ **ಮೂವರು** ದಶರಥ ಸುತರಲ್ಲಿಯೂ ಹರಿಯು ಆವಿಷ್ಟನಾಗಿರುತ್ತಾನೆ;" ಎಂಬ ವಾಕ್ಯವು ಪ್ರಮಾಣ. ಕಾಮನಲ್ಲಿ ಪ್ರದ್ಯುಮ್ನರೂಪದ ಆವೇಶವಿರುವುದೆಂಬಲ್ಲಿ-"ನಾಲ್ಕು ರೂಪಿಯಾದ (ನಾರಾಯಣನ) ಹರಿಯ ಮೂರನೆಯ ರೂಪವು (ಪ್ರದ್ಯುಮ್ನ) ಕಾಮನಲ್ಲಿ ಆವಿಷ್ಟವಿರುವುದೆಂಬ" ವಚನಗಳು ಪ್ರಮಾಣಗಳಿರುವವು. ಇನ್ನು ಸಾಂಬನಲ್ಲಿ ಬ್ರಹ್ಮಾವೇಶವಿರುವದೆಂಬ ವಿಷಯದಲ್ಲಿ-"ಷಣ್ಮುಖಾವತಾರನಾದ-ಸ್ಕಂದನು ಬ್ರಹ್ಮಾವೇಶಯುಕ್ತನಾಗಿ ಹರಿಯಿಂದ ರೋಹಿಣಿಯಲ್ಲಿ ಹುಟ್ಟಿದನು. ಅವನೇ ಸಾಂಬನು" ಎಂಬ ವಚನಗಳು ಆಧಾರಗಳು. ಹಾಗಾದರೆ "ಸಾಂಬನು ರೋಹಿಣೀತನಯನೆಂದು ಹೇಳಿದರೆ-ಜಾಂಬವತೀ ಕುಮಾರನೆಂದು ಹೇಳುವ ವಚನಗಳಿಂದ ವಿರೋಧ ಬರುವದು;" ಎಂದು ಶಂಕಿಸಬಾರದು. ಯಾಕಂದರೆ

"ಜಾಂಬುವಂತನು ಶ್ರೀಕೃಷ್ಣನಿಗೆ ಕ್ಷಮೆಯನ್ನು ಬೇಡಿಕೊಂಡು, ರೋಹಿಣಿ ಎಂಬ ತನ್ನ ಮಗಳನ್ನೂ ಸ್ಯಮಂತಕ ಮಣಿಯನ್ನೂ ಕೊಟ್ಟನು:" ಎಂಬ ವಚನಗಳಿಂದ ಜಾಂಬವತಿಯ ಮುಂಚಿನ ಹೆಸರು ರೋಹಿಣಿಯೆಂಬೇ ಇರುತ್ತದೆ. ವಾಲಿ, ಗಾಧಿ, ವಿಕುಕ್ಷಿ, ಪಾರ್ಥ, ಇಂದ್ರ, ಪುರಂದರ-ಇವರೆಲ್ಲರೂ ಸಮಾನರು. ಅದರಂತೆ ಸುದರ್ಶನಾಭಿಮಾನಿಯಾದ ಕಾಮ, ಪ್ರದ್ಯುಮ್ನ, ಭರತ, ಸ್ಕಂದ, ಸನತ್ಕುಮಾರ ಇವರು ಸಹ ಅಭಿನ್ನರೇ ಹೊರತು ಭಿನ್ನರಲ್ಲ; ಎಂದೇ ನಿಶ್ಚಿತವಿರುತ್ತದೆ. ಇವರು ಪಾರ್ವತಿಗಿಂತ ಹತ್ತು ಗುಣಗಳಿಂದ ಕಡಮೆಯವರು. ವೃತ್ರಾಸುರನ ಶರೀರವು ಪುರ. ಅದನ್ನು ವಿದಾರಣ ಮಾಡುವವನು, ಸೀಳುವವನು, ಪುರಂದರನು; ಅದರಂತೆ ಮಂತ್ರವಾಗಿ ವೇದಗಳನ್ನು ಹೇಳುವವನು. ಮಂದ್ರ ದ್ಯುಮ್ನ. ಅರ್ಜುನನೇ ಮಂದ್ರದ್ಯುಮ್ನನು. ಪುರಂದರನೇ ವಾಲಿ. ಅಥವಾ ಚಂದ್ರವಂಶದವನಾದ ಗಾಧಿಯು. ಮಂದ್ರದ್ಯುಮ್ನನು. ವೇದೋಕ್ತಮಂತ್ರಗಳಿಗೆ 'ಗಾ' ಎಂದು ಕರೆಯುತ್ತಾರೆ. 'ಅಂಥ ವೇದ ಮಂತ್ರಗಳನ್ನು ಧರಿಸುವವನು "ಗಾಧಿ" ಎಂದು ವಿಶ್ವಾಮಿತ್ರನ ತಂದೆಗೆ ಗಾಧಿಯೆಂದು ಕರೆಯುತ್ತಾರೆ. ವಿಶೇಷವಾಗಿ ಹರಿಯನ್ನು ಕುಕ್ಷಿಯಲ್ಲಿ (ಉದರದಲ್ಲಿ) ತಿಳಿಯುವವನಿಗೆ ವಿಕುಕ್ಷಿ. ಇಕ್ಷ್ವಾಕುಕುಮಾರ. ಅತಿಶಯ ಪ್ರಕಾಶ ಸ್ವರೂಪನಾದುದರಿಂದ ಪ್ರದ್ಯುಮ್ನನೆಂದು ಕಾಮನ ಹೆಸರು. ವಾಲ್ಮೀಕಿ ಋಷಿಗಳಿಂದ ಕುಶದಿಂದ ನಿರ್ಮಿಸಿದ್ದುದರಿಂದ ನಾಮಕರಣ ಮಾಡಿದ್ದುದರಿಂದ"ಕುಶ" ಎಂದು ಹೆಸರು ಕುಶನಿಗೆ-ರಾಮನ ಜ್ಯೇಷ್ಠ ಪುತ್ರ ನಿಗೆ ಬಂದಿರುತ್ತದೆ. ರಾಮನ ಆಜ್ಞೆಯನ್ನು ಪರಿಪಾಲಿಸುವುದರಿಂದ ಭರತ ನೆಂದು ಕೈಕೇಯೀ ಪುತ್ರನಿಗೆ ಹೆಸರು. ರಿಪುಗಳ ಸಾಮರ್ಥ್ಯವು ಯಾವ ನಿಂದ ಸ್ಕಂದಿತವಾಗುತ್ತದೆಯೋ ಅವನು ಸ್ಕಂದನು. ಹೀಗೆ ಸ್ಕಂದಾದಿ ಪದಗಳ ಅರ್ಥವಿವರಣೆಯನ್ನು ತಿಳಿಯಬೇಕು. ॥ ೧೪ ॥

**ಅವತರಣಿಕಾ :—** ಇನ್ನು (೯)ನೇ ಕಕ್ಷದಲ್ಲಿದ್ದ ಅಹಂಕಾರಿಕ ಪ್ರಾಣದೇವರು ಮತ್ತು ೧೦ನೇ ಕಕ್ಷದಲ್ಲಿದ್ದ ಅನಿರುದ್ಧಾದಿ ಆರುಜನರು ಆಹಂಕಾರಿಕ ಪ್ರಾಣನಿಗೆ ಅವರರೆಂದು ಹೇಳುತ್ತಾರೆ.

**ಈರಯಿದು ಗುಣ ಕಡಿಮೆ ಪಾರ್ವತಿ ।**
**ವಾರುಣೀಯುರಿಗಿಂದ್ರ ಕಾಮ ಶ ।**
**ರೀರ ಮಾನಿ ಪ್ರಾಣ ದಶಗುಣ ಅವರ ಶಕ್ರನಿಗೆ ॥**
**ಮಾರಜಾ ರತಿ-ದಕ್ಷ ಗುರು ವೃ ।**
**ತ್ರಾರಿ ಜಾಯಾ ಶಚಿ-ಸ್ವಯಂಭುವ ।**
**ರಾರು ಜನ ಸಮ ಪ್ರಾಣಗವರರು ಹತ್ತು ಗುಣದಿಂದ ॥ ೧೫ ॥**

**ಪದ್ಯಾರ್ಥ:** - ಪಾರ್ವತೀ - ವಾರುಣೀಯುರಿಗೆ, = ರುದ್ರಪತ್ನಿ, ಪಾರ್ವತೀದೇವಿ, ಶೇಷಪತ್ನಿ ವಾರುಣೀದೇವಿಗೆ, ಇಂದ್ರ ಕಾಮರು=ಇಂದ್ರ ದೇವರು, ಕಾಮದೇವರು ಈರೈದುಗುಣ ಕಡಿಮೆ=ಈರ=ಎರಡು×ಐದು=ಹತ್ತು ಗುಣಕ್ಕೆ ಕಡಿಮೆ ಇರುವರು. ಈ ಇಂದ್ರಕಾಮರಿಗೆ, ಶರೀರಮಾನಿಪ್ರಾಣ=ಈ ಸ್ಥೂಲಶರೀರಕ್ಕೆ ಅಭಿಮಾನಿಯಾದ ಆಹಂಕಾರಿಕ ಪ್ರಾಣನು, ಶಕ್ರನಿಗೆ= ಇಂದ್ರದೇವರಿಗೆ, ದಶಗುಣ ಅವರ=ಹತ್ತು ಗುಣದಿಂದ ಕಡಿಮೆ. ಈ ಆಹಂಕಾರಿಕ ಪ್ರಾಣಗೆ, ಸರ್ವೋತ್ತುಂಗನೆಂಬ ಅವತಾರ ದಾಸಾರ್ಯರೇ ಪದದಲ್ಲಿ ಹೇಳಿದ್ದಾರೆ. ಪ್ರಮಾಣಗಳಿವೆ.

ಇನ್ನು ಮುಂದೆ ೧೦ ಕಕ್ಷದಲ್ಲಿದ್ದ ಆರು ಜನರನ್ನು ಸ್ತೋತ್ರಮಾಡುತ್ತಾರೆ. ೧ ಮಾರಜಾ=ಕಾಮಪುತ್ರ ಅನಿರುದ್ಧ, ೨ ರತಿ=ಕಾಮ ದೇವರ ಹೆಂಡತಿ; ೩ ದಕ್ಷ=ದಕ್ಷ ಪ್ರಜಾಪತಿ, ೪ ಗುರು=ದೇವತೆಗಳ ಗುರು ಬೃಹಸ್ಪತ್ಯಾಚಾರ್ಯರು, ೫ ವೃತ್ರಾರಿಜಾಯಾ=ವೃತ್ರಾಸುರನನ್ನು ಸಂಹರಿಸಿದ ಇಂದ್ರದೇವನ ಹೆಂಡತಿ ಶಚಿದೇವಿಯು, ೬ ಸ್ವಾಯಂಭುವರು=ಆದಿಮನು ಸ್ವಾಯಂಭುವ ಮನು ಬ್ರಹ್ಮಪುತ್ರ, ಈ ಆರು ಜನ ಸಮ=ಈ ಆರು ಜನರು ಜ್ಞಾನಾನಂದಾದಿ ಗುಣದಿಂದ ತಮ್ಮೊಳಗೆ ಸಮರೆನಿಸುವರು. ಪ್ರಾಣಗವರರು ಹತ್ತು ಗುಣದಿಂದ, ೯ ನೇ ಕಕ್ಷದಲ್ಲಿದ್ದ ಆಹಂಕಾರಿಕ ಪ್ರಾಣದೇವರಿಗೆ ಹತ್ತು ಗುಣದಿಂದ ಕಡಿಮೆ ಎನಿಸುತ್ತಾರೆ. ॥ ೧೫ ॥

ಶ್ರೀ ಜಗನ್ನಾಥದಾಸಾರ್ಯರ ಬೃ. ತಾ. ಪದ. ಕಾಮೇಂದ್ರರಿಗೆ ದಶಗುಣ ಅಧಮ ಅಹಂಭವಪ್ರಾಣ|ನಾವ.ಕಗೆ ರೂಪ-**ಸರ್ವೋತ್ತುಂಗನು**..

ಕಾಮಪುತ್ರಾನಿರುದ್ಧಾದಿಗಳು ವಶಹೀನ। ಈ ಮಹಾತ್ಮರ ರೂಪ ಅವತಾರ ಗಳಿಗಾನಮಿಪೆ ॥ ೧೬ ॥

**ಭಾವಸೂಚನ:**—ಈರೈದೇತಿ॥ತಾಭ್ಯಸ್ತ್ರೃಷ್ಟಾಮ ಕಕ್ಷಸ್ಥೋ ಇಂದ್ರ ಕಾಮೌ ದಶಾಧಮೌ ಇತಿ ಸಂಗ್ರಹೇ॥ಶರೀರೇತಿ॥ಅಹಂಕಾರ ಭವ ಪ್ರಾಣಃ ಶಕ್ರಾತ್ ಜ್ಞೇಯೋ ದಶಾವರ ಇತಿ ತಾರತಮ್ಯೇ॥ ಮಾರಜೇತಿ ॥ ಮಾರಜ ಅನಿರುದ್ಧಃ। ತತೋ ದಶಮಕಕ್ಷಸ್ಥಾಃ, ಅನಿರುದ್ಧೋ ಗುರುಃಶಚಿ ಸ್ವಾಯಂಭುವೋ ಮನುರ್ದಕ್ಷರತಿರೇತೇ ದಶಾಧಮಾ ಇತಿ ಸಂಗ್ರಹೇ॥೧೫॥ ಇದರಂತೆ ಗರುಡಪುರಾಣವಚನಗಳೂ ಉಂಟು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈರೈದು" ಇತಿ ॥ ಪ್ರಾಣಃ ಆಹಂಕಾರಿಕ ಏವ ಚ ಇಂದ್ರಾತ್ ಅನಂತರಃ ॥ "ಮಾರಜಃ"-ಅನಿರುದ್ಧಃ ॥ ೧೫ ॥

## ಕನ್ನಡಾರ್ಥ

ಅಹಂಕಾರಿಕ ಪ್ರಾಣನು ಇಂದ್ರನ ಅನಂತರ-ಕೆಳಗಿನವನು. ಕಾಮ ಪುತ್ರನಾದ ಅನಿರುದ್ಧನಿಗೆ ಮಾರಜನೆಂದು ಹೆಸರು ॥ ೧೫ ॥

**ಅವತರಣಿಕಾ:**— ಈ ಪದ್ಯದಿಂದ, ಅನಿರುದ್ಧ, ರತಿ, ಶಚಿಯರ ಅವತಾರಗಳನ್ನು ಹೇಳುತ್ತಾರೆ.

**ಕಾಮಪುತ್ರನಿರುದ್ಧ ಸೀತಾ।**
**ರಾಮನಾನುಜ ಶತ್ರುಹನ ಬಲ।**
**ರಾಮನಾನುಜ ಪೌತ್ರನನಿರುದ್ಧನೊಳಗನಿರುದ್ಧ ॥**
**ಕಾಮ ಭಾರ್ಯಾ ರುಗ್ಮವತಿ ಸ।**
**ನ್ನಾಮ ಲಕ್ಷ್ಮಣಳೆನಿಸುವಳು ಪಾ।**
**ಲೋಮಿ ಚಿತ್ರಾಂಗದಳು ತಾರಾ ಎರಡು ಪೆಸರುಗಳು ॥ ೧೬ ॥**

**ಪದ್ಯಾರ್ಥ:**— ಕಾಮಪುತ್ರಾನಿರುದ್ಧ=ಕಾಮದೇವರ ಮಗ ಅನಿರುದ್ಧ ದೇವನು, ಸೀತಾರಾಮನಾನುಜ ಶತ್ರುಹನ= (೧) ಸೀತಾರಾಮಚಂದ್ರ ದೇವರ ತಮ್ಮನಾದ ಶತ್ರುಘ್ನನ ರೂಪ, (೨) ಬಲರಾಮನಾನುಜಪೌತ್ರ= ಬಲರಾಮದೇವರ ತಮ್ಮನಾದ ಶ್ರೀ ಕೃಷ್ಣದೇವರ ಮಗ ಪ್ರದ್ಯುಮ್ನನ ಮಗ ಅನಿರುದ್ಧನು, ಈ ಅನಿರುದ್ಧದೇವನಲ್ಲಿ ಅನಿರುದ್ಧ=ಅನಿರುದ್ಧ ನಾಮಕ ಪರಮಾತ್ಮನಾವೇಶವಿರುತ್ತದೆ. ಕಾಮಭಾರ್ಯಾ=ಕಾಮ ದೇವರ ಹೆಂಡತಿ-ರತಿದೇವಿಗೆ ಎರಡು ಅವತಾರ (೧) ರುಗ್ಮವತಿ=ರುಕ್ಮನ ಪುತ್ರಿ ರುಕ್ಮವತಿ. (೨) ಸನ್ನಾಮಲಕ್ಷಣಳೆನಿಸುವಳು=ದುರ್ಯೋಧನ ಪುತ್ರಿ. ಈ ಎರಡು ರೂಪಗಳು ರತಿಯು, ದುಷ್ಟನ ವೀರ್ಯದಿಂದ ಜನಿಸಿದರೂ, ಸನ್ನಾಮ=ಸಮೀಚೀನ ನಾಮದಿಂದ ಲಕ್ಷಣಳೆಂದು ಕರೆಸಿದ ರತಿ ಅವತಾ ರಳು, ಪೌಲೋಮಿ=ಶಚಿ ದೇವಿಯೇ (೧) ಚಿತ್ರಾಂಗದಾ=ವೀರಸೇನ ರಾಜನ ಮಗಳು ಚಿತ್ರಾಂಗದಾ ಅರ್ಜುನ ಭಾರ್ಯಾ, ತಾರಾ=ವಾಲಿಯ ಹೆಂಡತಿ ತಾರಾ ಈ ಎರಡು ಪೆಸರುಗಳೆಂದು ದಾಸರಾಯರ ಉಕ್ತಿ ಗರುಡ ಪುರಾಣ ಬ್ರಹ್ಮಾಂಡ ವಚನಗಳಂತೆ. ವ್ಯಾಸದಾಸ ಸಿದ್ಧಾಂತ ಕೌಮುದಿ ಕಾರರು ಇನ್ನೂ ಐದು ರೂಪಗಳನ್ನು ಸಪ್ರಮಾಣವಾಗಿ ಹೇಳಿದ್ದಾರೆ.

**ಶ್ರೀ ಜಗನ್ನಾಥದಾಸಾರ್ಯರ ಬೃ. ತಾ. ಪದ** ಅರ್ಥ ಪದ್ಯದಲ್ಲಿ "ಪ್ರದ್ಯುಮ್ನ ಕುವರ ಮಾರಾನಿರುದ್ಧ ಶತ್ರುಘ್ನ ಅನಿರುದ್ಧನಿಗೆ॥ ೧೭ ॥ ತಾರ ಚಿತ್ರಾಂಗದ ಶಚಿ ರೂಪಲಕ್ಷಣ। ಈ ರುಗ್ಮವತಿ ಎರಡು ರತಿರೂಪವು ॥ (೧೮ ನೇ ಪದ್ಯದ ಮೊದಲನೆ ಅರ್ಧನುಡಿ).

**ಭಾವಸೂಚನ:**— ಕಾಮಪುತ್ರೇತಿ ॥ ಕಾಮನ ಮಗ ಅನಿರುದ್ಧನೇ ರಾಮಾನುಜ ಶತ್ರುಘ್ನ. ಬಲರಾಮನಾನುಜ ಕೃಷ್ಣ ಆತನ ಮಗ ಪ್ರದ್ಯು ಮ್ನನಿಗೆ. ಅನಿರುದ್ಧ ಇದ್ದಾನೆ. ತದುಕ್ತಂ ತಾರತಮ್ಯೇ ॥ ಅನಿರುದ್ಧ ಯುಕ್ತಃ ಶತ್ರುಘ್ನೋಽನಿರುದ್ಧಃ ಕಾಮನಂದನಃ ॥ ಇತಿ ॥ ಕಾಮೇತಿ ॥ ರುಗ್ಮವತೀ ಲಕ್ಷಣಾ ರತಿ ಅವತಾರ। ಚಿತ್ರಾಂಗದಾ ತಾರಾ ಈ ಎರಡು ಶಚ್ಯವತಾರ॥ ಯಥೋಕ್ತಂ ತಾರತಮ್ಯೇ ॥ ಕಾಮಭಾರ್ಯಾ ರುಗ್ಮವತೀ ಲಕ್ಷಣೇತ್ಯಾದಿ

ರೂಪಿಣೀ । ತಾರಾ ಚಿತ್ರಾಂಗದೇತ್ಯಾದಿರೂಪಾಃ ಶಚ್ಯಾ ಅಪಿ ಹಿ ಸ್ಮೃತಾ ಇತಿ ತಾರತಮ್ಯೇ ॥ ೧೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕಾಮ" ಇತಿ ॥ ವರಾತ್ ರಥಾಂಗತ್ವಮವಾಪ ಕಾಮಃ ತತ್ಸೂನುತಾಂ ಆಪ ಚ ಸೋಽನಿರುದ್ಧಃ। ಬ್ರಹ್ಮೋದ್ಭವಃ ಶಂಖತನುಃ ಮಹಾತ್ಮಾ॥ ಚಕ್ರಮಾನಿಕಾಮಂ ದರಮಾನಿತತ್ತನಯಂ ಚ ಪರಾಮೃಶ್ಯ ತಾವೇವ ಜಾತೌ ಭರತಶ್ಚ ನಾಮ್ನಾ ಶತ್ರುಘ್ನ ಇತ್ಯೇವ ಚ ರಾಮತೋಽನುಪ್ರಾಕ್ ಭರತಸ್ಯ ಸುದರ್ಶನತ್ವಂ ಉಕ್ತಮ್ ॥ ತಚ್ಚ ಪ್ರಮಾಪಿತಮ್ ॥ ಪೌತ್ರಃ ಪ್ರದ್ಯುಮ್ನೋತ್ಥಃ ಹರೇಃ ॥ ಶತ್ರುಘ್ನೇ ಅನಿರುದ್ಧ ಹರೇಃ ಆವೇಶೇ 'ಸಂಕರ್ಷಣಾದ್ಯೈಃ ತ್ರಿಭಿಃ॥' ಇತ್ಯುಕ್ತಮ್ ॥ ಕೃಷ್ಣಪೌತ್ರೋಽನಿರುದ್ಧೋ ಇತ್ಯತ್ರ ಅನಿರುದ್ಧಃ ಕಾರ್ಷ್ಣಿಂ ಅನುಪ್ರದ್ಯುಮ್ನಾತ್ ಅಜನಿಷ್ಟ ಹ ॥ ಪೂರ್ವಮಪಿ ಅನಿರುದ್ಧಾಖ್ಯಃ ವಿಷ್ಣೋಃ ತನ್ನಾಮ ಏವ ಚ ॥ ಆವೇಶಯುಕ್ತಃ ಬಲವಾನ್ ಇತಿ ॥ 'ಕಾಮ' ಇತಿ ॥ ರತಿಃ ॥ ತದ್ರೂಪದ್ವಯಮ್ ॥ ಸದಿತಿ ಪೂರ್ವಮೇವ ಅಸ್ತೀತಿ ॥ ರುಕ್ಮಿಪುತ್ರ್ಯಾಂ ರುಕ್ಮವತ್ಯಾಂ ಆಹೃತಂ ರಾಂ ಸ್ವಯಂವರೇ । ರತಿರೇವ ಹಿ ತಸ್ಯಾಂ ॥ ದುರ್ಯೋಧನಸ್ಯಾಸ ಪುತ್ರೀ ರತಿಃ ಯಾ ಪೂರ್ವನಾಮ್ನಾ ಲಕ್ಷ್ಮಣಾ ಕಾಂತಿರೂಪಾಂ ಇತಿ ॥ ರುಕ್ಮವತೀ ಲಕ್ಷ್ಮಣವತೀತ್ಯಭೂತ್ಪಾ ದುಷ್ಟವಿಯೋಗದ್ಭವೇತಿ ಲಕ್ಷ್ಮಣಾ ಜಾತಾ ॥ ಪೌಲೋಮ್ಯಾಃ ಶಚ್ಯಾಃ ಚಿತ್ರೇತಿ ತಾರೇತಿ ರೂಪದ್ವಯಮ್ ॥ ಶಚೀ ಚ ಶಕ್ರಸ್ಯ ಭಾರ್ಯೈವ ಬಭೂವ ತಾರಾ । ಸಾ ಚ ಕನ್ಯಾ ಶಚೀ ಹಿ ॥ ಚಿತ್ರಾಂಗದಾ ವೀರಸೇನೇನ ತೋಷಾತ್ ಅತಿ ಪ್ರಕಾಶಯುತತ್ವಾತ್ ॥ ಚಿತ್ರಾಂಗದಾ ಅರ್ಜುನಭಾರ್ಯಾ ॥ ಗಾಧಿಭಾರ್ಯಾ ಕೌಶಿಕಾ ॥ ವಿಕುಕ್ಷಿ ಭಾರ್ಯಾ ವಸುಮತೀ ॥ ಕುಶಪ್ರಿಯಾ ಕಾಂತಿಮತೀ ॥ ವಾಲಿ ಭಾರ್ಯಾ ತಾರಾ ॥ ಪುಲೋಮಜಾ ಮಂತ್ರದ್ಯುಮ್ನಮಹಿಷೀ ॥ ೧೬ ॥

## ಕನ್ನಡಾರ್ಥ

ಕಾಮನು ವರದಿಂದ ಚಕ್ರಸ್ವರೂಪವನ್ನು (ತದಭಿಮಾನವನ್ನು) ಹೊಂದಿದನು. ಅನಿರುದ್ಧನು ಕಾಮಪುತ್ರನು. ಬ್ರಹ್ಮಾವೇಶಯುಕ್ತನು;

ಶಂಖಾಭಿಮಾನಿಯು. ಕಾಮ ಅನಿರುದ್ಧರು ಭರತ ಶತ್ರುಘ್ನರೆಂಬ ಹೆಸರಿನಿಂದ ರಾಮಾನುಜರಾಗಿ ಹುಟ್ಟಿದರು. ಹೀಗೆ ತಾತ್ಪರ್ಯನಿರ್ಣಯದಲ್ಲಿ ಚಕ್ರಾಭಿಮಾನಿತ್ವವು ಹೇಳಲಾಗಿರುತ್ತದೆಂದು ಪ್ರಮಾಣವನ್ನು ತೋರಿಸಿದ್ದಾಯಿತು. ಶತ್ರುಘ್ನನಲ್ಲಿ ಅನಿರುದ್ಧರೂಪೀ ಹರಿಯ ಆವೇಶವಿದೆಯೆಂದು 'ಸಂಕರ್ಷಣಾದ್ಯೈಃ' ಎಂದು ಹಿಂದಿನ ಪದ್ಯದ ವ್ಯಾಖ್ಯಾನದಲ್ಲಿ ಸಾಧಾರವಾಗಿ ಹೇಳಿರುತ್ತದೆ. ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನು ಕೃಷ್ಣಪುತ್ರನಾದ ಪ್ರದ್ಯುಮ್ನನಿಂದ ಹುಟ್ಟಿದನು. ಅವನೇ ಕಾಮಪುತ್ರ. ಹಾಗೂ ಅನಿರುದ್ಧರೂಪೀ ಹರಿಯ ಆವೇಶಯುಕ್ತನು. ರತಿಗೆರಡು ರೂಪಗಳು ರುಕ್ಮಿಯ ಮಗಳು ರುಕ್ಮವತಿ; ಇನ್ನೊಂದು ದುರ್ಯೋಧನ ಪುತ್ರಿ ಲಕ್ಷಣಾ. ಶಚೀದೇವಿಗೆ ಚಿತ್ರಾ, ತಾರಾ ಎಂದು ಎರಡು ರೂಪಗಳು. ಪಾಂಡ್ಯದೇಶದ ವೀರಸೇನನೆಂಬ ರಾಜನ ಮಗಳು ಚಿತ್ರಾಂಗದಾ. ಅರ್ಜುನನ ಹೆಂಡತಿ. ಗಾಧಿಯ ಹೆಂಡತಿಯು ಕೌಶಿಕೀ. ವಿಕುಕ್ಷಿಯ ಹೆಂಡತಿ ವಸುಮತಿ. ಕುಶನ ಹೆಂಡತಿಯು ಕಾಂತಿಮತೀ. ವಾಲಿಯ ಹೆಂಡತಿ ತಾರಾ. ಪುಲೋಮನ ಮಗಳು (ಪುಲೋಮಜಾ) ಮಂಪ್ರದ್ಯುಮ್ನನ ಹೆಂಡತಿ ॥ ೧೬ ॥

**ಅವತರಣಿಕಾ** :—ಈ ಪದ್ಯದಿಂದ ಬೃಹಸ್ಪತ್ಯಾಚಾರ್ಯರಿಗೆ ಮೂರು ಅವತಾರವೆಂದು ಹೇಳುತ್ತಾರೆ.

**ತಾರನಾಮಕ ತ್ರೈತೆಯೊಳು ಸೀ- ।**
**ತಾರಮಣನಾರಾಧಿಸಿದನು ಸ- ।**
**ಮೀರಯುಕ್ತೋದ್ಧವನು ಕೃಷ್ಣಗೆ ಪ್ರಿಯನೆನಿಸಿಕೊಂಬ ॥**
**ವಾರಿಜಾಸನ ಯುಕ್ತ ದ್ರೋಣನು ।**
**ಮೂರು ಇಳಿಯೊಳು ಬೃಹಸ್ಪತಿಗವ- ।**
**ತಾರವೆಂಬರು ಭಾರತ ಮಹಾ ತಾತ್ಪರ್ಯದೊಳಗೆ ॥ ೧೭ ॥**

**ಪದ್ಯಾರ್ಥ** :—(೧) ತ್ರೈತೆಯೊಳು=ತ್ರೇತಾಯುಗದಲ್ಲಿ, **ತಾರನಾಮಕ**=ತಾರನೆಂಬುವ ಕಪಿಯಾಗಿ ಅವತರಿಸಿ, **ಸೀತಾರಮಣನಾರಾಧಿಸಿದನು**=ಶ್ರೀ ಸೀತಾಪತಿ ರಾಮಚಂದ್ರ ದೇವರ ಸೇವಿಸಿ ಪೂಜೆಮಾಡಿದನು.

(೨) **ಸಮೀರ ಯುಕ್ತೋದ್ಧವನು**=ವಾಯು ಆವೇಶವುಳ್ಳ ಉದ್ಧವನು ಕೃಷ್ಣಗೆ ಪ್ರಿಯನೆನಿಸಿಕೊಂಬ=ಶ್ರೀಕೃಷ್ಣದೇವರಿಗೆ ಪ್ರೀತಿಪಾತ್ರನಾಗಲು ಶ್ರೀಕೃಷ್ಣನು ಉಪದೇಶಿಸಿದನು. (೩) ವಾರಿಜಾಸನಯುಕ್ತ ದ್ರೋಣನು= ಅದೇ ಕೃಷ್ಣಾವತಾರ ಕಾಲದಲ್ಲಿಯೇ, ಭರದ್ವಾಜ ಋಷಿಗಳ ರೇತಸ್ಸು ದ್ರೋಣ=ದೊನ್ನೆಯಲ್ಲಿ ಬೀಳಲು, ಆಗ್ಗೆ ದ್ರೋಣಾಚಾರ್ಯರೆಂಬ ಹೆಸರಿನಿಂದ ಪ್ರಸಿದ್ಧರಾದರು. ಇವರಲ್ಲಿ ಬ್ರಹ್ಮದೇವರ ಆವೇಶವುಂಟು (ಇವರು ಅಯೋನಿಜರು. ದ್ರೋಣ ಪಾತ್ರಿಯೇ ತಾಯಿ, ಋಷಿಗಳ ರೇತಸ್ಸಿನಲ್ಲಿ ಎಂತಹ ಮಹಿಮೆ) ಇಂತು ಇಳೆಯೊಳು=ಭೂಮಿಯಲ್ಲಿ, ಬೃಹಸ್ಪತಿಗೆ= ಬೃಹಸ್ಪತ್ಯಾಚಾರ್ಯರಿಗೆ, ಮೂರು ಅವತಾರವೆಂಬರು=ದೇವ ಗುರುವಿಗೆ ಮೂರೇ ಅವತಾರವೆಂದು, ಮಹಾಭಾರತ ತಾತ್ಪರ್ಯದೊಳಗೆ= ಶ್ರೀ ಸರ್ವಜ್ಞರು ರಚಿಸಿದ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೇಳಿದ್ದಾರೆ. ॥೧೭॥

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯಪದ**:—ತಾರ ನಾಮಕ ಪ್ಲವಗ ಬ್ರಹ್ಮಾಂಶ ಯುಗ್ ದ್ರೋಣ । ಮಾರುತಾವೇಶ ಸಂಯುತ ಉದ್ಧವಾ । ಮೂರು ರೂಪವು ಬೃಹಸ್ಪತಿಗೆ ॥ ಎಂದು (೧೭ನೇ ಪದ್ಯದ ಮೊದಲ ಅರ್ಥ ರುಚಿಯಲ್ಲಿ ಹೇಳಿದ್ದಾರೆ)

**ಭಾವಸೂಚನ**:—ಮಹಾಭಾರತೇತಿ ॥ ತೃತೀಯಾದ್ಧ್ಯಾಯೇ ಚ। ಬೃಹಸ್ಪತಿಃ ತಾರ ಉಕ್ತೋ ಶಚೀ ಚೇತಿ ಮಹಾಭಾರತೇ ದ್ವಾದಶಾ- ಧ್ಯಾಯೇ ॥ ಬೃಹಸ್ಪತಿಃ ಪೂರ್ವಮಭೂದ್ಧರೇಃ ಪದಂ ಸಂಸೇವಿತುಂ ಪವನಾವೇಶಯುಕ್ತಃ। ಸ ಉದ್ಧವೋ ನಾಮ ಯದುಪ್ರವೀರಾಜ್ಜಾತ ಇತಿ॥ ಏಕಾವಲೀ ಚ ॥ ಅಂಭೋಜಜಾವೇಶಯುತೋ ಬೃಹಸ್ಪತಿಃ ಕರ್ತುಂ ಹರೇಃ ಕರ್ಮಭುವೋ ಭಸೋಸ್ಪೃಶಾ। ದ್ರೋಣೇತಿ ನಾಮೇತಿ ॥೧೭॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

'ತಾರ' ಇತಿ ॥ ಬೃಹಸ್ಪತಿಃ ತಾರಃ॥ ಶ್ರೀರಾಮ ಚರಿತೋಪದೇಶೇನ ದೇವಯೋನಿವಾನ್ ॥ ಅರತಾರಕತ್ವಾತ್ ತಾರಃ। ಬೃಹಸ್ಪತಿಃ ಪೂರ್ವಂ

ಅಭೂತ್ ಹರೇಃ ಪದಂ ಸಂಸೇವಿತುಂ ಪವನಾವೇಶಯುಕ್ತಃ ॥ ಸ ಉದ್ಧವೋ ನಾಮ ಯದುಪ್ರವೀರಾತ್ ವಿದ್ವಾನ್ ಉಪಗವಿನಾಮ ಧೇಯಾತ್ ॥ ಉತ್ಕೃಷ್ಟಃ ಕೃಷ್ಣಃ ಧವಃ ಯಸ್ಯ ಇತಿ ಉದ್ಧವಃ ॥ ಅಂಭೋಜಜಾವೇಶಯುತಃ ಬೃಹಸ್ಪತಿಃ ಕರ್ತುಂ ಹರೇಃ ಕರ್ಮ ಭುವೋ ಭರೋದ್ಧೃತೌ ॥ 'ದ್ರೋಣ' ಇತಿ ॥ ದ್ರೋಣಪಾತ್ರೋತ್ಪನ್ನಃ ॥ ೧೬ ॥

## ಕನ್ನಡಾರ್ಥ

ಬೃಹಸ್ಪತಿಯೇ ತಾರನಾಮಕ ಕಪಿಯು. ಶ್ರೀರಾಮ ಚರಿತ್ರೆಯ ಉಪದೇಶದಿಂದ ದೇವಯೋನಿಯವನಾದ ತಾನು ಪಾಪಗಳನ್ನು ಪರಿಹರಿಸುವುದರಿಂದ ತಾರನೆನಿಸಿಕೊಳ್ಳುತ್ತಾನೆ. ತ್ರೇತಾಯುಗದಲ್ಲಿ ಬೃಹಸ್ಪತಿಯು ಹರಿಸೇವೆಯನ್ನು ಮಾಡಲು ತಾರನಾಮಕ ಕಪಿಯಾದನು. ಅವನೇ ವಾಯುದೇವರ ಆವೇಶದಿಂದ ಯುಕ್ತನಾಗಿ, ಯದುವೀರ ಉಪಗವಿಯಲ್ಲಿ ಮಗನಾಗಿ ಉದ್ಧವನಾಗಿ ಹುಟ್ಟಿದನು. ಗುಣೋತ್ಕೃಷ್ಟನಾದ ಶ್ರೀಕೃಷ್ಣನೇ ನಾಯಕನಾಗಿ ಉಳ್ಳವನು ಉದ್ಧವನೆಂದು ಅರ್ಥ. ಬ್ರಹ್ಮದೇವರ ಆವೇಶ ಯುಕ್ತರಾಗಿ ಬೃಹಸ್ಪತಿಯೇ ದ್ರೋಣಾಚಾರ್ಯರಾಗಿ ಹುಟ್ಟಿ, ಭೂಭಾರ ಹರಣಾತ್ಮಕವಾದ ಹರಿಸೇವೆಯಲ್ಲಿ ಅಂಗನಾದನು. ತಂದೆಯಾದ ಭರದ್ವಾಜ ಮಹರ್ಷಿಯು ಘೃತಾಚಿಯೆಂಬ ಅಪ್ಸರೆಯನ್ನು ಕಂಡು ಸ್ಖಲಿತವಾದ ಇಂದ್ರಿಯರೇತಸ್ಸನ್ನು ದ್ರೋಣವೆಂಬ ಪಾತ್ರೆ (ದೊನ್ನೆ) ಯಲ್ಲಿ ಇಡಲು, ಅದರಿಂದ ದ್ರೋಣಾಚಾರ್ಯ ಹುಟ್ಟಿದುದರಿಂದ ದ್ರೋಣಾಚಾರ್ಯರೆಂಬ ಹೆಸರನ್ನೇ ಭರದ್ವಾಜರು ಕರೆದರು. ॥ ೧೬ ॥

**ಅವತರಣಿಕಾ:**– ಇನ್ನು ೧೧ ನೇ ಕಕ್ಷ್ಯದಲ್ಲಿದ್ದ ಪ್ರಾಣ ವಾಯು ದೇವರ ಸ್ತೋತ್ರಗೈಯ್ಯುತ್ತಾರೆ. ಮತ್ತು ೧೨ ನೇ ಕಕ್ಷೆದಲ್ಲಿದ್ದ ಸೂರ್ಯ ಚಂದ್ರಾದಿ ಸಾಲ್ವರ ಹೆಸರು ಹೇಳುತ್ತಾರೆ.

**ಮನು ಮುಖಾದ್ಯರಿಗಿಂದ ಪ್ರವಹಾ ।**
**ಗುಣದಿ ಪಂಚಕ ನೀಚನೆನಿಸುವ ।**
**ಇನ ಶಶಾಂಕರು ಧರ್ಮನಾಮನಿ ಎರಡು ಗುಣದಿಂದ ॥**

**ಕನಿಯರೆನಿಪರು ಪ್ರವಹಗಿಂದಲಿ ।**
**ದಿನಪ ಶಶಿ ಯಮಧರ್ಮ ರೂಪಗ ।**
**ಳನುದಿನದಿ ಚಿಂತಿಪದು ಸಂತರು ಸರ್ವ ಕಾಲದಲಿ** ॥ ೧೮ ॥

**ಪದಾರ್ಥ:—** ಮನು ಮುಖ್ಯಾದ್ಯರಿಗಿಂದ = ಸ್ವಾಯಂಭುವ ಮನುವೇ ಮೊದಲಾದ ಆರು ಜನರಿಂದ, ಪ್ರವಹಾ=ಕೋಣಾಧಿಪತಿಯಾದ ಪ್ರವಾಹ ವಾಯುದೇವರು, ಗುಣದಿ ಪಂಚಕ ನೀಚನೆನಿಸುವ=ಮನ್ವಾದಿಗಳಿಗಿಂತಲೂ, ಐದು ಗುಣದಿಂದ ಕಡಿಮೆ ಎನಿಸುವನು. ಈತನಿಗೆ ಅವತಾರವಿಲ್ಲ. ಸೂಕ್ಷ್ಮ ಸೃಷ್ಟಿಯಲ್ಲಿ ಮುಖ್ಯ ವಾಯು ದೇವ ಪುತ್ರನು. ಈ ಪ್ರವಹಗಿಂದಲಿ=ಈ ನಾಸಿಕ್ಯ ವಾಯು ಪ್ರವಹ ವಾಯುವಿಗಿಂತಲೂ, ಇನ=ಸೂರ್ಯ, ಶಶಾಂಕ=ಮೊಲದ ಚಿಹ್ನೆಯುಳ್ಳ ಚಂದ್ರನು, ಧರ್ಮ=ಯಮಧರ್ಮರಾಜನು, ಮಾನವಿ=ಸ್ವಾಯಂಭುವ ಮನುವಿನ ಪತ್ನಿ ಶತರೂಪಾದೇವಿಯರು ನಾಲ್ವರು ಹನ್ನೆರಡನೇ ಕಕ್ಷೆಯಲ್ಲಿರುವರು ಪ್ರವಹಗಿಂತ=ಎರಡು ಗುಣಗಳಿಂದ ಕನಿಯರೆನಿಪರು=ಎರಡು ಗುಣಗಳಿಂದ ಕೀಳು ಕಡಿಮೆ ಎನಿಸುವರು. ದಿನಪ-ಶಶಿ-ಯಮಧರ್ಮರೂಪಗಳನುದಿನದಿ=ಸೂರ್ಯ ಚಂದ್ರ, ಯಮಧರ್ಮ ರೂಪಗಳನ್ನು ನಿತ್ಯವಲ್ಲಿ ಬಿಡದೇ, ಸರ್ವಕಾಲದಲಿ, ಸಂತರು=ಸಜ್ಜನರು ಜ್ಞಾನಿಗಳು, ಚಿಂತಿಸುವದು=ಧೇನಿಸುವದು. ಈ ರೂಪಗಳನ್ನು ಮುಂದಿನ ಪದ್ಯದಲ್ಲಿ ಹೇಳುತ್ತಾರೆ.

**ಶ್ರೀ ಜಗನ್ನಾಥ ದಾಸಾರ್ಯರ ಬೃಹತ್ತಾರತಮ್ಯ ಪದ:—** ಭೂತಾಭಿಮಾನಿ ಪ್ರವಹಪಂಚಗುಣದಿ ಪುರು । ಹೂತಪತ್ನಿ ಗಳಿಗಧಮನೆನಿಪಾ ॥ ಈ ತಗವತಾರವಿಲ್ಲವನಿಯೊಳು ಚಂದ್ರ ಪ್ರ । ದ್ಯೋತನಾಂತಕ ಸ್ವಯಂಭುವ ಪತ್ನಿ ಶತರೂಪಿ ॥ ೧೯ ॥

**ಭಾವಸೂಚನ:—** ॥ ಮನುರಿತಿ । ಪಂಚೇತಿ ತಾರತಮ್ಯೇ ಚ ॥ "ಸ್ವಾಯಂಭುವೋ ಮನುರ್ದಕ್ಷಃ ಷಡನ್ಯೋನ್ಯಂ ಸಮಾ ಮತಾಃ॥ ಪ್ರವಹಾತ್ಪಂಚಗುಣಾಧಿಕಾ ಇಂದ್ರಾಚ್ಚ ತೇ ವರಾ ಇತಿ ॥ ಸಂಗ್ರಹೇ ಚ॥ ಅನಿರುದ್ಧಾದಿಷಟ್ಕೇಭ್ಯೋ ಕಕ್ಷ್ಯೈಕಾದಶಸಂಸ್ಥಿತಃ। ಪ್ರವಹೋ ಭೂತ

ವಾಯುಶ್ಚ ಜ್ಞೇಯಃ ಪಂಚಗುಣಾಧಮ ಇತಿ ॥ ಇನೇತಿ ॥ ಸೂರ್ಯಃ ಸಂಗ್ರಹೇ ಚ ॥ ವಿವಸ್ವಾನ್ನಾಮಕಃ ಸೂರ್ಯೋ ೯ ಹಾನಿರ್ಯಮುನಾ ತ್ರಿಷು ॥ ಸನಾದಿಭ್ಯೋಽಧಮಾ ಕಿಂಚಿತ್ ಭೂತವಾಯುಸ್ತಥೈವ ಚ ॥ ೪ ಇತಿ ಛಾಂದೋಗ್ಯಭಾಷ್ಯೋಕ್ತೇಃ ॥ ಪ್ರವಹ ದ್ವಿಗುಣಾಧಮ ಇತಿ ॥ ೧೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಮನು' ಇತಿ ॥ ಮುಖ್ಯವಾಯುಪೋತಃ 'ಕೋಣಪ' ನಾಸಿಕ್ಯಃ॥ ಭೌತಿಕಃ ಮುಮುಕ್ಷುಃ ಪ್ರಾಪ್ಯಾತಿವಾಹಕಃ ॥ ತತ್ವವಾದಃ ಅನ್ಯಥಾ ಚೇದ್ದ್ವೇಶತಃ ಇತಿ ಪ್ರತಿಜ್ಞಾಯೋರಗಂ ಜಗ್ರಾಹ ॥ ನಾದರ್ಶಾತ್ ಪ್ರಕರ್ಷೇಣ ಹರಿತತ್ವವಾಹಕತ್ವಾತ್ ಪ್ರವಹಃ ॥ ಸತಾಂ ಸೌಮ್ಯರೂಪ ಧಾರಕತ್ವಾತ್ ಧರ್ಮಃ ॥ ಪಾಪಿಶಿಕ್ಷಕತ್ವಾತ್ ಯಮಃ ॥ ರೂಪದ್ವಯಂ ಯಮಲೋಕೇ ॥ ೧೮ ॥

## ಕನ್ನಡಾರ್ಥ

'ಮುಖ್ಯ' ವಾಯುಪುತ್ರನು ಕೋಣಾಧಿಪನು, ನಾಸಿಕ್ಯನು ಭೂತ ವಾಯುವಿಗೆ ಅಭಿಮಾನಿ, ಮುಮುಕ್ಷುಗಳಿಂದ ಹೊಂದಲ್ಪಡುವವನು. 'ಅತಿವಾಹಿಕ'ನು. ಪ್ರಕರ್ಷದಿಂದ ಹರಿತತ್ವವಾಹಕನು ಪ್ರವಹನು. ಹೀಗೆ ವ್ಯುತ್ಪತ್ತಿಯನ್ನು ತಿಳಿಯಬೇಕು. ಸಜ್ಜನರಿಗೆ ಸೌಮ್ಯರೂಪಗಳನ್ನು ಧರಿಸುವುದರಿಂದ ಧರ್ಮನೆಂದು ಯಮನಿಗೆ ಕರೆಯುತ್ತಾರೆ. ಪಾಪಿಗಳನ್ನು ಶಿಕ್ಷಿಸುವುದರಿಂದ ಯಮನೆಂದು ಹೆಸರು. ಈ ಎರಡೂ ರೂಪಗಳು ಯಮ ಲೋಕದಲ್ಲಿ ಇರುವುವು. ॥ ೧೮ ॥

**ಅವತರಣಿಕಾ:**— ಯಮಧರ್ಮ, ಸೂರ್ಯ, ಚಂದ್ರ ಮೂವರ ಅವತಾರಗಳನ್ನು ಈ ಪದ್ಯದಿಂದ ಹೇಳುತ್ತಾರೆ.

**ಮರುತನಾವೇಶಯುತ ಧರ್ಮಜ ।**
**ಕರಡಿ ವಿದುರನು ಸತ್ಯಜಿತು ಈ ।**

**ರೆರಡು ಧರ್ಮನ ರೂಪ ಬ್ರಹ್ಮಾವಿಷ್ಟ ಸುಗ್ರೀವ ॥**
**ಹರಿಯು ರೂಪಾವಿಷ್ಟ ಕರ್ಣನು।**
**ತರಣಿಗೆರಡವತಾರ ಚಂದ್ರನು।**
**ಸುರಪನಾವೇಶಯುತನಂಗದನೆನಿಸಿಕೊಳುತಿಪ್ಪ ॥೧೯॥**

**ಪದ್ಯಾರ್ಥ:**— ಧರ್ಮಜ=ಧರ್ಮನ ಪುತ್ರ ಯಮಧರ್ಮನ ಅವತಾರ.

(೧) ಪಾಂಡುಪುತ್ರ **ಧರ್ಮರಾಜನು** ಮರುತನಾವೇಶಯುತ=ವಾಯುದೇವರ ಆವೇಶಯುಕ್ತನು.

(೨) ಕರಡಿ=ಕರಡಿ ಯೋನಿಯಲ್ಲಿ ಉತ್ಪನ್ನನಾದ ಜಾಂಬವಂತ.

(೩) **ವಿದುರನು**=ಶೂದ್ರಸ್ತ್ರೀಯಲ್ಲಿ ವೇದವ್ಯಾಸದೇವರ ಕಟಾಕ್ಷದಿಂದ ಅವತರಿಸಿದ ಯಮನ ರೂಪ.

(೪) **ಸತ್ಯಜಿತು**=ಯಮಧರ್ಮರೂಪ, ೧೪ ಮಂದಿ **ಇಂದ್ರರಲ್ಲಿ** ೧೩ ನೇ ಇಂದ್ರ ಸತ್ಯಜಿತ್ ನಾಮಕ ಇಂದ್ರ, ಈರೆರಡು ಧರ್ಮನ ರೂಪ=೨x೨ ರೂಪಗಳು ಧರ್ಮಗೆ ಅವತಾರ, ಇನ್ನು **ಸೂರ್ಯನ ರೂಪಗಳು,** ಬ್ರಹ್ಮಾವಿಷ್ಟರೂಪ ಸುಗ್ರೀವ=ತ್ರೈತೆಯಲ್ಲಿ ರಾಮಸೇವಾರ್ಥ ಸೂರ್ಯನೆ ಸುಗ್ರೀವನನೆಂಬ ಕಪಿಯು ಬ್ರಹ್ಮಾವೇಶದಿಂದ ಜನಿಸಿದನು. ಹರಿಯ ರೂಪಾವಿಷ್ಟ ಕರ್ಣನು=ಕರ್ಣನಲ್ಲಿ ಸದಾ ವಿಷ್ಣು ಸನ್ನಿಧಾನವಿದ್ದ ಪ್ರಯುಕ್ತ ಮಹಾಬಲಶಾಲಿ ಅಸ್ತ್ರವೇತ್ತಾ ಆದನು. ಹೀಗೆ ಸುಗ್ರೀವ ಕರ್ಣನ ಎರಡು ರೂಪಗಳು ವಿವಸ್ವಾನ್ ನಾಮ ಸೂರ್ಯನ ಅವತಾರ.

**ಚಂದ್ರನ.**=ಚಂದ್ರ ದೇವರು, ಸುರಪನಾವೇಶಯುತ ಅಂಗದ=ಅಂಗದ ಕಪಿಯು ಅವತಾರ ಚಂದ್ರನದು. ಈತನಲ್ಲಿ ಇಂದ್ರದೇವರ ಆವೇಶ ಉಂಟು. ಅಂಗದ ವಾಲಿಪುತ್ರ.

**ಶ್ರೀ ಜಗನ್ನಾಥದಾಸಾರ್ಯರ ಬೃ. ತ್ತಾ. ಪದ:** -- ಚಂದ್ರ, ಪ್ರದ್ಯೋತನಾಂತಕ ಸ್ವಯಂಭುವ ಪತ್ನಿ ಶತರೂಪಿ ॥ ೧೯ ॥ ಸತ್ಯಜಿತು,

ಜಾಂಬವಾನ್ ವಿದುರ ಗುರು ವಾಯು ಸಂ। ಯುಕ್ತ ಯಮಗೆ ರೂಪ ನಾಲ್ಕು ॥ ರಾತ್ರಿ ಚರನವತಾರಯಿಂದ್ರಯುಕ್ತಾಂಗದಾ । ಚಿತ್ರನವತಾರ ಬ್ರಹ್ಮಾವಿಷ್ಟ ಸುಗ್ರೀವ ॥ ೨೦ ॥ ಹರಿಯುಕ್ತ ಕರ್ನ, ಮನುಪತ್ನಿ ಶತರೂಪ ನಾಲ್ವರು ಸಮರು ಪ್ರವಹಗಿಂದೆರಡು ಗುಣದೀಕೊರತಿ ॥

**ಭಾವಸೂಚನ:**—ಮರುತೇತಿ॥ ಯಮದೇವರಿಗೆ ನಾಲ್ಕುರೂಪಗಳು ಜಾಂಬವಂತ, ಸತ್ರಜಿತ್, ವಿದುರ, ಧರ್ಮರಾಜ- ಇವರಲ್ಲಿ ಜಾಂಬುವಂತನಲ್ಲಿ ವಾಯು ಆವೇಶ। ಇವರ ಜ್ಞಾನ ಬಹಳ ಶ್ರೀಯುಸ್ಸಿನಲ್ಲಿ ಕಾರಣವಾಗೋಯು **ಉಕ್ತಂ ಚ ಗಾರುಡೇ**॥ ತ್ರೇತಾಯಾಂ ಬ್ರಹ್ಮಕಾಂಡೇ ಅಂಶಾವೇಶವಿಚಾರ ವೇಳಾಯಾಂ॥ "ಸ ಏವಾಸೀತ್ ಸತ್ರಜಿನ್ನಾಮ ವೀಂದ್ರ ಸ ಏವಾಸೀ ಜಾಂಬವಾನ್ ರಾಮಭಕ್ತಃ ॥ ಜಾಂಬೂನದಾಭೇ ರಾಮಚಂದ್ರೇ ಸದೈವ ಭಕ್ತ್ಯಾ ಯುತತ್ವಾತ್ ಜಾಂಬವಾನ್ನಾಮತಸ್ಸಃ ॥ ಪ್ರಾರಬ್ಧಂ ಭೋಕ್ತು ಮೇವ ಸ ಧರ್ಮಃ ಋಕ್ಷಾದಿಯೋನಿಂ ಪ್ರಾಪ್ತವಾನೇವ ವೀಂದ್ರ। ಮಾಂಡವ್ಯಶಾಪಾಚ್ಚ ಯಮೋ ಬಭೂವ। ವಿದ್ಯಾರತತ್ವಾದ್ವಿದುರೋ ನಾಮ ಚಾಸೀತ್॥ "ಸ ಏವ ಸತ್ಯಜಿನ್ನಾಮ ಧರ್ಮಃ। ಸ ಏವಾಭೂತ್ ವಾಯುಯುಕ್ತಃ ಖಗೇಂದ್ರ ॥ ಯುಧಿಷ್ಠಿರಾಖ್ಯೋ ವಿಷ್ಣುಭಕ್ತಃ ಪೃಥಿವ್ಯಾಂ ಭೋಕ್ತುಂ ಸಾಮ್ರಾಜ್ಯಂ ಸೌಮ್ಯರೂಪೇಣ ಜಿಷ್ಣು ॥ ಕ್ರೋಧಾದಿರೂಪಾಜ್ಜೇತುರೀಲೋಸ್ತಿ ಯುದ್ಧೇ ಯುಧಿಷ್ಠಿರೇತ್ಯೇವ ಸಂಜ್ಞಾಮವಾಪ । ಜಾಂಬವಾನ್ ವಾಯುಯುಗ್ ಧರ್ಮಃ ವಿದುರಸ್ಸತ್ರಜಿತ್ತಥಾ॥ ಏತೇ ವೀಂದ್ರ ತು ಚತ್ವಾರಃ ಯಮಾಂಶಾಃ ಪರಿಕೀರ್ತಿತಾ ಇತಿ ಬ್ರಹ್ಮೇತಿ. ತಾರತಮ್ಯೇ ಚ॥ ಬ್ರಹ್ಮಾವಿಷ್ಟಃ ಸಗ್ರೀವಃ ಹರಿಯುಕ್ ಕರ್ಣ ಏವ ಚ॥ ಏವಂ ದ್ವಿರೂಪಸ್ಸೂರ್ಯಸ್ಸ್ಯಾತ್ ಇಂದ್ರಾ ವಿಷ್ಟೋಂಗದಶ್ಶತೀ ಇತಿ ॥ ೧೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮರುತ" ಇತಿ ॥ ಯುಧಿಷ್ಠಿರಾದ್ಯೇಷ್ವಿತಿ ॥ "ಕರಡಿ"–ಜಾಂಬವಾನ್ ॥ ಋಕ್ಷಾದಿಯೋನಿಂ ಪ್ರಾರಬ್ಧಂ ಭೋಕ್ತುಂ ॥ ಅತ್ರಾಯಂ ವಿಶೇಷಃ ॥ ಯ ಏವ ಪೂರ್ವಂ ಪರಮೇಷ್ಠಿವಕ್ಷಸಃ ಇತಿ. ಘರ್ಮಃ ಸೂರ್ಯಾತ್ ಸಂಜ್ಞಯಾ ನಾಮ್ನಾ ಯಮಃ ಇತಿ ॥ ಸ ಜಾಂಬವಾನ್

ದೈವತಕಾರ್ಯೇತಿ ವಚನಾತ್ ಆದಿಸೃಷ್ಟೌ ತ್ವಗುದ್ಭವಃ ಅಜಸ್ಯ ಜಾಂಬವಾನ್ ಜಾಂಬೂನದಾಭೇ ರಾಮಚಂದ್ರೇ ಸುಭಕ್ತಃ ॥ ಸ ಏವ ಧರ್ಮಃ ಸೂರ್ಯಾತ್ ಸಂಜ್ಞಾಯಾಂ ಯಮಃ ಜಾತಃ ॥ ಧರ್ಮಾಭಿನ್ನ ಧರ್ಮ ಜೇತ್ರೇತತ್ ಸೂನುಶಬ್ದವತ್ ॥ "ಧರ್ಮಜಃ" ವಿದುರಃ ॥ ಸತ್ಯಜಿತ್ ಮಯಃ ಇತಿ ಸ್ವರೂಪೈಕ್ಯೇಪಿ ಯಮಶಬ್ದಃ ಇಂದ್ರೇಷು ತೃತೀಯಃ ಸತ್ಯಂ ಹರಿಂ ಜಯತಿ ಭಕ್ತ್ಯಾ ವಶೀಕರೋತಿ ಇತಿ ತಥಾ ॥ "ಬ್ರಹ್ಮಾವಿಷ್ಟ" ಇತಿ ॥ ಸುಗ್ರೀವ ಆಸೀತ್ ಪರಮೇಷ್ಠಿತೇಜಸಾ ಯುತಃ ರವಿಃ ಇತಿ ॥ "ಹರೀತಿ" ॥ ಹರೇಶ್ಚ ಸನ್ನಿಧಾನಯುಕ್ ಸುದರ್ಶನೀಯಕರ್ಣತಃ ಕರ್ಣಃ ॥ ಇಂದ್ರಾವಿಷ್ಟಃ ಅಂಗದಃ ಶಶೀ ॥ ಬ್ರಹ್ಮೋದ್ಭವಃ ಸೋಪ್ಯುತಾಸ್ಯ ಸೂನೋಃ ಅತ್ರೇಃ ಅಭೂತ್ ಸೋಂಗದ ಏವ ಜಾತಃ ॥ ಇಂದ್ರಃ ಅಂಗದೇ ॥ ೧೯ ॥

## ಕನ್ನಡಾರ್ಥ

ಯುಧಿಷ್ಠಿರಾದಿಗಳಲ್ಲಿ ವಾಯುದೇವನ ಆವೇಶವಿರುವುದೆಂದು ನಿರ್ಣಯಾದಿಗಳಲ್ಲಿ ಹೇಳಲಾಗಿರುತ್ತದೆ. 'ಕರಡಿ'=ಜಾಂಬವಂತನು. ಪ್ರಾರಬ್ಧದಿಂದ ಅವನಿಗೆ ಕರಡಿಯ ಜನ್ಮ ಬಂದದ್ದು. ಬ್ರಹ್ಮದೇವರ ವಕ್ಷಸ್ಸಿನಲ್ಲಿ ತ್ವಗುದ್ಭವನಾದ ಧರ್ಮನೇ ಬ್ರಹ್ಮದೇವರ ಆವೇಶದಿಂದ ಯುಕ್ತನಾಗಿ ಸಂಜ್ಞಾನಾಮಕ ಸೂರ್ಯಪತ್ನಿಯಲ್ಲಿ ದಕ್ಷಿಣ ದಿಕ್ಪಾಲಕನಾದ ಯಮನಾಗಿ ಹುಟ್ಟಿದನು. ಪೂರ್ವದಲ್ಲಿ ಪರಮಾತ್ಮನ ಕಾರ್ಯವನ್ನು ಭಾವಿದೃಷ್ಟಿಯಿಂದ ನೋಡಿದ ಬ್ರಹ್ಮದೇವರು ಆ ಧರ್ಮನನ್ನೇ ಮತ್ತೆ ಮುಖದಿಂದ ಸೃಷ್ಟಿ ಮಾಡಿದರು. ಅವನೇ ಜಾಂಬವಂತ. ಯಮ-ಧರ್ಮಗಳೆರಡೂ ಧರ್ಮನ ರೂಪಗಳೇ. ಧರ್ಮಾವತಾರನಾದ ಧರ್ಮನಿಂದ ಹುಟ್ಟಿದ ಸತ್ಯಜಿತ್ತನೇ ವಿದುರನಾಗಿ ಮತ್ತೆ ಜನಿಸಿದನು. ಮೂರನೆಯ ಮನ್ವಂತರದಲ್ಲಿ ಇಂದ್ರನಾದ ಸತ್ಯಜಿತ್ ಎಂಬುವವನು ಯಮಧರ್ಮನ ಅವತಾರ. ಹರಿಯನ್ನು ಭಕ್ತಿಯಿಂದ ವಶೀಕರಿಸಿದ್ದರಿಂದ ಸತ್ಯಜಿತ್ ಎಂದು ಅವನಿಗೆ ಹೆಸರು. ಅವನೇ ವಿದುರನಾದನು. ಸುಗ್ರೀವನು ಬ್ರಹ್ಮಾವೇಶದಿಂದ ಯುಕ್ತನು. ಅವನು ಸೂರ್ಯಾಂಶನು. ಹರಿಯ ಸನ್ನಿಧಾನದಿಂದ

ಯುಕ್ತನಾದ ಕರ್ಣನು ಕೂಡಲೇ ಕರ್ಣದಿಂದ ಹುಟ್ಟಿದನು. ಅವನು ಸೂರ್ಯಾಂಶನೇ. ಅಂಗದನು ಇಂದ್ರಾವೇಶಯುಕ್ತನು. ಚಂದ್ರಾವತಾರ. ಬ್ರಹ್ಮದೇವರ ಪುತ್ರನಾದ ಸೋಮನು (ಚಂದ್ರನು) ಅತ್ರಿಪುತ್ರನಾಗಿ ಹುಟ್ಟಿದನು. ಅವನೇ ಅಂಗದನಾಗಿ ಹುಟ್ಟಿದನು. ಹೀಗೆ ತಾತ್ಪರ್ಯ ನಿರ್ಣಯದಲ್ಲಿ ಅವರವರ ಅಂಶಾವೇಶಗಳನ್ನು ಹೇಳಿದಂತೆ ದಾಸರಾಯರು ಇಲ್ಲಿ ಹೇಳಿರುತ್ತಾರೆ. ॥ ೧೯ ॥

**ಅವತರಣಿಕಾ** :— ಈ ಪದ್ಯದಿಂದ ೧೩ನೇ ಕಕ್ಷದಲ್ಲಿದ್ದ ವರುಣ ದೇವರ ಅವತಾರಗಳನ್ನು ಹೇಳುತ್ತಾರೆ. ಮತ್ತು ೧೪ನೇ ಕಕ್ಷಸ್ಥ ನಾರದ ಋಷಿಗಳು ೧೫ನೇ ಕಕ್ಷದಲ್ಲಿದ್ದ ಭೃಗ್ವಾದಿ ಮೂರು ಜನ ಸಮರೆಂದೂ ವಿವರಿಸುತ್ತಾರೆ.

**ತರಣಿಗಿಂದಲಿ ಪಾದ ಪಾದರೆ ।**
**ವರುಣ ನೀಚನು ಮಹಭಿಷಕು ದ- ।**
**ರ್ದುರ ಸುಶೇಷಣನು ಶಂತನೂ ನಾಲ್ವರು ವರುಣ ರೂಪ ॥**
**ಸುರಮುನೀ ನಾರದನು ಕಿಂಚಿ- ।**
**ತ್ಕೊರತೆ ವರುಣಗೆ ಅಗ್ನಿ ಭೃಗು ಅಜ- ।**
**ಗೊರಳ ಪತ್ನಿ ಪ್ರಸೂತಿ ಮೂವರು ನಾರದನಿಗಧಮ ॥ ೨೦ ॥**

**ಪದ್ಯಾರ್ಥ** :— ತರಣಿಗಿಂದಲಿ=ವಿವಸ್ವನ್ನಾಮಕ ಸೂರ್ಯನಿಗಿಂತಲೂ, ಪಾದ ಪಾದರೆ=ಪಾದ ನಾಲ್ಕಾಣೆ, ಇದರ ಅರ್ಥ ಎರಡಾಣೆ ಒಟ್ಟಾರೆ ಆರಾಣೆ ಭಾಗವೆಂದರೆ ೩/೪ ಅಂಶದಿಂದ, ವರುಣ=ಸಮುದ್ರ ಸ್ವಾಮಿ ಒಡೆಯನಾದ ವರುಣದೇವರು, ನೀಚನು=ಕಡಿಮೆಯೆನಿಸುವನು, ಈತನಿಗೆ ೪ ಅವತಾರಗಳನ್ನು ಹೇಳುತ್ತಾರೆ. (೧) ವರುಣನು ಮಹಾಭಿಷಕ್=ಬ್ರಹ್ಮಶಾಪದಿಂದ ಮಹಾಭಿಷಕ್ ರಾಜನಾದನು. ಮತ್ತು (೨) ಕುರುಕುಲದಲ್ಲಿ ಶಂತನು ಚಕ್ರವರ್ತಿಯಾಗಿ (ಭೀಷ್ಮರ ತಂದೆಯು) ಜನಿಸಿದ. (೩) ದರ್ದುರ=ಅಂದರೆ ಮಂಡೂಕ (ಕಪ್ಪೆ) ರೂಪನು ವರುಣನೆಂದು ಉಪನಿಷತ್ ವಚನ. "ಮಂಡಂ ಸೂಕ್ಷ್ಮಂ ತು ವಿಜ್ಞೇಯಂ

ಉತ್ಕೃಷ್ಟಸ್ಯ ತು ವಾಚಕಂ।ಕಂ ತು ಮಸ್ತಕವಾಚೀ ಸ್ಯಾತ್ ಕಂ ಸುಖಂ ಚ ಸಮೀರಿತಂ ॥ ಸೂಕ್ಷ್ಮೋತ್ಕೃಷ್ಟ ಮಸ್ತಕತ್ವಾತ್ ಮಂಡೂಕ ಇತಿ ಸಂಸ್ಮೃತಃ ॥ (ಗಾರುಡೇ) (೪) ಸುಶೇಷಣ=ರಾಮಾವತಾರದಲ್ಲಿ ವರುಣನು ರಾಮಸೇವೆಗಾಗಿ ವರುಣದೇವರು ಸುಶೇಷಣನೆಂಬ ವಾನರನಾಗಿ ಜನಿಸಿದ "ಸುಪೂರ್ಣಷಡ್ಗುಣೇ ವಿಷ್ಣೌ ಚೇಷ್ಟತೇ ಸರ್ವದಾ ಯುತಃ ॥ ಅತಃ ಸುಶೇಣನಾಮಾಸೌ ವರುಣಃ ಪರಿಕೀರ್ತಿತಃ ॥ (ಗಾರುಡೇ) ಸುರಮುನೀ ನಾರದನು ಕಿಂಚಿತ್ಕೊರತೆ ವರುಣಗೆ=ದೇವಋಷಿಗಳಾದ ನಾರದರು ವರುಣದೇವರಿಗೆ ಸ್ವಲ್ಪ ಕಡಿಮೆ. "ಯೋ ಬ್ರಹ್ಮಣೋಂಗಾದಭವತ್ ಸ ನಾರದಃ ॥ ಪ್ರಾರಬ್ಧಂ ಭೋಕ್ತುಂ ಜನ್ಮ ಶೂದ್ರತ್ವಮಾಪ ॥ ಯೋ ಮುಕ್ತಿಯೋಗ್ಯಾನ್ ನಿತ್ಯ ಸಂಸಾರಿಣಶ್ಚ ತಮೋಯೋಗ್ಯಾನ್ ಸುಖ ದುಃಖಂ ಚ ಮಧ್ಯಮ್ ॥ ೧ ॥ ದದಾತಿ ಯಸ್ಮಾನ್ನಾರದಾಖ್ಯಂ ಸಮಾಪ ಸೇವಾ ಹರೇರ್ಹ್ಯಯಮೇವ ಸದೈವ ॥ ನರಸಂಬಂಧಾತ್ ಜ್ಞಾನಮಾಹುರ್ನರೇಂದ್ರಾ ಯೋಗ್ಯಶ್ಚ ಜೀವಸ್ಯ ದದಾತಿ ನಿತ್ಯಂ ॥ ಗಾರುಡ ಅಧ್ಯಾಯ ॥೩೧॥ ಅಗ್ನಿ, ಭೃಗು, ಅಜಗೊರಳ ಪತ್ನಿ=ಅಗ್ನಿದೇವರು, ಭೃಗುಋಷಿಗಳು ಆಡಿನ ಕೊರಳು ತತಿಯುಳ್ಳ ದಕ್ಷಪ್ರಜೇಶ್ವರನ ಹೆಂಡರು ಮೂವರು ಸಮರು ನಾರದನಿಗಧಮ=ನಾರದ ಋಷಿಗಳಿಗೆ ನೀಚರು ಕಡಿಮೆ ಎಂದು ಹೇಳಿದ್ದಾರೆ. ಯಾ ಸಾ ಪ್ರಸೂತಿರ್ದಕ್ಷಭಾರ್ಯಾ ಖಗೇಂದ್ರ ಪ್ರಕರ್ಷೇಣ ಸೂಯತೇ ಪುತ್ರಪುತ್ರೀಃ ॥ ಅತಃ ಪ್ರಸೂತಿ ಸಂಜ್ಞಿಕಾ ಸಾ ಬಭೂವ ಹರೇರ್ಭಕ್ತಾ ಭಕ್ತವರ್ಯಸ್ಯ ದಾಸಾ ॥ ೫ ॥ (ಗಾರುಡೇ ಅ-೩೩)

**ಭಾವಸೂಚನ** :— ತರಣೇತಿ ॥ ಮಹಾಭಿಷಕ್ ಸುಶೇಣಶ್ಚ ಮಂಡೂಕಃ ಶಂತನುಸ್ತಥಾ ॥ ಏತೇ ಪ್ರಾಗ್ವರ್ಣ ಸೂರ್ಯಾತ್ ಪಾದ ಪಾದಾರ್ಧತೋಽಧಮಾ ಇತಿ ॥ ತಾರತಮ್ಯೇ॥ ಮಂಡೂಕರೂಪೀ ವರುಣಃ ತುಷ್ಟಾವ ಹರಿಮವ್ಯಯಮಿತಿ ಗಾರುಡೇ ॥ ವರುಣಾನ್ನಾರದೋ ನ್ಯೂನೋ ವಹ್ನೇರಪ್ಯಧಿಕೋ ಮತ ಇತಿ ತಾರತಮ್ಯೇ ॥ ೨೦ ॥

**ಶ್ರೀ ಜಗನ್ನಾಥದಾಸರ ಬೃಹತ್ತಾರತಮ್ಯ ಪದ** :—"ಮಹಭಿಷಕು, ಮಂಡೂಕ, ಶಂತನು ಸುಶೇಣ್ವರುಣ ರೂಪಗಳಧಮ, ಪಾದ

ಪದಾರ್ಥಕಾಣಿಸುವ ॥ ೨೧ ॥ ನಾರದನು ವರುಣಗಿಂತಧಮ ॥

**ವಿಶೇಷ ವಿಚಾರಾಂಶ ಜ್ಞಾನಕಾಂಡ ಗಾರುಡದಲ್ಲಿ**

ವರುಣಾವತಾರಾಶ್ಚತ್ವಾರೋ ಮಂಡೂಕೋ ವಸುಷೇಣಕಃ ॥
ಮಹಾಭಿಷಕ್ ಶಂತನುಶ್ಚ ಕ್ರಮೇಣೈವಾಭವನ್ ಭುವಿ ॥
ಮಂಡೂಕರೂಪೀ ವರುಣಸ್ತುಷ್ಟಾವ ಹರಿಮವ್ಯಯಮ್ ॥

ಮಂಡೂಕರೂಪೀ ವರುಣನು ಪ್ರತಿ ಜೀವರ ದೇಹದಲ್ಲಿದ್ದು ನಾಲ್ಕು ಕಾರ್ಯಗಳನ್ನು ಮಾಡಿ ಶ್ರೀಹರಿಗೆ ಅರ್ಪಿಸುವ **ಅಧ್ಯಾತ್ಮ ವಿಚಾರ ಗರುಡ ಬ್ರಹ್ಮಕಾಂಡ ಅಧ್ಯಾಯ** ೩೧ರಲ್ಲಿ ಹೇಳಿರುವುದೇನೆಂದರೆ— ಮಂಡೂಕರೂಪೀ ವರುಣಃ ತುಷ್ಟಾವ ಹರಿಮವ್ಯಯಮ್ ॥ ಚತುರ್ಧಾ ವಸಿತಂ ದೇಹೇ ಶೃಣು ರೂಪಚತುಷ್ಟಯಮ್ ॥ ವಿಶ್ವಂ ಚ ತೈಜಸಂ ಪ್ರಾಜ್ಞಂ ತುರೀಯಂ ಚ ಚತುಷ್ಟಯಮ್ ॥ ೬೦ ॥ ದಕ್ಷಿಣಾಕ್ಷಿಸ್ಥಿತೋ ವಿಶ್ವಃ ಜೀವಾನಾಂ ಜಾಗ್ರದಃ ಸದಾ ॥ ಪೂರ್ಣತ್ವಾದ್ವಿಶ್ವಸಂಜ್ಞೋಽಸೌ ಸ ಏವ ತೈಜಸಃ ಸ್ಮೃತಃ ॥ ೬೧ ॥ ದಕ್ಷಿಣಾಕ್ಷಿಸ್ಥಿತೋ ವಾಯುರ್ದಕ್ಷಿಣಾಕ್ಷಿಸ್ಥಿತಂ ಹರಿಂ ॥ ವಾಮಾಕ್ಷಿಸಂಸ್ಥಿತಾಂ ಲಕ್ಷ್ಮೀಂ ದಕ್ಷಿಣಾಂಶೇ ನಿಧಾಯ ಚ ॥ ೬೨ ॥ ದಕ್ಷಿಣಾಕ್ಷಿ ಸ್ಥಿತಂ ಜೀವಂ ದೀಪವಚ್ಚ ಪ್ರಕಾಶಕಂ ॥ ವಾಮಸ್ಕಂಧೇ ನಿಧಾಯೈವ ಕಂಠದೇಶೇ ಸ್ಥಿತಂ ಹರಿಮ್ ॥ ೬೩ ॥ ತೈಜಸಾಖ್ಯಂ ಯಯೌ ಧೀಮಾನ್ ತದಧೀನಂ ಕರೋತ್ಯಸೌ ॥ ತೈಜಸೋ ವಾಯುನಾ ಸಾರ್ಧಂ ಜೀವಸ್ಯೈವ ಪ್ರವರ್ತತೇ ॥ ೬೪ ॥ ಸ್ವಪ್ನಾಂಶ್ಚ ವಾಸನಾ ಜನ್ಯಾನ್ ಪದಾರ್ಥಾಂಶ್ಚ ವಿಧಾಯ ಚ ॥ ತತೋ ವಾಯುಶ್ಚ ತಂ ಜೀವಂ ಕಂಠಸ್ಥಂ ತೈಜಸಂ ವಿಭುಮ್ ॥ ೬೫ ॥ ಪೂರ್ವವತ್ ಸ್ಕಂಧಮಾರೋಪ್ಯ ಪ್ರಯಯೌ ಹೃದಿ ಸಂಸ್ಥಿತಮ್ । ಪ್ರಾಜ್ಞಾಖ್ಯಂ ಪರಮಾತ್ಮಾನಂ ತತ್ಸಮೀಪೇ ನಿಧಾಯ ಚ ॥ ೬೬ ॥ ಪ್ರಾಜ್ಞಸ್ಯಾಲಿಂಗನಂ ಚೈವ ಯದಾ ಜೀವಃ ಕರೋತಿ ಚ ॥ ತದಾ ವಾಯುಂ ಹರಿಂ ಧ್ಯಾತಿ ಸುಪ್ತೋ ಭೂಭೂರಿತಿ ಪ್ರಭುಮ್ ॥ ೬೭ ॥ ಸುಪ್ತ ಇತ್ಯುಚ್ಯತೇ ಜೀವಃ ಹ್ಯಭೂರಿತ್ಯಸುರಾಃ ಸ್ಮೃತಾಃ । ತುರೀಯೋಽಪಿ ಹರಿರ್ವಾಯೋಃ ದಕ್ಷಿಣಸ್ಕಂಧಮಾರುಹತ್ ॥ ೬೮ ॥ ಜೀವಸ್ತು ಸವ್ಯಸ್ಕಂಧಂ ತು ತದಾ

ಜೀವಂ ಮೃತಂ ವಿದುಃ ‖ **ಚತುರ್ಥಾನವಸ್ಥಿತೇ ದೇಹೇ ಮಂಡೂಕೋ ಹ್ಯಸ್ತುವತ್ ಹರಿಂ** ‖೭೯‖ ಮಂಡಂ ಸೂಕ್ಷ್ಮಂ ತು ವಿಜ್ಞೇಯಂ ಉ ಉತ್ಕೃಷ್ಟಸ್ಯ ವಾಚಕಮ್ ‖ ಕಂ ತು ಮಸ್ತಕವಾಚಿ ಸ್ಯಾತ್ ಕಂ ಸುಖಂ ಚ ಸಮೀರಿತಮ್ ‖೮೦‖ ಸೂಕ್ಷ್ಮೋತ್ಕೃಷ್ಟಮಸ್ತಕತ್ವಾತ್ ಮಂಡೂಕ ಇತಿ ಸಂಸ್ಮೃತಃ ‖ ಗಾರುಡೇ ‖

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ತರಣಿ' ಇತಿ ‖ "ಅರ್ಧ್ಯರ್ಧೋನಃ ಸಮೋ ಮತಃ ‖" ಪಾದ ಪಾದಾರ್ಧತಃ ‖ "ಮಹಾಭಿಷಕ್ ನಾಮ ನರೇಶ್ವರಸ್ತ್ವಂ ಭೂತ್ವಾ ಪುನಃ ಶಂತನುನಾಮಧೇಯಃ ‖" "ಅಭೂತ್ ಸುಷೇಣಃ ವರುಣಃ ‖" "ಮಂಡೂಕ ರೂಪೀ ವರುಣಃ ‖" ಇಲಾಂವರಾಂ ಚ ನೃಪೋ ಭೂತ್ವಾ ಹರಿಂ ನಾರಾಯಣಾಭಿಧಮ್ ‖ ಮಹಾಭಿಷೇಕವಿಧಿನಾ ಪೂಜಯಾಮಾಸ ಸೋಽಬ್ಧಿಪಂ ‖ ಕಂ ತು ಮಸ್ತಕವಾಚಿ ಸ್ಯಾತ್ ಕಂ ಸುಖಂ ಚ ಸಮೀರಿತಮ್ ‖ ಮಂಡಂ ಸೂಕ್ಷ್ಮಂ ತು ವಿಜ್ಞೇಯಂ ಉ ಉತ್ಕೃಷ್ಟ ಇತಿ ಸ್ಮೃತಮ್ ‖ ಸೂಕ್ಷ್ಮೋತ್ಕೃಷ್ಟಮಸ್ತಕತ್ವಾತ್ ತಥೋಕ್ತಃ ‖ ಸಂಪೂರ್ಣ ಷಡ್ಗುಣೇ ವಿಷ್ಣೌ ಚೇಷ್ಟತೇ ಸರ್ವದಾ ಯತಃ ‖ ಸುಷೇಣಃ ಶಾಂತೋ ಭವೇದಿತ್ಯದಿತೇ ಶಂತನುಃ ‖ ವರುಣಾಗ್ನ್ಯಂತರಾ ತತ್ರ ನಾರದೇತ್ಯುಕ್ತಂ ಆಹ 'ಸುರ' ಇತಿ ‖ ನರಸಂಬಂಧಿಜ್ಞಾನಂ ತ್ರಿವಿಧಂ ‖ ತ್ರಯಾಣಾಂ ದಃ ನಾರದಃ ‖ 'ಅಜಗೊರಳ' ದಕ್ಷಃ ‖ ಭೃಗುರಗ್ನಿಸಮಃ ‖ ಪ್ರಸೂತಿಃ ವಹ್ನಿವತ್ ‖ ನನ್ವೇವಂ ಪ್ರಯಾಸೇನ ವೃತ್ತಿಪ್ರದರ್ಶನಂ ಹರಿಗುಣೋತ್ಕರ್ಷಬುದ್ಧ್ಯುಪಯೋಗಿ ಇತ್ಯುಕ್ತಮ್ ‖ ತತ್ ನ ‖ ಶಬ್ದಮುಖ್ಯಾಭಿಧೇಯೋ ಪ್ರಸಿದ್ಧ ಏವ ಗುಣಲಾಭಾತ್ ಕಿಂ ಲಬ್ಧಂ ಭವತಾ ಇತಿ ಶಂಕಾಂ ಪರಿಹರತಿ 'ಏವಂ' ಇತಿ ‖ ಏವಮೇವ ಹಿ ಶಬ್ದಾನಾಂ ಪ್ರಸಿದ್ಧಿರಪಿ ಲೌಕಿಕೇ ‖ ವಾಚಕತ್ವಂ ಪ್ರಧಾನಸ್ಯ ತ್ವಿತರಸ್ಯ ತದನ್ವಯಾತ್ ‖ ೨೦ ‖

## ಕನ್ನಡಾರ್ಥ

ಸೂರ್ಯನಿಗಿಂತಲೂ ವರುಣನು ಒಂದೂವರೆ ಕಾಲು ಗುಣಗಳಿಂದ

೩/೮ ಕಡಿಮೆಯುವನು. ಪಾದಾರ್ಘದಿಂದ ಪಾಪದಿಂದ ಕಡಿಮೆಯುವನು ಎಂದು "ಅರ್ಘ್ಯೈರ್ಘೋರೈನಃ ಸಮೋ ಮತಃ" ವಚನವಿದೆ. ವರುಣನಿಗೆ ನಾಲ್ಕು ಅವತಾರಗಳು- (೧) ಮಹಾಭಿಷಕ್, (೨) ಸುಷೇಣ, (೩) ಮಂಡೂಕ, (೪) ಶಂತನು ಎಂದು. ಬ್ರಹ್ಮದೇವರು ಪರ್ವಕಾಲದಲ್ಲಿ ಪೂರ್ವ ಸಮುದ್ರದ ತೀರಕ್ಕೆ ಹೋಗಿದ್ದರು. ಆಗ ವರುಣನು ಅವರನ್ನು ಲಕ್ಷೀಕರಿಸದೆ ತನ್ನ ಪತ್ನಿಯಾದ ಗಂಗಾದೇವಿಯೊಡನೆ ಸಂಗತನಾಗಿ ತರಂಗಗಳನ್ನು ಉಕ್ಕಿಸಿದನು. ಅದರಿಂದ ಬ್ರಹ್ಮದೇವರ ಮೈಮೇಲೆ ನೀರನ್ನು ಎರಚಿದನು. ಈ ನಿಮಿತ್ತದಿಂದ ಕುಪಿತರಾಗಿ ಬ್ರಹ್ಮದೇವರು ಶಪಿಸಿದರು-"ಮಹಾಭಿಷಕ್ ಎಂಬ ಹೆಸರಿನ ರಾಜನಾಗಿ ಭೂಮಿಯಲ್ಲಿ ಇಳಿ; ಮತ್ತೆ ಶಂತನು ನಾಮಕನಾಗಿ ಅವತರಿಸು" ಹೀಗಿರುವ ಬ್ರಹ್ಮಶಾಪದಿಂದ ವರುಣನು ಮಹಾಭಿಷಕ್ ನಾಮಕ ರಾಜನಾದನು. ವರುಣನು ಭೂಮಿಯಲ್ಲಿ ರಾಜನಾಗಿ ನಾರಾಯಣರೂಪೀ ಹರಿಯನ್ನು ಮಹಾಭಿಷೇಕ ವಿಧಿಯಿಂದ ಪೂಜಿಸಿದನು. ಅವನೇ ಪುನಃ ಶಂತನು ರಾಜನಾದನು. ರಾಗದಿಂದ ಬ್ರಹ್ಮದೇವರಿಗೆ ಶಿಥಿಲವಾದ ವಸ್ತ್ರವುಳ್ಳ ಗಂಗಾವಿಲಾಸವನ್ನೇ ತೋರಿಸಿದ್ದರಿಂದ ೨ನೆಯ ಸಲ ಶೀಘ್ರವಾಗಿ ರಾಜನಾಗೆಂದು ಶಾಪವಿತ್ತರು. ಈ ನಿಮಿತ್ತದಿಂದ ಶಂತನು ರಾಜನಾದನು. ವರುಣನು ಮಂಡೂಕರೂಪಿಯಾದವನೆಂದು ಉಪನಿಷತ್ತಿನಲ್ಲಿ ಹೇಳಲಾಗಿದೆ. 'ಮಂಡ'=ಸೂಕ್ಷ್ಮವಾದ, 'ಉ'=ಉತ್ಕೃಷ್ಟವಾದ, 'ಕಂ'=ಸುಖರೂಪ ಮಸ್ತಕವುಳ್ಳವನಾದುದರಿಂದ 'ಮಂಡೂಕ' ಎಂದು ಹೆಸರು. ಪೂರ್ವದಲ್ಲಿ ಆ ವರುಣನೇ ಸುಷೇಣನಾಗಿದ್ದನು. ತಾತ್ಪರ್ಯನಿರ್ಣಯದಲ್ಲಿ 'ವರುಣನು ಸುಷೇಣನಾದನು' ಎಂದು ಹೇಳಿರುತ್ತಾರೆ.

ಸುಪೂರ್ಣ ಷಡ್ಗುಣಗಳಿಂದ (ಜ್ಞಾನೈಶ್ವರ್ಯ ಮುಂತಾದ ಗುಣಗಳಿಂದ) ಸಂಪನ್ನನಾದ ವಿಷ್ಣುವಿನಲ್ಲಿ ಯಾವಾಗಲೂ ಭಕ್ತಿಯುಕ್ತನಾಗಿ ವ್ಯಾಪಾರ ಮಾಡುವುದರಿಂದ ಸುಷೇಣನೆಂದು ಹೆಸರು. ಬ್ರಹ್ಮದೇವರು 'ಶಾಂತೋ ಭವ'=ಶಾಂತನಾಗು ಎಂದು ಹೇಳಿದುದರಿಂದ 'ಶಂತನು' ಎಂಬ ಹೆಸರು ಸ್ಥೂಲರೂಪಕ್ಕೆ ಬಂದಿತು. ಶಾಪನಿಮಿತ್ತವಾದ ವರುಣನ ಎರ

ಡನೆಯ ಜನ್ಮದಲ್ಲಿ ಅವನ ಅಪರಾಧವು ಶಾಂತವಾಮದರಿಂದ 'ಶಂತನು' ಎಂಬ ಹೆಸರು ಬಂದಿತು.

"ವರುಣ, ಅಗ್ನಿಗಳ ನಡುವೆ ನಾರದನು" ಎಂಬ ಪ್ರಮಾಣಾನುಸಾರ ವಾಗಿ ಹೇಳುತ್ತಾರೆ-'ಸುರಮುನೀ' ಎಂಬುದಾಗಿ. 'ನಾರ' ಎಂದರೆ ಮನುಷ್ಯ ಸಂಬಂಧಿಯಾದ ಜ್ಞಾನ ತ್ರಿವಿಧವಾದುದು. ಅದನ್ನು ನರರಿಗೆ ಉಪದೇಶದಿಂದ ಕೊಡುವುದರಿಂದ ನಾರದನೆಂದು ಹೆಸರು. 'ಅಜಗೂರಳ'= ಕುರಿಮುಖದ ದಕ್ಷ; ಅವನ ಪತ್ನಿ ಪ್ರಸೂತಿ. ಭೃಗು, ಅಗ್ನಿ, ಪ್ರಸೂತಿ- ಇವರು ಸಮರು.

ಹರಿಗುಣೋತ್ಕರ್ಷಜ್ಞಾನವಾಗುವುದಕ್ಕೋಸ್ಕರ ಶಬ್ದಗಳ ವ್ಯುತ್ಪತ್ತಿ ಯನ್ನು ವರ್ಣಿಸಬೇಕು. ಯಾಕೆಂದರೆ ಕೇವಲ ಶಕ್ಯಾರ್ಥದಿಂದ ಆ ಗುಣಗಳು ತಿಳಿದು ಬರುವುದಿಲ್ಲ. ಅವಯವ ವ್ಯುತ್ಪತ್ತಿಯನ್ನು ತೋರಿಸಿದರೆ ಮುಖ್ಯಾರ್ಥವು ಹೊರಡುವುದು. ಮುಖ್ಯಾರ್ಥವು ವಿಷ್ಣುವಿನಲ್ಲಿಯೇ ಹೊಂದುವುದು. ಲೌಕಿಕ ವ್ಯುತ್ಪತ್ತಿಯನ್ನನುಸರಿಸಿದ ಅಮುಖ್ಯ ವೃತ್ತಿಯು ಇತರರಲ್ಲಿಯೂ ಅನ್ವಯಿಸುತ್ತದೆ. ॥ ೨೦ ॥

**ಅವತರಣಿಕಾ** :—ಈ ಪದ್ಯದಿಂದ ೧೫ನೇ ಕಕ್ಷದಲ್ಲಿದ್ದ ಭೃಗುಋಷಿ ಗಳು, ಅಗ್ನಿ, ಪ್ರಸೂತಿ-ಮೂವರ ಅವತಾರಾದಿ ಹೇಳುತ್ತಾ, ಕರ್ಮಜ ದೇವತೆಗಳ ಕಕ್ಷದಲ್ಲಿದ್ದ ಪ್ರಹ್ಲಾದರಾಜನು ಬೃಹತ್ತಾರತಮ್ಯದಲ್ಲಿ ಮಾತ್ರ ಅಗ್ನ್ಯಾದಿಗಳಿಗೆ ಸಮಾನನೆಂದು ಹೇಳುತ್ತಾರೆ.

**ನೀಲ ಧೃಷ್ಟದ್ಯುಮ್ನ ಲವ ಈ ।**
**ಲೇಲಿಹಾನನ ರೂಪಗಳು ಭೃಗು ।**
**ಕಾಲಿಲೊದ್ದದರಿಂದ ಹರಿಯಾ ವ್ಯಾಧನೆನಿಸಿದನು ॥**
**ಏಳು ಋಷಿಗಳಿಗುತ್ತಮರು ಮುನಿ ।**
**ಮೌಳಿ ನಾರದಗಧಮ ಮೂವರು ।**
**ಘಾಳಿಯುಮತ ಪ್ರಹ್ಲಾದ ಬಾಹ್ಲಿಕರಾಯನೆನಿಸಿದನು ॥ ೨೧ ॥**

**ಪದ್ಯಾರ್ಥ :**—ಅಗ್ನಿಯ ಅವತಾರಗಳು ಮೂರು—

(೧) ನೀಲ=ಶ್ರೀರಾಮ ಸೇವಾರ್ಥವಾಗಿ ನೀಲನೆಂಬ ವಾನರನಾಗಿ ಅವತರಿಸಿದ.

(೨) ಲವ=ಶ್ರೀರಾಮ ಸೀತಾದೇವಿಯಲ್ಲಿ ಅವತರಿಸಿದ ಲವನೇ ಅಗ್ನಿ ಅವತಾರ.

(೩) ಧೃಷ್ಟದ್ಯುಮ್ನ=ದ್ವಾಪರದಿ ದ್ರುಪದರಾಜನ ಯಜ್ಞಕುಂಡದಲ್ಲಿ ಅವತರಿಸಿದ ಅಗ್ನಿ ಅವತಾರ. ಈ ಮೂರು ಲೇಲಿಹಾನನ ರೂಪಗಳು= ದ್ವಿಜಿಹ್ವ ಎರಡು ನಾಲಿಗೆಯುಳ್ಳ, ಅಗ್ನಿಗೆ ಎರಡು ನಾಲಿಗೆಗಳು ಇರುವುದರಿಂದ ಲೇಲಿಹಾನನೆಂದು ಅಗ್ನಿಯು ಕರೆಸುತ್ತಾನೆ. (ಸರ್ಪಕ್ಕೂ ದ್ವಿಜಿಹ್ವ ಇದೆ. ಅದು ಲೇಲಿಹಾನವೆಂದು ಕೋಶ) ಲೇಲಿಹಾನಸ್ಸಪ್ತಜಿಹ್ವೋ ಮೇಷವಾಹಸ್ಸ್ವಾಹಾಪತಿಃ ॥ ಶಬ್ದರತ್ನಾವಳಿ ಅಭಿಧಾನಕೋಶ॥ ಭೃಗು=ಭೃಗುಋಷಿಗಳು, ಶ್ರೀಹರಿ ಸರ್ವೋತ್ತಮನೆಂದು ಲೋಕರಿಗೆ ತಿಳಿಸಲು ಹರಿಯಾ ಶ್ರೀವಿಷ್ಣುವಿಗೆ ವಕ್ಷಸ್ಥಳದಲ್ಲಿ ತನ್ನ ಕಾಲಿಲೆ ಒದ್ದಕ್ಕೆ ವ್ಯಾಧನಾಗಿ ಜನ್ಮತಾಳಿದನು. ಈ ಮೂವರು ಅಗ್ನಿ, ಭೃಗು, ಪ್ರಸೂತಿ. ಏಳು ಋಷಿಗಳಿಗ ಉತ್ತಮರು=ಸಪ್ತ ಋಷಿಗಳಿಗೆ ಶ್ರೇಷ್ಠರು, ಮುನಿವರೌಳಿ ನಾರದಗಧಮ=ಮನನಶೀಲರಾದ ದೇವಋಷಿ ನಾರದರಿಗೆ ಕಡಿಮೆ ಎನಿಸುತ್ತಾರೆ. ಘಾಳಿಯುತ, ವಾಯು ಆವೇಶಯುಕ್ತನಾದ ಪ್ರಹ್ಲಾದ-ಹಿರಣ್ಯಕಶಿಪುವಿನಲ್ಲಿ ಜನಿಸಿದ ಪ್ರಹ್ಲಾದರಾಜನೇ ದ್ವಾಪರದಲ್ಲಿ ಬಾಹ್ಲೀಕರಾಯನಾಗಿ ಅವತರಿಸಿದನು. ಇದು ಮುಂದಿನ ಪದ್ಯಕ್ಕೆ ಸಂಬಂಧ.

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ :**— (ಹಿಂದಿನ ಪದ್ಯದಿಂದ) ಅಗ್ನಿ ಅವತಾರ ಧೃಷ್ಟದ್ಯುಮ್ನ ಲವ ನೀಲರೂ ಮೂರು। ಭೃಗು ಜರನೆಂಬ ವ್ಯಾಧ। ಪ್ರಸೂತಿ ವಾರಿನಿಧಿಗಿಂತ ಪಾದ ಗುಣಾಧಮರೆಂದು ಅನವರತ ॥ ೨೨ ॥

**ಭಾವಸೂಚನ :**— ನೀಲೇತಿ ॥ ಧೃಷ್ಟದ್ಯುಮ್ನೋ ಲವೋ ನೀಲ ಇತ್ಯಾದ್ಯಗ್ನಿರಿತಿ ತಾರತಮ್ಯೇ ॥ ಭೃಗುರಿತಿ ॥ ಜರಾವ್ಯಾಧೋ ಭೃಗುಃ

ಪ್ರಾಗ್ ಇತ್ಯುಕ್ತೇಃ ॥ ಘಾಳಿ=ವಾಯು "ವಾಯುಯುಗ್ ಬಾಹ್ಲೀಕಃ ಪೂರ್ವಂ ಪ್ರಹ್ಲಾದೋ ನಾರದಾದಥವ ಇತ್ಯುಕ್ತೇಃ ॥ ೨೧ ॥

**ವಿಶೇಷ ಸೂಚನೆ :**—ಇದಕ್ಕೆ ಪ್ರಮಾಣಗಳು ಗಾರುಡ ಬ್ರಹ್ಮಕಾಂಡ ಅಧ್ಯಾಯ ೩೨. ವಹ್ನಿರಾಸೀತ್ ಪೂರ್ವ ಸರ್ಗೇ ಖಗೇಂದ್ರ ವಾಗಿಂದ್ರಿಯಾಪ್ತ್ಯಾಬ್ರಹ್ಮಣಃ ಸಂಪ್ರಸೂತಃ ॥ ಸ ಏವಾಗ್ನಿಃ ಸಂಬಭೂವ ಪೃಥಿವ್ಯಾಂ ರಾಮಾವತಾರೇ ವಾನರೋ ನೀಲಸಂಜ್ಞಃ ॥ ಸುನೀಲವರ್ಣಾನ್ನೀಲಸಂಜ್ಞಾಮವಾಪ ನಿಲೀಯತೇ ಹೃದಿ ವಿಷ್ಣೋರ್ಯತೋ ವಾ ॥ ಸ ಏವಾಗ್ನಿಃ ರಾಮಪುತ್ರೋ ಬಭೂವ **ಲವೇತಿ** ಸಂಜ್ಞಾಮಭವತ್ ಖಗೇಂದ್ರ ॥ ೨ ॥ **ಲೀಲಿಹ್ಯತೇ ಸರ್ವದಾ ರಾಮನಾಮ** ಅತೋಽಹ್ಯಸೌ ಲವ ಇತ್ಯೇವ ಸಂಜ್ಞಾಂ ॥ ಸ ಏವವಾಗ್ನಿರ್ದ್ರುಪದಸ್ಯೈವ ರಾಜ್ಞಃ । ಸತ್ಕುಂಡಮಧ್ಯಾದುತ್ಥಿತಃ ಕೃಷ್ಣಭಕ್ತಃ ॥೩॥ ಧೃಷ್ಟತ್ವಾದ್ರೂಪಾದ್ಯೋತನತ್ವಾಚ್ಚ ವೀಂದ್ರ ಧೃಷ್ಟದ್ಯುಮ್ನೇತ್ಯೇವ ಸಂಜ್ಞಾಮವಾಪ ॥ ನೀಲೋ ಲವೋ ದ್ರುಪದಸ್ಯಾಪಿ ಪುತ್ರ ಏತೇ ತ್ರಯಃ ಅಗ್ನಿರೇವೇತಿ ವಿದ್ಧಿ ॥ ೪ ॥ ಯೋ ಜರಾನಾಮಕೋ ವ್ಯಾಧಃ ಸ ಭೃಗುಃ ಪತ್ನಿಸತ್ತಮ ॥ ಪಾದ ಪ್ರಹಾರ ದೋಷೇಣ ಜರಾಪುತ್ರೋ ಬಭೂವ ಹ ॥ ೫ ॥ ಅತೋ ಜರಾನಾಮಕೋಽಭವತ್ ಕೃಷ್ಣಸ್ಯ ವಧನಾಮ್ನಾ ॥ ಭೃಶಂ ಶೀಘ್ರಂ ಸಮುದ್ದಿಷ್ಟಂ ಗತಿರ್ಗಮನಮುಚ್ಯತೇ ॥ ೬ ॥ ಕಾರ್ಯಾರ್ಥಂ ತ್ವರಯಾ ಯಾತಿ ಅತೋ ಭೃಗುರುದೀರಿತಃ ॥ ಪುರಾ ಭೃಗುಃ ವರುಣಸ್ಯೈವ ಪುತ್ರಃ ॥ ಇತ್ಯಾದಿ

ವಾಯ್ವಾವೇಶಾಚ್ಚ ಪ್ರಹ್ಲಾದೋ ನಾರದಾದಧಮಃ ಸ್ಮೃತಃ ॥ ವಾಯ್ವಾವೇಶಹ್ರಾಸಕಾಲೇ ಕರ್ಮಜೇಶಸಮಃ ಸ್ಮೃತಃ ॥ (ಗಾರುಡ ಬ್ರಹ್ಮಕಾಂಡ ಅಧ್ಯಾಯ ೪೦)

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ನೀಲ' ಇತಿ ॥ "ನೀಲೋಽಗ್ನಿರಾಸೀತ್ ॥" ದೀಪ್ತಾಂಗಾರ ಸಮೋ ವಹ್ನಿಃ ಕುಂಡಮಧ್ಯಾತ್ ಸಮುತ್ಥಿತಃ ॥ ಧೃಷ್ಟತ್ವಾತ್ ದ್ಯೋತನಾಚ್ಚೈವ ಧೃಷ್ಟದ್ಯುಮ್ನ ಇತೀರಿತಃ ॥ 'ಲವಃ' ದೇವ್ಯಾಃ ಹುತಾಶನಾತ್ ॥ 'ದ್ವಿ

ಕುಶಲವೌ' ಇತ್ಯುಕ್ತಮ್ ॥ ತಂ ಭೃಗುಂ ವ್ಯಾಧತಾಂ ಗತಂ ಪಶ್ಯತ ಜರಾನಾಮೇತಿ ॥ ಭೃಗ್ವಗ್ನಿಪ್ರಸೂತಿನಾಮ್ನ್ಯಃ ಪೂರಿತ್ಯುಕ್ತಾಃ ॥ "ಪ್ರಹ್ಲಾದಃ ಭಗವತ್ಪ್ರಿಯಃ । ವಾಯುನಾ ಚ ಸಮಾವಿಷ್ಟಃ ।" ಪ್ರತೀಪ ಪುತ್ರತಾಂ ಅಪ್ಯ ಬಾಹ್ಲೀಕೇಽಪ್ಯಭವತ್ ಪತಿಃ ॥ ನೀಲಂ ವಿಷ್ಣುಂ ನೀಲಾ-ಯತೇ ಹೃದಿ ಇತಿ ತಥೋಕ್ತಃ ॥ ಲೇಲೀಯತೇ ರಾಮನಾಮ್ನೈವ ಯಸ್ಮಾತ್ ॥ ಸದಾ ಲವಃ ರಾಮಸೂನುಃ ॥ ಜರಾಗ್ರಸ್ತತ್ವಾತ್ ಜರಾ ॥ ೨೧ ॥ ಭೃಶಂ ಶೀಘ್ರಂ ಸಮುದ್ದಿಷ್ಟಂ ಗತಿಃ ಗಮನಮುಚ್ಯತೇ ॥ ಕಾರ್ಯಾರ್ಥೀ ತ್ವರಯಾ ಯಾತಿ ಹ್ಯತೋ ಭೃಗುಃ ॥

## ಕನ್ನಡಾರ್ಥ

"ಅಗ್ನಿಯೇ ನೀಲನಾಮಕ ವಾನರನಾದನು" ಎಂದು ತಾತ್ಪರ್ಯ ನಿರ್ಣಯದಲ್ಲಿ ಹೇಳುತ್ತಾರೆ. ಪ್ರಜ್ವಲಿಸುವ ಅಗ್ನಿಯು ಕುಂಡಮಧ್ಯದಿಂದ ಮೇಲೆ ಬಂದು ನಿಂತನು.ಅವನು ಧೃಷ್ಟನಾದುದರಿಂದಲೂ,ಕಾಂತಿಯುಕ್ತನಾದುದರಿಂದಲೂ 'ಧೃಷ್ಟದ್ಯುಮ್ನ' ಎಂದು ಅವನಿಗೆ ಹೆಸರು ಎಂದು ಅಗ್ನಿಯೇ ಧೃಷ್ಟದ್ಯುಮ್ನನೆಂಬಲ್ಲಿ ಪ್ರಮಾಣವಚನವಿದೆ. ಸೀತಾದೇವಿಯಲ್ಲಿ ಅಗ್ನಿಯು ಲವನಾಗಿ ಹುಟ್ಟಿದನು. "ಕುಶ-ಲವರಿಬ್ಬರು ಸೀತಾಪುತ್ರರು" ಎಂದು ಹಿಂದೆಯೇ ಹೇಳಲಾಗಿದೆ. ಭೃಗುವೇ ವ್ಯಾಧನೆಂದು "ಜರಾನಾಮಕ ವ್ಯಾಧನಾಗಿರುವ ಭೃಗುವನ್ನು ನೋಡಿ" ಎಂದು ಮುಂತಾದ ವಚನಗಳಿಂದ ಪ್ರಮಿತವಾಗಿರುತ್ತದೆ. ಮೂವರೆಂದರೆ ಭೃಗು, ಅಗ್ನಿ, ಪ್ರಸೂತಿಗಳು. "ಪ್ರಹ್ಲಾದನು ಭಗವತ್ಪ್ರಿಯನು; ವಾಯ್ವಾವೇಶಯುಕ್ತನು; ಅವನೇ ಪ್ರತೀಪನ ಪುತ್ರ ಬಾಹ್ಲೀಕರಾಜನಾದನು" ಎಂದು ಪ್ರಮಾಣಗಳಿರುವವು. ಯಾವನಲ್ಲಿ ಹರಿಯು ನೀಲರೂಪನಾಗಿ ತೋರುವನೋ ಅವನು ನೀಲ. ಹೀಗೆ ಅಗ್ನಿಯೇ ನೀಲಾವತಾರ. ರಾಮನಾಮವು ಅವನ ನಾಲಿಗೆಯಲ್ಲಿ ಸದಾ ಕುಣಿಯುತ್ತಿದ್ದರಿಂದ ಲೇಲಿಹಾನ ಎಂದು ಅಗ್ನಿಪುತ್ರನಾದ ಅವನಿಗೆ 'ಲವ'ನೆಂಬ ಹೆಸರು ಅನ್ವರ್ಥಕವಾದುದು. 'ಭೃ' ಎಂದರೆ ಶೀಘ್ರವಾಗಿ, 'ಗ' ಗಮನವುಳ್ಳವನು. "ಭೃಗುಃ" ಕಾರ್ಯಕ್ಕಾಗಿ ತ್ವರೆಯಿಂದ ಹೋಗುವವನು ಎಂದು ಅರ್ಥ ॥ ೨೧ ॥

**ಅವತರಣಿಕಾ** :—ಹಿಂದಿನ ಪದ್ಯದಲ್ಲಿ ಪೇಳಿದ ಪ್ರಹ್ಲಾದರಾಜನೆ ಬಾಹ್ಲೀಕರಾಯನಾದುದನ್ನು ಹೇಳಿ, ಈ ಪದ್ಯದಿಂದ ಪ್ರಹ್ಲಾದರಾಜ ಮೂಲ ತಾರತಮ್ಯದಲ್ಲಿ ಕರ್ಮಜ ದೇವತೆಗಳ ೨೦ನೇ ಕಕ್ಷವಲ್ಲಿದ್ದರೂ, ವಾಯು ಆವೇಶ ನಾರದರ ಅನುಗ್ರಹದಿಂದ ಬೃಹತ್ತಾರತಮ್ಯದಲ್ಲಿ ಮಾತ್ರ ಅಗ್ನ್ಯಾದಿಗಳಿಗೆ ಸಮಾನನೆಂದು ಹೇಳುತ್ತಾರೆ.

**ಜನಪ ಕರ್ಮಜರೊಳಗೆ ನಾರದ ।**
**ಮುನಿ ಅನುಗ್ರಹ ಬಲದಿ ಪ್ರಹ್ಲಾ- ।**
**ದನಳ ಭೃಗು ದಾಕ್ಷಾಯಣಿಯರಿಗೆ ಸಮನೆನಿಸಿಕೊಂಬ ॥**
**ಮನುವಿವಸ್ವಾನ್ ಗಾಧಿಜೇರ್ವರು ।**
**ಅನಳಗಿಂದಲಿ ಕಿಂಚಿತಾಧಮ ।**
**ಎಣೆಯೆನಿಸುವರು ಸಪ್ತಋಷಿಗಳಿಗೆಲ್ಲ ಕಾಲದಲಿ ॥ ೨೨ ॥**

**ಪದ್ಯಾರ್ಥ** :—ಜನಪ ಕರ್ಮಜರೊಳಗೆ=ಕರ್ಮಜ ದೇವತೆಗಳ ಕಕ್ಷದಲ್ಲಿರುವ ಶತರಾಜರೊಳಗೆ, ಪ್ರಹ್ಲಾದ=ಪ್ರಕರ್ಷದಿಂದ ಆಹ್ಲಾದಕರ ನಾದ ಪ್ರಹ್ಲಾದರಾಜನು ನಾರದಮುನಿ ಅನುಗ್ರಹ ಬಲದಿ=ದೇವಋಷಿ ಗಳಾದ ನಾರದರ ಸದುಪದೇಶದಿಂದಲೂ ಮತ್ತು ಸೃಷ್ಟಿಯಲ್ಲಿ ಉತ್ತಮರ ಆವೇಶದಿಂದ ಉತ್ತಮರೆಂಬುವ ಬೃಹದ್ಭಾಷ್ಯ ವಚನಾನುಸರಿಸಿ, ಪ್ರಹ್ಲಾದ ರಲ್ಲಿ ನಿತ್ಯ ವಾಯು ಆವೇಶವಿದ್ದ ಕಾರಣ ಮತ್ತು ನಾರದರ ಉಪದೇಶ ಬಲದಿಂದ ಅನಳ=ಅಗ್ನಿ, ಭೃಗು=ಭೃಗುಋಷಿಗಳು, ದಾಕ್ಷಾಯಣೀ=ದಕ್ಷ ಪ್ರಜೇಶ್ವರ ಹೆಂಡತಿ ಪ್ರಸೂತಿದೇವಿಗೆ, ಸಮನೆನಿಸಿಕೊಂಬ=ಸರಿಸಮಾನ ನೆಂದು ಕರೆಸುತ್ತಾನೆ. ಇದಕ್ಕೆ ಪ್ರಮಾಣ ॥ ವಾಯುಯುಗ್ ಬಾಹ್ಲೀಕ ಇತ್ಯತ್ರ ॥ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ಭಗವತ್ಪರಃ॥ವಾಯುನಾ ಚ ಸಮಾವಿಷ್ಟೋ ಮಹಾಬಲಸಮನ್ವಿತಃ ಇತಿ ಮಾನಸಮ್ ॥ ಪ್ರಹ್ಲಾ ದಸ್ಯ ಜೇಷ್ಠತ್ವೇ "ದೇವಶಾಪಾದ್ಧಿ ಭೂತತ್ವಾತ್ ಪ್ರಹ್ಲಾದಾದ್ಯಾ ಬಭೂವಿರೇ" ಇತಿ ಬ್ರಹ್ಮಸೂತ್ರಭಾಷ್ಯಂ ಮಾನಮ್। ತಸ್ಯ ನಾರದಾಧ- ಮತ್ವೇ । "ಋತೇ ತು ತಾತ್ವಿಕಾನ್ ದೇವಾನ್ ನಾರದಾದೀಂಸ್ತಥೈವ ಚ ॥ ಪ್ರಹ್ಲಾದಾದುತ್ತಮಃ ಕೋ ನು ವಿಷ್ಣುಭಕ್ತೋ ಜಗತ್ತ್ರಯೇ" ಇತಿ

ಭಾಗವತತಾತ್ಪರ್ಯೇ ಮಾನಸಃ ॥ ನಾರದಾದಧಮ ಇತ್ಯೇವೋಕ್ತಂ ॥ ಇತಿ ತಾರತಮ್ಯಸಂಗ್ರಹೇ ॥" ಮನುವಿವಸ್ವಾನ್=ವೈವಸ್ವತ ಮನುವು ಮತ್ತು ಗಾಥಿಜೇರ್ಪರ=ಗಾಧಿರಾಜನ ಪುತ್ರ ವಿಶ್ವಾಮಿತ್ರ ಋಷಿಗಳು, ಅನಳಗಿಂದಲಿ ಕಿಂಚಿತ್ತಾಧಮ=ಅಗ್ನ್ಯಾದಿಗಳಿಂದ ಕಿಂಚಿತ್ ಅಧಮರು,ಎನಿಯೆನಿಸುವರು ಸಪ್ತಋಷಿಗಳಿಗೆಲ್ಲ ಕಾಲವಲಿ=ಸೃಷ್ಟಿಯಲ್ಲಿ, ಮೂಲದಲ್ಲಿಯೂ ವಸಿಷ್ಠಾದಿ ಏಳು ಮಂದಿ ಋಷಿಗಳಿಗೆ ವೈವಸ್ವತಮನು, ವಿಶ್ವಾಮಿತ್ರರಿಬ್ಬರು ಸಮಾನರೆನಿಸುವರು ॥ ೨೨ ॥

**ಭಾವಸೂಚನ** :— ಜನಪೇತಿ ಅರಸು ॥ ಅನುಗ್ರಹೇತಿ ॥ ಪ್ರಕೃಷ್ಟಾಪ್ಲಾದಯುಕ್ತತ್ವಾನ್ನಾರದಸ್ಯೋಪದೇಶತಃ ॥ ಮಹಾಭಾಗಃ ಕರ್ಮದೇವಸಮಃ ಸ್ಮೃತ ಇತಿ ಗಾರುಡೇ ॥ ೨೨ ।

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ವಿಶ್ವಾಮಿತ್ರರೆಂಬುವ ಪದ ಅರ್ಥವನ್ನು ಮುಂದೆ ೨೩ನೇ ಪದ್ಯದಲ್ಲಿ ಬರೆದಿರುವರು.೨೨ನೇ ಪದ್ಯಕ್ಕೆ ಟೀಕಾ ಬರೆದಿಲ್ಲ.

**ಅವತರಣಿಕಾ** :— ಈ ಪದ್ಯದಲ್ಲಿ ೧೬ನೇ ಕಕ್ಷದಲ್ಲಿದ್ದ ಬ್ರಹ್ಮಪುತ್ರರಾದ ಮರೀಚ್ಯಾದಿ ಸಪ್ತಋಷಿಗಳ ಸ್ತೋತ್ರ ಮತ್ತು ೧೭ನೇ ಕಕ್ಷದಲ್ಲಿದ್ದ ಮಿತ್ರಾದಿಗಳ ಅವತಾರಗಳಂ ಪೇಳ್ವರು.

**ಕಮಲ ಸಂಭವ ಭವರೆನಿಪ ಸಂ- ।**
**ಯಮಿ ಮರೀಚೀ ಅತ್ರಿ ಅಂಗಿರ ।**
**ಸುಮತಿ ಪುಲಹಾಕ್ರತು ವಸಿಷ್ಠ ಪುಲಸ್ತ್ಯ ಮುನಿ ಸ್ವಾಹಾ ॥**
**ರಮಣಗಧಮರು ಮಿತ್ರ ನಾಮಕ ।**
**ದ್ಯುಮಣಿ ರಾಹೂ (ವಾಯೂ) ಯುಕ್ತ ಭೀಷ್ಮಕ ।**
**ಯಮಳೆ ರೂಪನು ತಾರನಾಮಕನೆನಿಪ ತ್ರೇತೆಯೊಳು ॥ ೨೩ ॥**

**ಪದಾರ್ಥ** :— ಕಮಲಸಂಭವ=ಕಮಲದಿಂದ ಹುಟ್ಟಿದ ಬ್ರಹ್ಮ, ಈ ಬ್ರಹ್ಮ=ಭವರೆನಿಪ ಬ್ರಹ್ಮದೇವರ ಅವಯವಗಳಿಂದ ಹುಟ್ಟಿದವ್ರ,

ಸಂಯಮಿ=ಇಂದ್ರಿಯ ದಮನ ಮಾಡಿದ ಯತಿಗಳು-(೧) ಮರೀಚಿ= ಬ್ರಹ್ಮದೇವರ ಮನಸ್ಸಿನಿಂದ ಹುಟ್ಟಿದ ಪುತ್ರರು, ಮರೀಚಿ ಋಷಿಗಳು. ಜ್ಞಾನವು ಇವರಿಂದಲೇ ಹುಟ್ಟುವುದು. (೨) ಅತ್ರಿ=ಅತ್ರಿ ಋಷಿಗಳು, ಬ್ರಹ್ಮಮಾನಸ ಪುತ್ರರು. (೩) ಅಂಗಿರ=ಬ್ರಹ್ಮದೇವರ ಮುಖದಿಂದ ಉತ್ಪನ್ನರಾದವರು. ವಚನದಿಂದ ಆನಂದರೂಪಿಯಾದ ಹರಿಯನ್ನು ಸ್ತೋತ್ರಗೈದವರು. ಸುಮತಿ, (೪) ಪುಲಹ=ಬ್ರಹ್ಮದೇವರಿಂದ ಉತ್ಪನ್ನರು. (೫) ಕ್ರತು=ಈ ಕ್ರತು ಋಷಿಗಳು ಬ್ರಹ್ಮದೇವರ ಕರದಿಂದ ಉತ್ಪನ್ನರಾಗಿ ಈ ಕ್ರತು ಋಷಿಗಳು ಸರ್ವದಾ ಪಂಚಯಜ್ಞಗಳನ್ನು ಮಾಡುತ್ತಾ, ನಾರಾಯಣನಿಗೆ ಅರ್ಪಿಸುವರಾದುದರಿಂದ ಕ್ರತು ಎಂದು ಇವರ ನಾಮ. (೬) ವಸಿಷ್ಠ=ಯೋ ವಾ ವಸಿಷ್ಠೋ ಬ್ರಹ್ಮಪುತ್ರಃ ಖಗೇಂದ್ರ ಪ್ರಾಣಾಜ್ಜಾತೋ ಬ್ರಹ್ಮಣೋ ವಿಷ್ಣುಭಕ್ತಃ ॥ ಇಷ್ಟದಾದ ವಿಷ್ಣುವನ್ನು ಸ್ವವಶ ಮಾಡಿಕೊಳ್ಳುವುದರಿಂದ ವಸಿಷ್ಠನೆಂದು ನಾಮ. (೭) ಪುಲಸ್ತ್ಯ=ಬ್ರಹ್ಮದೇವರ ಶ್ರೋತ್ರೇಂದ್ರಿಯದಿಂದ ಉತ್ಪನ್ನರಾದವರು. ಸದಾ ರಾಮಭಕ್ತರೆಂದು (ಗಾರುಡ ವಚನ). ಮುನಿ=ಈ ಏಳು ಮಂದಿ ಬ್ರಹ್ಮಪುತ್ರರು, ಸ್ವಾಹಾರಮಣಗಧವರು=ಸ್ವಾಹಾದೇವಿ ಪತಿಯಾದ ಅಗ್ನಿದೇವರಿಗೆ ಕಡಿಮೆ ಮತ್ತು ಹಿಂದಿನ ಪದ್ಯದಲ್ಲಿ ಹೇಳಿದ ವಿಶ್ವಾಮಿತ್ರ, ವೈವಸ್ವತ ಮನುಗಳು ಈ ಏಳು ಜನಕ್ಕೆ ಸಮಾನರು. ಇನ್ನು ೧೨ನೇ ಕಕ್ಷದಲ್ಲಿದ್ದ (೧) ಮಿತ್ರ ನಾಮಕ ಸೂರ್ಯ, (೨) ನಿಋತಿ, (೩) ಪ್ರವಹ, (೪) ತಾರಾ ಬೃಹಸ್ಪತ್ಯಾಚಾರ್ಯರ ಪತ್ನಿ-೪ ಜನ. ಇವರಲ್ಲಿ ಮಿತ್ರನಾಮಕ, ದ್ಯುಮಣಿ=ಆಕಾಶಮಣಿ ಸೂರ್ಯನು ೧೨ ಜನ ಸೂರ್ಯರಲ್ಲಿ ಮಿತ್ರ ನಾಮಕ ಸೂರ್ಯನು ಒಬ್ಬನು. ಕಾಶ್ಯಪ ಋಷಿಗಳ ಮಗ=ಮಲದಲ್ಲಿ ಪಾಯ್ವಿಂದ್ರಿಯಕ್ಕೆ, ಅಭಿಮಾನಿ ವಿಷ್ಣುಭಕ್ತನು. ವರ್ಷಾಕಾಲದಲ್ಲಿ "ವರ್ಷಾಕಾಲೇ ಪ್ರಮಿನೋತ್ಯೈವ ವೃಷ್ಟಿಃ । ತೇನ ಪ್ರಜಾಃ ತ್ರಾತಿ ನಿತ್ಯಂ ಖಗೇಂದ್ರ । ಅತೋ ಹ್ಯಸೌ ಮಿತ್ರಸಂಜ್ಞಾಮವಾಪ ॥ ಗಾರುಡೇ (೧) ಮಿತ್ರಾವತಾರ, *(೨) ರಾಹೂ ಯುಕ್ತ ಭೀಷ್ಮಕರಾಜ=ಮಿತ್ರಾವತಾರೋ

* ಸೂಚನೆ :—ಈ ಪದ್ಯವು ಎಲ್ಲ ಪ್ರತಿಗಳಲ್ಲಿ ರಾಹೂ ಯುಕ್ತ ಭೀಷ್ಮನೆಂದು ಇದೆ ಗರುಡ ಪುರಾಣದಲ್ಲಿ ರಾಹೂ ಯುಕ್ತವೆಂತಲೇ ಇದೇ

ಭೀಷ್ಮಕೋ ನಾಮ ರಾಜಾ ರಾಹ್ವಂಶಯುಕ್ತಃ ಕೃಷ್ಣಭಕ್ತಃ ಪೃಥಿವ್ಯಾಮ್ ॥ ಭೀಷ್ಮಕನು ರಾಹು ಆವೇಶಪೂರ್ವಕ ಯಮರೂಪನು, ಮಿತ್ರನು. ಭೀಷ್ಮಕನು ಎರಡು ಅವತಾರ–ತಾರನಾಮನೆನಿಪ ತ್ರೇತೆಯೊಳು=ತ್ರೇತಾಯುಗದಲ್ಲಿ ತಾರನಾಮಕ ಕಪಿಯು ಬೃಹಸ್ಪತಿ ಅವತಾರ. ಈ ತಾರಾ ಕಪಿ ಹೆಂಡತಿ ತಾರಾದೇವಿಯೇ=ದ್ರೋಣಾಚಾರ್ಯರ ಪತ್ನಿ, ಕೃಪಿಯೇ ತಾರಾದೇವಿ ಅವತಾರ.

**ಭಾವಸೂಚನ** :—ಕಮಲೇತಿ ॥ ಸಂಯಮೀ ಯಮಶೀಲರು ॥ ಬ್ರಹ್ಮೋತ್ಪನ್ನರು ॥ **ವಾಯುಯುಕ್ತ ಭೀಷ್ಮಕ ॥ "ವಾಯುಯುಕ್ ಭೀಷ್ಮಕ ಇತ್ಯುಕ್ತೇಃ ॥"** ಯಮಲಾ ಎರಡು ॥ ೨೩ ॥

**ಶ್ರೀ ಜಗನ್ನಾಥ ದಾಸಾರ್ಯರ ಬೃಹತ್ತಾರತಮ್ಯ ಪದ :—**
ಅಂಗಿರ ಪುಲಸ್ತ್ಯಾತ್ರಿ ಪುಲಹನು ಮರೀಚಿಮುನಿ । ಪುಂಗವ ವಸಿಷ್ಠ ಕ್ರತು ಬ್ರಹ್ಮಸುತರು । ತುಂಗ ವಿಶ್ವಾಮಿತ್ರ ವೈವಸ್ವತರು ಸದಾ ಕೆಂಗದಿರಗಧಮ ಒಂಭತ್ತು ಜನರೆಂದು ॥ ೨೩ ॥ ಸಪ್ತಋಷಿಗಳಿಗೆ ಸಮನೆನಿಪ ವೈವಸ್ವತನು!

ಸಪ್ತವಾಹನನ ಆವೇಶ ಬಲದಿ । ಲುಪ್ತವಾಗಲು ಕಡಿಮೆಯೆನಿಪ ಪ್ರಾವಹಿತಾರಕ್ಕೆ ಲಿಪ್ತ ಮಂದೇ ರೂಪ ಕೃಪಿಯೆಂದು ಕರೆಸುವೆ ಗಾನಮಿಪೆ ॥ ೨೪ ॥

"ಮಿತ್ರಾವತಾರೋ ಭೀಷ್ಮಕೋ ನಾಮ ರಾಜಾ **ರಾಹ್ವಂಶಯುಕ್ತಃ** ಕೃಷ್ಣಭಕ್ತಃ ಪೃಥಿವ್ಯಾಮ್ ॥ ಯಾ ವಿಷ್ಣುಭಕ್ತಾ ಗುರುಭಾರ್ಯಾ ಚ ತಾರಾ ಮಿತ್ರಸ್ಯ ಪುತ್ರೀತ್ವಭವಚ್ಚ ಸತೀ ಸಾ॥ ಪಾತಿವ್ರತ್ಯಂ ಉತ್ತಮಾನಾಂ ಚ ಸ್ತ್ರೀಣಾಂ ಉಪದೇಷ್ಟ್ರಕತ್ವಾತ್ತಾರಕತ್ವಾಚ್ಚ ತಾರಾ ॥ ಸೈವ ಪೃಥಿವ್ಯಾಂ ಕೃಪಿಸಂಜ್ಞಾ ಬಭೂವ । ದ್ರೋಣಸ್ಯ ಭಾರ್ಯಾ ಅತ್ರಿಮುಖ್ಯೈಃ ಶರದ್ವತ್ ॥ ಇತ್ಯಾದಿ ಗಾರುಡ ಋಾಸೇ ಅಧ್ಯಾಯ.

---

ಅವರೆ ಭಾವಸೂಚನೆಯಲ್ಲಿ "ವಾಯುಯುಕ್ತ ಭೀಷ್ಮಕನೆಂದು ಮೂಲಪಠ್ಯ ಟೀಕೆಯಲ್ಲಿ ಇವೆ. ರಾಹುವಿಗಿಂತಲೂ ಮಿತ್ರನಾಮಕ ಸೂರ್ಯ ಉತ್ತಮ. ಉತ್ತಮರಲ್ಲಿ ಅಧಮರಾದ ರಾಹು ಅಂಶ ಆವೇಶ ಶಾಸ್ತ್ರಕ್ಕೆ ವಿರುದ್ಧ ವಾದವು. ವಾಯುಯುಕ್ತವೆಂದೆ ಸರಿತೋರುತ್ತದೆ. ವಿಚಾರವಂತ ಜ್ಞಾನಿಗಳು ತೀರ್ಮಾನ ಮಾಡುವರು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ವಿಶ್ವಸ್ಯ ಸಜ್ಜನವರ್ಗಸ್ಯ ಮಿತ್ರಂ ವಿಶ್ವಾಮಿತ್ರಃ ॥ ಸರ್ವಂ ಬ್ರಹ್ಮಣಾ ನಿರ್ಮಿತಂ ಅವಿನೋತಿ ನಿರ್ಮಾತಿ ಚ ತ್ರಾಯತೇ ಚ ಇತಿ **ವಿಶ್ವಾಮಿತ್ರಃ** ॥ ಇಷ್ಟಂ ವಿಷ್ಣುಂ ಸ್ವವಶೇ ಕರೋತಿ ಇತಿ. **ವಿ(ವ)ಶಿಷ್ಟಃ** ॥ ಮರೀಚಯಃ ಜ್ಞಾನರೂಪಾಃ ಖಗೇಂದ್ರ ಯಸ್ಯಾಸ್ಯದ್ವಾರೋದ್ಗಲಯಂತಿ ನಿತ್ಯಂ **ಮರೀಚಿಃ** ॥ ಆನಂದರೂಪಃ ವಿಷ್ಣುಂ ಏನಂ ಸದೈವ ತ್ರಾತಿ ಹ್ಯಸ್ಮಾತ್ **ಅತ್ರಿಸಂಜ್ಞಃ** ॥ ಅಸ್ಯ ಆನಂದ ರೂಪಾಃ ಗಿರಃ ॥ ಅತಃ **ಅಂಗಿರಾಃ** ॥ ಹರಿಣಾ ಪಂಚಭೂತೈಃ ಸುನಿರ್ಮಿತಂ ಜರಾಯ್ವಾದಿ ಪಾಲಿತಂ ಗಾತ್ರಂ ಜ್ಞಾನಾದಿಕ್ರಚ್ಛ್ರೇಣ ಹರೌ ಚ ಭಕ್ತ್ಯಾ ಪನಸಂ ಕರೋತಿ ಇತಿ **ಪುಲಹಃ** ॥ ಯೋಗ್ಯಾನುಸಾರಂ ಪೂರ್ಣಸುಖಂ ಛಿನತ್ತಿ ತತಃ ಅರಿಷಡ್ವರ್ಗಃ ಪುಲಃ ॥ ತಂ ಸ್ತ್ಯಾಯತಿ ಹಂತಿ ಇತಿ ಅತಃ **ಪುಲಸ್ತ್ಯಃ** ವಿಶೇಷೇಣ ಕ್ರಿಯತೇ ಪಂಚಯಜ್ಞಃ ನಾರಾಯಣೇ ಹ್ಯರ್ಪಣಂ ಸರ್ವದಾಪಿ ॥ ಅತಃ **ಕ್ರತುಃ** ॥ ಪ್ರಕರ್ಷಜ್ಞಾನಯುತಃ ಪ್ರಹ್ಲಾದಃ ॥ "ಯಮಳ"–ಮಿತ್ರರಾಹ್ವೇಃ ಸ ತು ಪಿತಾಸ್ಯ ಹಿ **ಮಿತ್ರಭಾಗಾಃ ರಾಹೋಶ್ಚ** ಇತಿ ಮಾನವಮ್ ॥ ವರ್ಷಾಕಾಲೇ ಪ್ರಮಿನೋತಿ ವೃಷ್ಟಿಂ ತಯಾ ಪ್ರಜಾಃ ತ್ರಾಯತಿ ಇತಿ ಮಿತ್ರಃ ॥ ಉತ್ತಮಸ್ತ್ರೀಣಾಂ ಪಾತಿವ್ರತ್ಯೋಪದೇಶಕತ್ವಾತ್ ತಾರಾ ॥ ತ್ರೇತಾಯಾಂ ತಾರಭಾರ್ಯೈವ ಕೃಪೀ ॥ (ನಾವೈಕ್ಯಮುಪಾವತ್ ॥) ತಾರಾ ಭಾರ್ಯಾ ಯಾ ಹಿ ಬೃಹಸ್ಪತೇಃ ॥ "ನಿಜಾಂ ಕೃಪೀಂ ಸ ದ್ರೋಣೋಪಿ ಭಾರ್ಯಾಂ ॥ ೨೨-೨೩ ॥

## ಕನ್ನಡಾರ್ಥ

ಇಲ್ಲಿ ಸಪ್ತರ್ಷಿಗಳಿಗೆ ಒಬ್ಬೊಬ್ಬರಿಗಿರುವ ನಾಮಗಳ ಅರ್ಥವನ್ನು ವಿವರಿಸುತ್ತಾರೆ. ಶೀಘ್ರವಾಗಿ ಹೋಗುವವರು ಯಾವುದೊಂದು ಕಾರ್ಯಕ್ಕಾಗಿ ಅತಿ ತ್ವರೆಯಿಂದ ಹೋಗುವುದರಿಂದ '**ಭೃಗು**' ಎಂದು ಹೆಸರು.

(೧) ಸಮಸ್ತವಿಶ್ವಕ್ಕೆ ಸಜ್ಜನ ವರ್ಗಕ್ಕೆ ಮಿತ್ರನಾದುದರಿಂದ ವಿಶ್ವಾಮಿತ್ರ. ಬ್ರಹ್ಮ ನಿರ್ಮಿತ ವಿಶ್ವವನ್ನು ಮಾನಕ್ಕೆ ತರುವ, ಅದರಂತೆ

ದನು ಹಿಂದಿನ ಪದ್ಯಕ್ಕೆ) 'ಯಮಳ' ಮಿತ್ರ ಹಾಗು ರಾಹು ಇವರಿಂದ ಕೂಡಿದವನು. ಈ ಭೀಷ್ಮಕನಲ್ಲಿ ಹೀಗೆ ಎರಡು ರೂಪಗಳಿರುವವೆಂಬಲ್ಲಿ "ಸ ತು ಪಿತಾಸ್ಯ" ಎಂಬ ವಚನಗಳು ಆಧಾರ. ವರ್ಷಾಕಾಲದಲ್ಲಿ ಮಳೆಯಿಂದ ಪ್ರಜೆಗಳನ್ನು ಸಂರಕ್ಷಿಸುವವನು ಮಿತ್ರ (ಸೂರ್ಯ) ಉತ್ತಮ ಸ್ತ್ರೀಯರಿಗ ಪಾತಿವ್ರತ್ಯವನ್ನು ಉಪದೇಶಿಸುವವಳು ತಾರಾ. ತ್ರೇತಾದಲ್ಲಿ ತಾರನೆಂಬುವವನ ಹೆಂಡತಿ. ಅವಳೇ ಋಷಿ. ಅವಳನ್ನೇ ಬೃಹಸ್ಪತಿಯವತಾರನಾದ ದ್ರೋಣನು ಅಂಗೀಕರಿಸಿದನು ॥ ೨೩ ॥

**ಅವತರಣಿಕಾ:**— ೧೨ನೇ ಕಕ್ಷದಲ್ಲಿದ್ದ ನಿಋತಿ, ತಾರಾ, ಪ್ರಾವಹಿ ಇವರ ರೂಪ ಹೇಳುತ್ತಾ ಮುಂದೆ ೧೪ನೇ ಕಕ್ಷದಲ್ಲಿದ್ದ ಕುಬೇರ ಗಣೇಶಾದಿಗಳ ಅವತಾರಗಳ ಹೇಳ್ವರು.

**ನಿಋತಿಗೆರಡವತಾರ ದುರ್ಮುಖ ।**
**ಹರಯುತ ಘಟೋತ್ಕಚನು ಪ್ರಾವಹಿ ।**
**ಗುರುಮಡದಿ ತಾರಾಸಮರು ಪರ್ಜನ್ಯಗುತ್ತಮರು ॥**
**ಕರಿಗೊರಳ ಸಂಯುಕ್ತ ಭಗದ ।**
**ತ್ತ ರಸುಕತ್ಥನ ಧನಪರೂಪಗ ।**
**ಳೆರಡು ವಿಘ್ನಪ ಚಾರುದೇಷ್ಣನು ಅಶ್ವಿನಿಗಳು ಸಮ ॥ ೨೪ ॥**

**ಪದಾರ್ಥ:**— ನಿಋತಿ=ಕೋಣಾಧಿಪತಿಯಾದ ನಿಋತಿಗೆ ಎರಡು ಅವತಾರ, ಯಾವವೆಂದರೆ ತ್ರೇತಾಯುಗದಲ್ಲಿ. ನಿಋತಿಯು=೧ ದುರ್ಮುಖನೆಂಬ ಕಪಿಯಾದನು. ೨ ಹರಯುತ ಘಟೋತ್ಕಚನು = ರುದ್ರಾವೇಶಯುಕ್ತ ಘಟೋತ್ಕಚನಾದನು, ಹಿಡಿಂಬಿಯಲ್ಲಿ ಭೀಮಸೇನನಿಂದ ಜನಿಸಿದಾತನು. ಪ್ರಾವಹಿ=ಪ್ರವಾಹದೇವ ಹೆಂಡತಿ. (ಕುಮುದ್ವತಿ ನಾಮಕಳೆಂದು-ತಾರತಮ್ಯ ಸಂಗ್ರಹದಿ ಅಧರಾಪುರ ಆಚಾರ್ಯರ ಉಕ್ತಿ. "ಯಾ ಭಾನುಪುತ್ರೀ ಪ್ರಾವಹೀ-ವಿಷ್ಣುನಿಷ್ಠಾ ಪ್ರವಾಹಸ್ಯ ಭಾರ್ಯಾ॥" ಗುರುಮಡದಿ ತಾರಾಸಮರು=ಬೃಹಸ್ಪತ್ಯಾಚಾರ್ಯರ ಹೆಂಡತಿ ತಾರಾದೇವಿ ಸಮಾನರು. ಪರ್ಜನ್ಯಗುತ್ತಮರು. ಮುಂದೆ ೧೪ ಕಕ್ಷದಲ್ಲಿದ್ದ, ಕುಬೇರನ ರೂಪಗಳು ಹೇಳುತ್ತಾರೆ. ಕರಿಗೊರಳ ಸಂಯುಕ್ತ=ನೀಲಕಂಠ ರುದ್ರ

ದೇವರ ಆವೇಶಯುಕ್ತನಾದ ಭಗದತ್ತನು-ಭಗದತ್ತನೆಂಬ ರಾಜನು. ಕತ್ಥನ=ಧನಪನ ಅವತಾರವೇ ಕತ್ಥನನಾಮಕ ಕಪಿ ತ್ರೇತೆಯಲ್ಲಿ ಅವತಾರ ಹೀಗೆ ಕುಬೇರನಿಗೆ ಭಗದತ್ತ ಕತ್ಥನನೆಂದು ಎರಡು ಅವತಾರ, ವಿಘ್ನಪ=ಗಣೇಶಗೆ. ಚಾರುದೇಷ್ಣನು=ಶ್ರೀಕೃಷ್ಣನಿಂದ ರುಕ್ಮಿಣಿ ದೇವಿಯಲ್ಲಿ ಅವತಾರಮಾಡಿದ ಗಣೇಶನೆ ಚಾರುದೇಷ್ಣನು. ಕುಬೇರ-ಗಣೇಶ ಅಶ್ವಿನೀ ದೇವತೆಗಳು, ವಿಷ್ವಕ್ಸೇನ ವಾಯುಪುತ್ರ ನಾಲ್ವರೂ ಸಮರು.

**ಭಾವಸೂಚನ:**—ನಿಋತೀತಿ। ಮಹಾಬಲೋ ದುರ್ಮುಖಶ್ಚ ರುದ್ರಯುಕ್ತೋ ಘಟೋತ್ಕಚಃ ॥ ದ್ವಾವೇವ ತೌ ನಿಋತಿ ಪೂರ್ವಮಿತಿ ॥ ತಾರತಮ್ಯೇ ॥ ಪ್ರಾವಹೇ ಚ ತಥಾ ಮಾತಾ ॥ ಚತ್ವಾರ ಏತೇ ದ್ವಿಗುಣಾ ಪರಿಕೀರ್ತಿತಾ ಇತ್ಯುಕ್ತೇಃ ॥ ಕರಿಗೊರಳ ಆವೇಶಯುಕ್ತಾತ್ ಭಗದತ್ತೇತಿ ॥ ಗಣೇಶಗೆ ಸರಿ ॥ ತಾರತಮ್ಯೇ ಚ ಚಾರುದೇಷ್ಣೋ ವಿಘ್ನಪಃ ॥ ಪ್ರಾಕ್ ವಿಷ್ವಕ್ಸೇನಸ್ತಥೈವ ಚ ॥ ರುದ್ರಯುಗ್ ಭಗದತ್ತಶ್ಚ ಕತ್ಥನೋ ದ್ವೌ ಧನೇಶ್ವರ ಇತಿ ॥ ಅಶ್ವಿನೀ ಸಮೇತಿ ॥ ಯಾವಶ್ವಿನೌ ನಾಸಿಕಾಖ್ಯೇಂದ್ರಿಯಸ್ಯೈವ ನಿಯಾಮಕೌ । ಯೋ ವಿಘ್ನಪೋ ರುದ್ರಪುತ್ರೋ ಮಹಾತ್ಮಾ ಆಶಾತ್ಮಾ ವಿತ್ತಪಸ್ಯೈವ ತುಲ್ಯ ಇತಿ ಗಾರುಡೇ ॥ ೨೪ ॥

**ಶ್ರೀ ಜಗನ್ನಾಥದಾಸಾರ್ಯರ ಬೃ. ತಾ. ಪದ** :—ಹರನಂಶಯುತ ಘಟೋತ್ಕಚ ದುರ್ಮುಖನು ನಿಋತಿ ಕರೆಸುವನು । ರಾಹುಯುಗ್ಭೀಷ್ಮಕನೃಪಾ ॥ ನೆರೆ ಮಿತ್ರ ನಾಮಕನರೂಪ ನಾಲ್ವರು ಅಗ್ನಿ ಅಗ್ನಿಗೆರಡು ಗುಣದಿಂದಧಮರೆನಿಪರೆಂದೆಂದು ಅನವಿಪೆ॥ ೨೫ ॥ಪುರಾರಿಯುಕ್ತ ಭಗವದತ್ತ ಕತ್ಥನ ಯೊ ಕು । ಬೇರಗೆರಡವತಾರ ವಿಘ್ನೇಶಗೆ ॥ ಚಾರುದೇಷ್ಣನು ಒಂದೆ ಇಂದ್ರನಾವೇಶಯುತ ಆರು ರೂಪಗಳುಳ್ಳ ನಾಸತ್ಯದಸ್ರರಿಗೆ ॥ ೨೬ ॥ ಈ ಆರು ರೂಪ ಮುಂದೆ ಹೇಳುತ್ತಾರೆ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ನಿಋತಿ" ಇತಿ ॥ "ನಿಋತಿ ತನುಮಘೋಗ್ರದುರ್ಮುಖಂ" ॥ ಪುರಾಯ ಆವೇಶಯುಕ್ ಚ ಗಿರಿಶಸ್ಯ ಘಟೋತ್ಕಚಸ್ಯ ॥ ಸಾಮ್ಯೇ ತಾರಾ

ಚ ಮಿತ್ರವತ್ ॥ ನಿಋತಿಃ ಮಿತ್ರಸದೃಶಃ ಮಿತ್ರವತ್ಯೋ ಚ ಪ್ರಾವಹೀ ॥ "ಅರಸು" ಧನೇಶ್ವರಃ ಭಗದತ್ತಾಭಿಧಾನಃ ॥ "ಸತ್ಯಧನಃ ವಿತ್ತಪತಿಶ್ಚ ॥ ಇತಿ ॥ ಸ ಚಾರುದೇಷ್ಣೋಽಪಿ ಹಿ ವಿಘ್ನರಾಜಃ ॥ ವಿಷ್ಣುದ್ರುಹಃ ಮರ್ದರಾನ್ ಸರ್ವಸ್ಯೈವ ಹ್ಯತೀತಿ (ಹೃತೀತಿ) ನಿಋತಿಃ ॥ ವಿಷ್ಣುದ್ರುಹಾನ್ ರಾಕ್ಷಸಾನ್ ಸರ್ವದೈವ ದುರ್ಮುಖಂ ಕರೋತಿ ॥ ಯೋಗ್ಯಮಹಿಲಾನಾಂ ಭೂಷಾತ್ಮನಾ ತಾರತಮ್ಯಕಥನೇನ ವಿಷ್ಣುಧರ್ಮಪ್ರವಾಹಕರ್ತೃತ್ವಾತ್ ಪ್ರಾವಹೀ ॥ ಇನಾಖ್ಯಹರೀತತ್ವಾತ್ ಸೇನಃ ॥ ವಿಷ್ಣೋಃ ಮುಖಂ ಯಸ್ಯ ಪೃಥಕ್ ನಾಸ ಅತಃ ವಿಷ್ವಕ್ಸೇನಃ ॥ ಗಂಧಂ ಪ್ರತಿ ಆಶು ಗಚ್ಛಮಾನೌ ಹಿ ಅಶ್ವಸಂಜ್ಞೌ ॥ ೨೪ ॥

## ಕನ್ನಡಾರ್ಥ

ದುರ್ಮುಖನೆಂಬ ಕಪಿಯು ನಿಋತಿಯ ಅವತಾರ. (ತ್ರೇತಾಯುಗದಲ್ಲಿ) ನಿಋತಿಯೇ ಘಟೋತ್ಕಚನಾದನು. ಅವನಲ್ಲಿ ರುದ್ರಾವೇಶವಿರುತ್ತದೆ. ಹೀಗೆ ನಿಋತಿಗೆ ಎರಡು ಅವತಾರಗಳು. ಮಿತ್ರ ತಾರಾ ನಿಋತಿ ಪ್ರಾವಹಿ ಇವರು ಸಮರೆಂಬಲ್ಲಿ "ತಾರಾ ಚ ಮಿತ್ರವತ್" ಎಂಬ ವಾಕ್ಯವು ಆಧಾರವಾಗಿರುತ್ತದೆ. ಅದರಂತೆ "ನಿಋತಿಃ ಮಿತ್ರಸದೃಶಃ ನಿಋತಿಯು ಮಿತ್ರನ ಸಮಾನನು; ಪ್ರಾವಹಿಯು ಅವನಿಗೆ ಸಮಾನಳೇ !" ಎಂದು ಮುಂತಾದ ವಚನಗಳೂ ಆಧಾರಗಳಿರುತ್ತವೆ.

"ಅರಸು" ಕುಬೇರನು. ಕುಬೇರನಿಗೆ ಭಗದತ್ತನೆಂಬುದೊಂದವತಾರ "ಕತ್ಥನ"ನೆಂಬ ಕಪಿಯು (ತ್ರೇತಾಯುಗದಲ್ಲಿ) ಮತ್ತೊಂದು ಅವತಾರ. ಹೀಗೆ ಎರಡು ಅವತಾರಗಳು. ಅದರಂತೆ ವಿಘ್ನೇಶ್ವರನೇ ಚಾರುದೇಷ್ಣನು. (ಶ್ರೀ ಕೃಷ್ಣನಿಗೆ ರುಕ್ಮಿಣಿಯಲ್ಲಿ ಹುಟ್ಟಿದವನು.)

ವಿಷ್ಣು ದ್ರೋಹಿ ಮರ್ದರರನ್ನು ಯಾವಾಗಲೂ ಸಂಹರಿಸುವುದರಿಂದ ನಿಋತಿಯೆಂದು ಹೆಸರು ವಿಷ್ಣು ದ್ರೋಹಿಗಳಾದ ರಾಕ್ಷಸರನ್ನು ನೋಡಿ ಯಾವಾಗಲೂ ದುರ್ಮುಖವನ್ನು ಮಾಡುವುದರಿಂದ ದುರ್ಮುಖನೆಂದು ನಿಋತಿಗೆ ಅವತಾರದ ಹೆಸರು. ಯೋಗ್ಯ ಸ್ತ್ರೀಯರಲ್ಲಿ ಭೂಷಣ ರೂಪಃ

ವಾದ ತಾರತಮ್ಯವೆಂಬ ವಿಷ್ಣುಧರ್ಮವನ್ನು ಉಪದೇಶಿಸಿ, ಅದನ್ನು ಪ್ರವ ಹಿಸಿದುದರಿಂದ ಪ್ರಾವಹಿ ಎಂದು ಹೆಸರು.

ಕುಬೇರ-ವಿಷ್ವಕ್ಸೇನ ಅಶ್ವಿನೀ ದೇವತೆಗಳು ವಿಷ್ವಕ್ಸೇನರು ಸಮಾನ ರಾದುದರಿಂದ ವಿಷ್ವಕ್ಸೇನನನ್ನು ವ್ಯಾಖ್ಯಾನಕಾರರು ಉದಾಹರಿಸಿರು ತ್ತಾರೆ. ಇನವೆಂಬ ಹರಿ (ಸೂರ್ಯ) ಯುಕ್ತ. ಹಾಗೂ ವಿಷ್ಣು ಮುಖ ವನ್ನಲ್ಲದೆ ಬೇರೆ ಮುಖವಿಲ್ಲದವನು; ಆದುದರಿಂದ ವಿಷ್ವಕ್‌ಸೇನನೆಂದು ಹೆಸರು ಬಂದಿದೆ.

ಗಂಧವನ್ನು ಕುರಿತು ಶೀಘ್ರವಾಗಿ ಹೋಗುವವರು-ಘ್ರಾಣೇಂದ್ರಿಯ ಪ್ರಚೋದಕರು-ಅಶ್ವಿನಿ ದೇವತೆಗಳು. ‖ ೨೪ ‖

**ಅವತರಣಿಕಾ:—** ೧೮ ನೇ ಕಕ್ಷ ಧನಪ ಗಣೇಶ ಅಶ್ವಿನಿಗಳಿಗೆ ಸಮಾನರಾದ ಶೇಷ ಶತಸ್ಥರು ೪೫ ಜನರಲ್ಲಿ ಮೊದಲಿಗೆ ಅಗ್ನಿ ಸಹಿತವಾಗಿ ೮ ಜನ ವಸುಗಳ ಹೆಸರು ಪೇಳಿ ಇಬ್ಬರ ಅವತಾರ ಹೇಳುತ್ತಾರೆ.

**ದ್ರೋಣ ಧ್ರುವದೋಷಾರ್ಕ ಅಗ್ನೀ।**
**ಪ್ರಾಣದ್ಯುವಿಭಾವಸುಗಳೆಂಟು ಕೃ।**
**ಶಾನು ಶ್ರೇಷ್ಠದ್ಯುನಾಮ ವಸು ಭೀಷ್ಮಾರ್ಯ ಬ್ರಹ್ಮಯುತ ‖**
**ದ್ರೋಣನಾಮಕ ನಂದಗೋಪ ಪ್ರ।**
**ಧಾನ ಅಗ್ನಿಯುಳಿದು ಏಳು ಸ।**
**ಮಾನರೆನಿಪರು ತಮ್ಮೊಳಗೆ ಜ್ಞಾನಾದಿ ಗುಣದಿಂದ ‖ ೨೫ ‖**

**ಪದಾರ್ಥ:—** ೮ ಜನ ವಸುಗಳು ೧ ದ್ರೋಣ=ದ್ರೋಣ ನಾಮಕ ವಸು, ೨ ಧ್ರುವ=ಧ್ರುವನಾಮಕ ವಸು, ೩ ದೋಷನಾಮಕ ವಸು, ೪ ಅರ್ಕ ನಾಮಕ ವಸು, ೫ ಅಗ್ನಿನಾಮಕ ವಸು, ೬ ಪ್ರಾಣ=ಪ್ರಾಣ ನಾಮಕ ವಸು, ೭ ದ್ಯು=ದ್ಯುನಾಮಕ ವಸು, ೮ ವಿಭಾವಸು ಹೀಗೆ ೮ ಜನ ವಸುಗಳಲ್ಲಿ ೫ ನೇ ಪ್ರಧಾನಾಗ್ನಿ ೧೫ ನೇ ಕಕ್ಷದಲ್ಲಿ ಉಕ್ತವಾಗಿದ್ದಾನೆ. ಕೃಶಾನುಶ್ರೇಷ್ಠನಿಗೆ ಅಗ್ನಿ ಎಂತ ಹೆಸರು. ಇದರಲ್ಲಿ ೭ ನೇ **ದ್ಯುನಾಮಕ**

ವಸು = **ಭೀಷ್ಮಾಚಾರ್ಯರ** ಅವತಾರ, ಭೀಷ್ಮಾರ್ಯ ಬ್ರಹ್ಮಯುತ= ಬ್ರಹ್ಮದೇವರ ಆವೇಶಯುಕ್ತನಾಗಿರುವರು. (೧) ನೇ **ದ್ರೋಣನಾಮಕ** ವಸು=**ನಂದಗೋಪನ** ಅವತಾರ. ಉಳಿದ ೮ ಜನ ವಸುಗಳ ಅವತಾರ ಹೇಳಿಲ್ಲ. ಪ್ರಧಾನ ಅಗ್ನಿಯನುಳಿದು=ಶ್ರೇಷ್ಠ ಮುಖ್ಯನಾದ ಅಗ್ನಿದೇವ ರನ್ನು ಬಿಟ್ಟು, ಉಳಿದ ಏಳು ಜನರು ತಮ್ಮೊಳಗೆ, ಸಮಾನರೆನಿಪರು ಜ್ಞಾನಾದಿಗುಣದಿಂದ=ಜ್ಞಾನ, ಭಕ್ತಿ, ವಿರಕ್ತಿ, ಆನಂದ ಸಾಧನಕಲ್ಪ ಇತ್ಯಾದಿಯಿಂದ ಸರಿಯೆನಿಸುತ್ತಾರೆ.

**ಶ್ರೀ ಜಗನ್ನಾಥದಾಸಾರ್ಯರ ಪದ** ॥ ದ್ರೋಣಾರ್ಕ ದೋಷಾಗ್ನಿ ಧ್ರುವವಿಭಾವಸುವಸು। ಪ್ರಾಣಾಷ್ಟ ವಸುಗಳೊಳಗೆ ದ್ಯುನಾಮುಕಾ॥ವಾಣೀಶ ಯುಕ್ತ ಭೀಷ್ಮನು ನಂದಗೋಪಾಲ। ದ್ರೋಣನಾಮಕ ಪ್ರಧಾನಾಗ್ನಿ ಗಿಂದಧಮರೆಂದಾನಮಿಪೆ ॥ ೨೮ ॥

**ಭಾವಸೂಚನ**:— ॥ ದ್ರೋಣೇತಿ ಇವರು ಅಷ್ಟವಸುಗಳು। ತಾರ ತಮ್ಯೇತಿ ಚ ॥ "ದ್ರೋಣಃ ಪ್ರಾಣೋ ಧ್ರುವೋಽರ್ಕೋಽಗ್ನಿರ್ದೋಷೋ ವಸುವಿಭಾವಸೂ ॥ ವಸಿಷ್ಠಃ ತೇಷು ಭೀಷ್ಮಃ ಪ್ರಾಗ್ ಬ್ರಹ್ಮಯುಕ್ತೋ ದ್ಯುನಾಮಕ ಇತಿ ॥ ದ್ರೋಣೇತಿ ॥ "ನಂದಗೋಪಃ ಪುರಾ ದ್ರೋಣಃ" ಇತ್ಯುಕ್ತೇಃ ॥ ಸಮಾನೇತಿ ॥ ವಹ್ನಿಯೋಽನ್ಯೇ ಕೀರ್ತಿತಾಃ ಸಮಾ ಇತಿ ವಚನಾತ್ ॥ ೨೫ ॥

**ಸೂಚನೆ** :—"ವಸುಸಪ್ತಕಯುಕ್ ಭೀಷ್ಮಃ ಬ್ರಹ್ಮಾವೇಶಿದ್ಯುನಾ ಮಿಕ ಇತಿ ಅಂಶಾವೇಶತರಣೇ ॥ ಇದೊಂದು ಪ್ರಮಾಣವಿಚಾರಾಂಶ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ವಸೂನ್ ಆಹ 'ದ್ರೋಣ' ಇತಿ ॥ 'ಕೃಶಾನು' ಅಗ್ನಿ ॥ ಸ ಸ್ವಾಹಾ ಪತಿತ್ವಾತ್ ಅತ್ರ ಅತ್ರಿರೇವ ಮೂಲಾಗ್ನಿಃ ॥ ಅಥಾಷ್ಟಮಃ ವಸುರಾಸೀತ್ ದ್ಯುನಾಮಾ ಮಹಾಸ್ತ್ರವೇತ್ತಾಽಭವದಂಶಯುಕ್ತಃ ॥ ಬ್ರಹ್ಮಯುಕ್ತಃ ದ್ಯುನಾಮಕಃ ॥ 'ದ್ರೋಣ' ಇತಿ ॥ ಯಃ ದ್ರೋಣನಾಮಾ ವಸುಃ ಸ ಆಸ

ನಂದಾಖ್ಯಃ ॥ ಇತಿ ॥ "ವಕ್ಷ್ಯನ್ತ್ಯೇ ಸಮಾ ಜ್ಞಾನಾದಿಭಿಃ" ಇತ್ಯುಕ್ತೇಃ ॥ ೨೫ ॥

**ಕನ್ನಡಾರ್ಥ**

ಕೃಶಾನು ಎಂದರೆ ಅಗ್ನಿ. ಇವನು ಸ್ವಾಹಾದೇವಿಯ ಪತಿಯಾದುದರಿಂದ ಮೂಲಾಗ್ನಿಯೇ ಇಲ್ಲಿ ಶ್ರೇಷ್ಠನೆಂದು ಹೇಳಲ್ಪಟ್ಟ ಕೃಶಾನುನಾಮಕನು. ಇವನು ಉಳಿದ ಏಳು ವಸುಗಳಲ್ಲಿ ಶ್ರೇಷ್ಠನು ಇವನ ತಾರತಮ್ಯ ಸ್ವರೂಪವನ್ನು 'ನೀಲ' ಎಂಬ ಪದ್ಯದಿಂದ ನಿರೂಪಿಸಿರುತ್ತಾರೆ. ಎಂಟನೆಯ ವಸುವು 'ದ್ಯು' ಎಂಬ ಹೆಸರಿನವನು. ಅವನೇ ಮಹಾಸ್ತ್ರಗಳನ್ನು ಬಲ್ಲ ಭೀಷ್ಮನು. ಅವನಲ್ಲಿ ಬ್ರಹ್ಮದೇವರ ಆವೇಶ. ದ್ರೋಣನೆಂಬ ವಸುವೇ ನಂದಗೋಪನೆಂಬ ಶ್ರೀಕೃಷ್ಣನ ಸಾಕುತಂದೆಯು. ಎಂಟು ವಸುಗಳಲ್ಲಿ ಪ್ರಧಾನಾಗ್ನಿಯು (ಅಗ್ನಿಯು) ಎಲ್ಲರಿಗಿಂತಲೂ ಶ್ರೇಷ್ಠನು. ಮಿಕ್ಕ ಏಳು ವಸುಗಳು ಜ್ಞಾನ ಮುಂತಾದ ಗುಣಗಳಿಂದ ಸಮಾನರು. ॥ ೨೫ ॥

**ಅವತರಣಿಕಾ :**—ಈ ಪದ್ಯದಲ್ಲಿ ಏಕಾದಶ ರುದ್ರರ ಪೆಸರು ಪೇಳುತ್ತಾ ಉಮಾಪತಿ ರುದ್ರನ ಬಿಟ್ಟು, ಉಳಿದ ೧೦ ಜನ ರುದ್ರರು ಶೇಷ ಶತಸ್ಥರು. ಗಣೇಶಾದಿಗಳಿಗೆ ಸಮರೆಂದು ಪೇಳುತ್ತಾರೆ.

**ಭೀಮ ರೈವತ ವೋಜ ಜೈಕಪ ।**
**ದಾ ಮಹನ್ ಬಹು ರೂಪಕನು ಭವ- ।**
**ವಾಮ ಉಗ್ರ ವೃಷಾಕಪೀ ಅಹಿರ್ಬುಧ್ನಿಯೆನಿಸುತಿಹ ॥**
**ಈ ಮಹತ್ಮರ ಮಧ್ಯದಲ್ಲಿ ಉ- ।**
**ಮಾ ಮನೋಹರ ಉತ್ತಮನು ದಶ- ।**
**ನಾಮಕರು ಸಮರೆನಿಸಿಕೊಂಬರು ತಮ್ಮೊಳೆಂದೆಂದು ॥ ೨೬ ॥**

**ಪದ್ಯಾರ್ಥ :**—ಏಕಾದಶ ರುದ್ರರ ನಾಮಗಳು—(೧) ಭೀಮ, (೨) ರೈವತ, (೩) ಓಜ, (೪) ಅಜೈಕಪಾದ, (೫) ಮಹಾನ್, (೬) ಬಹುರೂಪ, (೭) ಭವ, (೮) ವಾಮ, (೯) ಉಗ್ರ, (೧೦) ವೃಷಾಕಪಿ, (೧೧) ಅಹಿರ್ಬುಧ್ನಿಯೆನಿಸುತಿಹ=ಈ ಪ್ರಕಾರ ನಾಮವುಳ್ಳ

ವರು, ಈ ಮಹತ್ಮರ ಮಧ್ಯದಲ್ಲಿ=ಈ ಎಲ್ಲ ಜನರು ಮಹಾತ್ಮರಾದ ವಿಷ್ಣು ವಾಯು ಭಕ್ತರಾದುದರಿಂದ ಮಹಾತ್ಮರೆಂದು ಪೆಸರು. ಈ ಮಹಿಮೆಯುಕ್ತ ಏಕಾದಶ ರುದ್ರರಲ್ಲಿ, ಉಮಾ ಮನೋಹರನು=ಉಮಾ ಪಾರ್ವತೀ ಮನಸ್ಸಿಗೆ ಆನಂದವೀವ ಮಹಾರುದ್ರದೇವರು, ಉತ್ತಮನು=ಶ್ರೇಷ್ಠನು. ಉಳಿದ ದಶನಾಮಕರು ಸಮರೆನಿಸಿಕೊಂಬರು ತಮ್ಮೊಳೆಂದೆಂದೂ=ಉಳಿದ ಹತ್ತು ನಾಮವುಳ್ಳವರು ತಮ್ಮೊಳಗೆ ಸರಿಯೆನಿಸುವರು.

**ಶ್ರೀ ಜಗನ್ನಾಥದಾಸರ ಬೃಹತ್ತಾರತಮ್ಯ ಪದ :**— ಭೀಮ ರೈವತ ವೋಜ ಜೈಕ ಪಾದಹಿರ್ಬುಧ್ನಿ ಭವ । ವಾಮ ಬಹುರೂಪೋಗ್ರಜ ವೃಷಾಕಪಿ ಈ ಮಹನ್ನೆಂಬ ಹನ್ನೊಂದು ರುದ್ರರು ಭೂರಿ । ನಾಮಕ ಜೈಕ ಪಾದಹಿರ್ಬುಧ್ನಿ ಭೂರಿಶ್ರವಗಾನವಿಪೆ ॥ ೨೯ ॥ ತ್ರ್ಯಕ್ಷನುಳಿಧತ್ತು ರುದ್ರರು ಸಮರು (ಮುಂದಿನ ಪದ್ಯದಲ್ಲಿ)

**ಭಾವಸೂಚನ :**—ರುದ್ರದೇವರ ಹೆಸರು ಹೇಳುತ್ತಾರೆ. **ಭೀಮೇತಿ** ॥ ೨೬ ॥

**ಗರುಡ ಬ್ರಹ್ಮಕಾಂಡ ವಚನ :**– ಭೀಮೋ ಭವೋ ರೈವತೌಜೋ ಮಹಾಂಶ್ಚೈವ ವೃಷಾಕಪಿಃ ॥ ಅಜೈಕ ಪಾದಹಿರ್ಬುಧ್ನಃ ವಿರೂಪಾಕ್ಷೋಗ ನಾಮಕೌ॥ ವಾಮಶ್ಚೈಕಾದಶ ಪ್ರೋಕ್ತೋ ವಾಯುಭಕ್ತಾಸ್ತಥಾ ಹರೇಃ ॥ ಯೋ ಮೂಲರುದ್ರೋ ಭವಸಂಜ್ಞಃ ಖಗೇಂದ್ರ ಉಕ್ತಃ ಶೇಷಾ ದಶ ರುದ್ರಾಃ ಸಮಾನಾಃ ॥ ಸೋಮಾರ್ಹದೇವಾ ಶ್ರೀನಿವಾಸಸ್ಯ ಭಕ್ತಾಃ ॥ ಮುಕ್ತೌ ಸಂಸಾರೇ ಖೇನ ತುಲ್ಯಾಶ್ಚ ವೀಂದ್ರ ॥ ೬೫ ॥ ಅ. ೩೬ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ರುದ್ರಾನ್ ಆಹ 'ಭೀಮ' ಇತಿ ॥ ರುದ್ರಾದನ್ಯೇ ಶತಃ ರುದ್ರಾಃ ಇತ್ಯುಕ್ತೇಃ ॥ ೨೬ ॥

**ಕನ್ನಡಾರ್ಥ**

ಏಕಾದಶ ರುದ್ರರಲ್ಲಿ ಪ್ರಧಾನ ರುದ್ರನನ್ನು ಬಿಟ್ಟು ಉಳಿದ ರುದ್ರ

ರನ್ನು ಹೇಳುತ್ತಾರೆ. 'ಭೀಮ' ಎಂಬ ಪದ್ಯದಿಂದ ಮೂಲ ರುದ್ರನನ್ನು ಳಿದು ಹತ್ತು ರುದ್ರರು ಸಮರೆಂದು ಪ್ರಮಾಣಗಳಲ್ಲಿ ಹೇಳಲಾಗಿದೆ. ಅದನ್ನನು ಸರಿಸಿಯೇ ಇಲ್ಲಿ 'ಸಮರೆನಿಸಿಕೊಂಬರು' ಎಂದು ಹೇಳಿದೆ || ೨೬ ||

**ಅವತರಣಿಕಾ** :— ಶೇಷ ಶತಸ್ಥರಾದ ದಶರುದ್ರರ ಅವತಾರ ಹೇಳುತ್ತಾರೆ.

**ಭೂರ್ಯ ಜೈಕ ಪದಾಹ್ವಹಿಬುರ್ಧ- |**
**ಧ್ನೀರಯಿದು ರುದ್ರಗಣ ಸಂಯುತ |**
**ಭೂರಿಶ್ರವನೆಂದೆನಿಪ ಶಲ ವಿರುಪಾಕ್ಷ ನಾಮಕನು ||**
**ಸೂರಿ ಕೃಪ ವಿಷ್ಕಂಭ ಸಹದೇ- |**
**ವಾ ರಣಾಗ್ರಣಿ ಸೋಮದತ್ತನು |**
**ತಾ ರಚಿಸಿದ ದ್ವಿರೂಪ ಧರೆಯೊಳು ಪತ್ರತಾಪಕನು || ೨೭ ||**

**ಪದ್ಯಾರ್ಥ** :—(೧) **ಅಜೈಕಪಾದಾಹ್ವ**=ಅಜೈಕಪಾದನೆಂಬುವನು **ಭೂರಿ**ನಾಮಕ ರಾಜ, (೨) ಅಹಿಬುರ್ಧ್ನಿ=ಈರೈದು ರುದ್ರಗಣ ಸಂಯುತ=ಹತ್ತು ಜನ ರುದ್ರಗಣ ಆವೇಶಯುತನಾದವನು=**ಭೂರಿಶ್ರವನೆಂಬ ರಾಜನ** ಅವತಾರ, "ಅಹಿಬುರ್ಧ್ನಃ ಸರ್ವರುದ್ರೈರ್ಯುಕ್ತಃ ಭೂರಿಶ್ರವಾಖ್ಯಃ ಸೋಮದತ್ತಸ್ಯ ಪುತ್ರಃ" || ತೇಷಾಂ ಮಧ್ಯೇ ಬಲವಾನ್ ವಿಷ್ಣುಭಕ್ತಃ ಭೂರಿಶ್ರವಾಃ ಸರ್ವರುದ್ರೈರ್ಯುತತ್ವಾತ್ || (೩) **ವಿರೂಪಾಕ್ಷನಾಮಕ** ರುದ್ರನು=**ಶಲನೆಂಬ** ರಾಜನ ಅವತಾರ|| (ವಿರೂಪಾಕ್ಷನಿಗೆ ಬಹುರೂಪನೆಂತಲೂ ನಾಮ) (೪) **ವಿಷ್ಕಂಭ** ನಾಮಕ ರುದ್ರನ ಅವತಾರ, ಸೂರಿ=ಜ್ಞಾನಿಗಳಾದ ಕೃಪಾಚಾರ್ಯರ ಅವತಾರ "ವಿಷ್ಕಂಭಾಖ್ಯೋ ರುದ್ರ ಏವ ಪೃಥಿವ್ಯಾಂ ಶಾರದ್ವತ ಪುತ್ರತಾಮಾಪ್ಯ ಜಜ್ಞೇ || **ಕೃಪೋ ನಾಮ** ಕೃಷ್ಣಭಕ್ತೋ ಮಹಾತ್ಮಾ ಭೀಷ್ಮಾನುವರ್ತೀ ಧೃತರಾಷ್ಟ್ರಾನುವರ್ತೀ || (೫) **ಪತ್ರತಾಪಕನು**=ಪತ್ರತಾಪಕ ರುದ್ರನು, ತಾರಚಿಸಿದ ದ್ವಿರೂಪ ಧರೆಯೊಳು=ಎರಡು ಅವತಾರಗಳನ್ನು ತಾಳ್ದನು-(೧) ರಣಾಗ್ರಣಿಯಾದ ಸಹದೇವನು, (೨) ಸೋಮದತ್ತನು ಎಂದು ಅವತಾರ ||

"ಪತ್ರತಾಪಾಖ್ಯಶ್ಚ ರುದ್ರ ಏವ ಬಾಹ್ಲೀಕ ಪುತ್ರತ್ವಮವಾಪ್ಯ ಜಜ್ಞೇ ॥ ಸ ಸೋಮದತ್ತೋ ಹರಿಭಕ್ತವರ್ಯಃ ವಾಯೌ ಸುನಿಷ್ಠೋ ಖೇನ ತುಲ್ಯ-ಸ್ತದೈವ ॥ ಸ ಏವ ರುದ್ರೋ ಪತ್ರತಾಪಾಖ್ಯವೀಂದ್ರ ಪುನಃ ಜರಾಸಂಧ ಸುತತ್ವಮಾಪ ॥ ಸ ಕೃಷ್ಣಭಕ್ತೋ **ಸಹದೇವೇತಿ** ಸಂಜ್ಞೋ ಅಶ್ವಿನ್ಯವ ತಾರಾತ್ಮಾ ಸಹದೇವಶ್ಚ ಭಿನ್ನಃ ॥ ೨೪ ॥ ಗಾರುಡ ಬ್ರಹ್ಮಕಾಂಡ ಅಧ್ಯಾಯ ೩೬.

**ಭಾವಸೂಚನ** :—ಭೂರಿತಿ ॥ ಅಜೈಕಪಾದೋ ರುದ್ರ ಏವ ಸ ಸೋಮದತ್ತಾತ್ಮಜ ಭೂರಿಸಂಜ್ಞ ಇತಿ ಗಾರುಡೇ ॥ ಭೂರಿಶ್ರವಾಃ ಸರ್ವ ರುದ್ರೈರ್ಯುಕ್ತೋಽಹಿರ್ಬುಧ್ನಿರುಚ್ಯತ ಇತಿ ತಾರತಮ್ಯ ದೀಪನೇ. ಶಲೇತಿ ವಿರೂಪಾಕ್ಷಃ ಶಲನಾಮಾ ಬಭೂವೇತಿ ಗಾರುಡೇ॥ಸೂರಿ=ಜ್ಞಾನೀ ಕೃಪೋ ವಿಷ್ಕಂಭ ಉಚ್ಯತ ಇತಿ ತಾರತಮ್ಯೇ ॥ ಸಹೇತಿ ಸಹದೇವಃ ಸೋಮದತ್ತಃ ಏತೌ ಪ್ರಾಕ್ ಪತ್ರತಾಪಕ ಇತಿ ತಾರತಮ್ಯ ಕೌಸ್ತುಭೇ ॥ ೨೭ ॥

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ** :—

ಭೀಮರೈವತ ಓಜಜೈಕ ಪಾದಹಿರ್ಬುಧ್ನಿ ಭವ। ವಾಮ ಬಹುರೂಪೋಗ್ರಜ ವೃಷಾಕಪಿ ॥ ಈ ಮಹನ್ನೆಂಬ ಹನ್ನೊಂದು ರುದ್ರರು ಭೂರಿ। ನಾಮಕ ಅಜೈಕ ಪಾದಹಿರ್ಬುಧ್ನಿ ಭೂರಿಶ್ರವಗಾನಮಿಪೆ ॥ ೨೮ ॥ ತ್ರಕ್ಷ್ಯನುಳಿಧತ್ತು ರುದ್ರರು ಸಮರು ಶಲ।ವಿರೂಪಾಕ್ಷನವತಾರ ಕೃಪ ವಿಷ್ಕಂಭನೂ॥ ಅಕ್ಷೀಣ ಬಲ ಪತ್ರ ತಾಪಕ ಸಹದೇವ ರಕ್ಷಘ್ನ ಸೋಮದತ್ತನು ಯೆನಿಸುತಿಹಗೆ ॥ ೩೦ ॥ ವಿರೂಪಾಕ್ಷ ವಿಷ್ಕಂಭ ಪತ್ರತಾಪಕ ಮೂರು ಹರನ ರೂಪಾಂತರಗಳಿವು ॥ (ಅರ್ಥ ರುಚಿ ಮುಂದೆ ಸೂರ್ಯ ವಿವರ)

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಅಜೈಕಪಾದಹಿರ್ಬುಧ್ನಿರ್ವಿರೂಪಾಕ್ಷ ಇತಿ ತ್ರಯಃ ॥ ರುದ್ರಾಣಾಂ ಸೋಮದತ್ತಶ್ಚ ಬಭೂವುಃ ಪ್ರಥಿತಾಃ ಸುತಾಃ ॥ ವಿಷ್ಣೋರೇವಾಂಗತಾಂ ಆಪ್ತುಂ ಭೂರಿಃ ಭೂರಿಶ್ರವಾಃ ಶಲಃ ॥ ಶರ್ವಾದಿ ಸರ್ವರುದ್ರಾಣಾಂ

ಆವೇಶಾತ್ ವರತಃ ತಥಾ ॥ ಭೂರಿಶ್ರವಾ ಅತಿ ಬಲಃ ॥ ಏವಂ ಚ ಅಜೈಕ ಪಾತ್ ಭೂರಿಃ ॥ ಅಹಿರ್ಬುಧ್ನಿಃ ಶಿವಾದ್ಯಾವಿಷ್ಟಃ ಭೂರಿಶ್ರವಾ ಬಭೂವ ॥ ಸ ಕೃಪಃ ವಿಷ್ಕಂಭಃ ನಾಮ ॥ ರುದ್ರಾಣಾಂ (ಪತ್ರ ತಾಪಾಖ್ಯ ರುದ್ರಂ ಸಹದೇವಂ ॥ ರುದ್ರೇಷು ಪತ್ರತಾಪಾಖ್ಯಃ ಸೋಮದತ್ತೋಽಸ್ಯ" ಇತಿ ॥ ೨೭ ॥

## ಕನ್ನಡಾರ್ಥ

'ಅಜೈಕಪಾತ್' 'ಅಹಿರ್ಬುಧ್ನಿ' 'ವಿರೂಪಾಕ್ಷ' ಎಂಬ ಮೂವರು ರುದ್ರರು ಬಾಹ್ಲೀಕರಾಜನ ಮಗನಾದ ಸೋಮದತ್ತನಿಗೆ ಮಕ್ಕಳಾಗಿ ಅವತರಿಸಿದರು. ಅವರು ಪರಾಕ್ರಮದಲ್ಲಿ ಸುಪ್ರಸಿದ್ಧರು. ವಿಷ್ಣುವಿನ ಭೂಭಾರಹರಣ ಸೇವೆಗೆ ಅಂಗರಾಗಬೇಕೆಂದು ಅಪೇಕ್ಷಿಸಿ ಕ್ರಮವಾಗಿ ಭೂರಿ ಭೂರಿಶ್ರವಾ ಶಲ ಎಂಬವರಾಗಿ ಹುಟ್ಟಿದರು. ಶರ್ವ ಮುಂತಾದ ಸರ್ವ ರುದ್ರರ ಆವೇಶದಿಂದಲೂ, ವರದಿಂದಲೂ ಯುಕ್ತನಾಗಿ ಭೂರಿಶ್ರವಸು ಬಹಳ ಬಲಿಷ್ಠನಾದನು. 'ಅಜೈಕಪಾತ್' ಎಂಬ ರುದ್ರನು 'ಭೂರಿ' ಯಾದನು. ಅಹಿರ್ಬುಧ್ನಿಯೇ ಶಿವಾದಿ ಆವೇಶಯುಕ್ತನಾಗಿ ಭೂರಿಶ್ರವ ನಾದನು. ವಿರೂಪಾಕ್ಷನೇ ಶಲನಾದನು. ವಿಷ್ಕಂಭನೆಂಬ ರುದ್ರನೇ ಶರದ್ವಾನ್ ಋಷಿಗಳಲ್ಲಿ ಹುಟ್ಟಿದ ಕೃಪಾಚಾರ್ಯನಾಗಿ ಅವತರಿಸಿದನು. ಪತ್ರತಾಪಕನೆಂಬ ರುದ್ರ ಎರಡು ಅಂಶಗಳಿಂದ ಹುಟ್ಟಿದನು. ಒಂದು ಸಹದೇವನೆಂಬ ರಾಜನೆಂಬುದು (ಜರಾಸಂಧನ ಮಗ). ಭೂರಿಶ್ರವ ಮುಂತಾದವರ ತಂದೆಯಾದ ಸೋಮದತ್ತನೆಂಬುದು ಮತ್ತೊಂದು ಅಂಶ. ಹೀಗೆ ನಿರ್ಣಯ ಮುಂತಾದವುಗಳಲ್ಲಿ ಹೇಳಿರುವುದನ್ನೇ ದಾಸರಾಯರು ಪ್ರತಿಪಾದಿಸಿರುತ್ತಾರೆ. ॥ ೨೭ ॥

**ಅವತರಣಿಕಾ :**—೧೬ನೇ ಕಕ್ಷವಲ್ಲೇ ಇದ್ದ ಗಣೇಶಾದಿಗಳಿಗೆ ಸಮಾನರೆನಿಪ ೬ ಜನ ಶೇಷ ಶತಸ್ಥ ಸೂರ್ಯರು ೬ ಜನ ಉಕ್ತಸೂರ್ಯರು ಒಟ್ಟಿಗೆ ೧೨ ಜನ ಸೂರ್ಯರ ಸ್ತೋತ್ರಗೈದು ಕೆಲ ಶೇಷ ಸೂರ್ಯರ ಅವತಾರಗಳನ್ನು ಹೇಳುತ್ತಾರೆ.

**ದೇವ ಶಕ್ರೋರುಕ್ರಮನು ವಿ- ।**
**ತ್ರಾವರುಣ ಪರ್ಜನ್ಯ ಭಗ ಪೂ- ।**
**ಷಾ ವಿವಸ್ವಾನ್ ಸವಿತೃಧಾತಾ ಅರ್ಯಮ ತ್ವಷ್ಟಾ ॥**
**ದೇವಕೀ ಸುತನಲ್ಲಿ ಸವಿತೃ ವಿ- ।**
**ಭಾವಸೂಸುತ ಭಾನುಯೆನಿಸುವ ।**
**ಜ್ಯಾವನಪಯುತ ವೀರಸೇನನು ತ್ವಷ್ಟೃನಾಮಕನು ॥ ೨೮ ॥**

**ಪದ್ಯಾರ್ಥ** :—ದೇವ=ಕ್ರೀಡಾದಿ ಗುಣವಿಶಿಷ್ಟ— (೧) ಶಕ್ರ= ದೇವೇಂದ್ರನು ಶಕ್ರನು ಉಕ್ತನು, (೨) ಉರುಕ್ರಮನು ಸೂರ್ಯ ಸಾಕ್ಷಾತ್ ಶ್ರೀಹರಿಯು, (೩) ಮಿತ್ರ=ಮಿತ್ರನಾಮಕ ಸೂರ್ಯ ೧೭ನೇ **ಕಕ್ಷದಲ್ಲಿಪ್ಪನು**, (೪) ವರುಣ=ವರುಣನಾಮಕ ಸೂರ್ಯ, ಉಕ್ತ ೧೪ನೇ **ಕಕ್ಷದಲ್ಲಿಪ್ಪನು**, (೫) ಪರ್ಜನ್ಯ=ಪರ್ಜನ್ಯನಾಮಕ ಸೂರ್ಯ, ಗಂಗಾದಿ ಗಳ ಸಮ ೨೦ನೇ ಕಕ್ಷದಲ್ಲಿರುವನು (೬) ವಿವಸ್ವಾನ=ವಿವಸ್ವಾನ್ ನಾಮಕ ಸೂರ್ಯ ೧೨ನೇ ಕಕ್ಷದಲ್ಲಿ ಉಕ್ತರು. ಆರು ಜನರು **ಉಳಿದ ೬ ಜನ ಶೇಷಶತಸ್ಥರು**, ೧ ಭಗ=ಭಗನಾಮಕ ಸೂರ್ಯ, ೨ ಪೂಷಾ=ಪೂಷನಾಮಕ ಸೂರ್ಯ, ೩ ಸವಿತೃ=ಸವಿತೃನಾಮಕ ಸೂರ್ಯ, ೪ ಧಾತಾ= ಧಾತೃನಾಮಕ ಸೂರ್ಯ, ೫ ಅರ್ಯಮ=ಅರ್ಯಮನಾಮಕ ಸೂರ್ಯ ೬ ತ್ವಷ್ಟಾ=ತ್ವಷ್ಟೃನಾಮಕ ಸೂರ್ಯ, ಹೀಗೆ ಒಟ್ಟಿಗೆ ೧೨ ಜನ ಸೂರ್ಯರು ಒಂದೊಂದು ಮಾಸಕ್ಕೆ ಒಬ್ಬೊಬ್ಬ ಸೂರ್ಯ ಅಭಿಮಾನಿಗಳು.

ಇವರಲ್ಲಿ ಇಬ್ಬರು ಸೂರ್ಯರ ಅವತಾರ ಹೇಳುತ್ತಾರೆ—

(೧) **ಸವಿತೃನಾಮಕನ** ಸೂರ್ಯನ ಅವತಾರ=ಭಾನು ಈತನು. ದೇವಕೀಸುತನಲ್ಲಿ ಹರಿಭಕ್ತ ಕೃಷ್ಣಾನುಜನಾದ ಸವಿತಾನಾಮಕನು ಸವಿತೃನೆ ಸತ್ಯವತೀ ದೇವಿಯಲ್ಲಿ, **ಭಾನು** ಎಂದು ಕರೆಸಿದನು. "ಏತೇಷು ಕೃಷ್ಣಜೋ ಭಾನುಃ ಸವಿತ್ರಂಶ ಉದಾಹೃತಃ ॥" ಮತ್ತು "ವಿವಸ್ವತೋ ಯೋ ಹರಿಭಕ್ತವರ್ಯಸ್ತಸ್ಯಾನುಜೋ ಯಃ ಸವಿತೇತಿನಾಮಾ ॥ ಸ ಏವ ಜಾತಃ ಸತ್ಯವತ್ಯಾಂ ಚ ಕೃಷ್ಣಾನ್ನಾಮ್ನಾ **ಭಾನುಃ** ಶ್ರೀನಿವಾಸಸ್ಯ ಭಕ್ತಃ ॥ ಗಾರುಡೇ ॥

(೨) **ತ್ವಷ್ಟೃನಾಮಕನು**=ತ್ವಷ್ಟೃನಾಮಕ ಸೂರ್ಯನ ಅವತಾರ, ಜ್ಯಾವನಪಯುತ=ಯಮದೇವರ ಆವೇಶಯುಕ್ತನಾಗಿ, **ವೀರಸೇನನು**=ವೀರಸೇನನೆಂಬ ರಾಜನು ಪಾಂಡ್ಯದೇಶದ ಅರಸು. ಈತನು ಅರ್ಜುನನಿಂದ ಚಿತ್ರಾಂಗದೆಯಲ್ಲಿ ಪುಟ್ಟಿದ ವೀರಸೇನ ತ್ವಷ್ಟೃನಾಮಕ ಸೂರ್ಯನ ಅವತಾರವೆಂದು ತಾತ್ಪರ್ಯನಿರ್ಣಯ. "ಯಮಾವಿಷ್ಟೋ ವೀರಸೇನೋ ಮಹಾತ್ಮಾ ತ್ವಷ್ಟೃನಾಮಾ ಸೂರ್ಯ ಏವೇತಿ ವಿದ್ಧಿ ॥ ಸ ವೀರಸೇನೋ ಹರಿಭಕ್ತಃ ಪೃಥಿವ್ಯಾಂ ಪರೀರಂಗತ್ವಂ ಪ್ರಾಪ್ತುಮೇವಾಭಿಜಾತಃ" ॥ ೧೮ ॥ ಗಾರುಡೇ ॥

**ಭಾವಸೂಚನ** :—ಸೂರ್ಯನಾಮಾನ್ಯಾಹ ದೇವೇತಿ ॥ದೇವಕೀಸುತ=ದೇವಕೀ ಪುತ್ರನಾದ ಭಾನು ಸವಿತ್ರಾಂಶ ಉದಾಹೃತ ಇತಿ ತಾರತಮ್ಯೇ ॥ **ಜೀವನಪ**=ವಾಯು, ಯಮಾವಿಷ್ಟೋ ವೀರಸೇನೋ ಮಹಾತ್ಮಾ ॥ ನಾಮ್ನಾ ತ್ವಷ್ಟಾ ಸೂರ್ಯ ಏವೇತಿ ವಿದ್ಧೀತಿ ಗಾರುಡೇ ॥ ವೀರಸೇನೋ ಯಮಾವಿಷ್ಟಃ ತ್ವಷ್ಟಾ ವೈ ಪರಿಕೀರ್ತಿತಃ ॥ ಇತಿ ತಾರತಮ್ಯೇ ॥ ೨೮ ॥

**ಶ್ರೀ ಜಗನ್ನಾಥದಾಸರ ಬೃಹತ್ತಾರತಮ್ಯ ಪದ** : — "ವಿವಸ್ವಾನರ್ಯಮ ಪೂಷ ಭಗ ಸವಿತು ತ್ವಷ್ಟಾ ಧಾತ । ವರುಣಶಕ್ರೋರುಕ್ರಮನು ಮಿತ್ರ ಪರ್ಜನ್ಯಗಾನವಿಪೆ ॥ ೩೧ ॥ ಶೌರಿನಂದನ ಭಾನು ಸವಿತೃನಾಮಕ ಸೂರ್ಯ ವೀರಸೇನನು ಯಮಾವಿಷ್ಟತ್ವಷ್ಟಾ ॥ (ಮುಂದೆ)



**ಸೂಚನೆ :— ಶ್ರೀ ಪ್ರಾಣೇಶವಿಠಲರ ಪದ**—ತಿಂಗ ತಿಂಗಳಿಗೆ ಬರುವ ೧೨ ಸೂರ್ಯರು.

(ಭಾಮಿನಿ ಷಟ್ಪದಿ)

ತಿಂಗತಿಂಗಳಿಗೆ ಬರುತಿಪ । ಪಿಂಗಳರ ನಾಮವನು ಬರೆವೆನು ।
ಇಂಗಿತಜ್ಞರು ಕೇಳ್ವುದು ದಾಶನವ ಮಾಡದಲೆ ॥ ಪ. ॥

(೧) **ಧಾತ** ಚೈತ್ರಕೆ, (೨) **ಅರ್ಯಮಾ** ಯೆಂ । ಬಾತ

ವೈಶಾಖಕೆ ಸುಜ್ಯೇಷ್ಠಕೆ ನಾಥನೆನಿಸುವ, (೩) **ಮಿತ್ರ** ಆಷಾಢಕ್ಕೆ ಬಹ (೪) **ವರುಣ** ॥ ಖ್ಯಾತನಾಗಿಹ ಶ್ರಾವಣಕ್ಕೆ (೫) **ಪುರು । ಹೂತ** ಭಾದ್ರಪದಕೆ (೬) **ವಿವಸ್ವಾನ್** । ಭೂತಿಯುತನಾಗಿರುವ (೭) **ತ್ವಷ್ಟಾ ಶ್ವೀನ**ಮಾಸದಲಿ ॥೧। (೮) **ಹರಿ ದಿನಪ** (ಉರುಕ್ರಮ) ಕಾರ್ತೀಕ ಮಾಸದಿ । ಇರುತಿಹನು ಮಾರ್ಗಶಿರ (೯) **ಸವಿತೃ** । (೧೦) ವರವ **ಭಗ** ಪುಷ್ಯದಲಿ (೧೧) **ಪೂಷಾ** ಮಾಘ ಮಾಸದಲಿ॥ ಸುರನದಿಯೆ ಮೊದಲಾಗಿಹ ಐ । ವರಿಗೆ ಸಮ (೧೨) **ಪರ್ಜನ್ಯ** ಫಾಲ್ಗುಣ । ಕರಿತು ಇಂತು ಯಥಾ ವಿಧಿಯೊಳರ್ಘ್ಯವನು ಕೊಟ್ಟು ಜಪವ ॥೨॥ ಮಾಡುತಿಹ ಧನ್ಯರಿಗೆ ಪಾಪಗ । ಳೋಡಿಸುತ ದಯದಿಂದ ಏನೇನ್ । ಬೇಡಿದಿಷ್ಟವ ಕೊಟ್ಟು ಕರ್ಮಕೆ ಸಾಕ್ಷಿ ತಾನಾಗಿ ॥ ಮಾಡುವನು ಸಂರಕ್ಷಣೆಯ । ಒಡನಾಡುವನು ಬಿಡನೊಂದರಕ್ಷಣ। ಈಡು ಇಲ್ಲದ ಮಹಿಮ ಶ್ರೀ ಪ್ರಾಣೇಶವಿಠ್ಠಲನು॥೩॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಸೂರ್ಯಾನ್ ಆಹ 'ದೇವ' ಇತಿ॥ ಉರುಕ್ರಮಃ ಹರಿಃ॥ ವಿವಸ್ವತಃ ಯೋಽವರಜಃ ದಿತೇಃ ಸುತಃ ಖ್ಯಾತಶ್ಚ ನಾಮ್ನಾ ಸವಿತೇತಿ ॥ ಕೃಷ್ಣಾತ್ ಜಾತಃ ಸ ಸತ್ಯಾಜಠರೇತ್ರ ನಾಮ್ನಾ ಭಾನುಃ ಇತಿ ॥ ಸತ್ಯೋದರೇ ವಿಭಾವಸು ಸುತಃ ॥ 'ಜಾವನಪ' ಯಮಃ । ಸ ವೀರಸೇನಃ ತ್ವಷ್ಟುರಂಶಃ ಯಮಸ್ಯಾಪ್ಯಾವೇಶಯುತಃ ॥ ೨೮ ॥

## ಕನ್ನಡಾರ್ಥ

ದ್ವಾದಶ ಸೂರ್ಯರನ್ನು ಹೇಳುತ್ತಾರೆ-'ದೇವ' ಎಂಬ ಪದ್ಯದಿಂದ 'ಉರುಕ್ರಮ'ನೆಂಬ ಆದಿತ್ಯನು ಹರಿಯು. ದಿತಿಯ ಮಗನು ವಿವಸ್ವತನ ತಮ್ಮನು 'ಸವಿತೃ' ಎಂದು ಪ್ರಸಿದ್ಧನು. ಅವನೇ ಶ್ರೀಕೃಷ್ಣನಿಗೆ ಸತ್ಯ ಭಾಮೆಯಲ್ಲಿ ಭಾನು ಎಂಬ ಪುತ್ರನಾಗಿ ಹುಟ್ಟಿದನು. 'ಜ್ಯಾವನಪ' ಯಮ. ವೀರಸೇನನೆಂಬ ಪಾಂಡ್ಯದೇಶದ ರಾಜನು (ಚಿತ್ರಾಂಗದೆಯ ತಂದೆಯು) ತ್ವಷ್ಟೃವೆಂಬ ಸೂರ್ಯನ ಅಂಶಾವತಾರ. ಅವನಲ್ಲಿ ಯಮನ ಆವೇಶವಿರುತ್ತದೆ. ॥ ೨೮ ॥

**ಅವತರಣಿಕಾ** :—ಈ ಪದ್ಯದಲ್ಲಿ ೧೨ ಜನ ಸೂರ್ಯರಲ್ಲಿ ೬ ಜನ ಉಕ್ತರು. ಉತ್ತಮರ ನಾಮಗಳನ್ನು ಹೇಳಿ ಮುಂದೆ ಕೆಲ ಮರುತ್ತಗಳ ಅವತಾರ ಹೇಳುತ್ತಾರೆ.

**ಎರಡಧಿಕ ದಶ ಸೂರ್ಯರೊಳು ಮೂ- ।**
**ರೆರಡು ಜನರುತ್ತಮ ವಿವಸ್ವಾನ್ ।**
**ವರುಣ ಶಕ್ರ ಉರುಕ್ರಮನು ಪರ್ಜನ್ಯ ಮಿತ್ರಾಖ್ಯ ॥**
**ಮರುತನಾವೇಶಯುತ ಪಾಂಡುವ ।**
**ವರ ಪರಾವಹನೆಂದೆನಿಪ ಕೇ- ।**
**ಸರಿ ಮೃಗಪ ಸಂಪಾತಿ ಶ್ವೇತತ್ರಯರು ಮರುದಂಶ ॥ ೨೯ ॥**

**ಪದ್ಯಾರ್ಥ** :—ಎರಡಧಿಕ ದಶ=೧೦+೨=೧೨ ಜನ, ಸೂರ್ಯರೊಳು=ಸೂರ್ಯರಲ್ಲಿ, ಮೂರೆರಡು ಜನ=೩+೨=೫ ಐದು ಜನರು ಉತ್ತಮರು ಮೇಲಿನ ಕಕ್ಷದಲ್ಲಿರುವರು. (೧) ವಿವಸ್ವಾನ್=ನಾಮಕ ಸೂರ್ಯ ೧೬ನೇ ಕಕ್ಷದಲ್ಲಿ, (೨) ವರುಣ ನಾಮಕ ಸೂರ್ಯ ೧೪ನೇ ಕಕ್ಷದಲ್ಲಿ, (೩) ಉರುಕ್ರಮನು=ಸಾಕ್ಷಾತ್ ವಿಷ್ಣು ೧ನೇ ಕಕ್ಷದಲ್ಲಿ, (೪) ಶಕ್ರ=ಶಕ್ರ ಇಂದ್ರ ನಾಮಕ ಸೂರ್ಯ ೮ನೇ ಕಕ್ಷದಲ್ಲಿ, (೫) ಮಿತ್ರಾಖ್ಯ=ಮಿತ್ರನೆಂಬ ಹೆಸರುಳ್ಳ ಮಿತ್ರ ನಾಮಕ ಸೂರ್ಯ ೧೭ನೇ ಕಕ್ಷದಲ್ಲಿ ಮತ್ತು ೧೮ನೇ ಕಕ್ಷದಲ್ಲಿರುವ ೬ ಜನರಿಗಿಂತಲೂ ಕಡಿಮೆ. ೨೦ನೇ ಕಕ್ಷದಲ್ಲಿರುವ (೬) ಪರ್ಜನ್ಯನಾಮ ಸೂರ್ಯ ಇವರು ಉಕ್ತರು ಎಂದು ಹೇಳಿ—

ಮುಂದೆ ೪೯ ಮರುತಗಳ ಪೈಕಿ ಕೆಲವರ ಅವತಾರ-**ಪರಾವಹ**ನೆಂಬ ಮರುತನೇ ಪಾಂಡವ=ಪಾಂಡುರಾಜನ ಅವತಾರ, ಈ ಪಾಂಡುರಾಜನಲ್ಲಿ ಮರುತನಾವೇಶಯುತ = ವಾಯುದೇವರ ಆವೇಶಯುಕ್ತನಾಗಿಹನು. "ಪಾಂಡುರಾಜೋ ವಿಷ್ಣುಭಕ್ತೋ ಮಹಾತ್ಮಾ **ಪರಂವಹೋ ನಾಮ** ಮರುತ್ಸ ವಿಂದ್ರ ॥ ಸ ವಾಯುಯುಕ್ತೋ ಬಲವಾನ್ ಮಹಾತ್ಮಾ ಸದೈವ ॥ ಗಾರುಡೇ ॥ ಮೃಗಪ=ಸಿಂಹ ಸದೃಶ ಬಲವಾನ್ ಅಥವಾ

ಮೃಗಪ ವಾನರಶ್ರೇಷ್ಠ. (೧) **ಕೇಸರಿ** ಮರುತ, (೨) ಸಂಪಾತಿ, (೩) ಶ್ವೇತನೆಂಬ ನಾಮವುಳ್ಳ ೩ ಜನ ಮರುತಗಳಲ್ಲಿ ವಾಯುವಿನ ಆವೇಶ "ಮರುತಾವತಾರಾಸ್ತ್ರಯ ಏತೇ ಮಹಾತ್ಮನ್ ಸಂಪಾತಿಃ ಶ್ವೇತಃ ಕೇಸರೀ ಚೇತಿ ವೀಂದ್ರ ॥ ಗಾರುಡೇ ॥" ಮರುದ್ಗಣ ನಾಮಗಳನ್ನು ಮುಂದೆ **ಕೊಡುತ್ತದೆ.**

**ಭಾವಸೂಚನ** :—ಎರಡೇತಿ ॥ ಮ ರು ತೇ ೀ ತಿ ವಾಯುಯುಕ್ತಃ ಪಾಂಡುರಾಜಃ ಪರಾವಹಃ ಉದಾಹೃತವಚನಾತ್ ॥ ಕೇಸರೀತಿ ಮರುತೋವತಾರಾಃ ತ್ರಯ ಏತೇ ಮಹಾತ್ಮನ್ ಸಂಪಾತೀಶ್ವೇತಃ ಕೇಸರಿ,ಚೇತಿ ವೀಂದ್ರ। ಗಾರುಡೇ ॥ ೨೯ ॥

**ಜ. ವಿ.** ಸಮೀರಯುಕುತಪಾಂಡು ಪರಾವಹನು ಯೆನಿಪ ಸಂಪಾತಿ। ಭೃಕುಟಿ ಕೇಸರಿ ಶ್ವೇತಮರುತನವತಾರವೆಂದು ಅನಮಿಪೆ ॥ ೩೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಮಿತ್ರಂ ಶಕ್ರಮುರುಕ್ರಮಂ ವಿವಸ್ವಂತಂ ಚ ವರುಣಂ ॥ ಪರ್ಜನ್ಯಂ ಚ ವಿನಾ ಅತ್ರ ಷಟ್ ॥ ಪಾಂಡುಃ (ಪಾಂಡವ) ॥ ಪರಾವಹೋ ನಾಮ ಮರುತ್ ತತೋ ಭವತ್ ವರ್ಣೇನ ಪಾಂಡುಃ ವಾಯೋಃ ಆವೇಶತಃ ॥ ಇತಿ ॥ 'ಮೃಗಪ' ಸಿಂಹವತ್ ಸನ್ ಕೇಸರೀ ಶ್ವೇತ ಸಂಪಾತಿನೌ ಚ ॥ ಪವನವರಗಣಾಂಶೌ ಶ್ವೇತ ಸಂಪಾತಿನೌ ಚ ಕೇಸರೀ ಇತಿ ॥ ಪ್ರವರ ಮಥ ಮರುತ್ಸು ॥ ಇತಿ ॥ ೨೯ ॥

## ಕನ್ನಡಾರ್ಥ

ಮಿತ್ರ, ಶಕ್ರ, ಉರುಕ್ರಮ, ವಿವಸ್ವಾನ್, ವರುಣ ಎಂಬ ಆರು ಆದಿತ್ಯರು ಮಿಕ್ಕವರಿಗಿಂತ ಶ್ರೇಷ್ಠರು. ಪರ್ಜನ್ಯನನ್ನು ಈ ಶ್ರೇಷ್ಠರ ಶ್ರೇಣಿಯಲ್ಲಿ ಎಣಿಸಬಾರದು.

ಪಾಂಡುರಾಜನು ಪರಾವಹನೆಂಬ ಮರುತ್ತನ ಅವತಾರ. ವರ್ಣ ದಿಂದ ಪಾಂಡುರನಾದುದ (ಬಿಳಪು) ರಿಂದ ಪಾಂಡು ಎಂದು ಹೆಸರು

ಬಂದಿತು. ಅವನಲ್ಲಿ ವಾಯುವಿನ ಆವೇಶ. 'ವೃಗಪ' ಸಿಂಹದಂತೆ ಇರುವ ಕೇಸರಿ. ಕೇಸರಿ, ಸಂಪಾತಿ, ತ್ರಿತ ಈ ಮೂವರು ಕಪಿಗಳು ಮರುತ್ತರಲ್ಲಿ ಉತ್ತಮ ವರ್ಗದವರು. ಮರುತ್ಪ್ರವರನೇ ಕೇಸರಿ ಎಂದು ನಿರ್ಣಯದಲ್ಲಿ ಹೇಳಲಾಗಿರುತ್ತದೆ. ॥ ೨೯ ॥

**ಅವತರಣಿಕಾ** :—ದಾಸ ಪ್ರಾಣಾದಿ ಪಂಚ ಮತ್ತು ಕೆಲವು ಮರುತ್ತಗಳ ಅವತಾರ ಹೇಳುತ್ತಾರೆ.

**ಪ್ರತಿಭವಾತನು ಚೇಕಿತನು ವಿ- ।**
**ಪೃಥುವೆನಿಸುವನು ಸೌಮ್ಯ ಮಾರುತ ।**
**ವಿತತ ಸರ್ವೋತ್ತುಂಗ ಗಜನಾಮಕರು ಪ್ರಾಣಾಂಶ ॥**
**ದ್ವಿತಿಯ ಪಾನ ಗವಾಕ್ಷ ಗವಯು ।**
**ತೃತಿಯ ವ್ಯಾನ ಉದಾನ ವೃಷಪ- ।**
**ರ್ವತುಳ ಶರ್ವತ್ರಾತ ಗಂಧ ಸುಮಾದನರುಸಮಾನ ॥ ೩೦ ॥**

**ಪದ್ಯಾರ್ಥ** :—(೧) **ಪ್ರತಿಭವಾತನು**=ಪ್ರತಿಭವನೆಂಬ ಮರುತನ ಅವತಾರ, ಚೇಕಿತನ=ಚೇಕಿತಾನ ರಾಜಾ. ಯಾದವರಲ್ಲಿ ಪುಟ್ಟಿದವನು.

(೨) **ಸೌಮ್ಯಮಾರುತ**=ಸೌಮ್ಯನೆಂಬ ಮರುತ. ವಿಪೃಥು ನಾಮಕ ರಾಜನು ಪುಟ್ಟಿದನು.

ಇನ್ನು ಪಂಚದಾಸಪ್ರಾಣರ ಅವತಾರ ಹೇಳುತ್ತಾರೆ—

೧. **ಪ್ರಾಣಾಂಶ**=ಸರ್ವೋತ್ತುಂಗ, ಗಜನೆಂಬ ಎರಡು ಅವತಾರ.

೨. **ಅಪಾನನ** ಅವತಾರ=ಗವಾಕ್ಷ ವಾನರ.

೩. **ವ್ಯಾನನ** ಅವತಾರ=ಗವಯ ನಾಮಕ ವಾನರ.

೪. **ಉದಾನ**=ಉದಾನ ನಾಮಕ ವಾಯು, ವೃಷಪ ನಾಮಕಕಪಿ.

೫. **ಸಮಾನ**=ಸಮಾನ ನಾಮಕ ವಾಯು—(೧) ಗಂಧಮಾದನ. (೨) ಶರ್ವತ್ರಾತ.

ಇಂತು ಪಂಚಪ್ರಾಣರ ಅವತಾರಗಳು.

**ಭಾವಸೂಚನ** :—ಏಷಾಂ ಮಧ್ಯೇ ವಿಷ್ಣುಭಕ್ತಿ ಪ್ರತೀತಃ ಸ ಚೇಕಿತಾನೋ ಯದುಷೂಪಜಾತ ಇತಿ ಗಾರುಡೇ ॥ ವಿಪ್ರಥುಃ ಸೌಮ್ಯ ಉಚ್ಯತ ಇತಿ ತಾರತಮ್ಯೇ ॥ ಶರ್ವ ಇತಿ ತೌ ಪ್ರಾಣವಾಯ್ವಂಶ ಭೂತೌ ಖಗೇಂದ್ರ ಸರ್ವೋತ್ತುಂಗೌ ಗಜಾಯುತೌ ದ್ವಿಜೌ ಹಿ ॥ ಇತಿ ಗಾರುಡೇ ॥ ಗವಾಕ್ಷಸ್ತು ಪ್ರಾಗ ಪಾನೋ ಮರುತ್ ಶ್ರೇಷ್ಠಃ ಪ್ರಕೀರ್ತಿತಃ॥ ಗವಯಃ ಪ್ರಾಗ್ ವ್ಯಾನನಾಮಾ ವೃಷಾ ಪೂರ್ವಮುದಾನಕಃ ॥ ಸರ್ವತ್ರಾತೋ ಗಂಧಮಾದೋ ದ್ವೌ ಸಮಾನ ಉದಾಹೃತಃ ॥ ಇತಿ ತಾರತಮ್ಯೇ ॥ ೩೦ ॥

**ಶ್ರೀಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ** :—ಪ್ರತಿಭನಂಶನು ಚೇಕಿತಾನೆಂದೆನಿಪ ವಿ। ಪೃಥು ಸೌಮ್ಯ..........ಪ್ರಾಣ ಪಂಚಕರೊಳು, ಪ್ರಾಣ ಗಜ । ಅಥ ಗವಾಕ್ಷಾಪಾನ ವ್ಯಾನ ಗವಯನುಯೆಂದು ॥ ೩೬ ॥ ವೃಷನು ಸರ್ವತ್ರಾತನು ಉದಾನ ಗಂಧ । ಮಾದನ ಸಮಾನರಿವರು ವಿತ್ತಪನ ಸುತರು । ಶ್ವಸನ ಗಣದೊಳು ಕಿಂಚಿದುಮರಹಂ ಪ್ರವಹ । ಗಸಮರೆನಿಪರು ಪ್ರಾಣಪಂಚರುಯೆಂದೂ ॥ ೩೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಪ್ರತಿಭವ' ಇತಿ ॥ ಮರುತ್ಸ ನಾಮ ಪ್ರತಿಭವಃ ಯದುಷ್ವಭೂತ್ ಸ ಚೇಕಿತಾನಃ ಹರಿಸೇವನಾರ್ಥಮ್ ॥ ಸಿರ್ಗತ್ಯ ತುರ್ಯಾ ವಿಪೃಥುಂ ದದರ್ಶ ಏಕೋ ಹ್ಯಸೌ ಮರುತಾಂ ಸೌಮ್ಯನಾಮ ॥ ಪ್ರಾಣಃ ವಿತತಃ ವ್ಯಾಪ್ತಃ ಸ ಸರ್ವೋತ್ತುಂಗೋ ಗಜಃ ॥ ಇತಿ ದ್ವಿರೂಪಃ ॥ ಸರ್ವೋತ್ತುಂಗೋ ನಾಮತಃ ಪ್ರಾಣವಾಯೋಃ ಅಂಶೋ ಸಿಶಾಯಾಂ ಗುರುಪುತ್ರ ಸೂದಿತಃ ॥ ಗಜೋ ಗವಾಕ್ಷಃ ಗವಯಃ ವೃಷಶ್ಚ ಸಗಂಧಮಾದಾ ಧನದೇನ ಜಾತಾಃ ॥ ಪ್ರಾಣಾದಯಃ ಪಂಚ ಮರುತ್ಪ್ರವೀರಾಃ ॥ ಸರ್ವತ್ರಾತಃ ಸಮಾನೋಯಮ್ ॥ ೩೦ ॥

## ಕನ್ನಡಾರ್ಥ

"ಪ್ರತಿಭವನೆಂಬ ಮರುತ್ತನು ಹರಿಸೇವೆಯನ್ನು ಮಾಡಲು ಯಾದವ

ರಲ್ಲಿ ಚೇಕಿತಾನನೆಂಬ ರಾಜನಾಗಿ ಹುಟ್ಟಿದನು." ಪಟ್ಟಣದಿಂದ ಹೊರ ಬಿದ್ದನಂತರ 'ವಿಪೃಥು' ಎಂಬ ಗ್ರಾಮರಕ್ಷಕನನ್ನು ನೋಡಿದನು. ಈ ಗ್ರಾಮರಕ್ಷಕನು (ವಿಪೃಥುವು) ಸೌಮ್ಯನೆಂಬ ಮರುತ್ತನ ಅವತಾರನು. ವಿತತ, ಸರ್ವೋತ್ತುಂಗರಿಬ್ಬರು ಪ್ರಾಣವಾಯುವಿನ ಅವತಾರರು ಗಜನೆಂಬ ತ್ರೇತಾಯುಗದ ಕಪಿಯೂ ಪ್ರಾಣವಾಯುವಿನ ಅವತಾರವೇ. ಹೀಗೆ ಮೂವರು ಪ್ರಾಣವಾಯುವಿನ ಅವತಾರಗಳು. ಸರ್ವೋತ್ತುಂಗನೆಂಬ ಪ್ರಾಣವಾಯುವಿನ ಅಂಶಾವತಾರವು ರಾತ್ರಿಯಲ್ಲಿ ಗುರುಪುತ್ರರಾದ ಅಶ್ವತ್ಥಾಮಾಚಾರ್ಯರಿಂದ ಸಂಹೃತವಾಯಿತು. ಗವಾಕ್ಷನೆಂಬ ಕಪಿಯು ಅಪಾನನ ಅಂಶ. ಗವಯನೆಂಬುವವನು ವ್ಯಾನವಾಯುವಿನ ಅಂಶಾವತಾರ. 'ವೃಷ'ನೆಂಬುವವನು ಉದಾನನ ಅವತಾರ. ಶರ್ವತ್ರಾತನು ಭೀಮಸೇನನಿಂದ ಕಾಳಿಯೆಂಬ ಕಾಶಿರಾಜನ ಪುತ್ರಿಯಲ್ಲಿ ಹುಟ್ಟಿದ ಮಗನು. ಅವನು ಸಮಾನವಾಯುವಿನ ಅವತಾರ. ಗಂಧಮಾದನೆಂಬ ಕಪಿಯೂ ಸಮಾನನ ಅವತಾರ. ಹೀಗೆ ನಿರ್ಣಯದಲ್ಲಿ ನಿರೂಪಿಸಿರುತ್ತಾರೆ. ॥ ೩೦ ॥

**ಅವತರಣಿಕಾ** :—ಮರುತ್ತುಗಳಲ್ಲಿ ಪ್ರಾಣಾದಿ ಪಂಚಕರ ಅವತಾರ ಹಿಂದಿನ ಪದ್ಯದಲ್ಲಿ ಹೇಳಿ, ಈಗ ನಾಗಾದಿ ಪಂಚಕ ಮರುತಗಳಲ್ಲಿ ನಾಮ ಹೇಳುತ್ತಾ, ಕೂರ್ಮನಾಮಕ ಮರುತನ ಅವತಾರ ಹೇಳುತ್ತಾರೆ.

**ಐವರೊಳಗೀ ಕುಂತಿ ಭೋಜನು ।**
**ಆವಿನಾಮಕ ನಾಗ ಕೃಕಳನು ।**
**ದೇವದತ್ತ ಧನಂಜಯರು ಅವತಾರ ವರ್ಜಿತರು ॥**
**ಆವಹೋದ್ವಹ ವಿವಹ ಸಂವಹ ।**
**ಪಾ್ರವಹೀಪತಿ ಮರುತ ಪ್ರವಹನಿ ।**
**ಗಾವಕಾಲಕು ಕಿಂಚಿದಧಮರು ಮರುದ್ಗಣರೆಲ್ಲ ॥ ೩೧ ॥**

**ಪದ್ಯಾರ್ಥ** :—ಐವರೊಳಗೀ=ನಾಗ, ಕೂರ್ಮ, ಕೃಕಳ, ದೇವದತ್ತ, ಧನಂಜಯ. ಈ ಐದುಜನ ಮರುತಗಳಲ್ಲಿ ಆವಿನಾಮಕ=**ಕೂರ್ಮ**

**ನಾಮಕ** ಮರುತ್ ಕುಂತಿಭೋಜ ರಾಜನ ಅವತಾರ. ಶೂರರಾಜನ ಸಖನು, ಕುಂತಿಭೋಜನ ಮಗಳಾದ ಕುಂತಿದೇವಿಯನ್ನು ಸಾಕಿದನು. ಮೊದಲು ಕುಂತಿಗೆ ಪೃಥಾ ಎಂಬ ಪೆಸರಿತ್ತು. "ತೇಷಾಂ ಮಧ್ಯೇ ಕೂರ್ಮನಾಮಾ ಮರುಜ್ಚ ಸ ಏವಾಭೂತ್ ಕುಂತಿಭೋಜಾಖ್ಯರಾಜಃ ||" ಎಂದು ಗರುಡ ಬ್ರಹ್ಮಕಾಂಡ ವಚನ. ವಿಪೃಥು ಸೌಮ್ಯ ಕುಂತಿಭೋಜನೆ ಕೂರ್ಮನು || ಎಂದು ಶ್ರೀ ಜಗನ್ನಾಥದಾಸರ ಪದ. ಮತ್ತು ೪ ಮರುತ್ತುಗಳು. ನಾಗ, ಕೃಕಳ, ದೇವತ್ತ, ಧನಂಜಯ ಈ ನಾಲ್ವರು. ಅವತಾರ ವರ್ಜಿತರು=ಇವರಿಗೆ ಅವತಾರಗಳಿಲ್ಲ. ಇನ್ನು ಆವಹ, ಉದ್ವಹ, ವಿವಹ, ಸಂವಹ ಮುಂತಾದ ಮರುದ್ಗಣರೆಲ್ಲ ಪ್ರಾವಹೀಪತಿ ಪ್ರಾವಹೀಗಂಡನಾದ ೧೧ನೇ ಕಕ್ಷದಲ್ಲಿಪ್ಪ ಮರುತ ಪ್ರವಹನಿಗೆ=ಪವಾಹ ಮಾರುತಗೆ ಈ ಎಲ್ಲ ಮರುದ್ಗಣರೆಲ್ಲ ಕಿಂಚಿತು ಅಧಮರೆಂದು ಕರೆಸುತ್ತಾರೆ. ೫೦ ಮಂದಿ ಮರುತಗಳಲ್ಲಿ ಪ್ರಾಣ, ಆಹಂಕಾರಿಕ ಪ್ರಾಣ, ಪ್ರವಾಹವಾಯು, ಉತ್ತಮರು. ಉಳಿದ ೪೭ ಮರುತಗಳಲ್ಲಿ ದಾಸಪ್ರಾಣರಾದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಕಿಂಚಿದುತ್ತಮರು (ಮುಂದೆ)

**ಭಾವಸೂಚನ :**—ಆವಿ ಕೂರ್ಮ ನಾಗೇತಿ || ನಾಗಶ್ಚ ಕೃಕಲಶ್ಚೈವ ದೇವದತ್ತೋ ಧನಂಜಯಃ | ಏತೇ ಅವತಾರೈಶ್ಚ ವಿಧುರಾ ಇತಿ ತಾರತಮ್ಯೇ || ಅಥವೇತಿ "ಆವಹೋ ವಿವಹಶ್ಚೈವ ಸಂವಹಶ್ಚ ತಥಾ ಪರಃ || ವಿನಾ ಪ್ರಾಣಂ ಚ ಪ್ರವಹಂ ಮರುತೋऽನ್ಯೇ ಚ ಕೀರ್ತಿತಾಃ || ಮರುತಃ ಪಂಚಕಾ ಅನ್ಯೇ ಮರುತೋಽಲ್ಪಗುಣಾಧಮಾ ಇತ್ಯುಕ್ತೇಃ ||೩೧||

**ವಿಶೇಷ ಸೂಚನೆ:**-ಮರುದ್ಗಣನಾಮಗಳು ಶ್ರೀವಿಜಯದಾಸರಪದ

ರಾಗ—ಭೂಪಾಳಿ, ತಾಳ—ಝಂಪೆ

ಮರುತಗಳ ನಾಮವನು ಉದಯದಲೆದ್ದು ಸ್ಮರಿಸಿದವರ ದುರಿತ ಪರಿಹಾರವಾಗುವದು || ಪಲ್ಲ|| ಪ್ರಾಣ ಅಪಾನನು ವ್ಯಾನ ಉದಾನ ಸಮಾನ ಮತ್ತೆ ನಾಗ ಕೃಕಲ ಕೂರ್ಮ || ಏನೆಂಬೆ ದೇವದತ್ತನು ಧನಂಜಯ ಪ್ರವಾಹನನು | ವಿವಹ ಸಂವಾಹನಾನೆಂದು||೧|| ಶೀಲ ಪರಾವಹ ಉದ್ವಹಾ

ಮಹ ಶಂಕು । ಕಾಲ ಶ್ವಾಸ ಅನಳ ಪ್ರತಿಯ(ಭೆ ॥ ಬಾಲ ಕುಮುದಾ ಕಾಂತ ಶುಚಿ ಶ್ವೇತ ಅಜಿತ ಗುರು ಮೇಲಾಗಿ ಸಂಸಾರ-ಪ್ರವರ್ತಕ ಕಿಲ ರನ್ನ ॥ ೨ ॥ ತರುವಾಯು, ಅಜಿತ ಸಂಯಮ ಕಪಿ ಜಡ ದೇವ । ಮರಳಿ ಮಂಡುಕ ಸತತ ಸಿದ್ಧ ರಕ್ತಾ ॥ ಸರಸಕೃಷ್ಣ ಕಪಿ ಶುಕ ಯತಿ ಭೀಮ ಹನು । ಮರೆಯದಲೆ ಪಿಂಗ ಅಹಂ ಪ್ರಾಣ ಕಂಪನಾ ॥ ೩ ॥ ಇವರ ಸಹಿತ ವಾಗಿ ಸೂತ್ರನಾಮಕ ಮೂಲಪವಮಾನನೊಡನೆ ಗಣನೆಯನು ಮಾಡಿ ॥ ತವಕದಿಂದಲೆ ತಾರತಮ್ಯವನೆ ತಿಳಿದು । ಶ್ರವಣದಲಿ ಕೇಳಿ ಸಾಕಲ್ಯವಾಗಿ ನಿತ್ಯ ॥ ೪ ॥ ಇದನೆ ಪಠಿಸಿದರೆ ಜನ್ಮ ಜನ್ಮದ ಪಾಪ । ಉದರಂಪೋಗು ವವು ಲೇಶವುಳಿಯದೇ।ಪದುಮನಾಭ ನಮ್ಮ ವಿಜಯಠ್ಠಲರೇಯನ। ಪದವ ಭಜಿಸುವದಕ್ಕೆ ಜ್ಞಾನವೇ ಪುಟ್ಟುವದು. ॥ ೫ ॥

ಇದಕ್ಕೆ ತಾರತಮ್ಯ ಪ್ರಕಾಶಿಕೆಯಲ್ಲಿ ವಿಸ್ತಾರ ಪ್ರಮಾಣಗಳಿವೆ.

ಮತ್ತು ೪೭ ಜನ ಮರುತ್ತುಗಳಲ್ಲಿ ೭ ಗಣ ಉಂಟು ಆ ೭ ಗಣಗಳ ಹೆಸರು. ಆನುಶಾಸನ ಪರ್ವ ಭಾರತದಲ್ಲಿ ಅವರವರ ಕಾರ್ಯವೂ ಬೇರೆ ಬೇರೆ ನಾಮಗಳು ಹೇಳಿದ್ದಾರೆ.

**೧. ಆವಹಗಣ**=(ಭೂಮಿಮಾರಭ್ಯ ಮೇಘ ಮಂಡಲ ಪರಿಯಂತ ಇವರ ಕಾಯ, ಶುಕ್ಲ, ೨. ಜ್ಯೋತಿ, ೩. ಆದಿತ್ಯ, ೪. ನರ=ಹರಿತಃ ೫. ಚಿತ್ರಯಾತಿ ೬. ಸತ್ಯಯಾತಿ,ಜ್ಯೋತಿಷ್ಮಾನ್ ಎಂದು ನಾಮಾಂತರ ಗಳು.)

**೨. ಪ್ರವಾಹಗಣ**= (ಮೇಘಮಂಡಲಾದಾಸೂರ್ಯಮಂಡಲಂ) (೧) ಋತುಜಿತ್, (೨) ಸತ್ಯಜಿತ್, (೩) ಸೋಮಜಿತ್, (೪) ಅಮಿತ್ರ, (೫) ಅಮಿತ್ರಜಿತ್, (೬) ಭೂಮಿಮಿತ್ರಂ ಸುಷೇಣಃ ॥

**೩. ಉದ್ವಹಗಣ**= (ಸೂರ್ಯಮಂಡಲಾದಾಚಂದ್ರಮಂಡಲಮ್) (೧) ಋಜಃ, (೨) ಸತ್ಯ, (೩) ಧ್ರುವ (ಕೇಸರಿ), (೪) ಧರ್ತಾ, (೫) ವಿಧರ್ತಾ, (೬) ವಿಧಾರಕ, (೭) ವರುಣಃ ॥

**೪. ಸಂವಹಗಣ** = (ಚಂದ್ರಮಂಡಲಾದಾನಕ್ಷತ್ರಮಂಡಲಮ್) (೧) ಧಾವತಃ, (೨) ಅನಯಃ, (೩) ಉಗ್ರಃ, (೪) ಭೀಮಃ, (೫) ಕ್ಷೇತ್ರಃ, (೬) ಸಾಲಯಃ, (೭) ಅತಿಯುಗ್ಮಃ ॥

**೫. ವಿವಹಗಣ**= (ನಕ್ಷತ್ರಾದಾಗ್ರಹಮಂಡಲಮ್) (೧) ತಾದೃಕ್, (೨) ಈದೃಕ್, (೩) ಅನ್ಯಾದೃಕ್, (೪) ಪತಿದೃಕ್, (೫) ಮಿತಃ, (೬) ಸಂಮಿತಃ, (೭) ಸಂಭವಃ ॥

**೬. ಪರಾವಹಗಣಃ** = (ಗ್ರಹಮಂಡಲಾದಾಋಷಿಮಂಡಲಮ್) (೧) ಈದೃಶಃ, (೨) ಪುರುಷಃ, (೩) ಸಮಿತಾ, (೪) ಸಮದೃಕ್, (೫) ಕ್ಷಮಃ, (೬) ಪ್ರತಿದಕ್ಷಃ, (೭) ಅನ್ಯದೃಕ್.

**೭. ಪರಿವಹಗಣ** = (ಋಷಿಮಂಡಲಾತ್ ಧ್ರುವಮಂಡಲಪರ್ಯಂತಮ್) (೧) ಮಹತ್, (೨) ಇಂದ್ರಃ, (೩) ಸರಭಸಃ, (೪) ಸಾಮಸಃ, (೫) ಮಾನುಧೀ, (೬) ವಿವಃ, (೭) ಧರ್ಮಃ

ಮರುತಶ್ಚ ಸಮಾಸ್ಸರ್ವೇ ಸಪ್ತ ತೇಷು ಪ್ರಧಾನಕಾಃ ॥
ಪ್ರಾಣಾಪಾನಾದೀನಾಂ ೧/೫ ವಾ ೧/೧೦ ಅಂಶತೋ ವಾ ಊನಂ

ಪೂರ್ವೋಕ್ತ ಮರುತಾಂ ನಾಮಾಂತರಾಣಿ ಜ್ಞೇಯಾನಿ. ಇತಿ ತಾರತಮ್ಯಪ್ರಕಾಶಿಕಾ ॥ ಭೂಮಿಯಿಂದ ಆರಂಭಿಸಿ ಧ್ರುವಮಂಡಲ ಪರಿಯಂತ ೪೭ ಮರುತಗಳ ಕಾರ್ಯವಿದೆಂದು ಭಾರತದಲ್ಲಿ ವಿವರ ವಿದೆ. ಶ್ರೀ ಜಗನ್ನಾಥದಾಸಾರ್ಯರ ಪದ ನುಡಿ ೩೩-೩೪. ಮರುತ ಕೆಲವು ಮಾತ್ರ ನಾಮ ಶ್ರೀ ವಿಜಯದಾಸರ ಪದದಂತಿದೆ. ಕಾರಣ ಕೊಟ್ಟಿಲ್ಲ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

**'ಐವರೇತಿ'** ॥ ನಾಗಾದಿ ಪಂಚಕೇತ್ಯರ್ಥಃ ॥ 'ಆವಿ' ಕೂರ್ಮ ॥ ಕೂರ್ಮಶ್ಚ ನಾಮ್ನಾ ಮರುದೇವ ಕುಂತಿಭೋಜಃ ॥ ೩೧ ॥

## ಕನ್ನಡಾರ್ಥ

ನಾಗ, ಕೃಕಲ, ಕೂರ್ಮ, ದೇವದತ್ತ, ಧನಂಜಯುರೆಂಬ ಪ್ರಾಣರಲ್ಲಿ ಕೂರ್ಮನೆಂಬ ಪ್ರಾಣನೇ ಕುಂತಿಭೋಜನೆಂಬ ರಾಜನು. ಮಿಕ್ಕ ನಾಗ, ಕೃಕಲ, ದೇವದತ್ತ, ಧನಂಜಯರಿಗೆ ಅವತಾರಗಳಿಲ್ಲ. ॥ ೩೧ ॥

**ಅವತರಣಿಕಾ :**— ಈ ಪದ್ಯದಲ್ಲಿ ಮರುತಗಳಲ್ಲಿ, ಪ್ರಾಣಾದಿ ೫ ಜನರು ಕಿಂಚಿತ್ ಅಧಿಕರು. ಉಳಿದ ಮರುತಗಳೆಲ್ಲ ಸಮಾನರೆಂದು ಹೇಳಿ ಮುಂದೆ ಇದೇ ೧೮ನೇ ಕಕ್ಷದಲ್ಲಿರತಕ್ಕ ೧೦ ಜನ ವಿಶ್ವೇದೇವತೆಗಳನ್ನು ಹೇಳುತ್ತಾರೆ.

**ಪ್ರಾಣ ಪಾನ ವ್ಯಾನೋ ದಾನ ಸ- ।**
**ಸಮಾನರೈವರನುಳಿದು ಮರುತರು ।**
**ಊನರೆನಿಪರು ಹತ್ತು ವಿಶ್ವೇದೇವರಿವರಿಂದ ॥**
**ಸೂನುಗಳು ಯೆನಿಸುವರು ಐವರ ।**
**ಮಾನಿನೀ ದ್ರೌಪದಿಗೆ ಕೆಲವರು ।**
**ಕ್ಷೋಣಿಯೊಳು ಕೈಕೇಯುರೆನಿಪರು ಎಲ್ಲ ಕಾಲದಲಿ ॥ ೩೨ ॥**

**ಪದ್ಯಾರ್ಥ :**— ಮರುತಗಳು ದಾಸಪ್ರಾಣರು. ಅಂದರೆ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಈ ಐದು ಜನರು ಉಳಿದ ಮರುತಗಳಿಗಿಂತಲೂ ಕಿಂಚಿತ್ ಅಧಿಕರೆನಿಸುತ್ತಾ, ಐವರ ಉಳಿದು=ಈ ಐದು ಮರುತಗಳ ಬಿಟ್ಟು, ಬಾಕಿ ಮರುತರು ಈ ಐವರಿಗೆ ಊನರೆನಿಪರು. ಪ್ರಾಣಾದಿಗಳಿಗೆ ಕಿಂಚಿತ್ ಕಡಿಮೆ ಎಂದು ಎನಿಸುವರು.

ಇನ್ನು ೧೮ನೇ ಕಕ್ಷದಲ್ಲಿ ಸೇರಿದ ೧೦ ಜನ ವಿಶ್ವೇದೇವತೆಗಳ ಹೆಸರು ಹೇಳುತ್ತಾರೆ.

| | |
|---|---|
| ೧೦ ವಿಶ್ವೇದೇವರು. ಗಾರುಡ ಬ್ರಹ್ಮ ಕಾಂಡಪ್ರಮಾಣವು. | ೧. ಪುರೂರವ೨. ಆರ್ದ್ರವ=ಪಾರ್ವಣಶ್ರಾದ್ಧ ದೇವ.<br>೩. ಧೂರಿ, ೪. ಲೋಚನ=ಸಂಕಲ್ಪ ಶ್ರಾದ್ಧಕ್ಕೆ<br>೫. ಕ್ರತು, ೬. ದಕ್ಷ=ಮಾಸಿಕಶ್ರಾದ್ಧಕ್ಕೆ<br>೭. ಸತ್ಯ, ೮. ವಸು=ನಾಂದೀ ಶ್ರಾದ್ಧ ದೇವ.<br>೯. ಕಾಮ,೧೦. ಕಾಲ=ಪ್ರೇತ ಶ್ರಾದ್ಧ ದೇವ. |

ಇದರಲ್ಲಿ ಪುರೂರವ ಮೊದಲುಮಾಡಿ ಕ್ರತುವರೆಗೆ ಐವರು ದ್ರೌಪದಿಗೆ ಸೂನುಗಳು ಯೆನಿಸುವರು=ದ್ರೌಪದಿ ದೇವಿಯಲ್ಲಿ ಧರ್ಮ ಭೀಮಾದಿಗಳಿಂದ ಜನಿಸಿದರು. (ಇವರ ಮುಂದಿನ ಪದ್ಯದಿ:) ಕೆಲವರು= ಉಳಿದ ಐವರು ವಸುಗಳು, ಕ್ಷೋಣಿಯೊಳು=ಭೂಮಿಯಲ್ಲಿ, ಕೈಕೇಯ ರೆನಿಪರು ಎಲ್ಲ ಕಾಲದಲಿ=ಸದಾ ಇವರು. ಪ್ರತಿ ಕಲ್ಪಗಳಲ್ಲಿ ಕೈಕೇಯ ರಾಜನಲ್ಲಿ ಪಂಚವಸುಗಳ ಜನನವಾದ ಕಾರಣ ಕೈಕೇಯರೆಂದು, ಇವರಿಗೆ ಸಂಜ್ಞೆ.

**ಭಾವಸೂಚನ:**— ಪ್ರಾಣೇತಿ ॥ ಇತೀದಂ ತು-ಬೃಹದ್ಭಾಷ್ಯವಮ್॥ ತೇ ಸರ್ವೇ ಮರುತಃ ಸಮಾಃ ॥ ಪ್ರಾಣಾದಿಪಂಚಕಂ ತ್ಯಕ್ತ್ವಾ ತೈಜಸ ಪ್ರವಹಾವಪಿ ॥ ಮರುತಶ್ಚ ಸಮಾಃ ಸರ್ವೇ ಸಪ್ತ ತೇಷು ಪ್ರಧಾನಕಾಃ । ಏವಂ ದಶಮ ತಾತ್ಪರ್ಯಾದಿತಿ ಸಂಗ್ರಹೇ ॥ ಮಾನಿನೀತಿ ॥ ಕೈಕೇಯಾ ದೇಶಾಧಿಪಾಃ ॥ ಆಸನ್ ಕೃಷ್ಣಾಯಾಃ ಪಂಚಪುತ್ರಾ ಗುಣಾಢ್ಯಾಃ ವಿಶ್ವೇ ದೇವಾಃ ಪಂಚಗಂಧರ್ವಮುಖ್ಯೈಃ ॥ ಆವಿಷ್ಟಾಸ್ತೇ ಚಿತ್ರರಥಾಭಿ ತಾಮ್ರ ಕಿಶೋರ ಗೋಪಾಲಬಲ್ಯೈಃ ಕ್ರಮೇಣೇತಿ ನಿರ್ಣಯವಿಂಶಾ ಧ್ಯಾಯೇ ॥ ಯುಧಿಷ್ಠಿರಾದ್ಯೈಃ ಕ್ರಮಶಃ ಪ್ರಜಾ ಇತ್ಯುಕ್ತಮಾಹ ಧರ್ಮೇತಿ ॥ ೩೨-೩೩ ॥

**ಶ್ರೀ ವ್ಯಾಸದಾಸಸಿದ್ಧಾಂತ ಕೌಮುದೀ**

"ಪ್ರಾಣೇತಿ" ॥ "ಉಳಿದು"-ಬಿಟ್ಟು ಊಸರು" ಇವರಿಂದ ॥ ೩೨ ॥

**ಕನ್ನಡಾರ್ಥ**

"ಉಳಿದು" ಪ್ರಾಣಾದಿ ಪಂಚಕವನ್ನು ಬಿಟ್ಟು ಎಂದು ಅರ್ಥ. ವಿಶ್ವೇದೇವತೆಗಳು ಪ್ರಾಣಾದಿ ಪಂಚರಿಂದ ಸ್ವಲ್ಪ ಕಡಮೆಯವರು. ವಿಶ್ವೇ ದೇವತೆಗಳು ದ್ರೌಪದಿಯ ಮಕ್ಕಳಿಂದುವನ್ನು ಹೆಸರು ಸಹಿತವಾಗಿ ಮುಂದಿನ ಪದ್ಯದಲ್ಲಿ ನೋಡಬಹುದು ॥ ೩೨ ॥

**ಅವತರಣಿಕಾ:**— ೫ ಜನ ವಿಶ್ವೇದೇವತೆಗಳ ಅವತಾರ ಹೇಳು ತ್ತಾರೆ. ಇವರು ದ್ರೌಪದಿ ಪುತ್ರರು.

**ಪ್ರತಿವಿಂದ್ಯ ಶ್ರುತ ಸೋಮ ಶ್ರುತ ಕೀ- ।**
**ರುತಿ ಶತಾನೀಕ ಶ್ರುತ ಕರ್ಮ ದ್ರೌ- ।**
**ಪತಿ (ದಿ) ಕುವರರಿವರೊಳಗೆ ಅಭಿತಾಮ್ರ ಪ್ರಮು ಚಿತ್ರ ॥**
**ರಥನು ಗೋಪ ಕಿಶೋರ ಬಲರೆಂ- ।**
**ಬತುಲರ್ಕೈ ಗಂಧರ್ವರಿಂದಲಿ ।**
**ಯುತರು ಧರ್ಮ ವೃಕೋದರಾದಿಜರೆಂದು ಕರೆಸುವರು ॥೩೩॥**

**ಪದ್ಯಾರ್ಥ:**—೧ ಪ್ರತಿ ವಿಂದ್ಯ=ದ್ರೌಪದಿಯಲ್ಲಿ ಧರ್ಮರಾಜನಿಂದ ಪುಟ್ಟಿದನು, ಚಿತ್ರರಥ ಗಂಧರ್ವ ಆವೇಶ. ೧ **ಪುರೂರವ ವಸುವಿನ** ಅವತಾರ ಪ್ರತಿವಿಂದ್ಯ ೨ **ಆದ್ರ್ರವ**ನೆಂಬ ವಸು ದ್ರೌಪದಿ ದೇವಿಯಲ್ಲಿ ಭೀಮಸೇನದೇವರಿಂದ **ಶ್ರುತಸೋಮನು**, ಅತಿ ತಾಮ್ರಗಂಧರ್ವನ ಆವೇಶಯುಕ್ತ, ೩ **ದೂರಿ(ಶ್ಚ)**ನೆಂಬ ವಸು, ದ್ರೌಪದಿದೇವಿಯರಲ್ಲಿ ಅರ್ಜುನನಿಂದ ಶ್ರುತಕೀರುತಿ ಎಂಬವನು, ಕಿಶೋರ ಗಂಧರ್ವನ ಆವೇಶಯುಕ್ತ, ೪ **ಲೋಚನ**ನೆಂಬ ವಸು. ದ್ರೌಪದಿದೇವಿಯಲ್ಲಿ ನಕುಲನಿಂದ **ಶತಾನೀಕ**ನೆಂಬ ನಾಮದಿಂದ ಗೋಪಾಲನೆಂಬ ಗಂಧರ್ವ ಆವೇಶನಾಗಿಯೂ, ೫ **ಕೃತು** ಎಂಬ ವಸು=ದ್ರೌಪದಿ ದೇವಿಯರಲ್ಲಿ ಸಹದೇವನಿಂದ ಶ್ರುತಕರ್ಮನೆಂಬ ನಾಮದಿಂ ಬಲನಾಮಕ ಗಂಧರ್ವ ಆವೇಶಯುಕ್ತನಾಗಿ ಐವರು ಪಾಂಡವರಿಂದ ಐದು ಮಂದಿ ವಸುಗಳು ಜನಿಸಿದರು. ಇವರೇ ದ್ರೌಪದಿ ಕುವರರು. ಧರ್ಮ ವೃಕೋದರಾದಿಜರೆಂದು ಕರೆಸುವರು=ಕ್ರಮವಾಗಿ ಧರ್ಮ, ಭೀಮಾರ್ಜುನ, ನಕುಲ ಸಹದೇವರಿಂದ ಉತ್ಪತ್ತಿ ಎಂದು ಗಾರುಡ ವಚನವೂ ಇದೆ. ಭಾವಸೂಚನೆಕಾರರು ೩೨ ನೇ ಪದ್ಯದ ವ್ಯಾಖ್ಯಾನದಲ್ಲಿ ತೋರಿರುವರು. ಮೊದಲಿಗೆ ಕೊಟ್ಟಿದೆ. ಇವರೆಲ್ಲ ಶ್ರೀ ಕೃಷ್ಣಭಕ್ತರು.

**ಶ್ರೀ ಜಗನ್ನಾಥದಾಸರ ಬೃ.ತಾ. ಪದ** ॥ ೧ ಪ್ರತಿವಿಂದ್ಯ ಧರ್ಮಜನ, ೨ ಭೀಮಸೇನ ಪುತ್ರ, ಶ್ರುತಸೋಮ. ೩ ಅರ್ಜುನಜ ಶ್ರುತಕೀರ್ತಿಪ ॥ ೪ ॥ ಶತಾನೀಕ ನಕುಲಜ. ೫ ಸಹದೇವಾತ್ಮಜನು ಶ್ರುತಕರ್ಮರಿವರು ದ್ರೌಪದಿದೇವಿಗಾತ್ಮಜರಿಗಾನಮಿಪೆ ॥ ೩೮ ॥ ಚಿತ್ರರಥ,

ಅಭಿತಾಮ್ರ, ಕಿಶೋರ, ಗೋಪಾಲಬಲ। ರುತ್ತಮರು ಗಂಧರ್ವರೈವ ರಿಂದ। ಯುಕ್ತರಾಗಿಹರು ಕೈಕೇಯರೈವರು ಪಾಂಡುಪುತ್ರಜರು. ವಿಶ್ವೇ ದೇವತೆಗಳಿವರೆಂದು ॥ ೩೯ ॥

ಇನ್ನು ಮುಂದೆ ಶತಸೋಮಪಾನಾರ್ಹರನ್ನು ಹೇಳುತ್ತಾರೆ.

ಧ್ರುವ ಕಾಲ ಕಾಮುಲೋಚನ ದಕ್ಷ ಕೃತು ಪುರೂರವ ಸತ್ಯ ವಸು ಧುರಿಗಳಿವರೂ ವಿಶ್ವೇ ॥ ದಿವಿಜರೀರೈದು **ಋಭುಗಣ ಪಿತೃತ್ರಯುದ್ಯಾವ**। ಅವನಿಪರು ಗಣಪಾದ್ಯರಧಮ ಮಿತ್ರನಿಗೆಂದು ॥ ೪೦ ॥

**ಜ. ದಾ. ಪದ ಒಟ್ಟಿಗೆ ೧೦೦ ಜನ ಸೋಮಪಾನಾರ್ಹರ ಹೆಸರು.**

ವಸುಗಳೆಂಟಾದಿತ್ಯರೀರಾರು ವಂಪಧಿಕ। ದಶರುದ್ರಗಣ ಪಿತೃತ್ರಯ ಭೃಹಸ್ಪತೀ ॥ ದಶ ವಿಶ್ವವೇವ ಅಶ್ವಿನಿಗಳೆರಡೈವತ್ತು ಶ್ವಸನಗಣರು. ಋಭು ಒಂದು ಎರಡು ದ್ಯಾವಾ ಪೃಥಿವಿ ॥ ೪೧ ॥ ಒಂಭತ್ತು ಕೋಟಿ ದೇವತೆ ಗಳೊಳು ನೂರು ಜನ। ಕೆಂಬರಿಪರಿಗೆ ಸೋಮಪಾನಾರ್ಹರೂ ॥ ಅಂಬು ಜಾಪ್ತರೊಳು ಗುರುಕ್ರಮನುಳಿದು ಪದ್ಮಸಂಭವನ ಸಹರಾಗಿಹರ ಶತ ಸ್ಥರಿಗೆ ಅನವಿಪೆ ॥ ೪೨ ॥ ಮರುತ ತ್ರಯರು ವಹ್ನಿ ಯಮ ಸೋಮ ಶಿವ ದಿವಾಕರರಾರು ರುದ್ರ ಗುರು **ಇವರುಕ್ತ**ರೂ ॥ ಉರವರಿತ ಎಂಭೈವ ತ್ತೈದು ಸಮರು ತಮ್ಮೊಳಗೆ ॥ (ಮುಂದೆ ೧೯ ನೇ ಕಕ್ಷದಿ ॥ ೪೩ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ವಿಶ್ವೇದೇವಾವತಾರಾನ್ ಆಹ "ಸೂನು'' ಇತಿ॥ ದ್ರೌಪದೇಯಾಃ ಪಂಚ। ಕೈಕಯಾಃ ಪಂಚ ॥ ಆಸನ್ ಕೃಷ್ಣಾಯಾಃ ಪಂಚ ಪುತ್ರಾಃ ಗುಣಾಢ್ಯಾಃ ವಿಶ್ವೇದೇವಾಃ ಪಂಚ ಗಂಧರ್ವಮುಖ್ಯೈಃ ॥ ಅವಿಷ್ಟಾಸ್ತೇ ಚಿತ್ರರಥಾಭಿ ತಾಮ್ರ ಕಿಶೋರ ಗೋಪಾಲ ಬಲೈಃ ಕ್ರಮೇಣ ॥ ಪ್ರತಿ ವಿಂಧ್ಯಃ ಸ್ತುತಃ ಸೋಮಃ ಶ್ರುತಾಖ್ಯಕೀರ್ತಿಃ ಶತಾನೀಕ ಉತ ಶ್ರುತ ಕ್ರಿಯಃ ವಿಶ್ವೇಷಾಂ ದೇವಾನಾಂ ಹಿ ಅವತಾರಾಃ ಪಂಚ ॥ "ಕೈಕಯಾ"ಂ ಕುಮರಾಃ ಪುತ್ರಾಃ "ಜ" ಐವರು ॥ ೩೩ ॥

## ಕನ್ನಡಾರ್ಥ

ವಿಶ್ವೇದೇವತೆಗಳ ಅವತಾರಗಳನ್ನು ಹೇಳುತ್ತಾರೆ. "ಸೂನು" ಎಂಬ ದಾಗಿ. ದ್ರೌಪದಿಯಲ್ಲಿ ಹುಟ್ಟಿದವರು ಐವರು. ಕೈಕಯರಲ್ಲಿ ಹುಟ್ಟಿದವರು ಐವರು ದ್ರೌಪದಿಯಲ್ಲಿ ಮಕ್ಕಳಾಗಿ ವಿಶ್ವೇದೇವತೆಗಳಲ್ಲಿ ಐವರು ಹುಟ್ಟಿದರು. ಅವರಲ್ಲಿ ಐದು ಗಂಧರ್ವರ ಆವೇಶ. ಚಿತ್ರರಥ, ಅಭಿತಾಮ್ರ, ಕಿಶೋರ, ಗೋಪಾಲ, ಬಲರೆಂಬುವವರು. ಕ್ರಮದಿಂದ–ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಕ್ರಿಯ ಇವರಲ್ಲಿ ಆವಿಷ್ಟರು. ಪ್ರತಿವಿಂಧ್ಯ ಮುಂತಾದ ಐವರು ವಿಶ್ವೇದೇವತೆಗಳಲ್ಲಿ ಐವರ ಅವತಾರರು. ಕೈಕಯ ಕುವರರೆಂದರೆ ಪುತ್ರರು ॥ ೩೩ ॥

**ಅವತರಣಿಕಾ :**– ಈ ಪದ್ಯದಿಂದ ೧೮ನೇ ಕಕ್ಷದಲ್ಲಿರತಕ್ಕ ಅಶ್ವಿನಿ ದೇವತೆಗಳಿಗೆ ೬ ಅವತಾರ ಹೇಳಿ, ಈ ಕಕ್ಷದಲ್ಲಿಪ್ಪ ಇನ್ನುಳಿದ ಕೆಲ ದೇವತೆಗಳ ವಿವರ ಹೇಳುತ್ತಾರೆ.

**ವಿವಿದ ದ್ವಿಂದರು ನಕುಲ ಸಹದೇ– |**
**ವ ವಿಭು ತ್ರಿಖಾಶ್ವಿನಿಗಳಿವರೊಳು |**
**ದಿವಪನಾವೇಶ ವಿಹುದೆಂದಿಗು ದ್ಯಾವಾ ಪೃಥ್ವಿ ಋಭು ||**
**ಪವನಸುತ (ಯುತ) ವಿಷ್ವಕ್ಸೇನನು ಉಮಾ |**
**ಕುವರ ವಿಘ್ನಪ ಧನಪ ಮೊದಲಾ– |**
**ದವರು ಮಿತ್ರಗೆ ಕಿಂಚಿತಾಧಮರೆನಿಸಿಕೊಳುತಿಹರು ॥ ೩೪ ॥**

ಪದ್ಯಾರ್ಥ :—ಅಶ್ವಿನಿ ದೇವತೆಗಳು–(೧) ನಾಸತ್ಯ, (೨) ದಸ್ರ ಎಂದು ಇಬ್ಬರು. ಇವರು ಘ್ರಾಣೇಂದ್ರಿಯಕ್ಕೆ ಅಭಿಮಾನಿಗಳು, ಸ್ವರ್ಗದ ವೈದ್ಯರು. ಇವರು ಭೂಮಿಯಲ್ಲಿ ತ್ರೇತಾಯುಗ ರಾಮಾವತಾರದಲ್ಲಿ ಸೇವೆಗೆ–(೧) ವಿವಿದ, (೨) ದ್ವಿಂದರು ಎಂಬ ವಾನರಗಳಾದರು. ಮತ್ತು ದ್ವಾಪರಯುಗದಲ್ಲಿ ಶ್ರೀಕೃಷ್ಣ ಸೇವೆಗೆ ಮಾದ್ರೀದೇವಿಯಲ್ಲಿ (೩) ನಕುಲ, (೪) ಸಹದೇವರಾಗಿ ಜನಿಸಿದರು. ಪಾಂಡವರಲ್ಲಿ ಅರ್ಜುನನ ತಮ್ಮಂದಿರಿಬ್ಬರಿವರು. ಮತ್ತು (೫) ವಿಭು, (೬) ತ್ರಿಶಿಖಾ ಎಂದು ಎರಡು

ಅವತಾರಗಳು. ವಿಭು ತಾಪಸಮನ್ವಂತರದಲ್ಲಿ ಇಂದ್ರಪದವಿಯಾಳ್ದನು. ತ್ರಿಶಿಖಾ-೫ನೇ ಮನ್ವಂತರದಿ ಇಂದ್ರಪದವಿ ಆಳ್ದನೆಂದು ನಿರ್ಣಯ ವಿಷ್ಣು ರಹಸ್ಯಾದಿ ಪ್ರಮಾಣ ಇವೆ. ತ್ರಿಶಿಖಾಗೆ-ವಿಶಿಖಾನೆಂತಲೂ ಪ್ರಮಾಣ ಉಂಟು. ಈ ಅಶ್ವಿನೀ ದೇವತೆಗಳ ಅವತಾರಗಳಲ್ಲಿ ದಿವಪನಾವೇಶವಿಹು ದೆಂದಿಗೂ=ಸದಾ ಸ್ವರ್ಗಾಧಿಪತಿ ದೇವೇಂದ್ರನ ಆವೇಶವಿರುವುದು.

ಇನ್ನು ಶೇಷ ಶತ ೮೫ ಜನರಲ್ಲಿ ದ್ಯಾವಾ=ದ್ಯುಲೋಕಾಭಿಮಾನಿ ಮತ್ತು ಪೃಥ್ವಿ=ಧರಾಭಿಮಾನಿ ಭೂ, ಋಭು=ಇದು ಒಂದು ಗಣವಿದ್ದರೂ ಗಣತ್ರೈನ ಒಂದೇ ಸಂಖ್ಯಾ ಇಂದು ೩ ಜನರು ಶೇಷಶತರು. ಇದಲ್ಲದೇ ಇದೇ ಕಕ್ಷದಲ್ಲಿ ಪವನಸುತ ವಿಷ್ವಕ್‌ಸೇನನು=ವಾಯುಪುತ್ರ ವಿಷ್ವಕ್‌ಸೇನ ಹರಿಪಾರ್ಷದನು. ಇವರಿಗೆ ಮೊದಲಾದವರು-ಉಮಾಕುವರ, ವಿಘ್ನಪ= ಉಮಾಪಾರ್ವತಿ ಮಗ-ವಿಘ್ನೇಶ ಗಣೇಶ ಧನಪ ಕುಬೇರನಿಗೆ ಸಮಾನರು. ಮೊದಲಾದವರು=೧೮ನೇ ಕಕ್ಷದಲ್ಲಿ ಹೇಳಿದ ಎಲ್ಲರೂ, ಮಿತ್ರಗೆ ಕಿಂಚಿತಾಧ ಮರೆನಿಸಿಕೊಳುತಿಹರು=ಮಿತ್ರನಾಮಕ ಸೂರ್ಯನಿಗೆ ಸ್ವಲ್ಪ ಗುಣ ಕಡಿಮೆ ಎನಿಸುತ್ತಾರೆ.

**ಭಾವಸೂಚನ**:—ವಿವಿದೇತಿ ॥ ರಾಮಾವತಾರೇ ವಿವಿದ ಮೈಂದೌ ಉಭೌ ಚ ತಾವಶ್ವಿನಾವಂಶಭೂತಾವಿತಿ॥ಸಮ್ಯಕ್ ಪ್ರವಿಷ್ಟೌ ವ ನಕುಲಃ ಸಾಹದೇವೌ ಮಾದ್ರೀಪುತ್ರೌ ಹ್ಯಶ್ವಿನಾವಂಶಭೂತಾವಿತಿ॥ ಚ ಗಾರುಡೇ॥ ವಿಭು-ತ್ರಿಶಿಖ ಇವರು ಅಶ್ವಿನಿಗಳು ॥ ತ್ರಿಶಿಖೋ ವಿಭುರಿತ್ಯೇತಾವಶ್ವಿನೌ ಪರಿಕೀರ್ತಿತೌ ॥ ಇತಿ ಗಾರುಡೇ ॥ ಋಭುನಾಮಕರು ಮೂರು ಮಂದಿ ॥ ಋಭವಸ್ತ್ರಯಃ ॥ ತಥಾ ಋಗ್‌ಭಾಷ್ಯ ಟೀಕಾಯಾಂ ॥ ಋಭೂಣಾಂ ತ್ರಿತ್ವನಿರ್ಧಾರಿತಂ ॥ ದ್ವೇ ಭಾರತೀ ಧರಾದೇವ್ಯೌ ದ್ಯಾವಾ ಪೃಥಿವಿನಾಮಕೇ ಇತಿ ಸಾರಸಂಗ್ರಹೇ ॥ ಋಭುಃ ತನ್ನಾಮಕೋ ದೇವಃ ॥ ಕುಮಾರ=ಪುತ್ರ "ವಿಘ್ನೇಶಪ್ರಮುಖಾಃ ಸರ್ವೇ ಮಿತ್ರಾತ್ ಕಿಂಚಿತ್ ಗುಣಾಧಮಾ ಇತಿ ತಾರತಮ್ಯೇ ॥ ೩೪ ॥

**ಶ್ರೀ ಜಗನ್ನಾಥದಾಸರ ಬೃಹತ್ತಾರತಮ್ಯ ಪದ** :–ಇಂದ್ರನಾವೇಶ

ಯುತ ಆರು ರೂಪಗಳುಳ್ಳ ನಾಸತ್ಯ ದಸ್ರರಿಗೆ ॥ ೨೬ ॥ ವಿವಿದ ಮೈಂದ ತ್ರಿಶಿಖ ನಕುಲ ಸಹದೇವ ವಿಭು । ಅವತಾರ ಅಶ್ವಿನಿ ದೇವತೆಗಳ ॥ **ಲವಣಾದಿ ಷಡ್ರಸಗಳೊಳಿದ್ದು ಜೀವರಿಗೆ ವಿವಿಧ ಭೋಗಗಳಿತ್ತು ಸಂತೈಪರೆಂದೆಂದು ಆನಮಿಪೆ ॥ ೨೭ ॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ವಿವಿದ' ಇತಿ ॥ "ಅಶ್ವಿನೌ ತೌ ಬಭೂವತುಃ ॥" ತೌ ವಿವಿದಶ್ಚ ಮೈಂದಃ ॥ ತತ್ರ ಕನೀಯಸಃ ತು "ಆವೇಶಃ ಐಂದ್ರಃ ವರದಾನತಃ ಅಭೂತ್ ತತೋ ಬಲೀಯಾನ್ ವಿವಿದೋ ಹಿ ಮೈಂದಾತ್ ॥" '**ಇವರೊಳು**' ವಿವಿದೇ ॥ ಇತೀಕ್ಷಂತ್ಯಾಃ ಕಾಂತಾವಶ್ವಿನೌ ತೌ ಶೀಘ್ರಂ **ಪ್ರಾಪ್ತೌ** ಪುತ್ರಕೌ ತತ್ರ ಸೂತೌ ॥ ತಾವೇವ ದೇವೌ ನಕುಲಃ ಪೂರ್ವಜಾತಃ ಸಹದೇವೋಽಭೂತ್ ಪಶ್ಚಿಮಸ್ತು ಇತಿ॥ ತ್ರಿಶಿಖ ವಿಭೂ ಚತುರ್ಥ ಪಂಚಮೇಂದ್ರೌ ॥ ದ್ಯಾವಾಪೃಥಿವ್ಯೌ॥ ಋಭುರಿತ್ಯೇಕೋ ಗಣಃ ॥ ವಿಷ್ವಕ್ಸೇನಃ ವಾಯುಜಃ ಶೇನ ತುಲ್ಯಃ ॥ ಅಯಂ ಹರಿಪಾರ್ಷದಃ ॥ ೨೭ ॥

## ಕನ್ನಡಾರ್ಥ

ವಿವಿದ, ಮೈಂದ, ನಕುಲ, ಸಹದೇವ, ವಿಭು, ತ್ರಿಶಿಖ ಇವು ಅಶ್ವಿನೀದೇವತೆಗಳ ಅವತಾರಗಳು. ನಕುಲ, ಸಹದೇವರು ಪಾಂಡುರಾಜನ ಪುತ್ರರೆಂದು ಪ್ರಸಿದ್ಧವಿದೆ. ವಿವಿದ, ಮೈಂದರಿಬ್ಬರು ಕಪಿಗಳು; ತ್ರೇತಾಯುಗದಲ್ಲಿ ಶ್ರೀರಾಮ ಸೇವಾರ್ಥವಾಗಿ ಜನಿಸಿದವರು. ಚಿಕ್ಕವನಾದ ಮೈಂದನಿಗಿಂತಲೂ ವಿವಿದನು ಹೆಚ್ಚು ಬಲಿಷ್ಠನು. ವಿವಿದನಲ್ಲಿ ಇಂದ್ರನ ಆವೇಶವೂ, ವರಬಲವೂ ಇದ್ದುದರಿಂದ ಅವನು ಅತಿ ಬಲಾಢ್ಯನಾಗಿದ್ದನು ಎಂಬ ಕಥೆಯು ತಾತ್ಪರ್ಯನಿರ್ಣಯದಲ್ಲಿ ಉಕ್ತವಾಗಿರುತ್ತದೆ. ಕುಂತೀದೇವಿಯಲ್ಲಿ ಒಂದೇ ಕಾಲದಲ್ಲಿ ಇಬ್ಬರು (ಅವಳಿ) ಮಕ್ಕಳಾಗುವ ಇಚ್ಛೆಯಿಂದ ಯಾವಾಗಲೂ ಕೂಡಿಯೇ ಇರುವ, ಕೂಡಿಯೇ ಅವತರಿಸುವ ಅಶ್ವಿನೀದೇವತೆಗಳನ್ನು ಮಂತ್ರದಿಂದ ಜಪಿಸಿ ಕರೆದಳು. ಕೂಡಲೇ ಅಶ್ವಿನೀ ದೇವತೆಗಳು ಅವಳಲ್ಲಿ ಪುತ್ರರಾಗಿ ಜನಿಸಿದರು. ಅವರೇ ನಕುಲ-ಸಹ

ದೇವರು. ಅವರಲ್ಲಿ ಮೊದಲನೆಯವನು ನಕುಲನು; ಅನಂತರದವನು ಸಹದೇವನು. ತ್ರಿಶಿಖ ಹಾಗೂ ವಿಭು ಇವರಿಬ್ಬರು ಕ್ರಮದಿಂದ ನಾಲ್ಕನೆಯ ಹಾಗೂ ಐದನೆಯ ಮನ್ವಂತರಗಳಲ್ಲಿ ಇಂದ್ರಪದವಿಯಲ್ಲಿದ್ದವರು. ಆಗ ಇಂದ್ರರಾಗಿದ್ದರು.

'ಋಭು' ಎಂಬುದೊಂದು ದೇವತಾಗಣವು. ವಿಷ್ವಕ್ಸೇನನು ವಾಯು ಪುತ್ರನು. ಆಕಾಶಾಭಿಮಾನಿಯಾದ ಗಣೇಶನಿಗೆ ಸಮಾನನು; ಪರಮಾತ್ಮನ ಪಾರ್ಷದನು. ॥ ೩೪ ॥

**ಅವತರಣಿಕಾ :**—ಈ ಪದ್ಯದಿಂದ ೧೯ನೇ ಕಕ್ಷದಲ್ಲಿ ಕೆಲವರನ್ನು ಸಾಮೂಹಿಕವಾಗಿ ಮುಂದೆ ೩೭ ಪದ್ಯದವರೆಗೆ ಪೇಳುತ್ತಾರೆ. ಈ ಕರ್ಮಜ ದೇವತೆಗಳು ೧೯ನೇ ಕಕ್ಷದಲ್ಲಿ ಬಹು ಜನರಿದ್ದಾರೆ.

**ಪಾವಕಾಗ್ನಿ ಕುಮಾರರೆನಿಸುವ ।**
**ಚ್ಯಾವನ ಉಥ್ಯ ವಚುನಿ ಚಾಕ್ಷುಷ ।**
**ರೈವತ ಸ್ವಾವರೋಚಿ ಷೋತ್ತಮುಬ್ರಹ್ಮ ರುದ್ರೇಂದ್ರ ॥**
**ದೇವ ಧರ್ಮನು ದಕ್ಷ ನಾಮಕ ।**
**ಸಾವರಣಿ ಶಶಿಬಿಂದು ಪೃಥು ಪ್ರೀ- ।**
**ಯುವ್ರತನು ಮಾಂಧಾತ ಗಯನು ಕಕುತ್ಸ್ಥದೌಷ್ಯಂತಿ॥ ೩೫ ॥**

**ಪದ್ಯಾರ್ಥ :**— ಪಾವಕಾಗ್ನಿ ಕುಮಾರನೆನಿಸುವ=ಮುಖ್ಯ ಅಗ್ನಿ ದೇವರ ಹಿರಿಯ ಮಗ ಪಾವಕನೆಂದು ಹೆಸರು. ಚ್ಯಾವನ ಉಚಥ್ಯಮುನಿ= ಇವರಿಬ್ಬರು ಚವನ,ಉಚಥ್ಯರೆಂಬುವರು ಅಗ್ನಿಪುತ್ರರು.ಮತ್ತು(೧)ಪ್ರವಾಹ ವಾಯುಪುತ್ರ ಮರೀಚಿ ಮತ್ತು (೨) ಇಂದ್ರಪುತ್ರ ಜಯಂತ, ಶಂಭು. ಬಲಪಾದಕ್ಕೆ ಜಯಂತ, ಎಡಪಾದಕ್ಕೆ ಶಂಭು ಇವರಿಬ್ಬರು ಕಲಾಭಿಮಾನಿಗಳು. ಇದರಲ್ಲಿ ಪಾದಮಾನಿ ಜಯಂತನೊಳಗೆ ಯಜ್ಞನಾಮಕ ಪರಮಾತ್ಮನ ಆವೇಶವಿರುವುದರಿಂದ ತತ್ವಾಭಿಮಾನಿಗಳ ೧೯ನೇ ಕಕ್ಷದಲ್ಲಿದ್ದ ಗಣೇಶಾದಿಗಳಿಗೆ ಸಮನೆಂದು ಶ್ರೀಮಂತ್ರಾಲಯ ಗುರುರಾಜರ ಪ್ರಮೇಯ

ಸಂಗ್ರಹ ಉಕ್ತಿ ಶ್ರೀ ದಾಸರಾಯರ ೮ನೇ ಸಂಧಿ ೧ನೇ ಪದ್ಯಾದಿ ಪಾದ ಪಾನಿ ಜಯಂತಸೊಳಗೆ ಸವೇ(ಧನಾಮಕನಿಷ್ಪನ್ನಂಬ ವಚನವು ಪ್ರೊ(ಧ್ವಲಿತವಾಗಿದೆ.) ಮುನಿ=ಸನತ್ಕುಮಾರ ವಿನಾ ಸನಕಾದಿ ದತ್ತಾತ್ರ್ಯಷ್ಟ ಋಷಿಗಳು ಯತ್ಯಾಶ್ರಮಿಗಳು. ಕಶ್ಯಪಾದಿ ೮೦ ಜನ ಋಷಿಗಳು ಗೃಹಸ್ಥಾಶ್ರಮಿಗಳು, ಬಲ್ಯಾದಿ ಸಪ್ತೇಂದ್ರರು, ಚಾಕ್ಷುಷಾದಿ ೧೧ ಜನ ಇಂದ್ರರು, ಪ್ರಹ್ಲಾದ ಪ್ರಿಯವ್ರತಾದಿ ೧೦೦ ಜನ ರಾಜರು, ಏಳು ಜನ ಪಿತೃಗಳು, ಅಷ್ಟಗಂಧರ್ವರು, ಜಯ-ವಿಜಯಾದಿ ದ್ವಾರಪಾಲಕರು, ಶುಕ್ರ, ರಾಹು, ಮಂಗಳಾದಿಗಳು, ದಿಗಭಿಮಾನಿ ದೇವತೆಗಳು, ಐರಾವತ, ನಂದಿ ಮೊದಲಾದ ದೇವತೆಗಳ ವಾಹನಾದಿಗಳು, ಅರುಣ, ವಿಶ್ವಕರ್ಮ, ಸುರಭಿ, ಕಲ್ಪವೃಕ್ಷಾದಿ ದೇವತೆಗಳು, ಅಹೋರಾತ್ರ ಪೌರ್ಣಮಾಸ್ಯಾದಿ ದೇವತೆಗಳು, ಔಷಧಾಭಿಮಾನಿ ದೇವತೆಗಳು, ಅಭಜಿತಾದಿ ನಕ್ಷತ್ರ ದೇವತೆಗಳು, ಕಲಾಭಿಮಾನಿ ದೇವತೆಗಳು, ಪರ್ವತ, ತಟಾಕ, ಸಾರಸಾಭಿಮಾನಿಗಳು, ಹವಿಃ, ಕಪಾಲ, ಯೂಪಾದಿ ಸಮಸ್ತಯಜ್ಞಪದಾರ್ಥ ದೇವತೆಗಳು. ತ್ವಕ್ ಚರ್ಮಾಭಿಮಾನಿ ದೇವತೆಗಳು. ಎಲ್ಲರೂ ಇದೇ ೧೯ನೇ ಕಕ್ಷನಲ್ಲಿರುವರು. ಇದರಲ್ಲಿ ಮನುಗಳ ಹೆಸರು, ಕೆಲ ರಾಜರ ಹೆಸರು, ಕೆಲ ಗಂಧರ್ವರ ಹೆಸರು, ಬೃಹದ್ಭಾಷ್ಯಾನುಸರಿಸಿ ದಾಸರಾಯರು ಹೇಳುತ್ತಾರೆ. (೧) ಚಾಕ್ಷುಷ, (೨) ರೈವತ, (೩) ಸ್ವಾರೋಚಿಷ, (೪) ಉತ್ತಮ, (೫) ಬ್ರಹ್ಮಸಾವರ್ಣಿ, (೬) ರುದ್ರಸಾವರ್ಣಿ, (೭) ಇಂದ್ರಸಾವರ್ಣಿ (೮) ದೇವಸಾವರ್ಣಿ (೯) ಧರ್ಮಸಾವರ್ಣಿ, (೧೦) ದಕ್ಷಸಾವರ್ಣಿ, (೧೧) ಸಾವರಣಿ— ಈ ಹನ್ನೊಂದು ಜನರ ಹೆಸರು ಇವೆ. ಇವನ್ನೇ ದಾಸರಾಯರು ಮನುಗಳು, ಚಾಕ್ಷುಷ, ರೈವತ, ಸ್ವಾರೋಚಿಷೋತ್ತಮ, ಬ್ರಹ್ಮ-ರುದ್ರೇಂದ್ರ, ದೇವ-ಧರ್ಮನು, ದಕ್ಷನಾಮಕ, ಸಾವರಣಿ-ಎಂದು ೧೧ ಜನರ ಸ್ತೋತ್ರಗೈದಿದ್ದಾರೆ. ಈ ಮನುಗಳ ನಾಮ ಸಾರ್ಥಕ್ಯವನ್ನು ಗರುಡ ಬ್ರಹ್ಮಕಾಂಡದಂತೆ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ವಿವರಿಸಿದ್ದಾರೆ. ಮುಂದೆ ರಾಜರ ಪೈಕಿ ಕೆಲ ರಾಜರು-ಶಶಿಬಿಂದು, ಪೃಥು, ಪ್ರಿಯವ್ರತನು, ಮಾಂಧಾತ, ಗಯ, ಕಕುತ್ಸ್ಥ, ದೌಷ್ಯಂತಿ, ಭರತರಾಜ-ಮಿಕ್ಕಾದವರ ಕೆಲರನ್ನು ಮುಂದಿನ ಪದ್ಯದಲ್ಲಿ ಹೇಳುತ್ತಾರೆ.

**ಭಾವಸೂಚನ** :—ಪಾವಕೇತಿ ಅಗ್ನಿಯ ಹಿರಿಯ ಹುಡುಗ. ಚಿಕ್ಕವರು ಋಷಿಗಳು. "ಪಾವಕೋಗ್ನೇಃ ಪ್ರಥಮಜ ಉಚಿಥ್ಯಃ ಚವನಃ ತಸ್ಯೇತಿ ತಾರತಮ್ಯೇ ॥ ೩೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ತತ್ರ ಸ್ಥಿತಮೇಕಮಾಹ 'ಪಾವಕ' ಇತಿ ॥ ಅಗ್ನಿಜಃ ॥ ಸಾವರ್ಣಿಪದಂ ಪೃಥಗನ್ವಯಿ ॥ ಪಾವಕಃ ಪಾವಮಾನಿಶ್ಚೇತ್ಯುಕ್ತಾಗ್ನಿಜ್ಯೇಷ್ಠಪುತ್ರಃ॥ ವಾಯೋಃ ಸುತಃ ಮರುತ್ ತಸ್ಮಾದಗ್ನಿಃ ಪಾವಕಾಖ್ಯಃ ಇತ್ಯುಕ್ತೇಃ ಮರುನ್ನೈಚ್ಯಮ್ ॥ ಉಚಥ್ಯಚ್ಯಾವನಾವೃಷೀ ॥ ತದವರಮನೂನ್ ಆಹ 'ಚಾಕ್ಷುಷ' ಇತಿ ॥ ಚಾಕ್ಷುಷ ಇತ್ಯತ್ರ ಉಚಥ್ಯ ಇತ್ಯತ್ರ ಚ "ಅಶ್ವಿಪಶ್ಚಾದನ್ಯೇ ತತೋಽವರಾಃ ॥" 'ಅನ್ಯೇ' ಉಕ್ತಮನುಭ್ಯಃ ಅನ್ಯೇ ಮನವಃ॥ "ತೇ ಅಶ್ವಿಭ್ಯಃ ಪಶ್ಚಾತ್" ಇತಿ ತಟ್ಟೀಕಾ ॥ ಚ್ಯಾವನೋಚಥ್ಯವೈನ್ಯಾಶ್ಚ ಶಶಿಬಿಂದುಶ್ಚ ಹೈಹಯಃ ॥ ತದ್ವಚ್ಚ ವಿಪ್ರರಾಜನ್ಯ ವಿಶೇಷೋತ್ರಾಪಿ ಕಶ್ಚನ ॥ ತದ್ವತ್ ಪ್ರಿಯವ್ರತಶ್ಚಾಪಿ ಕಾರ್ತವೀರ್ಯ ಪೃಥುಶ್ಚೈವ ದೌಷ್ಯಂತಿಃ ॥ ಹರಿಂ ಚವನತೇ ವಶೀಕರೋತಿ ಇತಿ ಚ್ಯವನಃ ॥ ಉಚ-ಯೇತಿ ಹರಿಂ ಪ್ರಾಹುಃ ಉಚಯೇತಿ ಚ ತದ್ವಿದಃ ॥ ತಥಾಪಯತಿ ಯಸ್ಮಾತ್ ಸಃ ಉಚಥ್ಯಃ ॥ ರೈ ತು ದ್ರವ್ಯಂ ಚ ಸಂಪ್ರೋಕ್ತಂ ಹರೇ-ರರ್ಪಣಾಯೈವೇತಿ ರೈವತಃ ॥ ಚಕ್ಷುಷ್ಯಂತರ್ಗತಂ ವಿಷ್ಣುಂ ವಿಜಾನನ್ ಚಾಕ್ಷುಷಃ ॥ ಹರಿಜ್ಞಾನೇ ಸದಾ ಸ್ವಾವರಾತ್ ಉತ್ತಮತ್ವಾತ್ ತಥಾ ॥ ಸ್ವತಂತ್ರಂ ಚ ಹರಿಂ ವೀಂದ್ರಂ ವ್ಯಜಾನಾತ್ ರೋಚಿಷಾ ಸದಾ ॥ ಸ್ವಾರೋಚಿಷಃ ॥ ಉತ್ತಮಾನಂದಪೂರ್ಣಂ ಹರಿಂ ವರ್ಣಯತೇ ಸದಾ ಬ್ರಹ್ಮಸಾವರ್ಣಿಃ॥ ರುಕ್ ರುಕ್ಮಂ ದ್ರುಃ ತತ್ಸ್ವರೂಪಂ ಹರಿಂ ವರ್ಣಯತೇ ಇತಿ ರುದ್ರಸಾವರ್ಣಿಃ ॥ ವೇದಪ್ರತಿಪಾದ್ಯೋತ್ತಮಂ ಸದಾ ವರ್ಣಯತೇ ಹರಿಂ ದೇವಸಾವರ್ಣಿಃ ॥ ಐಶ್ವರ್ಯಾತ್ ಉತ್ತಮಾನಂದಂ ಹರಿಂ ಸದಾ ವರ್ಣಯತೇ ಅತಃ ಜೇಂದ್ರಸಾವರ್ಣಿಃ ॥ ನಿತ್ಯಮುತ್ತಮಹರಿಂ ವರ್ಣಯಿತುಂ ದಕ್ಷು ಅತಃ ದಕ್ಷಸಾವರ್ಣಿಃ ॥ ಇತಿ ॥ ೩೫ ॥

**ಕನ್ನಡಾರ್ಥ**

ಅಲ್ಲಿ ಇರುವ ಮನುವಿನನ್ನು ಹೇಳುತ್ತಾರೆ–'ಪಾವಕ' ಎಂಬ ಪದ್ಯದಿಂದ ಪಾವಕನು ಅಗ್ನಿಪುತ್ರನು. 'ಸಾವರ್ಣಿ' ಎಂಬ ಪದವನ್ನು ಪ್ರತ್ಯೇಕವಾಗಿ ಅನ್ವಯಿಸಬೇಕು. 'ಪಾವಕಃ ಪವಮಾನಿಶ್ಚ' ಎಂಬುದಾಗಿ ಹೇಳಲ್ಪಟ್ಟ ಅಗ್ನಿ ಜ್ಯೇಷ್ಠಪುತ್ರನು ಪಾವಕನು. ವಾಯುಸುತನಾದ ಮರುತ್ತನಿಂದ ಅಗ್ನಿಯು ಪಾವಕನು. ಆದುದರಿಂದ ಪಾವಕನು ಮರುತ್ತಿನಿಂದ ಕಡಿಮೆಯವನು. ಉಚಥ್ಯ, ಚ್ಯವನರೆಂಬುವರು ಋಷಿಗಳು. ಇನ್ನುಳಿದ ಅವರಮನುಗಳನ್ನು ಹೇಳುತ್ತಾರೆ. 'ಚಾಕ್ಷುಷ' ಎಂಬುದಾಗಿ. ಅಶ್ವಿನೀದೇವತೆಗಳ ನಂತರ ಹಿಂದೆ ಹೇಳಿದ ಮನುಗಳನ್ನು ಬಿಟ್ಟು ಉಳಿದ ಮನುಗಳು ಕಡಿಮೆಯವರು ಎಂಬುದಾಗಿ ವಚನಗಳು ಇರುತ್ತವೆ. ಚ್ಯವನ, ಉಚಥ್ಯ, ಪೃಥು, ಶಶಿಬಿಂದು, ಕಾರ್ತವೀರ್ಯ ಇವರುಗಳು ಕರ್ಮಜರು. ಇದರಂತೆ ಭರತ ಮುಂತಾದ ರಾಜರ್ಷಿಗಳು ಹರಿಯನ್ನು ಪಠೀಕರಿಸುವುದರಿಂದ 'ಚ್ಯವನ'ರೆಂದು ಹೆಸರು. 'ಉಚ'=ಹರಿಯನ್ನು 'ಥ್ಯ'=ಹೊಂದುವವ ಹಾಗೂ ಹೊಂದಿಸುವವ ಆದುದರಿಂದ 'ಉಚಥ್ಯ' ಎಂದು ಹೆಸರು. ಹರಿಯಲ್ಲಿಯೇ 'ರೈ'=ದ್ರವ್ಯವನ್ನು ಸಮರ್ಪಿಸುವುದರಿಂದ 'ರೈವತ' ಎಂದು ಹೆಸರು. ಕಣ್ಣಿನಲ್ಲಿರುವ ಭಗವದ್ರೂಪವನ್ನು ತಿಳಿಯುವುದರಿಂದ ಚಾಕ್ಷುಷನೆಂದು ಹೆಸರು. ಹರಿಜ್ಞಾನದಲ್ಲಿ ಸ್ವಾವರರಿಂದ ಉತ್ತಮನಾದುದರಿಂದ ಉತ್ತಮನು. ಸ್ವತಂತ್ರನಾದ ಹರಿಯನ್ನು ತಿಳಿದುಕೊಳ್ಳುವುದರಿಂದ ಸ್ವಾರೋಚಿಷನು. ಆನಂದಪೂರ್ಣನಾದ ಹರಿಯನ್ನು ವರ್ಣಿಸುವುದರಿಂದ ಬ್ರಹ್ಮಸಾವರ್ಣಿ. ರುಕ್ಮಸ್ವರೂಪನಾದ ಹರಿಯನ್ನು ತಿಳಿಯುವುದರಿಂದ 'ರುದ್ರಸಾವರ್ಣಿ'. ವೇದಪ್ರತಿಪಾದ್ಯನಾದ ಉತ್ತಮ ಹರಿಯನ್ನು ಸದಾ ವರ್ಣಿಸುವುದರಿಂದ 'ದೇವಸಾವರ್ಣಿ'. ನಿರವಧಿಕ ಐಶ್ವರ್ಯವಿರುವುದರಿಂದ ಇಂದ್ರ ಶಬ್ದ ಮುಖ್ಯವಾಚ್ಯನಾದ ಹರಿಯನ್ನು ಸದಾ ವರ್ಣಿಸುವುದರಿಂದ 'ಇಂದ್ರ ಸಾವರ್ಣಿ'. ನಿತ್ಯವಲ್ಲಿಯೂ ಪರಮ ಪುರುಷನನ್ನು ನೋಡಿ ವರ್ಣಿಸುವುದರಲ್ಲಿ ದಕ್ಷನಾದುದರಿಂದ 'ದಕ್ಷ ಸಾವರ್ಣಿ'. ಹೀಗೆ ಮನುನಾಮಗಳ ಅರ್ಥವನ್ನು ತಿಳಿಯಬೇಕು. ॥ ೩೫ ॥

**ಅವತರಣಿಕಾ** :—ಹಿಂದಿನ ಪದ್ಯದಿಂದ ಮುಂದುವರಿದು, ಪೌಷ್ಯಂತಿ

ಭರತರಾಜನಿಂದ ಕೆಲವು ರಾಜರನ್ನೂ ಮತ್ತು ಅಷ್ಟಗಂಧರ್ವರ ಹೆಸರನ್ನೂ ಹೇಳುತ್ತಾರೆ.

**ಭರತ ಋಷಭಜ ಹರಿಣಜ ದ್ವಿಜ ।**
**ಭರತ ಮೊದಲಾದಖಿಳರಾಯರೊ ।**
**ಳಿರುತಿಹುದು ಶ್ರೀವಿಷ್ಣು ಪ್ರಾಣಾವೇಶ ಪ್ರತಿದಿನದಿ ॥**
**ವರದಿವಸ್ಪತಿ ಶಂಭುರಧ್ಭುತ ।**
**ಕರೆಸುವನು ಬಲಿವಿಧೃತ ಧೃತ ಶುಚಿ ।**
**ನೆರೆಖಲೂಕೃತ ಧಾಮ ಮೊದಲಾದಷ್ಟಗಂಧರ್ವ ॥ ೩೬ ॥**

**ಪದ್ಯಾರ್ಥ** :—ದೌಷ್ಯಂತಿ ಭರತ=ದುಷ್ಯಂತರಾಜನಲ್ಲಿ (೧)ಶಕುಂತಲಾನಿಂದ ಪುಟ್ಟಿದ ಭರತರಾಜ (೨) ಋಷಭನಾಮಕ ಪರಮಾತ್ಮನಿಂದ ಪುಟ್ಟಿದ ಭರತರಾಜ, (೩) ಹರಿಣಜ = ಜಿಗರೆಜನ್ಮದಿ ಪುಟ್ಟಿದವನು (೪) ದ್ವಿಜ=ಕೊನೆಯಜನ್ಮ ಬ್ರಾಹ್ಮಣನಾಗಿ ಪುಟ್ಟಿದ ಭರತರಾಜನೇಮೊದಲಾದ ಖಿಳರಾಯರೊಳಿರುತಿಹುದು ಶ್ರೀವಿಷ್ಣು ಪ್ರಾಣಾವೇಶ ಪ್ರತಿದಿನ = ಈ ನೂರುಜನ ರಾಜರಲ್ಲಿ ಸದಾ ಶ್ರೀವಿಷ್ಣುವಿನ ಮತ್ತುಪ್ರಾಣದೇವರ ಆವೇಶವು ಪ್ರತಿದಿನ ಇರುತಿಹುದು = ಸದಾ ಸರ್ವಕಾಲದಿ ಶ್ರೀಹರಿವಾಯುಗಳ ಆವೇಶ ಇರುವುದು

ಇನ್ನು ೮ ಜನ ಗಂಧರ್ವರ ಪೆಸರು ಪೇಳುತ್ತಾರೆ.

"ಬಲಿರದ್ಭುತ ಶಂಭೂ ಚ ವಿಧೃತಃ ಕೃತಧಾಮಕಃ। ದಿವಸ್ಪತಿಶ್ಶುಚಿಶ್ಚೈವ ಗಂಧರ್ವಾಸ್ತ್ವಷ್ಟಕಂ ತಥಾ" ಎಂಬುವಂತೆ ವರ = ಶ್ರೇಷ್ಠನಾದ (೧) ದಿವಸ್ಪತಿ, (೨) ಶಂಭು, (೩) ಅದ್ಭುತ, (೪) ಬಲಿ, (೫) ವಿಧೃತ, (೬) ಧೃತ, (೭) ಶುಚಿ, ನೆರೆ ಖಲು=ನೆರೆ ಒಟ್ಟುಗೂಡಿ ಖಲು=ನಿಶ್ಚಯವಾಗಿ (೮) ಕೃತಧಾಮ ಮೊದಲಾದಷ್ಟ ಗಂಧರ್ವರೆಂದು, ಕರೆಸುವರು= ಈ ನಾಮಗಳಿಂದ ೮ ಜನ ಗಂಧರ್ವರೆಂದು ಕರೆಸುತ್ತಾರೆ.

**ಭಾವಸೂಚನ** :—ಭರತೇತಿ ॥ ಋಷಭನಾಭಿಸುತೋ ಹರಿಃ ॥ ಹರಿ

ಣಜ = ಅದೊಂದುರೂಪ, "ವೃಷಭಾದ್ಧರಿಣಾದ್ವಿಪ್ರಾತ್ರಿಜನ್ಮಾ ಭರತ ಸ್ತಥಾ ॥ ಮಾಂಧಾತೇತ್ಯಾದಿ ರಾಜಾನೋ ವಿಷ್ಣ್ವಾವೇಶಯುತಾಃ ಸದೇತಿ ತಾರತಮ್ಯೇ ॥ ೩೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಭರತ" ಇತಿ॥ ಋಷಭಾತ್- ಹರಿಣಾತ್- ವಿಪ್ರಾತ್ ತ್ರಿಜನ್ಮಾ ಭರತಃ ॥ "ಭರತಃ ತಥಾ॥" ಶಶಿಬಿಂದುಶ್ಚ ಮಾಂಧಾತಾ ಕಕುತ್ಸ್ಥಾದ್ಯಾಃ ತಥಾಪರೇ ॥ ಸರ್ವೇ ತೇ ವಿಷ್ಣುನಾವಿಷ್ಟಾಃ ವಿಷ್ಣೋರ್ಭಿನ್ನಾಃ ತಥೈವ ಚ ॥ ಶತಾವರಾಶ್ಚ ದೇವೇಭ್ಯಃ ಕರ್ಮದೇವಾಃ ಇತೀರಿತಾಃ ॥ ಕರ್ಮ ದೇವಗಣಾಃ ಅಷ್ಟಗಂಧರ್ವಾಃ ॥ ೩೬ ॥

## ಕನ್ನಡಾರ್ಥ

ಭರತಮಹಾರಾಜನಿಗೆ ಮೂರು ಜನ್ಮಗಳು. ಋಷಭನಾಮಕ ಹರಿಯಿಂದ ಜನನ ಒಂದುಸಲ ಚಿಗರೆಯ ಮರಿಯಾಗಿ ಹುಟ್ಟಿದುದು. ಎರಡನೆಯ ಸಲ ಆಂಗೀರಸನೆಂಬ ವಿಪ್ರನಲ್ಲಿ ಹುಟ್ಟಿದುದು. ಮೂರನೆಯ ಸಲ ಭರತ, ಶಶಿಬಿಂದು, ಮಾಂಧಾತಾ, ಕುಕುಸ್ಥ ಮುಂತಾದವರೆಲ್ಲರೂ ವಿಷ್ಣುವಿನ ಆವೇಶಯುಕ್ತರು; ವಿಷ್ಣು ಭಿನ್ನರು. ಕರ್ಮಜ ದೇವತೆಗಳಿಗೆ ಸಮಾನರು ಕರ್ಮಜ ದೇವತೆಗಳ ಗಣವಲ್ಲಿಯೇ ಅಷ್ಟಗಂಧರ್ವರು ಸೇರಿರುತ್ತಾರೆ.॥೩೬॥

**ಅವತರಣಿಕಾ** :— ಕರ್ಮಜ ಕಕ್ಷವಲ್ಲಿ ಸೇರಿದ ಎಲ್ಲರೂ ಅಗ್ನಿಗೆ ನೂರು ಗುಣದಿಂದ ಕಡಿಮೆ. ವಿಘ್ನೇಶಗೆ ಕಿಂಚಿತ್ ಗುಣ ಕಡಿಮೆ. ಪರ್ಜನ್ಯಾದಿಗಳು ಎಂದು ಅರ್ಥರುಚಿಯಲ್ಲಿ ಪೇಳಿ, ಮುಂದೆ ಅರ್ಥರುಚಿಯಲ್ಲಿ ೨೦ನೇ ಕಕ್ಷವಲ್ಲಿ ಪರ್ಜನ್ಯ ಗಂಗಾದಿಗಳ ವಿ॥ ಹೇಳುತ್ತಾರೆ.

**ಅರಸುಗಳು ಕರ್ಮಜರು ವೈಶ್ವಾ- ।**
**ನರಗಧಮ ಶತಗುಣದಿ ವಿಘ್ನೇ- ।**
**ಶ್ವರಗೆ ಕಿಂಚಿದ್ಗುಣ ಕಡಿಮೆ ಬಲಿ ಮುಖ್ಯ ಪಾವಕರು ॥**
**ಶರಭ ಪರ್ಜನ್ಯಾಖ್ಯಮೋಘಪ ।**

**ತರಣಿ ಭಾರ್ಯಾ ಸಂಜ್ಞೆ ಶಾರ್ವರಿ।**
**ಕರನ ಪತ್ನೀ ರೋಹಿಣೀ ಶಾಮಲಾ ದೇವಕಿಯು ॥ ೩೭ ॥**

**ಪದ್ಯಾರ್ಥ** :—ಅ ರ ಸು ಗ ಳು ಕರ್ಮಜರು=ಕರ್ಮಜರಾಜರು, ವೈಶ್ವಾನರಗೆ=ಅಗ್ನಿದೇವರಿಗೆ, ಶತಗುಣದಿ ಅಧಮರು ನೂರು ಗುಣದಿಂದ ಕಡಿಮೆ. ಮತ್ತು ವಿಘ್ನೇಶ್ವರಗೆ=ಗಣೇಶನಿಗೆ, ಕಿಂಚಿದ್ಗುಣ ಕಡಿಮೆ=ಸ್ವಲ್ಪ ಗುಣದಿಂದ ಕಡಿಮೆ. ಬಲಿಮುಖ್ಯ=ಬಲಿಚಕ್ರವರ್ತಿ ಮೊದಲಾದ ರಾಜರು ಪಾವಕರು=ಅಗ್ನಿಪುತ್ರಾದಿಗಳು ಕಿಂಚಿತ್ ಗುಣ ಕಡಿಮೆ. ಮುಂದೆ೨೦ನೇ ಕಕ್ಷದ ದೇವತೆಗಳನ್ನು ಹೇಳುತ್ತಾರೆ. ಮೇಘಪ=ಮೇಘಾಧಿಪತಿ ಪರ್ಜನ್ಯಾಖ್ಯ=ಪರ್ಜನ್ಯನಾಮಕ ಸೂರ್ಯನೇ ಶರಭ=ರಾಮಾವತಾರದಲ್ಲಿ ಶ್ರೀರಾಮಸೇವೆಗೆ **ಶರಭ**ನೆಂಬ ಕಪಿಯಾಗಿ ಅವತಾರ ಮಾಡಿದನು. ತರಣಿ ಭಾರ್ಯಾ ಸಂಜ್ಞೆ=ವಿವಸ್ವಾನ್ ನಾಮಕ ಸೂರ್ಯನ ಪತ್ನಿ, ಸಂಜ್ಞಾದೇವಿ ಶಾರ್ವರೀಕರನ ಪತ್ನಿ ರೋಹಿಣಿ=ಚಂದ್ರದೇವನ ಹೆಂಡತಿ ರೋಹಿಣಿ ದೇವಿ, ಶಾಮಲಾ=ಯಮದೇವರ ಹೆಂಡತಿಯು ಶಾಮಲಾದೇವಿಯೇ ದೇವಕಿಯು. ಈಕೆಯು ಧರ್ಮರಾಜನೀತಪತ್ನಿಯೆಂದು ಮುಂದಿನ ಪದ್ಯಕ್ಕೆ ಸಮನ್ವಯ ॥ ೩೭ ॥

**ಭಾವಸೂಚನ** :—ಅರಸೇತಿ-ಬಲ್ಯಾದ್ಯಾಃ ಕಾರ್ತವೀರ್ಯಾದ್ಯಾಃ ಕರ್ಮದೇವಾಃ ಪ್ರಕೀರ್ತಿತಾ ಇತಿ ತಾರತಮ್ಯೇ ॥ ಶತೇತಿ ॥ ಪಾವಕಾದ್ಯಾಃ ಕರ್ಮಜಾಶ್ಚ ವಹ್ನೇಃ ಶತಗುಣಾಧಮಾ ಇತ್ಯುಕ್ತೇಃ॥ವಿಘ್ನೇಶೇತಿ ॥ "ವಿಘ್ನೇ"ಶಾವಘನಾಃ ಪ್ರೋಕ್ತಾ ಇತ್ಯುಕ್ತೇಃ ॥ ಶರಭೇತಿ ॥ ರಾಮಾವತಾರೇ ಶರಭೇತಿ ಮಹಾತ್ಮಾ ಸ ವಾನರಸ್ಸ ತು ಪರ್ಜನ್ಯ ಏವೇತಿ ಗಾರುಡೇ ॥ ಶಾರ್ವರೀಕರ=ಚಂದ್ರ ॥ ದೇವಕೀ ಶಾಮಲಾ ಪುರಾ ॥ ಚಂದ್ರಸ್ತ್ರೀ ರೋಹಿಣೀ ಚೈವ ಸೂರ್ಯಭಾರ್ಯಾ ಚ ಸಂಜ್ಞಿಕಾ ಇತ್ಯುಕ್ತೇಃ ॥ ೩೭ ॥

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರಮ್ಯ ಪದ** :— **ಕರ್ಮಜ ದೇವತೆಗಳ** ಕಕ್ಷದಲ್ಲೇ ಇರುವರನ್ನು ಸಾಮೂಹಿಕವಾಗಿ ೭

ನುಡಿಗಳಲ್ಲಿ ಪೇಳಿದ್ದಾರೆ. ಕೆಲವು ಹೊಸಹೊಸ ವಿಷಯಗಳಿವೆ. ದಯವಿಟ್ಟು ಮನನಗೈದು ಅನುಗ್ರಹ ಪಡೆಯುವದು.'ನಾರದನ **ಶಿಷ್ಯಪ್ರಹ್ಲಾದ ಬಾಹ್ಲೀಕ** ಸ,। ಮೀರ ಸಂಯುಕ್ತ **ಸಹ್ಲಾದ ಶಲ್ಯಾ,** ಮೂರನೆಯ**ನುಹ್ಲಾದ** ಸವಿತೃನಾಮದಲಿ । ತೋರಿದನು **ದೃಷ್ಟಕೇತು**ಯೆನಿಸಿ ಧರೆಯೊಳಗೆ ॥ ೫೦ ॥ ಕಾಮಾಂಶಯುಗ್ ಜಯಂತನು ಬಭ್ರುವಹ ವರುಣ। **ಭೌಮನು ಇರಾವಾನ್ ಚಿತ್ರಗುಪ್ತಾ**॥ ನಾಮಕ **ಸುಹೋತ್ರನು ಮಣಿಭದ್ರಾಖ್ಯ ಸುತರ್ಪ್ರಮ**ನವತಾರವೆಂದರಿದು ನಿತ್ಯದಲಿ ॥ ೫೧ ॥ (ಇವೆಲ್ಲ ವಿಷಯ ಹರಿಕಥಾಮೃತಸಾರದಲ್ಲಿ ಪೇಳಿಲ್ಲ.) ಚ್ಯಾವನೋಚತ್ಥ್ಯ ಋಷಿಗಳು ನೂರು ಚಾಕ್ಷುಷನು । ರೈವತಸ್ವಾರೋಚಿಷೋತ್ತಮನು । ಸಾವರ್ಣಿ ಬ್ರಹ್ಮ-ರುದ್ರಾಹ್ವಸಾವರಣಿತ್ರಯ। ದೇವೇಂದ್ರ ದಕ್ಷಧರ್ಮಾಖ್ಯಸಾವರ್ಣಿ ಗಾನವಿಮಿಪೆ ॥ ೫೨ ॥ ಮನುಗಳೇಕಾದಶರು ತದನಂತರದಿ ವಿರೋಚನ ಪುತ್ರ ಬಲ್ಯಾದಿ ಭಾವೀಂದ್ರರಾ ॥ ಇನಿತು ನಾಮವ ಪೇಳೆ ಕರ್ಮದೇವತೆಗಳೆಂ। ದೆನಿಸುವರು ಲೋಕದೊಳು ಸರ್ವತ್ರ ಸರ್ವದ ॥ ೫೩ ॥ ಬಲಿರದ್ಭುತ ಶಂಭು ವಿಧೃತಿ ಧೃತಧಾಮ ನಿ । ಷ್ಕಲುಷನು ದಿವಸ್ಪತಿಯು ಶುಚಿ ಸಪ್ತರಾ ॥ ಕುಲಿಶಧರ ಪದಯೋಗ್ಯರನ್ಯ ಕರ್ಮಜ ನೃಪರು । ಜಲಜಾಕ್ಷ ವಿಷ್ಣುನಾವೇಶಯುತರೆಂದು ॥ ೫೪ ॥ ಕೃತವೀರ್ಯ ತನಯ ಶಶಿಬಿಂದು ಮಾಂ । ಧಾತ ಗಯ ನಾಮಕ ಕಕುತ್ಸ್ಥ ಪ್ರಿಯ ವ್ರತತ್ರಿಜನ್ಮಾ ॥ ಧೃತ ಭರತ ದೌಷ್ಯಂತಿ ಭರತ ಮುಖ್ಯ ರಾಜನ್ಯಶತ, ಅಷ್ಟಗಂಧರ್ವ ಸಪ್ತಪಿತೃಗಳಿಗೆ ॥ ೫೫ ॥ ದ್ವಿನವತಿ ಅಪ್ಸರಸ್ತ್ರೀಯರು ಮೊದಲಾದ ಶತ । ಗುಣದಿಂದಧಮರು ಪರ್ಜನ್ಯಗಿಂದ। ದನು ಜಾರಿ ಆವೇಶ ಬರಲು ಪರ್ಜನ್ಯಾದಿ। ಅನಿಮಿಷರಿಗುತ್ತಮರು ಕರ್ಮದೇವತೆಗಳೆಂದಾನಮಿಪೆ ॥ ೫೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಅರಸು' ಇತಿ ॥ ಪಾವಕಾದ್ಯಾಃ ಕರ್ಮಜಾಶ್ಚ ವಹ್ನೇಃ ಶತಗುಣಾಧಮಾಃ । ವಿಷ್ಣೇಶಾಪ್ರಥಮಾಃ ಪ್ರೋಕ್ತಾಃ ಪರ್ಜನ್ಯಾದುತ್ತಮಾಃ॥ ಪರ್ಜನ್ಯಃ ಶರಭಃ ಜಜ್ಞೇ ॥ ವಿರಾಟ್ ಪರ್ಜನ್ಯ ವದಪ್ಪರುಣೀ ಚ ತಥಾ ಸಂಜ್ಞಾ ಚ ರೋಹಿಣೀ ಧರ್ಮಿಣೀ ಚೇತಿ॥ದೇವಕೀ ಶ್ಯಾಮಲಾ ಪುರಾ॥೩೬॥

## ಕನ್ನಡಾರ್ಥ

ಪಾವಕ ಮುಂತಾದ ಕರ್ಮಜರು ಅಗ್ನಿಗಿಂತ ನೂರು ಗುಣ ಕಡಿಮೆಯುವರು. ಗಣೇಶನಿಗಿಂತ ಕಡಿಮೆಯುವರು. ಪರ್ಜನ್ಯನಿಗಿಂತ ಉತ್ತಮರು. ಶರಭನೆಂಬ ಕಪಿಯು ಪರ್ಜನ್ಯಾವತಾರ; ಮೇಘಗಳ ಅಧಿಪನು. ವಿರಾಟ (ಉಷಾ), ಸಂಜ್ಞಾ, ಗಂಗಾ, ಪರ್ಜನ್ಯ, ರೋಹಿಣೀ, ಶಾಮಲಾ ಇವರು ಕರ್ಮಜರಿಂದ ಕಡಿಮೆಯುವರು. ಯಮಪತ್ನಿ ಶಾಮಲಾ ದೇವಿಯೇ ದೇವಕಿಯೆನಿಸಿದವಳು. ॥ ೩೭ ॥

**ಅವತರಣಿಕಾ** :—ಈ ಹಿಂದಿನ ಪದ್ಯದಿಂದ ಈ ಪದ್ಯ ಅರ್ಥರುಚಿ ಸಮನ್ವಯ.ಮುಂದೆ ಸ್ವಾಹಾದೇವಿ ಉಷಾದೇವಿಯರ ತಾರತಮ್ಯ ಹೇಳುತ್ತಾರೆ.



**ಅರಸಿಯುನಿಪಳು ಧರ್ಮರಾಜಗೆ ।**
**ವರುಣ ಭಾರ್ಯೋಷಾದಿ ಷಟ್ಕರು ।**
**ಕೊರತೆ-ಯೆನಿಪರು ಪಾವಕಾದ್ಯರಿಗೆರಡುಗುಣದಿಂದ ॥**
**ಎರಡು ಮೂರ್ಜನರಿಂದಧನು ಸ್ವಹ ।**
**ಕರೆಸುವಳುಷಾದೇವಿ ವೈಶ್ವಾ**
**ನರನ ಮಡದಿಗೆ ದಶಗುಣಾವರಳಶ್ವಿನೀ ಭಾರ್ಯಾ ॥ ೩೮ ॥**

**ಪದ್ಯಾರ್ಥ** :—ದೇವಕಿಯು = ಹಿಂದಿನ ಪದ್ಯದಿಂದ, ಅರಸಿಯೆನಿಪಳು. ಧರ್ಮರಾಜಗೆ=ಧರ್ಮರಾಜನ ಸ್ತ್ರೀ ಪತ್ನಿ ಎನಿಸುತ್ತಾಳೆ. ಈಕೆಯು ಶ್ರೀಕೃಷ್ಣನ ತಾಯಿ ದೇವಕಿ ಅಲ್ಲ. ಈ ದೇವಕಿಯು ಬೇರೆ ಶ್ಯಾಮಲಾ ದೇವಿ ರೂಪ ವರುಣಭಾರ್ಯಾ=ವರುಣದೇವರ ಹೆಂಡತಿ ಗಂಗಾದೇವಿಯು ಮೊದಲಾಗಿ ಷಟ್ಕರು ಆರುಜನರು(೧)ಗಂಗಾ (೨) ಸಂಜ್ಞಾ (೩) ಶಾಮಲಾ (೪) ರೋಹಿಣೀ (೫) ಅನಿರುದ್ಧ ಪತ್ನಿ=ಬ್ರಹ್ಮಾಂಡಾಭಿಮಾನಿ ಉಷಾದೇವಿ (೬) ಪರ್ಜನ್ಯನಾಮಕ ಸೂರ್ಯ ಈ ಆರು ಜನರು. ೨೦ನೇ ಕಕ್ಷದಲ್ಲಿರುವರು. ಪಾವಕಾದ್ಯರಿಗೆ ಎರಡು ಗುಣಗಳಿಂದ ಕಡಿಮೆಯೆನಿಸಿದರು. ೧೯ನೇ ಕಕ್ಷದಲ್ಲಿರುವ ಅಗ್ನಿಪುತ್ರ ಪಾವಕ ಮೊದಲಾದವರಿಗೆ ಎರಡು ಗುಣದಿಂದ ಕಡಿಮೆ ಎನಿಸುತ್ತಾರೆ.

ಮುಂದೆ ೨೨ನೇ ಕಕ್ಷದಲ್ಲಿಪ್ಪ ಅಗ್ನಿಪತ್ನಿ ಸ್ವಾಹಾದೇವಿ ವಿಚಾರ ಎರಡು ಮೂರ್ಜನರಿಂದಧಮ ಸ್ವಾಹಾ ಕರೆಸುವಳು. ಹೇಳಿ ವಿವರಿಸಿದ ೨×೩=೬ ಜನರಿಂದ ಸ್ವಾಹಾದೇವಿಯು ಅಧಮ=ಕಡಿಮೆ ಎನಿಸುತ್ತಾಳೆ. ಉಷಾದೇವಿ ೨೩ನೇ ಕಕ್ಷವಲ್ಲಿಪ್ಪಅಶ್ವಿನೀದೇವತೆಗಳ ಪತ್ನಿ. ನಾಮಾಭಿಮಾನಿ ಉಷಾದೇವಿಯು, ವೈಶ್ವಾನರನ ಮಡದಿಗೆ = ಅಗ್ನಿದೇವರ ಪತ್ನಿ ಸ್ವಾಹಾ ದೇವಿಗೆ, ಅಶ್ವೀನೀ ಭಾರ್ಯಾ ಉಷಾದೇವಿಯು ದಶಗುಣಾವರಳು=ಹತ್ತು ಗುಣಗಳಿಂದ ಕಡಿಮೆಯೆಂದು ಹೇಳುತ್ತಾರೆ.

**ಭಾವಸೂಚನ:**—ಅರಸೀತಿ ॥ ಪೂರ್ವದಿಂದ ಅನ್ವಯ ॥ ಷಟ್ಕೇತಿ॥ ಅಪ್ಪಭಾರ್ಯಾ ತಪ್ಪ್ರಪರಾ ॥ ಯಮಭಾರ್ಯಾ ಶಾಮಲಾ ಚ। ಚಂದ್ರ ಜಾಯಾ ರೋಹಿಣೀ ॥ ಸೂಯಪತ್ನೀ ತಥಾ ಸಂಜ್ಞಾ ಅನಿರುದ್ಧ ಪರಿಗ್ರಹಾ ವಿರಾಡಪರನಾಮ್ನೀ ತು ಉಷಾ ಇತಿ ಹಿ ಷಟ್ ಸುರಾ ಇತಿ ಸಂಗ್ರಹೇ ॥ ಎರಡೇತಿ । ಮಿತ್ರಾ ತು ದ್ವಿಗುಣಾಧಮಾ ಇತಿ ವಚನಾತ್ ॥ ಅಧಮೇತಿ ಸ್ವಾಹಾನಾಮ್ನ್ಯಗ್ನಿಭಾರ್ಯಾ ಪರ್ಜನ್ಯಾದ್ವಿಗುಣಾ ಧಮೇತಿ ಸಂಗ್ರಹೇ ದಶಗುಣಾವರಳೇತಿ ॥ ಉಷಾ ಸ್ವಾಹಾಯಾ ಅಗ್ನಿಭಾರ್ಯಾಯಾಃ ಅಧಮಾದಶಗುಣಾ ಇತಿ ಸಂಗ್ರಹೇ ॥ ೩೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅರಸಿ" ಇತಿ॥ ಪಾವಕಾದ್ಯಧಮಾಃ ಷಟ್ ಪಾವಕಾತ್ ಪರ್ಜನ್ಯಃ ತಸ್ಮಾದಿಮಾಃ ॥ ತತಃ ದ್ವಿಗುಣಾವರಾಃ ॥ ಏತೇಭ್ಯಃ ಚ ಅಗ್ನಿಜಾಯಾ ಸ್ವಾಹಾ ಉಷಸಃ ದಶಗುಣಾಧಿಕಾ ॥ ೩೮ ॥

## ಕನ್ನಡಾರ್ಥ

ಪಾವಕ ಮೊದಲಾದವರಿಂದ ಉಷಾಮುಂತಾದ ಆರು ದೇವತೆಗಳು ೨ ಗುಣಗಳಿಂದ ಕಡಮೆಯಾದವರು. ಈ ಆರು ಜನರಿಂದಲೂ ಅಗ್ನಿ ಪತ್ನಿ ಯಾದ ಸ್ವಾಹಾದೇವಿಯು ಕಡಮೆಯಾದವಳು.(೨ ಗುಣಗಳಿಂದ) ಅಶ್ವಿನೀ ದೇವತೆಗಳ ಪತ್ನಿಯಾದ "ಉಷಾ" ಎಂಬಾಕೆಯು (ನಾಮಾಖ್ಯಕಲಾಭಿ ಮಾನಿನಿ) ಸ್ವಾಹಾನಿಗಿಂತ ಹತ್ತು ಗುಣಗಳಿಂದ ಕಡಮೆಯಾದವಳು. ।೩೮॥

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ :—** (ಹರಿಕಥಾಮೃತಸಾರ ಪದ್ಯ ೩೫ ರಿಂದ ಸಮನ್ವಯ) ಸನಕಾದಿಗಳೊಳು ಉತ್ತಮ ಸನತ್ಕುಮಾರ ಶಿಖಿ । ತನುಜ ಪಾವಕನು ಪರ್ಜನ್ಯನು ಮೇಘಪ॥ ಎನಿಸುವನು ಶರಭ ಒಂದೇ ರೂಪ **ಧರ್ಮರಾಜನ ಪತ್ನಿ ದೇವಕಿಯು ಶ್ಯಾಮಲೆಯು ರೂಪವೆಂದಾನಮಿಪೆ** ॥ ೪೪ ॥ ಯಮ ಭಾರ್ಯ ಶಾಮಲಾ ರೋಹಿಣೀದೇವಿ ಚಂ । ಪ್ರಮನ ಸ್ತ್ರೀ ಅನಿರುದ್ಧಗೇಹಿನಿ ಉಷಾ ॥ ದ್ಯುಮಣಿ ಭಾರ್ಯಾ ಸಂಜ್ಞ ಗಂಗಾ ವರುಣ ಭಾರ್ಯ । ಸಮರಾರು ಜನರು ಪಾವಕಗೆ ಕಿಂಚಿದಧಮರೆಂದಾನಮಿಪೆ ॥ ೪೫ ॥ ಎರಡು ಗುಣ ಮಿತ್ರಗಿಂದಧಮ ಪರ್ಜನ್ಯ ಈ । ರೆರಡು ವಹ್ನಿಗೆ ಕಡಿಮೆ ಪಾದಮಾನಿ ॥ ಸುರಪನಂದನ ಜಯಂತನು ಪ್ರಹ್ಲಾದ ಈ । ರ್ವರು ಮುಖ್ಯರಧಮ ಪರ್ಜನ್ಯಗೆಂದೆಂದು ॥ ೪೬ ॥ ಎರಡು ಗುಣ ಪರ್ಜನ್ಯಗಿಂದಧಮಳು ಸ್ವಾಹಾ ಎರಡಧಿಕ ಗುಣದಿ ಸ್ವಪತಿಗೆ ನೀಚಳು ॥

**ವಿಶೇಷ ಸೂಚನೆ :—** ಗಾರುಡ ಪ್ರಮಾಣಗಳು

೧. "ಭಾಗೀರಥ್ಯಾಶ್ಚ ರೂಪಾಣಿ ಚತ್ವಾರ್ಯಾಸನ್ ಖಗೇಶ್ವರ ॥

(೧) ಮಹಾಭಿಷಕ್ ನರೇಂದ್ರಸ್ಯ ಭಾರ್ಯಾ ತು ಅಭಿಷೇಚಿನೀ ॥

(೨) ದ್ವಿತೀಯೇನೈವ ರೂಪೇಣ ಗಂಗಾ ಭಾರ್ಯಾ ಚ ಶಂತನೋಃ ॥

(೩) ಸುಷೇಣಾನೀ ಸುಷೇಣಸ್ಯ ಭಾರ್ಯಾ ಸಾ ವಾನರೀ ಸ್ಮೃತಾ॥

(೪) ಮಂಡೂಕಭಾರ್ಯಾ ಗಂಗಾ ತು ಸೈವ ಮಂಡೂಕಿನೀ ಸ್ಮೃತಾ॥

ಏವಂ ಚತ್ವಾರರೂಪಾ ಸಾ ಗಂಗಾ ತು ಪರಿಕೀರ್ತಿತಾ(೧೦॥ ಅ೪೧)

೨. "ಆದಿತ್ಯಗುಣಿತಃ **ಪರ್ಜನ್ಯ**ಸ್ಸಮುದಾಹೃತಃ ॥ ಪ್ರವರ್ಣಯತಿ ವೈರಾಗ್ಯಂ ಅತಃ ಪರ್ಜನ್ಯನಾಮಕಃ ॥ ರಾಮಾವತಾರೇ ಶರಭಾಖ್ಯೋ ಮಹಾತ್ಮಾ ಸುವಾನರಃ ಸ ತು ಪರ್ಜನ್ಯ ಏವ ॥ ೧೪ ॥

೩. ಚಂದ್ರಸ್ಯ ಭಾರ್ಯಾ ರೋಹಿಣೀ ವೈನತೇಯ॥ ಇಣೀಂ ಧೃತ್ವಾ ಸ್ವಾಶ್

ರೋಹಿತಂ ಯೋಗ್ಯಸ್ಥಾನಂ ತಸ್ಮಾಚ್ಚ ಸಾ ರೋಹಿಣೀತಿ ಸುಸಂಜ್ಞಾ ॥

೪. ಆದಿತ್ಯಭಾರ್ಯಾ ಸಂಜ್ಞಾನಾಮ ಖಗೇಂದ್ರ. ಜ್ಞೇಯಸ್ಯ ನಾರಾಯಣ ರೂಪಮನ್ಯಯುಮ್ ॥ ಸಂಜ್ಞಾನ ಇತ್ಯೇವ ಸಂಜ್ಞಾಮವಾಪ ಸಂಜ್ಞೇತಿ ಲೋಕೇ ।

೫. ಉಷಾ ತು ಯಾ ಅನಿರುದ್ಧಸ್ಯ ಭಾರ್ಯಾ ಉಪಾಸತೇ ಷಡ್ಗುಣಂ ಚೈವ ವಿಷ್ಣುಂ ಅತಃ ಉಷಾ ಸಂಜ್ಞಾಮಾಪ ಖಗೇಂದ್ರ ॥ ಬ್ರಹ್ಮಾಂಡಸ್ಯಾಭಿಮಾನಿನೀ ಚ ಸೈವ ॥ ವಿರಾಡಿತಿ ಸಂಜ್ಞಾಮಾಪ ಸೈವ ॥

೬. **ಶಾಮಲಾ** ॥ ಯಮಸ್ಯ ಭಾರ್ಯಾ ಶಾಮಲಾ ವೈ ಖಗೇಂದ್ರ-ಯಸ್ಮಾತ್ ಸದಾ ಕಲಿಭಾರ್ಯಾ ಪ್ರಿಯಾಂಶ್ಚ ॥ ಮಲಾನ್ ಸಮ್ಯಕ್ ಶಮನಂ ಸಂಕರೋತಿ ಅತಶ್ಚ ಸಾ ಶಾಮಲಾಸಂಜ್ಞಿಕಾಭೂತ್ ॥ **ಸೈವ ದೇವಕೀ ಸಂಬಭೂವ ॥ ಯುಧಿಷ್ಠಿರಸ್ಯ ಸೈವ ಪತ್ನೀ ಬಭೂವ ।** ಸಂಭಾವಿತಾ ದೇವವದ್ದೇವಕೀ ಸಾ ॥ ಗಂಗಾದಿಭ್ಯೋ ಅವರಾ ಅಗ್ನಿಜಾಯಾ ಸ್ವಾಹೇತಿಸಂಜ್ಞಾ ದ್ವಿಗುಣೇನೈವ ಹೀನಾ ॥ ಸ್ವಾಹಾಕಾರೇ ಮಂತ್ರರೂಪಾಭಿಮಾನಿನೀ ಸ್ವಾಹೇತಿ ಸಂಜ್ಞಾಮಾಪ ಸದೈವ ವೀಂದ್ರ॥

**ಅವತರಣಿಕಾ:**— ಈ ಪದ್ಯದಿಂದ ಬುಧ ಅಶ್ವಿನಿ ಭಾರ್ಯಾ ನಾಮಮಾನಿ ಉಷಾದೇವಿ ಶನೈಶ್ಚರ ಪುಷ್ಕರ ಹೀಗೆಳ ಕಕ್ಷದಲ್ಲಿದ್ದ ಕಲಾಭಿಮಾನಿದೇವತೆಗಳ ಸ್ತೋತ್ರ ಮಾಡುತ್ತಾರೆ.

**ಸುದರುಶನ ಶಕ್ರಾದಿ ಸುರಯುತ ।**
**ಬುಧನು ತಾನಭಿಮನ್ಯುವೆನಿಸುವ ।**
**ಬುಧನಿಗಿಂದಶ್ವಿನೀ ಭಾರ್ಯಾ ಶಲ್ಯಮಾಗಧರ ॥**
**ಉದರಜೋಷಾ ದೇವಿಗಿಂದಲಿ ।**
**ಅಧಮನೆನಿಪ ಶನೈಶ್ಚರನು ಶನಿ ।**
**ಗಧಮ ಪುಷ್ಕರ ಕರ್ಮಪನು ಯೆನಿಸುವನು ಬುಧರಿಂದ ॥೩೯॥**

**ಪದ್ಯಾರ್ಥ** :—ಸುದರ್ಶನ='ಋತುಃ ಸುದರ್ಶನಃ, ಕಾಲಃ' ವಿಷ್ಣು ಸಾಸಿರನಾಮ, ಸುದರ್ಶನ=ಶೋಭನಂ ದರ್ಶನಂ ಜ್ಞಾನಂ ಶೋಭನೇ ನೇತ್ರೇ ವಾ ಯಸ್ಯ ಸಃ ಸುದರ್ಶನಃ ॥ ಸುಖೇನ ಕಾರುಣ್ಯಂ ದೃಶ್ಯತ ಇತಿ ವಾ'॥ ಶುಭಕರವಾದ ಸೂಕ್ಷ್ಮ ಜ್ಞಾನ ಪೂರ್ಣನು, ಶುಭ ಜ್ಞಾನವನ್ನು ಕೊಡಲು, ಶೋಭನ ಶುಭ ನೇತ್ರಗಳುಳ್ಳ ಕಾರುಣ್ಯ ದೃಷ್ಟಿಯುಳ್ಳವನು, ಸುಖವಾದ ಕಾರುಣ್ಯ ದೃಷ್ಟಿಯಿಂದ ಭಕ್ತರನ್ನು ನೋಡುವವನು. ಕಾರಣ, ಶ್ರೀಹರಿಗೆ ಸುದರ್ಶನನೆಂಬ ನಾಮ ॥ ಸುದರ್ಶನ. ಹರಿ, ಕೃಷ್ಣ, ಶಕ್ರಾದಿ= ಇಂದ್ರನೇ ಮೊದಲಾಗಿ ಅಂದರೆ ಹರಿ, ವಾಯು, ಇಂದ್ರ, ಧರ್ಮ, ಅಶ್ವಿನಿ, ಆವೇಶಯುಕ್ತನಾದ ಚಂದ್ರನ ಮಗ ಬುಧನು ಸುಭದ್ರಾದೇವಿಯಲ್ಲಿ ಅರ್ಜುನನಿಂದ ಅಭಿಮನ್ಯುವಾಗಿ ಅವತರಿಸಿದನು. "ಜಲಾಭಿಮಾನೀ ಚಂದ್ರಪುತ್ರೋ ಬುಧಶ್ಚ ॥ ಬುದ್ಧ್ಯಾ ಹರಿಂ ರಾಷ್ಟ್ರಜಾತಂ ಚ ಸರ್ವಂ ಧೃತತ್ವಾದ್ಬುಧಸಂಜ್ಞಾಮವಾಪ ॥ ಸ ಏವಾಭೂದಭಿಮನ್ಯುರ್ಮಹಾತ್ಮಾ। ಸುಭದ್ರಾಜಠರೇ ಅರ್ಜುನಾಚ್ಚ ॥ ಕೃಷ್ಣಸ್ಯ ಜೇಂದ್ರಸ್ಯ ಯಮಸ್ಯ ಚಾಂಶೈಸ್ಸಂಯುತೋಽಶ್ವಿನೋರ್ವೈ ಹರೇಶ್ಚ ॥ ಸ್ವಾಹಾಧವೋ ಚಂದ್ರ ಪುತ್ರೋ ಬುಧಸ್ತು ಪಾದಾರವಿಂದೇ ವಿಷ್ಣುದೇವಸ್ಯ ಭಕ್ತಃ ॥ ಇತಿ ಗಾರುಡೇ ॥ ಬುಧನಿಂದಶ್ವಿನೀ ಭಾರ್ಯಾ-ಬುಧನಿಗಿಂತಲೂ, ಅಶ್ವಿನೀ ದೇವತೆಗಳ ಪತ್ನಿ, ಶಲ್ಯ ಮಾಗಧರ ಉದರ ಜೋಷಾ=ಶಲ್ಯರಾಜನಲ್ಲಿ ಪುಟ್ಟಿದ ಸಹದೇವನ ಪತ್ನಿ, ಮಗಧರಾಜನಿಂದ ಪುಟ್ಟಿದ ನಕುಲ ಭಾರ್ಯಾ ಇವರಿಬ್ಬರು. ನಾಮಾಭಿಮಾನಿ ಉಷಾದೇವಿಯು ಅವತಾರ, "ನಾಮಾ ತ್ಮಿಕಾ ಅಶ್ವಿ ಭಾರ್ಯಾ ಉಷಾ ನಾಮ ಪ್ರಕೀರ್ತಿತಾ॥ನಕುಲಸ್ಯ ಭಾರ್ಯಾ ಮಗಧಸ್ಯ ಪುತ್ರೀ ಶಲ್ಯಾತ್ಮಜಾ ಸಹದೇವಭಾರ್ಯಾ॥ ಉಭಾವಪ್ಯೇತೋ ಅಶ್ವಿಭಾರ್ಯಾ ಉಷಾ ಹಿ ಉಪಾಸಾತೇ ಷಡ್ಗುಣೈಃ ಪೂರ್ಣವಿಷ್ಣುಮ್ ॥ ಗಾರುಡ ೨-೪೧ ॥ ಈ ಉಷಾದೇವಿಗಿಂದಲಿ=ನಾಮಾಭಿಮಾನಿ ಉಷಾ ದೇವಿಗಿಂತಲೂ, ಅಧಮನೆನಿಪ ಶನಿ=ಸೂರ್ಯ ಪುತ್ರನಾದ ಶನೈಶ್ಚರನು ಕಡಿಮೆ. ಈ ಶನೈಶ್ಚರನಿಗಿಂತಲೂ ಅಧಮ=ಕಡಿಮೆಯೆನಿಸುವನು. ಯಾರೆಂದರೆ, ಕರ್ಮಪನು=ಸುಕರ್ಮಾಭಿಮಾನಿ ಪುಷ್ಕರದೇವನು. ಶನೈ ಶ್ಚರ ಬುಧರಿಂದ=ಬುಧಾದಿಗಳಿಂದ ಕಡಿಮೆ ಎನಿಸುವನು. "ತತಃ ಶನಿಃ

ಪೃಥಿವ್ಯಾತ್ಮಾ ಶನೈಶ್ಚರತಿ ಸರ್ವದಾ ॥ ಅತಃ ಶನೈಶ್ಚರೋ ನಾಮ ಉಷಾ
ಯಾಶ್ಚ ದಶಾವರಃ॥ ಕರ್ಮಾತ್ಮಾ ಪುಷ್ಕರೋ ಜ್ಞೇಯಃ ಶನೇರಪ್ಯಧಮೋ
ಮತಃ ॥ ನಾಮಾಭಿಮಾನ್ಯಪಸಃ ಕಿಂಚಿದೂನೋ ಪಶಾಧಮಃ ॥ ಹರೇಃ
ಪ್ರೀತಿಕರೋ ನಿತ್ಯಂ ಪುಷ್ಕರೇ ಕ್ರೀಡತೇ ಯತಃ ॥ ಅತಸ್ತು ಪುಷ್ಕರೋ
ನಾಮ ಲೋಕೇ ಸಂಪರಿಕೀರ್ತಿತಃ ॥ ೩೭--೪೧ ಗಾರುಡೇ ॥

**ಭಾವಸೂಚನ :**—ಸುದರ್ಶನ ಇತಿ ತದಭಿಮಾನೀ॥ಆದಿ ಪದದಿಂದ
ಕೃಷ್ಣ ಇಂದ್ರ ಧರ್ಮ ವಾಯು ಅಶ್ವಿನಿಗಳು ॥ ಅವರಜಃ ಅಭಿಮನ್ಯುಃ ॥
ಚಂದ್ರಾಂಶಯುಕ್ತೋ ನಿತರಾಂ ಬುಧೋಽಸೌ ಜಾತಃ ಸುಭದ್ರಾ ಜಠರೇಽ
ರ್ಜುನೇನ ॥ ಧರ್ಮೇಂದ್ರ ಶಕ್ರಾಂಶಯುತೋಽಶ್ವಿನೋಶ್ಚ ತಥೈವ ಕೃಷ್ಣಸ್ಯ
ಚ ಸನ್ನಿಧಾನ ಯುಗಿತಿ ನಿರ್ಣಯೇ ॥ ಶಲ್ಯೇತಿ ॥ ಬುಧನಿಗೇತಿ ॥ ಬುಧಾ
ದಪ್ಯಧಮಾ ಉಷೇತಿ ಸಾರಸಂಗ್ರಹೇ ॥ ಜರಾಸಂಧಸ್ಯ ಪುತ್ರೀ ಚ ಶಲ್ಯಸ್ಯ
ಚ ತಥಾತ್ಮಜಾ ॥ ಉಭೇ ಅಪ್ಯಶ್ವಿಭಾರ್ಯೇತಿ ತಾರತಮ್ಯೇ ॥
ಅಧಮೇತಿ ॥ ಉಷಸ್ಯೋಪ್ಯಧಮಃ ಕಿಂಚಿತ್ ಭೂಮಿಮಾನೀ ಶನೈಶ್ಚರ
ಇತಿ ಸಂಗ್ರಹೇ ॥ ಅಧಮೇತಿ ॥ ಶನೇರಪ್ಯವರೋ ಮತಃ ॥ ಕರ್ಮಮಾನೀ
ಪುಷ್ಕರಸ್ತು ಸಪ್ತವಿಂಶತಿ ಕಕ್ಷಗಃ ಇತಿ ತಾರತಮ್ಯೇ ॥ ೩೯ ॥

**ಶ್ರೀ ಜಗನ್ನಾಥದಾಸರ ಬೃಹತ್ತಾರತಮ್ಯ ಪದ :**—ಹರಿ ಶಕ್ರ ಶಶಿ
ಅಶ್ವಿಯುಕ್ತಾಭಿಮನ್ಯು ಚಂ । ದಿರಜ ಬುಧನವತಾರ ಸ್ವಹಾದೇವಿಗಧಮ
ನೆಂದಾನಮಿಪೆ ॥ ೪೭ ॥ ಎನಿಸುವಳು ಶಲ್ಯ ಜರಾಸಂಧನಾತ್ಮಜಾ ಅಶ್ವಿನಿ
ಭಾರ್ಯಾ ನಾಮಾಭಿಮಾನಿ ಉಷಾ ॥ ಘನರಸಾಧಿಪ ಬುಧಗೆ ಕಿಂಚಿನ್ನೂನ
ಕಡಿಮೆ । ಅನಳ ಪತ್ನಿಗೆ ದಶಗುಣಾಧಮಳುಯೆಂದು ॥ ೪೧ ॥ ಧರಣಿಗಭಿ
ಮಾನಿಯೆನಿಸುವ ಸೂರ್ಯಸುತ ಶನೈಶ್ಚರ ಉಷಾದೇವಿಗೆರಡು ಗುಣಾಧಮಾ॥
ತರಣಿನಂದನಗೆ ಸತ್ಕರ್ಮಾಭಿಮಾನಿ ಪುಷ್ಕರ ಕಡಿಮೆ ಪಂಚಗುಣದಿಂದ
ಎಂದೆಂದು ॥ ೪೯ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಸುದರ್ಶನ' ಇತಿ ॥ xxx ಪಶೂನಾಮಸ್ತಿ ಸುನ್ವತಾಂ ನ

ಸೋಮೋ ಅಪ್ರತಾ ಪಪೇ ಪಸ್ಯ ಇಮುಪಗಾಯತ ಪಸ್ಯ ಉಕ್ಥಾನಿ ಶಂಸಥ ಬ್ರಹ್ಮಾ ಕೃಣೋತ xಓಂx ಸುದರ್ಶಂ ಸುಧಿಯಂ ನಯತಿ ಇತಿ ಸುದರ್ಶನಃ ॥ ಸಹಸ್ರನಾಮಗವಿದಂ ಕೃಷ್ಣಪರಮ್ ॥ ಅವರಜಃ ಅಭಿಮನ್ಯುಃ ॥ ಚಂದ್ರಾಂಶಯುಕ್ತಃ ನಿತರಾಂ ಬುಧೋಽಸೌ ಜಾತಃ ಸುಭದ್ರಾ ಜಠರೇಽರ್ಜುನೇನ ॥ ಧರ್ಮೇರಶಕ್ರಾಂಶಯುತೋಽಶ್ವಿನೋಶ್ಚ ತಥೈವ ಕೃಷ್ಣಸ್ಯ ಚ ಸನ್ನಿಧಾನಯುಕ್ ॥ ಸ್ವಾಹಾತೋ ಮಂತ್ರದೇವತಾ॥ ಉದಕಾತ್ಮಕಃ ಬುಧಃ ತಸ್ಮಾತ್ ಉಷಾನಾಮಾತ್ಮಿಕಾ ತತಃ ॥ ಶಲ್ಯಃ ಮದ್ರರಾಜಃ ॥ ಮಾಗಧಃ ಜರಾಸಂಧಃ ॥ ಜರಾಸಂಧಸ್ಯ ಪುತ್ರೀ ಚ ಶಲ್ಯಸ್ಯ ಚ ತಥಾತ್ಮಜಾ ॥ ಉಭೇ ಅಪ್ಯಶ್ವಿಭಾರ್ಯೋಷಾ ॥ ಉದರಜೋಷೇತ್ಯೇವ ಪಾಠಃ ॥ ಭೀಮಃ ಕನ್ಯಾಂ ಸಹದೇವಸ್ಯ ಹೇತೋಃ ಸಮಗ್ರಹೀತ್ ॥ ನಕುಲಸ್ಯಾದಾತ್ ಮದ್ರರಾಜೋ ಹಿ ಪೂರ್ವಂ ಸ್ವೀಯಾಂ ಕನ್ಯಾಂ ಸಾ ತಥೈವಾಪ್ಯುಷಾ ಹಿ ॥ ಉಷಾ ನಾಮಾತ್ಮಿಕಾ ತತಃ ॥ ಶನಿಃ ಪೃಥಿವ್ಯಾತ್ಮಾ ಕರ್ಮಾತ್ಮಾ ಪುಷ್ಕರಸ್ತಥಾ ॥ ೩೯ ॥

## ಕನ್ನಡಾರ್ಥ

ಸುದರ್ಶನವೆಂಬುದು ವಿಷ್ಣುವಿನ ಸಹಸ್ರನಾಮಗಳಲ್ಲಿರುವುದೊಂದು ನಾಮ. ಸರಿಯಾದ ಜ್ಞಾನವನ್ನು ಕೊಡುವವನೆಂದು ಅದರ ಅರ್ಥ. ಚಂದ್ರಾಂಶಯುಕ್ತನಾದ ಬುಧನೇ ಅಭಿಮನ್ಯುವಾಗಿ ಅರ್ಜುನನಿಂದ ಸುಭದ್ರೆಯಲ್ಲಿ ಹುಟ್ಟಿದನು. ಧರ್ಮ (ಯಮ), ವಾಯು, ಇಂದ್ರ ಇವರುಗಳ ಅಂಶಗಳಿಂದ ಹಾಗೂ ಶ್ರೀಕೃಷ್ಣ ಮತ್ತು ಅಶ್ವಿನೀ ದೇವತೆಗಳ ಸನ್ನಿಧಾನಗಳಿಂದ ಯುಕ್ತನಾದವನು. ಸ್ವಾಹಾ ಎಂಬುವಳು ಮಂತ್ರದೇವತೆಯು (ಅಗ್ನಿಪತ್ನಿಯು) ಅವಳಿಗಿಂತ ಬುಧನು ಕಡಿಮೆಯವನು. ಉದಕಾತ್ಮಕನಾದ ಬುಧನಿಗಿಂತ ನಾಮಾತ್ಮಿಕೆಯಾದ ಉಷಾದೇವಿಯು ಕಡಿಮೆಯವಳು. ಜರಾಸಂಧ, ಶಲ್ಯರಾಜರಿಗೆ ಮಗಳಾಗಿ ಉಷಾದೇವಿಯು ಅವತರಿಸಿದಳು. ಇವಳೇ ಅಶ್ವಿನೀದೇವತೆಗಳ ಹೆಂಡತಿಯು. ಜರಾಸಂಧ ಪುತ್ರಿ ವಿಜಯಾ ಎಂಬ ಕನ್ಯೆಯನ್ನು ಸಹದೇವನ ಸಲುವಾಗಿ ಭೀಮಸೇನನು ಸ್ವೀಕರಿಸಿದನು. ನಕುಲನಿಗೆ ಮದ್ರರಾಜನು ತನ್ನ ಮಗಳಾದ ಕರೇಣುಮತಿಯನ್ನು

ಕೊಟ್ಟನು. ಇವೆರಡು ರೂಪಗಳು ಉಪಾದೇಯವಾದವುಗಳಾಗಿವೆ. ಕೃತಿಗೆ ಅಭಿಮಾನಿಯು ಪರ್ಜನ್ಯನು. ಕರ್ಮಾಗ್ನಿ ಕಲಾಭಿಮಾನಿಯು ಪುಷ್ಕರನು. ॥ ೩೯ ॥

**ಅವತರಣಿಕಾ** :—ಹಿಂದೆ ಹೇಳಿದವರಲ್ಲಿ ಕೆಲವು ಗಂಧರ್ವರ ಅವತಾರಗಳನ್ನು ಹೇಳುತ್ತಾರೆ.

**ಉದ್ವಹಾ ಮರುತಾನ್ವಿತ ವಿರಾ ।**
**ಧದ್ವಿತಿಯು ಸಂಜಯನು ತುಂಬುರ ।**
**ವಿದ್ವದುತ್ತಮ ಜನ್ಮೇಜಯ ತ್ವಷ್ಟ್ರಯುತ ಚಿತ್ರರಥ ॥**
**ಸದ್ವಿನುತ ದಮಘೋಷಕ ಕಬಂ ।**
**ಧದ್ವಯರು ಗಂಧರ್ವದನು ಮನು ।**
**ಪದ್ಮಸಂಭವಯುತಾಕ್ರೂರ ಕಿಶೋರನೆನಿಸುವನು ॥ ೪೦ ॥**

**ಪದಾರ್ಥ** :—ತುಂಬುರ=ತುಂಬುರನೆಂಬ ಗಂಧರ್ವನಿಗೆ ಎರಡು ಅವತಾರ. ವಿರಾಧ=೧ **ವಿರಾಧ ರಾಕ್ಷಸ**ನಾದವನು. ಕುಬೇರನ ಶಾಪದಿಂದ ರಾಕ್ಷಸಜನ್ಮ ತಾಳಿದನು. ಈ ತುಂಬುರ ಗಂಧರ್ವಪತಿಯೇ ದ್ವಾಪರದಲ್ಲಿ ಉದ್ವಹನೆಂಬ ಮರುತ್ತಿನ ಆವೇಶಯುಕ್ತನಾಗಿ ೨ **ಸಂಜಯ**ನು ಜನಿಸಿದನು. "ವಿರಾಧಶ್ಚೋದ್ವಹಾವಿಷ್ಟೋ ಸಂಜಯೋ ದ್ವೌ ಚ ತುಂಬುರುಃ ॥ **ಚಿತ್ರ**ರಥ=ಮತ್ತು ಚಿತ್ರರಥನೆಂಬ ಗಂಧರ್ವನು. ತ್ವಷ್ಟೃಯುತ=ತ್ವಷ್ಟೃ ನಾಮಕ ಸೂರ್ಯ ಆವೇಶದಿಂದ, ವಿದ್ವದುತ್ತಮ=ಜ್ಞಾನಿ ಉತ್ತಮನಾದ, **ಜನ್ಮೇಜಯರಾಜ**=ದ್ರುಪದಪುತ್ರನಾಗಿ ಅವತರಿಸಿದನು. ಜನಮೇಜಯಸ್ತ್ವಾ **ವಿಷ್ಟಃ** ತ್ವಷ್ಟ್ರಾ ಚಿತ್ರರಥಃ ಪುರಾ ॥ **ದನು**=ದನುನಾಮಕ ಗಂಧರ್ವನಿಗೆ (೧) **ದಮಘೋಷ** (೨) **ಕಬಂಧ**ನೆಂಬ ಎರಡು ಅವತಾರ. "ದಮಘೋಷ ಕಬಂಧೌ ದ್ವೌ ದನುಗಂಧರ್ವ ಉಚ್ಯತೇ ॥" ದಮಘೋಷರಾಜನು ಕೃಷ್ಣನ ಸೋದರತ್ತೆಯ ಮಗ ಮತ್ತು ಕಬಂಧನೆಂಬ ರಾಕ್ಷಸನು. **ಕಿಶೋರ ನಾಮಕ ಗಂಧರ್ವನು** ಪದ್ಮಸಂಭವ=ಬ್ರಹ್ಮದೇವರು ಮತ್ತು ಮನು=ಸ್ವಾಯಂಭುವಮನುವಿನಿಂದ ಆವಿಷ್ಟನಾಗಿ **ಅಕ್ರೂರ**ನೆಂದು ಅವತರಿಸಿ

ದನು. ಈ ಅಕ್ರೂರನು ಕೃಷ್ಣಭಕ್ತನು. "ಬ್ರಹ್ಮಸ್ವಾಯಂಭುವಾವಿಷ್ಟೋ ಹ್ಯಕ್ರೂರಃ ಪ್ರಾಕ್ ಕಿಶೋರಕ ಇತಿ"॥

**ಭಾವಸೂಚನ** :—ಉಪ್ಪಹಾವೇತಿ ॥ ವಿರಾಧ ಉಪ್ಪಹಾ ವಿಷ್ಟೋ ಸಂಜಯೋ ದ್ವೌ ಚ ತುಂಬುರುಃ॥ ಜನಮೇಜಯ ಆವಿಷ್ಟಃ ತ್ವಷ್ಟ್ರಾ ಚಿತ್ರ ರಥಃ ಪುರೇತಿ ತಾರತಮ್ಯೇ ॥ ದಮಘೋಷೇತಿ ॥ ದಮಘೋಷಕಬಂಧೌ ದ್ವೌ ವಸುಗಂಧರ್ವ ಉಚ್ಯತ ಇತಿ ತಾರತಮ್ಯೇ॥ ಪದ್ಮೇತಿ ॥ ತದುಕ್ತಂ ತಾರತಮ್ಯೇ ॥ ಬ್ರಹ್ಮಸ್ವಾಯಂಭುವಾವಿಷ್ಟೋ ಹ್ಯಕ್ರೂರಃ ಪ್ರಾಕ್ ಕಿಶೋರಕ ಇತಿ ॥ ೪೦ ॥

**ಸೂಚನೆ** :— ಜನಮೇಜಯಸ್ತಮಸ್ಯೇವ ಪೂರ್ವಂ ಚಿತ್ರರಥೋ ಹಿ ಯಃ॥ ತ್ವಷ್ಟ್ರಾವೇಶಸಂಯುಕ್ತಃ ಸ ಶರನಭ್ಯವರ್ಷತ॥೭೬॥ ತಾ. ನಿ. ಅ ೧೮, ಶ್ಲೋಕ ೭೬.

**ಶ್ರೀ ಜಗನ್ನಾಥದಾಸರ ಬೃಹತ್ತಾರತಮ್ಯ ಪದ**:—ಸುರಕುಲೋ-ದ್ಭೂತ ಅನಾಖ್ಯಾತ ಆಜಾನೇಯಾ । ಮರರು ಯೆನಿಸುವರು ಉಪ್ಪಹ ನಾಮಕಾ ॥ ಮರುತನಾವೇಶಯುತ ಸಂಜಯು ವಿರಾಧ ತುಂಬುರನ ಅವತಾರವಿಂದು ನಿತ್ಯದಲಿ ॥ ೫೭ ॥ ಜನಮೇಜಯನು ತ್ವಷ್ಟ್ರನಾವಿಷ್ಟ ಚಿತ್ರರಥ । ವಸುನಾಮಗಂಧರ್ವದಮಘೋಷನು ॥ ಯೆನಿಸುವ ಕಬಂಧ ದ್ವಯಾಬ್ಜ ಸ್ವಾಯಂಭು ಮನುಯುತಾಕ್ರೂರ ಕರೆಸುವ ಕಿಶೋರನೆಂದಾ ನಮಿಪೆ ॥ ೫೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಉಪ್ಪಹ' ಇತಿ ॥ 'ದ್ವಿತೀಯ' ದ್ವೌ ತುಂಬುರೂ (ರು) ವ್ಯಾಪಿಷ್ಟ ವಿರಾಧೆ ಸಂಜಯೇ ದ್ವೌ ತುಂಬುರೂ ಇತ್ಯನ್ವಯಃ ॥ ರಾಮೋಪಿ ತತ್ರ ದದೃಶೇ ಧನದಸ್ಯ ಶಾಪಾತ್ ಗಂಧರ್ವಮುರ್ವಶಿರತೇ(ರಥ ಯಾತು ಧಾನೀಮ್ ॥ ಪ್ರಾಪ್ತಂ ದಶಾಂ ಸಪದಿ ತುಂಬುರುನಾಮಧೇಯಂ ನಾಮ್ನಾ ವಿರಾಧಮಪಿ ಶಂಭುವರಾದವಧ್ಯಮ್ ॥ ಸಮಸ್ತಗಂಧರ್ವಪತಿಃ

ಸ ತುಂಬುರುಃ ॥ ಯ ಉಪ್ಪಹೋ ನಾಮ ಮರುತ್ ತದಂಶಯುಕ್ತಃ ಪತೀ ಸಂಜಯನಾಮಧೇಯಃ ॥ ದಮಘೋಷಕಬಂಧೌ ದ್ವೌ ದನುಗಂಧರ್ವ ಉಚ್ಯತೇ ॥ ಬ್ರಹ್ಮಸ್ವಾಯಂಭುವಾವಿಷ್ಟಃ ಹ್ಯಕ್ರೂರಃ ಪ್ರಾಕ್ಕಿಶೋರಕಃ ॥ ಯುಕ್ತೋ ಯಯೌ ದಮಘೋಷೇಣ ಸಾರ್ಧಂ ಗಂಧರ್ವೋಽಸೌ ದನು-ನಾಮಾ ಕರಾ ಸಃ ॥ ಸಹಸಾಥ ಕಬಂಧನಾಮ್ನಾ ॥ ನಾಮ್ನಾ ದನುಂ ತ್ರಿಜಟಯೈವ ಪುರಾಭಿಜಾತಂ ಗಂಧರ್ವಂ ॥ ದಮಘೋಷ ಕದಂಬ ಇತ್ಯೇವ ಪಾಠಃ॥ ನಾಮ್ನಾ ಕಿಶೋರ ಇತಿ ಯಃ ಸುರಗಾಯಕೋಽಭೂತ್ ಸ್ವಾಯಂಭುವಸ್ಯ ಚ ಮನೋಃ ಪರಮಾಂಶಯುಕ್ತಃ ॥ ಆವೇಶಯುತ್ ಕರ್ಮಜಸ್ಯ ॥ ಇತಿ ॥ ೪೦ ॥

## ಕನ್ನಡಾರ್ಥ

"ವಿರಾಧ-ಸಂಜಯರಿಬ್ಬರು ತುಂಬುರು-ಗಂಧರ್ವನ ಅವತಾರ ಭೂತರು. ರಾಮನು ದಂಡಕಾರಣ್ಯದಲ್ಲಿ ವಿರಾಧನೆಂಬ ರಾಕ್ಷಸನನ್ನು ನೋಡಿದನು. ಪೂರ್ವದಲ್ಲಿ ಅವನು ತುಂಬುರು ನಾಮಕ ಗಂಧರ್ವನು. ಕುಬೇರನಿಂದ ಊರ್ವಶಿಯನ್ನು ವಿಯೋಗಿಸಿದುದರಿಂದ ಅವನ ಶಾಪದಿಂದ ರಾಕ್ಷಸನಾಗಿ ಹುಟ್ಟಿದನು. ರುದ್ರದೇವರ ವರದಿಂದ ಅವಧ್ಯನಾಗಿದ್ದನು" ಎಂದು ನಿರ್ಣಯದಲ್ಲಿ ನಿರೂಪಿಸಿರುತ್ತಾರೆ "ಸಮಸ್ತ ಗಂಧರ್ವಪತಿಯಾದ ತುಂಬುರನೇ ಉಪ್ಪಹನೆಂಬ ಮರುದಂಶಯುಕ್ತನಾಗಿ ಹುಟ್ಟಿದನು. ಅವನೇ ಸಂಜಯನು. ದನುವೆಂಬ ಗಂಧರ್ವನ ಅವತಾರಗಳೆಂದು ದಮಘೋಷ ಹಾಗೂ ಕಬಂಧರಾಕ್ಷಸರೆಂದು. ಕಬಂಧನು ಪೂರ್ವದಲ್ಲಿ ತ್ರಿಜಟಾ ಎಂಬ ರಾಕ್ಷಸಿಯಲ್ಲಿ ಹುಟ್ಟಿದ್ದನು. ಹೀಗೆ ದನುವೆಂಬ ಗಂಧರ್ವನಿಗೆ ಕಬಂಧ, ದಮಘೋಷರೆಂಬ ಎರಡು ರೂಪಗಳು. ಕಿಶೋರನೆಂಬ ದೇವಗಾಯಕ ಗಂಧರ್ವನು ಸ್ವಾಯಂಭುವ ಮನುವಿನ ಅಂಶಯುಕ್ತನಾಗಿ ಅಕ್ರೂರನೆಂಬವನಾಗಿ ಹುಟ್ಟಿದನು. ಅಕ್ರೂರನು ಬ್ರಹ್ಮದೇವರ ಆವೇಶದಿಂದ ಕೂಡಿದವನು." ಹೀಗೆ ನಿರ್ಣಯದಲ್ಲಿ ಶ್ರೀಮದಾಚಾರ್ಯರು ನಿರೂಪಿಸಿರುತ್ತಾರೆ. ॥ ೪೦ ॥

**ಅವತರಣಿಕಾ :**— ಇನ್ನುಳಿದ ಗಂಧರ್ವರು ಧೃತರಾಷ್ಟ್ರ ಗಂಧರ್ವ,

ಹೂಹೂ ಗಂಧರ್ವ, ಹಾಹಾ ಗಂಧರ್ವ, ವಿದ್ಯಾಧರ, ಉಗ್ರಸೇನ ಗಂಧರ್ವರ ಅವತಾರವನ್ನು ಹೇಳುತ್ತಾರೆ.

**ವಾಯುಯುತ ಧೃತರಾಷ್ಟ್ರ ದಿವಿಜರ ।**
**ಗಾಯಕನು ಧೃತರಾಷ್ಟ್ರ ನಕ್ರನು ।**
**ರಾಯ ದ್ರುಪದನು ವಹ ವಿಶಿಷ್ಟಾ ಹೂಹು ಗಂಧರ್ವ ॥**
**ನಾಯಕ ವಿರಾಡ್ವಿವಹ ಹಾಹಾ ।**
**ಗ್ಜ್ಞೇಯ ವಿದ್ಯಾಧರನೆ ಅಜಗರ ।**
**ತಾಯೆನಿಸುವನು ಉಗ್ರಸೇನನೆ ಉಗ್ರಸೇನಾಖ್ಯ ॥ ೪೧ ॥**

**ಪದ್ಯಾರ್ಥ :—ಧೃತರಾಷ್ಟ್ರ** ದಿವಿಜರ ಗಾಯಕನು=ದೇವತೆಗಳ ಸಭೆಯಲ್ಲಿ ಗಾನಮಾಡುವ ಧೃತರಾಷ್ಟ್ರನೆಂಬ ಗಂಧರ್ವನು, ವಾಯುಯುತ ಧೃತರಾಷ್ಟ್ರ=ವಾಯು ಆವೇಶಯುಕ್ತನಾದ ಧೃತರಾಷ್ಟ್ರರಾಜನ ಅವತಾರ.

**ಹೂಹೂ ಗಂಧರ್ವ**=ಹೂಹೂ ಗಂಧರ್ವನಿಗೆ ಎರಡು ಅವತಾರ.

೧. **ನಕ್ರನು**=ಮೊಸಳೆಯಾಗಿ ಜನಿಸಿ, ಮಡುವಿನಲ್ಲಿ ಗಜರಾಜನನ್ನು ಬಾಧೆಪಡಿಸಿದನು. ಶ್ರೀಕೃಷ್ಣನ ಚಕ್ರದಿಂದ ಹತನಾದ ನಕ್ರನ ರೂಪ ಒಂದು.

೨. **ರಾಯದ್ರುಪದನು**=ದ್ರುಪದರಾಜನು,ವಹವಿಶಿಷ್ಟಾ=ಉಪ್ಪಹ ಮರುತಾವಿಷ್ಟನಾದವನು ದ್ರುಪದನ ಅವತಾರ.

**ಹಾಹಾಜ್ಞೇಯ**=ಹಾಹಾನೆಂಬ ದೇವಗಾಯಕ ಗಂಧರ್ವ ವಿವಹ ಮರುತ್ ಆವೇಶದಿಂದ, ವಿರಾಡ್ವಹ=ವಿರಾಟರಾಜನಾಗಿ ಅವತರಿಸಿದ, **ವಿದ್ಯಾಧರನೆ** ಅಜಗರ=ಅಜಗರ ಸರ್ಪನೆಂದು ತಿಳಿಯಬೇಕು. **ಉಗ್ರಸೇನ**=ಉಗ್ರಸೇನನಾಮಕ ಗಂಧರ್ವನು, **ಉಗ್ರಸೇನಾಖ್ಯ**=ಉಗ್ರಸೇನ ರಾಜನಾಗಿ ಜನಿಸಿದನು.

**ಭಾವಸೂಚನ** :— ವಾಯುರಿತಿ ॥ "ಅಭೂಚ್ಚ ತಸ್ಯಾಂ ಧೃತರಾಷ್ಟ್ರ ನಾಮಕೋ ಗಂಧರ್ವರಾಟ್ ಪವನಾವೇಶಯುಕ್ತಃ ॥ ಬಭೂವ ರಾಜಾ ಧೃತರಾಷ್ಟ್ರನಾಮೇತಿ" ಭಾರತತಾತ್ಪರ್ಯನಿರ್ಣಯೇ ॥ ಇದಾನೀಂ ನಕ್ರ ದ್ರುಪದ ಸ್ವರೂಪಮಾಹ ॥ ನಕ್ರೇತಿ ತಾರತಮ್ಯೇ ಚ ॥ ನಕ್ರಸ್ತಥೋಪ್ಯಹಾವಿಷ್ಟೋ ದ್ರುಪದೋ ದ್ವೌ ಹೂಹೂ ಪುರೇತಿ ॥ ವಿರಾಡಿತಿ ॥ ತದುಕ್ತಂ ತಾರತಮ್ಯೇ ॥ ವಿರಾಟ್ ಪ್ರಾಗ್ ವಿವಹಯುಕ್ ಹಾಹಾ ದೇವಸ್ಯ ಗಾಯಕಃ ॥ ಸಂಪದಂಶೀ ಹ್ಯಜಗರೋ ವಿದ್ಯಾಧರ ಉದಾಹೃತಃ ॥ ಉಗ್ರಸೇನಸ್ತೂಗ್ರಸೇನಃ ಗಂಧರ್ವಸ್ಸಮುದಾಹೃತ ಇತ್ಯುಕ್ತೇಃ ॥ ೫೯ ॥

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ** : —
ಧೃತರಾಷ್ಟ್ರ ಗಂಧರ್ವ ವಾಯುನಾವೇಶದಿಂ । ಧೃತರಾಷ್ಟ್ರನೆನಿಸಿದನು ನಕ್ರದ್ರುಪದ ॥ ಕ್ಷಿತಿಪರೀರ್ವರು ಹೂಹು ಗಂಧರ್ವಾಹನ ವಾಯು । ಯುತನಾಗಿ ಜನಿಸಿದರು ಹರಿಸೇವೆಗೆಂದು ॥ ೫೯ ॥ ವೃಂದಾರಕರ ಗಾಯಕ ನೆನಿಪ ಹಾಹಾ ವಿವಹ । ಗಂಧರ್ವನಾವೇಶ ಯುಗ್ವಿರಾಟಾ ॥ ನಂದನಂದಜ ಗರನು ವಿದ್ಯಾಧರ ಕಂಸನ । ತಂದೆಯೆನಿಪುಗ್ರಸೇನನೆ ಉಗ್ರಸೇನಂದಾ ನವಿಪೆ ॥ ೬೦ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ವಾಯು" ಇತಿ ॥ ಧೃತರಾಷ್ಟ್ರಃ ಗಾಯಕಃ ಇತ್ಯನ್ವಯಃ॥ಅಭೂಚ್ಚ ತಸ್ಯಾಂ ಧೃತರಾಷ್ಟ್ರನಾಮಕಃ ಗಂಧರ್ವರಾಟ್ ಪವನಾವೇಶಯುಕ್ತಃ ॥ "ನಕ್ರಃ" ಗಜೇಂದ್ರಪಾದಗ್ರಾಹೀ ॥ ಯೋಽಸೌ ಗ್ರಾಹಃ ಇತ್ಯಗ್ರಾಪಿ ಮುಕ್ತಃ ದೇವಲಶಾಪೇನ ಹೂಹೂ ಗಂಧರ್ವಸತ್ತಮಃ ಇತ್ಯುಕ್ತಮ್ ॥ ಶಾಪಕ್ರಮಸ್ತು ಉಕ್ತಃ ವಿಷ್ಣುರಹಸ್ಯೇ ಅಷ್ಟಾವಿಂಶಾಧ್ಯಾಯೇ : ಹೂಹೂಃ ನಕ್ರವಪುಃ ಧೃತ್ವಾ ಜಲಸ್ಥೋಽಭೀಷುಯುಜ್ಜ ತಮ್ ॥ ದೇವಲಃ ಯತಃ ತ್ವಂ ನಕ್ರರೂಪೇಣ ಹೂಹೋ! ಭಾಷಿತವಾನಸಿ॥ನಕ್ರ ಏವ ನ ಸಂದೇಹಃ ಚಿರಂ ಭುವಿ ಭವಿಷ್ಯಸಿ ಇತಿ॥ಪದೇನ ದ್ರುತತ್ವಾತ್ ದ್ರುಪದಾಭಿಧೇಯಃ॥

ಹೂಹೂನಾಮ್ನಃ ಸ ವಿರಿಂಚಿ ಗಾಯಕಃ ನಾಮ್ನಾವಹೋಯೋ ಮರುತಾಂ ತದಂಶಯುಕ್॥ ನಾಯಕತ್ರಿಶ್ರೇಷ್ಠಃ ವಿರಾಟ್ ರಾಜಃ ॥ ವಿರಾಟಸ್ತ್ವಭೂತ್ ಹಾಹಾ ನಾಮಾ ವಿಧಾತೃಗಾಯಕಃ ಮರುತ್ಸು ಯೋ ವಿವಹೋ ನಾಮ ತಸ್ಯಾಪ್ಯಂಶೇನ ಯುಕ್ತಃ ॥ ನಂದವಂಶೀ ಹ್ಯಜಗರಃ ವಿದ್ಯಾಧರಃ ಇತಿ ಜ್ಞೇಯಃ ॥ ಯದ್ವಾ ಜ್ಞೇಯಪದಂ ಪೂರ್ವಂ ಯೋಜ್ಯಮ್ ॥ ಅಜಗರ "ತಾ" ವಿದ್ಯಾಧರಃ ಇತ್ಯನ್ವಯಃ ॥ ಪೂರ್ವಂ ಯದಾ ಹ್ಯಜಗರೋ ನಿಜ ಗಾರ ನಂದಂ ಮತ್ಪಾದಸಂಸ್ಪರ್ಶತಃ ಸ ತದಾತಿದಿವ್ಯಃ ವಿದ್ಯಾಧರಃ ॥ಮ ಉಗ್ರಸೇನಃ ಸುರಗಾಯಕಃ ಸ ಜಾತಃ ಯದುಷ್ವೇವ ತಥಾಭಿಧೇಯಃ ॥೪೧॥

## ಕನ್ನಡಾರ್ಥ

ಧೃತರಾಷ್ಟ್ರನು ದೇವಗಾಯಕನೆಂದು ಅನ್ವಯಿಸಬೇಕು. "ಧೃತರಾಷ್ಟ್ರನೆಂಬ ಗಂಧರ್ವರಾಜನು ಪವನಾವೇಶದಿಂದ ಯುಕ್ತನಾಗಿ "ಅಂಬಿಕೆ" ಎಂಬವಳಲ್ಲಿ ಜನಿಸಿದನು." ಎಂದು ತಾತ್ಪರ್ಯನಿರ್ಣಯದಲ್ಲಿ ನಿರೂಪಿತವಾಗಿರುತ್ತದೆ. "ನಕ್ರ" ಗಜೇಂದ್ರನ ಕಾಲನ್ನು ಹಿಡಿದು ಎಳೆದ ಮೊಸಳೆ. "ದೇವಲಶಾಪದಿಂದ ಮೊಸಳೆಯ ಜನ್ಮವನ್ನೆತ್ತಿದ ಹೂಹೂ ಎಂಬಗಂಧರ್ವನು ಪರಮಾತ್ಮನ ಚಕ್ರಸ್ಪರ್ಶದಿಂದ ದೇವಲ ಶಾಪದಿಂದ ಬಿಡುಗಡೆಯನ್ನು ಹೊಂದಿದನು." ಎಂದು ಭಾಗವತ ಅಷ್ಟಮಸ್ಕಂಧದಲ್ಲಿ ಹೇಳಲಾಗಿರುತ್ತದೆ. ಶಾಪಕ್ರಮವು ವಿಷ್ಣುರಹಸ್ಯದಲ್ಲಿ ೨೦ನೆಯ ಅಧ್ಯಾಯದಲ್ಲಿ ನಿರೂಪಿತವಾಗಿರುತ್ತದೆ. ಹೂಹೂ ಎಂಬ ಗಂಧರ್ವನು ಮೊಸಳೆಯಾಗಿ ಬಂದು ಜಲದಲ್ಲಿ ದೇವಲರ್ಷಿಯನ್ನು ಹೆದರಿಸಿದನು. ಆಗ ದೇವಲಋಷಿಗಳು ಹೀಗೆ ಶಾಪವನ್ನಿತ್ತರು. "ಎಲೈ ಹೂಹುವೇ ! ಮೊಸಳೆಯಾಗಿ ನನ್ನನ್ನು ಸಂಭಾಷಿಸಿರುವುದರಿಂದ ನೀನು ನಿಶ್ಚಯವಾಗಿ ಮೊಸಳೆಯಾಗಿಯೇ ಭೂಮಿಯಲ್ಲಿ ಹುಟ್ಟುವಿ !"ಎಂದು ಶಾಪಕ್ರಮ. ಪಾಂಚಾಲರಾಜನಾದ ಪೃಷತ್ ರಾಜನು ಅಪ್ಸರ ಸ್ತ್ರೀಯನ್ನು ನೋಡಿ ಇಂದ್ರಿಯಸ್ಖಲನವಾಗಲು ವೀರ್ಯವನ್ನು ಪಾದದಿಂದ ಮುಚ್ಚಿಟ್ಟನು. ಆಗ ಗಂಡುಶಿಶುವು ಆ ವೀರ್ಯದಿಂದ ಹುಟ್ಟಿತು. ಅವನಿಗೆ ಪಾದದಲ್ಲಿ ಜನಿಸಿಬಂದುದರಿಂದ ದ್ರುಪದನೆಂದು ಹೆಸರಾಯಿತು. ಹೂಹೂ ಎಂಬ ಗಂಧರ್ವನೇ "ಆವಹ" ಎಂಬ ಮರುತ್ತನ

ಆವೇಶದಿಂದ ಯುಕ್ತನಾಗಿ ದ್ರುಪದರಾಜನಾದನು ಎಂದು ತಾತ್ಪರ್ಯ ನಿರ್ಣಯದಲ್ಲಿ ಹೇಳಲಾಗಿರುತ್ತದೆ. ಹಾಹಾ ಎಂಬ ಗಂಧರ್ವನು ಪಿವಹ ನೆಂಬ ಮರುತನ ಆವೇಶದಿಂದ ಯುಕ್ತನಾಗಿ ವಿರಾಟನೆಂಬ ರಾಜನಾದನು. ನಂದಗೋಪನನ್ನು ನುಂಗಿದ ಅಜಗರನು ಸುದರ್ಶನನೆಂಬ ವಿದ್ಯಾಧರನು ಉಗ್ರಸೇನನೆಂಬ ಗಂಧರ್ವನೇ ಉಗ್ರಸೇನನೆಂಬ ಯಾದವರಾಜನು."ತಾ" ಎಂಬುವನ್ನು ಪೂರ್ವಪದಗಳಿಗೂ ಅನ್ವಯಿಸಬಹುದು. ಆಗ "ಅಜಗರತಾ ವಿದ್ಯಾಧರ" ಎಂದು ಅನ್ವಯ. ॥ ೪೧ ॥

**ಅವತರಣಿಕಾ** :—ಈ ಪದ್ಯದಲ್ಲಿ ವಿಶ್ವಾವಸು, ಪರಾವಸು, ಚಿತ್ರ ಸೇನ ಗಂಧರ್ವರ ಅವತಾರ ಹೇಳುತ್ತಾರೆ.

**ಬಿಸಜ ಸಂಭವ ಯುಕ್ತ ವಿಶ್ವಾ- ।**
**ವಸು ಯುಧಾಮನ್ಯುತ್ತಮೌಜಸ ।**
**ಬಿಸಜ ಮಿತ್ರಾರ್ಯಮಯುತ ಪರಾವಸುಯೆನಿಸುತಿಪ್ಪ ॥**
**ಅಸಮ ಮಿತ್ರಾನ್ವಿತನು ಸತ್ಯಜಿತು ।**
**ವಸುಧಿಯೊಳು ಚಿತ್ರಸೇನನಮೃತಾಂ- ।**
**ಧಸರು ಗಾಯಕರೆಂದು ಕರೆಸುವರಾವ ಕಾಲದಲಿ ॥ ೪೨ ॥**

**ಪದ್ಯಾರ್ಥ** :—(೧) **ವಿಶ್ವಾವಸು**=ವಿಶ್ವಾವಸು ನಾಮಕ ಗಂಧ ರ್ವನು, ಬಿಸಜಸಂಭವ ಯುಕ್ತ=ಕಮಲದಿಂದ ಪುಟ್ಟಿದ ಬ್ರಹ್ಮಾವೇಶ ದಿಂದ, **ಯುಧಾಮನ್ಯು**ನೆಂದು ದ್ರುಪದ ರಾಜನ ಪುತ್ರನ ಅವತಾರ.

(೨) **ಪರಾವಸು**=ಪರಾವಸು ನಾಮಕ ಗಂಧರ್ವನು, ಬಿಸಜ ಮಿತ್ರಾರ್ಯಮಯುತ=ಕಮಲಮಿತ್ರನಾದ ಅರ್ಯಮನೆಂಬ ಸೂರ್ಯನ ಆವೇಶದಿಂದಸಹಿತ, **ಉತ್ತಮೌಜಸ**ನೆಂಬ ನಾಮದಿಂದ ದ್ರುಪದರಾಜ ನಲ್ಲೇ ಅವತರಿಸಿದನು.

(೩) **ಚಿತ್ರಸೇನ**=ಚಿತ್ರಸೇನನೆಂಬ ಗಂಧರ್ವನು, ಅಸಮ ಮಿತ್ರಾ ನ್ವಿತನು=ಬಲಿಷ್ಠನಾದ ಮಿತ್ರನಾಮಕ ಸೂರ್ಯನ ಆವೇಶದಿಂದ **ಕೂಡಿ**

ದವನಾಗಿ, **ಸತ್ಯಜಿತ**ನೆಂದು ದ್ರುಪದ ರಾಜನಲ್ಲೇ ಕೊನೆಯ ಮಗನಾಗಿ ಹುಟ್ಟಿದನು. ಈ ಮೂವರು ಗಂಧರ್ವರು, ವಸುಧಿಯೊಳು=ಭೂಮಿಯಲ್ಲಿ ಯುಧಾಮನ್ಯು, ಉತ್ತಮೌಜಸ, ಸತ್ಯಜಿತರಾಗಿ ಅವತರಿಸಿದರು. ಇವರು ಅಮೃತಾಂಧಸರು=ಅಮೃತಮಂಧೋನ್ನಂ ಯಸ್ಯ ಸಃ=ಅಮೃತವೇ ಯಾರಿಗೆ ಅನ್ನವಾಗಿದೆಯೋ ಅವರೇ ದೇವತೆಗಳ ಗಾಯಕರೆಂದು ದೇವಸಭೆಯಲ್ಲಿ ಗಾನಮಾಡುವ ಗಂಧರ್ವರೆಂದು ಕರೆಸುತ್ತಾರೆ. ಆವ ಕಾಲದಲಿ= **ನಿರಂತರದಲ್ಲಿ.**

**ಭಾವಸೂಚನ** :—ಬಿಸಜೇತಿ ॥ ತಾರತಮ್ಯೋದ್ದೀಪನೇ ॥ ಚ ॥ ಯುಧಾಮನ್ಯುಃ ಧಾತೃಯುಕ್ತೋ ವಿಶ್ವಾವಸ್ವಭಿಧಃ ಪುರಾ ॥ ಉತ್ತಮೌ-ಜಸ್ತ್ವರ್ಯಮಾಂಶ ಯುಕ್ತಶ್ಚೈವ ಪರಾವಸುಃ ॥ ಸತ್ಯಜಿತ್ ಪ್ರಾಕ್ ಮಿತ್ರಯುಕ್ತಃ ಚಿತ್ರಸೇನೋ ಮಹಾಬಲ ಇತಿ ॥ ೪೨ ॥

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ** : — ತಾಮರಸ ಭವಯುಕ್ತನಾದ ವಿಶ್ವಾವಸು ಯು । ಧಾಮನ್ಯು ಉತ್ತಮೌ-ಜಸನು ಅರ್ಯಮ ॥ ವ್ಯೋಮ ಮಣಿಯುಕ್ ಪರಾವಸು ಸತ್ಯಜನ್ಮಿತ್ರ । ನಾಮಕಕರ್ಾವಿಷ್ಟ ಚಿತ್ರಸೇನಗೆ ಆನಮಿಪೆ ॥೬೧॥ ಇದಕ್ಕೆ ಮಹಾ ಭಾರತ ತಾತರ್ಯ ನಿರ್ಣಯ ಅಧ್ಯಾಯ-೧೮, ಶ್ಲೋಕ-೭೩, ೭೪, ೭೫ **ಪ್ರಮಾಣವಿದ್ದೆ.**

**ಶ್ರೀ ವ್ಯಾಸದಾಸಸಿದ್ಧಾಂತ ಕೌಮುದೀ**

'**ಬಿಸಜೇತಿ**' ಪದ್ಮಮ್ ॥ ಮಿತ್ರಃ ತದಾಪ್ತಯಃ ಸೂರ್ಯಃ ॥ ಬಿಸಜಮಿತ್ರೇತಿ ವಿಶೇಷಣೇನ ಅರ್ಯಮಾ ಸೂರ್ಯ ಇತಿ ಅಭಿಪ್ರೈತಿ ॥ ಕ್ರಮೇಣ ಅನ್ವಯಃ ॥ ಚಕ್ರರಕ್ಷೌ ತು ತಸ್ಯಾಸ್ತಾಂ ಯುಧಾಮನ್ಯೂತ್ತ-ಮೌಜಸೌ ॥ ಧಾತ್ರರ್ಯಮಾವೇಶಯುತೌ ವಿಶ್ವಾವಸು ಪರಾವಸೂ ॥ ಅಸಮಃ ಅಪ್ರತಿದ್ವಂದ್ವಃ ॥ ಸ ಮಿತ್ರಾಂಶಯುತಃ ವೀರಃ ಚಿತ್ರಸೇನಃ ಮಹಾರಥಃ ॥ ಅನೇನ ಅಸಮಪದಂ ವಿವೃತಮ್ ॥ ಯತ ಇತಿ ಯೋಜ್ಯಮ್ ॥ ಸತ್ಯಜಿತ್ ಪೃಷತೋಽಭವತ್ ॥ ಅಮೃತಾಂಧಸಃ ದೇವಾಃ ॥ ೪೨ ॥

## ಕನ್ನಡಾರ್ಥ

ಬಿಸಜವೆಂದರೆ ಪದ್ಮ. ಅಲ್ಲಿ ಹುಟ್ಟಿದವನು ಚತುರ್ಮುಖ ಬ್ರಹ್ಮನು. ಬ್ರಹ್ಮಾವೇಶಯುಕ್ತನಾದ ವಿಶ್ವಾವಸುವೆಂಬ ಗಂಧರ್ವನು "ಯುಧಾಮನ್ಯು" ಎಂಬುವ (ದ್ರುಪದರಾಜನ ಮಗ) ನಾದನು. 'ಬಿಸಜಮಿತ್ರ' ಎಂಬ ವಿಶೇಷಣದಿಂದ ಅರ್ಯಮನೆಂಬುವವನು ಸೂರ್ಯನೆಂದು ಅಭಿಪ್ರಾಯವು ವ್ಯಕ್ತವಾಗುತ್ತದೆ. ಕ್ರಮದಿಂದ ಅನ್ವಯಮಾಡಬೇಕು. ಯುಧಾಮನ್ಯು, ಉತ್ತಮೌಜರೆಂಬ ಇಬ್ಬರು ರಥದ ಗಾಲಿಗಳನ್ನು ಸಂರಕ್ಷಿಸತಕ್ಕವರು. ಕ್ರಮವಾಗಿ ಅವರು ಬ್ರಹ್ಮ, ಅರ್ಯಮರ ಆವೇಶಯುಕ್ತರಾದ ವಿಶ್ವಾವಸು, ಪರಾವಸುಗಳೆಂಬ ಗಂಧರ್ವರ ಅವತಾರರಾಗಿರುತ್ತಾರೆ. ಎಂದು ತಾತ್ಪರ್ಯ ನಿರ್ಣಯದಲ್ಲಿ ಹೇಳಲಾಗಿರುತ್ತದೆ. ಮಿತ್ರನೆಂಬ ಸೂರ್ಯನ ಆವೇಶದಿಂದ ಯುಕ್ತನಾದ ಚಿತ್ರಸೇನ ಗಂಧರ್ವರಾಜನು 'ಸತ್ಯಜಿತ್' ಎಂಬುವವನಾದನು. (ಇವನೂ ದ್ರುಪದರಾಜನ ಮಗನೇ !) ಸತ್ಯಜಿತ್ ಪೃಷ್ಠತಃ "ಸತ್ಯಜಿತನು ಕೊನೆಯವನು" ಎಂದು ತಾತ್ಪರ್ಯ ನಿರ್ಣಯದಲ್ಲಿ ಹೇಳಲಾಗಿರುತ್ತದೆ. ॥ ೪೨ ॥

**ಅವತರಣಿಕಾ :**— ಹಿಂದೆ ಪೇಳಿದ ೨೨ನೇ ಕಕ್ಷದ ಕರ್ಮಜ ದೇವತೆಗಳಲ್ಲಿ ಪೇಳಿವವರಲ್ಲದೇ ಬಾಕಿ ಉಳಿದ ಗಂಧರ್ವರ ಕೆಲ ಅಪ್ಸರಸ್ತ್ರೀಯರ ವಿಷಯವಾಗಿ ಹೇಳುತ್ತಾರೆ.

**ಉಳಿದ ಗಂಧರ್ವರುಗಳೆಲ್ಲರು ।**
**ಬಲಿ ಮೊದಲು ಗೋಪಾಲರೆನಿಪರು ।**
**ಇಳಿಯೊಳಗೆ ಸೈರೇಂಧ್ರಿ ಪಿಂಗಳೆ ಅಪ್ಸರ ಸ್ತ್ರಿಯಳು ॥**
**ತಿಲೋತಮೆಯು ಪೂರ್ವದಲಿ ನಕುಲನ ।**
**ಲಲನೆ ಪಾರ್ವತಿಯೆನಿಸುವಳು ಗೋ- ।**
**ಕುಲದ ಗೋಪಿಯರೆಲ್ಲ ಶಬರೀ ಮುಖ್ಯ ಅಪ್ಸರರು ॥ ೪೩ ॥**

**ಪದ್ಯಾರ್ಥ :**— ಉಳಿದ=೨೨ನೇ ಕಕ್ಷವಲ್ಲಿ ಪೇಳಿದ ೮ ಜನ ಗಂಧರ್ವರು ಮತ್ತು ಹಿಂದಿನ ಪದ್ಯದಲ್ಲಿ ಪೇಳಿದ ಗಂಧರ್ವರನ್ನು ಬಿಟ್ಟು,

ಹೆಚ್ಚಾಗಿ ಉಳಿದ, ಗಂಧರ್ವರೆಲ್ಲರೂ=ಬಲಿ ಮೊದಲಾದ ಗಂಧರ್ವರೇ, ಗೋಪಾಲರೆನಿಪರು=**ಗೋಕುಲದಲ್ಲಿ** ಗೋಪಾಲಕರಾಗಿ ಹುಟ್ಟಿದರು. ಇನ್ನು ಇಳಿಯೊಳಗೆ=ಭೂಮಿಯಲ್ಲಿ ಪುಟ್ಟಿ, ಸೈರೇಂಧ್ರಿ ಎಂಬ **ಕುಬ್ಜಾ** ಶ್ರೀಕೃಷ್ಣಗೆ ಗಂಧವನ್ನರ್ಪಿಸಿದವಳು ಪೂರ್ವದಲ್ಲಿ **ಪಿಂಗಳೆ**ಯೆಂಬ ಅಪ್ಸರಸ್ತ್ರೀಯು. ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ವಿಶದ ವಾಗಿ ಬರೆದಿರುವರು. ಪೂರ್ವದಲಿ=ಮೊದಲಿಗೆ **ತಿಲೋತ್ತಮೆ** ಎಂಬ ಅಪ್ಸರಸ್ತ್ರೀಯಳೇ, ನಕುಲನ ಲಲನೆ=ಶಾಲ್ವನ ಮಗಳಲ್ಲದೇ ಬೇರೊಬ್ಬ ಪತ್ನಿ ಇದ್ದಳು. ಆಕೆಯು **ಪಾರ್ವತೀ** ಎನಿಸುವಳು=ಪಾರ್ವತೀ ಎಂಬ ನಾಮದಿಂದ ಕರೆಸಿದಳು. ಶಬರೀ ಮುಖ್ಯ ಅಪ್ಸರರು=ರಾಮಾವತಾರದಲ್ಲಿ ಶಬರಿಯಾಗಿ ಪುಟ್ಟಿದ ಅಪ್ಸರೆಯು ಇನ್ನುಳಿದ ಮುಖ್ಯ ಅಪ್ಸರಸ್ತ್ರೀಯರು ಗೋಕುಲದ ಗೋಪಿಯರು=ಕೃಷ್ಣಾವತಾರದಲ್ಲಿ ಗೋಕುಲದಲ್ಲಿ ಗೋಪಿಕಾ ಸ್ತ್ರೀಯರಾಗಿ ಜನಿಸಿದರು. ಇದಕ್ಕೆಲ್ಲ ತಾತ್ಪರ್ಯ ನಿರ್ಣಯ ಆಧಾರ ವಾಗಿದೆ.

**ಭಾವಸೂಚನ** :—ಉಳಿದೇತಿ ॥ ತಾರತಮ್ಯೇ ಚ ॥ "ತಥಾ ಪರೇ ಚ ಗಂಧರ್ವಾಃ ಗೋಪಾಲಾಃ ಬಲಿಪೂರ್ವಕಾಃ ಇತಿ ॥ ಸೈರೇಂಧ್ರೀತಿ ॥ ಅಥೋರ್ವಶ್ಯಾದ್ಯಪ್ಸರಸಃ ಸೈರಂಧ್ರೀ ಪಿಂಗಳಾ ಪುರಾ ಇತಿ ವಚನಾತ್ ॥ ತ್ರಿವಕ್ರೇತ್ಯರ್ಥಃ ॥ ನಕುಲನ ಲಲನೇತಿ ಹೆಂಡತಿ ॥ ತಾರತಮ್ಯೇ ಚ ॥ ನಕುಲ ಸ್ತ್ರೀ ಪಾರ್ವತೀ ಯಾ ಸಾ ಪೂರ್ವೇ ತು ತಿಲೋತ್ತಮೇತಿ । ಗೋಪೀನಾಂ ಸ್ವರೂಪಮಾಹ ॥ ಗೋಕುಲವೇತಿ ॥ ತದುಕ್ತಂ ॥ ಕೃಷ್ಣಾಂಗ ಸಂಗ ಗೋಪ್ಯಃ ಪ್ರಾಕ್ ಶಬರೀ ಸ್ತ್ರಿಯ ಇತಿ ॥ ೪೩ ॥

**ಶ್ರೀ ಜಗನ್ನಾಥದಾಸರ ಬೃಹತ್ತಾರತಮ್ಯ ಪದ** :—ಬಲನೆಂಬ ಗಂಧರ್ವ ಮೊದಲಾದ ನೂರು ಗೋ । ಕುಲದೊಳಗೆ ಗೋಪಾಲರೆನಿಸು ತಿಹರು ॥ ತಿಳಿವದೂರ್ವಶಿ ಮುಖ್ಯ ಅಪ್ಸರರೊಳಗೆ ಪಿಂ । ಗಳಾ ನಾಮ ಅಪ್ಸರ ಸೈರೇಂಧ್ರಿಯೆನಿಪಳಾಸಮಿಪ ॥ ೬೨ ॥ ನಕುಲನ ಲಲನಿ ಪಾರ್ವತಿ ತಿಲೋತ್ತಮಳು ॥

## ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ

'ಉಳಿದ' ;ಇತಿ ॥ ತಥಾಪರೇ ಚೇತ್ಯಸ್ಯಾರ್ಥ ಕಥನಮ್ ॥ ಭಗವದ್ಭಾರ್ಯಾತಾಯೋಗ್ಯಾಃ ಕಾಶ್ಚಿದಪ್ಸರಸಶ್ಚ ಯಾಃ ॥ ತಾಸ್ವೇತಾ ಪಿಂಗಳಾ ॥ ಸೈರಂಧ್ರೀ ಕುಬ್ಜಾ ॥ ಪಿಂಗಳಾಸ್ಯಜನ್ಮಸಿ ॥ ನನು ಉದಾಹೃತವಿಷ್ಣುರಹಸ್ಯಾತ್ ಪಿಂಗಳಾಯಾಃ ಪೂರ್ವಂ ಋಷಿ ಭಾರ್ಯಾತ್ವಂ ಪುಂಕಾಮಾನಾನುಮೃತತ್ವಾತ್ ಬಹುಗಾಮಿತ್ವೇಶ್ಯಾತ್ವಂ ಪ್ರತಿಪಾದ್ಯತೇ ॥ ಅತಃ ಅಪ್ಸರಸ್ತ್ವಂ ಕಥಂ ಇತಿ ಚೇತ್ ನ ! ತಸ್ಯಾಃ ಏವ ಭೂಮೌ ಜನ್ಮದ್ವಯಕಲ್ಪನೇ ಅವಿರೋಧಾತ್ ॥ ತಿಲೋ-ತ್ತಮೇಯು ॥ ನನು ಪಿಂಗಳಾದೌ ಅವಿದ್ಯಮಾನಂ ಪೂರ್ವಪದಂ ಅತ್ರೈವ ಕುತ ಇತಿ ॥ ತತ್ ನ ॥ ಸೂತ್ರಾಣಾಂ ಶ್ರುತ್ಯನುಸಾರಿತ್ವನತ್ ಪೂರ್ವ ಪದಪ್ರಯೋಗೇ ಶ್ರೀಮೂಲಂ ಅನುಕೂಲಿತಂ ಸ್ಯಾತ್ ಇತ್ಯಾಶಯಾತ್॥ ಏತನ್ನಿದರ್ಶನೇನ ಏವಮೇವ ಅಸ್ಮಚ್ಛಾಸ್ತ್ರಾಮೃತಾಶನನದೀವಿಹಾರಿಣಾಂ (ಅಸ್ಮಚ್ಛಾಸ್ತ್ರ ಮೃತತರಂಗಿಣೀ) ಮತೇ ಸಂಪತೀರ್ಥ ತೀರ್ಥ ವಾರಿಧಿ ತರಂಗೈಃ ಸಂಪ್ಲುತಾ ಇತಿ ಸೂಚಯತಿ॥ ಯಥಾಹುಃ ಮೂಲಾ-ಚಾರ್ಯಾಃ "ನಕುಲಸ್ಯಾಸೀತ್ ಪೂರ್ವಂ ಭಾರ್ಯಾ ತಿಲೋತ್ತಮಾ" ॥ ಇತಿ ॥ ನಕುಲಲಲನಾ ಪೂರ್ವಂ ತಿಲೋತ್ತಮಾ ಇತ್ಯನ್ವಯಃ ॥ ಗೋಪ್ಯಃ ಕೃಷ್ಣಭುಕ್ತಾ ಹ್ಯೇವ ಅಪ್ಸರಸಃ ॥ ಗೋಪಾಂಗನಾಃ ಅಪಿ ಪುರಾ ವರಮಾಪಿರೇ ಯತ್ ॥ ಸಂಸ್ಕಾರತಃ ಪ್ರಥಮಮೇವ ಸುಸಂಗಮೋ ನೋ ಭೂಯಾತ್ ॥ ಪರಮಾಪ್ಸರಸಃ ಪುರಾ ಯಾ ॥ ದೃಷ್ಟ್ವಾ ತಮೇವ ಶಬರೀ ಪರಮಂ ಹರಿಂ ಚ ॥ ಶಾಪಾತ್ ವರಾಪ್ಸರಸಮೇವ ಹಿ ತಾಂ ವಿಮೋಚ್ಯ ॥ ೪೩ ॥

### ಕನ್ನಡಾರ್ಥ

ಹಿಂದೆ ಹೇಳಿದವರನ್ನುಳಿದ ಗಂಧರ್ವರು ಎಂದು ಅರ್ಥಮಾಡಬೇಕು. ಈ ಪದ್ಯವು 'ತಥಾಪರೇ ಚ' ಎಂಬ ಶ್ಲೋಕದ ಅರ್ಥವನ್ನು ವಿವರಿಸುತ್ತದೆ.

ಪರಮಾತ್ಮನ ಸತಿಯಾಗಲು ಯೋಗ್ಯರಾದ ಕೆಲವು ಅಪ್ಸರೆಯರು ಗಳಲ್ಲಿ ಪಿಂಗಳಾ ಎಂಬುವವಳೂ ಒಬ್ಬಳು. 'ಸೈರೇಂಧ್ರಿ' ಎಂದರೆ

ಕೃಷ್ಣಾವತಾರದಲ್ಲಿ ಹುಟ್ಟಿರುವ ಕುಬ್ಜಾ ಎಂಬ ಕಂಸನ ದಾಸಿ. ಪಿಂಗಳಾ ಎಂಬುವವಳೇ ಕುಬ್ಜಾ ಅಥವಾ ಸೈರೇಂಧ್ರಿ ಎಂಬ ಹೆಸರಿನಿಂದ ಎರಡನೆಯ ಜನ್ಮವನ್ನು ತಾಳಿದಳು.

ಹಿಂದೆ ಉದಾಹರಿಸಲಾಗಿರುವ ವಿಷ್ಣುರಹಸ್ಯ ವಚನದಿಂದ ಪಿಂಗಳೆಯು ಪೂರ್ವದಲ್ಲಿ ಋಷಿಪತ್ನಿಯೆಂದು ಅವಳು ಪುರುಷಕಾಮನೆಯಿಂದ ಮೃತಳಾದುದರಿಂದ ಬಹು ಪುರುಷಗಾಮಿ ವೇಶ್ಯಾಜನ್ಮವವಳಿಗೆ ಪ್ರಾಪ್ತವಾಯಿತೆಂದೂ ತಿಳಿದು ಬರುತ್ತದೆ. ಆದರೆ ಅವಳು ಅಪ್ಸರೆಯೆಂದು ಇಲ್ಲಿ ಹೇಳುವುದು ಹೇಗೆ ? ಎಂದು ಸಂಶಯವು ಬರುತ್ತವೆ. ಆದರೆ "ಆ ಅಪ್ಸರೆಯೇ ಋಷಿಪತ್ನಿಯಾದಳು; ೩ನೆಯ ಜನ್ಮದಲ್ಲಿ ಸೈರೇಂಧ್ರಿಯಾದಳು," ಎಂದು ಹೀಗೆ ಅವಳಿಗೇ ಎರಡು ಜನ್ಮಗಳಿರುವವೆಂದು ಹೇಳಿದರೆ ಯಾವ ವಿರೋಧವೂ ಇಲ್ಲ ಎಂದು ಈ ಸಂಶಯವನ್ನು ಪರಿಹರಿಸಬಹುದು.

"ತಿಲೋತ್ತಮೆಯು ಪೂರ್ವದಲ್ಲಿ ನಕುಲನ ಲಲನೆ ಪಾರ್ವತಿಯೆನಿಸುವಳು" ಎಂಬಲ್ಲಿರುವಂತೆ 'ಪಿಂಗಳಾ' ಎಂಬಲ್ಲಿಯೇ 'ಪೂರ್ವಂ ಪಿಂಗಳಾ' ಎಂದು ಹೇಳಬಹುದಾಗಿತ್ತು. ಇಲ್ಲಿಯೇ ಪಾತ್ರ ಹಾಗೆ ಯಾಕೆ ಹೇಳಿರುವರು ? ಎಂದು ಸಂಶಯವು ಮೂಡಬಹುದು. ಆದರೆ ಅದಕ್ಕೆ ಹೀಗೆ ಉತ್ತರ ತಿಳಿಯಬೇಕು. ಸೂತ್ರಗಳು ಶ್ರುತಿಯನ್ನನುಸರಿಸುವಂತೆ ಮೂಲವನ್ನು ಅನುಸರಿಸಿ ಮೂಲಾರ್ಥವನ್ನೇ ಅನುಕೂಲಿಸಲು ಹೀಗೆ ಪೂರ್ವಪದವನ್ನು ಪ್ರಯೋಗಿಸಿರುತ್ತಾರೆ. ಈ ದೃಷ್ಟಾಂತದಿಂದ ಈ ಶಾಸ್ತ್ರ ಸುರನದಿಯಲ್ಲಿ ವಿಹರಿಸುವ ಮಹಾಜ್ಞಾನಿಗಳಿಗ ಶ್ರೀಮಧ್ವಾ-ಚಾರ್ಯ ಶಾಸ್ತ್ರ ಸಮುದ್ರದ ತರಂಗಗಳಿಂದ ಸಂಪ್ಲುತವಾದುದು ಈ ಗ್ರಂಥವೆಂದು ಸೂಚಿಸಿದಂತೆ ಆಗುತ್ತದೆ ಹೇಗೆಂದರೆ "ನಕುಲನ ಹೆಂಡತಿಯು ಪೂರ್ವದಲ್ಲಿ ತಿಲೋತ್ತಮೆಯು" ಎಂಬುದಾಗಿ ಮೂಲವಚನವಿರುತ್ತದೆ. ನಕುಲನ ಪತ್ನಿಯು ಪೂರ್ವದಲ್ಲಿ ತಿಲೋತ್ತಮೆಯೆಂಬ ಅಪ್ಸರೆಯೆಂದು ಅದಕ್ಕೆ ಅರ್ಥವಾಗುತ್ತದೆ.

ಕೃಷ್ಣೋಪಭುಕ್ತರಾದ ಗೋಪಿಯರು ಅಪ್ಸರಸ್ತ್ರೀಯರು. ಉಪನಯನ ಸಂಸ್ಕಾರದ ಪೂರ್ವದಲ್ಲಿಯೇ ಶ್ರೀಕೃಷ್ಣನ ಅಂಗಸಂಗವು ತಮಗೆ ಆಗಬೇಕೆಂದು ತಪಸ್ಸನ್ನಾಚರಿಸಿ ವರವನ್ನು ಪಡೆದಿದ್ದರು ಎಂದು ನಿರ್ಣಯದ ವಚನವೇ ಇದಕ್ಕೆ ಆಧಾರ.

ಶಬರಿಯು ಅಪ್ಸರಸ್ತ್ರೀಯು. ಶಾಪನಿಮಿತ್ತದಿಂದ ಶಬರೀ ಜನ್ಮವವಳಿಗೆ ಬಂದಿತ್ತು. ಶ್ರೀರಾಮನಿಗೆ ಫಲಸಮರ್ಪಣದಿಂದ ಶಾಪನಿವೃತ್ತಿಯಾಯಿತೆಂದು ನಿರ್ಣಯವಚನವೇ ಇದಕ್ಕೆ ಆಧಾರ ॥ ೪೩ ॥

**ಅವತರಣಿಕಾ :—** ಇನ್ನು ಆಜಾನಜ ದೇವತೆಗಳಲ್ಲಿರುವ ೧೬,೧೦೦ ಗೋಪಿಕಾ ಸ್ತ್ರೀಯರಲ್ಲಿ ತ್ವಷ್ಟೃಪುತ್ರಿಕಶೇರು ಎಂಬಾಕೆ ಉತ್ತಮಳೆಂದು ಹೇಳುತ್ತಾರೆ.

**ಕೃಷ್ಣವರ್ತ್ಮನ ಸುತರೊಳಗೆ ಶತ- ।**
**ದ್ವ್ಯಷ್ಟ ಸಾವಿರ ಸ್ತ್ರೀಯರಲ್ಲಿ ಪ್ರ- ।**
**ವಿಷ್ಟಳಾಗಿ ರಮಾಂಬ ತತ್ತನ್ನಾಮ ರೂಪದಲಿ ॥**
**ಕೃಷ್ಣ ಮಹಿಷಿಯರೊಳಗೆ ಇಪ್ಪರು ।**
**ತ್ವಷ್ಟೃ ಪುತ್ರಿ ಕಶೇರು ಇವರೊಳು ।**
**ಶ್ರೇಷ್ಠಳೆನಿಪಳು ಉಳಿದ ಋಷಿಗಣ ಗೋಪಿಕಾ ಸಮರು ॥೪೪॥**

**ಪದ್ಯಾರ್ಥ :—** ಕೃಷ್ಣವರ್ತ್ಮನ=ಅಗ್ನಿದೇವರ, ಅಗ್ನಿಸುತರೊಳಗೆ ಅಂದರೆ ಪೂರ್ವದಲ್ಲಿ ಅಗ್ನಿಪುತ್ರರು ಶ್ರೀಹರಿಯ ಅಂಗಸಂಗ ಅಪೇಕ್ಷೆಯಿಂದ ತಪಸ್ಸುಮಾಡಲು, ಕೃಷ್ಣಾವತಾರದಲ್ಲಿ ನಿಮಗೆ ಅಂಗಸಂಗವೀವೆನೆಂದು ಹಿಂದೆ ವಾಯುದ್ವಾರಾ ವರವನ್ನು ಇತ್ತುದಕೆ, ಈಗ ಕೃಷ್ಣಾವತಾರ ಕಾಲದಲ್ಲಿ ೧೬,೧೦೦ ಜನರು ಗೋಪಿಕಾ ಸ್ತ್ರೀಯರಾಗಿ ಜನಿಸಿದರು. ಶ್ರೀಕೃಷ್ಣನು ಈ ಶತದ್ವ್ಯಷ್ಟ ಸಾವಿರ ದ್ವ್ಯಷ್ಟ ಹದಿನಾರು ಸಾವಿರ ನೂರು ಜನರನ್ನು ಲಗ್ನವಾದನು. ಈ ಎಲ್ಲ ಗೋಪಿಕಾ ಸ್ತ್ರೀಯರಲ್ಲಿ ತತ್ತನ್ನಾಮ ರೂಪದಲಿ=ಆಯಾ ಗೋಪಿಯರ ನಾಮ ಮತ್ತು ಹೆಸರಿನಿಂದ, ರಮಾಂಬ=

ಶ್ರೀರಮಾದೇವಿಯರು ಸಾಕ್ಷಾತ್ ಲಕ್ಷ್ಮೀದೇವಿಯು, ಈ ಕೃಷ್ಣ ಮಹಿಷಿಯರೊಳಗೆ=ಕೃಷ್ಣದೇವರ ಹೆಂಡಂದಿರಲ್ಲಿ, ಪ್ರವಿಷ್ಟಳಾಗಿಪ್ಪಳು=ಶ್ರೀಲಕ್ಷ್ಮೀದೇವಿಯರ ಆವೇಶವಿರುವುದು. ಇದರಲ್ಲಿ ತ್ವಷ್ಟೃಪುತ್ರಿ ಕಶೇರು ಎಂಬ ಕನ್ಯೆಯಲ್ಲಿ=ತ್ವಷ್ಟೃನಾಮಕ ಸೂರ್ಯ ಪುತ್ರಿಯಲ್ಲಿ ರಮಾ ಆವೇಶ ಹೆಚ್ಚಿಗೆ ಇದ್ದ ಕಾರಣ ಇವರಲ್ಲಿ ಶ್ರೇಷ್ಠಳೆನಿಸಳು. ಉತ್ತಮಳು ಎಂದು ಕರೆಸುತ್ತಾಳೆ. ಇವರೆಲ್ಲ ಆಜಾನಜ ದೇವತೆಗಳಿಗೆ ಸಮಾನರು. ಉಳಿದ ಋಷಿಗಣ=ಹಿಂದೆ ನಾರದ, ಭೃಗ್ವಾದಿ ಮತ್ತು ಮರೀಚ್ಯಾದಿಗಳು ೧೯ನೇ ಕಕ್ಷದಲ್ಲಿಪ್ಪ (೯೦) ಜನರು. ಹೀಗೆ ನೂರು ಋಷಿಗಳನ್ನು ಬಿಟ್ಟು, ಉಳಿದ ಶತೋನಶತ ಕೋಟಿ ಋಷಿಗಳು, ಗೋಪಿಕಾ=ಈ ಗೋಪಿಕಾ ಸ್ತ್ರೀಯರಿಗೆ ಸಮಾನರೆಂದು ಹೇಳಿದ್ದಾರೆ. ತಾತ್ಪರ್ಯನಿರ್ಣಯ ವಾಕ್ಯಗಳೂ ಇವೆ.

**ಭಾವಸೂಚನ** :—ಕೃಷ್ಣವರ್ತ್ಮೇತಿ ಅಗ್ನಿ ॥ ಶ್ರೀಯುಕ್ ಷೋಡಶ ಸಹಸ್ರ ಸ್ತ್ರಿಯಃ ಪ್ರಾಗ್ವಹ್ನಿಪುತ್ರಕಾಃ ॥ ಕಶೇರುತ್ವಷ್ಟೃಪುತ್ರೀ ಯಾ ತಾಸಾಂ ಮಧ್ಯೇ ಗುಣಾಧಿಕೇತಿ ॥ ತಾರತಮ್ಯೇ ॥ ತಾಸಾಂ ಪ್ರಧಾನ ತ್ವಷ್ಟೃಪುತ್ರೀ ಕಶೇರುರಿತಿ । ಭಾರತತಾತ್ಪರ್ಯೇ ॥ ವಿಶ್ವಾಮಿತ್ರ ವಸಿಷ್ಠಾದಿ ವರ್ಜಿತಾ ಋಷಯೋಽಖಿಳಾಃ । ಇತಿ ತಾರತಮ್ಯೇ ॥ ೪೪ ॥

**ಶ್ರೀಜಗನ್ನಾಥದಾಸರ ಬೃಹತ್ತಾರತಮ್ಯ ಪದ** :— ಹಿಂದಿಂದ ಷಣ್ಮುಖನ ಜನನಿ ಸಂಯುಕ್ತ ಅಭಿಮನ್ಯು ನಾ । ಸಖಿ ಸುಭದ್ರಾ ತ್ರಿಜಟೆ ನಾಮಕಳು ಪೂರ್ವದಲಿ । ಅಕಳಂಕ ಗೋಪಿಕಾಸ್ತ್ರೀಯರು ಅಪ್ಸರರೆಂದಾ ನಮಿಪೆ ॥ ೬೩ ॥ ನೂರುಳಿದು ಶತಕೋಟಿ ಋಷಿಗಳುತ್ತಮರ ಬಿ । ಟ್ಟೀರೆಂಟು ಸಾವಿರದ ನೂರೆನಿಸುವ ॥ ಶೌರಿ ಸ್ತ್ರೀಯರು ರಮಾವೇಶಯುತರಗ್ನಿಕು । ಮಾರಕರು ಪಾವಕಗೆ ಅಧಮರೆಂದರಿವು ॥ ೬೪ ॥ ಇವರೊಳಧಿಕ ಕಶೇರು ತ್ವಷ್ಟೃನಾಮಕ ಸೂರ್ಯ।ಕುವರಿ ಆಜಾನಜರು ಕರ್ಮಜರಿಗೆ ಅವರರೀರೈವತ್ತು ಗುಣದಿ ಆಜಾನಜರಿಗೆ । ದಿವಿಜ ಕೃಶಾನು ಸೂನುಗಳು ಸಮರೆಂದು ॥ ೬೫ ॥ ಕೃಷ್ಣಾಂಗ ಸಂಗ ಗೋಪಿಯರಿಂದಲಿ ಭಕ್ತಿ । ಷ್ಟಷ್ಟ ಸಾಹಸ್ರ ಶತಸ್ತ್ರೀಯರಧಿಕಾ।ವಿಷ್ಣು ಪತ್ನ್ಯಾವೇಶ ಬರಲು ಆಜಾನಜರಿಗ। ಶ್ರೇಷ್ಠರೆನಿಪರು ಹ್ರಾಸ ಕಾಲದಲಿ ಸಮರೆಂದು ॥ ೬೬ ॥ ನಂದಗೋಪಿನಿ

ಅಗ್ನಿಪುತ್ರರ್ಗೆ ಸಹಸ್ರ ಗುಣ | ದಿಂದುತ್ತಮಳು ದೇವಕಿ ಯಶೋದೆಗೆ ||
ವಂದ್ಯಳೆನಿಪಳು ವಸುದೇವ ಉತ್ತಮ ಏಕು | ಮುಂದಿಗಳನುಳಿದು ಚಿರ
ಪಿತೃ ಶತಾಧಮರೆಂದು || ೬೭ ||

ಈ ಎಲ್ಲ ಪದಗಳು ಹಿಂದಿನ ಕಕ್ಷಾರಂಭಿಸಿ, ೬೦ನೇ ಪದ್ಯದವರೆಗೆ ಇರುವ ದೇವತೆಗಳನ್ನು ಸಾಮೂಹಿಕವಾಗಿ ಸ್ತೋತ್ರಗೈದಿದ್ದಾರೆ. ಸರಿಯಾಗಿ ನೋಡಿ ತಿಳಿದು ಅರ್ಥ ಸಮನ್ವಯ ಮಾಡಿಕೊಳ್ಳುವುದು. ೧೯ನೇ ಕಕ್ಷದಿಂದ ದೇವಗಂಧರ್ವರ ಕಕ್ಷದವರೆಗೆ ಸರಿಯಾಗಿ ತಾರತಮ್ಯ ತಿಳಿದು ಅರ್ಥ ಮಾಡುವುದು ಒಳ್ಳೇದು. ತಾರತಮ್ಯವು ಬಹು ಕಠಿಣ ಘಟ್ಟ.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅತ್ರ ಯದ್ಯಪಿ ಶ್ರೀಮಧ್ವಾಚಾರ್ಯಗ್ರಂಥಮೂಲಕೋಽಯಂ ಸಂಧಿಃ || ತತ್ರ ಶ್ರೀಯುಕ್ ಷೋಡಶಸಾಹಸ್ರಸ್ತ್ರಿಯಃ ಪ್ರಾಕ್ ವಹ್ನಿಪುತ್ರಕಾಃ ಇತ್ಯುಕ್ತಮ್ || ತದನುಸಾರೇಣಾಪಿ ಕ್ವಚಿತ್ ಹದಿನಾರು ಸಾವಿರ ನಂದಗೋಪ ಕುಮಾರನರ್ಧಾಂಗಿಯರನ ಇತ್ಯುಕ್ತೇಃ ಅತ್ರಾಪಿ ತಥಾ ಪ್ರಯೋಕ್ತವ್ಯೇ ಚ ಏವಮಾಹ || ತೇನ ಪೂರ್ವವತ್ "ದ್ವಿಷಷ್ಟಿ ಸಹಸ್ರಾಣಿ ಶತಂ ಚ ರೂಪಶೀಲಾ ದಾರಾಃ ಅಕ್ಷತಾಃ ಸಪ್ತ ತಸ್ಯ || ಪುತ್ರಾಃ ಅಗ್ನೇಃ ಪೂರ್ವಮಾಸಂಸ್ತ ತೇಽಥ ಅಜಾನಜ್ಯೈಃ ಸರ್ವಗುಣ್ಯೈಃ ಸಮಸ್ತಾಃ||" "ಸ್ವಭಾವತಃ ಇಂದಿರಾವೇಶತೋಽಥ ತಾಸಾಂ ಪ್ರಧಾನಾತ್ವಷ್ಟೃಪುತ್ರೀ ಕಶೇರುಃ" ಇತಿ ಆಚಾರ್ಯವಚನಮನುಸರತೀತಿ ಇತಿ ಪ್ರತೀಮಃ || ಅಗ್ನಿಸುತಪದೇ ಪ್ರಯೋಕ್ತವ್ಯೇಪಿ ಟಕಾರಸ್ಯ ಪ್ರಕೃತ ಪ್ರಾಸಾಕ್ಷರತ್ವಾತ್ ತದ್ರಕ್ಷಣಾಯೈವಮ್ || ದಶಾನ್ಯೇ ಋಷಯಃ ಗೋಪಿಕಾಸಮಾಃ || ೪೪ ||

### ಕನ್ನಡಾರ್ಥ

ಶ್ರೀಮಧ್ವಾಚಾರ್ಯ ಗ್ರಂಥವನ್ನು ಈ ಸಂಧಿಯು ಅನುಸರಿಸುವುದು. ಲಕ್ಷ್ಮೀ ಸನ್ನಿಧಿಯುಕ್ತರಾದ ಹದಿನಾರು ಸಾವಿರ ಸ್ತ್ರೀಯರು ಪೂರ್ವದಲ್ಲಿ ಅಗ್ನಿಪುತ್ರರೆಂದು ಹೇಳಲಾಗಿರುತ್ತದೆ. ಇದನ್ನನುಸರಿಸಿಯೂ

ಕೆಲವು ಕಡೆಗಳಲ್ಲಿ "ಹದಿನಾರು ಸಾವಿರ ನಂದಗೋಪ ಕುಮಾರನರ್ಧಾಂಗಿಯರನ" ಎಂದು ಪ್ರಯೋಗಿಸಿರುತ್ತಾರೆ. ಇಲ್ಲಿಯೂ ಅದರಂತೆ ಪ್ರಯೋಗಿಸಬಹುದಾಗಿತ್ತು. ಆದರೂ ಹೀಗೆ ಹೇಳುವುದರಿಂದ 'ದ್ವ್ಯಷ್ಟೌ ಸಹಸ್ರಾಣಿ' ಎಂಬ ಶ್ರೀಮದಾಚಾರ್ಯರ ತಾತ್ಪರ್ಯ ನಿರ್ಣಯದ ವಚನವನ್ನು ಅನುಸರಿಸುತ್ತಾರೆ ಎಂದು ತಿಳಿದು ಬರುತ್ತದೆ.

ಸ್ವಾಭಾವಿಕವಾಗಿ ಹಾಗೂ ಇಂದಿರಾದೇವಿಯ ಆವೇಶದಿಂದ ತ್ವಷ್ಟೃಪುತ್ರಿಯಾದ ಕಶೇರು ಎಂಬುವವಳು ಅವರುಗಳಲ್ಲಿ ಪ್ರಧಾನಳೆಂದು ಅಲ್ಲಿ ಹೇಳಿರುತ್ತಾರೆ.

"ಅಗ್ನಿಸುತ" ಎಂದು ಪ್ರಯೋಗಿಸಬಹುದಿತ್ತು. ಆದರೂ ಈ ಪದ್ಯದಲ್ಲಿ ಟಕಾರ ಪ್ರಾಸವಿರುವುದರಿಂದ ಅದನ್ನು ಸಂರಕ್ಷಿಸಲು "ಕೃಷ್ಣವರ್ತ್ಮನ ಸುತರೊಳಗೆ ಶತದ್ವ್ಯಷ್ಟ ಸಾವಿರ ಸ್ತ್ರೀಯರಲ್ಲಿ" ಎಂದು ಹೀಗೆ ಪ್ರಯೋಗಿಸಿರುತ್ತಾರೆ.

ನೂರಾ ಹತ್ತು ಋಷಿಗಳನ್ನುಳಿದು ಇತರ ಋಷಿಗಳು ಗೋಪಿಕಾ ಸ್ತ್ರೀಯರಿಗೆ ಸಮಾನರು ಎಂದು ಪ್ರಮಾಣವಿದೆ. ॥ ೪೪ ॥

**ಅವತರಣಿಕಾ** :— ಇಲ್ಲಿ ಆಜಾನಜ ದೇವತೆಗಳ ಕಕ್ಷದಲ್ಲಿಯ ಕೆಲವರನ್ನು ಹೇಳುತ್ತಾರೆ. ೩೨ನೇ ಸಂಧಿಯಲ್ಲಿ ಶ್ರೀ ದಾಸಾರ್ಯರು ಆಜಾನಜ ದೇವತೆಗಳ ಗುಂಪನ್ನು ವಿಸ್ತಾರವಾಗಿ ಸ್ತೋತ್ರಗೈದಿದ್ದಾರೆ.

**ಸೂನುಗಳು ಯೆನಿಸುವರು ದೇವ ಕೃ- ।**
**ಶಾನುವಿಗೆ ಕ್ರಥುಸಿಂಧು ಶುಚಿ ಪವ- ।**
**ಮಾನ (ಮೌನ) ಕೌಶಿಕರೈದು ತುಂಬುರು ಊರ್ವಶೀ ಶತರು॥**
**ಮೇನಕೀ ಋಷಿ ರಾಯರುಗಳಾ ।**
**ಜಾನು ಸುರರಿಗೆ ಸಮರೆನಿಪರು ಸು- ।**
**ರಾಣಕರನಾಖ್ಯಾತ ದಿವಿಜರ ಜನಕರೆನಿಸುವರು ॥ ೪೫ ॥**

**ಪದ್ಯಾರ್ಥ** :— ದೇವ ಕೃಶಾನುವಿಗೆ=ದೀವ್ಯತೀತಿ ದೇವಃ ಪ್ರಕಾಶ ಮಾನನಾದ ಕೃಶಾನು=ಅಗ್ನಿದೇವರಿಗೆ (೧) ಕ್ರಥು, (೨) ಸಿಂಧು, (೩) ಶುಚಿ, (೪) ಪವಮಾನರೈದು, (೫) ಕೌಶಿಕರೆಂದು ನಾಮವುಳ್ಳವರು. ಐದು ಜನರು ಅಗ್ನಿಗೆ ಸೂನುಗಳೆನಿಸುವರು ಮಕ್ಕಳೆಂದೆನಿಸುತ್ತಾರೆ. “ಪವಮಾನ ಕ್ರಥೌ ದ್ವೌ ಪ್ರಾಕ್ ಪವಮಾನೋಽಗ್ನಿಜಸ್ಮೃತಃ || ಕೌಶಿಕೋಽಥಾಗ್ನಿಜಃ ಸಿಂಧುಃ ಶುಚಿ ಪ್ರಾಕ್ ಶುಚಿರಗ್ನಿಜಃ||” ಎಂದರೆ ಇಲ್ಲಿ ಪವಮಾನನೆಂಬ ಅಗ್ನಿಗೆ ಪವಮಾನ, ಕ್ರಥರೆಂದು ಇಬ್ಬರು ಮಕ್ಕಳು. ಕೌಶಿಕ, ಸಿಂಧು ಎಂದು ಇಬ್ಬರು ಅಗ್ನಿಯ ಮಕ್ಕಳು. ಶುಚಿಯೆಂಬ ಅಗ್ನಿಗೆ ಶುಚಿಯೆಂಬ ಮಗನೊಬ್ಬನು, ಹೀಗೆ ಐದು ಜನರು ಅಗ್ನಿ ಮಕ್ಕಳು. ತುಂಬುರು=ತುಂಬುರಾದಿ ೧೦೦ ಜನರು ಗಂಧರ್ವರು. ಇವರಲ್ಲಿ ೮ ಜನ ಕರ್ಮಜರಲ್ಲಿ ಹೇಳಿದವರನ್ನು ಬಿಟ್ಟು, ಉಳಿದ ಗಂಧರ್ವರು ಊರ್ವಶೀ, ಮೇನಕಾ, ಶತ ಅಪ್ಸರ ಸ್ತ್ರೀಯರು, ಕರ್ಮಜರಲ್ಲಿ ಹೇಳಿದವರನ್ನು ಬಿಟ್ಟು, ನೂರು ಜನರಲ್ಲಿದ್ದ ಅಪ್ಸರೆಯರು ಮತ್ತು ಋಷಿ=ಹಿಂದಿನ ನಾರದ, ಭೃಗು, ವಸಿಷ್ಠಾದಿ ೬ ಜನ, ವಿಶ್ವಾಮಿತ್ರಾದಿ ಹೀಗೆ ೧೦ ಜನ, ಕರ್ಮಜ ದೇವತೆಗಳಲ್ಲಿರುವ ೯೦ ಜನ ಋಷಿಗಳು, ಹೀಗೆ ನೂರು ಜನ ಋಷಿಗಳನ್ನು ಬಿಟ್ಟು ಶತೋನಶತಕೋಟಿ ಋಷಿಗಳು. ರಾಯರುಗಳು=ಪ್ರಿಯವ್ರತ, ಪೃಥು ಆದಿ, ಶತ ರಾಜರು. ಕರ್ಮಜ ದೇವತೆಗಳ ಕಕ್ಷದಲ್ಲಿರುವವರನ್ನು ಬಿಟ್ಟು ಉಳಿದ ರಾಜರುಗಳು ಆಜಾನಸುರರಿಗೆ ಸಮರೆನಿಸುವರು. ಮತ್ತು ಸುರಾಣಕ=“ಅಸುರಾಃ ತ್ರಿಂಶದೇವ ಚ” ಎಂಬ ವಾಕ್ಯದಿಂದ ದೇವತೆಗಳ ಕಕ್ಷದಲ್ಲಿರುವರು. ದೇವಕುಲ ಜಾತರು, ಅನಾಖ್ಯಾತ ದಿವಿಜರೇ=ಸುರಾಣಕರು. ದೇವಭೃತ್ಯಾ ದೇವಕುಲೇ ಜಾತಾಃ. ಮತ್ತು ಅನಾಖ್ಯಾತ ದಿವಿಜರಿಗೆ=ಖ್ಯಾತ ಪ್ರಸಿದ್ಧ ಇಲ್ಲದ ಕೆಲವು ದೇವ ಭೃತ್ಯರ ಗಣಕ್ಕೆ, ದೇವ ಕೃಶಾನುಗಳು ಜನಕರೆನಿಸುವರು=ದೇವತೆಗಳು ತಂದೆಗಳೆನಿಸುತ್ತಾರೆ. ತುಂಬುರ್ವಾದಿ ಶತಂ ಚೈವ ಊರ್ವಶ್ಯಾದ್ಯಪ್ಸರಾಸ್ತಥಾ || ಋಷಯಶ್ಚ ವಸಿಷ್ಠಾದೀನ್ನೃತೇ ಆಜಾನಜಾಸ್ಸ್ಮೃತಾ ಎಂದು ಬೃಹತ್ತಾರತಮ್ಯದಲ್ಲಿ ಹೇಳಿದೆ.

**ವಿಶೇಷ ಸೂಚನೆ** :— ಈ ಆಜಾನಜ ದೇವತೆಗಳಲ್ಲಿ ಎಷ್ಟು ಜನ

ಗುಂಪು ಇದೆಯೆನ್ನುವುದು ಅತ್ಯಾವಶ್ಯ ತಿಳಿಯುತಕ್ಕದ್ದು. "ದೇವಭೃತ್ಯಾಃ ನಾಮ ವಿಶೇಷ್ಯೈಃ (೧) ವೇದೇ ಅನ್ಯಾಖ್ಯಾತಾ (೨) ದೇವಕುಲೇ ಜಾತಾಶ್ಚ ॥ ಅನಾಖ್ಯಾತರೆಂದರೆ ವೇದದಲ್ಲಿ ಅಪ್ರಸಿದ್ಧರು, ದೇವತೆಗಳ ಕುಲದಲ್ಲಿ ಹುಟ್ಟಿದವರು, ಆಜಾನಜರೆಂದು ಹೆಸರು. ಇಷ್ಟು ಜನರ ಗುಂಪು ಆಜಾನಜ ಕಕ್ಷದಲ್ಲಿ "ದೇವಸರ್ಗಾಷ್ಟಾ ಚ ವಿಬುಧಾಃ (೧) ಪಿತರಃ (೨) ಅಸುರಾಃ (೩) ಗಂಧರ್ವಾ (೪) ಪ್ಸರಸಃ (೫) ಸಿದ್ಧಾಃ (೬) ಯಕ್ಷ (೭) ರಕ್ಷಾಂಸಿ (೮) ಚಾರಣಾಃ (೯) ಭೂತ (೧೦) ಪ್ರೇತ (೧೧) ಪಿಶಾಚಾಶ್ಚ (೧೨) ವಿದ್ಯಾಧ್ರಾ (ವಿದ್ಯಾಧರ) (೧೩) ಕಿನ್ನರಾ (೧೪) ಗುಹ್ಯಕಾದಯಃ ॥ ಇವರೆಲ್ಲ ಆಜಾನಜರು, ಒಂದೇ ಕಕ್ಷದವರು. ಒಂದೊಂದು ಗುಂಪಿನಲ್ಲಿ ಎಷ್ಟೆಷ್ಟು ಜನರೆಂದರೆ (೧) ಪಿತ್ರೂಣಾಂ ಶತಮೇವಾತ್ರ । (೨) ಅಸುರಾಃ ತ್ರಿಂಶದೇವ ಚ ॥ ಗಂಧರ್ವಾಪ್ಸರಸಾಂಚೈವ ದ್ವಿಶತಂ ಪರಿಕೀರ್ತಿತಮ್॥ ಸಪ್ತತಿರ್ಯಕ್ಷ ರಕ್ಷಸ್ಸ ತ್ರಿಂಶಚ್ಚಾರಣ ಜಾತಿಷು ॥ ಶತಂ ಸಿದ್ಧಾಧರಾ ಅನ್ಯಾಸು ಸಪ್ತತಿಸ್ಸರ್ವಜಾತಿಷು ॥ ವೈಕಾರಿಕೇಷು ದೇವೇಷು ಏತೇ ವೈ ಮುಗ್ಧಯೀ (ಯೋನಿನಃ) ಮುಗ್ಧಃ ಈಷತ್ ಯಜ್ಞಾಂಗಹವಿರಾದಿ ಭೋಗ ಏವ. ಪಾವಕ ವ್ಯತಿರಿಕ್ತ ಶತೋತ್ತರ ಷೋಡಶ ಅಗ್ನಿಪುತ್ರಾಃ॥ ಇತಿ ತಾರತಮ್ಯಪ್ರಕಾಶಿಕಾ ॥ ೩೨ನೇ ಸಂಧಿಯಲ್ಲಿ ದಾಸರಾಯರು ಹೇಳಿದ್ದಾರೆ.

**ಭಾವಸೂಚನೆ :**—ಸೂನುರಿತಿ ॥ ಪವಮಾನ ಕ್ರಥೌ ದ್ವೌ ಪ್ರಾಕ್ ಪವಮಾನೋಽಗ್ನಿಜಃ ಸ್ಮೃತಃ॥ಕೌಶಿಕೋಽಪ್ಯಗ್ನಿಜಃ ಸಿಂಧುಃ ಶುಚಿಃ ಪ್ರಾಕ್ ಶುಚಿರಗ್ನಿಜಃ ॥ ತುಂಬುರ್ವಾದಿ ಶತಂ ಚೈವ ಉರ್ವಶ್ಯಾದ್ಯಪ್ಸರಾಸ್ತಥಾ ॥ ಋಷಯಶ್ಚ ವಸಿಷ್ಠಾದೀನ್ಯತೇ ಆಜಾನಜಾಃ ಸ್ಮೃತಾ ಇತಿ ॥ ೪೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಸೂನು' ಇತಿ ॥ ಪಾವಕಃ ಪವಮಾನಶ್ಚ ಶುಚಿರಿತ್ಯನ್ವಯಃ । ಪುರಾ ವಸಿಷ್ಠ ಶಾಪಾದುತ್ಪನ್ನಾಃ ಇತ್ಯುಕ್ತೇಃ ಪವಮಾನಃ ಕ್ರಥಃ ಕೌಶಿಕಃ ಸಿಂಧುರಿತ್ಯನ್ವಯಃ ॥ ಕ್ರಥಕೌಶಿಕಾಖ್ಯೌ ಭಾಗೌ ತಥಾಗ್ನಿಸುತಯೋಃ ಪವಮಾನ ಸಿಂಧ್ವೋಃ ॥ ಆಜಾನೇತಿ ಪಕ್ಷ ಏವ ॥ ವಸ್ತುತಸ್ತು **ತುಂಬುರ್ವಾದ್ಯ-**

**ಷ್ಟಕಂ ಕರ್ಮಜಸಮಮ್ ॥ ಊರ್ವಶ್ಯಾದಿ ಷಟ್ಕಮಪಿ** । ತೃತೀಯ ಭಾಗವತ ತಾತ್ಪರ್ಯಾತ್ ॥ **ಗಂಧರ್ವಾದ್ಯಪ್ಸರಃ ಶತದ್ವಯಂ ಕರ್ಮಜ ಸಮಮ್** ॥ ವ್ಯಾಪ್ತದರ್ಶಿನಾಂ ಸರ್ವೇಷಾಂ ಅತ್ರ ಗ್ರಹಣೇ ಋಷಿ ಕಕ್ಷಾಲೋಪಃ ॥ ತತ್ಪಕ್ಷಪ್ರಮಾಣಾರ್ಥಃ ಸಮ್ಯಕ್ ವಿವೃತೌ ಕೃತಃ ದ್ರಷ್ಟವ್ಯಃ ॥ ಗ್ರಂಥಾಧಿಕ್ಯಭಯಾದುಪರಮ್ಯತೇ ॥ ತುಂಬುರ್ವಾದಿ ಶತಂ ಊರ್ವಶ್ಯಾದಿಶತಂ ಶತಂ ಋಷಯಃ ॥ ಅಥ **ಕೇಚಿದಾಸುರಗಣಾಃ ಸುರಾಣಕಾಃ** ಇತ್ಯುಕ್ತಾಃ ಅನಾಖ್ಯಾತಾ ದಿವಿಜಾಃ ತಾತ್ತ್ವಿಕಪ್ರೋ- ತ್ವತ್ತ್ವೇಃ ವಕ್ಷ್ಯಮಾಣತ್ವೇನ ಅತ್ರ ಅನಾಖ್ಯಾತಾವತಾರಪ್ರಸಂಗೇ ತೇಷಾಮುಕ್ತಿಃ ॥ ದಿವಿಜೇತಿ ದೈತ್ಯಾಃ ॥ ತುಂಬುರ್ವಾದಿವರ್ಗಸ್ಯ ಆಜಾನತ್ವೇ "ತುಂಬುರುಪ್ರಮುಖಾ ಯೇ ಚ ತಥೋರ್ವಶ್ಯಾದಿಕಾ ಅಪಿ ॥ ವಿಶ್ವಾಮಿತ್ರ ಬ್ರಹ್ಮಪುತ್ರಾನ್ ಋತೇ ಚಾಪ್ಸರಸೋಽಖಿಲಾಃ ॥ ಕಾರ್ತ ವೀರ್ಯಾದಿ ರಾಜಭೃತ್ಯಾಃ ದೇವಭೃತ್ಯಾಃ ಶತಾವರಾಃ ॥ ಆಜಾನದೇವಾಃ ತೇ ಪ್ರೋಕ್ತಾಃ ॥ ಕರ್ಮದೇವಗಣಾಃ ಅಷ್ಟಗಂಧರ್ವಾಃ ತತ್ಪರೇ ಶತಮ್॥ ಆಜಾನದೇವಾಃ ಇತ್ಯುಕ್ತೇಃ ವಕ್ಷ್ಯಮಾಣಗಂಧರ್ವಾನ್ಯೇ ಗ್ರಾಹ್ಯಾಃ॥೨೫॥



## ಕನ್ನಡಾರ್ಥ

ಪಾವಕ, ಪವಮಾನ, ಶುಚಿ–ಈ ಮೂವರು ವಸಿಷ್ಠ ಶಾಪದಿಂದ ಹುಟ್ಟಿದರೆಂದು ವಚನವಿರುವುದರಿಂದ ಅಗ್ನಿಪುತ್ರರಲ್ಲಿ ಪಾವಕನನ್ನು ಸೇರಿಸಬೇಕು. ಪವಮಾನ, ಕ್ರಥ, ಕೌಶಿಕ, ಶುಂಠ (ಸಿಂಧು) ಗಳನ್ನು ಅನ್ವಯಿಸಬೇಕು. ಕ್ರಥಕೌಶಿಕರು ಅಗ್ನಿಪುತ್ರರಾದ ಪವಮಾನ ಶುಂಧಿಗಳ ಅಂಶರೂಪರೇ ! ಆಜಾನಜ ಪಕ್ಷದಲ್ಲಿ ಇವನ್ನು ಹೇಳಿದ್ದು ವಾಸ್ತವವಾಗಿ ತುಂಬುರು ಮುಂತಾದವರು ಎಂಟು, ಹಾಗೂ ಊರ್ವಶೀ ಮುಂತಾದವರು ಆರು. ಇವರೆಲ್ಲರೂ ಕರ್ಮಜರಿಗೆ ಸಮಾನರು. ತೃತೀಯಸ್ಕಂಧ ತಾತ್ಪರ್ಯದ ವಚನವಿರುತ್ತದೆ. "ಗಂಧರ್ವಾದಿಗಳು ೨೦೦, ಅಪ್ಸರೆಯರು ಕರ್ಮಜ ಸಮರು. ವ್ಯಾಪ್ತದರ್ಶಿಗಳೆಲ್ಲರನ್ನೂ ಇಲ್ಲಿ ಸಂಗ್ರಹಿಸಿದರೆ ಋಷಿಕಕ್ಷೆಯೇ ಲೋಪವಾಗುವುದು ಆ ಪಕ್ಷದಲ್ಲಿ ಪ್ರಮಾಣಗಳ ಅರ್ಥ ವನ್ನು ತಾರತಮ್ಯ ವಿವೃತಿಯಲ್ಲಿ ಸರಿಯಾಗಿ ವಿವರಿಸಲಾಗಿರುತ್ತದೆ. ಗ್ರಂಥ

ವಿಸ್ತಾರ ಭೀತಿಯಿಂದ ಇಲ್ಲಿ ವಿವರಿಸುವುದಿಲ್ಲ. ಅಲ್ಲಿಯೇ ತಿಳಿದುಕೊಳ್ಳ ಬೇಕು.

ತುಂಬುರು ಮುಂತಾದ ನೂರು ಗಂಧರ್ವರು, ಊರ್ವಶ್ಯಾದಿ ನೂರು ಅಪ್ಸರೆಯರು, ನೂರು ಋಷಿಗಳು–ಇವರು ಆಜಾನಜ ದೇವತೆಗಳಿಗೆ ಸಮಾನರು. **ಕೆಲವು ದೇವತೆಗಳ ಸಮೂಹವು ಸುರಾಣಕರೆನಿಸುವರು.** ಇಲ್ಲಿಯ ಸುರಾಣಕ ಶಬ್ದಕ್ಕೆ ಧೈತ್ಯರಲ್ಲ. ಇನ್ನು ತಾತ್ವಿಕದೈತ್ಯರ ಉತ್ಪತ್ತಿ ಯನ್ನು ಮುಂದೆ ಹೇಳುವವರಾದಕಾರಣ ಈಗ ಅನಾಖ್ಯಾತರ ಅವತಾರ ಪ್ರಸಂಗದಲ್ಲಿ ಆ ದೇವತೆಗಳ ಸಮೂಹವನ್ನು ತಿಳಿಸಿ ಹೇಳಿರುತ್ತಾರೆ.

ತುಂಬುರು ಮುಂತಾದವರ ವರ್ಗವು ಆಜಾನರಲ್ಲಿ ಸೇರಿದ ವಿಷಯ ದಲ್ಲಿ "ತುಂಬುರು ಮುಂತಾದವರೂ, ಊರ್ವಶೀ ಮುಂತಾದವರೂ, ಹಾಗೂ ವಸಿಷ್ಠ, ವಿಶ್ವಾಮಿತ್ರರನ್ನುಳಿದು ಮಿಕ್ಕ ಕೆಲವು ಋಷಿಗಳೂ (ಎಲ್ಲ ಅಪ್ಸರೆಯರು)ಪ್ರಿಯವ್ರತನು ಮುಂತಾದ ರಾಜರ್ಷಿಗಳನ್ನು ಬಿಟ್ಟು ಉಳಿದ ರಾಜರೂ ಇವರೆಲ್ಲರೂ ದೇವಭೃತ್ಯರು. ಕಾರ್ತವೀರ್ಯ ಮುಂತಾದವರಿ ಗಿಂತ ನೂರುಗುಣ ಕಡಿಮೆಯವರು. ಇವರೆಲ್ಲರೂ ಆಜಾನ ದೇವತೆಗಳೆನಿಸಿ ರುತ್ತಾರೆ. ಎಂಟು ಮಂದಿ ಗಂಧರ್ವರು ಕರ್ಮದೇವತೆಗಳು. ಅವರನ್ನು ಳಿದು ಮಿಕ್ಕ ನೂರು ಗಂಧರ್ವರು ಆಜಾನದೇವತೆಗಳು. ಹೀಗೆ ವಚನ ವಿದ್ದರಿಂದ ಮುಂದೆ ಹೇಳಲಾಗುವ ಉಳಿದ ಗಂಧರ್ವರನ್ನು ಇಲ್ಲಿ ಗ್ರಹಿಸಬೇಕು. ||೪೫||

**ಅವತರಣಿಕಾ** :— ಈ ಅನಾಖ್ಯಾತ ದೇವತೆಗಳಲ್ಲಿ ಪಾವಕಾದಿಗ ಳಿಂದ ಅಧಮರು ನಾನಾ ವಿದ್ಯಗಳಲ್ಲಿ ನಿಪುಣರು ಎಂಬ ಆಜಾನಜರ ಗುಣ ಗಾನಮಾಡುತ್ತಾರೆ.

**ಪಾವಕರಿಗಿಂದಧಮರೆನಿಸುವ ।**
**ದೇವ ಕುಲಜಾನಾಖ್ಯ ಸುರಗಣ ।**
**ಕೋವಿದರು ನಾನಾ ಸುವಿದ್ಯದಿ ಸೋತ್ತಮರ ನಿತ್ಯ ॥**
**ಸೇವಿಪರು ಸದ್ಭಕ್ತಿ ಪೂರ್ವಕ ।**

**ಸ್ವಾವರರಿಗುಪದೇಶಿಸುವರು ನಿ।**
**ರಾವಲಂಬನ ವಿಮಲ ಗುಣಗಳ ಪ್ರತಿ ದಿವಸದಲಿ ॥ ೪೬ ॥**

**ಪದ್ಯಾರ್ಥ** :— ದೇವಕುಲಜಾನಾಖ್ಯ ಸುರಗಣ=ದೇವ ಕುಲದಲ್ಲಿ ಹುಟ್ಟಿದ ಅನಾಖ್ಯಾತ ದೇವತಾ ಸಮೂಹವು ಪಾವಕರಿಗಿಂದಧಮರೆನಿಸು ವರು=ಅಗ್ನಿಪುತ್ರ ಪಾವಕಾದಿಗಳು ಕರ್ಮಜ ದೇವತೆಗಳ ಕಕ್ಷೆಯಲ್ಲಿ ಹೇಳಿದ ಪಾವಕಾದಿಗಳಿಂದ, ಅಧಮರೆನಿಸುವರು=ಕಡಿಮೆ ಎನಿಸುತ್ತಾರೆ. ಈ ಅನಾಖ್ಯಾತ ಗಣಸಮೂಹವು, ನಾನಾ ಸುವಿದ್ಯದಿ ಕೋವಿದರು=ಅನೇಕ ವಿಧವಾದ ವಿದ್ಯಾಗಳಲ್ಲಿ ನಿಪುಣರು. ಇವರುಕೋವಿದರಾದರೂ, ಸ್ತೋತ್ತಮರ=ತಮಗಿಂತಲೂ ಉತ್ತಮರಾದವರನ್ನು, ಸದ್ಭಕ್ತಿಪೂರ್ವಕ ಸೇವಿಪರು=ಸಮೀಚೀನವಾದ ತರತಮಭಾವವೇ ಭಕ್ತಿ. ಇದೇ ಸದ್ಭಕ್ತಿ ಯುತರಾಗಿ ಸೇವೆಮಾಡುವರು. ಅಲ್ಲದೇ, ಸ್ವಾವರರಿಗುಪದೇಶಿಸುವರು= ತಮಗಿಂತಲೂ ಕಡಿಮೆ ಆದವರಿಗೆ ಉಪದೇಶಮಾಡುವರು. ಏನು ಉಪ ದೇಶಮಾಡುವರು ಎಂದರೆ, ನಿರಾವಲಂಬನ=ಪರರ ಆಶ್ರಯದಲ್ಲಿ ಇಲ್ಲ ದಿರುವ, ಸ್ವಾಶ್ರಯ-ಸ್ವತಂತ್ರನಾದ ಶ್ರೀ ಹರಿಯ, ವಿಮಲ ಗುಣಗಳ= ನಿರ್ಮಲ ನಿರ್ದುಷ್ಟವಾದ ಜ್ಞಾನಾನಂದಾದಿಗುಣಗಳನ್ನು, ಪ್ರತಿದಿವಸ ದಲ್ಲಿ=ಪ್ರತಿನಿತ್ಯವು ಸ್ವಾವರರಿಗೆ ಉಪದೇಶಮಾಡುವರು.

**ಭಾವಸೂಚನ** ॥ ಪಾವಕೇತಿ ॥ ಅಗ್ನಿಪುತ್ರಾಃ ಪಾವಕೋನಾಃ ಆಜಾನ್ಯೈರ್ಯೈರ್ಗಸ್ಸಮಾ ಮತಾಃ । ಇತ್ಯುಕ್ತೇಃ । ಸಾರಸಂಗ್ರಹೇ ॥ ೪೬ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಪಾವಕ" ಇತಿ ॥ ತಸ್ಯ ಕರ್ಮಜತ್ವೋಕ್ತೇಃ ಇತಿ ಭಾವಃ ॥ ಉಪ ಸಂಹಾರೇ ಆಜಾನೋನರ್ಷಿ (ಋಷಿ) ಕಕ್ಷಾ ಉಕ್ತಾ ॥ ಅತಃ ನ ಯಥಾ ಕ್ರಮಾನ್ವಯಃ॥ ಕಿಂತು ತುಂಬುರು-ಅಷ್ಟಾವರ್ಣೀ ಷಟ್ ಮೇನಕಾ ಗ್ರಹ ಣೇನ ಭಾರತೋಕ್ತಪೂರ್ವಚಿತಿ ಸಹಜನ್ಯಾ ವಿಶ್ವಾಚೀ ಘೃತಾಚ್ಯಃ ಚತಸ್ರಃ ರಾಜಪದೇನ ಉತ್ತಮಾಃ ಕರ್ಮಜಾಃ ತತಃ॥ ಶತರು.ಗಂಧರ್ವಾ ಪ್ಸರಸಾವ್ ಇತಿ ॥ ಅನಾಖ್ಯಾತಾಃ ದೇವತಾಃ ತಾಃ ಜಾತಾಃ ದೇವಕುಲೇ

ಚ ಯಾಃ ॥ ನಾನಾವಿಧಾಸು ದೇವಾನಾಂ ಪರಿಚರ್ಯಾಸು ತತ್ಪರಾಃ ॥ ವರ್ಣಾಶ್ರಮಾನುಸಾರೇಣ ವಿಶೇಷಃ ಕಲ್ಪನಾತ್ರ ಹಿ ॥ ಋಷ್ಯಾದಿಷು ವಿಶೇಷೋಽಸ್ತಿಗುರುಶಿಷ್ಯತ್ವಲಕ್ಷಣಃ॥ ನಿರಾವಲಂಬನಃ ಅಪರಾಶ್ರಯಃ ೪೬॥

## ಕನ್ನಡಾರ್ಥ

ಪಾವಕನನ್ನು ಕರ್ಮಜದೇವತೆಯೆಂದು ಹೇಳಿದುದರಿಂದ "ಪಾವಕರಿಗಿಂತ ಅಧಮರು" ಎಂದು ಆಜಾನಜದೇವತೆಗಳನ್ನು ಹೇಳಿರುತ್ತಾರೆಂದು ತಾತ್ಪರ್ಯ. ಕೊನೆಯಲ್ಲಿ ಉಪಸಂಹಾರದಲ್ಲಿ ಆಜಾನಜರಿಗಿಂತ ಕಡಿಮೆಯಾದ ಋಷಿವರ್ಗವನ್ನು ಹೇಳಿರುತ್ತಾರೆ. ಆದುದರಿಂದ ಕ್ರಮಾನುಸಾರವಾಗಿ ಅನ್ವಯವಿಲ್ಲ. ತುಂಬುರು ಮುಂತಾದ ೮ ಗಂಧರ್ವರು, ಊರ್ವಶೀ ಮುಂತಾದ ಆರು ಅಪ್ಸರೆಯರು. ಮೇನಕೆಯನ್ನು ಗ್ರಹಿಸಿದುದರಿಂದ ಭಾರತದಲ್ಲಿ ಹೇಳಲ್ಪಟ್ಟ ಪೂರ್ವಚಿತಿ, ಸಹಜನ್ಯಾ,ವಿಶ್ವಾಚಿ,ಘೃತಾಚೀ ಈ ನಾಲ್ವರು ರಾಜ (ಯ) ಪದದಿಂದ ಉತ್ತಮರಾದ ಕರ್ಮಜರು. ಇವರನ್ನು ಪರಿಗ್ರಹಿಸಬೇಕು.'ಶತರು' ಎಂಬ ಮಾತಿನಿಂದ ಇವರನ್ನುಳಿದ ಗಂಧರ್ವರು ಅಪ್ಸರೆಯರು ಎಂದು ಅರ್ಥವಾಗುವುದು.

ದೇವಕುಲದಲ್ಲಿ ಹುಟ್ಟದವರು, ನಾಮ ನಿರ್ದೇಶದಿಂದ ವೇದಗಳಲ್ಲಿ ಹೇಳಿಸಿಕೊಳ್ಳದವರು–ಇವರು ಆಜಾನಜ ದೇವತೆಗಳೆನಿಸುವರು. ದೇವತೆಗಳ ವಿವಿಧಸೇವೆಯಲ್ಲಿ ನಿರತರಾಗಿರುತ್ತಾರೆ. ಇವರಲ್ಲಿ ವರ್ಣಾಶ್ರಮಾನುಸಾರವಾಗಿ ಒಂದು ವಿಶೇಷವಿರುತ್ತದೆ. ಋಷಿ ಮುಂತಾದವರಲ್ಲಿ ಗುರುಶಿಷ್ಯ ಭಾವವೆಂಬ ವಿಶೇಷವಿರುತ್ತದೆ 'ನಿರಾವಲಂಬನ' ಪರರ ಆಶ್ರಯದಲ್ಲಿ ಇಲ್ಲದಿರುವ ಎಂದು ಅರ್ಥ ॥೪೬॥

**ಅವತರಣಿಕಾ :**—ದೇವತೆಗಳೆಲ್ಲರು ಸಕಲ ವರ್ಣಾಶ್ರಮ ಧರ್ಮ ಉಳ್ಳವರು. ಆದರೆ ಇಂತಹ ವರ್ಣ, ಇಂತಹ ಆಶ್ರಮ ಧರ್ಮ-ಕರ್ಮವೆಂಬ ವಿಧಿಬದ್ಧರಲ್ಲವೆಂತಲೂ ಋಷ್ಯಾದಿಗಳಿಗೆ ಆಶ್ರಮಧರ್ಮ ಉಂಟೆಂತಲೂ ಹೇಳುತ್ತಾರೆ.

**ಸುರರೊಳಗೆ ವರ್ಣಾಶ್ರಮಗಳಿಂ ।**
**ಬೆರಡು ಧರ್ಮಗಳಿಲ್ಲ ತನ್ನೊಳು ।**
**ನಿರುಪಮರು ಯೆಂದೆನಿಸಿಕೊಂಬರು ತಾರತಮ್ಯದಲಿ ॥**
**ಗುರು ಸುಶಿಷ್ಯತ್ವವೀ ಋಷಿಗಳೊಳ ।**
**ಗಿರುತಿಹುದು ಆಜಾನ ಸುರರಿಗೆ ।**
**ಚಿರ ಪಿತೃ ಶತಾಧಮರೆನಿಸುವರು ಏಳು ಜನರುಳಿದು ॥ ೪೭ ॥**

**ಪದ್ಯಾರ್ಥ** :—ಸುರರೊಳಗೆ=ದೇವತೆಗಳಲ್ಲಿ, ವರ್ಣ=ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳ ಭೇದವಿಲ್ಲ. ಮತ್ತು ಆಶ್ರಮ=ಬ್ರಹ್ಮಚರ್ಯ, ಗೃಹಸ್ಥ, ಸನ್ಯಾಸ, ವಾನಪ್ರಸ್ಥವೆಂಬ ಈ ನಾಲ್ಕು ಆಶ್ರಮಗಳ, ಧರ್ಮಗಳಿಲ್ಲ=ನಾಲ್ಕು ಆಶ್ರಮಕ್ಕೆ ಉಚಿತವಾದ ಧರ್ಮಗಳು ಮಾಡಲೇಬೇಕೆಂಬ ವಿಧಿಬದ್ಧ ನಿಯಮವಿಲ್ಲ. ದೇವತೆಗಳಲ್ಲಿ ನಿರಂತರ ನಾಲ್ಕು ವರ್ಣಗಳು, ನಾಲ್ಕು ಆಶ್ರಮ ಧರ್ಮ ಉಳ್ಳವರು. ವಿಷ್ಣು ರಹಸ್ಯಾದಿ ಗ್ರಂಥಗಳಲ್ಲಿ "ಸರ್ವವರ್ಣಾಶ್ರಮಾಚಾರಾಃ ಪ್ರತ್ಯವಾಯ ಸಮುಚಿತಾಃ ॥ ಅಪರೋಕ್ಷವಿದೋ ವಿಷ್ಣುಭಕ್ತಾ ಏಕಾಂತಿನೋ ಮಮ" ಅಂದರೆ ವರ್ಣ, ಆಶ್ರಮ ಎಂಬುದು ಯತಿ-ಗೃಹಸ್ಥಾದಿ ಭೇದ ಸಹ ಎರಡೂ ವಿಧಿಬದ್ಧ ಇಲ್ಲ. ಎಲ್ಲ ಆಶ್ರಮ ಧರ್ಮಗಳು ಎಲ್ಲರಿಗೂ ಉಂಟು. "ವರಣಾಶ್ರಮಗಳುಂಟು ವರಣ ಬಾಹ್ಯರು ಉಂಟು" ಎಂದು ಶ್ರೀಗೋಪಾಲ ದಾಸರ ವಚನ. ಸಕಲರಲ್ಲಿ ವರ್ಣ, ಆಶ್ರಮ ನಾಲ್ಕು ಉಂಟು. "ದೇವಾಃ ಏವ ಗ್ರಹಸ್ಥಾ ದೇವಾ ಏವ ವಾನಪ್ರಸ್ಥಾ ದೇವಾಃ ಏವ ಬ್ರಹ್ಮಚಾರಿಣಃ" ಬ್ರಹ್ಮಸೂತ್ರ ಭಾಷ್ಯಪ್ರಮಾಣವು ದಾಸರು ನೆನಪಿಗೆ ತಂದು ಕೊಟ್ಟರು. ಎಲ್ಲ ಧರ್ಮಗಳು, ಎಲ್ಲ ದೇವತೆಗಳಲ್ಲಿದ್ದ ಕಾರಣ ಎಲ್ಲರೂ ನಿರುಪಮರು= ಉಪಮೆರಹಿತರು ಎನಿಸುತ್ತಾರೆ. ಆದರೆ, ತಾರತಮ್ಯದಲಿ=ಜ್ಞಾನ, ಆನಂದ ಭಕ್ತಿ, ವಿರಕ್ತ್ಯಾದಿ ಗುಣಗಳಲ್ಲಿ ಮಾತ್ರ ಹೆಚ್ಚು ಕಡಿಮೆ ಉಂಟು. ಮತ್ತು ಸ್ವೋತ್ತಮರ ಅಧೀನರಾಗಿ ಸ್ವಾವರರು ಇರುವರು. ಇದೇ ದೇವತೆಗಳಲ್ಲಿ ಗುರುಶಿಷ್ಯತ್ವ ತಾರತಮ್ಯ ಉಂಟು. ಈ ಋಷಿಗಳಲ್ಲಿ ಮಾತ್ರ ವರ್ಣಾ ಶ್ರಮಾಚಾರ ಭೇದ, ಸನಕಾದಿ ಪತ ಋಷಿಗಳು, ಯತ್ಯಾಶ್ರಮಿಗಳು,

ಇತರ ೮೦ ಜನ ಋಷಿಗಳು, ಗೃಹಸ್ಥಾಶ್ರಮಿಗಳು, ಶತೋನಶತಕೋಟಿ ಋಷಿಗಳಲ್ಲಿಯೂ ಗೃಹಸ್ಥಾದಿ ಆಶ್ರಮಭೇದವೂ, ಗುರುಶಿಷ್ಯತ್ವವೂ, ಜ್ಞಾನದಲ್ಲಿ ತಾರತಮ್ಯವೂ ಉಂಟು ಎಂದು ಬಹು ಪ್ರಮಾಣಗಳಿವೆ. ಇಂತು ದೇವತೆಗಳು, ಋಷಿಗಳಲ್ಲಿ ಇರುವ ಪ್ರಭೇದ ತೋರಿಸಿ, ಆಜಾನ ಸುರರಿಗೆ=ಈ ಆಜಾನಜ ದೇವತೆಗಳಿಗೆ ಮುಂದೆ ೨೮ನೇ ಕಕ್ಷದಲ್ಲಿರುವ ಸಕಲ ಚಿರ-ಪಿತೃಗಳು ಸಮಾನರು. ಆದರೆ ಏಳು ಜನರುಳಿದು=ಎಂದರೆ ಕರ್ಮಜರ ಕಕ್ಷದಲ್ಲಿರುವ ೭ ಜನರು ಪಿತೃ ಉತ್ತಮರು. ಉಳಿದ ಚಿರ-ಪಿತೃಗಳು ಆಜಾನಜರಿಗೆ ಸಮರೆಂದು ಭಾವ.

**ಭಾವಸೂಚನ :**—ಸುರೇತಿ ॥ ಇಲ್ಲಾ ಹೀನತಾಪಾದಕವಲ್ಲಾ । ಅನ್ಯಥಾ ವಿಷ್ಣುರಹಸ್ಯ ಬೃಹದ್ಭಾಷ್ಯ ಪೂರ್ವಸಂಧಿ ವಿರೋಧಸ್ಸ್ಯಾತ್ ॥ ಆಜಾನೇಭ್ಯಸ್ತು ಪಿತರಃ ಸಪ್ತಭ್ಯೋಽನ್ಯೇ ಶತಾವರಾ ಇತ್ಯುಕ್ತೇಃ॥ ೪೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ವಿಧಿನಿಯತ ಋಷ್ಯಾದಿಷ್ವೇವ ಉಕ್ತರೀತ್ಯಾ ಆಶ್ರಮಾಂತರ್ಗತತ್ವೇಽಪಿ ಸರ್ವೇಷು ಪರಸ್ಪರಂ ನ ತಾರತಮ್ಯಂ ವರ್ಣಾದಿಪ್ರಯುಕ್ತಂ ಇತ್ಯಾಹ 'ಸುರ' ಇತಿ ॥ 'ಇಲ್ಲ' ಹೀನತಾಪಾದಕತಯಾ ॥ **'ಅನಿಯತಾ ಹಿ' ಇತಿ ಶ್ರುತೇಃ** ॥ 'ಏಳು' ಪಿತೄಣಾಂ ಸಪ್ತಕಂ ಯತ್ತತ್ ಕರ್ಮದೇವಸಮಂ ಸ್ಮೃತಮ್ ॥ ವಿಶ್ವಾಮಿತ್ರಃ ಬ್ರಹ್ಮಪುತ್ರೈಃ ಸಮಃ ಮುನಿರುದಾಹೃತಃ ॥ ಆಚಾರ್ಯಃ ಪಿತೄಣಾಂ ಚಾಸೌ ಪಿತೃಭಿಃ ಸಹ ಪಠ್ಯತೇ॥ಆಜಾನೇಭ್ಯಸ್ತು ಪಿತರಃ ಹ್ಯಷ್ಟಭ್ಯೋಽನ್ಯೇ ಶತಾವರಾಃ ॥ ೪೭ ॥

## ಕನ್ನಡಾರ್ಥ

ವಿಧಿನಿಯತ ಋಷಿ ಮುಂತಾದವರಲ್ಲಿ ಇರುವಂತೆ ಹಿಂದೆ ಹೇಳಿದಂತೆ ಆಶ್ರಮಾಂತರ್ಗತರಾದರೂ ಸಮರಲ್ಲಿ ವರ್ಣ, ಆಶ್ರಮ ನಿಮಿತ್ತವಾದ ತಾರತಮ್ಯವಿಲ್ಲವೆಂದು 'ಸುರರೊಳಗೆ' ಎಂಬ ಪದ್ಯದಿಂದ ಹೇಳುತ್ತಾರೆ.

ವರ್ಣಾಶ್ರಮಗಳಿಲ್ಲವೆಂಬುದಕ್ಕೆ ಆ ವರ್ಣಾಶ್ರಮ ಧರ್ಮಗಳು

ಕರ್ಮಿತನಕ್ಕೆ ಕಾರಣವಾಗಲಾರವೆಂದು ಅರ್ಥ. ಯಾಕೆಂದರೆ ದೇವತೆಗಳಲ್ಲಿ ವಿಧಿನಿಯಮವಿರುವುದಿಲ್ಲ.

ಏಳು ಪಿತೃಗಳು ಕರ್ಮದೇವತೆಗಳಿಗೆ ಸಮರೆಂದು ಪ್ರಸಿದ್ಧಿಯಿದೆ. ವಿಶ್ವಾಮಿತ್ರನು ಬ್ರಹ್ಮಪುತ್ರರಾದ ವಸಿಷ್ಠ ಮುಂತಾದವರಿಗೆ ಸಮನು.

ಪಿತೃಗಳ ಆಚಾರ್ಯರು ಪಿತೃಗಳೆಡೆಯೇ ಪತಿತರಾಗುತ್ತಾರೆ. ಹಿಂದಿನ ೮ ಪಿತೃಗಳನ್ನು ಬಿಟ್ಟು ಉಳಿದ ಪಿತೃಗಳು ಆಜಾನಜ ದೇವತೆಗಳಿಗಿಂತ ನೂರು ಗುಣ ಕಡಮೆಯವರು. ॥ ೪೭ ॥

**ಅವತರಣಿಕಾ :**— ಈ ಪದ್ಯದಿಂದ ದೇವಗಂಧರ್ವರು, ಮನುಜ ಗಂಧರ್ವರು ನರಚಕ್ರವರ್ತಿಗಳ ತಾರತಮ್ಯ ಕ್ರಮವಾಗಿ ಹೇಳುತ್ತಾರೆ.

**ಚಿರ ಪಿತೃಗಳಿಂದಧಮ ಗಂಧ- ।**
**ರ್ವರುಗಳೆನಿಪರು ದೇವನಾಮಕ ।**
**ಕೊರತೆಯೆನಿಸುವ ಚಕ್ರವರ್ತಿಗಳಿಂದ ಗಂಧರ್ವ ॥**
**ನರರೊಳುತ್ತಮರೆನಿಸುವರು ಹ- ।**
**ನ್ನೆರಡು ಎಂಭತ್ತೆಂಟು ಗುಣದಲಿ ।**
**ಹಿರಿಯರೆನಿಪರು ಕ್ರಮದಿ ದೇವಾವೇಶ ಬಲದಿಂದ ॥ ೪೮ ॥**

**ಪದ್ಯಾರ್ಥ :**—ಚಿರ ಪಿತೃಗಳಿಂದ=ಹಿಂದೆ ಹೇಳಿದ ಚಿರ ಪಿತೃಗಳಿಗಿಂತಲೂ, ದೇವನಾಮಕ ಗಂಧರ್ವರುಗಳು ಅಧಮರೆನಿಪರು=ದೇವ ಗಂಧರ್ವರು (ಹಿಂದೆ ೧೫ನೇ ಕಕ್ಷದಲ್ಲಿ ಹೇಳಿದವರನ್ನು ಬಿಟ್ಟು) ಉಳಿದ ದೇವಗಂಧರ್ವರು ನೂರು ಗುಣದಿಂದ ಚಿರಪಿತೃಗಳಿಗೆ ಕಡಿಮೆಯೆನಿಸುತ್ತಾರೆ. ಮತ್ತು ಈ ದೇವಗಂಧರ್ವರಿಗಿಂತಲೂ ನರರೊಳುತ್ತಮ ಗಂಧರ್ವ=ನರಗಂಧರ್ವರು ನೂರು ಗುಣದಿಂದ ಕೊರತೆಯೆನಿಸುವರು. ಮತ್ತು ಚಕ್ರವರ್ತಿಗಳಿಂದ ನರಗಂಧರ್ವರು ಉತ್ತಮರೆನಿಸುವರು. ನರ ಗಂಧರ್ವರು ಚಕ್ರವರ್ತಿಗಳಿಗೆ ಹನ್ನೆರಡು ಎಂಭತ್ತೆಂಟು ಗುಣದಲ್ಲಿ ಹಿರಿಯರೆನಿಸುವರು=೧೨+೮೮=೧೦೦ ಗುಣದಿಂದ ನರಗಂಧರ್ವರು ಹಿರಿಯ

ರೆನಿಪರು=ಉತ್ತಮರೆನಿಸುತ್ತಾರೆ. ಕಾರಣವೇನೆಂದರೆ ಈ ಎಲ್ಲರಲ್ಲಿ ದೇವತೆ ಗಳ ಆವೇಶಬಲವು ಇದ್ದ ಕಾರಣ, ಕ್ರಮದಿಂದ ಅಂದರೆ ನರಚಕ್ರವರ್ತಿ ಗಳಿಂದ ೧೦೦ ಗುಣ ಅಧಿಕರು. ನರಗಂಧರ್ವರು ಹಿರಿಯರು. ನರ ಗಂಧರ್ವರಿಂದ ೧೦೦ ಗುಣ ದೇವಗಂಧರ್ವರು ಹಿರಿಯರು. ಈ ಮೂರು ಗಣದಿಂದ ಚಿರಪಿತೃಗಳು ಹಿರಿಯರು ಎಂದು ಈ ಪದ್ಯಕ್ಕೆ ಹೀಗೆ ಅನ್ವಯಿಸಿ ಅರ್ಥಮಾಡಬೇಕು.

**ಭಾವಸೂಚನ** :—ಚಿರೇತಿ ॥ ಚಿರಪಿತೃಭ್ಯೋ ದೇವಗಂಧರ್ವಾ ಅಪ್ಯುತ್ತರಶತಾವರಾ ಇತಿ ವಚನಾತ್॥ಕೊರತೀತಿ॥ಕಡಿಮೆ ॥ತೇಭ್ಯೋ ಮನುಷ್ಯಗಂಧರ್ವಾಃ ತೇಭ್ಯೋನ್ಯೇ ಚಕ್ರವರ್ತಿನ ಇತಿತಾರತಮ್ಯೇ ॥ ಉತ್ತಮೇತಿ ॥ ಹನ್ನೆರಡು ತೊಂಭತ್ತೆಂಟು ನೂರು ॥ತದುಕ್ತಂ ತೇಭ್ಯಸ್ತು ಮಾನುಷಶ್ರೇಷ್ಠಾಃ ಕ್ರಮಾಚ್ಛತಗುಣಾಧಮಾ ಇತಿ ॥ ೧೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಚಿರ' ಇತಿ ॥ ತೇಭ್ಯೋಽನ್ಯೇಽಪಿ ಪಿತೃಭ್ಯಶ್ಚ ಶತಾವರಾಃ ॥ 'ಕೊರತಿ' ನೃಪೇಭ್ಯಃ ಉತ್ತಮಾ ಯೇ ಗಂಧರ್ವಾಃ ನರಗಂಧರ್ವಾಃ ಇತ್ಯರ್ಥಃ ॥ ಅಧಿಕದೇವಾವೇಶೇ ಚಾಧಿಕ್ಯಮ್ ॥ ಭೂಪಾಃ ಮನುಷ್ಯ ಗಂಧರ್ವಾಃ ದೇವಾಃ ಪಿತರ ಏವ ಚ ॥ ಆಜಾನೇಯಾಃ ಕರ್ಮದೇವಾಃ ತತ್ವರೂಪಾಃ ಪುರಂದರಾಃ ॥ ಶಿವೋ ವಿರಿಂಚ ಇತ್ಯೇತೇ ಕ್ರಮಾತ್ ಶತ ಗುಣೋತ್ತರಾಃ ॥ ಮುಕ್ತಾ ಅಪಿ ತದನ್ಯೇ ಯೇ ಭೂಪಾಚ್ಛತಗುಣಾ ಧಮಾಃ ॥ ಟೀಕಾ ಚ 'ಉಕ್ತೇಭ್ಯೋನ್ಯೇ ಮನುಷ್ಯೋತ್ತಮಾಃ ॥ ತೇ ಭೂಪಾತ್ ಶತಾಂಶೋನಾಃ ॥ ಇತಿ ॥ ತತಶ್ಚ ಅಯಮನ್ವಯಃ ॥ ಪಿತೃಭ್ಯಃ ಗಂಧರ್ವಾಃ ತೇಭ್ಯಃ ಸ್ವಕನಿಷ್ಠರಾಜಭ್ಯಃ ನರಗಂಧರ್ವಾಃ ॥ ಯದ್ವಾ ಹೈಹಯಾದ್ಯನ್ಯೇ ಯೇ ಚಕ್ರವರ್ತಿನಃ ತ್ತೈಃ ನರಗಂಧರ್ವಾಃ ಶತೋತ್ತಮಾಃ ॥ ತತಃ ರಾಜಾನಃ । ತತಃ ನರೋತ್ತಮಾಃ । ತತಶ್ಚೈತೇ ಕ್ರಮಾತ್ ॥ ಇತಿ ತಾರತಮ್ಯಕ್ರಮೇಣ ॥ 'ಹಿರಿಯರು' ಶತಗುಣೋನಾ ಇತ್ಯನುಸಾರೇ 'ಕಿರಿಯ' ಇತಿ ಪಾಠಃ ॥ 'ಹಿರಿಯ' ಇತಿ ಪಾಠೇ ಪಿತರಃ ಗಂಧರ್ವಾಃ ದೇವಾಃ ನರಗಂಧರ್ವಾಃ ಚಕ್ರವರ್ತಿನಃ ನರೋತ್ತಮಾಃ

ಏತೇ ಕ್ರಮಾತ್ ಶತಗುಣೋತ್ತರಾಃ ॥ ಇತಿ ॥ ಇದಮುಕ್ತಂ ಭವತಿ ॥ ಭಗವದಾವೇಶೋ ವಿಶೇಷ ಸನ್ನಿಧ್ಯಾತ್ಮಾ ಶಿವಾದಿಗೋ ಭಾರದಾರ್ಥ್ಯ ಹೇತುರ್ನಚಿತಾವೇರಿತ್ಯುಕ್ತ್ಯಾ ಯತ್ರ ಯತ್ರ ಯಾವಾನ್ ಸೋ ಸೋ-ಧಿಕೋ ಗುಣಃ ಇತ್ಯೇತದವಿವಾದಮ್ ॥ ಅತಃ ನರಾಗ್ರೇಭ್ಯಃ ಉತ್ತಮಾಸ್ತು ರಾಜಾನಃ, ತತಃ ನರಗಂಧರ್ವಾಃ ॥ ತತಃ ದೇವಗಂಧರ್ವಾಃ ॥ ತತಃ ಪಿತರಃ ಶತೋತ್ತಮಾಃ ಇತಿ ॥ ೪೮ ॥

## ಕನ್ನಡಾರ್ಥ

ಹಿಂದೆ ಹೇಳಿದ ಕರ್ಮದೇವತೆಗಳಲ್ಲಿ ಸೇರಿದ ಗಂಧರ್ವರನ್ನು ಬಿಟ್ಟು ಉಳಿದ ದೇವಗಂಧರ್ವರು ಚಿರಪಿತೃಗಳಿಗಿಂತ ನೂರು ಗುಣ ಕಡಿಮೆ ಯುವರು. ಚಕ್ರವರ್ತಿಗಳಿಗಿಂತ ಉತ್ತಮರಾದ ಮನುಷ್ಯ ಗಂಧರ್ವರು ಎಂದು 'ಕೊರತೆ'ಯೆನಿಪ ಎಂಬ ಪದದ ಆಕೂತ. ಅಧಿಕರಾದ ದೇವತೆಗಳ ಆವೇಶವಿದ್ದಂತೆ ಅಧಿಕರೆನಿಸುವರು. ಚಕ್ರವರ್ತಿಗಳು, ಮನುಷ್ಯ ಗಂಧರ್ವರು ದೇವಗಂಧರ್ವರು, ಪಿತೃಗಳು, ಆಜಾನದೇವತೆಗಳು, ಕರ್ಮದೇವತೆಗಳು, ತಾತ್ವಿಕದೇವತೆಗಳು, ಇಂದ್ರರು, ಶಿವ, ಬ್ರಹ್ಮ ಈ ದೇವತೆಗಳು ಕ್ರಮದಿಂದ ನೂರು ನೂರು ಗುಣಗಳಿಂದ ಉತ್ತಮರು. ಮುಕ್ತರಲ್ಲಿಯೂ ಈ ತಾರತಮ್ಯ ವಿರುತ್ತದೆ.

ಮನುಷ್ಯರು ರಾಜರಿಂದ ನೂರು ಗುಣ ಕಡಿಮೆಯುವರು. ಇಲ್ಲಿ ಈ ಅನ್ವಯವನ್ನು ತಿಳಿಯಬೇಕು. ಪಿತೃಗಳಿಗಿಂತ ದೇವಗಂಧರ್ವರು, ಅವರಿಗಿಂತ ಕಡಿಮೆ ರಾಜರಿಂದ ಉತ್ತಮರಾದ ಮನುಷ್ಯ ಗಂಧರ್ವರು. ಅಥವಾ ಹೈಹಯ ಮುಂತಾದ ಚಕ್ರವರ್ತಿಗಳನ್ನು ಉಳಿದು ಮಿಕ್ಕ ರಾಜರುಗಳಿಂದ ನರಗಂಧರ್ವರು ನೂರು ಗುಣಗಳಿಂದ ಉತ್ತಮರು. ಅವರ ತರುವಾಯ ರಾಜರು, ತರುವಾಯ ಮನುಷ್ಯೋತ್ತಮರು. ಹೀಗೆ ತಾರತಮ್ಯ ಕ್ರಮ ವಿರುತ್ತದೆ. ಈ ಉತ್ತಮ ಕ್ರಮದಿಂದ 'ಹಿರಿಯರು', ಅವರ ಕ್ರಮದಿಂದ 'ಕಿರಿಯರು' ಎಂಬ ಪಾಠ ತಿಳಿಯಬೇಕು. 'ಹಿರಿಯ' ಎಂಬ ಪಾಠವಿದ್ದಲ್ಲಿ ಪಿತೃಗಳು, ದೇವಗಂಧರ್ವರು, ಮನುಷ್ಯ ಗಂಧರ್ವರು, ಚಕ್ರವರ್ತಿಗಳು,

ಮನುಷ್ಯೋತ್ತಮರು ಇವರೆಲ್ಲರೂ ಕ್ರಮದಿಂದ ನೂರುನೂರು ಗುಣಗಳಿಂದ ಶ್ರೇಷ್ಠರು ಎಂದು ಅರ್ಥ.

ಇಲ್ಲಿಯ ಅಭಿಪ್ರಾಯವಿದು-"ಭಗವಂತನ ಸನ್ನಿಧಾನ ವಿಶೇಷ ರೂಪವಾದ ಆತನ ಆವೇಶವು ಶಿವಾದಿಗಳಲ್ಲಿ ಇದ್ದು, ಭಾರದಾರ್ಢ್ಯ ಕಾರಣ" ವೆಂದು ಮುಂತಾಗಿರುವ ವಚನಗಳ ಬಲದಿಂದ ಯಾವನಲ್ಲಿ ಎಷ್ಟು ಸನ್ನಿಧಿಯೋ ಅಷ್ಟು ಅಷ್ಟು ಅವನು ಅಧಿಕನು ಎಂಬುದು ಸರ್ವಿವಾದ ಸಂಗತಿ. ಆದ್ದುದರಿಂದ ಸರ್ವೋತ್ತಮರಿಗಿಂತ ಬೇರೆಯಾದ ರಾಜರು ಉತ್ತಮರು. ಅವರಿಗಿಂತ ಮನುಷ್ಯ ಗಂಧರ್ವರು, ಅವರಿಗಿಂತ ದೇವ ಗಂಧರ್ವರು, ಅವರಿಗಿಂತ ಪಿತೃಗಳು-ಹೀಗೆ ಇವರಲ್ಲಿ ಕ್ರಮದಿಂದ ನೂರು ನೂರು ಗುಣಗಳು ಉತ್ತರೋತ್ತರ ಹೆಚ್ಚಿಗಿರುತ್ತವೆ" ॥ ೪೮ ॥

**ಅವತರಣಿಕಾ :**—ದೇವಗಂಧರ್ವರಾರಂಭಿಸಿ ಮನುಷ್ಯೋತ್ತಮರ ವರೆಗೆ ಅವರವರ ಗುಣ ಸ್ವಭಾವಗಳನ್ನು ತಾರತಮ್ಯ ಕ್ರಮದಿಂದ ವಿಶದ ಪಡಿಸುತ್ತಾರೆ.

**ದೇವತೆಗಳಿಂ ಪ್ರೇಷ್ಯರೆನಿಪರು ।**
**ದೇವ ಗಂಧರ್ವರುಗಳವರಿಂ ।**
**ದಾವ ಕಾಲಕು ಶಿಕ್ಷಿತರು ನರನಾಮ ಗಂಧರ್ವ ॥**
**ಕೇವಲಾಹಿ ಸದ್ಭಕ್ತಿ ಪೂರ್ವಕ ।**
**ಯಾವದಿಂದ್ರಿಯಗಳ ನಿಯಾಮಕ ।**
**ಶ್ರೀವರನೆ ಎಂದರಿತು ಭಜಿಪರು ಮಾನುಷೋತ್ತಮರು ॥೪೯॥**

**ಪದ್ಯಾರ್ಥ :**—ದೇವಗಂಧರ್ವರು ದೇವತೆಗಳಿಂ ಪ್ರೇಷ್ಯರೆನಿಪರು= ಸದಾ ದೇವತೆಗಳಿಂದ ಮುಖದಿಂದಲೇ ಪ್ರೇಷ್ಯ=ಪ್ರೇರಕ ಆಜ್ಞಾಪ್ತರಾಗಿ, ದೇವತೆಗಳಿಂದ ಸಾಕ್ಷಾತ್ ಹರಿಗುಣಗಳನ್ನು ತಿಳಿದು ಪ್ರವರ್ತಿಸುವರು ದೇವಗಂಧರ್ವರು. ಇವರಿಂ=ಈ ದೇವಗಂಧರ್ವರಿಂದ, ಶಿಕ್ಷಿತರು=ಶಿಕ್ಷೆ ಮಾಡಲ್ಪಡುವವರು, ಉಪದೇಶ ಹೊಂದುವವರು. ನರನಾಮ ಗಂಧರ್ವ= ಮನುಜ ಮಾನವ ಹೆಸರುಳ್ಳ ಮನುಜ ಗಂಧರ್ವರು. ಇವರಿಂದ ನಿರಂಶರು

(ಈ ದೇವಗಂಧರ್ವರಿಂದ ಕ್ರಮಾತ್ ನರಚಕ್ರವರ್ತಿಗಳು, ಮಾನುಷ್ಯೋತ್ತಮರು ಶಿಕ್ಷಿತರೆಂದು ತಿಳಿಯುವುದು.) ಇವರೆಲ್ಲರೂ ಕೇವಲತಿ ಸದ್ಭಕ್ತಿ ಪೂರ್ವಕ=ಇಲ್ಲಿ ಕೇವಲ, ಅತಿ ಎಂಬ ಎರಡು ವಿಶೇಷಣಗಳು ಕೇವಲ= ಪೂರ್ಣ ನಿಶ್ಚಯವಾಗಿ, ಯಾವ ಸಂಶಯವಿಲ್ಲದೇ, ಅತಿ=ಬಹು, ವಿಶೇಷ ದೃಢವಾದ, ಸದ್ಭಕ್ತಿ ಪೂರ್ವಕ=ತಾರತಮ್ಯ ಜ್ಞಾನದಿಂದ ಉತ್ತಮವಾದ ಭಕ್ತಿಯಿಂದ ಯಾವದಿಂದ್ರಿಯಗಳ ನಿಯಾಮಕ=ಸಕಲೇಂದ್ರಿಯಗಳ ನಿಯಾಮಕ ಶ್ರೀಹರಿಯೇ ಸಕಲ ಇಂದ್ರಿಯಗಳಲ್ಲಿ ನಿಂತು ನಿಯಮಿಸಿ ಪ್ರೇರಿಸುವ ಸ್ವತಂತ್ರಕರ್ತಾ ಶ್ರೀಹರಿಯೇ. ಶ್ರೀವರನು=ಶ್ರೀಲಕ್ಷ್ಮಿ ದೇವಿಗೆ ಶ್ರೇಷ್ಠ ಪತಿಯು, ಎಂದರಿತು=ಎಂದು ತಿಳಿದು ಭಜಿಪರು ಮಾನುಷೋತ್ತಮರು=ಶ್ರೀಹರಿಯನ್ನು ಸದಾ ಭಜಿಸುವರು, ಪೂಜಿಸುವರು. ಧ್ಯಾನೋಪಾಸನೆ ಮಾಡುವ ಮಾನುಷೋತ್ತಮರು=ಮನುಷ್ಯಶ್ರೇಷ್ಠರು. ಅಂದರೆ ಮುಕ್ತಿಯೋಗ್ಯರಿಗೆ ಹರಿಸರ್ವೋತ್ತಮತ್ವ ವಿಷಯದಲ್ಲಿ ಕಿಂಚಿತ್ತಾದರೂ ಸಂದೇಹವಿಲ್ಲವೆಂದು ಅರ್ಥ.

**ಭಾವಸೂಚನ :—ದೇವೇತಿ ॥ ೪೯ ॥**

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ : —**

ಸ್ವಮುಖ ಪ್ರೇರಿತ ದೇವಗಂಧರ್ವಗಣ ಶತಾ । ಧಮ ಚಿರಪಿತೃಗಳಿಗೆ ವರಗಾಯಕ ॥ ಸಮುದಾಯ ನೂರು ಗುಣ । ಕ್ಷಿತಿಪನೈವತ್ತು । ಸಮಿತ ( ಅಷ್ಟೇ ೫೦+೫೦=೧೦೦ ) ಗುಣ ಮನುಜೋತ್ತಮರು ಶತಾವರರೆಂದು ॥ ೬೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಸ್ವಮುಖೇನೈವ ದೇವೈರ್ಯ ಆಜ್ಞಪ್ತಾಃ ಸರ್ವದಾ ಗಣಾಃ ॥ ಆಖ್ಯಾತಾಃ ದೇವಗಂಧರ್ವಾಃ ಯೇ ತ್ವನ್ಯಮುಖಗೋಚರಾಃ ॥ ಮಾನುಷಾಸ್ತೇ ಚ ಗಂಧರ್ವಾಃ ತೇಭ್ಯಸ್ತೇ ಚ ಶತಾವರಾಃ ॥ ಇತ್ಯುಕ್ತ್ವೋಭಯಲಕ್ಷಣಮಾಹ 'ದೇವತಿ' ಇತಿ ॥ ಶ್ರೀವರಃ ಏವ ಕೇವಲಃ ಮುಖ್ಯೋ ನಿಯಂತಾ ಇತ್ಯನ್ವಯಃ ॥ ೪೯ ॥

## ಕನ್ನಡಾರ್ಥ

"ಸದಾ ಸ್ವಯಂದೇವತೆಗಳ ಮುಖದಿಂದಲೇ ಆಜ್ಞೆಯನ್ನುಪಡೆಯುವ ದೇವಗಣಕ್ಕೆ ದೇವಗಂಧರ್ವರೆಂದು ಹೆಸರು. ಪರರ ಮುಖಾಂತರ ಅವರ ವಚನಕ್ಕೆ ಪಾತ್ರರಾದವರು ಮಾನುಷ ಗಂಧರ್ವರು" ಎಂಬುದಾಗಿ ಹೇಳಿರುವ ಮನುಷ್ಯ, ದೇವ ಹೀಗೆ ಉಭಯ ಗಂಧರ್ವರ ಲಕ್ಷಣವನ್ನು 'ದೇವತೆಗಳ' ಎಂಬ ಪದ್ಯದಿಂದ ನಿರೂಪಿಸುತ್ತಾರೆ.

'ಶ್ರೀವರನ'ಯೆಂದು ಇಲ್ಲಿ ಈ ಭಾವವಿದೆ. ಶ್ರೀ ನಾರಾಯಣನೇ ಮುಖ್ಯಸ್ವಾಮಿಯು; ಮಿಕ್ಕವರು ಅವನ ಅಧೀನರಾಗಿಯೇ ತಮಗೆ ನಿಯಾಮಕರು ಎಂದು. ॥ ೪೯ ॥

**ಅವತರಣಿಕಾ :—** ಈ ಬೃಹತ್ತಾರತಮ್ಯ ಆವೇಶಾವತಾರ ನಿಮಿತ್ತದಿಂದ ಬಾದರಾಯಣ ದೇವರು ಅನೇಕ ಗ್ರಂಥಗಳಲ್ಲಿ ಗುಣ ಸಂಖ್ಯಾದಿಗಳನ್ನು ಬೇರೆ ಬೇರೆ ಹೇಳಿದ್ದಾರೆ. ಆದರೂ ಅವರಲ್ಲಿಪ್ಪ ಗುಣವಲ್ಲದೆ ಉತ್ತಮ ದೇವತೆಗಳ ಆವೇಶದಿಂದ ಹೆಚ್ಚಾಗಿ ಉತ್ತಮ ಗುಣವುಳ್ಳವರೆಂಬುದನ್ನು ಛಾಂದೋಗ್ಯ ಉಪನಿಷತ್ತಿನಂತೆ ವರ್ಣಿಸುತ್ತಾರೆ. ಇದು ವಿರೋಧವಾಗಿಲ್ಲ.

**ಬಾದರಾಯಣ ಭಾಗವತ ಮೊದ- ।**
**ಲಾದ ಶಾಸ್ತ್ರಗಳಲ್ಲಿ ಬಹು ವಿಧ ।**
**ದ್ವಾದಶ ದಶ ಸುಪಂಚವಿಂಶತಿ ಶತ ಸಹಸ್ರಯುತ ॥**
**ಭೇದಗಳ ಪೇಳಿದನು ಸೋತ್ತಮ ।**
**ಆದಿತೇಯಾವೇಶ ಬಲದಿ ವಿ- ।**
**ರೋಧ ಚಿಂತಿಸಬಾರದಿವು ಸಾಧುಜನ ಸಮ್ಮತವು ॥ ೫೦ ॥**

**ಪದ್ಯಾರ್ಥ :—** ಬಾದರಾಯಣ= ಶ್ರೀ ವೇದವ್ಯಾಸದೇವರು, ಭಾಗವತ=ಶ್ರೀಮದ್ಭಾಗವತ ಶಾಸ್ತ್ರ ಮೊದಲಾದ ಭಾಗವತವೇ ಮೊದಲು ಮಾಡಿ ವಿಷ್ಣುರಹಸ್ಯ, ಜ್ಞಾನಕಾಂಡ, ಬೃಹದಾರಣ್ಯ, ಛಾಂದೋಗ್ಯ,

ತೈತ್ತಿರೀಯಾದಿ ಉಪನಿಷತ್ತಿನಂತೆ ಅನೇಕ ಗ್ರಂಥಗಳಲ್ಲಿ, ಶಾಸ್ತ್ರಗಳಲ್ಲಿ, ಬ್ರಹ್ಮಸೂತ್ರಾದಿ ಪ್ರಸ್ಥಾನತ್ರಯದಲ್ಲಿಯೂ, ಬಹುವಿಧ=ಅನಂತ ಪ್ರಕಾರವಾಗಿ ದೇವತೆಗಳಲ್ಲಿರುವ ಗುಣ ಸಂಖ್ಯಾಗಳನ್ನು. ದ್ವಾದಶ=ಹನ್ನೆರಡು, ದಶ=ಹತ್ತು, ಸುಪಂಚವಿಂಶತಿ=೨೫ ತತ್ವ ತತ್ವಾಭಿಮಾನಿ ವಿಚಾರದಲ್ಲಿ ಇಪ್ಪತ್ತೈದು ವಿಧ, ಶತ, ಸಹಸ್ರ, ನೂರು, ಸಾವಿರ (ಇವೆಲ್ಲವೂ ಅನಂತ ವಾಚಿಯಾಗಿರುವುವು) ಭೇದಗಳ ಪೇಳಿದನು=ಗುಣ ಸಂಖ್ಯಾದಿಗಳಲ್ಲಿ ಇಷ್ಟು, ಇಷ್ಟೆಂದು ಹೆಚ್ಚು ಕಡಿಮೆಯಾಗಿ ಭೇದಗಳ ಪೇಳಿದನು=ಗುಣ ಸಂಖ್ಯಾಗಳಲ್ಲಿ ಭೇದವನ್ನು ಹೇಳಿದ್ದಾರೆ. ಯಾಕೆಂದರೆ ಈಗ ಸೃಷ್ಟಿಕಾಲದಲ್ಲಿ ಸ್ಥಾವರ ದೇವತೆ ಆದಿಗಳಲ್ಲಿ ಸ್ತೋತ್ರವು ಆದಿತ್ಯಾವೇಶ ಬಲದಿ=ಉತ್ತಮರಾದ ದೇವತೆಗಳ ಆವೇಶ, ಬಲ, ಶಕ್ತಿಯಿಂದ ಹೆಚ್ಚಿನ ಗುಣಗಳನ್ನು ವಿವಿಧವಾಗಿ ಹೇಳಿರುತ್ತಾರೆ. ಹೊರತಾಗಿ ಬೇರೆ ಅಲ್ಲ. ಇದಕ್ಕೆ ವಿರೋಧ ಚಿಂತಿಸಬಾರದಿವು=ಈ ಪ್ರಮಾಣಗಳಿಗೆ ಒಂದಕ್ಕೊಂದು ವಿರೋಧವೆಂದು ತಿಳಿಯಬಾರದು. ಈ ಬಾದರಾಯಣರ ವಾಕ್ಯಗಳೆಲ್ಲ ಸಾಧುಜನ ಸಮ್ಮತವು=ಜ್ಞಾನಿಗಳಿಗೆ ಸಮ್ಮತವಾಗಿವೆ. ಛಾಂದೋಗ್ಯ ಭಾಷ್ಯೇ॥ "ಸಂಖ್ಯಾನ್ಯಥಾತ್ವಂ ಯತ್ರ ಸ್ಯಾತ್ತತ್ರಾವೇಶವಿಶೇಷತಃ ॥ ಅವರಾಣಾಂ ಗುಣಸ್ಯಾಪಿ ಪರಮೀಯತ್ವತಸ್ತಥಾ ॥ ಪ್ರಾಣಾತ್ತು ಭಗವಾನ್ವಿಷ್ಣುರನಂತಗುಣತೋಧಿಕಃ । ನಿತ್ಯಮುಕ್ತೋ ನಿತ್ಯಶಕ್ತಿರ್ನಿತ್ಯೋದ್ರಿಕ್ತಗುಣಃ ಪ್ರಭುಃ ॥ ಇತಿ ತತ್ವವಿವೇಕೇ ॥ ನೈಷಾನಂದಸ್ಯ ಮೀಮಾಂಸಾ ಭವತಿ ॥ ಛಾಂದೋಗ್ಯಭಾಷ್ಯ ॥ ೬-೭ ಖಂಡ ೧೪ ॥

**ಭಾವಸೂಚನ :—** ಅಯಮಾಂಶಾವೇಶವಿಚಾರಃ ॥ ಗಾರುಡ ವಿಷ್ಣುರಹಸ್ಯಾದಿಷು ಬಹುಧಾ ಪ್ರತಿಪಾದ್ಯತೇ ॥ ತತ್ರ ನ ವಿರೋಧಃ ಚೋದ್ಯ ಇತ್ಯಾಹ ॥ ಬಾದರಾಯಣೇತಿ ॥ ೫೦ ॥

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ ಉಪನಿಷತ್ತಿನಂತೆ :—** ಪರಮಮುಖ್ಯ ಸುತಾತ್ವಿಕರು ಎನಿಸಲೀ ಶನ್ನೈಜನ ಪರಿಯಂತ ಧರಾಂತವಾಗಿ ॥ ಕರೆಸುವರ ಮುಖ್ಯತಾತ್ವಿಕರೆನಿಸು ಕನಿಷ್ಠಗ

ಶರ. ದಶ, ಶತ, ಸಹಸ್ರನಂತ ಗುಣದಿ ಕ್ರಮದಿ ॥ ೬೯ ॥ ದೇವತಾ ಸ್ತ್ರೀಯರು ತಮ್ಮ ಪತಿಗಳಿಗೆ ದಶ ಗು । ಣಾವರರು ಯೆನಿಪರು ಮುಕ್ತಿ ಯೊಳಾಪರೂ ॥ ಈ ವಿಧದಿ ನಿಜೋಚ್ಚ ಕ್ರಮವರಿತು ಭಜಿಪರಿಗೆ । ಈ ವರಖಿಳಾರ್ಥಗಳ ಅಹಿಕ ಪಾರತ್ರದಲಿ ॥ ೭೦ ॥ ಭಕ್ತಿ ವಿಜ್ಞಾನ ಬಲ ದೇವತಾ ಗುಣಕಭಿ । ವ್ಯಕ್ತಿ ತತ್ತದ್ಯೋಗ್ಯತಾನುಸಾರ ॥ ಮುಕ್ತಿ ಪರಿಯಂತ ಭಗವದ್ರೂಪ ದರ್ಶನ ಪ್ರ । ಯುಕ್ತ ಮಾಳ್ಪರು ಸಾಧನಗಳ ನಿಷ್ಕಾಮಕದಿ ॥ ೭೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಬಾದರಾಯಣ' ಇತಿ ಭೇದಃ ಸಂಖ್ಯಾಭೇದಃ ಆಧಿಕ್ಯಮ್ ॥ ಆದಿತೇಯಾಃ ದೇವಾಃ ॥ **ವಿದ್ಯಾಧೀಶ ಪೂಜ್ಯಚರಣಾಸ್ತು ಉಕ್ತ ಸಂಖ್ಯಾಧಿಕತ್ವೋಕ್ತಿಃ ಯಾ ಸಾ ಆವೇಶ ವಿಶೇಷತಃ** । ಶತಂ ದಶ- ಸಹಸ್ರಂ ಚ ನೈವ ತನ್ಮಾತ್ರವಾಚಕಮ್ ॥ ಅವಿರೋಧಃ ತತಃ ಜ್ಞೇಯಃ ನಾನಾವಾಕ್ಯೇಷು ಸರ್ವಶಃ ॥" **ಇತ್ಯಾಹುಃ** ॥ **ಇದಮುಪಲಕ್ಷಣಮ್** ॥ ತರತಮವೈಪರೀತ್ಯಂ ಗುಣೇಷು ವಿಪರೀತಜ್ಞಾನಂ ಚ ಗೃಹ್ಯತೇ ಗುಣಾನಾಂ ನ್ಯೂನ್ಯಂ ಚ ।. ದೇವಾದಿಷ್ವೇವಸರ್ವೇಷು ಪ್ರೋಕ್ತಾಃ ಅಪಿ ವಿಶೇಷಿಣಃ ॥ ಪಂಚಾಶತಃ ದಶಾಂಶಾದ್ವಾ ಸ್ವಸ್ವಜಾಯಾಂ ಪರಸ್ಪರಮ್॥ ದೇವಾಃ ತ್ರಯೋದಶಾಂಶೋನಾಃ ಸ್ವಪತಿಭ್ಯಃ ತಥಾಽಪರಾಃ ॥ ಅಷ್ಟಾಂ ಶೋನಾಃ ಪ್ರವಿಜ್ಞೇಯಾಃ ಯಾಸಾಂ ಮುಕ್ತೌ ಸಹ ಸ್ಥಿತಿಃ ॥ ಅನಾದಿಶ್ಚ ವಿಶೇಷೋಽಯಂ ಸರ್ವೇಷಾಂ ಮಾನುಷಾದಿನಾಮ್॥ ಇಯಂ ಚ ನೀಚ- ತಾ ಕ್ವಾಪಿ ನ ಕೇನಾಪಿ ಹ್ಯಪೋಹಿತುಮ್ ॥ ಶಕ್ಯತೇ ಯೋನ್ಯಥಾ ಕರ್ತುಂ ಇಚ್ಛೇತ್ ಸೋಽಪಿ ತಮೋ ವ್ರಜೇತ್॥ಯೋಽಪಿ ವೇದಸಮುತ್ಥೇನ ಸರ್ವಾನ್ ನೀಚೋಚ್ಚತಃ ಸ್ಥಿತಾನ್॥ ಸೋಽಪಿ ಯಾತಿ ತಮೋ ಘೋರಂ ಯಶ್ಚ ಸಾಮ್ಯಮುದೀರಯೇತ್ ॥

---

**ಸೂಚನೆ :**—'ಬಾರಪೇ' ಇತ್ಯುಪಲಕ್ಷಣಮ್ ॥ ವಿರೋಧನಿಸ್ತಾ- ರೋಽಪಿ ಕಾರ್ಯಃ ॥ ವಿರೋಧಸ್ಯೈವ ಅನಾಭಾಸೇ ಪರಿಹಾರಾಸಂಗತೇಃ ॥

## ಕನ್ನಡಾರ್ಥ

‘ಭೇದಗಳ ಪೇಳಿದನು’ ಎಂಬಲ್ಲಿ ‘ಸಂಖ್ಯೆಗಳಲ್ಲಿ ಹೆಚ್ಚು ಕಡಿಮೆಗಳನ್ನು ಹೇಳಿದನು” ಎಂದು ಅರ್ಥ ತಿಳಿಯಬೇಕು. ದೇವತೆಗಳ ಆವೇಶ ಬಲಾನುಸಾರವಾಗಿ ಗುಣ ಸಂಖ್ಯಾ ಭೇದಗಳನ್ನೂ, ಆಧಿಕ್ಯವನ್ನೂ ತಿಳಿಸಿರುವುದಾಗಿ ತಿಳಿಯಬೇಕು. ವಿದ್ಯಾಧೀಶ ಗುರುಗಳು “ಹಿಂದೆ ಹೇಳಿದ ಸಂಖ್ಯೆಗಳಿಗಿಂತಲೂ ಹೆಚ್ಚಿಗೆ ಹೇಳಿರುವುದು ಆವೇಶ ವಿಶೇಷಕ್ಕೆ ಸಂಬಂಧಿಸಿದುದು.

“ನೂರು, ಹತ್ತು, ಸಾವಿರ–ಈ ಮುಂತಾದ ಶಬ್ದಗಳಿಗೆ ನೂರು ಮುಂತಾದವುಗಳೆಂದಿಷ್ಟೇ ಅರ್ಥವಲ್ಲ. ಆವಶ್ಯಕವಿದ್ದಲ್ಲಿ ಅವುಗಳಿಗೆ

---

ಕಿಂಚಿತ್ ಪ್ರದರ್ಶ್ಯತೇ ॥ ಕರ್ಮಜೇಭ್ಯಃ ತಾತ್ವಿಕಾನಾಂ ಆನಂದಃ ತೇಭ್ಯಃ ದಕ್ಷಸ್ಯ ಉಚ್ಯತೇ ॥ ಬೃಹದಾರಣ್ಯಟೀಕೋಕ್ತಾಗ್ನೇಃ ಕರ್ಮದೇವಾತ್ ಶತೋತ್ತಮತ್ವೇನ ತೈತ್ತರೀಯೋಕ್ತಾಗ್ನ್ಯಾದಯಃ ತಾತ್ವಿಕಾಃ ನ ತತೋ ಜ್ಯಾಯಾನ್ ದಕ್ಷಃ ಇತಿ ವಿರೋಧಃ॥ “ದಕ್ಷಸ್ತ್ವೇಂದ್ರ ನಾಮಾ ಸ ಹೀಂದುಂ ರಾವಯತ್ ಪುರಾ” ಇತ್ಯುಕ್ತೇಃ ಇಂದ್ರೋ ದಕ್ಷಃ ಅತಃ ನ ವಿರೋಧಃ ॥ ತಥಾ ಬೃಹಸ್ಪತೇಃ ಇಂದ್ರಾದುತ್ತಮತಾ ಸಾದ್ಧಾಂತಾ (ರಾದ್ಧಾಂತಃ) ನ ತು (ನ) ಗುಣತಃ ಬೃಹಸ್ಪತಿಂ ॥ ನ ನಿಮಿಮಹೇಂದ್ರತ್ವಾತ್ ಪುರಂದರಃ ಇತಿ ಪರಿಹಾರಃ ॥ ತತಃ ಪ್ರಜಾಪತಿಃ ಶ್ರೂಯತೇ ನ ದಕ್ಷಃ ವಿರೋಧಾತ್ ॥ ತಸ್ಮಾತ್ ಪ್ರಜಾಪತಿಃ ಯುಕ್ತಃ ರುದ್ರಃ । ಪ್ರಜನನೇಸಿತೇತಿ ಪರಿಹಾರಃ ॥ (ನಿಸ್ತಾರಃ)

ಸರ್ವ ಏತೇ ದಶೋತ್ತರಾಃ । ತಾ ॥ ಉಮಾಯಾಃ ದಶೋತ್ತರತ್ವೇ ರುದ್ರಸ್ಯ “ಉಮಾ ಚ ರುದ್ರಶ್ಚ” ಇತ್ಯಾದಿನಾ ಮುಕ್ತಾಮುಕ್ತಾಃ ಶತಗುಣಾಃ ಇತ್ಯೈತರೇಯವಿರೋಧಃ ॥ ಏವಂ ಶತತಾರತಮ್ಯೇ ದಶಪದಂ ಶತಪರಂ ಚೇತ್ “ಉಮಾಯಾ ವದನಂ ತಾಂಶಾನ್” ಇತ್ಯನುಭಾಷ್ಯ ವಿರೋಧಃ ॥ ಅಥವಾ ಸಹಸ್ರಗುಣಿತಾಃ ಇತ್ಯುಕ್ತ್ವಾ ಪರಿಮಾಣೇ ಶತಗುಣೇಽಪಿ ಅನಂತಾದೇಃ ಸ್ಫುಟತಾವಶಾತ್ ಇತಿ ದಿಕ್ ॥ ೫೦ ॥

ಅನಂತವೆಂದೂ ಅರ್ಥವಾಗುತ್ತದೆ. ಅದುದರಿಂದ ಯಾವ ವಾಕ್ಯದಲ್ಲಿಯೂ ವಿರೋಧವು ಬರುವುದಿಲ್ಲ" ಎಂದು ಹೇಳುವರು. ಇದರಿಂದ ಇನ್ನೂ ಹೆಚ್ಚಿಗೆ ತಿಳಿದು ಬರುವ ವಿಶೇಷವೇನೆಂದರೆ—

ತರತಮಭಾವದಲ್ಲಿ ವ್ಯತ್ಯಾಸವಿರುವುದು; ಗುಣಗಳ ಬಗ್ಗೆ ವಿಪರೀತ ವಾಗಿ ತಿಳಿದುಕೊಳ್ಳುವುದು; ಗುಣಗಳಲ್ಲಿ ಹೆಚ್ಚು ಕಡಿಮೆಗಳನ್ನು ಭಾವಿಸು ವುದು. ಈ ಮುಂತಾದ ಸಂದರ್ಭಗಳಲ್ಲಿ ತೋರುವ ವಿರೋಧವೂ ಸಹ ಹಿಂದೆ ತೋರಿಸಿದ ರೀತಿಯಂತೆ ಹೋಗುತ್ತದೆ; ಪರಿಹೃತವಾಗುತ್ತದೆ ಎಂದು. ಐವತ್ತು ಅಂಶಗಳಿಂದ ಅಥವಾ ಹತ್ತು ಅಂಶಗಳಿಂದ ತನಗೂ ತನ್ನ ಹೆಂಡತಿಯಲ್ಲಿಯೂ ಪರಸ್ಪರ ನ್ಯೂನಾಧಿಕ ಭಾವವಿರುತ್ತದೆ. ದೇವಸ್ತ್ರೀ ಯರಲ್ಲಿ ತಮ್ಮ ಪತಿಗಳಿಂದ ಹತ್ತು ಅಂಶಗಳಿಂದ ನ್ಯೂನತೆಯಿರುತ್ತದೆ. ಇವರಂತೆ ಚಿಕ್ಕವರಲ್ಲಿ. ಇನ್ನು ಕೆಲವರು ೮ ಅಂಶಗಳಿಂದ ಕಡಿಮೆಯವರಿರು ತ್ತಾರೆ. ಈ ತಾರತಮ್ಯದಿಂದ ಮುಕ್ತಿಯಲ್ಲಿಯೂ ಸಹಿತರಾಗಿರುತ್ತಾರೆ. ಮನುಷ್ಯ ಮುಂತಾದ ಸರ್ವರಲ್ಲಿಯೂ ಸ್ವಭಾವತ: ಈ ತಾರತಮ್ಯ ವಿಶೇಷವು ಇದ್ದೇ ಇರುವುದು.

ಈ ನೀಚೋಚ್ಚ ಭಾವವನ್ನು ಯಾರಿಗೂ ಬದಲು ಮಾಡುವುದು ಸಾಧ್ಯವಲ್ಲ. ಹಾಗೆ ಬದಲಿಸಲು ಇಚ್ಛಿಸುವವನೂ ಸಹ ನರಕದಲ್ಲಿ ಬೀಳುವನು.

ಅನ್ಯರನ್ನು ತನ್ನ ಸಮರೆಂದೂ, ಕಡಿಮೆಯೆಂದೂ ವಿಪರೀತವಾಗಿ ಭಾವಿಸುವವನೂ ಸಹ ನರಕಕ್ಕೆ ಹೋಗುವನು.

ಬಾದರಾಯಣರ ವಚನಗಳಲ್ಲಿ ಹೇಗೆ ವಿರೋಧವು ಮೂಡುವುದು ? ಅದನ್ನು ಹೇಗೆ ನಿವಾರಿಸುವುದು ? ಈ ಬಗ್ಗೆ ಹಿಂದೆಯೇ ವಿವರಿ ಸಿರುವೆವು. ॥ ೫೦ ॥

**ಅವತರಣಿಕಾ** :—ಈ ಪದ್ಯದಿಂದ ಮುಕ್ತಿಯೋಗ್ಯರಾದ ಎಲ್ಲ ಜೀವರ ಸ್ವರೂಪ ಸ್ವಭಾವವನ್ನು ವರ್ಣಿಸುತ್ತಾರೆ.

ಇವರು ಮುಕ್ತೀಯೋಗ್ಯರೆಂಬರು ।
ಶ್ರವಣ ಮನನಾದಿಗಳ ಪರಮೋ- ।
ತ್ಸವದಿ ಮಾಡುತ ಕೇಳಿ ನಲಿಯು(ವು)ತ ಧರ್ಮಕಾಮಾರ್ಥ ॥
ತ್ರಿವಿಧ ಫಲವಾಪೇಕ್ಷಿಸದೆ ಶ್ರೀ ।
ಪವನಮುಖ ದೇವಾಂತರಾತ್ಮಕ ।
ಪ್ರವರ ತಮ ಶಿಷ್ಟೇಷ್ಟದಾಯಕನೆಂದು ಸ್ಮರಿಸುವರು ॥ ೫೯ ॥

**ಪದ್ಯಾರ್ಥ** :— ಇವರು=ಈ ಜನರು, ಮುಕ್ತಿಯೋಗ್ಯರೆಂಬರು= ಮೋಕ್ಷಕ್ಕೆ ಅಧಿಕಾರಿಗಳು ಯಾರು ಎಂದರೆ, ಅವರ ಸ್ವರೂಪ ಹೇಳುತ್ತಾರೆ. ಶ್ರವಣ=ಸಂತತ ನವವಿಧ ದ್ವೇಷರಹಿತರಾಗಿ, ನವವಿಧ ಭಕ್ತಿಯುಕ್ತರಾಗಿ ಶ್ರೀಹರಿಯ ಉತ್ಕರ್ಷಗುಣಗಳನ್ನು ಉತ್ತಮರಾದವರಿಂದ ಕೇಳುತ್ತಾ, ಕೇಳಿ, ಮನನ=ಮನಸ್ಸಿನಿಂದ ಸರ್ವದಾ ಶ್ರವಣ ಮಾಡಿದ್ದನ್ನು ಚಿಂತಿಸುತ್ತಾ ಆದಿಪದದಿಂದ ಧ್ಯಾನ, ಧಾರಣ, ಉಪಾಸನಾ ಪರಮೋತ್ಸವದಿ ಮಾಡುತ್ತ= ಬಹು ಸಂಭ್ರಮಯುಕ್ತರಾಗಿ ಮಾಡುತ್ತ ಕುಂದು-ಕೊರತೆ, ಸುಖ-ದುಃಖಾದಿಗಳೂ ಬಂದರೆ ಹರಿ ಕೊಟ್ಟಿದೆಂದು ಸಹನಮಾಡಿ ಶ್ರವಣ, ಮನನಾದಿ ಧ್ಯಾನ ಉಪಾಸನಾ ವಿಷಯಗಳನ್ನು ಕೇಳಿ=ಪುನಃ ಕೇಳುತ್ತ. ಅಥವಾ ಕೇಳಿ=ಸಂಸಾರದಲ್ಲಿ ಪುತ್ರ ಪತ್ನಿಯರ ಸಂಭ್ರಮ ಕೇಳಿ ಆಟದಲ್ಲಿಯೂ ಶ್ರೀಹರಿಯನ್ನು ಮರೆಯದೆ, ನಲಿಯುತ್ತ=ಭಗವಂತನ ಸ್ಮರಣೆ ಎಂಬ ಆನಂದದಿಂದ ಕುಣಿದಾಡುತ್ತ, ಧರ್ಮ, ಕಾಮ, ಅರ್ಥ=ಐಹಿಕವಾದ ಮೂರು ವಿಧ ಕಾಮನೆಗಳನ್ನು ಫಲವಾಪೇಕ್ಷಿಸದೆ=ಧರ್ಮ, ಕಾಮ, ಅರ್ಥ ಈ ಮೂರರಿಂದ ಬರುವ ಲಾಭರೂಪ, ಐಹಿಕ ಫಲ ಇಚ್ಛಾಮಾಡದೇ, ಶ್ರೀಲಕ್ಷ್ಮೀದೇವಿ, ಪವನ=ವಾಯುದೇವರು, ಮುಖದೇವಾಂತರಾತ್ಮಕ= ಲಕ್ಷ್ಮೀ ವಾಯುವೇ ಮೊದಲಾದ ಸಮಸ್ತ ದೇವತೆಗಳಲ್ಲಿ ನಿಯಾಮಕನಾಗಿದ್ದ ಬಿಂಬನಾದ ಹರಿಯು, ಪ್ರವರತಮ=ಶ್ರೇಷ್ಠರಲ್ಲಿ ಶ್ರೇಷ್ಠ ಸರ್ವೋತ್ತಮನೆ ಮಮ ಸ್ವಾಮಿ, ಸರ್ವಸ್ವಾಮಿ, ಶಿಷ್ಟೇಷ್ಟದಾಯಕ=ಶಿಷ್ಟಾನಾಂ ಜ್ಞಾನಿಗಳಿಗೆ ಇಷ್ಟದಾಯಕ ಮೋಕ್ಷ ಕೊಡುವನು. "ಶಿಷ್ಟೈಃ ಶಿಷ್ಟಃ ಇಷ್ಟಃ ಪೂಜಿತಃ ಶಿಷ್ಟಾನಾಮಿಷ್ಟಃ ಪ್ರಿಯ ಇತಿ ವಾ ॥ ಶಿಷ್ಟ ಇಷ್ಟಃ ಪ್ರಿಯಃ

ಯಸ್ಯೇತಿ ವಾ ಶಿಷ್ಟೇಷ್ಟಃ॥" (ವಿದ್ಯಾಧಿರಾಜರು) ಇಂತು ತರತಮ ಜ್ಞಾನ ವುಳ್ಳವರಿಗೆ, ಮುಕ್ತಿದಾಯಕನೆಂದು ಸ್ಮರಿಸುವರು=ಸದಾ ಸ್ಮರಣೆ ಮಾಡು ತ್ತಿರುವರು.

**ಭಾವಸೂಚನ** :—ಇವರೇತಿ ॥ ತ್ರಿವಿಧೇತಿ ॥ ಏತೇ ಮುಮುಕ್ಷವ ಇತ್ಯುಕ್ತಂ ಭವತಿ ॥ ೫೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಇವರು' ಇತಿ ॥ ನರೋತ್ತಮಃ ॥ ಶಿಷ್ಟೇಷ್ಟದಾಯಕ ಇತಿ ವ್ಯಾಖ್ಯಾ x ಓಂ ॥ ವಿಶಸ್ತ್ರಿಷ್ಟಾರೋಚಕೇ ದಿವಃ ಯದ್ವಾನಾ ನ ಪುರು ತಮಮ್ ॥ ಪುರುಷಾಳಾ ವೃತ್ರಹೇಂದ್ರೋ ನಾಮಾನ್ಯಪ್ರಾ ಅಜೇತಿ ಪ್ರಾಸಹಸ್ಯತಿ ಓಂ॥x ಶಿಷ್ಟಾನಾಂ ಮುಕ್ತದೇವರ್ಷ್ಯಾದೀನಾಂ ಇಷ್ಟಂ ಕಾಮ ಪೂರಣಂ ಯಸ್ಮಾತ್ ಸಃ ತಥೋಕ್ತಃ ॥ ೫೧ ॥

## ಕನ್ನಡಾರ್ಥ

ಇವರು ಎಂದರೆ ಮನುಷ್ಯೋತ್ತಮರೆಂದು ತಿಳಿಯಬೇಕು. ಶಿಷ್ಟೇಷ್ಟ ದಾಯಕ ಎಂಬ ವಿಶೇಷಣವು 'ಶಿಷ್ಟೇಷ್ಟ' ಎಂಬ ವಿಷ್ಣುಸಹಸ್ರನಾಮದ ಅರ್ಥವನ್ನು ವಿವರಿಸುವುದು.

ಶಿಷ್ಟರೆನಿಸಿದ ಮುಕ್ತದೇವ, ಋಷಿ ಮುಂತಾದವರಿಗೆ ಇಷ್ಟ ಪೂರೈಸು ವವನು ಎಂಬುದು ಬೃಹತೀ ಮಂತ್ರಾನುಗುಣವಾದ ಅರ್ಥ. ॥ ೫೧ ॥

**ಅವತರಣಿಕಾ** :— ಈ ಪದ್ಯದಿಂದ ನಿತ್ಯಸಂಸಾರಿಗಳಾದ ಜೀವರ ಸ್ವರೂಪ, ಸ್ವಭಾವಗಳನ್ನು ಹೇಳುತ್ತಾರೆ.

**ನಿತ್ಯ ಸಂಸಾರಿಗಳು ಗುಣ ದೋ- ।**
**ಷಾತ್ಮಕರು ಬ್ರಹ್ಮಾದಿ ಜೀವರ ।**
**ಭೃತ್ಯರೆಂಬರು ರಾಜನೋಪಾದಿಯಲಿ ಹರಿಯೆಂಬ**
**ಕೃತ್ತಿವಾಸನು ಬ್ರಹ್ಮಶ್ರೀ ವಿ- ।**



**ಷ್ಣು ತ್ರಯರು ಸಮ ದುಃಖ ಸುಖ ಉ- ।**
**ತ್ಪತ್ತಿ ಮೃತಿ ಭಯ ಪೇಳುವರು ಅವತಾರಗಳಿಗೆ ಸದಾ ॥೫೩॥**

**ಪದ್ಯಾರ್ಥ** :—ನಿತ್ಯಸಂಸಾರಿಗಳು=ಸದಾ ಸುಖ ದುಃಖ ಮಿಶ್ರ ಸ್ವಭಾವವುಳ್ಳ ಮಿಶ್ರಜೀವರು. ಇವರು ಸಂಸಾರಿಗಳು ಏಕೆಂದರೆ, ಸಂಸಾರವು ಸುಖ ದುಃಖ ಮಿಶ್ರವಾದುದು. ಕಾರಣ, ಸದಾ ಮಿಶ್ರಸ್ವಭಾವ ವುಳ್ಳವರು. ಗುಣ ದೋಷಾತ್ಮಕರು=ಬಹಿರಂಗ ಸುಖವಾಗುವ ಕಿಂಚಿತ್ ಗುಣಸ್ವಭಾವವಿದ್ದರೂ ಆ ಗುಣವು ದೋಷಯುಕ್ತವಾದುದು. ಇವರಿಗೆ ಉತ್ತಮವಾದ, ಉತ್ಕರ್ಷವಾದ, ನಿರ್ಮಲವಾದ ಗುಣಗಳಿಲ್ಲ. ಗುಣ ದಲ್ಲಿಯೂ ದೋಷಮಿಶ್ರವಾದುದು, ದೋಷ=ಪಾಪವುಳ್ಳವರು. ಇವರಿಗೆ ತರತಮ ಭಾವವಿಲ್ಲ. ಆದರೆ ಬ್ರಹ್ಮಾದಿ ಜೀವರು ಭೃತ್ಯರೆಂಬರು= ಬ್ರಹ್ಮಾದಿ ಎಲ್ಲ ಜೀವರು, ಸೇವಕರು, ರಾಜನೋಪಾದಿಯಲಿ ಹರಿಯು=ಬ= ಶ್ರೀಹರಿಯು ರಾಜನಂತೆ ಇರುವನು. ರಾಜಸೇವಕರಂತೆ ಇವರ ಜ್ಞಾನ, ಕೃತ್ತಿವಾಸನು=ಗಜಚರ್ಮ ಧರಿಸಿದ ರುದ್ರದೇವರು. ಬ್ರಹ್ಮ=ಚತುರ್ಮು ಖನು. ಶ್ರೀವಿಷ್ಣು=ಶ್ರೀಹರಿಯು. ತ್ರಯರು=ಮೂವರು. ಸಮರು= ಸಮಾನರು. ಇವರಲ್ಲಿ ಭೇದವಿಲ್ಲ. ಸದಾ ಅವತಾರಗಳಿಗೆ=ನಿತ್ಯವಾದ ಶ್ರೀಹರಿಯ ಅವತಾರಗಳಿಗೆ,ಉತ್ಪತ್ತಿ=ಹುಟ್ಟುವುದು, ಮೃತಿ=ಸಾಯುವುದು ಇತ್ಯಾದಿ ಭಯ ಅಂಜಿಕೆಗಳನ್ನು ಹೇಳುತ್ತಾರೆ. ಇವರೆ ಸಂಸಾರಿಗಳು.

**ಭಾವಸೂಚನ** :—ನಿತ್ಯೇತಿ ॥ ಕೃತ್ತಿವಾಸ ರುದ್ರ ॥ ಬ್ರಹ್ಮೇತಿ ॥ ಭೃತ್ಯರೆಂಬುವರು ಆನಲಿಕ್ಕಿಲ್ಲಾ ಕಾಕುಃ ॥ ಯಥೋಕ್ತಂ ಸತ್ತತ್ವ ಮಾಲಾಯಾಂ ನಿತ್ಯಸಂಸಾರಿಪ್ರಕರಣೇ ॥ ತತ್ರ ಸಂಸೃತಿಬದ್ಧಾಸ್ತು ಗುಣದೋಷೋಭಯಾತ್ಮಕಾಃ ॥ ತತ್ರೋಚ್ಚಾ ರಾಜವದ್ವಿಷ್ಣೋಃ ಸರ್ವಾ ಧಿಕ್ಯಮಸಂಶಯಮ್ ॥ ಜಾನಂತ್ಯಥಾಪಿ ಬ್ರಹ್ಮಾದಿ ದೇವಾನಾಂ ಪರಿ ವಾರತಾಮ್ ॥ ನ ಜಾನಂತೀತಿ ॥ ೫೩ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

'ನಿತ್ಯ' ಇತಿ ॥ ವಿವೃತಮನ್ಯತ್ರ ॥ ೫೩ ॥

**ಕನ್ನಡಾರ್ಥ**

ಈ ನಿತ್ಯಜೀವರ ವಿಷಯವಾಗಿ ಬೇರೆ ಕಡೆಯಲ್ಲಿ ವಿವರಿಸಲಾಗಿರುತ್ತದೆ. ॥ ೫೨ ॥

**ಅವತರಣಿಕಾ** :— ಈ ಪದ್ಯದಲ್ಲಿ ತಮೋಯೋಗ್ಯರಾದ ಕಲ್ಯಾದಿ ದೈತ್ಯರ ಸ್ವಭಾವ ಸ್ವರೂಪ ಧರ್ಮಗಳನ್ನು ಪೇಳುತ್ತಾರೆ.

**ತಾರತಮ್ಯ ಜ್ಞಾನವಿಲ್ಲದೆ ।**
**ಸೂರಿಗಳ ನಿಂದಿಸುತ ನಿತ್ಯದಿ ।**
**ತೋರುತಿಪ್ಪರು ಸುಜನರೋಪಾದಿಯಲಿ ನರರೊಳಗೆ ॥**
**ಕ್ರೂರ ಕರ್ಮಾಸಕ್ತರಾಗಿ ಶ- ।**
**ರೀರ ಪೋಷಣೆ ಗೋಸುಗದಿ ಸಂ- ।**
**ಚಾರ ಮಾಳ್ಪರು ಅನ್ಯದೇವತೆ ನೀಚರಾಲಯದಿ ॥ ೫೩ ॥**

**ಪದ್ಯಾರ್ಥ** :—ತಾರತಮ್ಯ ಜ್ಞಾನವಿಲ್ಲದೇ=ಬ್ರಹ್ಮಾದಿ ತೃಣಾಂತ ಜೀವರ ತಾರತಮ್ಯ ಜ್ಞಾನ, ಪಂಚಭೇದ ಜ್ಞಾನವು ತಮೋಜೀವಿಗಳಿಗೆ ಇಲ್ಲೇ ಇಲ್ಲ. ಸೂರಿಗಳ ನಿಂದಿಸುತ=ಪ್ರತಿನಿತ್ಯವಲ್ಲಿಯೂ ಜ್ಞಾನಿಗಳಾದ ಬ್ರಹ್ಮಾದಿ ದೇವತೆಗಳನ್ನೂ, ಸೂರಿಗಳಾದ=ಭೂಸೂರಿ ಬ್ರಾಹ್ಮಣರನ್ನೂ ನಿತ್ಯದಲ್ಲಿ ದೂಷಣೆಮಾಡುತ್ತ, ವ್ಯರ್ಥವಾಗಿ ಸೂರಿಗಳಲ್ಲಿ ದೋಷಾರೋಪಣೆ ಮಾಡುತ್ತಾ, ನರರೊಳಗೆ=ಮನುಷ್ಯರೊಳಗೆ, ಸುಜನರೋಪಾದಿಯಲಿ ತೋರುತಿಪ್ಪರು=ಸಜ್ಜನರಂತೆ ವೇಷಹಾಕಿ ಕಾಣಿಸಿಕೊಳ್ಳುವ ವೇಷಧಾರಿಗಳು. 'ಪ್ರಚ್ಛನ್ನಬೌದ್ಧರು' ಕ್ರೂರಕರ್ಮಾಸಕ್ತರಾಗಿ=ಸದಾ ಕೆಟ್ಟದಾದ ಹಿಂಸಾನೃತ ದಂಭಾದಿ ಕರ್ಮಗಳಲ್ಲಿಯೇ ಆಸಕ್ತರಾಗಿ ಇದ್ದುಕೆಟ್ಟ ಕೆಲಸವನ್ನೇ ಮಾಡುವರು. ಶರೀರ ಪೋಷಣೆಗೋಸುಗದಿ=ಈಸ್ಥೂಲದೇಹದ ಹೊಟ್ಟೆ ತುಂಬಿಕೊಳ್ಳುವುದಕ್ಕಾಗಿ, ಅನ್ಯದೇವತೆ=ಯಲ್ಲಮ್ಮ, ಯಕನಾತಿ, ಜಟ್ಟಿಂಗ ಮುಂತಾದ ಕ್ರೂರ ತಾಮಸ ದೇವತೆಗಳನ್ನು ಭಜಿಸುತ್ತಾ, ನೀಚರಾಲಯದಿ=ಹೀನ, ಕೀಳ, ಕೆಟ್ಟ ಗುಣವವರ ಮನೆಗಳಿಗೆ ಹೋಗಿ, ಹೊಟ್ಟೆ ಪೊರೆಯಲು ಬಿಕ್ಕೆಬೇಡುವರು. ಇದೇ ತಮೋಜೀವಿಗಳ ಸ್ವಭಾವ.

**ಭಾವಸೂಚನ :—** ತಲ್ಲಕ್ಷಣಮಾಹ ತಾರತಮ್ಯೇತಿ ॥ ಹರಿಭಕ್ತಿ ವೃತೇ ಮೋಕ್ಷಂ ತತ್ವಜ್ಞಾನಂ ವಿನಾಪಿ ವಾ ॥ ಹರಿದ್ವೇಷಾತ್ ಮುಕ್ತಿ ಮಪಿ ದಾನತೀರ್ಥಾದಿಭಿಸ್ತಥಾ ॥ ಮುಕ್ತಾಪಭೇದಂ ಜೀವಾನಾಂ ಸಾಮ್ಯಂ ವಾ ಜ್ಞಾನಹೀನತಾಮ್ ॥ ಅರೂಪತ್ವಂ ಹಿ ಜೀವಾನಾಂ ಮುಕ್ತಾನಾಂ ಬದ್ಧತಾಮಪಿ ॥ ಪರಸ್ಪರಮಭೇದಂ ಚ ಜೀವಾನಾಮಜತಾಂ ತಥಾ ॥ ಮಿಥ್ಯಾತ್ವಂ ಚ ಪ್ರಪಂಚಸ್ಯ ಬ್ರಹ್ಮಜ್ಞಾನೇನ ಬಾಧ್ಯತಾಮ್ ॥ ಸರ್ವೇಷಾಮಪಿ ಮುಕ್ತಿಂ ಚಾಪ್ರಾಮಾಣ್ಯಂ ಚ ಶ್ರುತೇಸ್ತಥಾ॥ಅತತ್ವಾವೇದಕತ್ವಂ ಚ ಯುಕ್ತೇಃ ದುರ್ಬಲತಾಮಪಿ ॥ ದುರಾಗ್ರಹಗೃಹೀತಾರಃ ಕುತರ್ಕ ಪರಿನಿಷ್ಠಿತಾಃ । ಹರಿದ್ವೇಷಪರಾ ನಿತ್ಯಂ ತದ್ಭಕ್ತದ್ವೇಷಿಣಃ ತಥಾ ॥ ಇತಿ ನಾನಾಪ್ರಕಾರೇಣ ಮನ್ಯಂತೇ ತೇ ಕುಬುದ್ಧಯ ಇತಿ ಸತ್ತತ್ವರತ್ನ ಮಾಲಾಯಾಮ್ ॥ ೫೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪುನಃ ತತ್ಸ್ವರೂಪಂ ಆಹ 'ತಾರತಮ್ಯ' ಇತಿ ॥ ೫೩ ॥

## ಕನ್ನಡಾರ್ಥ

ಆ ನಿತ್ಯ ಸಂಸಾರಿಗಳ ಸ್ವರೂಪವನ್ನೇ ಇನ್ನಷ್ಟು ಬಿಡಿಸಿ ಈ ಪದ್ಯ ದಿಂದ ತಿಳಿಸುವರು ॥ ೫೩ ॥

**ಅವತರಣಿಕಾ :—**ಶ್ರೀ ದಾಸಾರ್ಯರು ಈ ಬೃಹತ್ತಾರತಮ್ಯ ಸಂಧಿಯನ್ನು ಶ್ರೀಹರಿಗೆ ಮಾಲಾರೂಪವಾಗಿ ಸಮರ್ಪಿಸುತ್ತಾರೆ.

**ದಶಪ್ರಮತಿ ಮತಾಬ್ಧಿಯೊಳು ಸುಮ- ।**
**ನಸರೆನಿಪ ರತ್ನಗಳನವಲೋ- ।**
**ಕಿಸಿ ತೆಗೆದು ಪ್ರಾಕೃತ ಸುಭಾಷಾ ತಂತುಗಳ ರಚಿಸಿ ॥**
**ಅಸುಪತಿ ಶ್ರೀರಮಣನಿಗೆ ಸಮ- ।**
**ರ್ಪಿಸದೆ ಸಜ್ಜನರಿದನು ಸಂತೋ- ।**
**ಷಿಸಲಿ ದೋಷಗಳೆಣಿಸದಲೆ ಕಾರುಣ್ಯದಲಿ ನಿತ್ಯ ॥ ೫೪ ॥**

**ಪದ್ಯಾರ್ಥ** :—ದಶಪ್ರಮತಿ ॥ ಪೂರ್ಣಪ್ರಜ್ಞರ ಮತಾಬ್ಧಿಯೊಳು= ನುತವೆಂಬ ಮಧ್ವಶಾಸ್ತ್ರವೆಂಬ ಸಮುದ್ರದಲ್ಲಿ, ಸುಮನಸರೆನಿಪ=ಬ್ರಹ್ಮಾದಿ ದೇವತೆಗಳೆಂಬುವ ರತ್ನಗಳವಲೋಕಿಸಿ ತೆಗೆದು, ಸಮುದ್ರದಲ್ಲಿ ಮುಳುಗಿ ರತ್ನಾದಿಗಳನ್ನು ತೆಗೆಯುವಂತೆ, ಮಧ್ವಶಾಸ್ತ್ರವೆಂಬ ಸಮುದ್ರದಲ್ಲಿ ಮುಳುಗಿ, ದೇವತೆಗಳೆಂಬ ರತ್ನಗಳನ್ನು ದೇವಸ್ವರೂಪವು ಯಾವಾಗಲೂ ಪ್ರಕಾಶಮಾನವಾದ ರತ್ನದಂತೆ, ಆ ರತ್ನಗಳಲ್ಲಿ ನವರತ್ನಗಳು ಜೇರಿಪ್ಪಂತೆ, ದೇವತೆಗಳ ತರತಮ ಭಾವಲಕ್ಷಣ ರತ್ನಗಳನ್ನು ಅವಲೋಕಿಸಿ ತೆಗೆದು= ನೋಡಿ,ಹುಡುಕಿ ಕಡೆಗೆ ತೆಗೆದು, ಪ್ರಾಕೃತ ಸುಭಾಷಾ ತಂತುಗಳ ರಚಿಸಿ= ಸಂಸ್ಕೃತದಿಂದ ಭಿನ್ನವಾದರೂ ಕನ್ನಡ ಭಾಷೆಯು, ಪ್ರಾಕೃತ ಸುಭಾಷೆಯು ಹರಿಗುಣಗಾನ ಮಾಡುವ ಕನ್ನಡ ಸುಭಾಷೆಯೆಂಬ ತಂತು=ದಾರದಲ್ಲಿ ಪೋಣಿಸಿ, ಈ ನವರತ್ನ ಮಾಲಿಕೆಯನ್ನು, ಅಸುಪತಿ=ಶ್ರೀ ಪ್ರಾಣಪತಿ ಅಂತರ್ಯಾಮಿಯಾದ, ಶ್ರೀರಮಣನಿಗೆ ಅರ್ಪಿಸಿದೆ=ಶ್ರೀದೇವಿಗೆ ಪತ್ನಿ ಯಾದ ಮುದ್ಬಿಂಬರೂಪಿ ಹರಿಯು ಅಂಸದಲ್ಲಿ ಅರ್ಪಿಸಿರುವೆನು. ದೋಷ ಗಳೆಣಿಸದಲೆ=ಇದರಲ್ಲಿರುವ ದೋಷಗಳನ್ನು ಗಣನೆಮಾಡದೇ ಸಜ್ಜನರು= ಭಗವದ್ಭಕ್ತರಾದ ಸಮೀಚೀನ ಜ್ಞಾನವುಳ್ಳವರು, ನಿತ್ಯದಲಿ=ಪ್ರತಿನಿತ್ಯ ಪಠಿಸಿ ಪಾರಾಯಣ ಮಾಡಿ, ಸಂತೋಷಿಸಲಿ=ಸಂತೋಷಯುಕ್ತರಾಗಿ ಆನಂದಪಡಲೆಂದು ಪ್ರಾರ್ಥಿಸಿದ ಅಹಂಭಾವ ತೊರೆದ ದಾಸಾರ್ಯರು ಸದಾ ಸನ್ಮತಿಯನೀಯಲಿ ಇದೇ ಶಾಸ್ತ್ರದರ್ಪಣ.

**ಭಾವಸೂಚನ** :— ಅಸ್ಮದುಕ್ತಾವೇಶಾಂಶತಾರತಮ್ಯಮಶೇಷ ಸಚ್ಛಾಸ್ತ್ರರಾಜಮುಖಸ್ಯ ದರ್ಪಣಾಯಿತತ್ವಾತ್ ಸರ್ವಸುಜನೈರ್ಮಾನ್ಯ ತಮಮವಶ್ಯಂ ಭವಿಷ್ಯತೀತ್ಯಾಶಯೇನಾಹ ॥ದಶೇತಿ॥ ಅಸುಪತಿ ಪ್ರಾಣಪತಿ ಅಸ್ಯ ಅಶೇಷ ಶಾಸ್ತ್ರಾರ್ಥತ್ವಮೇವಮೇವೇತೀ ದಾಸರಾಜ ಕೃಪಾಧಾರಾ ಪಾತ್ರೇಣ ಮಯಾ ಕಿಂಚಿದ್ಯಥಾಮನೀಷಂ ಪ್ರದರ್ಶಿ ಸರ್ವಗ್ರಂಥ ಸ್ಯಾಪ್ಯೇವಂ ವಕ್ತುಮರ್ಹತ್ವೇಪಿ ವಿಸ್ತೃತಿಭಯೇನೋಪರಮ್ಯತೇ ॥ ೫೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಇದಂ ಉನ್ಮೂಲಂ ಇತಿ ಚೋದ್ಯಂ ನಿರಾಹ 'ದಶ' ಇತಿ ॥ ೫೪ ॥

## ಕನ್ನಡಾರ್ಥ

ಈ ತಾರತಮ್ಯವು ಮೂಲದಲ್ಲಿಲ್ಲವೆಂಬ ಆಕ್ಷೇಪವನ್ನು ಈ ಪದ್ಯದಿಂದ ಪರಿಹರಿಸುತ್ತಾರೆ.

ಕಲಿ ಮುಂತಾದವರನ್ನು ನಾಶಪಡಿಸುವುದರಿಂದ 'ಅಸು' ಎಂದರೆ ವಾಯು ಎಂದು ಅರ್ಥ. ॥ ೫೪ ॥

**ಅವತರಣಿಕಾ** :—ಈ ಎರಡು ಪದ್ಯ ೫೫-೫೬ರಲ್ಲಿ ಬುದ್ಧ್ಯಾರೋಹಣ ಮತ್ತು ದಾರ್ಢ್ಯಾರ್ಥವಾಗಿ ಸಂಕ್ಷಿಪ್ತವಾಗಿ ಶ್ರೀಹರಿಯಾದಿ ಎಲ್ಲ ದೇವತೆಗಳ ತಾರತಮ್ಯ ನಿರೂಪಿಸುತ್ತಾರೆ.

**ನಿರುಪಮನು ಶ್ರೀವಿಷ್ಣು ಲಕ್ಷ್ಮೀ ।**
**ಸರಸಿಜೋದ್ಭವ ವಾಯು ವಾಣೀ ।**
**ಗರುಡ ಷಣ್ಮಹಿಷಿಯರು ಪಾರ್ವತಿ ಶಕ್ರ ಸ್ಮರ ಪ್ರಾಣ ॥**
**ಗುರು ಬೃಹಸ್ಪತಿ ಪ್ರವಹ ಸೂರ್ಯನು ।**
**ವರುಣ ನಾರದ ವಹ್ನಿ ಸಪ್ತಾಂ ।**
**ಗಿರರು ಮಿತ್ರ ಗಣೇಶ ಪೃಥು ಗಂಗಾ ಸ್ವಾಹಾ ಬುಧನು ॥೫೫॥**

**ಪದ್ಯಾರ್ಥ** :—ನಿರುಪಮನು = ಉಪಮೆ ರಹಿತನು, ಸರಿಮಿಗಿಲಿಲ್ಲದವನು, ಸರ್ವೋತ್ತಮನು, ವಿಷ್ಣುನಂತರ, ಶ್ರೀಲಕ್ಷ್ಮೀ=ಶ್ರೀ ರಮಾದೇವಿಯು ನಂತರ ಕ್ರಮಾನುಸರಿಸಿ, ಸರಸಿಜೋದ್ಭವ=ಕಮಲದಲ್ಲಿ ಪುಟ್ಟಿದ ಬ್ರಹ್ಮ, ವಾಯು=ವಾಯುದೇವರು, ವಾಣೀ=ವಾಗಭಿಮಾನಿ ಸರಸ್ವತೀ ದೇವಿ (ಯರಲ್ಲಿ ಭಾರತೀ ದೇವಿಯರು ಸಹ) ಗರುಡ=ಗರುಡ, ಶೇಷ, ರುದ್ರ, ಷಣ್ಮಹಿಷಿಯರು=ಜಾಂಬವತ್ಯಾದಿ ಆರು ಜನ ಭಗವಂತನ ನೀತ ಪತ್ನಿಯರು, ಪಾರ್ವತಿ=ರುದ್ರಪತ್ನಿಯಿಂದ ಸಮರಾದ(ಸೌಪರಣಿ,ವಾರುಣಿ ದೇವಿ) ಶಕ್ರ=ಇಂದ್ರ, ಸ್ಮರ=ಕಾಮ, ಪ್ರಾಣ=ಅಹಂಕಾರಿಕ ಪ್ರಾಣ, ಗುರು ಬೃಹಸ್ಪತಿ=ದೇವತೆಗಳಿಗೆ ಗುರುವಾದ ಬೃಹಸ್ಪತ್ಯಾಚಾರ್ಯರು ಮೊದಲಾದ ೬ ಜನರು, ಪ್ರವಾಹ=ಕೋಣಾಧಿಪ ಪ್ರವಾಹ ವಾಯು ದೇವರು, ಸೂರ್ಯನು=ಸೂರ್ಯ, ಚಂದ್ರ, ಯಮ, ಶತರೂಪ ನಾಲ್ವರು.

ವರುಣ=ವರುಣದೇವರು, ನಾರದ=ದೇವಋಷಿಗಳಾದ ನಾರದರು, ವಹ್ನಿ= ಅಗ್ನಿಸಮಾನರಾದ ಭೃಗು, ಪ್ರಸೂತಿಗಳು, ಸಪ್ತಾಂಗಿರರು=ಅಂಗಿರ, ವಸಿಷ್ಠ, ಮರೀಚಿ, ಅತ್ರಿ, ಪುಲಹ, ಕ್ರತು-ಇವರು ಏಳು ಜನ ಬ್ರಹ್ಮ ಪುತ್ರರು. ಇವರ ಸಮರಾದ ವಿಶ್ವಾಮಿತ್ರ, ವೈವಸ್ವತ ಮನು, ಮಿತ್ರ= ಮಿತ್ರನಾಮಕ ಸೂರ್ಯನಿಗೆ ಸಮರಾದ ತಾರಾ, ಪ್ರಾವಹಿ, ಗಣೇಶ= ಗಣಪ, ಈತನಿಗೆ ಸಮಾನರಾದ ಧನಪ, ವಿಷ್ವಕ್ಸೇನ, ಶೇಷಶತರು, ಅಶ್ವಿನ್ಯಾದಿಗಳು, ಪೃಥು=ಪೃಥುರಾಜನೆ ಮೊದಲಾದ ಎಲ್ಲ ಕರ್ಮಜ ದೇವತೆಗಳು ಕಕ್ಷವಲ್ಲಿರುವರು. ನಂತರ ಗಂಗಾ=ವರುಣ ಪತ್ನಿ ಭಾಗೀರಥಿ ತತ್ಸಮಾನ, ಸಂಜ್ಞಾ, ರೋಹಿಣಿ, ಶಾಮಲಾ, ಪರ್ಜನ್ಯಾದಿ ಆರು ಜನರು, ಸ್ವಾಹಾ=ಅಗ್ನಿಭಾರ್ಯಾ ಸ್ವಾಹಾದೇವಿ, ಬುಧ=ಜಲಾಭಿಮಾನಿ ಬುಧನು. ಈ ಪ್ರಕಾರ ಮೂಲ ಬೃಹತ್ತಾರತಮ್ಯದಲ್ಲಿ ೨೩ನೇ ಕಕ್ಷದವರೆಗೆ ಇರುವವರನ್ನು ಸ್ತೋತ್ರಮಾಡಿದ್ದು ಉಳಿದವರನ್ನು ಮುಂದಿನ ಪದ್ಯದಲ್ಲಿ ಸ್ತೋತ್ರಮಾಡುತ್ತಾರೆ.

**ಭಾವಸೂಚನ** :— ಇದಾನೀಮುಕ್ತಮೇಕೀಕೃತ್ಯ ಸತ್ಯಭಾಮಾ ಸಹಾಯೋ ಪರಿಲೋಭಾತ್ಪುನಸ್ತಾನುಕ್ತಾನ್ ಸ್ಮರತಿ ॥ ನಿರುಪಮೇತಿ ॥ ಅಸದೃಶಾ॥ ತದುಕ್ತಂ ತಾರತಮ್ಯೇ॥ಓಂ ವಿಷ್ಣುಃ ಶ್ರೀ ಬ್ರಹ್ಮಾ ವಾಣೀಶೋ ನೀಲೋಮೇಂದ್ರಸ್ಸ್ಮರೋ ಗುರುಃ ॥ ಪ್ರವಾಹಸ್ಸೂರ್ಯೋ ವರುಣೋ ನಾರದೋಗ್ನಿರ್ವಸಿಷ್ಠಕಃ ॥ ೮೧ ॥ ಮಿತ್ರೋ ವಿಘ್ನೇಶ್ವರಶ್ಚೈವ ಪೃಥು ರ್ಗಂಗಾ ಚ ಕೇಚನ ॥ ಸ್ವಾಹಾ ಬುಧೋಷಾ ಶೈನೇಯ ಪುಷ್ಕರಾಜಾನ ದೇವತಾಃ ॥ ೮೨ ॥ ಪಿತರೋ ದೇವಮನುಜಗಂಧರ್ವಾಃ ಚಕ್ರವರ್ತಿನಃ॥ ಮನುಷ್ಯೋತ್ತಮಪರ್ಯಂತಾಃ ಪ್ರೀಯಂತಾಂ ಗುರುವೋ ಮಮೇತಿ ॥ ೮೩ ॥ ತಾರತಮ್ಯೇ ॥ ೫೫ ॥

**ಸೂಚನೆ** :—ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ಈ ೫೫ ೫೬ನೇ ಪದ್ಯ ಎರಡೂ ಕೂಡಿಸಿ ಬರೆದಿರುವರು. ಮುಂದೆ ೫೬ನೇ ಪದ್ಯದಲ್ಲಿ ಕೊಟ್ಟಿದೆ.

**ಅವತರಣಿಕಾ** :—ಹಿಂದಿನ ಪದ್ಯದಿಂದ ಈ ಪದ್ಯದಲ್ಲಿ ಶನೈಶ್ಚ ರಾರಂಭಿಸಿ ಮಾನುಷೋತ್ತಮರು ಮುಕ್ತಿಯೋಗ್ಯರ ಪರ್ಯಂತ ಎಲ್ಲರನ್ನು ಸ್ತೋತ್ರಮಾಡುತ್ತಾರೆ.

**ತರಣಿ ತನಯು ಶನೈಶ್ಚರನು ಪು- ।**
**ಷ್ಕರನಜಾನಜ ಚಿರಪಿತರು ಗಂ- ।**
**ಧರ್ವರೀರ್ವರು ದೇವ ಮಾನುಷ ಚಕ್ರವರ್ತಿಗಳು ॥**
**ನರರೊಳುತ್ತಮ ಮಧ್ಯಮಾಧಮ ।**
**ಕರೆಸುವರು ಮಧ್ಯೋತ್ತಮರು ಈ ।**
**ರೆರಡು ಜನ ಕೈವಲ್ಯ ಮಾರ್ಗಸ್ಥರಿಗೆ ಆನಮಿಪೆ ।. ೫೬ ॥**

**ಪದ್ಯಾರ್ಥ** :— ತರಣಿತನಯ=ಸೂರ್ಯನ ಮಗನಾದ ಶನೈಶ್ಚರನು ಶನಿಯು, ನಂತರ ಪುಷ್ಕರ=ಸುಕರ್ಮಾಭಿಮಾನಿ ಪುಷ್ಕರದೇವನು (ಇಲ್ಲಿಯೇ ಋಷಿಗಳು ಸಹ ಬಂದರು) ಚಿರಪಿತೃ=ಚಿರನಾಮಕ ಪಿತೃಗಳ ಗಣವು, ದೇವ ಮಾನುಷ ಗಂಧರ್ವರೀರ್ವರು=ದೇವಗಂಧರ್ವರು ನಂತರ ತಾರತಮ್ಯದಿಂದ ಮನುಜಗಂಧರ್ವರು ಎರಡು ಗಣ, ಚಕ್ರವರ್ತಿಗಳು=ನರಚಕ್ರವರ್ತಿಗಳು, ನಂತರ ನರರೊಳುತ್ತಮ=ಮನುಷ್ಯೋತ್ತಮರು ಇವರು, ಮುಕ್ತಿಯೋಗ್ಯ ಸಾಧನ ಜೀವಿಗಳಲ್ಲಿ, ಅಧಮಾ=ಮನುಷ್ಯೋತ್ಕೃಷ್ಟರು ಕರೆಸುವರು. ಮಧ್ಯಮ=ಋಷ್ಯಾದಿಗಳು, ಉತ್ತಮರು=ದೇವತೆಗಳು. ಈ ಪ್ರಕಾರ ಸಾಧನ ಜೀವಿಗಳಲ್ಲಿ ಉತ್ತಮರು ದೇವತೆಗಳು. ಮಧ್ಯಮರು ಋಷಿಗಳು. ಅಧಮರು ಮನುಷ್ಯೋತ್ತಮರಲ್ಲಿ ತೃಣಾದಿ ಪರಿಯಂತ ಮುಕ್ತಿಯೋಗ್ಯರೂ ಬಂದರು. ಈರೆರಡು ಜನ=ಈರು=ಎರಡು ಎರಡು ೨×೨=೪ ಜನರು. ದೇವ, ಋಷಿ, ಪಿತೃ, ಪ, ನರ–ಹೀಗೆ ಐದು ವಿಧ ಮುಕ್ತಿಯೋಗ್ಯರಲ್ಲಿ. ಪ–ಮನುಜ ರಾಜರು, ಚಕ್ರವರ್ತಿಗಳು. ಮನುಜೋತ್ತಮರ ಕೂಡಿ ಒಂದೇ ಎಂದು ಅಥವಾ ನಿರಂಶರನ್ನು ಒಂದೇ ಗಣದಲ್ಲಿ ಸೇರಿಸಿ ನಾಲ್ಕು ಜನ=ಸಮೂಹವು ಗಣವು. ಕೈವಲ್ಯ ಮಾರ್ಗಸ್ಥರಿಗೆ=ಮೋಕ್ಷ ಮಾರ್ಗಸ್ಥರು. ಮುಕ್ತಿಪಥದ ಮುಕ್ತಿಯೋಗ್ಯರಿಗೆ, ಆನಮಿಪೆ=ನಾನು ನಮಸ್ಕರಿಸುವೆನು ಎಂದು ದಾಸ

ರಾಯರು "ರಮಾಕಳತ್ರನ ದಾಸವರ್ಗಕೆ ನಮಿಪೆ ನನವರತಾ" ಎಂಬ ಮಂಗಲಾಚರಣ ಸಂಧಿಯಂತೆ ಇಲ್ಲಿಯೂ ಸ್ತುತಿಸಿದ್ದಾರೆ.

**ಭಾವಸೂಚನ** :—ತರಣೀತಿ ಸೂರ್ಯ ॥ (ಈ ಪದ್ಯಾರ್ಥ ಭಾವ ಮತ್ತು ಉಳಿದ ವಿಚಾರವೆಲ್ಲ ಹಿಂದಿನ ಪದ್ಯ ಭಾವಸೂಚನೆಯಲ್ಲಿ ನಿರೂಪಿಸಿದ್ದಾರೆ. ॥ ೫೬ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ತರತಮಭಾವಾಪನ್ನದೇವಾಃ ಕ್ರಮೇಣೇಯಂತ ಇತಿ ಬುಧ್ಯವತಾರಾರ್ಥಂ ಏಕೈಕದೇವಾನಾದಾಯ ಸಂಗ್ರಾಹಕಪದ್ಯಾನಿ ಕೃತಾನಿ ಶ್ರೀಮುಷ್ಣವಿಠ್ಠಲಾಚಾರ್ಯೈಃ ಅಂತೇ । ತತ್ತದರ್ಥಕಪದ್ಯದ್ವಯಮಂತೇ ನಿಬಧ್ನಾತಿ 'ನಿರುಪಮ' ಇತಿ ॥

ವಿಷ್ಣುಃ ಶ್ರೀಬ್ರಹ್ಮ ವಾಣೀಶೋ ಮಾಸಿಲೇಂದ್ರಾ ಅಸುರ್ಗುರುಃ ॥<br>
ಪ್ರವಹಃ ಸೂರ್ಯ ವರುಣ ನಾರದಾಗ್ನಿ ವಿಶಿಷ್ಟಕಾಃ ॥<br>
ಮಿತ್ರ ವಿಘ್ನೇಶ್ವರೌ ಚೈವ ಪೃಥುಃ ಗಂಗಾ ಚ ಕೇಚನ ॥<br>
ಸ್ವಾಹಾ ಬುಧೋಷಾಶ್ಚ ಶನಿಃ ಪುಷ್ಕರಃ ಕರ್ಮದೇವತಾಃ ॥<br>
ಪಿತರಃ ದೇವ ಮನುಜ ಗಂಧರ್ವಾಃ ಚಕ್ರವರ್ತಿನಃ ॥<br>
ಮನುಷ್ಯೋತ್ತಮ ಪರ್ಯಂತಾಃ ಪ್ರೀಯಂತಾಂ ಗುರುವಃ ಮಮ ॥<br>
ಮಧ್ಯೋಚ್ಚಾಃ ಮಧ್ಯಾಃ ಋಷಯಃ ಉಚ್ಚಾಃ ದೇವಾಃ ॥

ಏವಮನ್ಯ ವಿವಕ್ಷಿತಾಏವಮ್ ॥ ಭಾ. ಏ. ತಾ ॥ ಅಧಮಾ ಮಾನುಷೋತ್ಕೃಷ್ಟಾಃ ತೇ ಚಾಪಿ ತ್ರಿವಿಧಾ ಮತಾಃ ॥ಇತಿ॥ ಕೈವಲ್ಯಂ ಯೋಗ್ಯಂ ॥

ತತಶ್ಚಾನುಮಾನಮ್ ಏತತ್ ಕಥಾಮೃತಸಾರಃ ಏತದ್ಗ್ರಂಥ ಮೂಲಃ ಕ್ವಚಿತ್ ಕ್ವಚಿತ್ ತದಾನುಪೂರ್ವ್ಯುಪೇತ ತತ್ರೋಕ್ತ ನಿದರ್ಶನ ಪ್ರದರ್ಶಕ ಸುಮಂಗಲ ಪನವತ್ವಾತ್ ಸೂತ್ರಭಾಷ್ಯ ಶ್ರುತಿ ಮೂಲಗುರೂತ್ಥ (ಕ್ತ) ಗುಂಡಕ್ರಿಯಾದಿವತ್ ಇತಿ ಉಕ್ತಂ ಭವತಿ ॥ ಯಥಾಹುಃ ಆಚಾರ್ಯಾಃ ದಶಪ್ರಮತಿಶಾಸ್ತ್ರಸಜ್ಜಲಧಿತೋಽಮರಾಣಾಂ

ಹರೇಃ ಪ್ರವೇಶನ ಸುತಾರತಮ್ಯ ಜನಿಜಾತಿ ರತ್ನಾನಿ ಚ ॥ ವಿಪ್ರಾಗ್ರ್ಯ ವಿನಿಷ್ಕೃಷ್ಯ ಸಜ್ಜನಪರೀಕ್ಷಯಾ ವ್ಯಾಸರಾಟ್ ಪ್ರಶಿಷ್ಯ ಇತಿ ವಿಠ್ಠಲೋ ನುಪಮ ಸುಕಂಠಮಾಲಾಂ ವ್ಯಧಾತ್ ॥ ಇತಿ ॥ ೫೫-೫೬ ॥

## ಕನ್ನಡಾರ್ಥ

ಇಷ್ಟು ತಾರತಮ್ಯ ಸಾಲಿನಲ್ಲಿ ಬರುವ ದೇವತೆಗಳೆಂಬ ಸಂಗ್ರಹ ಜ್ಞಾನವಾಗಲು ಒಂದೊಂದು ದೇವತೆಯನ್ನು ಸಂಗ್ರಹಿಸಿ ಪದ್ಯಗಳನ್ನು ಶ್ರೀಮುಷ್ಣ ವಿಠಲಾಚಾರ್ಯರು ಕೊನೆಯಲ್ಲಿ ರಚಿಸಿರುತ್ತಾರೆ. ಅದರ ಅರ್ಥಗಳನ್ನು ತಿಳಿಸುವಂತೆ ಈ ಎರಡು ಪದ್ಯಗಳನ್ನು ಇಲ್ಲಿ ಹೇಳುತ್ತಾರೆ.

೧) ನಾರಾಯಣ. ೨) ಲಕ್ಷ್ಮೀ. ೩) ಬ್ರಹ್ಮ (ವಾಯು). ೪) ಸರಸ್ವತಿ (ಭಾರತಿ). ೫) ಗರುಡ (ಶೇಷ, ರುದ್ರ). ೬) ಉಮಾ. ೭) ಪ್ರಾಣ. ೮) ಕಾಮ (ಇಂದ್ರ). ೯) ಗುರು. ೧೦) ಪ್ರವಹ. ೧೧) ಸೂರ್ಯ. ೧೨) ವರುಣ. ೧೩) ನಾರದ. ೧೪) ಅಗ್ನಿ. ೧೫) ವಸಿಷ್ಠ ಮುಂತಾದವರು. ೧೬) ಮಿತ್ರ. ೧೭) ವಿಷ್ವೇಶ್ವರ. ೧೮) ಪೃಥು. ೧೯) ಗಂಗಾ. ೨೦) ಸ್ವಾಹಾ. ೨೧) ಬುಧ. ೨೨) ಉಷಾ. ೨೩) ಶನಿ. ೨೪) ಪುಷ್ಕರ. ೨೫) ಆಜಾನಜರು. ೨೬) ಕರ್ಮದೇವತೆಗಳು. ೨೭) ಪಿತೃಗಳು. ೨೮) ದೇವಗಂಧರ್ವರು. ೨೯) ಮನುಷ್ಯಗಂಧರ್ವರು. ೩೦) ಚಕ್ರವರ್ತಿಗಳು. ೩೧) ಮನುಷ್ಯೋತ್ತಮರು. ಈ ಪರ್ಯಂತವಾಗಿರುವ ಎಲ್ಲರೂ ನಮಗೆ ಗುರುಗಳು.

**ಮುಖ್ಯೋಚ್ಚಾ:**—ಮುಖ್ಯ=ಋಷಿಗಳು. 'ಉಚ್ಚಾಃ'=ದೇವತೆಗಳು.

ಅಧಮರಾದ ಮಾನುಷೋತ್ತಮರಲ್ಲಿಯೂ ಮೂರು ವಿಧಗಳೆಂದು ಏಕಾದಶ ಭಾಗವತ ತಾತ್ಪರ್ಯದಲ್ಲಿ ಹೇಳಲಾಗಿರುತ್ತದೆ.

ಕೈವಲ್ಯಮಾರ್ಗಸ್ಥರು ಎಂದರೆ ಮುಕ್ತಿಯೋಗ್ಯರು ಎಂದು ಅರ್ಥ.

ಕೆಲವೆಡೆಗಳಲ್ಲಿ **ಶ್ರೀಮದಾಚಾರ್ಯರ ವಚನಗಳಿಂದ** ಗರ್ಭಿತವಾಗಿದೆ. ಹಾಗೂ ಅಲ್ಲಿ ತೋರಿಸಿದ ದೃಷ್ಟಾಂತಗಳನ್ನು ತಿಳಿಸುವ

ಸುಮಂಗಲ **ಪದ್ಯಗಳನ್ನೂ ಒಳಗೊಂಡಿದೆ. ಆದುದರಿಂದ ಈ** ಹರಿ **ಕಥಾಮೃತಸಾರವು** ಶ್ರೀ ಮೂಲ ಗ್ರಂಥಾನುಗುಣವಾಗಿದೆ. ಇದರಲ್ಲಿ **ಭಾಷ್ಯ, ಶ್ರುತಿ ಮೂಲಕವಾಗಿರುವ** ಶ್ರೀ ವಾದಿರಾಜರ ಗುಂಡಕ್ರಿಯಾ ಮುಂತಾದವುಗಳೇ ದೃಷ್ಟಾಂತ.

ಈ ಯುಕ್ತಿಯಿಂದ ಹರಿಕಥಾಮೃತಸಾರವು **ಮೂಲ ಸಮ್ಮತವೆಂದು ಸಿದ್ಧವಾಗುತ್ತದೆ.**

ಶ್ರೀ ಆಚಾರ್ಯರು ಮಾತ್ರ—

"ಆನಂದತೀರ್ಥರ ಶಾಸ್ತ್ರಜಲಧಿಯಿಂದ, ಹರಿಯಿಂದ ಆರಂಭಿಸಿ, ದೇವತೆಗಳವರೆಗಿನ ತಾರತಮ್ಯಗಳೆಂಬ ರತ್ನಗಳನ್ನು ಹುಡುಕಿ, ಹೊರತೆಗೆದು ಅವುಗಳನ್ನು ಪೋಣಿಸಿ ಮಾಲೆಯನ್ನು ಮಾಡಿ, ಅದನ್ನು ಮುಖ್ಯಪ್ರಾಣ ಪತಿ ಹರಿಯ ಕೊರಳಿನಲ್ಲಿ ವ್ಯಾಸಪ್ರಶಿಷ್ಯರಾದ ವಿಠ್ಠಲಾಚಾರ್ಯರು ಅಲಂಕರಿಸಿರುತ್ತಾರೆ" ಎಂದು ಹೇಳಿರುತ್ತಾರೆ. ॥ ೫೫-೫೬ ॥

**ಅವತರಣಿಕಾ :**—ಬೃಹತ್ತಾರತಮ್ಯವನ್ನು ಪಠಿಸಿದ ಫಲಶ್ರುತಿಯನ್ನು ಹೇಳುತ್ತಾ, ಸಂಧಿಯ ಉಪಸಂಹಾರಗೈದು, ಬಿಂಬರೂಪಿಯಾದ ಶ್ರೀಜಗನ್ನಾಥವಿಠಲಗೆ ಅರ್ಪಿಸುತ್ತಾರೆ.

**ಸಾರ ಭಕ್ತಿ ಜ್ಞಾನದಿಂ ಬೃಹ- ।**
**ತ್ತಾರತಮ್ಯವನರಿತು ಪಠಿಸುವ ।**
**ಸೂರಿಗಳಿಗನುದಿನದಿ ಪುರುಷಾರ್ಥಗಳ ಪೂರೈಸಿ ॥**
**ಕಾರುಣಿಕ ಮರುತಾಂತರಾತ್ಮಕ ।**
**ಮಾರರಮಣ ಜಗನ್ನಾಥ ವಿಠ್ಠಲ ।**
**ತೋರಿಕೊಂಬನು ಹೃತ್ಕಮಲದೊಳು ಯೋಗ್ಯತೆಯನರಿತು ॥**
**॥ ೫೭ ॥**

ಅಂತು ಸಂಧಿ ೨೩, ಪದ್ಯ ೭೨೪ಕ್ಕೆ ಬೃಹತ್ತಾರತಮ್ಯಸಂಧಿ ಸಮಾಪ್ತ. ಮಂಗಳಮಾಹ

॥ ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :**—ಸಾರಭಕ್ತಿ ಜ್ಞಾನದಿಂ=ಸಾರ=ಈ ಶಾಸ್ತ್ರಾರ್ಥಸಾರ ರೂಪವಾದ ಬೃಹತ್ತಾರತಮ್ಯವನ್ನು ಅರಿತು ಚೆನ್ನಾಗಿ ಮನನಮಾಡಿ, ಜ್ಞಾನದಿಂ=ವಿಶೇಷವಾದ ಶಾಸ್ತ್ರಜ್ಞಾನದಿಂದಲೂ, ಜ್ಞಾನಕ್ಕೆ ತಕ್ಕ ಭಾವ, ಭಕ್ತಿ, ಪ್ರೀತಿ, ಆದರದಿಂದ, ಪಠಿಸುವ=ಪಾರಾಯಣ ಮಾಡುವ, ಸ್ತೋತ್ರ ಗೈಯ್ಯುವ ಸೂರಿಗಳನುದಿನದಿ ಪುರುಷಾರ್ಥಗಳ ಪೂರೈಸಿ=ಜ್ಞಾನಿಗಳಿಗೆ ನಿತ್ಯದಲ್ಲಿ ಚತುರ್ವಿಧ ಪುರುಷಾರ್ಥಗಳನ್ನು ಇದರಲ್ಲಿ ಮುಖ್ಯ ಪುರುಷಾರ್ಥ ಮೋಕ್ಷವನ್ನು ಕೊಡಲು ಅವರ ಸಾಧನಗಳನ್ನು ಪೂರೈಸಿ=ಪೂರ್ಣಮಾಡಿ, ಕಾರುಣಿಕ ಮರುತಾಂತರಾತ್ಮಕ=ಮಹಾ ಕರುಣಾಸಮುದ್ರನಾದ ಶ್ರೀ ಹರಿಯು ಸಾಧನ ಪೂರ್ತಿಗೊಂಡ ಭಕ್ತರನ್ನು ಏನಂ ಮೋಚಯಾಮಿ ಎಂಬ ಸುಪ್ರಸಾದವೇ ಕಾರುಣ್ಯ. ಇಂತಹ ಕರುಣಾಕರ, ವಾಯ್ವಂತ ರ್ಗತ, ಅಂತರಾತ್ಮ ಬಿಂಬರೂಪಿ ಹರಿಯು ಸಾಮಾನ್ಯನಲ್ಲವಯ್ಯಾ–ಮಾ ರಮಣ=ಲಕ್ಷ್ಮೀಲೋಲನು. ಜಗನ್ನಾಥವಿಠ್ಠಲ=ಜಗತ್ತಿಗೆ ಒಡೆಯನಾದ ಎನ್ನ ಬಿಂಬರೂಪಿ ಶ್ರೀಹರಿಯೇ ಆಯಾ ಭಕ್ತರ ಯೋಗ್ಯತೆಗಳನರಿತು= ಯೋಗ್ಯತೆಯಂತೆ ಅವರ ಹೃತ್ಕಮಲದೊಳು ಜೀವಾಂತರ್ಯಾಮಿ, ಜೀವನ ಸ್ವರೂಪ ಹೃದಯದಿ ಬಿಂಬನು. ತೋರಿಕೊಂಬುವನು=ಪ್ರತ್ಯಕ್ಷನಾಗಿ ಹೊಳೆಯುವನೆಂದು, ದಾಸರು ಭಕ್ತರ ಮೇಲೆ ಅನುಗ್ರಹಿಸಿರುವಂತೆ ಈ ಪಾಮರನನ್ನು ಉದ್ಧರಿಸಲು, ತಾವೇ ಎನ್ನಲ್ಲಿ ನಿಂದು ಅನಂತ ಶ್ರುತಿ, ಶಾಸ್ತ್ರ, ಪುರಾಣ ಸಂಹಿತೆಗಳ ಬೃಹತ್ತಾರತಮ್ಯಾರ್ಥವನ್ನು ಚೆನ್ನಾಗಿ ಬೋಧಿಸಿ ಬರೆಸಿರುವರು. ಎನ್ನ ಸ್ವಮತಿಯಲ್ಲ; ನಾನು ಬರೆದೆನೆಂಬ ಅಹಂಭಾವವಿಲ್ಲ. ದಾಸರೇ ಗತಿಪ್ರದರೆಂದು ಅವರಂತರ್ಯಾಮಿ ಮಧ್ವೇಶ ನಾದ ಶ್ರೀಕೃಷ್ಣಗೆ ಪದ್ಯಾರ್ಥವು ಅರ್ಪಿತವಾಗಿ ಸುಪ್ರಸನ್ನನಾಗಲಿ ಎಂದು ಪ್ರಾರ್ಥಿಸುವೆ.

**ಶ್ರೀ ಜಗನ್ನಾಥದಾಸಾರ್ಯರ ಬೃಹತ್ತಾರತಮ್ಯ ಪದ :—**

**ಫಲಶ್ರುತಿ**

ಪ್ರತಿ ದಿನಗಳಲ್ಲಿ ಸದ್ಭಕ್ತಿ ಪೂರ್ವಕ ತ್ರಿಸ. ।
ಸ್ತುತಿ ಪದಾತ್ಮಕ ಬೃಹತ್ತಾರತಮ್ಯ ॥

ಜಿತವಾಗಿ ಕಂಠ ಮಧ್ಯದಲಿ ಧರಿಸುವರ ಶಾ- ।
ಶ್ವತ ಕರುಣಿ ಸಂತೈಪ ಸರ್ವಕಾಲದಲಿ ॥ ೭೨ ॥

ಪುರುಷರೂಪನೆ ಕ್ಷರಾಕ್ಷರ ಪುರುಷ ಸಮ- ।
ಚರಣ ಪಂಕಜ ಚಾರು ಚರಿತ ಸ್ವರತಾ ।
ಕರುಣಾಕರೇಶ ಕಾಮಿತ ಕಲ್ಪತರು ಜನ್ಮ ।
ಮರಣ ವರ್ಜಿತ ಜಗನ್ನಾಥವಿಠಲರಾಯಗಾಸಮಿಪೆ ॥ ೭೩ ॥

॥ ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

**ಭಾವಸೂಚನ** :—ಉಪಸಂಪರತಿ ॥ ಸಾರೇತಿ ॥ ಇತಿ **ಭಾವ** ಸೂಚನೇ ಬೃಹತ್ತಾರತಮ್ಯ ಸಂಧಿಃ ಕೃಷ್ಣಾರ್ಪಣಮಸ್ತು ॥ ೫೭ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಉಪಸಂಹರತಿ 'ಸಾರ' ಇತಿ ॥ ೫೭ ॥

**ಕನ್ನಡಾರ್ಥ**

ಈ ಸಂಧಿಯನ್ನು ಫಲಶ್ರುತಿಯೊಂದಿಗೆ ಮುಗಿಯಿಸುತ್ತಾರೆ ॥ ೫೭ ॥



॥ ಶ್ರೀ ಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀ ವೆಂಕಟೇಶಃ ಪ್ರಸನ್ನಃ ॥
॥ ಶ್ರೀ ಗುರುರಾಜೋ ವಿಜಯತೇ ॥

# ೨೪ನೇ ಕಲ್ಪ ಸಾಧನ ಸಂಧಿ ( ಅಪರೋಕ್ಷ ತಾರತಮ್ಯ )

## ಸಂಧಿಯ ಸಾರ

ಹಿಂದೆ ೨೩ನೇ ಬೃಹತ್ತಾರತಮ್ಯ ಸಂಧಿಯಲ್ಲಿ ಸಕಲ ದೇವತೆಗಳ ಅಂಶ, ಆವೇಶ, ಅವತಾರ, ಕಾರ್ಯಗಳನ್ನು ನಿರೂಪಿಸಿ, ಈ ಸಂಧಿಯಲ್ಲಿ ಆಯಾ ದೇವತೆಗಳ ಸಾಧನ ಕಾಲ; ಆ ಸಾಧನ ಕಾಲಗಳಲ್ಲಿ ಅವರ ತಪಸ್ಸು, ವಿದ್ಯಾಭ್ಯಾಸ, ಶ್ರೋತ್ರಿಯನಿಯತ ಗುರುಗಳಿಂದ ಶ್ರವಣ-ಮನನಾದಿಗಳು, ನಿಧಿಧ್ಯಾಸನ, ಭಗವದುಪಾಸನೆ ಕಾಲ, ನಂತರ ಭಗವದ ಪರೋಕ್ಷ-ಬಿಂಬ ಅಪರೋಕ್ಷ ಕಾಲ ಪರಿಮಿತಿ, ಭಗವದ್ದರ್ಶನ ಪ್ರಮಾಣ, ಭಗವದ್ದರ್ಶನ ಕಾಂತಿ, ಪ್ರಕಾಶ, ಪರಿಮಿತಿ, ದೇಹಕಾಂತಿ, ವ್ಯಾಪ್ತಿ, ಉಪಾಸನ, ಲಕ್ಷಣಗಳು, ಅವರ ತಾರತಮ್ಯ ಅನುಸರಿಸಿ ಹೇಳಿದ್ದಾರೆ. ಪ್ರಾಣಾದಿ ನಾಲ್ವರು ಅಂಶ ಅವತಾರಾದಿಗಳಲ್ಲಿ ಅಸುರಾವೇಶ ರಹಿತರು, ಅಜ್ಞಾನಾದಿ ದೋಷದೂರರು. ಗರುಡಾದಿಗಳಿಂದ ಅವತಾರಾದಿ ಕಾಲದಲ್ಲಿ ಮಾನುಷ ದೇಹ ತೆತ್ತಿದ್ದಾಗ್ಗೆ, ಕಿಂಚಿತ್ ಅಸುರಾವೇಶ ಅಜ್ಞಾನಾದಿಗಳು ಉಂಟೆಂಬ ಅನೇಕ ಉಪನಿಷತ್ ಪ್ರಮೇಯವನ್ನು ವಿಶೇಷವಾಗಿ ಪ್ರಕಾಶ ಸಂಹಿತಾ, ಪ್ರಥಮ ಪರಿಚ್ಛೇದ, ಅಧ್ಯಾಯ ೧೦-೧೧ರಲ್ಲಿಯ ವಿವರಣೆಯಂತೆ ಶ್ರೀವಿಜಯದಾಸರ ತಾರತಮ್ಯ ಸುಳಾದಿ ೧೧-೧೨ರಲ್ಲಿಯ ವಿಷಯಗಳನ್ನೇ ಈ ಸಂಧಿಯಲ್ಲಿ ದಾಸರಾಯರು ವರ್ಣಿಸಿದ್ದಾರೆ. ಸ್ವಕಪೋಲ ಕಲ್ಪನೆಯಲ್ಲ. ಬ್ರಹ್ಮಾಂಡದಲ್ಲಿಯೂ ಈ ವಿವರವು ಬಂದಿದೆ.

೧. ಸಂಧಿಯ ಪ್ರಾರಂಭ ಮೊದಲನೇ ಪದ್ಯದಲ್ಲಿ ಸಾಧನ ಶ್ರೇಷ್ಠ ಜೀವಿಗಳೂ, ಆದಿಗುರುಗಳೂ,ಆದ ಶ್ರೀಮಧ್ವಾಚಾರ್ಯರ ಸ್ತೋತ್ರಮಾಡಿ

ದ್ದಾರೆ. ಗುರುಸ್ಮೃತಿಯು ಸರ್ವಸಮೃದ್ಧಿಯನ್ನು ಕೊಡುವುದು.

೨. ಬ್ರಹ್ಮಾದಿ ತೃಣಾಂತ ಜೀವರು ಮೋಕ್ಷಾಧಿಕಾರಿಗಳ ಸಾಧನ ಅಪರೋಕ್ಷಾನಂತರ ಲಿಂಗಭಂಗ, ಮೋಕ್ಷವಾಗುವ ವಿಚಾರ.

೩. ಮುಂದೆ ೩ನೇ ಪದ್ಯವಾರಂಭಿಸಿ (೩, ೪, ೫, ೬, ೭) ಐದು ಪದ್ಯಗಳಿಂದ ತೃಣಾದಿ ಮನುಜ ಗಂಧರ್ವರ ಪರಿಯಂತರ ಕರ್ಮಯೋಗಿಗಳ ಸಾಧನವನ್ನು ಒಂದು ಸಾವಿರ ಹದಿಮೂರು ಜನ್ಮ ಭಗವದುಪಾಸನೆ ವಿವರ ಪೇಳಿದ್ದಾರೆ. ಮುಂದೆ—

೪. ಪದ್ಯ (೮, ೯, ೧೦) ಈ ಮೂರು ಪದ್ಯಗಳಲ್ಲಿ ದೇವಗಂಧರ್ವರಾರಂಭಿಸಿ, ಚಿರಪಿತ್ರಾದಿಗಳು ಸಾಂಶಜೀವರು, ಜ್ಞಾನಯೋಗಿಗಳು, ಪುಷ್ಕರಾರಂಭಿಸಿ ಶನೈಶ್ಚರ, ಉಷಾ, ಸ್ವಾಹಾ, ಬುಧ, ಪರ್ಜನ್ಯ, ಸನಕಾದಿ ವ್ಯಾಪ್ತ ಋಷಿಗಳು, ವಿಜ್ಞಾನಯೋಗಿಗಳ ಸಾಧನ ವಿವರ ೧೦,೪೦೦ ಜನದಲ್ಲಿ ಭಗವದುಪಾಸನೆ ಕ್ರಮ ಹೇಳಿದ್ದಾರೆ.

೫. ಮುಂದೆ೧೧ನೇ ಪದ್ಯದಲ್ಲಿ ಬ್ರಹ್ಮದೇವರಾರಂಭಿಸಿ ಶತಸ್ಥದೇವತಾಗಣಾಂತ್ಯವಾಗಿ ತತ್ವಾಭಿಮಾನಿ ದೇವತೆಗಳು. ಸಾಂಶರು ಭಕ್ತಿಯೋಗಿಗಳು. ಅವರ ಲಕ್ಷಣ ಅನಾದಿಸಾಮಾನ್ಯ ಅಪರೋಕ್ಷ.ಈ ಭಕ್ತಿ ಯೋಗಿಗಳ ಮಧ್ಯದಲ್ಲಿ ಸದ್ಭಕ್ತಿವಿಜ್ಞಾನಾದಿಗುಣಗಳಿಂದ ಬ್ರಹ್ಮ, ವಾಯು, ಸರಸ್ವತೀ, ಭಾರತೀ ನಾಲ್ವರು ಉತ್ತಮೋತ್ತಮರೆಂದು ಹೇಳಿದ್ದಾರೆ.

೬. ೧೨-೧೩ನೇ ಪದ್ಯದಲ್ಲಿ ಬ್ರಹ್ಮಪದಕ್ಕೆ ಬರುವ ೨೦೦ ಋಜುಗಳ ಜ್ಞಾನ-ಭಕ್ತ್ಯಾದಿ ಲಕ್ಷಣ ವಿವರ ಇವರಲ್ಲಿ ತ್ರಿಗುಣಕಾರ್ಯಗಳಿಲ್ಲ ಸಾಧನೋತ್ತರ ಬಿಂಬೋಪಾಸನೆ ಅಧಿಕವಾಗಿ ಭಗವಸ್ಪರ್ಶನಲಾಭ ಋಜು ಜ್ಞಾನ ಮಾಹಾತ್ಮ್ಯ ಪೇಳಿದ್ದಾರೆ.

೭. ಪದ್ಯ ೧೪ರಲ್ಲಿ ಸುಪರ್ಣಾದಿ ದೇವತೆಗಳೆಲ್ಲ ಛಿನ್ನಭಕ್ತರು, ಅಚ್ಛಿನ್ನಭಕ್ತರು ಬ್ರಹ್ಮ, ವಾಯು, ವಾಣಿ, ಭಾರತೀ ನಾಲ್ವರೆನಿಪರು.

ಇವರು ಷಣ್ಣಗಣ್ಣ ಮೊದಲಾದವರಲ್ಲಿದ್ದು ಕಾರ್ಯಮಾಡುವರೆಂದು ಸ್ತೋತ್ರಗೈದಿದ್ದಾರೆ.

೮. ಮುಂದೆ ಪದ್ಯ ೧೫ರಲ್ಲಿ ಆರಂಭಿಸಿ, ಪದ್ಯ ೨೧ ಹೀಗೆ ೭ ಪದ್ಯಗಳಿಂದ ಶ್ರೀ ವಾಯುದೇವರು ಭಗವದಾಜ್ಞೆಯಿಂದ ಮಾಡುವ ಕಾರ್ಯ ಸಕಲಜೀವರಲ್ಲಿ ನಿಯಾಮಕರಾಗಿ ನಾನಾಬಗೆಯ ವಾಯುದೇವರ ವಿಚಿತ್ರ ವ್ಯಾಪಾರ ಮಹಿಮೆ ಬಣ್ಣಿಸಿದ್ದಾರೆ.

೯. ಮುಂದೆ ಪದ್ಯ ೨೨ರಲ್ಲಿ ಆರಂಭಿಸಿ ಪದ್ಯ ೩೦ರ ವರೆಗೆ (೯) ಪದ್ಯದಲ್ಲಿ ಋಜುಗುಣಸ್ಥರು. ಒಬ್ಬೊಬ್ಬರು ಕ್ರಮೇಣ ಒಂದುನೂರು ಕಲ್ಪ ಸಾಧನ ಮಾಡಿದನಂತರ ೧೦೧ನೇ ಕಲ್ಪದಿಂದ ಕಲ್ಕಿ ಎಂಬ ನಾಮದಿಂದ ಆರಂಭಿಸಿ ೨೦೦ನೇ ಬ್ರಹ್ಮಕಲ್ಪದಲ್ಲಿ ಬ್ರಹ್ಮ ಪದವಿಗೆ ಬರುವ ನೂರು ಋಜುಗಳ ನಾಮವನ್ನು ವಾಮನಪುರಾಣವಚನದಂತೆ ವಿವರಿಸಿ ಹೇಳಿದ್ದಾರೆ. ಈ ಋಜುಗಳ ಪರಮಪುಂಗಳ ನಾಮವನ್ನು ಪಠಿಸುವರಿಗೆ ಬಿಡದೇ ಮುಕ್ತಿ ಕೊಡುವನೆಂಬುದು ದೃಢವಾಗಿ ಪೇಳಿದ್ದಾರೆ.

೧೦. ಮುಂದೆ ಈ ಋಜುಪುಂಗವರಾದ ಬ್ರಹ್ಮ ವಾಯುದೇವರ ಮಾಹಾತ್ಮ್ಯ ಪದ್ಯ ೩೧ರಲ್ಲಿ ಆರಂಭಿಸಿ ೪೧ನೇ ಪದ್ಯದ ವರೆಗೆ ೧೧ಪದ್ಯಗಳಲ್ಲಿ ವಿಶದವಾಗಿ ಸಕಲಮುಕ್ತಿಯೋಗ್ಯರಿಗೆ ಮುಕ್ತಿಯನ್ನು ಕೊಡಿಸುವರೆಂದು ನಾನಾಪರಿ ವ್ಯಾಪಾರ ವಿಚಿತ್ರಮಾಹಾತ್ಮ್ಯವರ್ಣಿಸಿ ಋಜುಪುಂಗವರ ಸ್ತೋತ್ರ ಗೈದಿರುವರು. ಒಟ್ಟಿಗೆ ಋಜುಗಳಿಗೆ ಮೊದಲು ಒಂದು ನೂರು ಬ್ರಹ್ಮಕಲ್ಪ ಸಾಧನನಂತರ ವಿಶೇಷಾಪರೋಕ್ಷ ಬಿಂಬಪ್ರಕಾಶ ಹೆಚ್ಚುವಿಕೆ ಮುಂದೆ ೧೦೧ನೇ ಕಲ್ಪ ಆರಂಭಿಸಿ ಕಲ್ಕ್ಯಾದಿ ಪದದಲ್ಲಿ ಆಳುವಿಕೆ. ೨೦೦ನೇ ಬ್ರಹ್ಮಕಲ್ಪ. ಒಟ್ಟಿಗೆ ಋಜುಗಳಿಗೆ ೨೦೦ ಬ್ರಹ್ಮಕಲ್ಪಸಾಧನವೆಂದು ಧೃಢೀಕರಿಸಲು ಋಜುಗಳ ಮಾಹಾತ್ಮ್ಯ(೩೧) ಪದ್ಯದಲ್ಲಿ ವರ್ಣಿಸಿದ್ದಾರೆ.

೧೧. ಮುಂದೆ ೪೨ನೇ ಪದ್ಯದಲ್ಲಿ ರುದ್ರದೇವರ ಸಾಧನ ಪೇಳುತ್ತಾ ಈ ರುದ್ರದೇವರು ೯೯ನೇ ಬ್ರಹ್ಮಕಲ್ಪ ಸಾಧನಮಾಡಿ ೧೦೦ನೇ ಬ್ರಹ್ಮ ಕಲ್ಪಕ್ಕೆ ಶೇಷಪದವಿಯಿಂದ ಮುಕ್ತಿ ಐದುವ ವಿಚಾರ ಪೇಳುತ್ತಾರೆ.

೧೨. ಮುಂದೆ ೪೩ನೇ ಪದ್ಯದಲ್ಲಿ ಇಂದ್ರ, ಕಾಮರ ಸಾಧನ ವಿಚಾರ ವಿಶದೀಕರಿಸಿದ್ದಾರೆ. ಇವರಿಗೆ ೨೦+೨೦ ಒಟ್ಟಿಗೆ ೪೦ ಬ್ರಹ್ಮಕಲ್ಪಸಾಧನ.

೧೩. ಪದ್ಯ ೪೪ರಲ್ಲಿ ಸೂರ್ಯ-ಚಂದ್ರರುಗಳ ಸಾಧನ ವಿಚಾರ ವಿವರಿಸಿದ್ದಾರೆ.

೧೪. ಪದ್ಯ (೪೫, ೪೬, ೪೭) ಈ ಮೂರು ಪದ್ಯಗಳಲ್ಲಿ ಒಟ್ಟಿಗೆ ಹಿಂದೆ ಸಾಧನಗೈದ ಕಲ್ಪಾರ್ಧ ಸಂಖ್ಯೆ ಮುಂದೆ ಪ್ರಾರಬ್ಧ ಅನುಭೋಕ್ತವ್ಯ ಕಲ್ಪಸಂಖ್ಯೆ ಅರ್ಧ ವಿವರಿಸುತ್ತಾರೆ :—

೧) ಐದಲೆಗೆ ರುದ್ರಗೆ ೫೦+೫೦=೧೦೦ ಬ್ರಹ್ಮಕಲ್ಪ.
೨) ಇಂದ್ರ, ಕಾಮರಿಗೆ ೨೦+೨೦=೪೦ ಬ್ರಹ್ಮಕಲ್ಪ.
೩) ತ್ವಗಾಧಿಪತಿ ಆಹಂಕಾರಿಕ ಪ್ರಾಣಗೆ ೧೮+೧೮=೩೬ ಬ್ರಹ್ಮಕಲ್ಪ.
೪) ಗುರು, ಮನು, ದಕ್ಷ, ಶಚಿ, ರತಿ, ಅನಿರುದ್ಧಗೆ ೧೬+೧೬=೩೨ ಬ್ರಹ್ಮಕಲ್ಪ.
೫) ಪ್ರವಹ, ವಾಯುವಿಗೆ ೧೨+೧೨=೨೪ ಬ್ರಹ್ಮಕಲ್ಪ.
೬) ಚಂದ್ರ, ಸೂರ್ಯ, ಧರ್ಮಾದಿಗಳಿಗೆ ೧೦+೧೦=೨೦ ಬ್ರಹ್ಮಕಲ್ಪ.
೭) ವರುಣ, ನಾರದಾರಭ್ಯ ಮಿತ್ರನವರೆಗೆ ೯+೯=೧೮ ಬ್ರಹ್ಮಕಲ್ಪ.
೮) ಗಣೇಶ, ಕುಬೇರ, ವಿಷ್ವಕ್‌ಸೇನ, ಶೇಷ ಶತಸ್ಥರಿಗೆ ೮+೮=೧೬ ಬ್ರಹ್ಮಕಲ್ಪ.
೯) ಸನಕಾದಿ ವ್ಯಾಪ್ತಋಷಿಗಳು, ಚ್ಯವನ, ನಂದನಾದಿಗೆ ೭+೭=೧೪ ಬ್ರಹ್ಮಕಲ್ಪ.
೧೦) ವರುಣ, ಯುವತಿ, ಗಂಗಾದಿ ಪ್ರಾರಂಭಿಸಿ, ಪುಷ್ಕರನ ಪರಿಯಂತವಾಗಿ ತತ್ವಕಲಾಭಿಮಾನಿಗಳಿಗೆ ೬+೬=೧೨ ಬ್ರಹ್ಮಕಲ್ಪ.

೧೧) ಕರ್ಮಜದೇವತೆಗಳ್ಗನೇಕಕ್ಷದಲ್ಲಿ ೫+೫=೧೦ಬ್ರಹ್ಮಕಲ್ಪ.
೧೨) ಆಜಾನಜದೇವತೆಗಳಿಗೆ ೪+೪=೮ ಬ್ರಹ್ಮಕಲ್ಪ.
೧೩) ಗೋಪಿಕಾಸ್ತ್ರೀಯರಿಗೆ ೩॥+೩॥=೭ ಬ್ರಹ್ಮಕಲ್ಪ.
೧೪) ಚಿರಪಿತೃಗಳಿಗೆ, ಶತೋನಶತಕೋಟಿ ಋಷಿಗಳಿಗೆ ೩+೩=೬ ಬ್ರಹ್ಮಕಲ್ಪ.
೧೫) ದೇವಗಾಯಕರಿಗೆ ೨+೨=೪ ಬ್ರಹ್ಮಕಲ್ಪ.
೧೬) ಮನುಜಗಾಯಕರಿಗೆ ೧+೧=೨ ಬ್ರಹ್ಮಕಲ್ಪ.
೧೭) ನರಾಧಿಪರು, ಮನುಷ್ಯೋತ್ತಮರಾರಂಭಿಸಿ ಅರ್ಧ ಅರ್ಧ ಕಲ್ಪ ಇದರಲ್ಲಿಯೂ ತೃಣಾಂತರಿಗೆ ತಾರತಮ್ಯ ಉಂಟು. ಅರೆ ಪಾದಕಲ್ಪಗಳುಂಟು. ॥+॥=೧ ಬ್ರಹ್ಮಕಲ್ಪ.

ಇಂತು ೪೭ನೇ ಪದ್ಯದವರೆಗೆ ಗರುಡಾದಿತೃಣಾಂತ ಜೀವರ ಸಾಧನ ಕಲ್ಪಗಳನ್ನು ವಿಶದೀಕರಿಸಿದ್ದಾರೆ.

೧೫. ಪದ್ಯ ೪೮ರಲ್ಲಿ ದೀಪಗಳನನುಸರಿಸಿ ದೀಪ್ತಿಯು ವ್ಯಾಪಿಸುವಂತೆ ಶ್ರೀಹರಿಯು ತೃಣಾದಿ ಬ್ರಹ್ಮಾಂತರವರೆಗೆ ತಾ ಪೊಳೆವನೆಂದು ಅಪರೋಕ್ಷ ವಿಚಾರ ತಾರತಮ್ಯ ಹೇಳಿದ್ದಾರೆ. ಇಲ್ಲಿ ಪ್ರಕಾಶ ಸಂಹಿತೆ, ಜ್ಞಾನ ಕಾಂಡ, ಶ್ರೀ ವಿಜಯದಾಸರ ಸುಳಾದಿಗಳ ಗೂಢವಿಚಾರವನ್ನು ಒಂದೇ ಪದ್ಯದಲ್ಲಿ ದಾಸಾರ್ಯರು ಕ್ರೋಡೀಕರಿಸಿದ್ದಾರೆ. ಕಾರಣ-ಸಾಧನ ಜೀವಿಗಳು ಇದರ ವಿವರ ಅವಶ್ಯವಾಗಿ ತಿಳಿಯುತಕ್ಕದು. ಎಂದು ಬಿನ್ನೈಸಿ ವಿಸ್ತರಿಸುವ ಪ್ರಮಾಣಗಳನ್ನು ಇಲ್ಲಿ ಕ್ರೋಡೀಕರಿಸುತ್ತದೆ. ಕರ್ಮಯೋಗಿ ಜ್ಞಾನ, ವಿಜ್ಞಾನ ಯೋಗಿಗಳ ಸಾಧನ, ಜನ್ಮಗಳ ವಿಚಾರ, ಮೂಲಪದ್ಯದಡಿ ಅವರವರ ಸಾಧನಕಲ್ಪಗಳ ವಿಚಾರ ಕೊಡಲಾಗಿದೆ.

**ಇಲ್ಲಿ ಅಪರೋಕ್ಷ ತಾರತಮ್ಯದಲ್ಲಿ—**

೧. ಪ್ರಕಾಶಸಂಹಿತಾ ಪ್ರಥಮ ಪರಿಚ್ಛೇದ ೧೦ನೇ ಅಧ್ಯಾಯದಲ್ಲಿ
"ತೃಣಾದ್ಯಾಸ್ತು ಹೃದಿಸ್ಥಂ ತು ಪಶ್ಯಂತ್ಯಚಿತ್ರಜನ್ಮಭಿಃ ॥
ದೀಪಕಾಂತಿವಿಶಿಷ್ಟೇಶಂ ನ ದೇವಾನ್ನೈವ ಮರ್ತ್ಯಗಮ್ ॥

ಘಟಿಕಾರ್ಧಂ ಶರೀರೇ ವಾ ಮುಕ್ತ್ಯೈಃ ಶಕ್ತಿಸ್ತು ತಾದೃಶೀ ||
ಚಿನ್ಮಾತ್ರೋಪಾಸನಾಶಕ್ತಿಃ ನೈವಾಧಿಕಗುಣೋತ್ತರೇ ||
ತೇಷಾಮೀದೃಶ ಏವ ಸ್ಯಾದಪರೋಕ್ಷೋ ಹಿ ನಾಧಿಕಃ ||
**ರಾಮಕೃಷ್ಣಾದಿ ರೂಪಾಣಿ ಬಹಿಃ ಪಶ್ಯಂತ್ಯಪಿ ಕ್ವಚಿತ್ ||**
**ಮಾನುಷತ್ವೇನ ಪಶ್ಯಂತಿ ಅಪರೋಕ್ಷೋ ನ ಸಂಸ್ಮೃತಃ ||**
**ಸ್ಥೂಲಹೃದ್ಯಾಪರೋಕ್ಷಸ್ತು ಬಾಹ್ಯಸ್ಯಾದಪರೋಕ್ಷತಃ ||**
ಸ್ವಸ್ವರೂಪಸ್ಥಜೀವಾಭ ಸ್ವತಂತ್ರಸ್ಯ ಚ ದರ್ಶನಮ್ ||
**ಸ್ವರೂಪಾಖ್ಯೋಪರೋಕ್ಷಸ್ತು ಸರ್ವೇಷಾಮೇವ ಏವ ಹಿ ||**
ಪಾದೋನಘಟಿಕಾಮಾತ್ರಂ ಸ್ವರೂಪೇ ಪ್ರಾಕೃತೇ ಹೃದಿ ||
ಪಶ್ಯಂತಿ ಕ್ರಿಮಿಕೀಟಾದ್ಯಾ ಪ್ರದೀಪಪ್ರಭಯಾ ಹರಿಮ್ ||
ಸ್ವರೂಪಚಕ್ಷುಷಾ ದೃಷ್ಟಿರಪರೋಕ್ಷ ಇತೀರ್ಯತೇ ||

ಇತ್ಯಾದಿ ನೂರಾರು ಶ್ಲೋಕಗಳ ಪ್ರಮಾಣಾನುಸಾರ ಶ್ರೀ ವಿಜಯ ದಾಸಾರ್ಯರು, **ತಾರತಮ್ಯ ಸುಳಾದಿ ೧೨ ರೂಪಕ ತಾಳ**ದಲ್ಲಿ ಅಪರೋಕ್ಷ ತಾರತಮ್ಯ **ಭಗವದ್ದರ್ಶನ ಪ್ರಮಾಣ.**

೨. ಭಗವದ್ದರ್ಶನಲಾಭ ಕಾಲ ವಿವರ ಹೇಳುತ್ತಾರೆ. ಪ್ರಕಾಶ ಸಂಹಿತೆ ೧೦ನೇ ಅಧ್ಯಾಯದಂತೆ **ರೂಪಕ ತಾಳ,** ತಾರತಮ್ಯ ಸುಳಾದಿ, **ಪುಟ ೪೯.**"

೧. "ಭಗವದ್ದರ್ಶನ ಲಾಭ ತೃಣ **ಕ್ರಿಮಿ ಕೀಟಕಾ | ದಿಗಳ** ಕಾಲ ಪರಿಮಿತ **ಪಾದೋನಘಟಿಕಾ**ಯುಗಳ ದೃಷ್ಟಿಯಿಂದ ನೋಳ್ಪರು **ಪ್ರದೀಪದಿ** | ಬಗೆಯಾಗಿ **ಬದರಿ ಪ್ರಮಾಣದಂತೆ** ನಿತ್ಯಾ |

೨. ಮಗುಳೆ ವೃಕ್ಷಜೀವ **ಘಟಿಕಾ ಪರಿಮಿತ** ಪ | ನ್ನಗ ತಲ್ಪನ್ನ **ದಶದೀಪದುನ್ನ**ತ ಮನ | ತೆಗೆಯದಲೆ ಕಾಂಬುವರು ಅಂಗುಟ ಮಾತ್ರ **ಮಿತಿ** |

೩. **ಖಗ ಮೃಗ ಪಶು ಮಿಕ್ಕ** ಜೀವರಾಶಿಗಳು **ಘ | ಳಿಗೆ ಸಾರ್ಧಕಾಲ ನೂರು ದೀಪದ ಕಾಂತಿ.**

೪. ಏಗೆ **ಮಾನುಷೋತ್ತಮರು** ಚತುರ್ಗಣೋಪಾಸಕರು ಅಗಣಿತ ಮಹಿಮನ್ನ **ಮಿಂಚಿನೋಪಾದೆಯಲಿ** ಹೃದ್ । ಗಗನದಲಿ ನೋಡುವರು ತಮ್ಮ **ಎರಡು ಘಳಿಗೆ । ಸ್ವರೂಪಚಕ್ಷುಷಾ ದೃಷ್ಟಿರ ಪರೋಕ್ಷ ಇತೀರ್ಯತೇ** ॥

೫. ಪೊಗಳೇನು **ನೃಪರು, ದಶ ಮಿಂಚಿನಂತೆ, ಘ । ಳಿಗೆ ಮೂರು** ಪರಿಯಂತ ಬಿಂಬನ ನೀಕ್ಷಿಪರು ।

೬. ತಗಲಿ **ಮನುಜ ಗಂಧರ್ವ** ಜನ ನೋಡುವ । ಬಗೆ ಕೇಳು **ಇಪ್ಪತ್ತು ಮಿಂಚಿನಂದದಿ ಘ । ಳಿಗೆ ನಾಲ್ಕು** ಸಿದ್ಧವೋ ತಮ ತಮ ಸ್ಥೂಲ ಹೃ । ದ್ಗಗನದಲ್ಲಿದರೊಳು ತಾರತಮ್ಯಪ್ರಕಾಶ । ಯುಗ ಪೇಳುವ ದೇನು ಇವರ ಪರಿಯಂತ **ಕ । ಣ್ಣಿಗೆ ತೋರ್ಪ ಹರಿ ಮಂಟಪ ಸಹಿತ** ಇಲ್ಲದಲೆ । ಪಗೆದಲ್ಲಣ ನಮ್ಮ **ವಿಜಯವಿಠ್ಠಲರೇಯ** ಯುಗ ಯುಗದಲ್ಲಿ ಜ್ಞಾನ ವ್ಯಕ್ತಿ ಮಾಡಿಕೊಡುವ ॥ ೩ ॥

ಮುಂದೆ **ಝಂಪಿ ತಾಳದಲ್ಲಿ ಜ್ಞಾನಯೋಗಿಗಳ** ಅಪರೋಕ್ಷ ತಾರತಮ್ಯ ವಿಚಾರ ಹೇಳುತ್ತಾರೆ.

"ಸ್ನಾನಾದಿ ಸತ್ಕರ್ಮ ಪುಣ್ಯದಿ ಸದ್ಗತಿ ಬರಲು ನಿ । ಧಾನಿಸಿ ಸತ್ಕರ್ಮ ನೂರು ಜನ್ಮ । ತಾನು ಕೈಕೊಂಡು ಆಮೇಲೆ ಸಾವಿರ ಜನ್ಮ । ಮೇಣು ಧರಿಸಿ ಜ್ಞಾನವಂತನಾಹಾ । ಜ್ಞಾನ ಕರ್ಮದಿಂದ ಮುನ್ನೂರು ಜನ್ಮಕ್ಕೆ । ತ್ರಾಣನಾಗುವ ಸದ್ಭಕ್ತಿ ಪ್ರಾಪ್ತಿ । ಈ ನಿರಂತರ ಇನಿತು ಮಾಡ ಲಾಗಿ ಹರಿಯ ಕಾಣುವ ಉಪಾಯವಿದು **ಅಪರೋಕ್ಷವು** । ಹೀನ ವಾಗದೋ ನಿತ್ಯ ಅಭಿವ್ಯಕ್ತಿ ಹರಿರೂಪ ।

೧. **ಭಾನುಮಂಡಲ ಕಾಂತಿ** ಶೋಭಿಸುವದು । **ಮಾಣದಲೆ ಆರು ಘಳಿಗೆ ಕಾಲ ಪರಿಮಿತ** । ಮಾನಸವಲಿ ಹರಿಯ ಸೋಳ್ಪರಯ್ಯಾ । **ಸುಪರ್ಮಾಣ ಗಂಧರ್ವರಿಂ ಕರ್ಮದೇವ ತನಕಾ ।**

೨. ಕ್ಷೀಣವಿಲ್ಲದೆ **ಕೃಷ್ಣಾಂಗ ಸಂಗ ಗೋಪಿಯರು** । ಕಾಣುವರು **ಘಳಿಗೆಂಟು ಸಹಸ್ರ ಐದು** ಭಾನುಮಂಡಲದಂತೆ ಮತ್ತೆ ।

೩. **ಆಜಾನ ಕೃಶಾನು ಪುತ್ರರು** ಸೋಳ ಸಾವಿರ ಜನ । ಈ **ನಾಡಿ ಹತ್ತು ಪರಿಮಿತ ಅಯುತ ಮಂಡಲದಂತೆ ।** ನಾನಾ ಪ್ರಕಾರ ದಲಿ ನೋಡುವರು ।

೪. ಮೌನಿಗಳಲ್ಲದೆ **ದೇವತೆಗಳು** ಕೋಟಿ । **ಭಾನುಮಂಡಲ ದಂತೆ ಅರ್ಧ ದಿವಸ ಕಾಂಬುವರು** ಸಪ್ತದ್ವೀಪ ಸಹಿತ । ಧ್ಯಾನದಲ್ಲಿ ಕುಳಿತು ಭಕ್ತಿರಸದಿ । ಜ್ಞಾನಯೋಗಿಗಳು ದ್ವಿವಿಧ ಉಂಟು ಗುಣಿಸುವರು । ಗೌಣ ಅಧಿಕವಾಗಿ ಕ್ರಮ ವಿವರ । ಆನಂದ ಮೂರುತಿ ನಮ್ಮ **ವಿಜಯ ವಿಠ್ಠಲರೇಯ** ಪ್ರಾಣನಾಗಿ ತನ್ನ ಭಕುತರ ಪೊರೆವ ॥ ೪ ॥

## ಇನ್ನು ಭಕ್ತಿಯೋಗಿಗಳ ಅಪರೋಕ್ಷ ತಾರತಮ್ಯ

ತ್ರಿವಿಡಿ ತಾಳ, ಪುಟ ೫೧-೫೨ರಲ್ಲಿ ವಿವರಿಸಿದ್ದಾರೆ. "ಭಕುತಿ ಯೋಗಿಗಳಾಗಿವರ ಪುಷ್ಕರಾದ್ಯರು ತಾ । ತ್ವಿಕರೆಂದೆನಿಸುವರು ಈ ಕಾಲಕ್ಕೆ। ಪ್ರಕಟವಾಗಿಪ್ಪರು ಅವರವರ ತಕ್ಕದ್ದು । ಅಕಳಂಕರಹುದಯ್ಯಾ ರುದ್ರಗಣ ಪರಿಯಂತ । ತ್ವಕ್ ಅಭಿಮಾನಿ ಮೊದಲಾದವರು । ಉಕುತಿ ಲಾಲಿ ಸುವದು ಬಹು ಸ್ಥೂಲ । ಹೃತ್ಕರ್ಣಿಕೆಯಲ್ಲಿ ವಿಶೇಷ ದರ್ಶನ ಲಾಭ । ಶಕುತಿವಂತರು ಕಾಣೋ ಅಪರೋಕ್ಷ ಕಾಲಕ್ಕೆ । ತ್ರಿಕರಣ ಶುದ್ಧದಲಿ ತನು ತನು ಬಿಂಬಾ ಅ । **ಧಿಕವಾಗಿ ಕೋಟಿ ಆರಂಭಿಸಿ ವಾರಿಜ** । **ಸಖನಂತೆ** ನೋಳ್ಪರು **ದಿನಾಂತ ತನಕಾ** । ಅಖಿಳೇಶ್ವರನ ಕಾಂಬುವರು ತಾರತಮ್ಯ । ಭಕುತಿ ಮಾತುರದಿಂದ ವಿಶಿಷ್ಟವು । ಮುಖಮುಕ್ಕಾದ ಸತ್ಕರ್ಮಗಳು ಸಾ । ಪೇಕ್ಷ್ಯಮುಕರಾಗಿ ಮಾಡುವರು ನಿಜರೂಪದಿ । ಭಕುತಿಗೋಸುಗವಲ್ಲ ಅಪ್ರತಿ ಕಾಲಂಬರ । ಚಕ್ರಕರ ಕಾಣೋ ಇಲ್ಲಿ ದ್ವಿವಿಧವಕ್ಕೊ । ಮುಕ್ಕಳ ಮಾಣಿಕ್ಯ ರಂಗ ವಿಜಯವಿಠ್ಠಲರೇಯ । ಮುಕುತಿಯ ಪಾಲಿಸುವ ಪ್ರಸಾದ ತ್ರಯದಿಂದ ॥ ೫ ॥

**ಇನ್ನು ತೃಣಾದಿ ಜೀವರಾರಂಭಿ-ಭಗವದ್ದರ್ಶನ ಸ್ವಹೃದಯ ಆರಂಭಿಸಿ ಯಾವ ಯಾವ ಸ್ಥಾನಗಳಲ್ಲಿ ಸ್ವಬಿಂಬನನ್ನು ನೋಡುವ ರೆಂಬುದು ಪ್ರಕಾಶ ಸಂಹಿತೆ ಅಧ್ಯಾಯ ೧೦ರಲ್ಲಿ** "ಮತ್ಯೋರ್ಗೀಜ್ಞಾ ಹೃದಿ ದೇವಾಂಶ್ಚ ಪದಸ್ಥಾಃ ಪೀಠದೇವತಾಃ ॥ ತಥಾ ಆವರಣಗಾನ್ ದೇವಾನ್ ಪಶ್ಯತ್ಯಪಿ ಚ ಮಂಡಲಮ್ ॥ ಸುಷುಮ್ನಾ ಸಪ್ತ ಕಮಲಾಸ್ವಪಿ ತದ್ಧಹರೀಶ್ವರಾ ॥ ಸ್ಥಾನೇಶಂ ಚೈವ ಮೂಲೇಶಂ । ರಾಜಾನೋ ಮರ್ತ್ಯ ಗಾಯಕಾಃ ॥" ಇತ್ಯಾದಿ ಪ್ರಮಾಣಾನುಸಾರ ಶ್ರೀ ವಿಜಯದಾಸರ—

**ತಾರತಮ್ಯ ಸುಳಾದಿ ೧೧ ಆದಿತಾಳ ಪುಟ ೪೫-೪೬ರಲ್ಲಿ**

"ತೃಣ ಖಗ ಮೃಗಾದಿಗಳು ಹೃದಯದಲ್ಲಿ ನೋಳ್ಪರು । ಮನುಜೋತ್ತಮರು ಮಂಟಪ ಪೀಠಾವರಣಸ್ಥರ । ಮನದಲ್ಲಿ ನೋಳ್ಪರು ಇವರ ತರುವಾಯ॥ ಜನಪತಿ ಮರ್ತ್ಯ ಗಂಧರ್ವರು ಚೆನ್ನಾಗಿ । ತನುವಿನೊಳಗೆ ಸಪ್ತಸ್ಥಾನದಲ್ಲಿ ಸುಷು । ಮ್ನಾನಾಡಿ ತದ್ಗತ ಹರಿರೂಪಗಳು ಮೂಲೇ । ಶನ ಸಹ ಕಾಂಬುವರು ಈ ಮೇಲೆ ಆಜಾನಜರು । ಗುಣಿಸು ತ್ರಿನಾಡಿ ವಿಡಿದು ಸರ್ವದೇಹದಲ್ಲಿ ಶನಿಪುಷ್ಕರಾದಿ ವಿಡಿದು ಬೊಮ್ಮ ತದ್ಗತ ಹರಿಯ। ಇನಿತು ನೋಡುವರಯ್ಯಾ ಆತತ್ವನಾಯಕರು । ಮಿನುಗುವ ವಿರಾಟ ರೂಪನ ಸಮೇತ ನೀಕ್ಷಿಸುವರು । ನೆನೆನದು ಮುಂದೆ ಅಪ್ರತೀಕಾಲಂಬರು। ಘನವಾಗಿ ಕರ್ಮಪ ಇಂದ್ರ ಪರಿಯಂತ । ಮನಸ್ತತ್ವ ಕಡೆಮಾಡಿ ಮಿತಿ ಯಲ್ಲಿ ನೋಡುವರು । ವಿನುತ ನಂದನ ರುದ್ರ ಅಹಂಕಾರವಲಿ ಯೆನ್ನಿ । ಅನಿಲ ಪಿತಾಮಹ ತಮ ತಮ ತತ್ವದ ತನಕ । ಕ್ಷಣ ಬಿಡದೆ ನೋಡುವರು ನಿರ್ದೋಷವಂತರಾಗಿ । ಎಣಿಕೆ ಮಾಡೆಲೋ ಇವರು ವ್ಯಾಪ್ತದರ್ಶಿಗಳು । ಗಣನೆ ಇಲ್ಲದೆ ಹರಿಯ ಅನುಗ್ರಹಕ್ಕೆ ಪಾತ್ರರು । ಪ್ರಣತ ಜನ ಮಂದಾರ ವಿಜಯವಿಠ್ಠಲನ್ನ ಉಪಾ । ಸನೆ ಮಾಡಿ ನೋಡುವರು ಅಪರೋಕ್ಷಕಾಲಕ್ಕೆ ॥ ೫ ॥

**ಇದಕ್ಕೆ ಆಧಾರವಾಗಿ ಗುರುಪುರಂದರ ವಿ॥ ಸುಳಾದಿ**

ವರಲಕುಮಿಯೊಡೆಯನ ಗುಣಂಗಳನು ಇ । ವರು ಕಡೆಕಾಣದೆ

ಮೂರುತಿ ಇದ್ದು । ಸರಸಿಜೋದ್ಭವ ಮಹತತ್ವದಿ ಕುಳಿತ । ಪರಿಯಂತ ತನ್ನಭಿಮಾನ ಎಲ್ಲ್ಯುಳ್ಳ ಅಲ್ಲಿ ಬಲ್ಲ ಕೆಲವು ರೂಪಾ । ನಿರುತ ಅವ್ಯಾಕೃತ ದಲ್ಲಿ ವ್ಯಾಪ್ತವಾದುದಾ । ತಾರಾಮಂಡಲದಂತೆ ಕಾಂಬ। ಪಂಚಮುಖಾದಿ ದೇವತೆಗಳು । ಗರುಡಶೇಷರುಪ್ರ ತನ್ನಭಿಮಾನಯಲ್ಲ್ಯುಳ್ಳ ಅಲ್ಲಿ । ಪರಿಯಂತ ಬಲ್ಲರು ಕೆಲವು ರೂಪ । ತ್ವರ ಮಹತತ್ವದಲ್ಲಿ ವ್ಯಾಪ್ತವಾದುದಾ । ತಾರಾಮಂಡಲದಂತೆ ಕಾಂಬುವರು ಮತ್ತೆ ದೇವತೆಗಳು ತಮ್ಮ ।ಸ್ವರೂಪದಂತಿಪ್ಪರು ಅಳವಿಲಿ ಕೆಲವರು ನಖವ ಕಾಂಬುವರು ಈ । ಪರಿವ್ಯಾಪ್ತಿಗಳುಳ್ಳ ಮೂರುತಿಯಾಗಿಪ್ಪ । ಗುರುಪುರಂದರ ವಿಠಲನ ಮಹಿಮೆಗೆ ನಮೋ ನಮೋ ॥ ೨ ॥

### ಮುಂದೆ ರೂಪಕ ತಾಳದಲ್ಲಿ

ಸ್ಪಷ್ಟತ್ವದಲ್ಲಿ ಭೇದವುಳ್ಳಕಾರಣ। ಪರಿಮಾಣದೊಳು ಕಡಿಮೆಯುಳ್ಳ ಕಾರಣ ಒಬ್ಬರಿಂದೊ । ಬ್ಬರು ಉತ್ತಮರಾಗಿ ಸೇವಿಯು ನಿನ್ನ । ಚರಣ ಕಮಲವ । ಗುರುಪುರಂದರ ವಿಠಲನ ತವೊ್ರಳು ತಾವು ಕಾಂಬುವರು ॥ ೩ ॥ ಎಂದು ಪೇಳಿದ್ದಾರೆ.

ಇನ್ನು ತೃಣಾದಿ ಬ್ರಹ್ಮಾಂತ ಜೀವರ ಸ್ವರೂಪ ವ್ಯಾಪ್ತಿ ತಾರತಮ್ಯ, ಪ್ರಕಾಶ ಸಂಹಿತೆ, ೧೦ನೇ ಅಧ್ಯಾಯದಲ್ಲಿ ಪೇಳಿದ್ದಾರೆ :—

"ತ್ಯಕ್ತಲಿಂಗಸ್ಯ ಮುಕ್ತಸ್ಯ ತೃಣಾದಿಕೀಟಕಸ್ಯ ಚ । ಸ್ವರೂಪ ದೇಹಂ ತೇ ಸರ್ವೇ ದಶಯೋಜನ ಸಂತತಮ್ ॥ ವೃಕ್ಷಾದೀನಾಂ ವೃಗಾದೀನಾಂ ತತೋ ದ್ವಿಗುಣ ರುಗ್ಭವೇತ್ ॥ ವಿಮುಕ್ತಾನಾಂ ತು ಮರ್ತ್ಯಾನಾಂ ಶೂದ್ರಾದೀನಾಂ ತತಃ ಪರಮ್ ॥ ಏಕ ದ್ವಿ ತ್ರಿ ಚತುಷ್ಪಾದಾಧಿಕ ರುಕ್ ಸಂತತಾ ಸದಾ॥ ರಾಜನ್ಯಮರ್ತ್ಯಗಂಧರ್ವಾಃ ತತೋ ದ್ವಿತ್ರ್ಯಧಿಕ ಪ್ರಭಾಃ ॥ ಪರಿತೋ ಮೇರುತುಲ್ಯಾಶ್ಚ ತ್ರಿಡ್ದೇವಗಂಧರ್ವ ಸಂತತೇಃ ॥ ಚಿರಾಂತಾಃ ಪಿತರೋ ಮುಕ್ತಾ ಭೂಲೋಕಾಂತರಕಾಂತಯಃ। ಗೋಪ್ಯಃ ಕೃಷ್ಣಾಂಘ್ರಿಸಂಗಾಹಾರಾಃ ಊಪ ಸಂತತಿ ದೀಪ್ತಯಃ ॥ ಆಜಾನಜಾಸ್ತತ್ತ್ವ ಮಾಷ್ಟ ಸ್ವಗಾರ್ಗಂತಾಃ ತತ್ಪ್ರಕಾಶಿನಃ ॥ ಯಸ್ಯ ಯಸ್ಯ ಚ ಜೀವಸ್ಯ

**ಪ್ರಕಾಶೋ ಯತ್ರ ಚೇರಿತಃ ॥ ಯಾದೃಗ್ ಜ್ಯೋತಿಸ್ತಾವದಂತಂ ವಿಷ್ಣುಂ ಪಶ್ಯತಿ ಚಕ್ಷುಷಾ** ॥ ಸ್ವರೂಪಕೇಣ ಬಾಹ್ಯೇನ ನೈವ ಪಶ್ಯಂತಿ ಚೇಶ್ವರಮ್ ॥ ದೇವಾದ್ಯೈಹಿಃ ದೃಷ್ಟಿಗತೋ ಭಾತಿ ಮತ್ರ್ಯೋರ್ಚ್ಛವಪುಃ॥ ನ ಸಚ್ಚಿದಾನಂದತನುಃ ಬಾಹ್ಯದೃಗ್ಗೋಚರೋ ಭವೇತ್ ॥ ಪೃಷ್ಠ್ಯೋಪಾಸ್ಯ ವಿಮುಚ್ಯಂತೇ ಕರ್ಮದೇವಾ ವಿರಾಟ್ತನುಮ್।ಪಶ್ಯಂತಿ ನೈವೋಪಾಸ್ಯಂತಿ ಬ್ರಹ್ಮಾಂಡೇ ವ್ಯಾಪ್ತಮೀಶ್ವರಮ್ ॥ ಪುಷ್ಕರಾದ್ಯಾಸ್ತು ಶಕ್ರಾಂತಾಃ ಪೂರ್ವೋಕ್ತಾಖಿಲರೂಪಿಣಮ್ ॥ ಅಂಡಾದ್ಯೈಹಿಃ ಪೃಥಿವ್ಯಾದಿ ಮನಸ್ತತ್ವಾದಿಸಂತತಮ್ । ದೃಷ್ಟ್ವೈವ ಧ್ಯಾತ್ವೋಪಾಸ್ಯ ಸರ್ವೇ ಮುಕ್ತಿಂ ಯಾಸ್ಯಂತಿ ಕಾಲತಃ ॥ ಅಹಂಕಾರಗತಂ ದ್ರಷ್ಟುಮೀಶಾನೋಪಾಸನೇ ಕ್ಷಮಃ ॥ ಪುಷ್ಕರಾದ್ಯಾ ಮಹೇಂದ್ರಾಂತಾಃ ಕ್ರಮಾದಧಿಕಕಾಂತಯಃ ॥ ಕೋಟ್ಯರ್ಬುದಾರ್ಕಭಂ ದೇವಂ ವಾಮದೇವಾದಯೋ ಹರಿಮ್ । ಉಪಾಸ್ಯಾಹಂಕಾರತತ್ವ ವ್ಯಾಪ್ತಸತ್ತನುಮೀಶ್ವರಮ್ ॥ ಮುಚ್ಯಂತೇ ಚ ಮಹತ್ತತ್ವೇ ತಮಸ್ಯಪಿ ತತಂ ಹರಿಮ್ ॥ ಪಶ್ಯಂತಿ ವಾರುಣೀಪೂರ್ವಾ ನೈಷ್ಯಂತಿ ತಮಸಿ ಸ್ಥಿತಂ ॥ ಅನಂತಾರ್ಕಮುಚಾ ಸತ್ವಾವೃತಂ ತಂ ವ್ಯಾಪ್ತಮವ್ಯಯಮ್ ॥ ಉಪಾಸ್ಯ ಗೋ(ಗೀ)ರ್ಮುಕ್ತಿಮೇತ್ಯ ತತೋಽಪ್ಯಧಿಕರುಕ್ ತತಃ ॥ ವಾಸುದೇವಾರಣಿಗಂ ಚ ಬ್ರಹ್ಮಾ ಪಶ್ಯತಿ ನೇತರಃ ॥ ಇತ್ಯಾದಿ ಪ್ರಮಾಣಗಳಂತೆ.

**ಶ್ರೀ ವಿಜಯದಾಸಾರ್ಯರು ತಾರತಮ್ಯ** ಸುಳಾದಿ ೧೩, ಅಟ್ಟ ತಾಳೆ, ಪುಟ ೫೧-೫೨ರಲ್ಲಿ ತೃಣಾದಿ **ಮುಕ್ತಜೀವರ ದೇಹಕಾಂತಿ ವ್ಯಾಪ್ತಿ ಹೇಳುತ್ತಾರೆ**—

ದಶಯೋಜನ ವ್ಯಾಪ್ತಿ ತೃಣ ಕೀಟಕಾದಿ ದ್ವಿ । ದಶ ಯೋಜನ ವ್ಯಾಪ್ತಿ ಪಕ್ಷಿ ಮೃಗಾದಿಗೆ । ಎಸೆವ ಮನುಜರಿಗೆ ಮಂಡಲ ಪರಿಯಂತ । ವಸುಮತೀಶ್ವರರಿಗೆ ಎಂಭತ್ತು ಯೋಜನ । ಮಿಸಕದೆ ಮರ್ತ್ಯ ಗಂಧರ್ವ ಜನಕೆ ಎ । ಣಿಸುವದು ಇನ್ನೂರು ನಾಲ್ವತ್ತು ಯೋಜನ । ಪ್ರತಿಯುಕ್ತ ನಿರ್ಜರ ಗಂಧರ್ವರಿಗೆ ಮೇರು । ಪೆಸರಾದ ಚಿತ್ರಪಿತೃರಿಗೆ ಭುವರ್ಲೋಕ ।

ವಸತಿ ಅಂತ್ಯ ಭಾಗ ಕೃಷ್ಣಾಂಗ ಸಂಗ ಸಂಚ। ರಿಸಿದ ಗೋಪೇರಿಗೆ ಉಪಸ್ವರ್ಗವಿತಿ ತ। ತ್ ಸಮಾನ ಆಜಾನರಿಗೆ ಸ್ವರ್ಗಾಂತ್ಯವೊ ಸಂ। ತಸವಾಗಿ ಯೋಗ್ಯತಾ ಕ್ರಮಾತು। ಪಿಸುಣಿಪ ವಿರಾಟ ವಿಗ್ರಹ ದರ್ಶನ ರಾ। ಜಿಸುವರು ಕರ್ಮದೇವತೆಗಳು ನಿರಂತರ। ಪೆಸರುಂಟು ಇಲ್ಲಿ ಪರಿಯಂತ ಸಾಂಶಾ। ಹೆಸರು ಕೇಳಿ ದೇವದಾಸರು ಯೆಂದು ಚೆನ್ನಾಗಿ। ದಶ ಯೋಜನದಿಂದ ಕರ್ಮದೇವರ ನೋಡೆ। ಹಸನಾದ ವಿಗ್ರಹ ಪೂಜಾಧಿಕಾರರು।

## ಪುಷ್ಕರಾರಂಭಿಸಿ ಮುಂದೆ

ಬೆಸಸುವೆ ಪುಷ್ಕರಾದ್ಯ ಶಕ್ರಾಂತವೊ। ಬಿಸಿಜ ಭವಾಂಡ ಬಹಿ ಪೃಥಿವಿಯಿಂದ। ವಶವಲ್ಲ ಮಾನಸ ತತ್ವಾಂತ ಸಂತತ ನೀಕ್ಷಿಸಿ ಧೇ। ನಿಸಿ ಉಪಾಸನೆಯ ಮಾಡುವರು ಕುಸುಮನಾಭನ ಅನುಗ್ರಹಕೆ ಪಾತ್ರರು। ಕುಶಲವಂತರೆಸರಿನೋಳ್ಪರಲ್ಲಿ ತಾರತಮ್ಯ।

**ಬಿಸಿಗಣ್ಣ ಮಹದೇವ** ಅಹಂಕಾರ ತತ್ವ ವ್ಯಾ। ಪಿಸಿಕೊಂಡು ನೋಡುವ ಸಮಸ್ತ ಬಗೆಯಿಂದ। ದಿಶ ಸಪ್ತದ್ವೀಪ ವನಧಿ ಪರ್ವತ ಮೃಗ। ವಸುಮತಿರುಹ ವಾರಿಚರ ಸರ್ವಜೀವಾದಿ। ಶಶಿ ಸೂರ್ಯ ಭುವರ್ಲೋಕ ಸ್ವರ್ಗ ಉಳಿದವೆಲ್ಲ। ಎಸಳು ಸ್ಥೂಲ ಸೂಕ್ಷ್ಮ ಸರ್ವ ವಿಷಯಾಕರಿಸಿ। ನಿಶಿಹಗಲೆನ್ನದೆ ಸಕಲ ಕಾಲದರ್ಶಿಗಳಾಗಿ। ತ್ರಸರೇಣು ಮೊದಲಾದ ಅಣು ಮಹತ್ತಿನಲ್ಲಿ। ಬಿಸಿಜಾಕ್ಷನ ನೋಳ್ಪರು ಅನಂತ ಬಗೆ। ಶಶಿ ವರ್ಣಕಾಯ ಶ್ರೀ ವಿಜಯವಿಠ್ಠಲ ಸುಮ। ನಸರಿಂದ ಸೇವ್ಯಮಾನನು ಕಾಣೋ ಸರ್ವದ॥ ೬ ॥

ಇನಿತು ತೃಣಾದಿ ಬ್ರಹ್ಮ ಪರಿಯಂತ ದೇಹಕಾಂತಿ, ವ್ಯಾಪ್ತಿ ಭಗವದುಪಾಸನೆಯ ಕ್ರಮವನ್ನು ವಿಸ್ತಾರವಾಗಿ ಹೇಳಿ, ಮುಂದೆ—

## ಬ್ರಹ್ಮದೇವರಾರಂಭಿಸಿ ದೇಹಕಾಂತಿ ಲಕ್ಷಣಗಳ ವಿವರ

ಪ್ರಕಾಶ ಸಂಹಿತಾ, ಪ್ರಥಮ ಪರಿಚ್ಛೇದ, ಅಧ್ಯಾಯ ೧೧, ಆದಿ

ಭಾಗದಲ್ಲಿ ಸುಲಕ್ಷಣ ಶಂಖ ಚಕ್ರಾದಿ ಧ್ವಜಾದಿ ರೇಖೆಗಳನ್ನು ಹೇಳುತ್ತ ಮತ್ತು ೩೨ ಲಕ್ಷಣಗಳನ್ನು ಹೇಳುತ್ತಾರೆ.

"ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧ ಪರಿಮಂಡಲಃ ॥ ಸಪ್ತಪಾದ ಚತುರ್ದಸ್ತಃ ದ್ವಾತ್ರಿಂಶೈಃ ಲಕ್ಷಣೈರ್ಯುತಃ । ಶರೀರಾಂಗೇಷು ಸಾಧೂನಾಂ ಪಂಚಸ್ಥಾನೇಷು ದೀರ್ಘತಾ । ಹ್ರಸ್ವತ್ವಂ ಪಂಚಸು ತಥಾ ಸಪ್ತಸ್ಥಾನೇಷು ರಕ್ತಿಮಾ । ಷಡೌನ್ನತ್ಯಂ ಯಸ್ಯ ಸಮ್ಯಕ್ ಪೃಥುತಾ ಯಸ್ಯ ಸಮ್ಯಕ್ । ಗಂಭೀರತಾ ಚ ಲಘುತಾ । ತ್ರಿಷು ಸ್ಥಾನೇಷು ಭಾವೈ ॥ ಸುಲಕ್ಷಣಸ್ತು ಸಂಪನ್ನಃ ಸ ತು ಜ್ಞಾನಪ್ರದೋ ಗುರುಃ ॥ ಮತ್ರ್ಯೋತ್ತಮಮಾರಭ್ಯ ಕ್ರಮೇಣೈಕೈಕಶೋ । ವೃದ್ಧ್ಯಾ ಸಪಿ ಸಲ್ಲಕ್ಷಣಾನಿ ಚ ॥ ಸರ್ವಾಣಿ ಪರಿಪೂರ್ಣಾನಿ ಲಕ್ಷಣಾನಿ ವಿಧೇರಯೋಃ । ಶರೀರೇ ಚ ಸ್ವರೂಪೇ ಚ ಸರ್ವಸತ್ವಾಧಿನಾದ್ಯಲಮ್ । ಅಭಿವ್ಯಕ್ತಾನಿ ಚೋಚ್ಚೇಷು ಅವ್ಯಕ್ತಾನೀತರೇಷು ಚ ॥"

ಇತ್ಯಾದಿ ಪ್ರಮಾಣಗಳಂತೆ ಅಪರೋಕ್ಷಜ್ಞಾನಿಗಳಾದ ಶ್ರೀಪ್ರಾಣೇಶ ವಿಠಲದಾಸಾರ್ಯರು ಒಂದು ಪದದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ.

ಪದ ರಾಗ—ಕಾಂಬೋದಿ, ಝಂಪಿತಾಳ.

ಶ್ರೀ ವಾಯುದೇವರಿಗೆ ನೀತವಾದ । ಮೂವತ್ತೆರಡು ।
ಸುಲಕ್ಷಣಗಳ ವರ್ಣಿಸುವೆ ॥ ಪ. ॥

೧. ತಾಲು, ಜಾನುಗಳು, ಸ್ತನ ತುದಿಯು, ನಾಸಿಕ, ಚಕ್ಷು, ನಾಲ್ಕೊಂದು(೫) ದೀರ್ಘ । ೫

೨. ಜಂಘೆ, ಗ್ರೀವ, ಲಿಂಗ, ಪೃಷ್ಠ, ನಾಲ್ಕು ಹ್ರಸ್ವಾ । ೪

೩. ಕೇಶ, ರದ, ಮೇಲಾದ ತ್ವಕು, ಬೆರಳು, ನಖ—ಪಂಚ ಸೂಕ್ಷ್ಮ ॥ ೧ ॥ ೫

೪. ಕಕ್ಷ, ಕುಕ್ಷಿಯು, ವಕ್ಷ, ಕರ್ಣ, ನಖ, ಸ್ಕಂಧಾರು— ರಕ್ಷಘ್ನನಿಗೆ ಶೋಭಿಸುವ ಉನ್ನತ । ೬

೫. ಅಕ್ಷಿ, ಚರಣ, ಕರ, ನಖ, ಅಧರ, ಜಿಹ್ವೋಷ್ಠಜಿಹ್ವೋ, ನೋಕ್ಷದನ—ಈ ಏಳು ಅವಯವವು ರಕ್ತ ॥ ೨ ॥ ೭

೬. ಸತ್ವ, ನಾಭಿಯು, ಸ್ವರವು—ಈ ಮೂರು ಗಂಭೀರ । ೩

೭. ಉತ್ತಮ ಲಲಾಟ, ಉರ—ದ್ವಯ ವಿಸ್ತರಾ । ೨

೩೨

ಸತ್ಯಸಂಕಲ್ಪ ಶ್ರೀ ಪ್ರಾಣೇಶ ವಿಠ್ಠಲನ । ಭೃತ್ಯೋತ್ತಮಗೆ ಶಕ್ಯವಿವು ಆರಿಗಿಲ್ಲ ॥ ೩ ॥

ಮೇಲೆ ೩೨ ಸಲ್ಲಕ್ಷಣಗಳು ಸಾಧನಕೋಟಿ ವಿಶಿಷ್ಟರಾದ ಬ್ರಹ್ಮಾದಿ ತೃಣಾಂತ ಜೀವರಿಗೆ ಕ್ರಮೇಣ ಲಕ್ಷಣಗಳು ಕಡಿಮೆ ಎಂದು ತಿಳಿಯಬೇಕು. ಇನ್ನು ೩೨ ಲಕ್ಷಣಗಳು ಶ್ರೀದೇವರಿಗೂ, ಲಕ್ಷ್ಮೀದೇವಿಯರಿಗೂ ಉಂಟು. ಬ್ರಹ್ಮವಾಯುಗಳ ಲಕ್ಷಣ ಸಾಮ್ಯ ಬಂದೀತು. ಈ ಶಂಕಾ ಸರಿಯಲ್ಲ. ಒಂದೊಂದು ಸಲ್ಲಕ್ಷಣ ಶ್ರೀಹರಿ-ಲಕ್ಷ್ಮೀದೇವಿಯರಲ್ಲಿ ಅಂತವಿಲ್ಲದೇ ಅನಂತ ಲಕ್ಷಣಗಳಿಂದ ಪೂರ್ಣವಾಗಿವೆ ಎಂದು ಜ್ಞಾನಕಾಂಡ, ಅಧ್ಯಾಯ-೨೩, ಶ್ಲೋಕ-೧೭ ರಿಂದ ೨೦ ರವರೆಗೆ ೪ ಶ್ಲೋಕಗಳಿಂದ ಶ್ರೀಕೃಷ್ಣನು ಗರುಡನಿಗೆ ಹೇಳಿದ್ದಾನೆ.

"ಏಕೈಕ ಲಕ್ಷಣಸ್ಯ ಹರೇಶ್ಚ ಲಕ್ಷ್ಮ್ಯಾಃ ಹ್ಯಂತಂ ನೈವ ಸಮ್ಯಗವಾಪ। ಅತೋಽನಂತೈರ್ಲಕ್ಷಣೈಃ ಸಂಯುತೇತಿ ಹರಿಂ ಚಾಹುಃ ಲಕ್ಷಣಜ್ಞಾಃ ಖಗೇಂದ್ರ ॥ ೧೭ ॥ ಜಾನಾತಿ ಲಕ್ಷ್ಮೀ ಲಕ್ಷಣಂ ವಾಯುದೇವಃ । ಸ್ವಾಪೇಕ್ಷಯಾ ಅತಿರಿಕ್ತಂ ಖಗೇಂದ್ರ ॥ ಸ್ವಲಕ್ಷಣಾಪೇಕ್ಷಯಾ ಚೈವ ವಾಯುಃ ಲಕ್ಷ್ಮ್ಯಾಃ ಲಕ್ಷಣಂ ಕೋಟಿಶತಾಧಿಕಂ ಚ ॥ ೧೮ ॥ ಲಕ್ಷಣಾಪೇಕ್ಷಯಾ ಭಾರತೀ ತು ವಿಧೇರ್ಲಕ್ಷಣಂ ಶತಗುಣೈಶ್ಚಾಧಿಕಂ ಚ ॥ ಅತೋ ವೀಂದ್ರ ಲಕ್ಷಣೇ ಸಾಮ್ಯಚಿಂತಾಂ ವಿಷ್ಣ್ವಾದೀನಾಂ ಮಾ ಕುರುಷ್ವ ॥ ೧೯ ॥ ಸುಲಕ್ಷಣಾ ಹ್ಯನಂತಾಃ ಸ್ಯುರ್ಮಯಿ ಸಂತಿ ಖಗಾಧಿಪ ॥ ದ್ವಾತ್ರಿಂಶಲ್ಲಕ್ಷಣೋ ವಿಷ್ಣುಃ ಬ್ರಹ್ಮಣೋಽಪೇಕ್ಷಯೈವ ತು ॥ ೨೦ ॥

ಅಂತೂ ಹೇಗೆ ಗುಣ ತಾರತಮ್ಯವೋ ಹಾಗೆಯೇ ಲಕ್ಷಣ ತಾರತಮ್ಯ ದೇವರಿಂದ ಅನಂತ ಲಕ್ಷಣ ಕಡಿಮೆ ಶ್ರೀಲಕ್ಷ್ಮಿಗೆ. ಶ್ರೀಲಕ್ಷ್ಮಿಯಿಂದ ಕೋಟಿ ಲಕ್ಷಣ ಬ್ರಹ್ಮವಾಯು ಕಡಿಮೆ ಎಂದು ತಿಳಿಯುವುದು.

ಈ ಲಕ್ಷಣವಿಚಾರವನ್ನು ಗಾರುಡ ಬ್ರಹ್ಮಕಾಂಡ, ಅಧ್ಯಾಯ-೨೩ ಶ್ಲೋಕ-೧ ರಿಂದ ೩೨ ಸಲ್ಲಕ್ಷಣವಾರಂಭಿಸಿ, ಮನುಷ್ಯೋತ್ತಮರವರೆಗೆ ಇರುವ ನಾಲ್ಕು ಸಲ್ಲಕ್ಷಣಗಳ ವಿಚಾರ ೪೭ನೇ ಶ್ಲೋಕದವರೆಗೆ ಹೇಳಿದ್ದಾರೆ. ಗ್ರಂಥವಿಸ್ತಾರ ಭಯದಿಂದ ಇಲ್ಲಿ ಆ ಪ್ರಮಾಣಗಳನ್ನು ಕೊಟ್ಟಿಲ್ಲ. ಮುಂದೆ **ಗುಣಾದಿ ಎಲ್ಲ ತಾರತಮ್ಯ ಕೋಷ್ಟಕವನ್ನು ಕೊಟ್ಟಿದೆ.** ನೋಡಿ ಮನನಮಾಡುವುದೆಂದು ವಿನಂತಿ. ಬ್ರಹ್ಮಕಾಂಡದಲ್ಲಿ ದುರ್ಲಕ್ಷಣವಲ್ಲದ ಸಲ್ಲಕ್ಷಣ ವಿಚಾರ ವಿಸ್ತಾರ ಹೇಳಿ, ವಾಯುದೇವರಿಂದ ಕ್ರಮಾತ್ ಕಡಿಮೆ ಲಕ್ಷಣಗಳ ಸಂಖ್ಯಾ ಮಾತ್ರ ಹೇಳಿದ್ದಾರೆ. ಯಾವ ಯಾವ ಲಕ್ಷಣ ರುದ್ರಾದಿಗಳಲ್ಲಿ ಕೊರತೆ ಎಂಬುವುದು ಕೆಲ ಮಟ್ಟಿಗೆ ಹೇಳಿದ್ದಾರೆ. ಸದ್ಗುರುಗಳಿಂದ ತಿಳಿಯುವುದು.

## ಗುಣೋಪಾಸನೆ ವಿಚಾರ

"ಸಚ್ಚಿದಾನಂದ ಆತ್ಮ ಚತುರ್ಗುಣ ಮೊದಲು ಮಾಡಿ ಅನಂತ ಗುಣೋಪಾಸನೆಯನ್ನು ಬ್ರಹ್ಮಪರಿಯಂತವಾಗಿ ಹೇಳಿದ್ದಾರೆ. ಈ ಗುಣಗಳ ವಿಚಾರ ಜ್ಞಾನಿಗಳಿಂದ ತಿಳಿಯುವುದು. ಕೆಲಮಟ್ಟಿಗೆ ಹಿಂದಿನ ಸಂಧಿಯಲ್ಲಿ ವಿವರಿಸಿದೆ.

ಒಟ್ಟಿಗೆ ಒಂದು ಬ್ರಹ್ಮಾಂಡದಲ್ಲಿ ಸಾಧನ ಜೀವಿಗಳು, ತೃಣಾದಿ ನರಗಂಧರ್ವರ ಪರಿಯಂತ ನಿರಂಶರು, ಅನಂತ ಜೀವರು, ದೇವಗಂಧರ್ವರಾರಂಭಿಸಿ, ಬ್ರಹ್ಮದೇವರ ಪರಿಯಂತವಾಗಿ ೩೩ ಕೋಟಿ ದೇವತೆಗಳು, ೧೦೦ ಕೋಟಿ ಋಷಿಗಳ ಸಂಖ್ಯಾ ವಿಚಾರ ಹಿಂದೆ ವಿವರಿಸಿದೆ. ಇದರಲ್ಲಿ **ಸಾಧನರು, ಸಾಧ್ಯರು, ಪದಸ್ಥ**ರೆಂದು ಮೂರು ಪ್ರಕಾರ ಉಂಟು. ಕೇವಲ ತತ್ವಾಭಿಮಾನಿ ದೇವತೆಗಳು ಪದಸ್ಥರು ಸಹಿತವಾಗಿ ೩,೩೦೦ ಜನರೆಂದು ಹೇಳಿದೆ. ಇದರ ವಿಚಾರ ಇಲ್ಲಿ ಅವಶ್ಯವಾಗಿ ತಿಳಿಯುವುದಾಗಿದೆ.

ಪ್ರತಿ ಬ್ರಹ್ಮಾಂಡದಲ್ಲಿರುವ ಈ ದೇವತೆಗಳೂ ಇರುವ ಕ್ರಮ **ಶ್ರೀವಿಜಯ ದಾಸಾರ್ಯರು ತಾರತಮ್ಯ ಸುಳಾದಿ** ೧೧, ಅಟ್ಟತಾಳ, ಪುಟ ೪೪-೪೫ ರಲ್ಲಿ ಹೇಳಿದ್ದಾರೆ.

**ಅಟ್ಟತಾಳ**

ಇದರೊಳು ಕ್ರಮ ಉಂಟು. ಒಂದೊಂದು ಜನ್ಮ ತಮ್ಮ । ಪದವಿಯ ಸಾರಿ ವಿಲಿಂಗರಾದ ಮೇಲೆ । ಒದಗಿ ಬಾಹೋರು ಸಲಿಂಗರು ವೇಗದಿ । (ಅಸೃಜ್ಯಾವಸ್ಥೆಯಿಂದ ಸೃಷ್ಟಿಗೆ ಆಯಾ ಗಣದ ಒಬ್ಬ ಸಾಧನ ಜೀವರು ಬರುವರೆಂದು ಅಭಿಪ್ರಾಯ) ನದಿ ಪ್ರವಾಹದಂತೆ ಕಾಲವ್ಯವಧಾನ । ವಿಧಿ **ಶಿವ** ಮಿಕ್ಕಾದ ಜನರೆಲ್ಲ ಜತ್ತಾಗಿ । ಮುದದಿಂದ ಸೋಪಾನ ಬಂದಂತೆವೊ । **ಇದರಲ್ಲಿ ಪೂರ್ಣ** ವಿಭೂತಿ ಲಕ್ಷಣ, ನವ । ವಿಧ ಭಕುತಿಯುಳ್ಳ ಚರಮ ಶರೀರಿಗ । ಳುಮುಭವಿಸುವರು ಒಬ್ಬೊಬ್ಬರು ಮುಂದು । ಇದರ ತರುವಾಯ ಅಪರೋಕ್ಷವಾದ ಗಣದ ಮಧ್ಯದಲ್ಲಿಗೆ। ಸದಮಲ **ಸಂಖ್ಯೆಗೆ ಒಂದೊಂದು ಕಡಿಮೆ** ಚೇತ । ನದ ಲೆಕ್ಕವ ನೋಡು ಸ್ಪಷ್ಟತ್ವದಲಿ ಭೇದ । ಇದರಲ್ಲಿ ಸಾಧನ ಸಾಧ್ಯಪದಸ್ಥ ತ್ರಿ । ವಿಧವೆನ್ನು ಬಿಂಬೋಪಾಸನೆ ಅಧಿ । ಕಾಧಿಕ ವಾಗಿ ಮಾಡುತಲಿಪ್ಪರು । ಪದುಮ ಭವಾಂಡ ಸಮೇತ ತೃಣಾದ್ಯರ । ಹೃದಯಸ್ಥ ಮೂರ್ತಿಯ ಉಚಿತ ಜನ್ಮದಲ್ಲಿ।ಅಧಿಕಾರತನದಿಂದ ಯೋಗ್ಯತಾನುಸಾರ । **ನಿದರುಶನ ಅನುಕ್ರಮವಾಗಿ ಒಂದೊಂದು । ಇದನೆ ಲಾಲಿಸುವುದು ಸ್ವೋತ್ತಮರ ಬಿಟ್ಟು** । **ತುದಿ ಮೊದಲಾಗಿ ತಮಗಿಂತ ನೀಚರ** । **ಬದಿಯಲ್ಲಿ** ಇದ್ದ ವಸ್ತುಗಳೆಲ್ಲಾ ಕಾಂಬೋರು । ಮದಮತ್ಸರಗಳಲ್ಲಿ ದುಷ್ಪ್ರಾರಬ್ಧವೊ । ದಮು ನೂಕುವರು ದೈತ್ಯಾವೇಶ ವರ್ಜರು ಸ । ರ್ವದ ಹರಿದರುಶನ ಅಪರೋಕ್ಷ ಕಾಲಕ್ಕೆ । ಉದಧಿ ತೆರೆಯಂತೆ ಪುಷ್ಕರ ವಿಡಿದಿನ್ನು । ಪದುಮನಾಭನ ವಾಹನ ಪರಿಯಂತರ । ಇದೇ ಸಿದ್ಧ ರವಿ ಮಂಡಲದಂತೆ ಕಾಂಬೋರು । ಮಧುವೈರಿ ವಿಜಯ ವಿಠ್ಠಲರೇಯನ ಪಾದ । ಪದುಮವೆ ಗತಿಯೆಂದು ಹೇಳಿ ಕೇಳುತ ದೃಢ ॥ ೪ ॥ ಇದೇ ಸಾಧನದ ಬಗೆ.

**ಒಟ್ಟಿಗೆ ಸಾರಾಂಶವೇನೆಂದರೆ :-**

ಹಿಂದಿನ ಸಂಧಿಯಲ್ಲಿ ಹೇಳಿದಂತೆ ಮುಖ್ಯವಾಗಿ ೧೪ ಚತುರ್ದಶ ವಿಧ

ತಾರತಮ್ಯವನ್ನು ಗುರುದ್ವಾರಾ ತಿಳಿದು ಸಾಧನ ಮಾಡಬೇಕೇ ಹೊರತು, ಗ್ರಂಥವಿಚಾರ ಸಾಲದು. ಬಹು ವಿಸ್ತಾರ ಪ್ರಮೇಯಗಳಿವೆ. ಇದೇ "ಮಹಾ ತಾರತಮ್ಯ".

ಈ ಪರಿಯಂತ ಕಲ್ಪಸಾಧನ, ಅಪರೋಕ್ಷ ತರತಮ ವಿಚಾರ ಹೇಳಿದ್ದಾಗಿದೆ. ಮುಂದೆ ಈ ಸಂಧಿಯ ೪೯ನೇ ಪದ್ಯವಾರಂಭಿಸಿ, ೫೫ನೇ ಪದ್ಯದವರೆಗೆ ಶ್ರೀಹರಿಯು ಎಲ್ಲ ಜೀವರನ್ನು ತನ್ನ ಉದರಲ್ಲಿಟ್ಟು, ಪ್ರಳಯಾನಂತರ ಉದರದಿಂ ತೆಗೆದು ವಿರಜಾಸ್ನಾನಗೈಸಿ, ಮುಕ್ತಸ್ಥಾನದಲ್ಲಿಟ್ಟು ಮುಕ್ತಾನಂದವೀವನೆಂದು ಭಗವಂತನ ಅನಂತ ಮಹಾ ಮಹಿಮೆ ಸ್ತೋತ್ರ ಮಾಡಿದ್ದಾರೆ.

೫೬ನೇ ಪದ್ಯದಿಂದ ೬೩ನೇ ಪದ್ಯ ಪೂರ್ತಿ ಸೂಕ್ಷ್ಮಕಾಲ ಆರಂಭಿಸಿ, ಬ್ರಹ್ಮಮಾನ ಶತವರ್ಷ ಬ್ರಹ್ಮಕಲ್ಪ ಪರಿಯಂತ ಕಾಲಕೋಷ್ಟಕ ವಿವರ, ಕಾಲನಾಮಕ ಭಗವಂತನ ಉಪಾಸನೆ ಪೇಳುತ್ತ, ಮುಂದೆ ೬೪ನೇ ಪದ್ಯದಲ್ಲಿ ಈ ಕಥಾಮೃತಪಾನ ವಿವೇಕಿಗಳಿಗೆ ಹೊರತಾಗಿ, ಅವಿವೇಕಿಗಳಿಗೆ ವ್ಯಾಕುಲಚಿತ್ತರಿಗೆ ದೊರೆಯುವುದಲ್ಲ. ಕಾರಣ-ಲೋಕವಾರ್ತೆ ಬಿಟ್ಟು, ಇದನ್ನು ಅವಲೋಕಿಸುವವರನ್ನು ಕೃಪಾಮಯನಾದ ಜಗನ್ನಾಥ ವಿಠಲನು ಪೊರೆವನೆಂದು ಪೇಳಿದ್ದಾರೆ.

ಒಂದು ಬ್ರಹ್ಮಕಲ್ಪದಲ್ಲಿ ಸಾಧನಮಾಡುವ ೩,೩೦೦ ತಾತ್ವಿಕ ದೇವತೆಗಳು. ಇವರಲ್ಲಿ ೧೨೦ ಪದಸ್ಥ ದೇವತೆಗಳ ವಿವರ, ಪ್ರಕಾಶ ಸಂಹಿತೆ ಮತ್ತು ಶ್ರೀ ವಿಜಯದಾಸರ ತಾರತಮ್ಯ ಸುಳಾದಿ-೧೦, ಪುಟ-೩೬ ಧ್ರುವ ತಾಳದಲ್ಲಿ—

೧. ವನಜಸಂಭವವಿಡಿದು ಋಭುಗಣಾಂತ ತನುವ ಧರಿಪ ಸಂಖ್ಯೆ ೩,೩೦೦ ಮೂವತ್ತುಮೂರು ನೂರು; ಇನಿತರೊಳು ಎರಡು ವಿಧವು.

೨. ಪ್ರಾಮುಖ್ಯರು ಘನವಂತ ಜನ ವಿಂಶತಿ ಶತ ೧೨೦ ಉಳಿದಾವವರು.

೩. ಸನುಮತ ಋಭುಗಣ ತ್ರಿಸಹಸ್ರದ ಮೇಲೆ ಎಣಿಸು ನೂರೆಂಭತ್ತು (೩೧೮೦) ಜನರು ಒಂದೇ. ದೇವತ್ವ ಆದಿಯಲಿ ಅಮುಖ್ಯ ತಾತ್ವಿಕರಿಂದ ವೆಗ್ಗಳರು.

೪. ಮುನಿಜನ ವಿಕ್ಕಾದವರ ವಿಭಾಗಮಾಡಿ ತೆಗೆದು, ಮಣಿದು ನಮೋ ಎನ್ನು ಶತಸ್ಥರ್ಗೆ ಎಂದು ಅಪ್ಪಣೆ ಕೊಡಿಸಿದಂತೆ ಇದರ ವಿವರವನ್ನು ವಿಚಾರಿಸುವೆವು.

| ಕ್ರಮ ಸಂಖ್ಯೆ | ಕಕ್ಷೆ | ದೇವತೆಗಳ ವಿವರ | ಒಂದು ಕಲ್ಪದಲ್ಲಿ ಒಟ್ಟಿಗೆ ಇರುವವರು | ಇದರಲ್ಲಿ ಪದಸ್ಥರು |
|---|---|---|---|---|
| | ೩ | ಋಜುಗಣಸ್ಥರು ಇದರಲ್ಲಿ ಋಜುಪುಂಗವರು | ೨೦೦ | |
| ೧. | ,, | ಬ್ರಹ್ಮದೇವರು–೧ | ,, | ೧ |
| ೨. | ,, | ವಾಯುದೇವರು–೧ | ,, | ೧ |
| ೩. | ,, | ಲಾತವ್ಯರು–೯೮ | ,, | ೧ |
| ೪. | ,, | ಋಜುಗಳು–೧೦೦/೨೦ | ,, | ೧ |
| ೫. | ೪ | ಶ್ರೀ ಸರಸ್ವತಿ ದೇವಿಯರು | ೨೦೦ | ೧ |
| ೬. | ,, | ಶ್ರೀ ಭಾರತೀದೇವಿಯರು | ,, | ೧ |
| ೭. | ,, | ಋಜುಪತ್ನಿಯರು | ,, | — |
| ೮. | ೫ | ಶ್ರೀ ಗರುಡ ದೇವರು | ೧೦೦ | ೧ |
| ೯. | ,, | ಶೇಷದೇವರು–೧ | ೧೦೦ | ೧ |
| ೧೦. | ,, | ರುದ್ರದೇವರು–೧ | ,, | ೧ |
| ೧೧. | ,, | ಶೇಷಪದಕ್ಕೆ ಬರುವ ಷಣ್ಮಹಿಷಿಯರು | | |
| ೧೨. | ೬ | ಶ್ರೀ ಜಾಂಬವತಿದೇವಿ | ೧೦೦ | ೧ |
| ೧೩. | ,, | ಶ್ರೀ ಕಾಳಿಂದಿದೇವಿ | ೧೦೦ | ೧ |
| ೧೪. | ,, | ಶ್ರೀ ನೀಲಾದೇವಿ | ೧೦೦ | ೧ |

| | | | | |
|---|---|---|---|---|
| ೧೫. | ,, | ಭದ್ರಾದೇವಿ | ೧೦೦ | ೧ |
| ೧೬. | ,, | ಲಕ್ಷ್ಮಣಾದೇವಿ | ೧೦೦ | ೧ |
| ೧೭. | ,, | ಮಿತ್ರವಿಂದಾದೇವಿ | ೧೦೦ | ೧ |
| | | ಈ ಆರು ಜನರು ಅರ್ಥಾಭಿ | | |
| | | ಮಾನಿ ತಾತ್ವಿಕರು | | |
| ೧೮. | ೭ | ಶ್ರೀಸೌಪರಣಿದೇವಿ ಗರುಡಪತ್ನಿ | ೧೦೦ | ೧ |
| ೧೯. | ,, | ಶ್ರೀ ವಾರುಣಿದೇವಿ(ಶೇಷಪತ್ನಿ | ೧೦೦ | ೧ |
| ೨೦. | ,, | ಶ್ರೀ ಉಮಾದೇವಿ ರುದ್ರ | | |
| | | ಪತ್ನಿವಾರುಣೀಪದದಿಂದ ಮುಕ್ತಿ | | ೧ |
| ೨೧. | ೮ | ಇಂದ್ರದೇವ ಪದಜೀವರು | | |
| | | ೨೦+೨೦ ಕಲ್ಪಸಾಧನೆ | ೪೦ | ೧ |
| ೨೨. | ,, | ಕಾಮಪದ ಜೀವರು | | |
| | | ೨೦+೨೦ ಕಲ್ಪದಂತೆ | ೪೦ | ೧ |
| ೨೩. | ೯ | ಆಹಂಕಾರಿಕ ಪ್ರಾಣಪದ | | |
| | | ಜೀವರು-೧೮+೧೮ ಕಲ್ಪ | ೩೬ | ೧ |
| ೨೪. | ೧೦ | (೧) ಅನಿರುದ್ಧ, ಕಾಮಮಿತ್ರ | | |
| | | ೧೬+೧೬ ಕಲ್ಪ | ೩೨ | ೧ |
| ೨೫. | ,, | (೨) ಗುರು, ಬೃಹಸ್ಪತಿ | | |
| | | ೧೬+೧೬ ಕಲ್ಪ | ೩೨ | ೧ |
| ೨೬. | ,, | (೩) ದಕ್ಷ ಪ್ರಜೇಶ್ವರ | | |
| | | ೧೬+೧೬ ಕಲ್ಪ | ೩೨ | ೧ |
| ೨೭. | ,, | (೪) ಸ್ವಾಯಂಭುವ ಮನು | ೩೨ | ೧ |
| | | ೧೬+೧೬ ಕಲ್ಪ | ೩೨ | ೧ |
| ೨೮. | ,, | (೫) ಶಚೀದೇವಿ ಇಂದ್ರಪತ್ನಿ | | ೧ |
| | | ೧೬+೧೬ ಕಲ್ಪ | ೩೨ | ೧ |
| ೨೯. | ,, | (೬) ರತಿದೇವಿ (ಕಾಮಪತ್ನಿ) | | |
| | | ಈ ಆರು ಜನರಿಗೆ ಸಾಧನ | ೩೨ | |

| | | | | |
|---|---|---|---|---|
| | | ೧೬+೧೬=೩೨ ಕಲ್ಪದಂತೆ ೧೯೨ | | |
| ೩೦. | ೧೧ | ಶ್ರೀ ಪ್ರವಾಹ ವಾಯುದೇವರಿಗೆ ೧೨+೧೨ ಕಲ್ಪ | ೨೪ | ೧ |
| ೩೧. | ೧೨ | (೧) ಸೂರ್ಯದೇವರು | ೨೦ | ೧ |
| ೩೨. | ,, | (೨) ಚಂದ್ರದೇವರು | ೨೦ | ೧ |
| ೩೩. | ,, | (೩) ಯಮಧರ್ಮ | ೨೦ | ೧ |
| ೩೪. | ,, | (೪) ಶತರೂಪಾದೇವಿ ಈ ೪ ಜನಕ್ಕೆ ೧೦+೧೦=೨೦ ಕಲ್ಪದಂತೆ ಒಟ್ಟಿಗೆ ೮೦ | | |
| ೩೫. | ೧೩ | ವರುಣ ದೇವರು ೯+೯ ನಾರದರು ಋಷ್ಯಾದಿಗಳಲ್ಲಿ | ೧೮ | ೧ |
| ೩೬. | ೧೫ | (೧) ಭೃಗುಋಷಿಗಳು ಪದಸ್ಥರು | ೧೮ | ೧ |
| ೩೭. | ,, | (೨) ಅಗ್ನಿದೇವರು | ೧೮ | ೧ |
| ೩೮. | ,, | (೩) ಪ್ರಸೂತಿದೇವಿ (ದಕ್ಷಪತ್ನಿ) | ೧೮ | ೧ |
| ೩೯. | ೧೬ | (೧) ಮರೀಚಿ | ೧೮ | ೧ |
| ೪೦. | ,, | (೨) ಅತ್ರಿ | ೧೮ | ೧ |
| ೪೧. | ,, | (೩) ಅಂಗಿರಾ | ೧೮ | ೧ |
| ೪೨. | ,, | (೪) ಕೃತು | ೧೮ | ೧ |
| ೪೩. | ,, | (೫) ಪುಲಹಾ | ೧೮ | ೧ |
| ೪೪. | ,, | (೬) ಪುಲಸ್ತ್ಯ | ೧೮ | ೧ |
| ೪೫. | ,, | (೭) ವಸಿಷ್ಠ | ೧೮ | ೧ |
| ೪೬. | ,, | (೮) ವೈವಸ್ವತಮನು, ವಿಶ್ವಾಮಿತ್ರರು ಋಷಿಗಳಲ್ಲಿ | ೧೮ | ೧ |
| | | (ಈ ಒಂಭತ್ತು ಜನ ಬ್ರಹ್ಮಪುತ್ರರು ಸೃಷ್ಟಿಗೆ ಕಾರಣ ಪ್ರಜೋತ್ಪಾದಕರು) | | |
| ೪೭. | ೧೭ | (೧) ಮಿತ್ರನಾಮಕ ಸೂರ್ಯ | ೧೮ | ೧ |
| ೪೮. | ,, | (೨) ನಿಋತಿ | ೧೮ | ೧ |

೪೯. ,, (೩) ತಾರಾ ಬೃಹಸ್ಪತಿ ಪತ್ನಿ ೧೮
ತಮ್ಮ ಪತಿ ಸಂಗಡಲೇ

೫೦. ,, (೪) ಪ್ರಾವಹಿ, ಪ್ರವಹದೇವರ
ಪತ್ನಿ ೧೧
ತಮ್ಮ ಪತಿ ಸಂಗಡಲೇ
ತಾತ್ವಿಕರು ಬೇರೆ ಪದವಿ ಇಲ್ಲ.

ವರುಣ, ನಾರದವಿಡಿದು ಮಿತ್ರನ ಪರಿಯಂತ
೯+೯ ಕಲ್ಪದಂತೆ ೧೬ ಜನರಿಗೆ ೧೮ ಕಲ್ಪ
೨೮೮ ಜನರು

| | | | | |
|---|---|---|---|---|
| ೫೧ | ೧೮ | (೧) ಗಣೇಶ ೮+೮ | ೧೬ | ೧ |
| ೫೨ | ,, | (೨) ಕುಬೇರ ೮+೮ | ೧೬ | ೧ |
| ೫೩ | ,, | (೩) ವಿಷ್ವಕ್‌ಸೇನ | ೧೬ | ೧ |
| ೫೪ | ,, | (೪) ಅಶ್ವಿನೀ ದೇವತೆಗಳು | ೧೬ | ೧ |
| | | ೮೫ಜನ ಶೇಷಶತಸ್ಥರಲ್ಲಿ | ೨೧೯೪ | ೪೯ |
| ೫೫ | | ೪೭ ಜನ ಮರತ್‌ಗಳು | | |
| ೫೬ | | ೭ ಜನ ವಸುಗಳು | | |
| ೫೭ | | ೯೦ ಜನ ರುದ್ರರು | | |
| ೫೮ | | ಆದಿತ್ಯರು | | |
| ೫೯ | | ೧ ಪ್ರಥ್ವೀದೇವಿ | ೧೧೪೬ | ೭೧ |
| | | ೭೧ ಜನರಿಗೆ ೧೧ ಕಲ್ಪದಂತೆ ೧೧೩೬ | | |
| | | | ೩೩೦೦ | ೧೨೦ |

ಈ ಎಂಭತ್ತೈದು ಜನ ಶೇಷಶತಸ್ಥರಲ್ಲಿ—
೧೦ ಜನ ವಿಶ್ವೇದೇವತೆಗಳು
೩ ಜನ ಪಿತೃಗಳು [ಪಿತೃಗಣದಲ್ಲಿ]
೧ ಜನ ಋಭುಗಣ
೧೪ ಜನ ಬಿಟ್ಟು ಉಳಿದ ೭೧ ಜನರು ಶೇಷಶತಸ್ಥರಲ್ಲಿ ತೆಗೆದು
ಕೊಳ್ಳಬೇಕು.

ಹೀಗೆ ಇವರ ವಿವರ ತಿಳಿಯಬೇಕು. ಸುಜ್ಞಾನಿಗಳು ಚೆನ್ನಾಗಿ ವಿಚಾರಿಸಿ, ಇದರಲ್ಲಿ ಏನಾದರೂ ಹೆಚ್ಚು ಕಡಿಮೆ ಇದ್ದರೆ ತಿದ್ದಿ ತಿಳಿಸಬೇಕಾಗಿ ಪ್ರಾರ್ಥನೆ. **—ಸಂಪಾದಕ.**

॥ ಶ್ರೀ ಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀ ವೇಂಕಟೇಶಃ ಪ್ರಸನ್ನಃ ॥
॥ ಶ್ರೀ ಗುರುರಾಜೋ ವಿಜಯತೇ ॥

# ೨೪ನೇ ಕಲ್ಪಸಾಧನ ಸಂಧಿ



ಶ್ರೀ ರಾಘವೇಂದ್ರಗುರು ಶ್ರೀ ವರದೇಂದ್ರಗುರು
ಹರಿಕಥಾಮೃತಸಾರ ಗುರುಗಳ ॥
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

**ಏಕವಿಂಶತಿ ಮತ ಪ್ರವರ್ತಕ ।**
**ಕಾಕು ಮಾಯ್ಗಳ ಕುಹಕ ಯುಕ್ತಿ ನಿ- ।**
**ರಾಕರಿಸಿ ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದ ॥**
**ಶ್ರೀಕಳತ್ರನ ಸದನ ದ್ವಿಜಪ ಪಿ- ।**
**ನಾಕಿ ಸನ್ನುತ ಮಹಿಮ ಪರಮ ಕೃ- ।**
**ಪಾಕಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ ॥೧॥**

**ಅವತರಣಿಕಾ** :—ಹಿಂದಿನ ಸಂಧಿಗಳಲ್ಲಿ ಅವರೋಹಣ, ಆರೋಹಣ ಸಂಚಿತಾಗಾಮಿ ಕರ್ಮನಾಶದಿಂದ ಅಪರೋಕ್ಷ. ಪ್ರಾರಬ್ಧ ಕರ್ಮ ಅನುಭೋಕ್ತೃವ್ಯನಂತರ ಮೋಕ್ಷ. ಮತ್ತು ಆಯಾ ಜೀವರ ಅಂಶಾವತಾರ, ಆವೇಶ, ಬೃಹತ್ತಾರತಮ್ಯ ವಿವರಿಸಿದ್ದಾರೆ. ಇಂತಹ ಸಾಧನ ಜೀವಿಗಳ ಅಪರೋಕ್ಷ ಪ್ರಾರಬ್ಧ ಕ್ಷಯನಂತರ ಎಷ್ಟೆಷ್ಟು ಕಲ್ಪಸಾಧನಗಳ ಮಾಡಿದರೆ ಮೋಕ್ಷವಾಗುವುದೆಂಬ ಈ ವಿಷಯವನ್ನು ಪ್ರಕಾಶ ಸಂಹಿತಾ, ಬ್ರಹ್ಮ ಕಾಂಡಾದಿ ಗ್ರಂಥಗಳಲ್ಲಿ ವರ್ಣಿಸಿದಂತೆ ಶಾಸ್ತ್ರಸಮ್ಮತವಾಗಿ ಶ್ರೀ ದಾಸಾರ್ಯರು; ಬ್ರಹ್ಮಕಲ್ಪ ಲೆಕ್ಕದಿಂದ ಸಾಧನ ಜೀವರಾದ ಬ್ರಹ್ಮ, ವಾಯು ದೇವರಾರಂಭಿಸಿ, ತೃಣಜೀವ ಪರಿಯಂತರ ಅವರವರ ಯೋಗ್ಯತೆಯಂತೆ

ಸಾಧನಕಲ್ಪಗಳ ಕಾಲ ವಿವರ ಅಪರೋಕ್ಷ ತಾರತಮ್ಯವನ್ನು ಈ ಇಪ್ಪತ್ತು ನಾಲ್ಕನೇ ಸಂಧಿಯಲ್ಲಿ ವಿವರಿಸುತ್ತಾರೆ. ಮೊದಲಿಗೆ ಸಾಧನ ಜೀವಿಗಳಲ್ಲಿ ವಾಯುದೇವರು ಜೀವೋತ್ತಮರಾದುದರಿಂದ ಆ ವಾಯುದೇವರ ಸ್ತೋತ್ರವನ್ನೂ, ತದಂತರ್ಯಾಮಿ ಶ್ರೀಹರಿಯ ಸ್ತೋತ್ರವನ್ನೂ ಮಾಡುತ್ತಲಿದ್ದಾರೆ. ಶ್ರೀ ವಾಯು ಜೀವರು ಎಂಥವರೆಂದರೆ—

**ಪದ್ಯಾರ್ಥ** :—ಏಕವಿಂಶತಿ=ಏಕ=ಒಂದು ಇಪ್ಪತ್ತು, ಇಪ್ಪತ್ತೊಂದು ಮತಪ್ರವರ್ತಕ=ಮತಗಳನ್ನು ಪ್ರಚುರಮಾಡಿದ, ಕಾಕುಮಾಯ್ಗಳ=ಕೆಟ್ಟ ಕುವಾದಿಗಳು ಶ್ರೀಹರಿಯು ಸರ್ವೋತ್ತಮನಲ್ಲ ಜೀವರು ದೇವರು, ಒಂದೇ ಎಂದು ಪೇಳುವ ಮಾಯ್ಗಳ=ಮಾಯಾವಾದಿಗಳ, ಕುಹಕ ಯುಕ್ತಿ=ಕೆಟ್ಟ ಕಪಟ ವಂಚನದಿಂದ ಕೂಡಿದ, ಯುಕ್ತಿ=ಅನುಮಾನ ಸಾಧನಗಳನ್ನು ನಿರಾಕರಿಸಿ = ಖಂಡಿಸಿ, ಸಕಲ ವೇದ ಪ್ರಮಾಣ = ವೇದ, ಅನುಮಾನ, ಪ್ರತ್ಯಕ್ಷ ಪ್ರಮಾಣಗಳಿಂದ ಸಕಲರಿಂದ ಭಿನ್ನನೂ ಎಲ್ಲರಿಗಿಂತಲೂ ಉತ್ತಮನೆಂದರೆ, ಸರ್ವೋತ್ತಮನೂ ಹರಿಯೆಂದು ಸ್ಥಾಪಿಸಿದ=ಸಕಲವೇದಾದಿ ಪ್ರಮಾಣಯುಕುತಿ ಶಾಸ್ತ್ರಾದಿಗಳಿಂದ ಸರ್ವೋತ್ತಮನು ಶ್ರೀಬಿಂಬರೂಪಿಯಾದ ಶ್ರೀಹರಿಯೇ ಎಂದು ನಿರ್ಧರಿಸಿ, ಪ್ರಮಾಣಬದ್ಧವಾಗಿ ಮೂಲ ಮೂವತ್ತೇಳು ಗ್ರಂಥಗಳನ್ನು ರಚಿಸಿ, ಅನಾದಿ ನಿತ್ಯವಾದ ಮಧ್ವಮತವನ್ನು ಧೃಢೀಕರಿಸಿದರು. ಇವರಾರು ? ಎಂದರೆ ಶ್ರೀಕಳತ್ರಸ ಸದನ = ಶ್ರೀಸಂಪತ್ಕರಳಾದ ಲಕ್ಷ್ಮೀಪತಿಗೆ ಆವಾಸ ಯೋಗ್ಯರು. ದ್ವಿಜಪ=ಪಕ್ಷಿಶ್ರೇಷ್ಠ ಗರುಡ, ಪಿನಾಕಿ=ರುದ್ರದೇವಾದಿಗಳಿಂದ ಸನ್ನುತ = ನಮಿಸಿಕೊಂಡು ಸ್ತೋತ್ರಮಾಡಿಸಿಕೊಳ್ಳುವ, ಮಹಿಮ = ಮಾಹಾತ್ಮ್ಯಯುಳ್ಳ, ಗುರುವರ್ಯ=ಸಕಲರಿಗೂ ಆದಿಗುರುಗಳಾದ ಮಧ್ವಾಚಾರ್ಯ = "ಮಧ್ವೇತ್ಯಾನಂದ ಉದಿಷ್ಟಃ ವೇತಿ ತೀರ್ಥಮುದಾಹೃತಂ" ಆನಂದದಾಯಕವಾದ ಶಾಸ್ತ್ರವನ್ನು ರಚನಾಮಾಡಿದ, ವೇದಗಳಲ್ಲಿ ಶ್ರೀ ವಾಯುದೇವರು ನಿತ್ಯವಾಗಿ "ಮಧ್ವ" ಎಂಬ ನಾಮದಿಂದ ಪ್ರಸಿದ್ಧರಾಗಿರುವ ಗುರುಗಳಲ್ಲಿ ಶ್ರೇಷ್ಠರು.(ಅಂದರೆ ವಿಶೇಷವಾಗಿರುವ ಅಜ್ಞಾನಾಂಧಕಾರವನ್ನು ನಾಶಗೈಸಿ, ಸುಜ್ಞಾನವನ್ನು ಕೊಡುವರಿಗೆ ಗುರುಗಳೆಂದು

ಶಾಸ್ತ್ರನಿಯಮ) ಇಂತಹ ಪರಮ ಉತ್ತಮ ಗುರುಗಳಾದ ಮಧ್ವಾಚಾರ್ಯರೆ! ಕೃಪಾ ಕಟಾಕ್ಷದಿ ನೋಡು=ಎಮ್ಮ ಮೇಲೆ ಕರುಣಾಮಾಡಿ, ಕರುಣಾ ದೃಷ್ಟಿಯಿಂದ ನೋಡಿರಿ, ಸಾಧನ ಮಾಡಿಸಿರಿ, ಮುಕ್ತಿಯನ್ನು ಕೊಡಿಸಿ ರೆಂದು "ಗುರು ಸ್ಮೃತಿಸ್ಸರ್ವಸಮೃದ್ಧಿ ದಾಯಿನೀ" ಎಂಬುವ ವಚನವಂತೆ ಆದಿಯಲ್ಲಿ ಶ್ರೀ ವಾಯುದೇವರ ಸ್ತೋತ್ರ ಮಾಡಿದ್ದಾರೆ. ॥ ೧ ॥

**ಭಾವಸೂಚನ** :— ಅಪರೋಕ್ಷ ಪರೋಕ್ಷ ಜ್ಞಾನ ಪ್ರತಿ ಬಂಧಕ ಪ್ರಾರಬ್ಧದಲ್ಲಿ, ಅಪರೋಕ್ಷ ಜ್ಞಾನ ಪ್ರತಿಬಂಧ ನಾಶಾನಂತರ ಆಗೋ ಫಲ ಹೇಳಲಿಕ್ಕೆ **"ಅಪರೋಕ್ಷ ತಾರತಮ್ಯ"** ಸಂಧ್ಯುಪಕ್ರಮಿಸಲಿಕ್ಕೆ ಸೂಚನ ॥ **ಹರೀತಿ** ॥ ಗುರುದ್ವಾರಾ ಪ್ರಸನ್ನಃ ಸನ್ ಭರತೀದಂ ರಮಾ ಪತಿಃ ॥ ಗುರುಪ್ರಸಾದೋ ಬಲವಾನ್ ನ ತಸ್ಮಾದ್ಬಲವತ್ತರಮ್ ॥ ಯಥಾ ಗುರುದತ್ತಂ ತಥೈವ ಭವತೀತಿ ॥ ಯದ್ಗುರುಃ ಸುಪ್ರಸನ್ನಃ ಸನ್ ದದ್ಯಾತ್ ತನ್ನಾನ್ಯಥಾ ಭವೇತ್ ॥ ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ ॥ ಈ ಸಮಸ್ತ ಪ್ರಮಾಣಾಭಿಜ್ಞರಾದ ದಾಸ ಧುರ್ಯರು ಶ್ರೀಪೂರ್ಣಪ್ರಜ್ಞ ಕೃಪಾಕಟಾಕ್ಷ ಪ್ರಾರ್ಥಿಸುತ್ತಾರೆ. ॥ಏಕೇತಿ॥ ಓಂ ಶ್ರೀಕಮಲಾಪತಿ ದಾಸೋತ್ತಮಾಷ್ಟ ॥ **ಭಾಮಿನಿ** ॥ "ಜೀವಸಾಧನ ದಿಂದ ಶ್ರೀಕರ। ದೇವ ನಿಪ್ಪಪರೋಕ್ಷ ತರತಮ। ತಾವೊಲಿದು ಸಜ್ಜನರ ಗೋಸುಗ ನುಡಿದನೀಸಂಧಿ ॥ ತಾವಕದಿ ಸ್ವೀಕರಿಸೆ ಭವ ಉರು ಧಾವ ತಿಯ ವಡಿದದ್ದಿ ಶ್ರೀಹರಿ। ಕೋವಿದರ ಶಿರೋರತುನ ನೆನಿಸುತ ಪೊಳೆವನವ ಹೃದದಿ" ॥ ೨೪ ॥

**ಏಕೇತಿ** । **ಕಾಕು ಕುತ್ಸಿತ** ॥ ೧ ॥

**ವಿಶೇಷಸೂಚನೆ**:— "ಏಕವಿಶಂತಿಕುಭಾಷ್ಯದೂಷಕಂ" ಎಂದು ಶ್ರೀಸುಮಧ್ವ ವಿಜಯ ಉಕ್ತಿ ॥ ಭಾರತೀ ವಿಜಯಶ್ಚೈವ ಸಚ್ಚಿದಾ ನಂದ ಏವ ಚ॥ ಬ್ರಹ್ಮಘೋಷಂ ಶತಾನಂದೋ ಉದ್ಧತಶ್ಚೈವ ಪಂಚಮಃ॥ ವಿಜಯೋ ರುದ್ರಭಟ್ಟಶ್ಚ ವಾಮನಾಖ್ಯಃ ತಥಾಷ್ಟಮಃ ॥ ಸ ಯಾದವ ಪ್ರಕಾಶಶ್ಚ ನವಮಃ ಸಂಪ್ರಕೀರ್ತಿತಃ ॥ ರಾಮಾನುಜಃ ತಥಾ ಭಾತ್ರ

ಪ್ರಪಂಚ ದ್ರವಿಡಸ್ತಥಾ ॥ ಬ್ರಹ್ಮದತ್ತೋ ಭಾಸ್ಕರಶ್ಚ ಪಿಶಾಚೋ ವೃತ್ತಿಕಾರಕಃ ॥ ತಥಾ ವಿಜಯಭಟ್ಟಶ್ಚ ವಿಷ್ಣುಕ್ರಾಂತ ಸ್ತಥೈವ ಚ । ವಾದೀಂದ್ರಶ್ಚತತಃ ಪಶ್ಚಾತ್ ತಥಾ ಮಾಧವದಾಸಕಃ ॥ ತತಃ ಪಶ್ಚಾತ್ಸಂಕರಶ್ಚ ಏಕವಿಂಶತಿವಾದಿಭಿಃ ॥" ॥ ೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶ್ರೀರಸ್ತು ಹರಿಃ ಓಂ ॥ ಏವಮಂಶಾಂಬುಧೌ (ಧಿಂ) ತೀರ್ಣೋ ಹನೂಮತ್ಪ್ರೀತಸಂಶ್ರಯಾತ್ ॥ ಅಪರೋಕ್ಷಾಖ್ಯ ಗಂಗಾಂಭಃಸುಸ್ನಾನ ನಿರತಃ ಯತಃ ॥ ೧ ॥ ನತ್ವಾ ಶ್ರೀಕೇಳಿಪಾತ್ರಂ ತಂ ಮಧ್ವಹೃತ್ಪದ್ಮವಾಸಿನಮ್ ॥ ಜಗನ್ನಾಥ ಗುರೂಪಾಸ್ಯಂ ನರಸಿಂಹಂ ಭಜೇಽನಿಶಮ್ ॥ ೨ ॥ ಬಹುಭಿಃ ಜನ್ಮಭಿಃ ಸಾಧ್ಯಂ ಕೈವಲ್ಯಂ ಭಕ್ತಿಮಜ್ಜನೈಃ ॥ ನೈವಂ ವಿಷಯಸೌಖ್ಯಂ ಯತ್ ತದರ್ಥಂ ಪ್ರಯತೇತ ವೈ ॥ ೩ ॥ ನೃವರಾಣಾಂ ತು ಕೈವಲ್ಯಂ ಯಾವಜ್ಜನ್ಮಭಿರಾಪ್ಯತೇ ॥ ದೇವಾನಾಂ ಬಹುಕಲ್ಪೈಸ್ತು ದ್ವಿಧಾ ದೃಷ್ಟಿಃ ತತಃ ಪರಮ್ ॥ ೪ ॥ ತತಃ ಸಿದ್ಧಿಃ ವಿಮೋಕ್ಷಾಖ್ಯಾ ಭವೇದೇವಂ ವಿಲಂಬತಃ ॥ ಯುಕ್ತೇನಾಂ ವಿವೃತಾವೇವಂ ಪ್ರೋಕ್ತಂ ಜ್ಞೇಯಂ ಸದಾ ಜನೈಃ ॥ ೫ ॥ ಪ್ರಕಾಶಸಂಹಿತಾ ತತ್ರ ಮಾನಂ ಭಾಗವತಂ ತಥಾ ॥ ತತ್ತಾತ್ಪರ್ಯಗತಂ ಶ್ರೀಮನ್ಮುಕ್ತಾಮಂಜರಿಕಾಗತಂ ॥ ೬ ॥ ಸುಬೋಧಃ ಭಾವ್ಯ ಇತಿ ಸರ್ವಾಭೀಪ್ಸಿತಮೇವ ಯತ್ ॥ ತನ್ನಿರೂಪಯಿತುಂ ತ್ವದ್ಧಾ ಮಂಗಲಂ ಕರ್ತುಮಿಚ್ಛವಃ ॥ ೭ ॥ ಗುರುಸ್ತವನಮೇವಾದೌ ಸರ್ವಕಾರ್ಯ ಸುಸಾಧನಮ್ ॥ ಚಿಂತಯಂತಃ ಪ್ರಧಾನೋಕ್ತಂ ಮಧ್ವಾಚಾರ್ಯಾನ್ ಸ್ಮರಂತಿ ತೇ ॥ ೮ ॥ 'ಏಕ' ಇತಿ ॥ 'ಕಾಕು'=ಕೆಟ್ಟ ॥ 'ಕುಹಕ'=ಕಪಟ ॥ 'ಶ್ರೀ' ಇತಿ ॥ 'ಶುಚಿಷದ್' ಇತಿ ಶ್ರುತೇಃ ॥ ದ್ವಿಜಾಃ ಪಕ್ಷಿಣಃ ॥ ಪರಃ ಮೀಯತೇ ಅನೇನ ಇತಿ ಪರಮಾಃ ॥ ಯದ್ವಾ ಸರ್ವಜೀವರಾಶೇಃ ಪರಮಃ ॥ ಅತ ಏವ ತತ್ಕಟಾಕ್ಷಯಾಚನಾ ॥ ಯದಿ ವಾ ನಿರ್ವ್ಯಾಜಾ ಯಾ ಕೃಪಾ ॥ ಪ್ರಯೋಜನವಿಕಲಾ ಇತಿ ಯಾವತ್ ॥ 'ಭಕ್ತಾನ್' ॥ ೧ ॥

## ಕನ್ನಡಾರ್ಥ

ಹೀಗೆ 'ಅಂಶ', 'ಆವೇಶ' ಸಂಗ್ರಹಾತ್ಮಕವಾದ ಬೃಹತ್ತಾರತಮ್ಯ
ವೆಂಬ ಸಮುದ್ರವನ್ನು ಹನುಮಂತನೆಂಬ ನೌಕಾ ಸಹಾಯದಿಂದ ದಾಟಿ
ದೆವು. ಇದರಲ್ಲಿ ಅಪರೋಕ್ಷಜ್ಞಾನವೆಂಬ ಭಾಗೀರಥೀ ಸ್ನಾನದಲ್ಲಿ ನಿರತ
ವಾಗಿರುವುದೇ ಕಾರಣ. ॥ ೧ ॥ ಶ್ರೀ ಜಗನ್ನಾಥ ಗುರೂಪಾಸ್ಯನೂ
ಮಧ್ವಾಚಾರ್ಯರ ಹೃದಯಕಮಲವಾಸಿಯೂ, ರಮಾವಿಲಾಸಪಾತ್ರನೂ
ಆದ ಶ್ರೀನರಸಿಂಹ ದೇವನನ್ನು ಸದಾ ಭಜಿಸುತ್ತೇವೆ. ॥ ೨ ॥ ಭಕ್ತಿಯುಳ್ಳ
ವರಿಗೂ ಸಹ ಕೈವಲ್ಯವು, ಮೋಕ್ಷವು ಬಹು ಜನ್ಮಗಳಿಂದ ದೊರೆಯು
ವಂಥದು. ಆದರೆ ವಿಷಯಸುಖವು ಮಾತ್ರ ಹಾಗೆ ದುರ್ಲಭವಲ್ಲ, ಸುಲಭ.
ಆದುದರಿಂದ ದುರ್ಲಭವಾದ ಕೈವಲ್ಯಕ್ಕೋಸ್ಕರ ಎಲ್ಲರೂ ಪ್ರಯತ್ನಿ
ಸುತ್ತಾರೆ. ॥ ೩ ॥ ಮನುಷ್ಯೋತ್ತಮರಿಗೆ ಕೈವಲ್ಯವು ಯಾವತ್ತೂ ಜನ್ಮ
ಗಳು ಕಳೆದ ಅನಂತರ ದೊರೆಯುತ್ತದೆ. ದೇವತೆಗಳಿಗೆ ಬಹಳ ಕಲ್ಪ
ಗಳಿಂದ ದೊರೆಯುತ್ತದೆ. ಹೀಗೆ ಜ್ಞಾನ-ಉಪಾಸನ ಅನಂತರ ಮೋಕ್ಷ
ವೆಂಬ ಸಿದ್ಧಿಯಾಗುತ್ತದೆ. ಹೀಗೆ ಮುಕ್ತಿಯು ಬಹುಕಾಲದ ಸಾಧನ
ಗಳಿಂದ ಸಾಧ್ಯವಾದದ್ದು. ತಾರತಮ್ಯ ವಿವೃತಿಯಲ್ಲಿ ಹೀಗೆ ನಿರೂಪಿಸ
ಲಾಗಿದೆ. ಅದನ್ನು ಜನರು ಸದಾ ತಿಳಿಯಬೇಕು. ಈ ವಿಷಯದಲ್ಲಿ
ಪ್ರಕಾಶ ಸಂಹಿತಾ, ಭಾಗವತ ತಾತ್ಪರ್ಯ ಮುಕ್ತಾಮಂಜರೀ. ಈ
ಮುಂತಾದ ಗ್ರಂಥಗಳ ವಚನಗಳು ಆಧಾರಗಳಾಗಿರುತ್ತವೆ. ॥ ೬ ॥
ಸುಲಭವಾಗಿ ತಿಳಿದುಕೊಳ್ಳಲು ಸರ್ವರೂ ಬಯಸುತ್ತಾರೆ. ಆದುದರಿಂದ
ಈ ಕಲ್ಪಸಾಧನಗಳನ್ನು ಸುಲಭವಾಗಿ ತಿಳಿಸುವುದಕ್ಕೆ ಮಂಗಲವನ್ನು
ಮಾಡಬಯಸಿ, ಸರ್ವಕಾರ್ಯಗಳಿಗೆ ಗುರುಸ್ತೋತ್ರವೇ ಮುಖ್ಯ, ಮೊದ
ಲನೆಯ ಸಾಧನವಾದುದೆಂದು ಬಗೆಯುತ್ತ ಶ್ರೀ ಜಗನ್ನಾಥದಾಸರು
ಶ್ರೀಮನ್ಮಧ್ವಾಚಾರ್ಯರನ್ನು ಈ 'ಏಕವಿಂಶತಿ' ಎಂಬ ಪದ್ಯದಿಂದ
ಸ್ಮರಿಸುತ್ತಾರೆ. 'ಹಂಸಃ ಶುಚಿಷದ್' ಈ ಮಂತ್ರದಲ್ಲಿ 'ಶುಚಿ' ಮುಖ್ಯ
ಪ್ರಾಣನಲ್ಲಿ 'ಷದ್' ಇರುವವನು-ಎಂದು ಹೇಳಿರುತ್ತದೆ. ಆದುದರಿಂದ
ಶ್ರೀಹರಿಯು ಶುಚಿನಾಮಕ ಮುಖ್ಯಪ್ರಾಣನಲ್ಲಿ ಇರುತ್ತಾನೆ. ಈ ಕಾರಣ
ದಿಂದ ಶ್ರೀ ಕಳತ್ರನಾದ ನಾರಾಯಣನಿಗೆ ಮುಖ್ಯಪ್ರಾಣಾವತಾರರಾದ

ಶ್ರೀಮಧ್ವಾಚಾರ್ಯರು 'ಸದನ' ನಿವಾಸಸ್ಥಾನರಾಗಿರುತ್ತಾರೆ.

'ದ್ವಿಜ' ಪಕ್ಷಿಗಳು. ಅವುಗಳ ಪ-ಪತಿ ಗರುಡ 'ದ್ವಿಜಪ' ಸಮಸ್ತ ಪ್ರಪಂಚವನ್ನೂ ಮೀರಿಸಿ ಆಳೆಯುವವನು. ಆದುದರಿಂದ ಪರಮ ಅಥವಾ ಸರ್ವ ಜೀವರಾಶಿಗಳಿಗಿಂತಲೂ ಸದಾ ಪರಮ ಉತ್ತಮನಾದುದರಿಂದ 'ಪರಮ' ಎಂದು ಹೇಳುತ್ತಾರೆ.

ಇನ್ನು 'ಪರಮ' ಎಂಬ ಪದವನ್ನು 'ಕೃಪೆ'ಯಲ್ಲಿ ಅನ್ವಯಿಸಿದರೆ ನಿರ್ವ್ಯಾಜವಾದ ಕೃಪೆಯೆಂದು ಅರ್ಥ ತಿಳಿಯಬೇಕು. ಅಂದರೆ ವಿಷಯ ಸಂಬಂಧಿಯಾದ ಪ್ರಯೋಜನಗಳಿಲ್ಲದೇ ಇರುವ ಕೃಪೆಯೆಂದು ತಾತ್ಪರ್ಯ. ॥ ೧ ॥

**ಅವತರಣಿಕಾ :**—ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯ ಜೀವರುಗಳ ಸಾಧನಕಲ್ಪಗಳ ಸಂಖ್ಯೆ; ಸಾಧನಾನಂತರ ಬಿಂಬಾಪರೋಕ್ಷ ಪ್ರಾರಬ್ಧ ಭೋಗಾನಂತರ ಲಿಂಗಭಂಗ ಮೋಕ್ಷ ವಿವರವನ್ನು ಹರಿ ಪ್ರೇರಿಸಿದಂತೆ ಹೇಳುವೆನೆಂದು ದಾಸಾರ್ಯರು ಹೇಳುತ್ತಾರೆ.

**ವೇಧ ಮೊದಲಾಗಿಪ್ಪಮಲ ಮೋ- ।**
**ಕ್ಷಾಧಿಕಾರಿಗಳಾದ ಜೀವರ ।**
**ಸಾಧನಗಳಪರೋಕ್ಷ ನಂತರ ಲಿಂಗ ಭಂಗವನು ॥**
**ಸಾಧುಗಳು ಚಿತ್ತಯಿಪದೆನ್ನಪ- ।**
**ರಾಧಗಳ ನೋಡದಲೆ ಚಕ್ರ ಗ- ।**
**ದಾಧರನು ಪೇಳಿಸಿದ ತೆರದಿಂದಲಿ ಪೇಳುವೆನು ॥ ೨ ॥**

**ಪದ್ಯಾರ್ಥ :**— ವೇಧ=ಬ್ರಹ್ಮದೇವರೆ, ಮೊದಲಾಗಿಪ್ಪ=ಮೊದಲು ಮಾಡಿ ತೃಣಾಂತ ಜೀವರುಗಳ ಅಮಲ=ನಿರ್ದುಷ್ಟರಾದ ಕೇವಲ ಸತ್ವ ಗುಣಗಳುಳ್ಳವರು, ಮೋಕ್ಷಾಧಿಕಾರಿಗಳು, ಮೋಕ್ಷಕ್ಕೆ ಯೋಗ್ಯರಾದ ಜೀವರ=ಚೇತನರಾದ ಜೀವರೇ ಸಾಧನಸಂಪನ್ನ ಯೋಗ್ಯರು. ಇವರ ಸಾಧನಗಳು ಮೋಕ್ಷಕ್ಕೆ ಕಾರಣವಾದ ಪ್ರಯತ್ನವೇ ಸಾಧನ. ಸತ್ಕರ್ಮ

ಚರಣೆ, ಗುರುಮುಖದಿಂದ ಶ್ರವಣ, ಮನನ, ನಿಧಿಧ್ಯಾಸನ, ಧ್ಯಾನೋಪಾಸನಾದಿಗಳು ಮಾಡುವ ಕಾಲ,ನಂತರ ನೀತಗುರುದ್ವಾರಾ ಉಪದೇಶ, ಅಪರೋಕ್ಷಾನಂತರ=ಜೀವಾಂತರ್ಯಾಮಿ ಬಿಂಬದರ್ಶನ, ಸಂಚಿತಾಗಾಮಿ ಕರ್ಮನಾಶ, ಪ್ರಾರಬ್ಧ ಅನುಭೋಕ್ತೃತ್ವ, ನಂತರ=ಆಮೇಲೆ ಲಿಂಗಭಂಗವನು=ತ್ರಿಗುಣಾತ್ಮಕವಾದ ಲಿಂಗ ವಿರಜಾನದಿ ಸ್ನಾನದಿಂದ ನಾಶವಾದ ಮೇಲೆ ಮೋಕ್ಷ. ಈ ಪ್ರಕಾರ ಮುಕ್ತಿಗೆ ಸಾಧನ ಮೆಟ್ಟಲುಗಳು ಇರುವುವು. ಸಾಧುಗಳು=ಒಳ್ಳೆಯ ಯೋಗ್ಯರಾದ, ವಿನಯವುಳ್ಳ ಪರಮಾತ್ಮನಲ್ಲಿ ಭಕ್ತಿಯುಳ್ಳ ಸಜ್ಜನರು, ಚಿತ್ತಯಿಪುದು=ಮನಸುಗೊಟ್ಟು ಆಲಿಸುವುದು. ಎನ್ನಪರಾಧಗಳ ನೋಡದಲೆ=ನನ್ನ ತಪ್ಪುಗಳನ್ನು ಎಣಿಸದಲೆ, ಅಂದರೆ ನಾನೇ ಹೇಳಿದ್ದೇನೆಂದು ತಿಳಿಯಬೇಡಿರಿ ಎಂದು ಸ್ವಾಹಂಕಾರ ಖಂಡನಪೂರ್ವಕ ಸರ್ವಸ್ವತಂತ್ರನಾದ, ಚಕ್ರ ಗದಾಧರನು=ಅಜ್ಞಾನ ನಾಶನ ಮಾಡುವ ಗದೆಯನ್ನೂ, ಚಕ್ರ=ಸೂರ್ಯಕೋಟಿ ಪ್ರಕಾಶಮಾನವಾದ ಸುಜ್ಞಾನಕರ ಚಕ್ರವನ್ನೂ ಧರಿಸಿದ ಶ್ರೀಹರಿಯು ಬಿಂಬರೂಪಿ ಪರಮಾತ್ಮನು. ಪೇಳಿಸಿದ ತೆರದಂದದಲಿ ಪೇಳುವೆನು=ಎನ್ನಲ್ಲಿದ್ದು ಪ್ರೇರಿಸಿ ವಾಙ್ನಿಯಾಮಕನಾಗಿ ಹೇಳಿಸಿದಂತೆ ಹೇಳುವೆನು. ನನ್ನ ಸ್ವಮತಿಯುಳ್ಳವೆಂದು ದಾಸಾರ್ಯರು ವಿನಯದಿಂದ ಹೇಳುತ್ತಾರೆ.

**ಭಾವಸೂಚನ** :—ವೇಧೇತಿ ॥ ಬ್ರಹ್ಮಾ॥೨॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶ್ರೀಮತ್ ಲಾತವ್ಯಾಂತೇವಾಸಿತ್ವಾತ್ ಅತೀತಭವೇ ತತ್ಪ್ರಸಾದಾವಿರ್ಭಾವಿತಾಪಸ್ಯೇಣ ತತ್ಕ್ರಮಾದಿಕಂ ವಿವಕ್ಷುಃ ಭಿನ್ನಾನುಪೂರ್ವ್ಯಾ ಮುಕ್ತಾಮಂಜರೀಂ ಸಂಗೃಹ್ಣನ್ ಚಿಕೀರ್ಷಿತಂ ಪ್ರತಿಜಾನೀತೇ 'ವೇಧ' ಇತಿ ॥ ವೇಧಾಃ ಬ್ರಹ್ಮಾ ॥ ಅಧಿಕಾರಿಣಃ ಆತ್ಮನಾತ್ ॥ 'ಚಿತ್ತಯಿಪುದು' ಚಿತ್ತಕ್ಕೆ ತರಲಿ । "ನ ಪಾಂಡಿತ್ಯಾಭಿಮಾನೇನ ನಾಪಿ ಮತ್ಸರತಃ ಕ್ವಚಿತ್ ॥ ಯತ್ನಃ ತಥಾಪ್ಯರಿಗದಾಧರ ಪೂರ್ವಾಃ ಕ್ರಿಯಾಃ ಮಮ" ॥ ಇತ್ಯಾಹ 'ಚಕ್ರ' ಇತಿ ॥ ೨ ॥

### ಕನ್ನಡಾರ್ಥ

ಪೂರ್ವಜನ್ಮದಲ್ಲಿ ಲಾತವ್ಯರೆಂಬ ಋಜುಗಳಲ್ಲಿ ವ್ಯಾಸಂಗಮಾಡಿದ್ದರು. ಅವರ ಪ್ರಸಾದದಿಂದ ಅಪರೋಕ್ಷಜ್ಞಾನವೂ ಉದಯಿಸಿತು. ಆದುದರಿಂದ ಅಪರೋಕ್ಷಜ್ಞಾನೋತ್ಪತ್ತಿಯ ಕ್ರಮ ಮುಂತಾದವುಗಳನ್ನು ಹೇಳಬಯಸಿ ದಾಸಪರ್ಯರು ಬೇರೆ ಪದಗಳಿಂದ ಮುಕ್ತಾಮಂಜರಿಯನ್ನೇ ಅವರ ವಿಷಯಗಳನ್ನೇ ಹೇಳುತ್ತ ತಮ್ಮ ಮನಸ್ಸಿನಲ್ಲಿದ್ದ ಕರ್ತವ್ಯವನ್ನು ತಿಳಿಸುತ್ತಾರೆ. 'ವೇಧ' ಎಂಬ ಪದ್ಯದಿಂದ.

'ವೇಧ'-ಚತುರ್ಮುಖ ಬ್ರಹ್ಮ. ಅಧಿಕಾರಿಗಳು ತೃಣಜೀವರನ್ನಾರಂಭಿಸಿ, ಚತುರ್ಮುಖನ ವರೆಗಿರುವರು.'ಚಿತ್ತಯಿಸುವು'-ಚಿತ್ತಕ್ಕೆ ತರಲಿ.

ಪಾಂಡಿತ್ಯದಿಂದಾಗಲೀ, ಮಾತ್ಸರ್ಯದಿಂದಾಗಲೀ ನಾವು ಈ ಪ್ರಯತ್ನವನ್ನು ಮಾಡುತ್ತಿರಲಿಲ್ಲ. ನಮ್ಮ ಕ್ರಿಯೆಗಳೆಲ್ಲವೂ ಚಕ್ರಗದಾಧಾರಿ ಶ್ರೀಹರಿಯ ಪ್ರೇರಣೆಯನ್ನನುಸರಿಸಿ, ಅವನು ಮಾಡಿಸಿದಂತೆ ನಡೆಯುವವು ಎಂದು ತಿಳಿಸುತ್ತಾರೆ='ಚಕ್ರಗದಾಧರ' ಎಂಬ ವಾಕ್ಯದಿಂದ ॥೨॥

**ಅವತರಣಿಕಾ** :—ಮೊದಲಿಗೆ ಈ ಪದ್ಯದಲ್ಲಿ ಕರ್ಮಯೋಗಿಗಳಾರು ಎಂಬುದನ್ನು ವಿವರಿಸುತ್ತಾರೆ. ತೃಣ ಜೀವರಾರಂಭಿಸಿ ನರ ಗಂಧರ್ವರ ವರೆಗೆ, ನಿರಂಶ ಜೀವಗಳ ವಿವರ ಹೇಳುತ್ತಾರೆ.

**ತೃಣಕೃಮಿ ದ್ವಿಜ ಪಶು ನರೋತ್ತಮ ।**
**ಜನಪ ನರಗಂಧರ್ವ ಗಣರಿವ ।**
**ರೆನಿಪರಂಶವಿಹೀನ ಕರ್ಮ ಸುಯೋಗಿಗಳು ಯೆಂದು ॥**
**ತನುಪ್ರತೀಕದಿ ಬಿಂಬನ ಉಪಾ ।**
**ಸನವ ಗೈಯ್ಯುತ ಇಂದ್ರಿಯಜ ಕ ।**
**ರ್ಮನವರತ ಹರಿಗರ್ಪಿಸುತ ನಿರ್ಮಮರು ಯೆನಿಸುವರು ॥೩॥**

**ಪದ್ಯಾರ್ಥ** :—೧ ತೃಣ=ತೃಣಜೀವರು ೨ ಕೃಮಿ=ಹುಳಗಳು ಕೀಟಗಳು ೩ ದ್ವಿಜ = ಪಕ್ಷಿಗಳು ೪ ಪಶು=ನಾಲ್ಕು ಕಾಲುಳ್ಳ ಪಶುಗಳು.

೫ ನರೋತ್ತಮ=ಮನುಜ ಶ್ರೇಷ್ಠರು. ೬ ಜನಪ=ರಾಜರುಗಳು, ೭ ನರ ಗಂಧರ್ವಗಣ=ಮನುಜ ಗಂಧರ್ವರು, ಗಣ=ಈ ಏಳು ಗಣ ಸಮೂಹದ ಜೀವರು. ಅಂಶ ವಿಹೀನರ=ನಿರಂಶರು ಅಂದರೆ, ಸ್ವಾಂಶತ್ವ ಶಕ್ತಿ ಇಲ್ಲದವರು, ತತ್ವಾಭಿಮಾನಿ ದೇವತೆಗಳು, ಸೂರ್ಯ ಚಂದ್ರ ಇಂದ್ರಾದಿಗಳಂತೆ ಪ್ರತ್ಯೇಕ ಒಂದೊಂದು ಅಂಶದಿ (ಭಾಗ) ರೂಪದಿಂದ ಪ್ರತಿಯೊಬ್ಬ ಜೀವರ ನೇತ್ರ, ಕರ್ಣಮನಾದಿಪ್ರೇರಕರೋ ಹೇಗೋ ಈ ನಿರಂಶರಿಗೆ ಬೇರೆ ರೂಪ ತೆಗೆದುಕೊಳ್ಳುವ ಶಕ್ತಿ ಇಲ್ಲ ಸುಕರ್ಮಯೋಗಿಗಳೆಂದು=ಸತ್ಕರ್ಮ ಯೋಗಿಗಳು ಎಂದು ಕರೆಸುವರು. ತನುಪ್ರತೀಕದಿ=ತಾವು ಧಾರಣಮಾಡಿದ ಯಾವ ಯೋನಿಯ ಶರೀರದಿ ಬಂದಿರುವರೋ ಅದೇ ಒಂದೇ ದೇಹದಲ್ಲಿ, "ಪ್ರತೀಕಂ ದೇಹಮುದ್ದಿಷ್ಟಂ" ಎಂಬುವಂತೆ; ತಮ್ಮ ಸ್ವಶರೀರ ಹೃದ್ಗತ ಬಿಂಬನ ಉಪಾಸನವ ಗೈಯ್ಯುತ=ಬಿಂಬ ರೂಪಿ ಶ್ರೀ ಹರಿಯ ಧ್ಯಾನೋಪಾಸನೆಮಾಡುತ್ತ, ಅನವರತ=ನಿತ್ಯದಲ್ಲಿ ಸದಾ, ಇಂದ್ರಿಯಜ ಕರ್ಮ=ಪಂಚ ಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯಗಳಿಂದ ಆಗುವ ಕರ್ಮ ಕ್ರಿಯೆ ಕೆಲಸಗಳನ್ನು ಸದಾ, ಹರಿಗರ್ಪಿಸುತ=ಶ್ರೀ ಬಿಂಬರೂಪಿ ಹರಿಗೆ ವಾಯುದೇವರ ದ್ವಾರಾ ಅರ್ಪಣೆಮಾಡುತ್ತ, ನಿರ್ಮಮರು ಎನಿಸುವರು=ನಾನು ನನ್ನದೆಂಬ ಅಹಂಕಾರವನ್ನು ಬಿಟ್ಟವರೆಂದು ಕರೆಸುತ್ತಾರೆ. ಅಂದರೆ ಸಾಮಾನ್ಯ ಮುಕ್ತಿಯೋಗ್ಯರು. ಶ್ರೀ ಹರಿಯೇ ಸರ್ವಕರ್ತಾ, ನಾನು ಸರ್ವಥಾ ಕರ್ತನಲ್ಲವೆಂಬ ಅಹಂಕಾರ ವರ್ಜಿತ ಜ್ಞಾನ ಉಳ್ಳವರು.

**ಭಾವಸೂಚನ** ॥ ತೃಣೇತಿ ॥ ಪ್ರಕಾಶಸಂಹಿತಾಯಾಂ ॥ ತೃಣಾದಿ ಮರ್ತ್ಯಗಂಧರ್ವಾಃ ಪರ್ಯಂತಾಸ್ತ್ರೇಸ್ತ್ವನಂತಶಃ ॥ ನಿರಂಶಾಸ್ತೇ ಪ್ರತೀಕಾವಲಂಬಾಸ್ತೇ ಕರ್ಮಯೋಗಿನಃ ॥ ಪ್ರತೀಕಸ್ಥಂ ಶರೀರಸ್ಥಂ ಪಶ್ಯಂತೀತಿ ತದಾಖ್ಯಯಾ ಇತಿ ॥ ೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಭಕ್ತಿ ಜ್ಞಾನ ಸುಕರ್ಮಾಹ್ವಾಃ ತ್ರಿಧೈತೇ ಯೋಗಿನೋ ಮತಾಃ ॥ "ಏಕಾದಶಸ್ಕಂಧ ವಿಂಶಾಧ್ಯಾಯತಾತ್ಪರ್ಯಗೇ ಶುಭೇ ॥ ತ್ರಿಯೋಗೇ

ತಾರತಮ್ಯಂ ಚ ತೇಷು ತತ್ರೈವ ಕೀರ್ತಿತಮ್ ॥ ಯಥಾಹಾನಂದ ತೀರ್ಥಾಖ್ಯಃ ಜಗದ್ಬಂಧುಃ ಯದೂತ್ತಮಃ ॥ ಉತ್ತಮೋ ಭಕ್ತಿಯೋಗಸ್ತು ಜ್ಞಾನಯೋಗಸ್ತು ಮಧ್ಯಮಃ ॥ ಅಧಮಃ ಕರ್ಮಯೋಗಶ್ಚ ಬ್ರಹ್ಮೈಕೋ ಮುಖ್ಯ ಭಕ್ತಿಭಾಕ್ ॥ ಸನಕಾದ್ಯಾಃ ಜ್ಞಾನಯೋಗಾಃ ಭಕ್ತಿಯೋಗಾಸ್ತು ಮಧ್ಯಮಾಃ ॥ ಮಾನುಷಾಃ ಕರ್ಮಯೋಗಾಶ್ಚ ತ್ರಿಧೈತೇ ಯೋಗಿನಃ ಸ್ಮೃತಾಃ ॥ ಸರ್ವೇಷಾಂ ಸರ್ವಯೋಗೈಶ್ಚ ಪ್ರಾಪ್ಯಾ ಮುಕ್ತಿಃ ನ ಸಂಶಯಃ ॥ ತಥಾಪಿ ತು ವಿಶೇಷೇಣ ಸದಾ ತೇಷಾಂ ವಿಧೀಯತೇ ॥ ಭಗವದ್ಗುಣಾನುಸಾರೇಣ ವೇದಾರ್ಥೋ ನೀಯತೇ ಹಿ ಯೈಃ ॥ ಭಕ್ತಿಯೋಗಾಸ್ತು ತೇ ಪ್ರೋಕ್ತಾಃ ತಾದೃಶಾಃ ಹಿ ಸುರಾಃ ಸದಾ ॥ ಅಂಗಾನುಸಾರಿ ವೇದಾರ್ಥಂ ಜ್ಞಾತ್ವಾ ತದನುಸಾರತಃ ॥ ಭಗವದ್ಗುಣಾಃ ಯೈರ್ನೀಯಂತೇ ತೇ ಪ್ರೋಕ್ತಾಃ ಜ್ಞಾನಯೋಗಿನಃ ॥ ಕರ್ಮಾಣಿ ಶಾಸ್ತ್ರತಃ ಜ್ಞಾತ್ವಾ ತತ್ಪ್ರಾಧಾನ್ಯಾನುಸಾರತಃ ॥ ವಿಜ್ಞಾತಾಃ ಯೈಃ ಗುಣಾಃ ವಿಷ್ಣೋಃ ಜ್ಞೇಯಾಃ ತೇ ಕರ್ಮಯೋಗಿನಃ ॥ ಭಕ್ತಿಃ ಜ್ಞಾನಂ ತು ಕಿಂಚಿತ್ತು ಪಶ್ಚಾತ್ ತೇಷ್ವಪಿ ಜಾಯತೇ ॥ ತಥಾಪಿ ಕರ್ಮಯೋಗಾಸ್ತೇ ಕರ್ಮಪೂರ್ವತ್ವಕಾರಣಾತ್ ॥ ಭಗವದ್ಗುಣಾನುಸಾರಿತ್ವಂ ಅಧಿಕಂ ಭಕ್ತಿ-ಯೋಗಿನಾಮ್ ॥ ಈಷದ್ವೈರಾಗ್ಯಮಲ್ಪಂ ತು ಪೂರ್ವಂ ದೇವೇಷು ವರ್ತತೇ ॥ ಪಶ್ಚಾತ್ ವಿರಾಗೋಽಪ್ಯಧಿಕಃ ದೇವಾನಾಂ ನಾತ್ರ ಸಂಶಯಃ ॥ ಜ್ಞಾನಾಧಿಕ್ಯಂ ತು ದೇವಾನಾಂ ಭಕ್ತ್ಯಾಧಿಕ್ಯಂ ತಥೈವ ಚ ॥ ವಿರಾಗೋ-ಽಪ್ಯಧಿಕಃ ತೇಷಾಂ ಸದೈವ ಸನಕಾದೀನಾಮ್ ॥ ಜ್ಞಾನಾಧಿಕ್ಯಾತ್ ಮನುಷ್ಯೇಭ್ಯಃ ಭಣ್ಯಂತೇ ಜ್ಞಾನಯೋಗಿನಃ ॥ ನ ತು ಜ್ಞಾನಾಧಿಕಾಃ ತೇ ವೈ ದೇವೇಭ್ಯಸ್ತು ಕಥಂಚನ ॥ ದೇವಾನಾಮಪಿ ಕರ್ಮಿತ್ವಂ ವಿದ್ಯತೇ ಯದ್ಯಪಿ ಸ್ಫುಟಮ್ ॥ ತಥಾಪಿ ಪ್ರತ್ಯವಾಯಿತ್ವಾತ್ ಮನುಷ್ಯಾಃ ಕರ್ಮಯೋಗಿನಃ ॥ ತ್ರಿಯೋಗಾಭ್ಯಧಿಕಃ ಬ್ರಹ್ಮಾ" ಇತಿ ॥ ಏಷು ಕರ್ಮಯೋಗಾಃ ನಿರಂಶಾಃ ॥ ಪ್ರತೀಕೇ ಹ್ಯದ್ಯೈವ ಹರಿಂ ಪಶ್ಯಂತಃ ನ ತು ವ್ಯಾಪ್ತತಯಾ ಕ್ವಾಪಿ ॥ ಭೋಗಪಾದೇ ಚ "ಪ್ರತೀಕಃ ದೇಹ ಉದ್ದಿಷ್ಟಃ" ಇತಿ ॥ ತೃಣಾದಿ ಮರ್ತ್ಯಗಂಧರ್ವಪರ್ಯಂತಾಸ್ತೇ ಹ್ಯನಂತಶಃ ॥ ನಿರಂಶಾಸ್ತೇ ಪ್ರತೀಕಾಲಂಬನಾಃ ತೇ ಕರ್ಮಯೋಗಿನಃ ॥ ಪ್ರತೀಕಸ್ಥಂ

ಶರೀರಸ್ಥಂ ಹರಿಂ ಪಶ್ಯಂತಿ ಇತಿ ತದಾಶ್ಚರ್ಯಾಃ ॥ 'ಜನಪಾಃ' ಹೈಹಯಾದಿಶತಾನ್ಯೇ ॥ ೩ ॥

## ಕನ್ನಡಾರ್ಥ

ಭಕ್ತಿಯೋಗಿ, ಜ್ಞಾನಯೋಗಿ, ಕರ್ಮಯೋಗಿ ಹೀಗೆ ಯೋಗಿಗಳಲ್ಲಿ ಮೂರು ತರವಿರುವುದು ಪ್ರಸಿದ್ಧ. ಹನ್ನೊಂದನೆಯ ಸ್ಕಂಧದ ಇಪ್ಪತ್ತನೆಯ ಅಧ್ಯಾಯದ ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಈ ಮೂರು ಯೋಗಗಳಲ್ಲಿ ತಾರತಮ್ಯವನ್ನು ಅಲ್ಲೇ ಅಲ್ಲಲ್ಲಿ ನಿರೂಪಿಸಿರುತ್ತಾರೆ.

"ಭಕ್ತಿಯೋಗವು ಉತ್ತಮ; ಜ್ಞಾನಯೋಗವು ಮಧ್ಯಮ; ಕರ್ಮಯೋಗವು ಅಧಮ; ಬ್ರಹ್ಮದೇವನೊಬ್ಬನೇ ಮುಖ್ಯ ಭಕ್ತಿಯುಳ್ಳವನು; ಸನಕ ಮುಂತಾದವರು ಜ್ಞಾನ ಯೋಗಿಗಳು. ಅವರು ಭಕ್ತಿಯೋಗಿಗಳಿಂದ ಕಡಮೆಯವರು. ಮನುಷ್ಯರು ಕರ್ಮಯೋಗಿಗಳು. ಹೀಗೆ ಯೋಗಿಗಳು ಮೂರು ವಿಧರೆಂದು ಪ್ರಸಿದ್ಧವಿದೆ. ಸರ್ವರಿಗೂ ಸರ್ವ ಯೋಗಗಳಿಂದಲೂ ಮುಕ್ತಿಯು ದೊರೆಯುತ್ತದೆ. ಇದರಲ್ಲಿ ಸಂಶಯವಿಲ್ಲ. ಆದರೂ ಅದರಲ್ಲಿ ವಿಶೇಷವಿದ್ದುದರಿಂದ ಅವರವರಿಗೆ ಆ ಯೋಗಗಳು ವಿಹಿತವಾಗಿರುತ್ತವೆ. ಭಗವಂತನ ಗುಣಗಳನ್ನನುಸರಿಸಿ ವೇದಗಳಿಗೆ ಅರ್ಥವನ್ನು ಸದಾ ತಿಳಿಯುವವರು ಭಕ್ತಿಯೋಗಿಗಳೆನಿಸಿದವರು; ಅವರು ದೇವತೆಗಳು. ಅಂಗಗಳನ್ನನುಸರಿಸಿ ವೇದಾರ್ಥಗಳನ್ನು ತಿಳಿದು, ಅವನ್ನನುಸರಿಸಿ, ಭಗವದ್ಗುಣಗಳನ್ನು ತಿಳಿಯುವವರು ಜ್ಞಾನಯೋಗಿಗಳು. ಶಾಸ್ತ್ರಗಳಿಂದ ಕರ್ಮಗಳನ್ನು ಅರಿತು, ಅವುಗಳ ಪ್ರಾಧಾನ್ಯವನ್ನು ಅನುಸರಿಸಿ, ವಿಷ್ಣುವಿನ ಗುಣಗಳನ್ನು ತಿಳಿಯ ತಕ್ಕವರು ಕರ್ಮಯೋಗಿಗಳು. ಜ್ಞಾನ ಭಕ್ತಿಗಳು ಸ್ವಲ್ಪ ಸ್ವಲ್ಪ ಪ್ರಮಾಣಗಳಲ್ಲಿ ವಿಷ್ಣುಗುಣ ಜ್ಞಾನವಾದ ಅನಂತರ ಕರ್ಮಯೋಗಿಗಳಿಗೂ ಬರುತ್ತದೆ. ಆದರೂ ಪೂರ್ವದಲ್ಲಿ ಕರ್ಮವಿರುವುದರಿಂದ ಕರ್ಮಯೋಗಿಗಳೆನಿಸುವರು. ಭಕ್ತಿಯೋಗಿಗಳು ಭಗವಂತನ ಗುಣಗಳನ್ನು ಹೆಚ್ಚಾಗಿ ಅನುಸರಿಸುತ್ತಾರೆ. ಅಲ್ಪ ಸ್ವಲ್ಪ ವೈರಾಗ್ಯವು ಪೂರ್ವದಲ್ಲಿ ದೇವತೆಗಳಲ್ಲಿ ಇರುತ್ತದೆ. ಆದರೂ ಅನಂತರ ವೈರಾಗ್ಯವೂ, ಭಕ್ತಿಯೂ ಅಧಿಕವಾಗುವುದು. ಇದರಲ್ಲಿ ಸಂಶಯವಿಲ್ಲ. ದೇವತಗಳ ಜ್ಞಾನವೂ, ಭಕ್ತಿಯೂ,

ವೈರಾಗ್ಯವೂ ಎಲ್ಲರ ಜ್ಞಾನಾದಿಗಳಿಗಿಂತ ಅಧಿಕವಿರುತ್ತವೆ. ಸನಕ ಮುಂತಾದವರಲ್ಲಿ ಮನುಷ್ಯರಿಗಿಂತ ಹೆಚ್ಚಿನ ಜ್ಞಾನವು ಇರುವುದು. ಈ ಕಾರಣದಿಂದಲೇ ಅವರಿಗೆ ಜ್ಞಾನಯೋಗಿಗಳೆನ್ನುತ್ತಾರೆ. ಹೊರತು ದೇವತೆಗಳಿಗಿಂತಲೂ ಅವರು ಜ್ಞಾನದಲ್ಲಿ ಹೆಚ್ಚಿನವರಲ್ಲ. ಇನ್ನು ದೇವತೆಗಳೂ ಕರ್ಮಿಗಳಾಗಿರುತ್ತಾರೆ. ಆದರೂ ಕರ್ಮಮಾಡದಿದ್ದರೆ ಪ್ರತ್ಯವಾಯವು ಮಾತ್ರ ಮನುಷ್ಯರಿಗೆ ಇರುವುದರಿಂದ ಮನುಷ್ಯರೇ ಕರ್ಮಯೋಗಿಗಳೆನಿಸುವರು. ಈ ಮೂರು ಯೋಗಿಗಳಲ್ಲಿ ಬ್ರಹ್ಮನು ಸರ್ವಾಧಿಕನು.

ಈ ಯೋಗಿಗಳಲ್ಲಿ ಕರ್ಮಯೋಗಿಗಳು ನಿರಂಶರು-ಅಂಶವಿಲ್ಲದವರು. ಪ್ರತೀಕ-ಹೃದಯದಲ್ಲಿಯೇ ಹರಿಯನ್ನು ನೋಡುವವರು; ವ್ಯಾಪ್ತವಾಗಿರುವ ಹರಿಯನ್ನು ಎಂದೂ ನೋಡದವರು. ಭೋಗ ಪಾದದಲ್ಲಿ ದೇಹಕ್ಕೆ ಪ್ರತೀಕವೆಂದು ಕರೆದಿರುತ್ತಾರೆ. ತೃಣ ಜೀವರನ್ನಾರಂಭಿಸಿ, ಮನುಷ್ಯ ಗಂಧರ್ವರವರೆಗಿನ ಈ ಜೀವರು ಅನಂತವಿರುತ್ತಾರೆ. ಹಾಗೂ ನಿರಂಶರಾಗಿರುತ್ತಾರೆ. ಇವರು ಪ್ರತೀಕಾಲಂಬನರು. ಇವರು ಕರ್ಮಯೋಗಿಗಳು. ಪ್ರತೀಕದಲ್ಲಿ ಇರುವ ಶ್ರೀ ಹರಿಯನ್ನು ನೋಡುವರು. ಆದುದರಿಂದ ಪ್ರತೀಕಾಲಂಬನರೆಂಬ ಹೆಸರು ಇವರಿಗೆ ಬಂದಿರುತ್ತದೆ.

ಈ ಪದ್ಯದಲ್ಲಿರುವ "ಜನಪ" ಎಂಬ ಪದಕ್ಕೆ "ಹೈಹಯ" ಮುಂತಾದ ನೂರು ರಾಜರನ್ನು ಬಿಟ್ಟು ಉಳಿದ ರಾಜರೆಂದು ಅರ್ಥಮಾಡಬೇಕು. ॥ ೩ ॥

**ಅವತರಣಿಕಾ:—** ಹಿಂದಿನ ಪದ್ಯದಲ್ಲಿ ಹೇಳಿದ ಏಳು ವಿಧರಾದ ಜೀವರುಗಳ ಸಂಖ್ಯಾ ಇಷ್ಟೆ ಎಂದು ಇಲ್ಲ. ಬಹಳ ಜೀವರುಂಟು. ಮತ್ತು ಅವರು ಸಾಧನಮಾಡಲು ಬ್ರಾಹ್ಮಣಕುಲದಲ್ಲೇ ಹುಟ್ಟಿ ಸಾಧನಮಾಡುತ್ತಾರೆಂದು ಕರ್ಮಯೋಗಿಗಳ ಲಕ್ಷಣ ಹೇಳುತ್ತಾರೆ.

**ಏಳು ವಿಧ ಜೀವಗಣ ಬಹಳ ಸು ।**
**ರಾಳಿ ಸಂಖ್ಯಾ (ನೀ) ನೇಮವುಳ್ಳದು ।**

**ತಾಳಿ ನರದೇಹವನು ಬ್ರಾಹ್ಮಣರ ಕುಲದೊಳುದ್ಭವಿಸಿ ॥**
**ಸ್ಥೂಲಕರ್ಮವ ತೊರೆದು ಗುರುಗಳು ।**
**ಪೇಳಿದರ್ಥವ ತಿಳಿದು ತತ್ತ ।**
**ತ್ಕಾಲ ಧರ್ಮ ಸಮರ್ಪಿಸುವವರು ಕರ್ಮಯೋಗಿಗಳು ॥ ೪ ॥**

**ಪದ್ಯಾರ್ಥ**:— ಏಳುವಿಧ=ಏಳು ಬಗೆಯ, ಜೀವಗಣ=ಜೀವ ಸಮೂಹಗಳು, ಬಹಳ=ಬಹು ಜನರು ಅಸಂಖ್ಯಾಕರು, ಆದರೆ ಸುರಾಳಿ ಸಂಖ್ಯಾನೇಮವುಳ್ಳದು=ದೇವತೆಗಳ ಸಮೂಹದ ಗಣನೆ ಲೆಕ್ಕ ಇಷ್ಟೆ ಇರುವ ರೆಂದು ನಿಯಮವಾಗಿದೆ. ದೇವತೆಗಳ ಸಮೂಹ ಸಂಖ್ಯಾನಿಯಮದಂತೆ ನಿರಂಶರು ಇಷ್ಟೇ ಸಂಖ್ಯಾಕರೆಂಬ ನಿಯಮವಿಲ್ಲ ಬಹು ಸಂಖ್ಯಾಕರು. ಇವರು ಅನೇಕ ಯೋನಿಯಲ್ಲಿಯೂ ಪುಟ್ಟಿ, ಕೊನೆಗೆ, ತಾಳಿ ನರದೇಹ ವನು=ಮನುಷ್ಯ ಯೋನಿಯಲ್ಲಿಯೂ ಹುಟ್ಟುತ್ತಾ, ತಾಳಿ = ಧರಿಸಿ, ಬ್ರಾಹ್ಮಣ ಕುಲದೊಳುದ್ಭವಿಸಿ=ಬ್ರಹ್ಮನನ್ನು ಹೊಂದಲು, ಬ್ರಹ್ಮಜ್ಞಾನ ವನ್ನು ಸಾಧನಮಾಡುವುದಕ್ಕೆ ಯೋಗ್ಯವಾದ ಬ್ರಾಹ್ಮಣ=ದ್ವಿಜಕುಲದಲ್ಲಿ ಪುಟ್ಟಿ ಪುಟ್ಟುತ್ತಾ, ಸ್ಥೂಲಕರ್ಮವ ತೊರೆದು=ಬಹಿರಂಗ ಆಚರಿಸುತಿಪ್ಪ ಜಡಕರ್ಮಗಳಲ್ಲಿ ಫಲರಹಿತರಾಗಿ, ಕಾಮ್ಯಕರ್ಮಗಳನ್ನು ತ್ಯಜಿಸುತ್ತಾ, ಗುರುಗಳು ಪೇಳಿದರ್ಥವ ತಿಳಿದು=ಗುರು=ಅಜ್ಞಾನವನ್ನು ನಾಶಗೈಸಿ- ಸುಜ್ಞಾನವನ್ನು ಕೊಡುವರಿಗೆ ಗುರು ಎಂದು ಶಾಸ್ತ್ರನಿಯಮ. ಗುರುಗಳು= ಗುರುಗಳಿಗೆ ಮಾನ್ಯಾರ್ಥವಾಗಿ ಬಹುವಚನ, ಅಥವಾ ಜ್ಞಾನಿಗಳಲ್ಲಿ ಉತ್ತ ಮೋತ್ತಮರುಗಳು ಅನೇಕ ಗುರುಗಳೆಂದೂ, ಅನೇಕ ಜನ್ಮಗಳಲ್ಲಿ ಅನೇಕ ಗುರುಗಳೆಂದೂ ಅರ್ಥವಾಗುತ್ತದೆ. ಇಂತಹ ಗುರುಗಳು ಪೇಳಿದರ್ಥವ ತಿಳಿದು=ಗ್ರಂಥಾದಿ ಶ್ರವಣ ದ್ವಾರಾ ಮಾತ್ರವಲ್ಲದೇ, ಗ್ರಂಥದ ವಾಕ್ಯಗಳ ಅರ್ಥವನ್ನು ಚನ್ನಾಗಿ ತಿಳಿದು ಮನನ ಮಾಡಬೇಕೆಂಬ ಭಾವ; ತತ್ಕಾಲ ಧರ್ಮ=ಆಯಾ ಕಾಲದಲ್ಲಿ, ಜೀವನಸ್ವರೂಪ ಯೋಗ್ಯತೆ ಕರ್ಮ ಪ್ರೇರಿಸಿ, ಆಯಾ ಗುಣ ಧರ್ಮ ಪ್ರವರ್ತಕ ಶ್ರೀ ಹರಿಯೆಂದೇ ತಿಳಿದು ಆ ಕರ್ಮ ಗುಣ ಧರ್ಮಗಳನ್ನು ಶ್ರೀ ವಾಯ್ವಂತರ್ಗತ ಶ್ರೀ ಹರಿಗೆ ಸಮರ್ಪಿಸುವರು= ಅರ್ಪಣೆಮಾಡುವರು ಕರ್ಮಯೋಗಿಗಳು.

ಕರ್ಮಾಣಿ ಶಾಸ್ತ್ರತೋ ಜ್ಞಾತ್ವಾ ತತ್ಪ್ರಧಾನಾನುಸಾರತಃ ॥
ವಿಜ್ಞಾತಾ ಯೈರ್ಗುಣಾಃ ವಿಷ್ಣೋರ್ಜ್ಞೇಯಾಸ್ತೇ ಕರ್ಮಯೋಗಿನ
ಇತಿ ಪ್ರಕಾಶಸಂಹಿತಾಯಾಮ್ ॥

**ಭಾವಸೂಚನ** ॥ ಏಳೇತಿ ॥ ಉಕ್ತಮೇತತ್ ಸತ್ವಸತ್ವರೇತಿ ಪದ್ಯ ವ್ಯಾಖ್ಯಾನವಸರೇ ॥ ೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಏಳು' ಇತಿ ॥ 'ಬಹಳ' ಅಸಂಖ್ಯಾತ 'ಸಂಖ್ಯಾನೇಮವುಳ್ಳದ್ದು' ಯುಕ್ತ ॥ ೪ ॥

## ಕನ್ನಡಾರ್ಥ

'ಬಹಳ'ವೆಂಬುದಕ್ಕೆ ಅಸಂಖ್ಯ, ಅನಂತ ಎಂದು ಅರ್ಥಮಾಡಬೇಕು. ಈ ಪದವನ್ನು 'ಏಳು ವಿಧ ಜೀವಗಣಕ್ಕೆ' ಅನ್ವಯಿಸಿಬೇಕು.

'ಸಂಖ್ಯಾನೇಮವುಳ್ಳದ್ದು' ಈ ಪದಕ್ಕೆ ಸಂಖ್ಯಾನೇಮಯುಕ್ತವೆಂದು ಅರ್ಥ. ಅಂದರೆ 'ಇಂತಿಷ್ಟೇ ಸುರರು' ಎಂಬ ನಿಯತವಾದ ಸಂಖ್ಯೆಯಲ್ಲಿಯೇ ಇರುವವರು. ॥ ೪ ॥

**ಅವತರಣಿಕಾ** :—ಈ ಕರ್ಮಯೋಗಿಗಳು ಮನುಜಜನ್ಮ ತಾಳಿ, ಬ್ರಾಹ್ಮಣ ಕುಲದಲ್ಲಿ ಹುಟ್ಟಿ, ಸರ್ವೋತ್ತಮನು ಹರಿಯೆಂಬ ಜ್ಞಾನ ಭಕ್ತ್ಯಾದಿಗಳಿಂದ ಸಾವಿರ ಜನ್ಮದಲ್ಲಿ ಬಿಡದೆ ಸತ್ಕರ್ಮ ಮಾಡಿ ಹರಿಗರ್ಪಿಸುವರೆಂದು ಇವರ ಸಾಧನ ವಿವರಿಸುತ್ತಾರೆ.

**ಹೀನ ಕರ್ಮಗಳಿಂದ ಬಹು ವಿಧ ।**
**ಯೋನಿಯಲಿ ಸಂಚರಿಸಿ ಪ್ರಾಂತಕೆ ।**
**ಮಾನುಷತ್ವವ ನೈದಿ ಸರ್ವೋತ್ತಮನು ಹರಿಯೆಂಬ ॥**
**ಜ್ಞಾನ ಭಕ್ತಿಗಳಿಂದ ವೇದೋ- ।**
**ಕ್ತಾನುಸಾರ ಸಹಸ್ರ ಜನ್ಮಾ ।**
**ನ್ಯೂನ ಕರ್ಮವ ಮಾಡಿ ಹರಿಗರ್ಪಿಸಿದ ನಂತರದಿ ॥ ॥ ೫ ॥**

**ಪದ್ಯಾರ್ಥ** :—ಹೀನ ಕರ್ಮಗಳಿಂದ=ಮೊದಲಿಗೆ ಈ ಕರ್ಮಯೋಗಿಗಳಾದ ಜೀವರು, ಶಾಸ್ತ್ರ ಅವಿಹಿತವಾದ ಕರ್ಮವೇ ಹೀನ ಕೆಟ್ಟ ಕರ್ಮಗಳನ್ನು ಮಾಡಿದ್ದಕ್ಕೆ,ಬಹು ವಿಧ=ನಾನಾ ಪ್ರಕಾರವಾದ ಲಕ್ಷಲಕ್ಷ ಯೋನಿಯಲ್ಲಿ, ಸಂಚರಿಸಿ=ತಿರುಗಿ, ತಿರುಗಿ ಹುಟ್ಟುತ್ತ, ಪ್ರಾಂತಕೆ=ಹೀನಕರ್ಮಗಳ ಫಲ ಅನುಭೋಗ ಮುಗಿದ ಮೇಲೆ ಕೊನೆಗೆ, ಮಾನುಷತ್ವವನೈದಿ=ಮನುಜ ಯೋನಿಯಲ್ಲಿ ಪುಟ್ಟ (ಅದರಲ್ಲಿಯೂ ವೇದೋಕ್ತಾನುಸಾರ ಕರ್ಮ ಆಚರಿಸಲು ಶಾಸ್ತ್ರನಿಯಮದಂತೆ ಬಿಡದೆ ಸಾಲಾಗಿ ಒಂದರಿಂದೊಂದು ಬ್ರಾಹ್ಮಣ ಜನ್ಮದಲ್ಲಿ ಪುಟ್ಟಬೇಕು) ಏಕೆಂದರೆ ಜ್ಞಾನಭಕ್ತಿಗಳಿಂದ ಸಮೀಚೀನವಾದ ತಾರತಮ್ಯ, ಪಂಚಭೇದ ತಿಳುವಳಿಕೆಯಿಂದ ಮತ್ತು ಹರಿಗುರುಗಳಲ್ಲಿ ತರತಮ ಭಾವವೆಂಬ ಭಕ್ತಿವಿಶೇಷಗಳಿಂದ, ಸರ್ವೋತ್ತಮನು ಹರಿಯೆಂಬ= ಶ್ರೀಹರಿಯೇ ಎಲ್ಲರಿಂದಲೂ ಉತ್ತಮನೆಂಬ ಸುಜ್ಞಾನದಿಂದ ವೇದೋಕ್ತಾನುಸಾರ=ವೇದಗಳಲ್ಲಿ ಪೇಳಿದ ವಿಹಿತಕರ್ಮಗಳನ್ನು, ಸಹಸ್ರ ಜನ್ಮ=ಒಂದು ಸಾವಿರ ಬ್ರಾಹ್ಮಣ ಜನ್ಮಗಳಲ್ಲಿ, ಅನ್ಯೂನ=ನ್ಯೂನ ಕಡಮೆಯಾಗದಿದ್ದ ಸಂಪೂರ್ಣವಾದ, ಶ್ರೀಹರಿಯಿಂದ ಪ್ರೀತರಾಗಿ ಮಾಡಿ, ಹರಿಗರ್ಪಿಸಿದ ಕರ್ಮಗಳೇ ಅನ್ಯೂನ=ಕೊರತೆಯಾಗದಿದ್ದ, ಸಂಪೂರ್ಣ ಫಲ ಕೊಡತಕ್ಕ ನಿಷ್ಕಾಮ ಕರ್ಮಗಳನ್ನು ಮಾಡುತ್ತ. ಹರಿಗೆ ಅರ್ಪಿಸಿದ ನಂತರದಿ= ಶ್ರೀ ಬಿಂಬರೂಪಿ ಪರಮಾತ್ಮನ ಪಾದದಲ್ಲಿ ಶ್ರೀಕೃಷ್ಣನಿಪ್ಪ ಪ್ರಾಜ್ಞಗೆ ಶ್ರೀ ಕೃಷ್ಣಾರ್ಪಣ ಪೂರ್ವಕದಿ ಈ ಎಲ್ಲ ವಿಹಿತ ಕರ್ಮಗಳನ್ನು ಅರ್ಪಿಸಬೇಕು. ನಂತರದಿ=ಆಮೇಲೆ (ಮುಂದಿನ ಪದ್ಯದಲ್ಲಿ)

**ಭಾವಸೂಚನ** :— ಹೀನೇತಿ ನ್ಯೂನೇತಿ ॥ ಸಾಧಾರಣ ॥ ವೇದೇತಿ ॥ "ಕರ್ಮಾಣಿ ಶಾಸ್ತ್ರತೋ ಜ್ಞಾತ್ವಾ ತತ್ಪ್ರಾಧಾನ್ಯಾನುಸಾರತಃ॥ ವಿಜ್ಞಾತಾಃ ಯೈ್ಯೊಃ ಗುಣಾಃ ವಿಷ್ಣೋಃ ಜ್ಞೇಯಾಸ್ತೇ ಕರ್ಮಯೋಗಿನ।ಇತಿ ಪ್ರಕಾಶಸಂಹಿತಾಯಾಮ್ ॥ ೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಹೀನ" ಇತಿ ॥ "ಅನ್ಯೂನ"-ನ್ಯೂನವಲ್ಲದ. "ಕರ್ಮ" ಅನೇನ ಪೂರ್ವಂ ತ್ಯಾಜ್ಯಂ ಸ್ಥೂಲಂ ಪ್ರವೃತ್ತಮಿತಿ ಜ್ಞೇಯಮ್ ॥ ೫ ॥

## ಕನ್ನಡಾರ್ಥ

ಸಹಸ್ರ ಜನ್ಮಾನ್ಯೂನವೆಂದರೆ ಸಾವಿರ ಜನ್ಮ ಕಡಮೆಯಾಗದಿರುವ ಜನ್ಮಗಳಿಂದ ಎಂದು ಅರ್ಥ. ಅಷ್ಟು ಜನ್ಮಗಳಿಂದ ಕರ್ಮವನ್ನು ಮಾಡು ತ್ತಾರೆ. ಹಿಂದಿನ ಪದ್ಯದಲ್ಲಿ ಹೇಳಿದ ಸ್ಥೂಲಕರ್ಮಗಳನ್ನು ತೋರಿದಿರು ತ್ತಾರೆ. ಆದರೂ ಅಂಥ ಕರ್ಮಗಳು ಪ್ರವೃತ್ತವಾಗಿಯೇ ಇರುವವೆಂದು ತಿಳಿಯಬೇಕು. ॥ ೫ ॥

**ಅವತರಣಿಕಾ:**— ಕರ್ಮಯೋಗಿಗಳು ನಿರಂತರ ಬಿಡದೇ ಸಾವಿರ ಜನ್ಮದಲ್ಲಿ ಕರ್ಮಮಾಡಿಹರಿಗೆ ಅರ್ಪಿಸಿದ ಮೇಲೆ ಪುನಃ ಹತ್ತು ಜನ್ಮ ಗಳಲ್ಲಿ ಜ್ಞಾನಪ್ರಾಚುರ್ಯದಿಂದ ಶ್ರೀ ಭಗವದುಪಾಸನೆ ಮಾಡುವರೆಂದು ಶಾಸ್ತ್ರನಿಯಮ ವಿವರಿಸುತ್ತಾರೆ.

**ಹತ್ತು ಜನ್ಮಗಳಲ್ಲಿ ಹರಿಸ।**
**ರ್ವೋತ್ತಮ ಸುರಾಸುರ ಗಣಾರ್ಚಿತ।**
**ಚಿತ್ರಕರ್ಮ ವಿಶೋಕನಂತಾ ನಂತ ರೂಪಾತ್ಮ॥**
**ಸತ್ಯ ಸತ್ಸಂಕಲ್ಪ ಜಗದು।**
**ತ಼್ಪತ್ತಿ ಸ್ಥಿತಿ ಲಯ ಕಾರಣ ಜರಾ।**
**ಮೃತ್ಯುವರ್ಜಿತನೆಂಬುಪಾಸನೆ ಗೈದ ತರುವಾಯ ॥ ೬ ॥**

**ಪದಾರ್ಥ** :—ಹತ್ತು ಜನ್ಮಗಳಲ್ಲಿ=ಈ ಹತ್ತು ಜನ್ಮಗಳಾದರೂ ಜ್ಞಾನ ಪ್ರಾಚುರ್ಯ ಜನ್ಮಗಳು ಬ್ರಾಹ್ಮಣ ಜನ್ಮಗಳಾಗಿರಲಿಕ್ಕೇ ಬೇಕು. ಇಂಥ ಹತ್ತು ಜನುಮಗಳಲ್ಲಿ ಗುರು ಮುಖದ್ವಾರಾ ವಿಶೇಷಜ್ಞಾನ ಸಂಪಾ ದಿಸಬೇಕು.ಆ ಜ್ಞಾನ ಲಕ್ಷಣವನ್ನು ಪೇಳುತ್ತಾರೆ.ಹರಿಸರ್ವೋತ್ತಮ=ಬಿಂಬ ರೂಪಿ ಹರಿಯೇ ಎಲ್ಲರಿಂದಲೂ ಶ್ರೇಷ್ಠತಮನು. ಮತ್ತು ಸುರಾ ಸುರಗಣಾ ರ್ಚಿತ=ಸುರಗಣ=ಅಮುಕ್ತ ದೇವತೆಗಣ, ಅಸುರಗಣ=ಇಲ್ಲಿ ದೈತ್ಯಗಣ ವೆಂದು ಅರ್ಥಮಾಡಬಾರದು.ಅಸು ಎಂದರೆ–"ಅಸುಭಿಃ ಸ್ವರೂಪೇಂದ್ರಿಯೈಃ ಚಿನ್ಮಾತ್ರೈಃ ರಮಂತೇ ಸ್ವರೂಪಾನಂದಮನುಭವಂತೀತ್ಯಸುರಾಃ ॥" ತಾತ್ಪರ್ಯ ನಿರ್ಣಯ ಟೀಕಾ ವರದರಾಜೀಯ ಮತ್ತು"**ವಂದೇ ಭವಘ್ನ**

**ಮಮರಾಸುರಸಿದ್ಧವಂದ್ಯಮ್**" ಎಂದು ಶ್ರೀ ಭಗವತ್ಪಾದರ ಮಹಾ ಭಾರತ ತಾತ್ಪರ್ಯ ನಿರ್ಣಯ, ಅಧ್ಯಾಯ-೨, ಶ್ಲೋಕ-೫೮ಕ್ಕೆ ಶ್ರೀ ವಾದಿರಾಜ ಗುರುರಾಜರ ಟೀಕಾ "ಅಸೂನ್ ರಮಯಂತಿ, ಹರ್ಷ ಯಂತೀತಿ ಅಸುರಾಸ್ತತ್ವಾಭಿಮಾನಿನಃ । ಅಸೂನ್ ರೂಪಯಂತೀತ್ಯಸು ರೂಪಾ ಇತಿ ಫಲಿತಾರ್ಥಕಥನಮ್ । ಸಿದ್ಧಾಃ ಮುಕ್ತಾಶ್ಚ ತೇ ಅಸುರಾಃ ತತ್ವಾಭಿಮಾನಿನಶ್ಚ ತೇ ಅಮುರಾಶ್ಚ ಅಸುರಾಸುರಸಿದ್ಧಾಃ ॥ ಅಸುರೂಪ ಸುರೈಶ್ಚ ಮುಕ್ತೈರ್ವಂದ್ಯ ಇತಿ ॥ "**ಅನಾನ-ಭೂತಿರಪದುನ್ನಾನ**" ಇತಿ ಶ್ರುತೇಃ॥ ಅಸುರಾಣಾಂ ಭಕ್ತ್ಯಭಾವಾತ್ ಅಸುರಾಣಾಂ ಮುಕ್ತ್ಯಭಾವಾತ್ ಉಕ್ತವ್ಯುತ್ಪತ್ತ್ಯಾ ಅಸುರಾಸ್ತತ್ವಾಭಿಮಾನಿನೋ ದೇವಾಃ ॥ ದೈತ್ಯಾದಿ ಗಳಿಗೆ ಸ್ವರೂಪಾನಂದಾವಿರ್ಭಾವ ಮುಕ್ತಿ ಇಲ್ಲ. ಕಾರಣ ಇಲ್ಲಿ ಸ್ವರೂ ಪೇಂದ್ರಿಯದಲ್ಲಿ ರಮಣ ಮಾಡುತ್ತ ಹರ್ಷ ಹೊಂದುವವರು. ತತ್ವಾಭಿ ಮಾನಿದೇವತೆಗಳು. ಫಲಿತಾರ್ಥವೇನೆಂದರೆ ಸಿದ್ಧರಾದ ಮುಕ್ತರು ಮತ್ತು ಸ್ವರೂಪ ಅಮುರರಾದ ಮುಕ್ತರಿಂದ ವಂದ್ಯನೆಂದು ಅಸುರವಂದ್ಯ ಸುರ ದೇವತೆಗಳು ಅಮುಕ್ತರು ಅಸುರ ಸ್ವರೂಪೇಂದ್ರಿಯದಿಂದ ರಮಣ ಮಾಡು ವರು. ಮುಕ್ತಾಮುಕ್ತ ಗಣಾರ್ಚಿತ=ಸಮೂಹದಿಂದ ಪೂಜೆಗೊಳ್ಳುವ ಶ್ರೀಹರಿಯೆಂದು ದಾಸಾರ್ಯರು ಶ್ರುತ್ಯರ್ಥ ವಿವರಿಸಿದ್ದಾರೆ. ಚಿತ್ರಕರ್ಮ= ಅತಿ ವಿಚಿತ್ರವಾದ ಆಶ್ಚರ್ಯಕರ ಕರ್ಮಲೀಲಾ ಉಳ್ಳವ, ವಿಶೋಕ= ಹೋಗಲ್ಪಟ್ಟ ಶೋಕ ದುಃಖ ದೂರನು. ಅನಂತಾನಂತ ರೂಪಾತ್ಮ= ಬಹು ರೂಪವುಳ್ಳವನು. ಸತ್ಯಸಂಕಲ್ಪ=ಶ್ರೀಹರಿಯು ತಾನು ಮೊದಲಿಗೆ ಒಂದು ನಿಯಮ ಜೀವರ ಯೋಗ್ಯತಾನುಗುಣವಾಗಿ ಅವರಲ್ಲಿ ಕ್ರೀಡಿಸುವೆ ನೆಂದು ನಿಜವಾದ ಇಚ್ಛೆಯಂತೆ ಮಾಡುವನು. ಈತನೇ ಸತ್ಯಸಂಕಲ್ಪನು. ಜಗದುತ್ಪತ್ತಿ ಸ್ಥಿತಿಲಯ ಕಾರಣ=ಈ ಜಗತ್ತಿನ ಉತ್ಪತ್ತಿ=ಸೃಷ್ಟಿ, ಸ್ಥಿತಿ= ಪಾಲನೆ, ಲಯ=ಸಂಹಾರಕ್ಕೆ ಮೂಲಕಾರಣನು. ಜರಾಮೃತ್ಯು ವರ್ಜಿತ ನೆಂಬುಪಾಸನೆ=ಮುಪ್ಪು, ಮರಣಾದಿ ದೂರನು ಶ್ರೀಹರಿಯೆಂದು ಪೂಜಾ ಧ್ಯಾನಕ್ಕೆ ಸಮೀಪಿಸಿ ಧ್ಯಾನದಲ್ಲಿ ಮಾಡುವ ಪೂಜೆಗೈದ ತರುವಾಯ= ಹೀಗೆ ಜ್ಞಾನ ಪ್ರಧಾನವಾಗಿ ಹತ್ತು ಜನ್ಮಗಳಲ್ಲಿ ಭಗವದುಪಾಸನೆ ಮಾಡಿದನಂತರದಲ್ಲಿ ಮುಂದಿನ ಪದ್ಯದಲ್ಲಿ ಮತ್ತೂ ಸಾಧನ ಹೇಳುತ್ತಾರೆ.

**ಭಾವಸೂಚನ**—ಹತ್ತೇತಿ ॥ ಹಿಂದಿನ ಪದ್ಯದಲ್ಲಿ ಸಂಕ್ಷೇಪದಿಂದ ವಿವರಿಸಿದ್ದಾರೆ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

'ಹತ್ತು' ಇತಿ ॥ ೬ ॥

**ಕನ್ನಡಾರ್ಥ**

ಜ್ಞಾನ, ಭಕ್ತಿಪೂರ್ವಕ ಮಾಡಿದ ಕರ್ಮಗಳನ್ನು ಶ್ರೀಹರಿಯಲ್ಲಿ ಅರ್ಪಿಸಿದ ತರುವಾಯ ಹತ್ತು ಜನ್ಮಗಳಲ್ಲಿ ಶ್ರೀಹರಿಯೇ ಸರ್ವೋತ್ತಮ ಎಂದು ಮುಂತಾಗಿ ಉಪಾಸನೆಯನ್ನು ಮಾಡಬೇಕು ಎಂದು ತಾತ್ಪರ್ಯ. ॥ ೬ ॥

**ಅವತರಣಿಕಾ** :—ಈ ಪದ್ಯದಿಂದ ಪುನಃ ಮೂರು ಜನ್ಮಗಳಲ್ಲಿ ನಿರಂಶರು ಭಕ್ತಿವಿಶೇಷದಿಂದ ಧ್ಯಾನೋಪಾಸನೆಗೈದು, ಸ್ವದೇಹದಲ್ಲಿ ಪರಮಾತ್ಮನ ಅಪರೋಕ್ಷೀಕರಿಸುವರೆಂದು ಹೇಳುತ್ತಾರೆ.

**ಮೂರು ಜನ್ಮಗಳಲ್ಲಿ ದೇಹಾ- ।**
**ಗಾರ ಪಶುಧನ ಪತ್ನಿ ಮಿತ್ರ ಕು- ।**
**ಮಾರ ಮಾತಾ ಪಿತೃಗಳಲ್ಲಿಹ ಸ್ನೇಹಗಿಂತಧಿಕ ॥**
**ಮಾರಮಣನಲಿ ಬಿಡದೆ ಮಾಡುವ ।**
**ಸೂರಿಗಳು ಈ ಉಕ್ತ ಜನ್ಮವ ।**
**ಮೀರಿ ಪರಮಾತ್ಮನ ಸ್ವದೇಹದಿ ನೋಡಿ ಸುಖಿಸುವರು ॥ ೭ ॥**

**ಪದ್ಯಾರ್ಥ** :—ಮೂರು ಜನ್ಮಗಳಲ್ಲಿ=ಈ ಮೂರು ಜನ್ಮಗಳಾದರೂ ಬ್ರಾಹ್ಮಣ ಜನುಮ (ದೇಹ) ದಲ್ಲಿ, ಪರಮಾತ್ಮನಲ್ಲಿ ಅತ್ಯಧಿಕ ಭಕ್ತಿ ಮಾಡುವ ಕ್ರಮ ಹೇಳುತ್ತಾರೆ. ದೇಹ=ತನ್ನ ತನು, ಆಗಾರ= ತನ್ನ ಮನೆ. ಪಶು=ದನಕರುಗಳು, ಗೋವುಗಳು, ಪತ್ನಿ=ತನ್ನ ಹೆಂಡತಿ, ಮಿತ್ರ=ಸುಹೃದ್ಭಾವವುಳ್ಳ ತನ್ನ ಗೆಳೆಯರು, ಕುಮಾರ=ಮಗ, ಮಾತಾಪಿತೃಗಳು=ತಂದೆ ತಾಯಿಗಳು ಇವರೇ ಮೊದಲಾದವರಲ್ಲಿ ಇಹ=ಇರುವ, ಸ್ನೇಹಕ್ಕಿಂತಧಿಕ=

ಪ್ರೀತಿಯಿಂದ, ಹೆಚ್ಚಿನ ಪ್ರೀತಿಯಿಂದ ಅಂದರೆ ಶ್ರೀಹರಿಯೇ ನೀನೆ ತಂದೆ, ತಾಯಿ, ಬಂಧು, ಬಳಗ, ಆಪ್ತಮಿತ್ರನೆಂದು ದೃಢವಾದ ಪ್ರೀತಿಯೇ ಭಕ್ತಿ. ಹೀಗೆ ಮಾರಮಣನಲಿ ಬಿಡದೆ ಮಾಡುವ ಸೂರಿಗಳು=ಲಕ್ಷ್ಮೀಪತಿಯಲ್ಲಿ ಆತ್ಯಂತಿಕ ಭಕ್ತಿ ನಿರಂತರ ತೈಲಧಾರೆಯಂತೆ ಭಕ್ತಿಯನ್ನು ಮಾಡುವ ಜ್ಞಾನಿಗಳು, ಈ ಉಕ್ತ ಜನ್ಮವ ಮೀರಿ=ಹಿಂದೆ ಹೇಳಿವಂತೆ ೧೦೦೦ ಜನ್ಮದಲ್ಲಿ ಅನ್ಯೂನ ಕರ್ಮ, ಹತ್ತು ಜನ್ಮಗಳಲ್ಲಿ=ಜ್ಞಾನ ಪ್ರಾಚುರ್ಯದಿಂದ ಶ್ರೀ ಗುಣೋತ್ಕರ್ಷಕ ಉಪಾಸನೆ, ಮೂರು ಜನ್ಮದಿ ವಿಶೇಷ ಭಕ್ತಿ-ಹೀಗೆ ಸಾವಿರದ ಹದಿಮೂರು ಬ್ರಾಹ್ಮಣ ಜನ್ಮದಲ್ಲೇ ಸಾಧನ ಮಾಡಿ, ಗುರು ಪ್ರಸಾದದಿಂದ ಸ್ವದೇಹದಿ=ಈ ಸ್ಥೂಲ ದೇಹ ಧರಿಸಿದಾಗ್ಯೂ ಈ ಸ್ಥೂಲ ದೇಹದಲ್ಲಿಯೇ ಜೀವಾಂತರ್ಯಾಮಿ, ಪರಮಾತ್ಮನನ್ನು=ಬಿಂಬರೂಪಿ ಶ್ರೀಹರಿಯನ್ನು ನೋಡಿ ಸುಖಿಸುವರು=ಶ್ರೀಹರಿಯ ಅಪರೋಕ್ಷ ಜ್ಞಾನದಿಂದ ಆನಂದ ಪೊಂದುವರು. ॥ ೬ ॥

**ಭಾವಸೂಚನ** :—ಮೂರೇತಿ ॥ ನಿರಂಶಾಃ ಸತ್ಸಾಧನಾ ಯೇ ಚಿತ ಜನ್ಮಸಹಸ್ರಶಃ ॥ ಜ್ಞಾನಂ ತು ದಶಭಿಃ ಪ್ರಾಪ್ಯ ಸದ್ಭಕ್ತಿಂ ತ್ರಿಭಿರಾಪ್ಯ ಚ ॥ ದೃಷ್ಟ್ವೈವ ಹೃದಿಸ್ಥಂ ಮುಚ್ಯಂತೇ ಹ್ಯತಸ್ತೇ ಕರ್ಮಯೋಗಿನಃ ॥ ಇತಿ ಪ್ರಕಾಶ ಸಂಹಿತಾಯಾಮ್ ॥ ೬ ॥

**ವಿಶೇಷ ಸೂಚನೆ** :—ಶ್ರೀ ವಿಜಯದಾಸರ ತಾರತಮ್ಯ ಸುಳಾದಿ-೧೨, **ಮಟ್ಟತಾಳ**—"ತೃಣ ಮೊದಲು ಮಾಡಿ ಮನುಜ ಗಂಧರ್ವರಿಗೆ । ಎಣಿಸು ನಿರಂಶರು ಪ್ರತೀಕಾಲಂಬರು ಎನ್ನಿ । ಜನುಮ ಜನುಮ ಧರಿಸಿ ಪಾಪ ಪುಣ್ಯಗಳಿಂದ । ಗಣನೆ ಇಲ್ಲದೆ ಇಲ್ಲಿ ಸುಖ ದುಃಖವನುಂಡು । ಕೊನೆಗೆ ಬರುತ ಬರುತ ಅನಿಷ್ಟದಿಂದಲಿ ಕರ್ಮವನೆ ಎಸಗಿ । ಅನುದಿನದಲ್ಲಿ ಮನಕೆ ಹೇಯವನು ಪುಟ್ಟಿ । **ಜನುಮ ಸಾವಿರತೆತ್ತಿ ತತ್ಸಾಧನೆ ಮಾಡಿ** । ಇನಿತರೊಳಗೆ **ಹತ್ತು ಜನುಮದಲಿ ಜ್ಞಾನ** । ಮನಸಿಲಿ ಸಂಪಾದಿಸಿ ತನುಶುದ್ಧನಾಗಿ **ಸದ್ಭಕ್ತಿ ಮೂರು ಜನುಮ** ಕೈಕೊಂಡು ಹೃದಯಸ್ಥಾನವರು । ಶನವಾಗುವದೈಯ್ಯಾ **ವಾಸನಮುಯುವೆನ್ನಿ** । ಅಸಿಲನ ದಯದಿಂದಾ **ಸಹಸ್ರಧದಿಮೂರು** । ಜನುಮಕ್ಕೆ ವೈರಾಗ್ಯ, ಜ್ಞಾನ, ಭಕುತಿ ಪಡೆದು ।

ಮನಸಿಜನಯ್ಯನ ಕಾಣುವರು ಬಿಡದೆ । ಪ್ರಣತನಾಗುವ ಕೇವಲ
ನಿಷ್ಕಾಮದಲ್ಲಿ । ಜನುವು ಜನುಮಕ್ಕೆ ಕ್ರಮಾತು । ನೆಸಿಸುವರು ಇವರೆ
ಕರ್ಮಯೋಗಿಗಳನ್ನು । ಅನಿಮಿತ್ತ ಬಂಧು ವಿಜಯವಿಠಲರೇಯ ।
ಮನುಜಗಾಯಕತನಕ ಈಪರಿ ನಡಿಸುವ ॥ ೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಮೂರು' ಇತಿ ॥ 'ಆಗಾರ'=ಮನೆ 'ಮಾ'=ರಮಾ । ಉಕ್ತಜನ್ಮ
ಇತಿ ಮಂಜರೀ ಪದಾನುವಾದಃ ॥ "ನಿರಂಶಾಃ ಸತ್ಸಾಧನಾ ಯೋ
ಚಿತಜನ್ಮ ಸಹಸ್ರತಃ ॥ ಜ್ಞಾನಂ ತು ದಶಭಿಃ ಪ್ರಾಪ್ಯ ಸದ್ಭಕ್ತಿಂ ತ್ರಿಭಿ-
ರ್ಲಾಪ್ಯ ಚ । ದೃಷ್ಟ್ವಾ ಹೃದಿಸ್ಥಂ ಮುಚ್ಯಂತೇ ಹ್ಯತಸ್ತೇ ಕರ್ಮಯೋಗಿನಃ ॥
ತೃಣಾದಿಸಾಧನವಿಚಾರಸ್ತು ಮಂಜರ್ಯಾಂ ಸ್ಫುಟಃ ನೇಹ ಪ್ರದರ್ಶ್ಯತೇ ॥
ಶ್ರೀ ಹರ್ಯಾಜ್ಞಯಾ ಈರ ಅಜಃ ಋಜ್ವಾದಿ ತಾತ್ವಿಕಾತಿರಿಕ್ತಾನ್
ಕೃಪಯಾ ಇತರತ್ರಜಾನ್ ಕರ್ಮಭಿಃ ಭಾರತೇ ಜನಯಾತಃ ॥ ಉಕ್ತಂ
ಚ ॥ ತೃಣಾದಿಸರ್ವಜೀವಾನಾಂ ಸ್ವರೂಪೋದ್ಧಾರ ಆಗತೇ ॥ ಕಾಲೇ
ತತ್ತದ್ಯೋಗ್ಯಜೀವಸಾಧನೋಚಿತಕಾಲಕೇ ॥ ಶ್ರೀಹರಿರ್ಬ್ರಹ್ಮವಾಯೂ
ಚ ಸಭಾರ್ಯೌ ಚ ತದಾಜ್ಞಯಾ ॥ ಏತದನ್ಯದ್ವೀಪವರ್ಷ ಜಾಯ
ಮಾನಾನ್ ಹಿ ಸರ್ವಶಃ । ಸ್ವಕರ್ಮವಶಗಾನ್ ಸ್ವರ್ಗಾಂತರಿಕ್ಷ ಧರಣೀ
ಚರಾನ್ ॥ ನಾನಾ ಯೋನಿಗತಾನ್ ಜೀವಾನ್ ಅತಲಾದ್ಯಧರಸ್ಥಿತಾನ್ ॥
ಉದ್ಧರ್ತುಕಾಮಃ ಭಗವಾನ್ ಭಾರತೇ ಜನಯಿಷ್ಯತಿ ॥ ತತ್ರ ಮಾನು
ಷಯೋನ್ಯುತ್ಥಾನ್ ತತ್ರಾಪಿ ಬ್ರಾಹ್ಮಣೋತ್ತಮಾನ್ ॥ ತತ್ರ ಸ್ವರೂ
ಪೋರುವ್ಯಕ್ತಿ ಕಾರಕ ಕರ್ಮಣಾ ಸಂಯೋಜ್ಯ ಸರ್ವಂ ತದ್ಯೋಗ್ಯ
ಜ್ಞಾನದೇಷ್ಟೃಗುರೂತ್ತಮಾನ್ ॥ ಭಿನ್ನದೇಶೇ ಭಿನ್ನಕಾಲೇ ಯೋಜಯತ್ಯ
ಖಿಲಾನ್ ಹರಿಃ ॥ ಇತಿ ಪ್ರಕಾಶಸಂಹಿತಾಯಾಂ ॥ ೭ ॥

## ಕನ್ನಡಾರ್ಥ

'ಆಗಾರ'-ಮನೆ, 'ಮಾ'-ರಮಾ (ಲಕ್ಷ್ಮೀ) 'ಉಕ್ತಜನ್ಮ' ಎಂಬುವು
ತತ್ವ 'ಮಂಜರೀ' ಗ್ರಂಥಾನುವಾದವು ನಿರಂಶಜೀವರು ಹರಿಸರ್ವ

ತ್ತಮ ಜ್ಞಾನಭಕ್ತಿ ಪುರಸ್ಸರವಾಗಿ ಸಾವಿರ ಜನ್ಮಗಳಲ್ಲಿ ಸಾಧನ ಮಾಡಬೇಕು. ಅನಂತರ ಹತ್ತು ಜನ್ಮಗಳಿಂದ ಜ್ಞಾನವನ್ನೂ, ಅನಂತರ ಮೂರು ಜನ್ಮಗಳಿಂದ ಭಕ್ತಿಯನ್ನೂ ಹೊಂದುತ್ತಾರೆ. ಅನಂತರ ಹೃದಯಸ್ಥಿತ ಹರಿಯನ್ನು ಸಾಕ್ಷಾತ್ಕರಿಸಿ ಮುಕ್ತರಾಗುತ್ತಾರೆ. ಆದುದರಿಂದ ಅವರು ಕರ್ಮಯೋಗಿಗಳು. ತೃಣ ಮುಂತಾದ ಜೀವರ ಸಾಧನ ವಿಚಾರವನ್ನು 'ಮಂಜರಿ'ಯಲ್ಲಿ ಸ್ಪಷ್ಟಪಿದ್ದುದರಿಂದ ಇಲ್ಲಿ ಪುತ್ತೆ ತೋರಿಸುವುದಿಲ್ಲ. ಶ್ರೀಹರಿಯ ಆಜ್ಞೆಯಿಂದ ಬ್ರಹ್ಮವಾಯುಗಳು ಋಜು ಮುಂತಾದ ತಾತ್ವಿಕರನ್ನಾಳಿದು ಬೇರೆಯವರಾದ ಕರ್ಮಗಳಿಂದ ಬೇರೆ ದೇಶದಲ್ಲಿ ಹುಟ್ಟಿರುವವರನ್ನು ಕೃಪೆಯಿಂದ ಭಾರತದಲ್ಲಿ ಹುಟ್ಟಿಸುತ್ತಾರೆ. "ತೃಣಜೀವಾದಿಗಳ ಸ್ವರೂಪೋದ್ಧಾರ ಕಾಲವು ಪ್ರಾಪ್ತವಾದಾಗ ಅವರವರ ಯೋಗ್ಯವಾದ ಸಾಧನೋಚಿತ ಕಾಲದಲ್ಲಿ ಸ್ವಕರ್ಮವಶವಲ್ಲಿದ್ದು, ಸ್ವರ್ಗ, ಅಂತರಿಕ್ಷಗಳಲ್ಲಿಯೂ, ಅತಲ ಮುಂತಾದ ಕೆಳಗಿನ ಲೋಕಗಳಲ್ಲಿಯೂ ಇದ್ದು ನಾನಾ ಯೋನಿಗಳಲ್ಲಿರುವ ಜೀವರಾಶಿಗಳನ್ನು ಉದ್ಧರಿಸುವ ಇಚ್ಛೆಯಿಂದ ಬ್ರಹ್ಮವಾಯು-ಅವರ ಪತ್ನಿಯವರನ್ನು ಭಾರತಕ್ಕೆ ಕಳಿಸುವನು. ಮತ್ತು ಅವರನ್ನು ಭಾರತದಲ್ಲಿ ಹುಟ್ಟಿಸುತ್ತಾನೆ. ಮಾನುಷ ಯೋನಿಯಲ್ಲಿ ಹುಟ್ಟಿದ ಅದರಲ್ಲೂ ಬ್ರಾಹ್ಮಣೋತ್ತಮರಿಗೆ ಅವರ ಸ್ವರೂಪಾಭಿವ್ಯಕ್ತಿ ಕಾರಕ ಕರ್ಮಗಳಿಂದ ಸಂಯೋಜನ ಮಾಡಿಸಿ, ಅವರವರಿಗೆ ಯೋಗ್ಯವಾದ ಜ್ಞಾನಾದಿಗಳನ್ನು ಕೊಡುವ ಗುರುಗಳನ್ನು ಕೂಡಿಸುತ್ತಾನೆ. ಮತ್ತು ಭಿನ್ನ ದೇಶ, ಭಿನ್ನಕಾಲಗಳಲ್ಲಿ ಅವರ ಸಮ್ಯೋಜನವನ್ನು ಹರಿಯು ಒದಗಿಸಿ ಕೊಡುತ್ತಾನೆ ಎಂದು ಪ್ರಕಾಶ ಸಂಹಿತೆಯಲ್ಲಿ ಹೇಳಲಾಗಿದೆ. ॥ ೭ ॥

**ಅವತರಣಿಕಾ :—**ಈ ಪದ್ಯ ಆರಂಭಿಸಿ, ಪದ್ಯ- ೯, ೧೦ **ಈ** ಮೂರು ಪದ್ಯಗಳಿಂದ ಜ್ಞಾನ ವಿಜ್ಞಾನ ಯೋಗಿಗಳು (ಸಾಂಶಜೀವರ) ಲಕ್ಷಣ ಮತ್ತು ಸಾಧನ ಹೇಳುತ್ತಾರೆ.

**ದೇವಗಾಯಕ ಜಾನ(ನು) ಚಿರ ಪಿತೃ ।**
**ದೇವರೆಲ್ಲರು ಜ್ಞಾನಯೋಗಿಗ ।**
**ಳಾವ ಕಾಲಕು ಪುಷ್ಕರ ಶನೈಶ್ಚರ ಉಷಾ ಸ್ವಾಹಾ ।**

**ದೇವಿ ಬುಧ ಸನಕಾದಿಗಳು ಮೇ- ।**
**ಘಾವಳಿ ಪರ್ಜನ್ಯಸಾಂಶರು ।**
**ಈ ಉಭಯ ಗಣದೊಳಗಿವರು ವಿಜ್ಞಾನ ಯೋಗಿಗಳು ॥೬॥**

**ಪದ್ಯಾರ್ಥ:—** ದೇವ ಗಾಯಕ=ದೇವ ಗಂಧರ್ವರು. ಅಜಾನ = ಅಜಾನಜ ದೇವತೆಗಳ ಗುಂಪು ಮತ್ತು ಚಿರಪಿತೃ= ಚಿರಪಿತೃಗಳ ಗಣ ದೇವರೆಲ್ಲರೂ= ಇವರೆಲ್ಲ ಸಾಂಶ ದೇವತೆಗಳಲ್ಲಿ ಸೇರಿದವರು, ಇವರು ಜ್ಞಾನ ಯೋಗಿಗಳು, ಆವಕಾಲಕು= ನಿತ್ಯ ಪ್ರವಾಹ ರೂಪವಾದ ಬ್ರಹ್ಮಾಂಡ ಉತ್ಪತ್ತಿಯಲ್ಲಿ ಎಲ್ಲ ಬ್ರಹ್ಮಾಂಡದಲ್ಲಿ ಸಾಧನಕ್ಕಾಗಿ ಬರುವ ಇವರೆಲ್ಲರೂ, ಜ್ಞಾನಯೋಗಿಗಳು ಅಂದರೆ ಜ್ಞಾನ ಪ್ರಾಚುರ್ಯದಿಂದಲೇ ಸಾಧನ ಮಾಡುವವರು. ಇವರು ಸಾಂಶರು, ಪ್ರತೀಕಾಲಂಬನರು. ಮತ್ತ ಪುಷ್ಕರ= ಶುಕ್ರವರ್ಮಾಭಿಮಾನಿ ಪುಷ್ಕರದೇವ, ಶನೈಶ್ಚರ= ಸೂರ್ಯಪುತ್ರ ಶನಿದೇವ, ಉಷಾ= ಉಭಯರು ನಾಮಾಭಿಮಾನಿ ಉಷಾ, ಬ್ರಹ್ಮಾಂಡಾ ಭಿಮಾನಿ ಉಷಾ ಸ್ವಾಹಾದೇವಿ = ಅಗ್ನಿ ಪತ್ನಿ ಮಂತ್ರಾಭಿಮಾನಿ, ಬುಧ= ಸ್ವಾದೋದಕಗಳಿಗೆ ಅಭಿಮಾನಿ. ಸನಕಾದಿಗಳು = ಸನಕಾದಿ ವ್ಯಾಪ್ತ ಋಷಿಗಳು, ಮೇಘಾವಳಿಪ ಪರ್ಜನ್ಯ =ಮೇಘಗಳ ಸಮೂಹಕ್ಕೆ ಒಡೆಯ ಪರ್ಜನ್ಯ ನಾಮಕ ಸೂರ್ಯ, ಕರ್ಮಜ ದೇವತೆಗಳ ಗರ್ನೇ ಕಕ್ಷದಲ್ಲಿದ್ದ ಎಲ್ಲ ದೇವತೆಗಳು ಸಾಂಶರು. ಅತಾತ್ವಿಕರು. ತತ್ವಕಲಾಕ್ಕೆ ಅಭಿ ಮಾನಿಗಳು, ಈ ಉಭಯ =ಈ ಎರಡೂ, ಗಣದೊಳಗೆ =ಗುಂಪಿನಲ್ಲಿ ಇವರು =ಪುಷ್ಕರಾರಂಭಿಸಿ ಪರ್ಜನ್ಯಾದಿ ಕರ್ಮಜ ದೇವತೆಗಳ ಕಕ್ಷದಲ್ಲಿಪ್ಪ ಎಲ್ಲ ಸಾಂಶ ದೇವತೆಗಳು, ವಿಜ್ಞಾನ ಯೋಗಿಗಳು= ವಿಶೇಷವಾದ ಜ್ಞಾನ ಉಳ್ಳವರೆಂಬುದಕ್ಕೆ ವಿಜ್ಞಾನಯೋಗಿಗಳೆಂದು ಕರೆಸುತ್ತಾರೆ. ಅಂತು ಅತಾತ್ವಿಕ ಸಾಂಶದೇವತೆಗಳಲ್ಲಿ ಜ್ಞಾನ–ವಿಜ್ಞಾನ ಯೋಗಿಗಳೆಂದು ಎರಡು ವಿಧ.

**ಭಾವಸೂಚನ** ॥ ದೇವೇತಿ ॥ ತದುಕ್ತಂ ಪಂಚರಾತ್ರೇ ॥ "ದೇವ ಗಂಧರ್ವಮಾರಭ್ಯಾಜಾನಜಾಂತಾಃ ಸಮಸ್ತಶಃ. ॥ ಪ್ರತೀಕಾಲಂಬನಾಃ ಸ್ಸಾಂಶಾಃ ಕ್ರಮೋಜ್ಞಾ ಜ್ಞಾನಯೋಗಿನಃ । ವಿಜ್ಞಾನೇತಿ ಅಪ್ರತೀ

ಕಾಲಂಬನಾಶ್ಚ-ಪ್ರಾಯೋ ವಿಜ್ಞಾನಯೋಗಿನಃ ॥ ಕರ್ಮದೇವಾಜಾನ ಜಾದ್ಯಾಃ ದೇವದಾಸಾಃ ಕ್ರಮಾವರಾಃ ॥ ದೇವಗಂಧರ್ವಪರ್ಯಂತಾಃ ಸಾಂಶಾಸ್ಸರ್ವೇ ಪ್ರಕೀರ್ತಿತಾ ಇತಿ ವಚನಾತ್ ॥ ೮ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಜ್ಞಾನಯೋಗಿನಃ ನಿರ್ದಿಶತಿ- "ದೇವಗಾಯಕ" ಇತಿ ॥ ಪಿತೃದೇವಾಃ ॥ ಏತೇ ಜ್ಞಾನಯೋಗಿನಃ ॥ ಪುಷ್ಕರಾದಿ ಪರ್ಜನ್ಯಾಂತಾಃ ವಿಜ್ಞಾನಯೋಗಿನಃ ॥ ಉಭಯೇ ಸಾಂಶಾಃ ॥ ಪ್ರತೀಕಾಲಂಬಾಃ ॥ ತತ್ರ ವಿಜ್ಞಾನಯೋಗಿನಃ ಕ್ವಚಿವಪ್ರತೀಕಾಲಂಬಾಃ ॥ ದೇವಗಂಧರ್ವ ಪೂರ್ವಾಸ್ತ್ವಾಜಾನಜಾಂತಾಃ ಸಮಸ್ತಶಃ ॥ ಪ್ರತೀಕಾಲಂಬನಾಃ ಸಾಂಶಾಃ ಕ್ರಮೋಚ್ಚಾಃ ಜ್ಞಾನಯೋಗಿನಃ ॥ ಅಪ್ರತೀಕಾಲಂಬನಾಶ್ಚ ಪ್ರಾಯಃ ವಿಜ್ಞಾನಯೋಗಿನಃ ॥ ೮ ॥

**ಕನ್ನಡಾರ್ಥ**

ಈ ಪದ್ಯದಿಂದ ಜ್ಞಾನಯೋಗಿಗಳನ್ನು ತಿಳಿಸುತ್ತಾರೆ. ದೇವ ಗಂಧರ್ವರು ಆಜಾನಜರು, ಚಿರಪಿತೃಗಳು, ಇವರು ಜ್ಞಾನಯೋಗಿಗಳು. ಪುಷ್ಕರನನ್ನಾರಂಭಿಸಿ ಪರ್ಜನ್ಯನವರೆಗಿನವರು ವಿಜ್ಞಾನ ಯೋಗಿಗಳು. ಇವರೀರ್ವರೂ ಸಾಂಶರು. ಇವರಲ್ಲಿ ಜ್ಞಾನ ಯೋಗಿಗಳೂ, ಕೆಲವು ವಿಜ್ಞಾನ ಯೋಗಿಗಳೂ, ಪ್ರತೀಕಾಲಂಬನರೂ ಇರುತ್ತಾರೆ. ದೇವ ಗಂಧರ್ವರನ್ನಾರಂಭಿಸಿ ಆಜಾನಜ ಪರ್ಯಂತರರಾದ ಜ್ಞಾನ ಯೋಗಿಗಳೆಲ್ಲರೂ ಪ್ರತೀಕಾಲಂಬನರು, ಸಾಂಶರು. ಕ್ರಮಾನುಸಾರವಾಗಿ ಉಚ್ಚರು. ವಿಜ್ಞಾನ ಯೋಗಿಗಳು ಪ್ರಾಯಃ ಅಪ್ರತೀಕಾಲಂಬನರು ॥ ೮ ॥

**ಅವತರಣಿಕಾ:**— ಹಿಂದೆ ೮ ನೇ ಪದ್ಯದಲ್ಲಿ ಹೇಳಿದ ಸಾಂಶರಾದ ಅತಾತ್ವಿಕ ದೇವತೆಗಳ ಸಾಧನ ಮಾಡತಕ್ಕ ಜನ್ಮಗಳನ್ನು ವಿಶದೀಕರಿಸುತ್ತಾರೆ.

**ಭರತಖಂಡದಿ ನೂರು ಜನ್ಮವ ।**
**ಧರಿಸಿ ವಿಷ್ಣುಕಮುಖ ಸುಕರ್ಮಾ ।**

**ಚರಿಸಿದಾನಂತರದಿ ದಶ ಸಹಸ್ರ ಜನ್ಮದಲಿ ||**
**ಉರುತರ ಜ್ಞಾನವನು ಮೂರೈ |**
**ದೆರಡು ದಶ ದೇಹದಲಿ ಭಕ್ತಿಯು |**
**ನಿರವಧಿಕನಲಿ ಮಾಡಿ ಕಾಂಬರು ಬಿಂಬರೂಪವನು || ೯ ||**

**ಪದ್ಯಾರ್ಥ—** ಭರತಖಂಡದಿ=ಈ ಸಾಧನ ಭೂಮಿಯಾದ ಭರತ ಖಂಡದಲ್ಲಿಯೇ, ನೂರು ಜನ್ಮವ ಧರಿಸಿ=ಒಂದು ನೂರು ಬ್ರಾಹ್ಮಣ ಜನುಮ ಹೊಂದಿ ನೂರು ಜನ್ಮಗಳಲ್ಲಿ. ನಿಷ್ಕಾಮುಕ ಸುಕರ್ಮಾಚರಿಸಿ ದಾನಂತರದಿ=ಕಾಮ್ಯ ಕರ್ಮ ತ್ಯಾಗ ಪೂರ್ವಕ, ನಿಷ್ಕಾಮುಕ=ನಿವೃತ್ತಿ ಕರ್ಮವೆಂದರೆ ಕರ್ಮ ಫಲಾಪೇಕ್ಷೆಯಿಲ್ಲದೇ. ಒಂದುನೂರು ಜನುಮ ಗಳಲ್ಲಿ ಬಿಡದೇ ನಿವೃತ್ತಿ ಕರ್ಮಗಳನ್ನೇ ಮಾಡುತ್ತಾ ಶ್ರೀ ಹರಿಗೆ ಅರ್ಪಿ ಸಿದ ನಂತರದಲ್ಲಿ. ದಶಸಹಸ್ರ ಜನ್ಮದಲಿ=ಹತ್ತು ಸಾವಿರ ಬ್ರಾಹ್ಮಣ ಜನುಮದಲ್ಲಿಯೇ, ಉರುತರ ಜ್ಞಾನವನು (ಪಡೆದು) ಶ್ರೇಷ್ಠತರವಾದ ಹರಿಸರ್ವೋತ್ತಮನೆಂಬ ಜ್ಞಾನವನ್ನು ಸಕಲ ಶಾಸ್ತ್ರಾರ್ಥ ವಿಮರ್ಶೆ ಯಿಂದ ಗುರುದ್ವಾರಾ ತಿಳಿದು, ಹೆಚ್ಚಿನ ಜ್ಞಾನ ಹತ್ತು ಸಾವಿರ ಜನ್ಮಗಳಲ್ಲಿ ಸಾಧನದಿಂದ ಪಡೆದು, ಅನಂತರ=ಮೂರೈದೆರಡು ದಶ ದೇಹದಲಿ, ೩x೫=೧೫x೨=೩೦x೧೦=೩೦೦ ಹೀಗೆ ಮುನ್ನೂರು ಜನುಮಗಳಲಿ, ಭಕ್ತಿಯುಮಾಡಿ=ವಿಶೇಷವಾದ ಭಕ್ತಿಯಿಂದ ಸಾಧನಮಾಡಿ, ತಮ್ಮ, ಬಿಂಬ ರೂಪವನು ಕಾಂಬರು=ಹೃದಿಸ್ಥವಾದ ಬಿಂಬರೂಪವನ್ನು ಕಾಣುವರು.

**ಇದಕ್ಕೆ ಪ್ರಮಾಣ:—**

ಅತಾತ್ವಿಕಾ ದೇವತಾ ಸಾ ಸತ್ಕರ್ಮಶತಜನ್ಮಭಿಃ || ೧೦೦
ಕೃತ್ವಾ ದಶಸಹಸ್ರೈರು ಜನ್ಮಭಿರ್ಜ್ಞಾನಮಾಪ್ಯ ಚ ೧೦,೦೦೦
ಭಕ್ತಿಂ ತ್ರಿಶತಕೈರಾಪ್ಯ ಮುಚ್ಯಂತೇ ಜ್ಞಾನಯೋಗಿನಃ || ೩೦೦

೧೦,೪೦೦

ಇತಿ ಪ್ರಕಾಶಸಂಹಿತಾ | ಪರಿಚ್ಛೇದ ೧ ಅಧ್ಯಾಯ || ೧೦ |

**ಭಾವಸೂಚನ :**—ಭಾರತೇತಿ ॥ ಪ್ರಕಾಶಸಂಹಿತಾಯಾಂ ಚ ॥ "ಸತ್ಕರ್ಮ ಕೃತ್ವಾ ನಿಷ್ಕಾಮ್ಯಂ ಲಭಂತೇ ಗುರುಸಂತತೀಃ ॥ ಅತಾತ್ವಿಕಾ ದೇವತಾಸ್ತು ಸತ್ಕರ್ಮ ಶತಜನ್ಮಭಿಃ ॥ ಕೃತ್ವಾ ದಶಸಹಸ್ರೋರುಜನ್ಮಭಿ ಜ್ಞಾನಮಾಪ್ಯ ಚೇತಿ" ॥ ಮಾಡೀತಿ ॥ ಮುನ್ನೂರು ಜನ್ಮಗಳಿಂದ ॥ ಯಥೋಕ್ತಂ ಪಂಚರಾತ್ರೇ ॥ ಭಕ್ತಿಂ ತ್ರಿಶತಕೈರಾಪ್ಯ ಮುಚ್ಯಂತೇ ಜ್ಞಾನಯೋಗಿನ ಇತಿ ॥ ೯ ॥

**ವಿಶೇಷಸೂಚನೆ :**—**ಶ್ರೀ ವಿಜಯದಾಸರ ತಾರತಮ್ಯ ಸುಳಾದಿ** ೧೨, ಪುಟ-೫೦, ಝಂಪೆ ತಾಳದಲ್ಲಿ (ಕರ್ಮಯೋಗಿಗಳ ಲಕ್ಷಣ ಹೇಳಿ) "**ಮಾಣು** ಈ ಪರಿಯಂತ ಮುಂದೆ ಕೇಳುವುದು ಸುಪ । ರ್ವಾಣ ಗಂಧರ್ವ ಕರ್ಮದೇವ ತನಕಾ । ಜ್ಞಾನಯೋಗಿಗಳೆಂದು ಕರೆಸುವರು । ಭಾನು ಮಂಡಲದಂತೆ ಕಾಂಬ ಸಾಂಶರು ಪ್ರಾಣಾಧಿಷ್ಠಾನದಲ್ಲಿ ಪ್ರತೀಕಾಲಂಬಾ। ನಾನಾ ಜನುಮ ಧರಿಸಿ ಅಂಶದಿಂದಲಿ ಬಳಲಿ ಜ್ಞಾನವಿರಹಿತರಾಗಿ ಭವ ದಲ್ಲಿ ಬಿದ್ದು । ಸ್ನಾನಾದಿ ಪುಣ್ಯದಿಂದ ಸದ್ಗತಿ ಬರಲು ನಿ । ಧಾನಿಸಿ **ಸತ್ಕರ್ಮ ನೂರು ಜನ್ಮ** । ತಾನು ಕೈಕೊಂಡು ಅಮೇಲೆ **ಸಾವಿರ ಜನ್ಮ ವೇಣು ಧರಿಸಿ ಜ್ಞಾನವಂತನಾಹ** । ಜ್ಞಾನಕರ್ಮದಿಂದ **ಮುನ್ನೂರು** ಜನ್ಮಕ್ಕೆ । ತ್ರಾಣನಾಗಿ **ಸದ್ಭಕ್ತಿ ಪ್ರಾಪ್ತಿ** ಈ ನಿರಂತರ ಇನಿತು ಮಾಡ ಲಾಗ ಹರಿಯ । ಕಾಣುವ ಉಪಾಯವಿಮು ಅಪರೋಕ್ಷವು। ಹೀನವಾಗದೋ ನಿತ್ಯ ಅಭಿವ್ಯಕ್ತಿ ಹರಿರೂಪ। ಭಾನುಮಂಡಲಕಾಂತಿ ಶೋಭಿಪಮು ॥........ ಆನಂದಮೂರುತಿ ವಿಜಯವಿಠಲರೇಯ । ಪ್ರಾಣನಾಗಿ ತನ್ನ ಭಕುತರನ ಪೊರೆವ ॥ ೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಜ್ಞಾನಯೋಗಿನಾಂ ಸಾಧನಮಾಹ॥

'ಭರತ' ಇತಿ ॥ ಪ್ರಮಾಣೋಪರೋಧಾತ್ ದೂರಸ್ಥ ಶತಪದಂ ಅತ್ರ ಸಂಯೋಜ್ಯ ಶತಭವೇಷು ಕರ್ಮಕರಣೋತ್ತರಂ ದಶಸಹಸ್ರೋತ್ತರಂ ಪ್ರಥಮತ್ರಯ ಶತಪದಕ್ರಮಂ ಧಾರಯೇತ್ ॥ ತ್ರಿಶತೇಷು ಭಕ್ತಿಮಾಪ್ಯ

ಅಪರೋಕ್ಷೀಕುರ್ವಂತಿ ಹರಿಮ್ ಇತ್ಯೇಕಾನ್ವಯಃ ॥ ಅತಾತ್ವಿಕಾಃ ದೇವದಾಸಾಃ ಸತ್ಕರ್ಮ ಶತಜನ್ಮಭಿಃ॥ ಕೃತ್ವಾ ದಶಸಹಸ್ರೈರ್ವಾ ಜನ್ಮಭಿಃ ಜ್ಞಾನಮಾಪ್ಯ ಚ ॥ ಭಕ್ತಿಂ ತ್ರಿಶತಕೈಃ ಆಪ್ಯ ಮುಚ್ಯಂತೇ ಜ್ಞಾನ ಯೋಗಿನಃ ॥ ೯ ॥

## ಕನ್ನಡಾರ್ಥ

ಪ್ರಮಾಣಾನುಸಾರವಾಗಿ ಮೂರರಲ್ಲಿದ್ದ ಶತಪದವನ್ನು ಇಲ್ಲಿ ಅನ್ವಯಿಸಿ, ನೂರು ಜನ್ಮಗಳಲ್ಲಿ ಸತ್ಕರ್ಮಗಳನ್ನು ನಿಷ್ಕಾಮದಿಂದ ಮಾಡಿದ ಅನಂತರ ಹತ್ತು ಸಾಹಸ್ರ ಜನ್ಮಗಳಿಂದ ಜ್ಞಾನವನ್ನು ಹೊಂದುತ್ತಾರೆ. ಅನಂತರ ಮುನ್ನೂರು ಜನ್ಮಗಳಿಂದ ಭಕ್ತಿಯನ್ನು ಹೊಂದುತ್ತಾರೆ. ಈ ಕ್ರಮವನ್ನು ಇಲ್ಲಿ ಸ್ವೀಕರಿಸಬೇಕು.

"ತಾತ್ವಿಕ ದೇವತೆಗಳಿಂದ ಭಿನ್ನರಾದ ದೇವದಾಸರು, ನೂರು ಜನ್ಮ ಗಳಿಂದ ಸತ್ಕರ್ಮಗಳನ್ನು ಆಚರಿಸಿ ಹತ್ತು ಸಾವಿರ ಜನ್ಮಗಳಿಂದ ಜ್ಞಾನ ವನ್ನು ಪಡೆದು, ಮೂರು ನೂರು ಜನ್ಮಗಳಿಂದ ಭಕ್ತಿಯನ್ನು ಹೊಂದಿ, ಅನಂತರ ಜ್ಞಾನಯೋಗಿಗಳು ಮುಕ್ತರಾಗುತ್ತಾರೆ" ಎಂದು ಪ್ರಮಾಣಗಳಲ್ಲಿ ಹೇಳಲಾಗಿದೆ. ॥ ೯ ॥

**ಅವತರಣಿಕಾ:—** ಹಿಂದೆ ಪದ್ಯ ೮-೯ ರಲ್ಲಿ ಹೇಳಿದ ಸಾಂಶರಾದ ಅತಾತ್ವಿಕರಿಗೆ ಅನಾದಿಕಾಲದಿಂದ ಅಪರೋಕ್ಷವು ಇಲ್ಲವಾದರೂ, ಜ್ಞಾನ ಯೋಗಿಗಳಾದುದರಿಂದ, ನಿಷೇಧ ಕರ್ಮಾಚರಣವಿಲ್ಲ. ನರಕಾದಿಗಳು ದೇವತೆಗಳಿಗೆ ಮೊದಲೇ ಇಲ್ಲ. ವೇದಶಾಸ್ತ್ರ ವಿರೋಧ ವಾಕ್ಯಗಳನ್ನು ಪರಿ ಹರಿಸಿ ಮಧುಸೂದನನು ಸರ್ವೋತ್ತಮನೆಂಬ ಜ್ಞಾನದಿಂದ ೧೦,೪೦೦ ಜನ್ಮಗಳಲ್ಲಿ ಸಾಧನಮಾಡಿ ಬಿಂಬನನ್ನು ಕಾಣುವರು.

**ಸಾಧನಾತ್ಪೂರ್ವದಲಿ ಇವರಿಗ**
**ನಾದಿಕಾಲಪರೋಕ್ಷವಿಲ್ಲ ನಿ- ।**
**ಷೇಧ ಕರ್ಮಗಳಿಲ್ಲ ನರಕ ಪ್ರಾಪ್ತಿ ಮೊದಲಿಲ್ಲ ॥**

**ವೇದ ಶಾಸ್ತ್ರಗಳಲ್ಲಿ ಇಪ್ಪ ವಿ- ।**
**ರೋಧ ವಾಕ್ಯವ ಪರಿಹರಿಸಿ ಮಧು- ।**
**ಸೂದನನೆ ಸರ್ವೋತ್ತಮನೆಂದು ತುತಿಸುವರು ॥ ೧೦ ॥**

**ಪದಾರ್ಥ** :—ಇವರಿಗೆ=ಹಿಂದೆ ಹೇಳಿದ ಜ್ಞಾನ ವಿಜ್ಞಾನ ಯೋಗಿಗಳಿಗೆ, ಸಾಧನಾತ್ಪೂರ್ವದಲಿ=ಹಿಂದೆ ವಿವರಿಸಿದಂತೆ ೧೦,೪೦೦ ಜನ್ಮಗಳಲ್ಲಿ ಸಾಧನ ಮಾಡುವುದಕ್ಕಿಂತಲೂ ಮೊದಲಿಗೆ, ಅನಾದಿಕಾಲ=ಜೀವರು ನಿತ್ಯರು ಅನಾದಿಕಾಲದಿಂದ ಇದ್ದರೂ ಇವರಿಗೆ ಅಪರೋಕ್ಷವಿಲ್ಲ=ಬಿಂಬಾಪರೋಕ್ಷವಿಲ್ಲ. ಸಾಧನಾನಂತರದಲ್ಲಿಯೇ ಇವರಿಗೆ ಬಿಂಬಾಪರೋಕ್ಷವು ನಿಷೇಧಕರ್ಮಗಳಿಲ್ಲ=ವೇದಕ್ಕೆ ವಿರುದ್ಧವಾದ ಕರ್ಮಾಚರಣೆ ಇಲ್ಲ. ನರಕ ಪ್ರಾಪ್ತಿ ಮೊದಲಿಲ್ಲ=ಈ ದೇವತೆಗಳಿಗೆ ನರಕವಾಸ, ದುಃಖ ಅನುಭವಿಸುವುದಂತೂ ಇಲ್ಲವೇ ಇಲ್ಲ. "ದೇವಾನಾಂ ನಿರಯೋ ನಾಸ್ತಿ" ಮತ್ತು ವೇದ ಶಾಸ್ತ್ರಗಳಲ್ಲಿ ಇಪ್ಪ ವಿರೋಧ ವಾಕ್ಯವಪರಿಹರಿಸಿ=ಶ್ರುತಿಗಳಲ್ಲಿರುವ ಪರಸ್ಪರ ವಿರೋಧ ವಾಕ್ಯಗಳನ್ನು ಮತ್ತು ಶಾಸ್ತ್ರಗಳಲ್ಲಿ ಆಗಿಂದಾಗ್ಗೆ ತಲೆದೋರುವ ವಿರೋಧ ಸಮಸ್ಯೆಗಳನ್ನು ಗುರುಮುಖದಿಂದ ಚೆನ್ನಾಗಿ ತಿಳಿದು ಅವಿರೋಧಗಳನ್ನೆಲ್ಲ ಪರಿಹಾರಮಾಡಿ, ಇದಮಿತ್ಥಂ ಎಂಬ ದೃಢವಾದ ಶ್ರೀಹರಿಯೇ ಸರ್ವೋತ್ತಮ, ಸರ್ವತಂತ್ರ ಸ್ವತಂತ್ರ, ಜೀವರೆಲ್ಲ ತದ್ದಾಸರು. ಜೀವರಲ್ಲಿ ವಾಯುವೇ ಜೀವೋತ್ತಮನೆಂಬ ತರತಮಜ್ಞಾನ ದಾರ್ಢ್ಯದಿಂದ ಮಧುಸೂದನನೆ = ಮಧುನಾಮಕ ದೈತ್ಯನನ್ನು ಸಂಹರಿಸಿದ ಹರಿಯೇ ಸರ್ವೋತ್ತಮನೆಂದು ತುತಿಸುವರು=ಸಕಲರಲ್ಲಿ ಉತ್ತಮ ಶ್ರೇಷ್ಠನೆಂದು ಸದಾ ಸ್ತೋತ್ರಮಾಡುವರು.

**ಭಾವಸೂಚನ** :—ಸಾಧನೇತಿ ॥ ನರಕಂ ಪ್ರಾಪ್ತೇತಿ ॥ ದೇವಾನಾಂ ನಿರಯೋ ನಾಸ್ತಿ ತಮಶ್ಚಾಪಿ ಕಥಂಚನ ಇತಿ ಭಾರತ ತಾತ್ಪರ್ಯೇ ॥ ೧೦ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

'ಸಾಧನಾತ್' ಇತಿ ॥ ಅಪರೋಕ್ಷಃ ಸಾಮಾನ್ಯರೂಪಃ ॥ ವಕ್ಷ್ಯತೇ

ಜ್ಯೈತತ್ ॥ 'ನರಕ' ದೇವಾನಾಂ ನಿರಯೋ ನಾಸ್ತಿ ತಮಶ್ಚಾಪಿ ಕಥಂಚನ ॥ ೧೦ ॥

**ಕನ್ನಡಾರ್ಥ**

ಸಾಮಾನ್ಯ ರೂಪವಾದ ಅಪರೋಕ್ಷವೆಂದು ಅರ್ಥ. ಇದನ್ನು ಮುಂದೆ ವಿಶದೀಕರಿಸುವೆವು. ದೇವತೆಗಳಿಗೆ ನರಕವಿಲ್ಲ; ತಮಸ್ಸಂತೂ ಹೇಗಾದರೂ ಆಗುವುದೇ ಇಲ್ಲ ॥ ೧೦ ॥

**ಅವತರಣಿಕಾ** :—ಈ ಪದ್ಯದಿಂದ ಭಕ್ತಿಯೋಗಿಗಳು ಯಾರು? ಅವರ ಲಕ್ಷಣವೇನೆಂಬುದನ್ನು ವಿವರಿಸುತ್ತಾರೆ. ಅಂದರೆ ಭಕ್ತಿಯೋಗಿಗಳ ಸಾಧನ ಹೇಗೆಂಬ ಮುನ್ನೆಲೆಯನ್ನು ಹೇಳುತ್ತಾರೆ.

**ಸತ್ಯಲೋಕಾಧಿಪನವಿಡಿದು ಶ- ।**
**ತಸ್ಥ ದೇವಗಣಾಂತ ಎಲ್ಲರು ।**
**ಭಕ್ತಿಯೋಗಿಗಳೆಂದು ಕರೆಸುವರಾವ ಕಾಲದಲಿ ॥**
**ಭಕ್ತಿಯೋಗ್ಯರ ಮಧ್ಯದಲಿ ಸ- ।**
**ದ್ಭಕ್ತಿ ವಿಜ್ಞಾನಾದಿ ಗುಣದಿಂ- ।**
**ದುತ್ತಮೋತ್ತಮ ಬ್ರಹ್ಮವಾಯೂ ವಾಣಿ ವಾಗ್ದೇವಿ ॥ ೧೧ ॥**

**ಪದ್ಯಾರ್ಥ** :—ಸತ್ಯಲೋಕಾಧಿಪನ ವಿಡಿದು=ಸತ್ಯಲೋಕಕ್ಕೆ ಅಧಿಪತಿ ಒಡೆಯನಾದ ಚತುರ್ಮುಖ ಬ್ರಹ್ಮದೇವರಾರಂಭಿಸಿ, ಶತಸ್ಥ ದೇವ ಗಣಾಂತ ಎಲ್ಲರು ಅಂದರೆ ೩ನೇ ಕಕ್ಷದಿಂದ ಪ್ರಾರಂಭಿಸಿ, ಶೇಷಶತಸ್ಥರು ೧೮ನೇ ಕಕ್ಷದ, ಗಣಾಂತ=ಸಮೂಹ ದೇವತೆಗಳಾದ ತತ್ತ್ವಾಭಿಮಾನಿ ದೇವತೆಗಳೆಲ್ಲರೂ, ಆವ ಕಾಲದಲಿ=ಸದಾ ಸರ್ವಕಾಲ ಅಮುಕ್ತ ಮುಕ್ತಾವಸ್ಥೆಯಲ್ಲಿ ಭಕ್ತಿಯೋಗಿಗಳೆಂದು ಕರೆಸುವರು=ಸದ್ಭಕ್ತಿಯೇ ದೃಢವಾದ ಸ್ನೇಹವೇ ಪರಮಾತ್ಮನಲ್ಲಿ ಹೆಚ್ಚಿನ ಭಕ್ತಿಯುಳ್ಳವರು ಭಕ್ತಿಯೇ ಪ್ರಚುರವಾಗಿರುವರೆಂದು ಕರೆಸುತ್ತಾರೆ. ಭಕ್ತಿಯೋಗ್ಯರ ಮಧ್ಯದಲಿ=ಈ ಭಕ್ತಿಯೋಗ್ಯರಾದವರಲ್ಲಿ, ಸದ್ಭಕ್ತಿ=ಸಮೀಚೀನವಾದ ಮಹಾಭಕ್ತಿ, ವಿಜ್ಞಾನಾದಿ ಗುಣ

ದಿಂ=ವಿಶೇಷ ಜ್ಞಾನವೇ ಮೊದಲಾದ ಗುಣಗಳಿಂದ ಬ್ರಹ್ಮ = ಬ್ರಹ್ಮ ದೇವರು ಚತುರಾನನ, ವಾಯು=ಮುಖ್ಯಪ್ರಾಣದೇವರು, ವಾಣಿ=ಸರಸ್ವತೀ ದೇವಿಯರು, ವಾಗ್ದೇವಿ=ಭಾರತೀದೇವಿಯರು. ಈ ನಾಲ್ವರು ಉತ್ತಮೋತ್ತಮರು=ಈ ಭಕ್ತಿಯೋಗ್ಯರಲ್ಲಿ ಅತಿ ಉತ್ತಮರು ಶ್ರೇಷ್ಠರು ಎಂದು ಹೇಳಿದ್ದಾರೆ.

**ಭಾವಸೂಚನ :**—ಸತ್ಯೇತಿ ಭಕ್ತಿಯೋಗೀತಿ ॥ "ಸನಕಾದ್ಯಾಃ ಜ್ಞಾನಯೋಗಾಃ ಭಕ್ತಿಯೋಗಾಸ್ತು ದೇವತಾಃ ॥ ಮಾನುಷಾಃ ಕರ್ಮಯೋಗಾಶ್ಚ ತ್ರಿಧೈತೇ ಯೋಗಿನಃ ಸ್ಮೃತಾ ಇತಿ ಪ್ರಕಾಶಸಂಹಿತಾಯಾಮ್ ॥ ೧೧ ॥

**ವಿಶೇಷ ಸೂಚನೆ :**—ಶ್ರೀ ವಿಜಯದಾಸರ ಸುಳಾದಿ ತಾರತಮ್ಯ ಭಾಗ, ಪುಟ-೫೧. ಭಕುತಿ ಯೋಗಿಗಳಾಗಿ ವರಪರ ಪುಷ್ಕರಾದ್ಯರು। ತಾತ್ವಿಕರೆಂದೆನಿಸುವರು ಈ ಕಾಲಕ್ಕೆ । ಪ್ರಕಟವಾಗಿಪ್ಪರು ಅವರವರ ತಕ್ಕದ್ದು । ಸುಖ ದುಃಖ ಕೊಡುವರು ಉತ್ತಮರಿಂದ ॥ ಇತ್ಯಾದಿ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಭಕ್ತಿಯೋಗಾನ್ ಆಹ-'ಸತ್ಯ' ಇತಿ ॥ ಶತಸ್ಥಪದಂ ಕರ್ಮಯೋಗಿಪರಮ್ ॥ ಉಪಲಕ್ಷಣಯಾ ಕರ್ಮಜಾದಿಬ್ರಹ್ಮಾಂತಾಃ ಭಕ್ತಿಯೋಗಾಃ ಇತ್ಯರ್ಥಃ॥ ಆದಿಪದೋಕ್ತಾ ಶತಸ್ಥಾಃ ಮಿತ್ರ ಜಗನ್ಮಿತ್ರ ಭೃಗ್ವಾದಿ ನಾರದ ವರುಣ ವಿವಸ್ವತ್ ಪ್ರವಹ ಸುರಗುರ್ವಾರ್ವ್ಯಹಂ ಪ್ರಾಣ ಇಂದ್ರ ಕಾಮ ಸೌಪರ್ಣಿ ಷಟ್‌ಕೃಷ್ಣಮಹಿಲಾಃ ಶೇಷಾದಿತ್ರಿಕಂ ಏತದಧಿಕಾ ಅಜೇರಾ ಸಭಾಯರ್ಾ ॥ ತತ್ರ ಸಭಾಯರ್ಾ ಬ್ರಹ್ಮವಾಯೂ ಮುಖ್ಯ ಭಕ್ತಿಯೋಗೌ ॥ ಬ್ರಹ್ಮವಾಯ್ವೋಃ ಸಾಧನಂ ವಕ್ತುಂ ಉಪೋದ್ಘಾತಮಾಹ-'ಸತ್ಯ' ಇತಿ ॥ ೧೧ ॥

## ಕನ್ನಡಾರ್ಥ

ಭಕ್ತಿಯೋಗವುಳ್ಳವರನ್ನು ನಿರೂಪಿಸುತ್ತಾರೆ. 'ಸತ್ಯ' ಎಂಬೀ

ಪದ್ಯದಿಂದ 'ಶತಸ್ಥ' ಪದಕ್ಕೆ ಕರ್ಮಯೋಗಿಗಳೆಂದು ಅರ್ಥ. ಆದರೂ ಕರ್ಮಜರನ್ನಾರಂಭಿಸಿ, ಬ್ರಹ್ಮನವರೆಗಿನವರು ಭಕ್ತಿಯೋಗಿಗಳೆಂದು ಅರ್ಥ ಆದಿಪದೋಕ್ತ ಶತಸ್ಥರು ಯಾರೆಂದರೆ—ಮಿತ್ರ, ವಿಶ್ವಾಮಿತ್ರ, ಭೃಗು ಮುಂತಾದವರು; ನಾರದ, ವರುಣ, ವಿವಸ್ವತ್, ಪ್ರವಹ, ಬೃಹಸ್ಪತಿ, ಅಹಂಕಾರಿಕ ಪ್ರಾಣ, ಇಂದ್ರ, ಕಾಮ, ಸೌಪರ್ಣಿ, ಆರು ಕೃಷ್ಣಮಹಿಷಿಯರು; ಗರುಡ, ಶೇಷ, ರುದ್ರ ಈ ಮೂವರು ಇವರು. ಇವರಿಗೆ ಅಧಿಕರು ಪತ್ನೀಸಹಿತರಾದ ಬ್ರಹ್ಮವಾಯುಗಳು; ಸರಸ್ವತೀ, ಭಾರತೀ ಯುಕ್ತರಾದ ಬ್ರಹ್ಮವಾಯುಗಳು ಮುಖ್ಯವಾದ ಭಕ್ತಿಯೋಗವುಳ್ಳವರು. ಅವರ ಸಾಧನವನ್ನು ನಿರೂಪಿಸುವುದಕ್ಕೋಸ್ಕರ ಉಪೋದ್ಘಾತವನ್ನು ರಚಿಸಿ ಹೇಳುತ್ತಾರೆ-'ಸತ್ಯ' ಎಂಬ ಪದ್ಯದಿಂದ ॥ ೧೧ ॥

**ಅವತರಣಿಕಾ** :—ಬ್ರಹ್ಮಪದ ಯೋಗ್ಯರಾದ ಋಜುಗಣದವರ ನೈಜವಾದ ಸ್ವಭಾವ, ಅವರ ಲಕ್ಷಣ ಹೇಳುತ್ತಾರೆ.

> **ಋಜುಗಣಕೆ ಭಕ್ತ್ಯಾದಿಗುಣ ಸಾ- ।**
> **ಹಜವೆನಿಸುವವು ಕ್ರಮದಿ ವೃದ್ಧ್ಯ- ।**
> **ಬ್ಜಜ ಪದವಿ ಪರ್ಯಂತ ಬಿಂಬೋಪಾಸನವು ಅಧಿಕ ॥**
> **ವೃಜಿನ ವರ್ಜಿತ ಎಲ್ಲರೊಳು ತ್ರಿಗು- ।**
> **ಣಜ ವಿಕಾರಗಳಿಲ್ಲವೆಂದಿಗು ।**
> **ದ್ವಿಜ ಫಣಿಪಮೃಡ ಶಕ್ರ ಮೊದಲಾದವರೊಳಿರುತಿಹವು ॥೧೨॥**

**ಪದ್ಯಾರ್ಥ** :— ಋಜುಗಣಕೆ=ಋಜು-ಪ್ರಾಮಾಣಿಕವಾದ ಸರಳ ಸ್ವಭಾವ ಶುದ್ಧಜ್ಞಾನವುಳ್ಳ ಋಜುಗಣದವರಿಗೆ ೨೦೦ ಮಹಾಕಲ್ಪ ಸಾಧನದಿಂದ ಬ್ರಹ್ಮಪದಕ್ಕೆ ಬರುವ ಜೀವಗಣಕ್ಕೆ ಋಜುಗಣವೆಂದು ಶಾಸ್ತ್ರಸಿದ್ಧ. ಇಂತಹ ಋಜು ಸಮೂಹ ಜೀವರಿಗೆ ಭಕ್ತ್ಯಾದಿ ಗುಣ=ಭಕ್ತಿಯೇ ಮಹಾ ಪ್ರಚುರವಾಗಿ ಇದ್ದು ಭಕ್ತ್ಯಾದಿ, ಜ್ಞಾನ, ಭಕ್ತಿ, ವಿರಕ್ತಿ ಮೊದಲಾದ ಸದ್ಗುಣಗಳು ಸಾಹಜವೆನಿಸುವವು=ನಿರುಪಾಧೀನ ಒಂದು ಕಾಲದಲ್ಲಿ ಕೆಡದೆ ಕುಂದದೆ, ತಿರೋಹಿತವಾಗದೇ, ಸಾಹಜ=ಕೃತ್ರಿಮವಲ್ಲದ ಸ್ವಾಭಾವಿಕ ನೈಜ

ಗುಣವೆನಿಸುತ್ತವೆ. ಈ ಋಜುಗಳಲ್ಲಿ ಜ್ಞಾನ, ಭಕ್ತ್ಯಾದಿಗಳು ಒಂದೇ ಬಗೆಯಾಗಿದ್ದರೂ, ಕ್ರಮದಿ=ಕ್ರಮೇಣ ೧ನೇ ಸಾಧನ ಯೋಗ್ಯ ಋಜು ಆರಂಭಿಸಿ ೨೦೦ನೇ ಋಜುಪುಂಗವ, ಅಬ್ಜಜ ಪದವಿ=ಬ್ರಹ್ಮಪದವಿ ಪರಿಯಂತ, ವೃದ್ಧಿ=ಕ್ರಮೇಣ ಹೆಚ್ಚಾಗಿ ಆಗುವುದಲ್ಲದೇ ಬಿಂಬದರ್ಶನವು ಅಧಿಕ=ಬಿಂಬಾಪರೋಕ್ಷದ ಸ್ಪಷ್ಟತ್ವದಲ್ಲಿ ಹೆಚ್ಚು ಹೆಚ್ಚಿಗೆ ಆಗುತ್ತಲಿದೆ. ವೃಜಿನವರ್ಜಿತರು=ಪಾಪದೋಷ ಲೇಶವಿಲ್ಲದವರು. ಎಲ್ಲರೊಳು=ಈ ಋಜುಗಣದವರ ಸಮೂಹಕ್ಕೆ. ತ್ರಿಗುಣಜ ವಿಕಾರಗಳಿಲ್ಲವೆಂದಿಗು=ತ್ರಿಗುಣ ಸತ್ವರಜ ತಮೋಗುಣಾತ್ಮಕ ಲಿಂಗಪ್ರಕೃತಿ ಸಂಬಂಧ, ಅಜ್ಞಾನಮೋಹ, ದೇಹವಿಕಾರಗಳಿಲ್ಲ=ಜ್ಞಾನ ಭಕ್ತ್ಯಾದಿಗಳ ತಿರೋಧಾನವಿಲ್ಲ. ಎಂದಿಗೂ ಅಸೃಜ್ಯ, ಸೃಜ್ಯ, ಮುಕ್ತಿ ಕಾಲಗಳಲ್ಲಿಯೂ ಇವರಿಗೆ ಜ್ಞಾನಾದಿ ತಿರೋಭಾವ ವಿಲ್ಲ. ಈ ಜ್ಞಾನತಿರೋಭಾವ ಅಸುರಾವೇಶ, ದ್ವಿಜ=ಪಕ್ಷಿಶ್ರೇಷ್ಠ ಗರುಡ ದೇವರು, ಫಣಪ=ಶೇಷದೇವರು, ಮೃಡ=ರುದ್ರದೇವರು, ಶಕ್ರ=ಇಂದ್ರ ದೇವರೆ ಮೊದಲಾದವರೊಳಗು ಶಿಕ್ರಮ=ಇಂದ್ರದೇವರೆ ಮೊದಲಾಗಿ ಎಲ್ಲ ದೇವತೆಗಳಲ್ಲಿ ಜ್ಞಾನಾದಿತಿರೋಭಾವ ಅಸುರಾವೇಶಾದಿಗಳು ಇರುವುವು ||

**ವಿಶೇಷ ಸೂಚನೆ** :—ಶ್ರೀ ವಿಜಯದಾಸರ ತಾರತಮ್ಯ ಸುಳಾದಿ ೧೧, ಪುಟ ೪೧,-೪೨, ಧ್ರುವತಾಳದಲ್ಲಿ ಋಜುಗಣಸ್ಥರ ಸಾಧನ ವಿವರ. "ತೃಣ ಪ್ರಾರಂಭವಾಡಿ ಪರಮೇಷ್ಠಿ ಪರಿಯಂತ । ಎಣಿಸಿ ಗುಣಿಸುವುದು ತಾರತಮ್ಯದಿ । ಗಣನೆ ಉಂಟು ಕೇಳೋ ಒಂದೊಂದು ಜೀವನ್ಮ(ದಕ್ಕೆ ಅನುಮಾನ ಮಾಡಸಲ್ಲ ಗುಣವಂತರು । ಜನಿಸುವರು ಚರ್ಮ ಭಾವಿ ಯೋಗ್ಯತಾ ಸಾಧನ ಜೀವಿಗಳು ಪ್ರವಹದಂತೆ । **ವನಜ ಸಂಭವನೊಬ್ಬ** ಸಂಪೂರ್ಣ ಬಿಂಬ ದ । ರ್ಶನ ಕಾಂಬ ಸರ್ವದ ಬಹು ಪ್ರಕಾಶ । ಅನಿಲ ದೇವನು ಮುಖ್ಯ ಉಳಿದವರಿಗಿಂತ । ಮನದಿಚ್ಛೆಯಲ್ಲಿ ಸ್ಪಷ್ಟಾಸ್ಪ ಭೇದ । ದಿನ ದಿನದಲ್ಲಿ ಎನ್ನಿ ಮುಕ್ಕ್ಯಾದ **ತೊಂಭತ್ತೆಂಟು** । ಜನರು ಲಾತವ್ಯರೆಂದು ಕರೆಸುವರು । ಎಣಿಕೆ ಮಾಡಿ ಇಲ್ಲಿಗೆ ಶತ ಜನರನ್ನು ನಿತ್ಯ । ಘನವಾಗಿ ಯೋಗ್ಯತಾ ಅಪರೋಕ್ಷವೋ । ಇನಿತು ನೋಡಿರೋ ಮಿಗಿಲಾದ ಶತಜನ ಸಾಧನ ದೇಹದವರೆಂದು ಕೊಂಡಾಡಿರೋ । ಅನಿಲ ವಿರಂಚಿ ಪರಿಯಂದ

ಉತ್ಪತ್ತಿ। ಜನನ ಇಲ್ಲವೊ ಕಾಣೊ ಅಸ್ಯರಿಂದ। ವನಜಸಂಭವ ವಾಯು ಇದ್ದಲ್ಲಿ ಸರ್ವರು । ಮನೆಮಾಡಿಕೊಂಡಿಪ್ಪರು ಹರಿಕೃಪೆಯಲಿ । ತೃಣ ಸ್ವರೂಪದಲ್ಲಿ ಅರಲವ ಕಾಲ ಜಿಡದೆ । ಗುಣರೂಪ ಕ್ರಿಯೆಪಲ್ಲಿ ಹರಿ ದರುಶನ। ವನಜ ಭವಾಂಡದೊಳಗೀರ್ವರಿಗಧಿಕಾರ। ಅನುವಾಗಿ ಇಪ್ಪದು ತತ್ವಸಹಿತ। ಗುಣತ್ರಯ ಪರಿಯಂತ ಅಂಶಿ ಪ್ರಕಾಶ ವ್ಯಾಪ್ತಿ। ಸನುಮತ ಮೇಲೆ ಅಂತಃಕರಣ ಜನ್ಯ। **ಜಸುಮುವೆ ಇನ್ನೂರು ಜನಕೆ** ಉಳಿದ ಋಜು। ಗಣವೆಲ್ಲ ಅಸ್ಪೃಶ್ಯರಾಗಿಪ್ಪರೊ।ಅನುದಿನ ಇವರೆಲ್ಲ ಜ್ಞಾನವಂತರೋ ಸ। ಜ್ಜನ ಶಿರೋಮಣಿಗಳೊ ನಿರ್ದೋಷರೋ। ಗಣನೆ ಇಲ್ಲದ ರೂಪ ಶೆತ್ತ ಕಾಲಕ್ಕೂ ಸು । ಗುಣವಾರಿಧಿಗಳೆನ್ನ ಪ್ರಳಯ ಸಹಿತ। ಕ್ಷಣ ವೊಂದಾದರು ಈ ಜನಕೆ ಲೇಶಮಾತ್ರ। ದನುಜರಾವೇಶವಿಲ್ಲ ಎಲ್ಲಿದ್ದರೂ। ಇನಕೋಟಿತೇಜ ನಮ್ಮ **ವಿಜಯವಿಠ್ಠಲನ ಘ್ರಿ। ವನಜ ಧ್ಯಾನವನು ಮಾಳ್ಪರು ಅಧಿಕಾಧಿಕವಾಗಿ ॥ ೧೦ ॥**

ಹೀಗೆ ಋಜುಗಳ ಸಾಧನ ವಿಚಾರ ವಿಸ್ತಾರ ಹೇಳಿದ್ದಾರೆ.

**ಭಾವಸೂಚನ :—** ಋಜುರಿತಿ ॥ ಬ್ರಹ್ಮತ್ವಯೋಗ್ಯಜೀವಾಸ್ತು ಋಜವೋ ನಾಮ ಕೀರ್ತಿತಾಃ ॥ ಅನಾದಿಕಾಲತಃ ಸರ್ವೇ ದೋಷಹೀನಾ ಗುಣಾಧಿಕಾಃ ॥ ಕ್ರಮಾತ್ ಪ್ರವರ್ತ(ರ್ಧ)ಮಾನಂ ಸ್ಯಾತ್ ಆಮುಕ್ತೇಸ್ತು ತತೋಽವ್ಯಯಮ್ । ಪರೋಕ್ಷೇಣ ಚ ಪೂರ್ಣಸ್ಸ್ಯಾತ್ ತೇಷಾಂ ಜ್ಞಾನಂ ಸದೈವ ಹಿ॥ ವಿಶೇಷೇ ತ್ವ ಪರೋಕ್ಷಾಚ್ಚ ಕ್ರಮವೃದ್ಧಿರುದೀರತೇತಿ ಸತ್ತತ್ವರತ್ನಮಾಲಾಯಾಂ ಋಜು ಪ್ರಕರಣೇ ॥ ೧೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಋಜು ಸ್ವರೂಪಂ ಆಹ-'ಋಜು' ಇತಿ ॥ 'ಸ್ವಾಭಾವಿಕ' ಅತಿದೋಷ ಹಿತಃ ಕ್ರಮ ಕ್ರಮೇಣ ವರ್ಧಮಾನಮಾಮುಕ್ತೇಃ ॥ 'ಬಿಂಬ'-ಯಾವತ್ ಜ್ಞಾನಂ ಹ್ಯಸ್ತಿ ಮಮಾಪಿ ವಿಷ್ಣೋಃ ತಾವತ್ ಜ್ಞಾನಂ ವಾಯುದೇವಸ್ಯ ಯಾವತ್ ಜ್ಞಾನಂ ವಾಯುದೇವಸ್ಯ ತಾವತ್ ಜ್ಞಾನಂ ಋಜೂನಾಮ್ ॥ ಕ್ರಮೇಣೈಷಾಂ ಜ್ಞಾನವತಾಂ ಋಜೂನಾಂ ಅಸ್ಪಷ್ಟತಾರೂಪಃ ಜ್ಞಾನ-

ಗತಃ ವಿಶೇಷಃ ॥ 'ವೃಜಿನ'-ಪರಶುಕ್ಲತ್ರಯಮ್ ಇತ್ಯುಕ್ತೇಃ॥ ವಿಶೇಷಸ್ತು ಮರುದ್ವಿಲಾಸೇ ॥ 'ವಿಕಾರಃ'-ಕ್ರೋಧಾದಿಃ ॥ 'ದ್ವಿಜೇತಿ'-'ವಿಬಾಧತೇ ಸ್ಮಾನ್' ಇತ್ಯುಕ್ತೇಃ ॥ ೧೨ ॥

## ಕನ್ನಡಾರ್ಥ

ಋಜುಗಳ ಸ್ವರೂಪವನ್ನು ಹೇಳುತ್ತಾರೆ-'ಋಜು' ಈ ಪದ್ಯದಿಂದ.

'ಸಾಹಜ' ಸ್ವಾಭಾವಿಕ. ತಿರೋಧಾನವನ್ನು ಹೊಂದಲಾರವು.

'ಕ್ರಮದಿ' ಋಜುಗಳ ಜ್ಞಾನವು ಮುಕ್ತಿಯವರೆಗೆ ಬೆಳೆಯು ವಂತಹುದು.

'ಬಿಂಬ'-"ಹೇ ವಿಷ್ಣುವೇ ! ನನಗಿರುವಷ್ಟು ಜ್ಞಾನವು ವಾಯುದೇವ ನಿಗೂ ಇರುತ್ತದೆ. ಅವನಿಗಿರುವ ಬಿಂಬಜ್ಞಾನವು ನನಗೂ ಇದೆ. ಋಜು ಗಳಿಗೂ ಆ ಜ್ಞಾನವು ಇರುತ್ತದೆ" ಹೀಗೆ ಋಜುಗಳ ಬಗ್ಗೆ ಪ್ರಮಾಣ ಗಳಿವೆ. ಈ ಜ್ಞಾನವುಳ್ಳ ಋಜುಗಳಲ್ಲಿ 'ಅಸ್ಪಷ್ಟತೆ' ಎಂಬುದು ಜ್ಞಾನ ದಲ್ಲಿರುವ ವಿಶೇಷ. 'ವೃಜಿನ' ವರ್ಜಿತರು. ಯಾಕೆಂದರೆ, ಇವರು ಪರ ಶುಕ್ಲತ್ರಯರಲ್ಲಿ ಸೇರಿದವರು ಎಂದು ಪ್ರಮಾಣಗಳಲ್ಲಿ ಹೇಳಲಾಗಿದೆ. ಹೆಚ್ಚಿನ ವಿವರಗಳನ್ನು '**ಮರುದ್ವಿಲಾಸ**'ವೆಂಬ ಗ್ರಂಥವಲ್ಲಿ ನೋಡಬಹುದು.

'ವಿಕಾರಃ' ಕ್ರೋಧ ಮುಂತಾದ ವಿಕಾರಗಳು.

'ದ್ವಿಜ ಫಣಿ ಮೃಡ ಶಕ್ರ' ಮುಂತಾದವರಲ್ಲಿ ಕಾಮ-ಕ್ರೋಧ ಮುಂತಾದ ವಿಕಾರಗಳಿರುವುದು. 'ವಿಬಾಧತೇಽಸ್ಮಾನ್' ಎಂಬ ಪ್ರಮಾಣ ಗಳಿಂದ ಪ್ರಮಿತವಾದದ್ದು. ॥ ೧೨ ॥

**ಅವತರಣಿಕಾ** :—ಈ ಋಜುಗಣ ಮೊದಲು ಮಾಡಿ ಎಲ್ಲ ತಾತ್ವಿಕ ದೇವತೆಗಳು ಅನಾದಿಕಾಲದಿಂದ ಸಾಮಾನ್ಯವಾಗಿ ಬಿಂಬಾಪರೋಕ್ಷಿಗಳು ಸಾಧನಮಾಡುತ್ತ ಹೆಚ್ಚಿನ ಅಪರೋಕ್ಷ ಬಿಂಬದರ್ಶನ. ಅಧಿಕಾರಾನು ಸಾರ ಬಿಂಬಪ್ರಕಾಶ ಹೆಚ್ಚಿಗೆ ನೋಡುವರೆಂದು ಹೇಳುತ್ತಾರೆ.

**ಸಾಧನಾತ್ಪೂರ್ವದಲಿ ಈ ಋ- |**
**ಜ್ವಾದಿ ತಾತ್ವಿಕರೆನಿಪ ಸುರಗಣ- |**
**ನಾದಿ ಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು ||**
**ಸಾಧನೋತ್ತರ ಸ್ವಸ್ವಬಿಂಬ ಉ- |**
**ಪಾಧಿರಹಿತಾದಿತ್ಯನಂದದಿ |**
**ಸಾದರದಿ ನೋಡುವರು ಅಧಿಕಾರಾನು ಸಾರದಲಿ || ೧೩ ||**

**ಪದ್ಯಾರ್ಥ** :—ಈ ಋಜ್ವಾದಿ ತಾತ್ವಿಕರೆನಿಪ ಸುರಗಣ=ಹಿಂದೆ ಹೇಳಿದ ಋಜುಗಣವೇ ಮೊದಲಾಗಿ ಉಳ್ಳ ತತ್ವಾಭಿಮಾನಿ ದೇವತೆಗಳ ಸಮೂಹವು, ಸಾಧನಾತ್ಪೂರ್ವದಲಿ=ಸಾಧನಮಾಡಲು ಸೃಷ್ಟಿಗೆ ಬಾರದ ಮೊದಲಿಗೇವೆ, ಅನಾದಿ=ಬಹುಕಾಲದಿಂದ ನಿತ್ಯರಾಗಿ ಅಸೃಜ್ಯರಾಗಿರುವಾಗಲೇ,ಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು=ವಿಶೇಷವಿಲ್ಲದ ಸಾಧಾರಣವಾದುದಕ್ಕೆ ಸಾಮಾನ್ಯವೆನ್ನುತ್ತಾರೆ. ಈ ಋಜುಗಳೇ ಮೊದಲಾಗಿ ಎಲ್ಲ ತಾತ್ವಿಕರಿಗೆ, ಸಾಧಾರಣ ಅನಾದಿಕಾಲದಿಂದ ಬಿಂಬಾಪರೋಕ್ಷವು ಇರುವುದು (ಜ್ಞಾನ, ಕರ್ಮಯೋಗಿಗಳಂತೆ ಸಾಧನದಿಂದ ಅಪರೋಕ್ಷ ಹೊಂದಿದವರಲ್ಲ). ಆದರೆ ಈ ಋಜ್ವಾದಿ ತಾತ್ವಿಕ ಸುರರು, ಸಾಧನೋತ್ತರ= ತಮ್ಮ ಒಂದೊಂದು ಕಲ್ಪದಲ್ಲಿ ಹೆಚ್ಚಿನ ಸಾಧನ ಕ್ರಮೇಣ ವೃದ್ಧಿಯಾಗುತ್ತದೆಯೋ ಸಾಧನಾನಂತರ ಕ್ರಮವಾಗಿ, ಸ್ವಸ್ವಬಿಂಬ=ತಮ್ಮ ತಮ್ಮ ಸ್ವರೂಪ ಬಿಂಬನಾದ ಹರಿಯನ್ನು,ಉಪಾಧಿ ರಹಿತಾದಿತ್ಯನಂದದಿ=ಮೋಡಗಳಿಲ್ಲದೆ ಸುಪ್ರಕಾಶಮಾನನಾಗಿರುವ ಆದಿತ್ಯ =ಸೂರ್ಯನೋಪಾದಿಯಲಿ ಸಾದರದಿ ನೋಡುವರು = ಬಹು ಭಕ್ತಿಯುತರಾಗಿ, ನೋಡುವರು= ನೋಡುತ್ತ ಕಾಂಬುವರು, ಅಧಿಕಾರಾನುಸಾರದಲಿ=ತಮ್ಮ ಸ್ವರೂಪ ಯೋಗ್ಯತೆಯಂತೆ ತಮ್ಮ ಸಾಧನಕಲ್ಪಗಳಲ್ಲಿ ಹೆಚ್ಚಿಗೆ ಬಿಂಬಪ್ರಕಾಶ ನೋಡುತ್ತ ಆನಂದಪಡುವರು.

**ಭಾವಸಂಚಕ** :— ಸಾಧನೇತಿ ಸಾಮಾನ್ಯಾಪರೋಕ್ಷಿ ತಿ।ಋಜ್ವಾದಿ ತಾತ್ವಿಕಾಸ್ಸರ್ವೇ ಅನಾದಿತೋ ಹ್ಯಪರೋಕ್ಷಿಣಃ || ಸಾಮಾನ್ಯೇನ ವಿಶೇಷೇಣ ಸ್ವಸ್ವಯೋಗ್ಯಾಪರೋಕ್ಷಿಣಃ ಇತಿ ಪ್ರಕಾಶಸಂಹಿತಾಯಾಮ್

ಆದಿತ್ಯೇತಿ ॥ ಸೌರಿಪ್ರಕಾಶೇ ಚ ಯಥೈವ ದರ್ಶನಂ ತಥಾ ಮಮ ಜ್ಞಾನಗತೋ ವಿಶೇಷೇಣ ಇತಿ ॥ ಗಾರುಡೇ ಹರಿಂ ಪ್ರತಿ ಬ್ರಹ್ಮ ವಚನಮ್ ॥ ೧೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅಪರೋಕ್ಷ ವಿಶೇಷಂ ತೇಷಾಂ ಆಹ-"ಸಾಧನ" ಇತಿ ॥ ಅತ್ರ ವಿಶೇಷಃ ॥ ಅಪರೋಕ್ಷಃ ದ್ವಿವಿಧಃ ॥ ಸಾಮಾನ್ಯ ವಿಶೇಷಭೇದಾತ್॥ ಆದ್ಯಃ ರಾಮಕೃಷ್ಣಾದೀನಾಂ ಭಗವತ್ವೇನ । ತತ್ರ ನ ಸಾಮಾನ್ಯಸೂತ್ರಂ ಮಾನಮ್॥ ಸೋಽಪರೋಕ್ಷಃ ಮೋಕ್ಷಾಜನಕತ್ವಾತ್ ತಥಾ ಉಚ್ಯತೇ ॥ ದ್ವಿತೀಯಃ ಬಿಂಬದರ್ಶನಮ್ ॥ ಸಾಮಾನ್ಯದರ್ಶನಾತ್ ಲೋಕಾ ಮುಕ್ತೇರ್ಯೋಗ್ಯಾ ಸವರ್ಶನಾತ್ ಇತಿ ತತ್ರ ಮಾನಮ್ ॥ ರಾಮಾ ದೀನಾಂ ಬಹು ಮಾನುಷತ್ವೇನ ದರ್ಶನಂ ಅಪರೋಕ್ಷಾಭಾಸಃ ಅನರ್ಥ ಹೇತುಃ ॥ ಯಥೋಕ್ತಂ "ಅವತಾರಾನ್ ಋತೇ ವಿಷ್ಣುಂ ಚಕ್ಷುಷಾ ನ ಹಿ ಪಶ್ಯತಿ ॥ ಅವತಾರಾನ್ ಅಪಿ ಯದಾ ಜ್ಞಾನದೃಷ್ಟ್ಯೈವ ಪಶ್ಯತಿ" ಇತ್ಯುಕ್ತಮ್ ಕಾಠಕೇ ॥ ಸ್ಥೂಲದೃಗ್ಭಿಃ ಅಪರೋಕ್ಷಸ್ತು ಬಾಹ್ಯಃ ಸ್ಯಾತ್ ಅಪರೋಕ್ಷಕಃ ॥ ರಾಮಕೃಷ್ಣಾದಿ ರೂಪಾಣಿ ಬಹಿಃ ಪಶ್ಯಂತಿ ಹಿ ಕ್ವಚಿತ್ ॥ ಮಾನುಷತ್ವೇನ ಪಶ್ಯಂತಿ ಅಪರೋಕ್ಷೋ ನ ಸಃ ಸ್ಮೃತಃ ॥ಸ್ವರೂಪಚಕ್ಷುಷಾ ದೃಷ್ಟಿಃ ಅಪರೋಕ್ಷ ಇತೀರ್ಯತೇ॥ ಸ್ವರೂಪಾಖ್ಯಾಪರೋಕ್ಷಸ್ತು ಸರ್ವೇಷಾಮೇವ ಮುಕ್ತಯೇ" ॥ ಇತಿ ॥

ತತ್ರಾಪಿ ವಿಶೇಷಃ ಋಜ್ವತಿರಿಕ್ತಾನಾಂ ಸಾಮಾನ್ಯದೃಷ್ಟಿರಪಿ ಪೂರ್ವೋಕ್ತಸಾಧನಸಾಧ್ಯಾ ॥ ಋಜೂನಾಂ ಸಹಜೋಽಯಂ ಬಿಂಬಾ ಪರೋಕ್ಷಾರ್ಥ ಪ್ರಯತ್ನಃ ಶತ ಜನ್ಮಸು ॥ ಉಕ್ತಂ ಚ-ಋಜ್ವಾದಿ ತಾತ್ವಿಕಾಃ ಸರ್ವೇಽನಾದಿತೋ ಹ್ಯಪರೋಕ್ಷಿಣಃ ॥ ಸಾಮಾನ್ಯತೋ ವಿಶೇಷೇಣ ಸ್ವಸ್ವಯೋಗ್ಯಾ ಪರೋಕ್ಷಿಣಃ ॥ ಕ್ಲೃಪ್ತಸಾಧನೋಚಿತ ಮಹಾ ಸಾಧನೇನ ಭವಂತಿ ಹಿ ॥ ಕ್ಲೃಪ್ತ ಘನಂ ವಿವರಿಷ್ಯೇ ಚ ಇತರತ್ರ ॥ ಶತಜನ್ಮಕೃತಾನಾಂ ತು ಋಜೂನಾಂ ಪೂರ್ವಮೇವಹಿ ॥ ಅಪರೋಕ್ಷ

ಭಾವ ಹ್ಯಾ ಏವ ಹ್ಯಜ್ಞಾನಂ ಸಮುದೀರಿತಮ್ ॥ ಅಪರೋಕ್ಷ ಜ್ಞಾನಾನಂತರಂ ತು ನಾಸ್ತ್ಯಜ್ಞಾನಂ ನ ಸಂಶಯಃ ॥ ಶತಜನ್ಮಸು ದೇವೇಶ ಹ್ಯಾಪರೋಕ್ಷ್ಯೇಣ ಸರ್ವದಾ ॥ ಪೂರ್ಣಜ್ಞಾನಂ ಮಮಾಸ್ತ್ಯೇವ ನಾತ್ರ ಕಾರ್ಯಾ ವಿಚಾರಣಾ॥ ಶತಜನ್ಮಸು ಪೂರ್ವಂ ತು ಹ್ಯಾಪರೋಕ್ಷ್ಯಂ ಮಮ ಪ್ರಭೋ ॥ ಪೂರ್ಣಜ್ಞಾನಂ ಸದಾಸ್ಯಸ್ತೀ ತ್ಯೇವಮಾಹುರ್ಮನೀಷಿಣಃ ॥ ಅನ್ಯದಪ್ಯುಕ್ತಮ್ ॥ ಯತಂತಿ ಹ್ಯಪರೋಕ್ಷಾರ್ಥಂ ಋಜವಃ ಶತಸಮ್ಮಿತಾಃ ॥ ಸದಾ ಅನಂತ ವೇದೋಕ್ತಗುಣೋಪಾಸನಯಾ ಹರೇಃ॥ ಸದಾ ಯತಂತೇ ಕ್ರಮಶಃ ಹ್ಯುಪಾಸಿತ ಗುಣೋಚ್ಚಯಾಃ॥ ಭವಂತಿ ವೇಧಾಃ ಸಂಪೂರ್ಣಸಗುಣೋಪಾಸ್ತಿಪೂಸಿಹ ॥ ಕಲ್ಪೇ ಮುಕ್ತಾಃ ಭವಂತ್ಯೇವ ಮುಚ್ಯಂತೇ ನೈಕದೈವ ಹಿ ॥ ಏವಂ ಚ ಬ್ರಹ್ಮಮಾನೇನ ಕಲ್ಪದ್ವಿಶತಕೇನ ಚ । ಪೂರ್ಣಭಕ್ತಿಃ ಪೂರ್ಣಗುಣೋಪಾಸ್ತಿಃ ಮುಕ್ತಃ ಭವತ್ಯಲಮ್ ॥ "ಉಪಾಧಿಃ". ವೇಷಾದಿಃ ॥ ಅಧಿಕಾರಾನುಸಾರಾ। ತತ್ಕ್ರಮಃ ಸಪ್ತಚತ್ವಾರಿಂಶತ್ ಪದವರ್ಣಕೇ ಸ್ಪಷ್ಟೀಕರಿಷ್ಯಾಮಃ ॥ ೧೩ ॥

## ಕನ್ನಡಾರ್ಥ

ಅವರ ಅಪೇಕ್ಷಿತವಾದ ವಿಶೇಷ ವಿಷಯವನ್ನು ಈ ಪದ್ಯದಿಂದ ತಿಳಿಸುತ್ತಾರೆ.

ಇಲ್ಲಿ ವಿಶೇಷ— ಸಾಮಾನ್ಯ ಹಾಗೂ ವಿಶೇಷವೆಂದು ಅಪರೋಕ್ಷವು ಎರಡು ತರಹದ್ದಾಗಿದೆ. ೧ ನೆಯದು:— ರಾಮಕೃಷ್ಣ ಮುಂತಾದ ಅವತಾರಗಳನ್ನು ಕೇವಲ ದೇವರೆಂಬ ದರ್ಶನದವು ಸಾಮಾನ್ಯ ಪರೋಕ್ಷವೆನಿಸುತ್ತದೆ. ಇದರ ಬಗ್ಗೆ ಸಾಮಾನ್ಯಸೂತ್ರವು ಪ್ರಮಾಣವಲ್ಲ. ಈ ಸಾಮಾನ್ಯಾಪರೋಕ್ಷವು ಮೋಕ್ಷಕ್ಕೆ ವಿಶೇಷ ಕಾರಣವೆನಿಸಲಾರದು. ಆದುದರಿಂದ ಸಾಮಾನ್ಯಾಪರೋಕ್ಷವೆಂದು ಹೆಸರು.

ಬಿಂಬ ಸಾಕ್ಷಾತ್ಕಾರವು ವಿಶೇಷಾಪರೋಕ್ಷವೆನಿಸುತ್ತದೆ. ಸಾಮಾನ್ಯ ಅಪರೋಕ್ಷದಿಂದ ಜನರು ಮುಕ್ತಿ ಯೋಗ್ಯರೆನಿಸುತ್ತಾರೆ.

ಇನ್ನು ರಾಮಕೃಷ್ಣ ಮುಂತಾದ ಭಗವದವತಾರಗಳನ್ನು ಹೊರಗೆ ಮನುಷ್ಯರೆಂದು ನೋಡುವ ಪ್ರತ್ಯಕ್ಷ ಸಾಕ್ಷಾತ್ಕಾರವು ಸರಿಯಾದ ಅಪರೋಕ್ಷವಲ್ಲ; ಅದು ಅನರ್ಥಕ್ಕೆ ಕಾರಣವಾಗಿರುತ್ತದೆ. "ವಿಷ್ಣುವನ್ನು ಅವತಾರಗಳಲ್ಲಿ ಅಲ್ಲದೇ ಬೇರೆಯಾಗಿ ನೋಡಲು ಸಾಧ್ಯವಿಲ್ಲ. ಅವತಾರಗಳನ್ನೂ ಸಹ ಜ್ಞಾನದೃಷ್ಟಿಯಿಂದಲೇ ನೋಡಬೇಕು" ಹೀಗೆ ಕಾಠಕದಲ್ಲಿ ಹೇಳಲಾಗಿದೆ.

ಸ್ಥೂಲಹೃದಯದಿಂದ ನೋಡುವ ಅಪರೋಕ್ಷವು ಬಾಹ್ಯ ಅಪರೋಕ್ಷವೆನಿಸುತ್ತದೆ. ರಾಮಕೃಷ್ಣಾದಿ ರೂಪಗಳನ್ನು ಮನುಷ್ಯರೆಂದು ಬಾಹ್ಯವಾಗಿಯೇ ನೋಡುತ್ತಾರೆ. ಈ ಪ್ರತ್ಯಕ್ಷವು ಅಪರೋಕ್ಷವೆನ್ನಿಸಲಾರದು. ಸ್ವರೂಪ ಚಕ್ಷುರಿಂದ್ರಿಯದಿಂದ ದರ್ಶನ ಪಡೆಯುವುದೇ ನಿಜವಾದ ಅಪರೋಕ್ಷವೆನಿಸುತ್ತದೆ. ಸ್ವರೂಪೇಂದ್ರಿಯಗಳಿಂದ ಆಗುವ ಭಗವತ್ಸ್ವರೂಪ ಸಾಕ್ಷಾತ್ಕಾರವು ಮೋಕ್ಷಕಾರಣವೆನಿಸುತ್ತದೆ.

ಇದರಲ್ಲಿಯೂ ವಿಶೇಷ:— ಋಜುಗಳನ್ನು ಬಿಟ್ಟು ಬೇರೆಯವರಿಗೆ ಸಾಮಾನ್ಯಾಪರೋಕ್ಷವು ಸಹ ಹಿಂದೆ ಹೇಳಿದ ಋಜುಗಳಿಗೆ ಈ ಬಿಂಬಾಪರೋಕ್ಷದ ಬಗ್ಗೆ ಪ್ರಯತ್ನವು ಸ್ವಾಭಾವಿಕವಾಗಿ ನೂರು ಜನ್ಮಗಳಲ್ಲಿ ಇದ್ದೇ ಇರುತ್ತದೆ.

"ಋಜು ಮುಂತಾದ ತಾತ್ವಿಕರೆಲ್ಲರಿಗೂ ಅನಾದಿ ಕಾಲದಿಂದ ಅಪರೋಕ್ಷವಿರುತ್ತದೆ. ಸಾಮಾನ್ಯ ಹಾಗೂ ವಿಶೇಷ ಅಪರೋಕ್ಷಗಳೆರಡೂ ಅವರವರ ಯೋಗ್ಯತಾನುಸಾರವಾಗಿ ಅವರಲ್ಲಿಗೆ ಆಯಾ ಕ್ಲೃಪ್ತಕಾಲದ ಉಚಿತವಾದ ಸ್ಥಾನಗಳಿಂದ ಬರುತ್ತದೆ;" ಎಂದು ಹೇಳಲಾಗಿದೆ. "ಕ್ಲೃಪ್ತ" ಈ ಶಬ್ದಾರ್ಥವನ್ನು ಬೇರೆ ಕಡೆಯಲ್ಲಿ ವಿವರಿಸುವೆವು.

"ನೂರು ಜನ್ಮಗಳಲ್ಲಿ ಬರಲಾರದ ಋಜುಗಳಿಗೆ (ನೂರು ಜನ್ಮಗಳ ಪೂರ್ವದಲ್ಲಿ) ವಿಶೇಷ ಅಪರೋಕ್ಷವಿರುವುದಿಲ್ಲ. ಇದೇ ಅವರಿಗೆ ವಿಶೇಷಾಪರೋಕ್ಷ ಅಭಾವವೇ ಅಜ್ಞಾನವೆನಿಸುತ್ತದೆ. ವಿಶೇಷ ಅಪರೋಕ್ಷ

ಜ್ಞಾನವಾದ ಅನಂತರ ಅವರಿಗೆ ಅಜ್ಞಾನ ಸಂಶಯಗಳಾವವೂ ಇರುವುದಿಲ್ಲ. ಹೇ ದೇವೇಶ ! ನೂರು ಜನ್ಮಗಳಲ್ಲಿ ಅಪರೋಕ್ಷವಿದ್ದುದರಿಂದ ಪೂರ್ಣ ಜ್ಞಾನವು ನನಗೆ ಇದ್ದೇ ಇದೆ; ಇದರಲ್ಲಿ ಸಂಶಯವನ್ನು ತಾಳಬಾರದು ನೂರು ಜನ್ಮಗಳಲ್ಲಿ ಪೂರ್ವದಲ್ಲಿ ನನಗೆ ಅಪರೋಕ್ಷವಿದ್ದು, ಪೂರ್ಣ ಜ್ಞಾನವಿದೆಯೆಂದು ಮನೀಷಿಗಳು ಹೇಳುತ್ತಾರೆ." ಎಂದು ಹೇಳಲಾಗಿದೆ.

ಇನ್ನು ಹೇಳಿದ್ದೇನಂದರೆ—"ನೂರು ಸಂಖ್ಯಾಕ ಋಜುಗಳು ಅಪರೋಕ್ಷನ ಸಲುವಾಗಿ ಪ್ರಯತ್ನಿಸುತ್ತಾರೆ; ಅನಂತ ವೇದೋಕ್ತಗುಣಗಳನ್ನು ಸದಾ ಉಪಾಸಿಸುತ್ತಾರೆ. ಶ್ರೇಷ್ಠ ಗುಣಗಳನ್ನು ಉಪಾಸಿಸುತ್ತಾ ಕ್ರಮವಾಗಿ ಸದಾ ಯತ್ನಿಸುತ್ತಾರೆ. ಅವರೇ ಸಂಪೂರ್ಣ ಗುಣೋಪಾಸನೆಯುಳ್ಳ ಚತುರ್ಮುಖ ಪದವಿಯನ್ನು ಹೊಂದಿರುತ್ತಾರೆ. ಕಲ್ಪಪರಿಸಮಾಪ್ತಿಯಾದ ಅನಂತರ ಮುಕ್ತರಾಗುತ್ತಾರೆ. ಬ್ರಹ್ಮಮಾನದಿಂದ ೨೦೦ ಕಲ್ಪಗಳ ಸಾಧನದಿಂದ ಪೂರ್ಣ ಜ್ಞಾನ-ಭಕ್ತಿಗಳಿಂದ ಹರಿಯ ಸ್ವಯೋಗ್ಯ ಪೂರ್ಣ ಗುಣೋಪಾಸನೆಯಿಂದ ಉತ್ತಮ ಮುಕ್ತಿಯನ್ನು ಪಡೆಯುತ್ತಾರೆ"

ಸೂರ್ಯನಿಗೆ ಮೇಘ ಮುಂತಾದವುಗಳು ಉಪಾಧಿಗಳೆನಿಸುವುವು. ನಿರಭ್ರ ಆಕಾಶದಲ್ಲಿ ಮೆರೆಯುವ ರವಿಪ್ರಕಾಶದಂತೆ ಋಜುಗಳ ಅಪರೋಕ್ಷವಿರುತ್ತದೆ. ಅದರಲ್ಲೂ ಅವರವರ ಯೋಗ್ಯತಾನುಸಾರವೇ ಆಗಿರುತ್ತದೆ. ಅದರ ಬಗೆಯನ್ನು **೪೭ನೆಯ ಪದ್ಯದ ವ್ಯಾಖ್ಯಾನವಲ್ಲಿ** ವಿಶದಪಡಿಸುವೆವು. ॥ ೧೩ ॥

**ಅವತರಣಿಕಾ :**— ಸದ್ಭಕ್ತಿಯೋಗಿಗಳಾದ ಬ್ರಹ್ಮ, ವಾಯು, ವಾಣಿ, ಭಾರತೀದೇವಿ-ಈ ನಾಲ್ವರು ಅಭಿನ್ನ ಭಕ್ತರೆಂದೆನಿಸುವರು. ಮತ್ತು ಈ ನಾಲ್ಕು ಜನರು ಗರುಡ, ಶೇಷ, ರುದ್ರಾದಿಗಳೊಳಗೆ ನಿಯಾಮಕರಾಗಿ ವ್ಯಾಪಾರ ಮಾಡುತ್ತಾರೆಂದು ಹೇಳುತ್ತಾರೆ.

**ಭಿನ್ನ ಭಕ್ತರು ಎನಿಸುತಿಹರು ಸು-**
**ಪರ್ಣ ಶೇಷಾದ್ಯಮರರೆಲ್ಲಾ**

ಚ್ಛಿನ್ನ ಭಕ್ತರು ನಾಲ್ವರೆನಿಪರು ಭಾರತೀ ಪ್ರಾಣ ॥
ಸೊನ್ನೊಡಲ ವಾಗ್ದೇವಿಯರು ಪಣೆ- ।
ಗಣ್ಣ ಮೊದಲಾದವರೊಳಗೆ ತ- ।
ತ್ತನ್ನಿಯಾಮಕರಾಗಿ ವ್ಯಾಪಾರವನು ಮಾಡುವರು ॥ ೧೪ ॥

**ಪದ್ಯಾರ್ಥ :**—ಸುಪರ್ಣ=ಸಮೀಚಿನವಾದ ಬಂಗಾರವಂತೆ ಹೊಳೆವ ರೆಕ್ಕೆಗಳುಳ್ಳ ಗರುಡದೇವರು, ಶೇಷಾದ್ಯಮರರೆಲ್ಲ=ಶೇಷ, ರುದ್ರ, ಇಂದ್ರ ದೇವರೆ ಮೊದಲಾದ ದೇವತೆಗಳೆಲ್ಲರೂ, ಛಿನ್ನಭಕ್ತರು ಎನಿಸುತಿಹರು= ಇವರಲ್ಲಿರುವ ಭಕ್ತಿ, ಜ್ಞಾನಾದಿಗಳು ಸಂಪೂರ್ಣವಾಗಿ ಒಂದೇ ರೀತಿಯಾಗಿ ರುವುದಿಲ್ಲ. ಕೆಲವು ಕಾಲತಿರೋಧಾನ ಉಂಟು. ಕಾರಣ-ಗರುಡ, ಶೇಷಾದಿಗಳು, ಛಿನ್ನ=ಒಡೆಯಲ್ಪಟ್ಟ ಸಂಪೂರ್ಣವಾಗದಿದ್ದ ಭಕ್ತರು= ಭಕ್ತಿಯುಳ್ಳವರು. ಆದರೆ ಭಾರತೀ=ಭಕ್ತಿಗೆ ಅಭಿಮಾನಿಯಾದ ಭಾರತೀ ದೇವಿಯರು, ಪ್ರಾಣ=ವಾಯುದೇವರು, ಸೊನ್ನೊಡಲ=ಬಂಗಾರ ಉದರ ಹಿರಣ್ಯಗರ್ಭ=ಬ್ರಹ್ಮದೇವರು, ವಾಗ್ದೇವಿ=ವಾಕ್ಯಕ್ಕೆ ಅಭಿಮಾನಿಯಾದ ಸರಸ್ವತೀದೇವಿಯರು, ಅಚ್ಛಿನ್ನಭಕ್ತರು ನಾಲ್ವರೆನಿಪರು=ಈ ನಾಲ್ಕುಜನರು ಭಕ್ತಿ ಅವಿಚ್ಛಿನ್ನವಾಗಿ ಬಿಡದೇ, ಒಂದೇ ರೀತಿ ತಿರೋಧಾನವಿಲ್ಲದೇ ಸಂಪೂರ್ಣವಾಗಿ ಸಂತತ ಭಕ್ತಿ ಜ್ಞಾನಾದಿಗಳು ಇರುವುದರಿಂದ ಅಚ್ಛಿನ್ನ ಭಕ್ತರೆಂದು ಕರೆಸುತ್ತಾರೆ. ಈ ನಾಲ್ವರು, ಪಣೆಗಣ್ಣ ಮೊದಲಾದವ ರೊಳಗೆ=ಹಣೆಯಲ್ಲಿ ಕಣ್ಣುಳ್ಳ ಫಾಲನೇತ್ರನಾದ ರುದ್ರದೇವರೆ ಮೊದಲಾದ ವರೊಳಗೆ=ರುದ್ರ, ಇಂದ್ರಾದಿ ದೇವತೆಗಳು ತತ್ತ್ವಾಭಿಮಾನಿಗಳಲ್ಲಿಯೂ, ಮೂಲದಲ್ಲಿಯೂ, ದೇವತೆಗಳ ಅವತಾರಾದಿಗಳಲ್ಲಿಯೂ ತತ್ತನ್ನಿಯಾಮಕ ರಾಗಿ=ಆಯಾ ತತ್ವ, ತತ್ವಪತಿಗಳಿಗೆ ನಿಯಮನ ಮಾಡುವರಾಗಿ, ವ್ಯಾಪಾರ ವನು ಮಾಡುವರು=ಶ್ರೀಹರಿಯ ಪ್ರೇರಣೆಯಿಂದ ಬ್ರಹ್ಮ, ವಾಯು, ವಾಣಿ ಶ್ರದ್ಧೆಯರು ತಮ್ಮ ಅವರರಾದ ಎಲ್ಲ ದೇವತೆಗಳಲ್ಲಿ ನಿಂದು ಕಾರ್ಯ ಮಾಡುವರು.

**ಭಾವಸೂಚನ :**—ಛಿನ್ನೇತಿ ಅಚ್ಛಿನ್ನೇತಿ ॥ ಅಚ್ಛಿನ್ನಭಗವದ್ಭಕ್ತ್ಯಾ ಕಾಮಕರ್ಮವಿವರ್ಜಿತ ಇತಿ ॥ ಋಜುಪ್ರಕರಣೇ ॥ ಪಣೆಗಣ್ಣ ಭಗಸ್ಯ

ಮಾರ್ಗದಲ್ಲಿ ನಿರಂತರ ಕಾಮ್ಯ ಕರ್ಮಾದಿಗಳಿಂದ ವಿವರ್ಜಿತರು ಎಂದು ಅಭಿಪ್ರಾಯ ॥ ೧೪ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಛಿನ್ನ' ಇತಿ ॥ ವಕ್ರಯೋಗಿತ್ವಾತ್ ಇತಿ ಶೇಷಃ ॥ "ಯೋಗಸ್ಯ ವಕ್ರತಾ ನಾಮ ಕಾಮ್ಯೇನ ಹರಿಪೂಜನಮ್ ॥" ಇಂದ್ರಾದಿಕಾನಾಂ ಕದಾಚಿದಸ್ತಿ ಪಕ್ಷೀಂದ್ರ ಯತೋ ನ ಋಜವಃ ಸ್ಮೃತಾಃ ॥ 'ಸೊನ್ನ'- ಸ್ವರ್ಣ ॥ 'ಪಣೆಗಣ್ಣ'-ರುದ್ರ ॥ ೧೪ ॥

### ಕನ್ನಡಾರ್ಥ

ಛಿನ್ನಭಕ್ತರೆಂದರೆ-ವಕ್ರವಾದ ಯೋಗವುಳ್ಳವರು ಎಂದು ಅರ್ಥ. ಕಾಮ್ಯಫಲವನ್ನುದ್ದೇಶಿಸಿ ಹರಿಯನ್ನು ಪೂಜಿಸುವುದು ಯೋಗದ ವಕ್ರತೆ ವಕ್ರಯೋಗವೆನಿಸುತ್ತದೆ. "ರುದ್ರ, ಇಂದ್ರ ಮುಂತಾದವರಿಗ ಈ ವಕ್ರ ಯೋಗವು ಒಮ್ಮೊಮ್ಮೆ ಇರುವುದು" ಯಾಕೆಂದರೆ-ಅವರು ಋಜುಗಳಲ್ಲ. ಆದುದರಿಂದ ಒಮ್ಮೊಮ್ಮೆ ಕಾಮ್ಯಫಲೋದ್ದೇಶದಿಂದ ಹರಿಯನ್ನು ಪೂಜಿಸುತ್ತಾರೆ.

'ಸೊನ್ನ'-ಸುವರ್ಣ, ಬಂಗಾರ. 'ಪಣೆಗಣ್ಣ'-ಹಣೆಯಲ್ಲಿ ಕಣ್ಣುಳ್ಳವ ರುದ್ರ. ॥ ೧೪ ॥

ಅವತರಣಿಕಾ :—ಹಿಂದಿನ ಪದ್ಯದಲ್ಲಿ ಅಚ್ಛಿನ್ನ ಭಕ್ತರಾದ ವಾಯ್ವಾದಿಗಳು, ತತ್ತನ್ನಿಯಾಮಕರಾಗಿ ವ್ಯಾಪಾರ ಮಾಡುವರೆಂದು ಹೇಳಿದ್ದು, ಆ ವ್ಯಾಪಾರಗಳನ್ನು ಈ ಪದ್ಯದಲ್ಲಿ ವಿವರಿಸುತ್ತಾ ಶ್ರೀ ವಾಯು ದೇವರ ಮಹಿಮಾ ಹೇಳುತ್ತಾರೆ.

**ಹೀನ ಸತ್ಕರ್ಮಗಳೆರಡು ಪವ- ।**
**ಮಾನ ದೇವನು ಮಾಳ್ಪನಿದಕನು- ।**
**ಮಾನವಿಲ್ಲೆಂದೆನುತ ದೃಢ ಭಕ್ತಿಯಲಿ ಭಜಿಪರಿಗೆ ।**

**ಪ್ರಾಣಪತಿ ಸಂಪ್ರೀತನಾಗಿ ಕು- |**
**ಯೋನಿಗಳ ಕೊಡ ಎಲ್ಲ ಕರ್ಮಗ- |**
**ಳಾನೆ ಮಾಡುವೆನೆಂಬ ಮನುಜರ ನರಕವೈದಿಸುವ || ೧೫ ||**

**ಪದ್ಯಾರ್ಥ** :—ಗರುಡ, ಶೇಷಾದಿ ಅಮರರೆ ಮೊದಲಾದ ಸಕಲ ತ್ರಿವಿಧ ಜೀವರುಗಳಲ್ಲಿ, ಹೀನ=ಕೆಟ್ಟ, ನೀಚ, ದುಷ್ಟ, ಪಾಪಕರ್ಮಗಳು; ಕೆಲಸಗಳು. ಸತ್ಕರ್ಮ=ಪುಣ್ಯಕಾರ್ಯ, ಒಳ್ಳೆಯ ಕೆಲಸಗಳೆರಡು=ಪಾಪ ಪುಣ್ಯ ಕರ್ಮಗಳಲ್ಲಿ ನಿಯಾಮಕರಾಗಿ ಈ ಎರಡೂ ಕಾರ್ಯಗಳು. ಪವಮಾನದೇವನು="ಪವಮಾನಾಭಿಧೋ ವಾಯುಃ ಸ್ವರೂಪಸ್ಯ ನಿಯಾಮಕಃ" ಎಂದು ಹಿಂದೆ ಹೇಳಿದಂತೆ ಸ್ವರೂಪದಲ್ಲಿದ್ದು, ಆಯಾ ಜೀವರ ಯೋಗ್ಯತೆಯಂತೆ ಶ್ವಾಸಕಾರ್ಯದ್ವಾರಾ ಪ್ರೇರಿಸಿ, ಲಿಂಗ, ಅನಿರುದ್ಧ, ಸ್ಥೂಲ ದೇಹಗಳಲ್ಲಿಯೂ ಇದ್ದು, ಪುಣ್ಯ-ಪಾಪ ಎರಡೂ ಕರ್ಮಗಳನ್ನು ಮಾಡುವನು. ಇದಕ್ಕೆ ಅನುಮಾನವಿಲ್ಲೆಂದೆನುತ=ಇದರಲ್ಲಿ ಕಿಂಚಿತ್ತಾದರೂ ಸಂದೇಹವಿಲ್ಲವೆಂದು ನಿಸ್ಸಂದೇಹದಿಂದ ತಿಳಿದು, ದೃಢಭಕ್ತಿಯಲಿ ಭಜಿಪರ್ಗೆ=ನಿಶ್ಚಲವಾದ ಭಕ್ತಿಯಿಂದ ಪವಮಾನ ಮಹಿಮೆ ತಿಳಿದು ಸ್ತೋತ್ರ ಮಾಡುವ ಭಕ್ತರುಗಳಿಗೆ, ಪ್ರಾಣಪತಿ ಸಂಪ್ರೀತನಾಗಿ=ಪ್ರಾಣವಾಯು, ಪವಮಾನನ ಒಡೆಯ ಶ್ರೀಹರಿಯು ವಿಶೇಷವಾಗಿ ಸಂಪ್ರೀತನಾಗಿ, ಕುಯೋನಿಗಳ ಕೊಡ=ಜ್ಞಾನಹೀನವಾದ ಪಶು-ಪಕ್ಷ್ಯಾದಿಜನ್ಮಗಳಲ್ಲದೆ, ಮಾನವರಲ್ಲಿಯೂ ಅಜ್ಞಾನ, ಮಿಥ್ಯಾಜ್ಞಾನ ವಾದವುಳ್ಳ ಮಾಯಿಗಳ ಜನ್ಮ ಕೊಡನು. ಇವೇ ಕೆಟ್ಟ ಯೋನಿಗಳು. ಇದರ ವಿಪರೀತವಾಗಿ ಎಲ್ಲ ಕರ್ಮಗಳಾನೆ ಮಾಡುವನೆಂಬ ಮನುಜರ=ಶ್ರೀಹರಿ, ವಾಯು ಎಲ್ಲ ತಾತ್ವಿಕರ ವ್ಯಾಪಾರ ಮರೆತು, ಸಕಲ ವ್ಯಾಪಾರಗಳನ್ನು ನಾನೇ ಸ್ವತಂತ್ರ ಕರ್ತಾರ, ಎಲ್ಲ ಕರ್ಮಗಳನ್ನು ನಾನೇ ಮಾಡುವನೆಂಬ ಜ್ಞಾನವುಳ್ಳ ಮನುಜರ=ಮನುಜಾಧಮರಾದಿ ದೈತ್ಯಾದಿಗಳನ್ನು, ನರಕವೈದಿಸುವ=ರೌರವ ಕುಂಭೀಪಾಕಾದಿ ನರಕದಲ್ಲಿ ಹಾಕುವನು.

**ಭಾವಸೂಚನ** :—ಹೀನೇತಿ || ೧೫ ||



## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಹೀನ' ಇತಿ ॥ ೧೫ ॥

## ಕನ್ನಡಾರ್ಥ

ಈ ಪದ್ಯವು ಸುಲಭವಿದೆ. ॥ ೧೫ ॥

**ಅವತರಣಿಕಾ** :—ವಾಯುದೇವರು ಪಂಚವಿಧ ಮುಕ್ತಿಯೋಗ್ಯರಲ್ಲಿದ್ದು ಕಾರ್ಯಮಾಡುವನಲ್ಲದೇ, ಬಹಿರಂಗದಲ್ಲಿ ಅಂದರೆ, ಬಹಿಃ ಬ್ರಹ್ಮಾಂಡದ ಬುಡದಲ್ಲಿ ಶೇಷದೇವರಿಗೆ ಆಧಾರನಾಗಿ, ಈ ಬ್ರಹ್ಮಾಂಡ ಭಾರ ಪೊತ್ತಿರುವ ವಾಯುದೇವರ ಶಕ್ತಿ ಮಹಿಮಾ ವರ್ಣಿಸುತ್ತಾರೆ.

**ದೇವಋಷಿ ಪಿತೃಪ ನರರೆನಿಸುವ ।**
**ಐವರೊಳು ನೆಲೆಸಿದ್ದು ಅವರ ಸ್ವ- ।**
**ಭಾವ ಕರ್ಮವ ಮಾಡಿ ಮಾಡಿಪ ಒಂದು ರೂಪದಲಿ ॥**
**ಭಾವಿ ಬ್ರಹ್ಮನು ಕೂರ್ಮ ರೂಪದಿ ।**
**ಈ ವಿರಿಂಚಾಂಡವನು ಬೆನ್ನಿಲಿ ।**
**ತಾ ವಹಿಸಿ ಲೋಗಗಳ ಪೊರೆವನು ದ್ವಿತೀಯ ರೂಪದಲಿ॥೧೬॥**

**ಪದ್ಯಾರ್ಥ** :—ದೇವ=ದೇವತೆಗಳು ಸಂತತ ಭಗವಂತನಲ್ಲಿ ರತಿ ಭಕ್ತಿಯುಳ್ಳವರು; ಋಷಿ=ಅಂತರ್ಜ್ಞಾನಿಗಳು, ಪಿತೃ=ಪಿತೃದೇವತೆಗಳು, ಪ=ಪೃಥ್ವಿಪಾಲನ ಮಾಡುವ ರಾಜರುಗಳು, ನರರೆನಿಸುವ=ಮನುಷ್ಯೋತ್ತಮರೆ ಮೊದಲಾಗಿ ಮುಕ್ತಿಯೋಗ್ಯರು, ಐವರೊಳು=ಮುಕ್ತಿಯೋಗ್ಯರಾದ ಐದು ವಿಧ ಜೀವರಲ್ಲಿ ನೆಲೆಸಿದ್ದು=ಸಂತತವಾಗಿ ಇದ್ದು, ವಾಯುದೇವರು ಒಂದು ರೂಪದಲಿ=ಈ ವಾಯು ಜೀವರಲ್ಲಿ ನೆಲಸಿ ಅವರವರ ಸ್ವಭಾವ ಕರ್ಮಗಳನ್ನು ಮಾಡಿಪ=ಒಂದು ರೂಪದಿಂದ ದೇವಋಷ್ಯಾದಿ ಜೀವರ ಸ್ವಭಾವ ಗುಣ ಯೋಗ್ಯತೆಯಂತೆ ಕರ್ಮಗಳನ್ನು ಮಾಡಿಸುವನು. ಭಾವಿ ಬ್ರಹ್ಮನು=ಮುಂದಿನ ಮಹಾಕಲ್ಪಕ್ಕೆ ಬ್ರಹ್ಮಪದಕ್ಕೆ ಬರುವ ಈ ವಾಯು ದೇವರು ಕೂರ್ಮರೂಪದಿ=ಆವಿರೂಪದಿಂದ ಬ್ರಹ್ಮಾಂಡವನ್ನು ಪೊತ್ತ ಶೇಷ

ದೇವರಿಗೆ ಆಧಾರನಾಗಿ, ಆ ಶೇಷದೇವರ ಮತ್ತು ಈ ವಿರಿಂಚಾಂಡವನ್ನು, ಈ ಬ್ರಹ್ಮಾಂಡವನ್ನು, ಅದರ ಭಾರವನ್ನು ಕೂರ್ಮರೂಪಿ ವಾಯು ತನ್ನ ಬೆನ್ನಲಿ ತಾನು ವಹಿಸಿ=ತಾನೇ ತನ್ನ ಬೆನ್ನಿನಿಂದ ಭಾರ ಪೊತ್ತು ಲೋಗಗಳ ಪೊರೆವನು ದ್ವಿತೀಯ=ರೂಪದಲಿ ಎಲ್ಲ ಲೋಕಗಳನ್ನು, ಎಲ್ಲ ಜೀವರನ್ನು ಎರಡನೇ ರೂಪದಿಂದ ಸಂರಕ್ಷಿಸುವನು. ಇಂಥ ಮಹಾಬಲ ಶಕ್ತಿಯು ವಾಯುದೇವರಿಗೆ ಬರಬೇಕಾದರೆ, ಶ್ರೀಹರಿಯ ಪರಮಾನುಗ್ರಹ ಈ ವಾಯು ಕೂರ್ಮನಡಿ, ಆದಿ ಕೂರ್ಮಶಕ್ತಿ ರೂಪನಾದ ಶ್ರೀಹರಿಯೇ ವಾಯು ಕೂರ್ಮಗೆ ಆಧಾರ. ವಾಯುವಿಗೆ ಬಲಪ್ರದನೆಂದು ಸಿದ್ಧ ವಾದುದು.

**ಭಾವಸೂಚನ** :—ದೇವಋಷಿ ಪಿತೃಪ ನರ ಇತಿ ಮುಕ್ತಾಸ್ತು ಪಂಚೇತಿ ತತ್ವಸಂಖ್ಯಾನೇ ॥ ಕೂರ್ಮರೂಪದೇತಿ ॥ ಋಜುಪ್ರಕರಣೇ ಸ ಏವ ಕೂರ್ಮರೂಪೇಣ ಬಿಭರ್ತೀದಂ ಜಗತ್ಸದೇತಿ ॥ ಸತ್ತತ್ವರತ್ನಮಾಲಾ ಯಾಮ್ ॥ ೧೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ದೇವ' ಇತಿ ॥ ಶತಕಲ್ಪಸಾಧನೈಃ ಕಲ್ಕಿತ್ವಂ ತತೋಷ್ಟನವತಿ ಕಲ್ಪೋತ್ತರಂ ಲಾತವ್ಯತ್ವೇ ವಾಯುತ್ವೇ ತದುತ್ತರಂ ಸಾಧನ-ಮಿದಮ್ ॥ ೧೬ ॥

## ಕನ್ನಡಾರ್ಥ

ನೂರು ಕಲ್ಪಸಾಧನಗಳಿಂದ 'ಕಲ್ಕಿ' ಪದವಿಯನ್ನು ಹೊಂದುತ್ತಾರೆ. ಅನಂತರ ೯೮ ಕಲ್ಪಗಳು ಮುಗಿಯುವರೆಗ 'ಲಾತವ್ಯ' ಪದವಿಯಲ್ಲಿ ಇರುತ್ತಾರೆ. ಅದರ ಮುಂದಿನ ವಾಯುತ್ವ ಪದವಿಯಲ್ಲಿ ಇರುವಾಗ ಈ ಪದ್ಯದಲ್ಲಿ ಹೇಳಿದ ಸಾಧನವನ್ನು ಮಾಡುವರು. ॥ ೧೬ ॥

**ಅವತರಣಿಕಾ** :—ಈ ಪದ್ಯದಿಂದ ವಾಯುದೇವರು ಮೂರನೇ ರೂಪದಿಂದ ಸಕಲ ಜೀವರಲ್ಲಿ ಶ್ವಾಸೋಚ್ಛ್ವಾಸ ರೂಪ ಮಹತ್ಕಾರ್ಯ

ನಿರ್ವಹಿಸಿ ಕೊನೆಗೆ ಸ್ವಸ್ವಯೋಗ್ಯ ಭೋಗಗಳನ್ನು ಕೊಡುವರು ಎಂದು ಅವರ ಮಹಾಮಹಿಮೆ ಕೊಂಡಾಡುತ್ತಾರೆ.

**ಗುಪ್ತನಾಗಿದ್ದನಿಲದೇವ ದ್ವಿ ।**
**ಸಪ್ತಲೋಕದ ಜೀವರೊಳಗೆ ತ್ರಿ ।**
**ಸಪ್ತ ಸಾವಿರ ದಾರು ನೂರು ಶ್ವಾಸ ಜಪಗಳನು ॥**
**ಸುಪ್ತಿ ಸ್ವಪ್ನದಿ ಜಾಗ್ರತಿಗಳಲಿ ।**
**ಆಪ್ತ ನಂದದಿ ಮಾಡಿ ಮಾಡಿಸಿ ।**
**ಕ್ಲೃಪ್ತ ಭೋಗಗಳೀವ ಪ್ರಾಂತಕೆ ತೃತೀಯ ರೂಪದಲಿ ॥೧೬॥**

**ಪದ್ಯಾರ್ಥ** :—ತೃತೀಯ ರೂಪದಲಿ=ಮೂರನೇ ರೂಪದಿಂದ ಗುಪ್ತನಾಗಿದ್ದು=ಗೂಢನಾಗಿ ಒಬ್ಬನಿಗೂ ತಿಳಿಯದಂತೆ ಸಕಲ ಜೀವರ ಸ್ವರೂಪದಲ್ಲಿ ನೆಲಸಿದ್ದು, ಅನಿಲದೇವ=ವಾಯುದೇವರು, ದ್ವಿಸಪ್ತಲೋಕದ ಜೀವರೊಳಗೆ= ದ್ವಿ=ಎರಡು, ಸಪ್ತ=ಏಳು ೨×೭=೧೪ ಹದಿನಾಲ್ಕು ಲೋಕದಲ್ಲಿ ನೆಲಸಿದ್ದ ಅಂದರೆ ಬ್ರಹ್ಮಾಂಡದಲ್ಲಿ ಇರುವ ಎಲ್ಲ ಜೀವರುಗಳಲ್ಲಿಯೂ ತ್ರಿಸಪ್ತ ಸಾವಿರದಾರುನೂರು- ತ್ರಿ=೩ ಮೂರು, ಸಪ್ತ ೭x೩=೨೧ ಸಾವಿರದ ಆರು ನೂರು ಶ್ವಾಸಜಪಗಳನು=ಶ್ವಾಸರೂಪವಾದ ಹಂಸ ಮಂತ್ರ ಜಪಗಳನ್ನು ಒಂದು ದಿವಸದಲ್ಲಿ ೨೧,೬೦೦ ಜಪಗಳನ್ನು, ಸುಪ್ತಿ= ನಿದ್ರಾ ಕಾಲ, ಸ್ವಪ್ನದಿ=ಕನಸು ಬೀಳುವ ಕಾಲ, ಜಾಗ್ರತಿಗಳಲಿ=ಎಚ್ಚರಿಕೆ ಅವಸ್ಥಾದಲ್ಲಿ,ಹೀಗೆ ಮೂರು ಅವಸ್ಥಾಗಳಲ್ಲಿಯೂ, ಆಪ್ತನಂದದಿ ಮಾಡಿ= ಬಾಂಧವ, ಮಿತ್ರನಂತೆ ತಾನು ಶ್ವಾಸಜಪಮಾಡಿ, ಮಾಡಿಸಿ=ಜೀವರಿಂದ ಮಾಡಿಸುತ್ತಾ, ಪ್ರಾಂತಕೆ=ಕೊನೆಗೆ ಕ್ಲೃಪ್ತಭೋಗಗಳೀವನು=ಶ್ರೀಹರಿ ಜೀವರ ಸ್ವರೂಪದಂತೆ ನಿಯಮನ ಮಾಡಿದ, ಭೋಗ=ಸುಖಾನುಭವವನ್ನು ಮಾಡಿಸುವನೆಂದು ಶ್ರೀ ವಾಯುದೇವರ ಮಾಹಾತ್ಮ್ಯೆ ಕೊಂಡಾಡಿದ್ದಾರೆ.

**ಭಾವಸೂಚನ** :— ಗುಪ್ತೇತಿ ॥ ೧೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಗುಪ್ತ' ಇತಿ ॥ 'ತ್ರಿಸಪ್ತ' -೨೧: । ಅತ ಏವ ಉಕ್ತಂ-'ಅನಿದ್ರ' ಇತಿ ॥೧೭ ॥

## ಕನ್ನಡಾರ್ಥ

'ತ್ರಿಸಪ್ತ'-ಇಪ್ಪತ್ತೊಂದು. ೨೧,೬೦೦ ಶ್ವಾಸಜಪಗಳ್ನು ಮೂರೂ ಅವಸ್ಥೆಗಳಲ್ಲಿಯೂ ಮಾಡುವನು. ಆದುದರಿಂದಲೇ 'ಅನಿದ್ರ' ಎಂದು ಹೇಳಿರುತ್ತಾರೆ. ॥ ೧೭ ॥

**ಅವತರಣಿಕಾ :** — ಬ್ರಹ್ಮವಾಯುಗಳು, ಋಜುಗಳು, ಸಮೀಚೀನರೂ, ನಿರ್ದೋಷರೂ ಆದಕಾರಣ ಶುದ್ಧ ಸತ್ವಾತ್ಮಕವಾದ ಲಿಂಗ ದೇಹದ ತ್ರಿಗುಣಾತ್ಮಕ ಕಾರ್ಯಗಳಿಲ್ಲ. ಲಿಂಗದೇಹವು ದಗ್ಧಪಟದಂತೆ ಈ ಋಜುಗಳಲ್ಲಿ ಕಾರ್ಯ ಮಾಡುವುದಿಲ್ಲವೆಂದು ಹೇಳುತ್ತಾರೆ.

**ಶುದ್ಧ ಸತ್ವಾತ್ಮಕ ಶರೀರದೊ- ।**
**ಳಿದ್ದ ಕಾಲಕು ಲಿಂಗದೇಹವು ।**
**ಬದ್ಧವಾಗದು ದಗ್ಧ ಪಟದೋಪಾದಿ ಇರುತಿಹುದು ॥**
**ಸಿದ್ಧ ಸಾಧನ ಸರ್ವರೊಳಗನ ।**
**ವದ್ಯನಿನೆಸುವ ಗರುಡ ಶೇಷ ಕ ।**
**ಪರ್ದಿ ಮೊದಲಾದಮರರೆಲ್ಲರು ದಾಸರೆನಿಸುವರು ॥ ೧೮ ॥**

**ಪದ್ಯಾರ್ಥ :**—ಶುದ್ಧ ಸತ್ವಾತ್ಮಕ ಶರೀರದೊಳಿದ್ದ ಕಾಲಕು= ಕಿಂಚಿತ್ ರಜೋಬಿಂದು ಮಿಶ್ರಿತವಾದ ಶುದ್ಧ ಸತ್ವಗುಣಮಯ ಮಹತ್ತ-ತ್ವಾತ್ಮಕ (ಬ್ರಹ್ಮ, ವಾಯು, ವಾಣಿ, ಋಜ್ವಾದಿಗಳಿಗೆ) ಶರೀರವು ಇರುವುದಾದರೂ, ಲಿಂಗದೇಹವು=ತ್ರಿಗುಣಾತ್ಮಕವಾದ ಲಿಂಗದೇಹದ ಕಾರ್ಯವು ಬದ್ಧವಾಗದು=ಲಿಂಗದೇಹದ ಕಾರ್ಯದಿಂದ ಬಂಧಿತರಾಗಿಲ್ಲ. ಸಮೀಚೀನರು ನಿರ್ದೋಷರಾಗಿರುವರು. ಲಿಂಗಬದ್ಧವಾಗದು, ಲಿಂಗದೇಹವು ದಗ್ಧಪಟದೋಪಾದಿ ಇರುತಿಹುದು=ಲಿಂಗದೇಹವು ಸುಟ್ಟ ಅರಿವೆಯೋಪಾದಿ

ಯಲ್ಲಿ ಇರುವುದು. ಸುಟ್ಟ ಬಟ್ಟೆಯಲ್ಲಿ ಹೇಗೆ ಬಟ್ಟೆಯ ಕಾರ್ಯವೂ ಇರುವುದಿಲ್ಲವೋ ಅದರಂತೆ ಲಿಂಗದೇಹವು ಸುಟ್ಟ ಬಟ್ಟೆಯಂತೆ ಮಾತ್ರ ಇರುವುದು. ಲಿಂಗದೇಹದಿಂದ ಬದ್ಧರಲ್ಲ. ಸಿದ್ಧ ಸಾಧನ=ಬ್ರಹ್ಮವಾಯು ಗಳು ಸಾಧನ ಮಾಡತಕ್ಕ ಜೀವರಲ್ಲಿ ಉತ್ತಮರು. ಸಿದ್ಧರು=ಸಾಧನ ಪೂರ್ಣರು ಸರ್ವರೊಳಗೆ=ಎಲ್ಲ ಜೀವರಲ್ಲಿ, ಅನವದ್ಯನೆನಿಸುವ=ದೋಷ ರಹಿತ, ಅನಿಂದ್ಯ, ಅತ್ಯುತ್ತಮನೆಂದು ಕರೆಸುತ್ತಾರೆ. ಗರುಡ, ಶೇಷ= ಗರುಡದೇವರು, ಶೇಷದೇವರು, ಕಪರ್ದಿ=ಕಪರ್ದೋಽಸ್ಯಾಸ್ತೀತಿ ಕಪರ್ದಿ, ಜಟಾಜೂಟ ರೂಪಸಿಗೆ ಇವೆಯೋ ಅತನು ಕಪರ್ದಿ, ಮಹಾದೇವ, ರುದ್ರನೇ ಮೊದಲಾದವರೆಲ್ಲರೂ ದಾಸರೆನಿಸುವರು=ರುದ್ರಾದಿ ದೇವತೆ ಗಳು ವಾಯುದೇವರಿಗೆ ದಾಸರು, ಕಿಂಕರರು ಎನಿಸುತ್ತಾರೆ. ಎಂದರೆ ವಾಯುವಿಗೆ ಜೀವೋತ್ತಮತ್ವ ಹೇಳಿದಂತಾಯಿತು.

**ಭಾವಸೂಚನ** :—ಶುದ್ಧೇತಿ ॥ "ವಾಯುಸ್ತು ಬ್ರಹ್ಮಣಃ ಪುತ್ರಃ ಪ್ರಕೃತೇಃ (ತೌ) ಸಮಜಾಯತ ॥ ತ್ರಿಗುಣಾತ್ಮಾ ಸಮುದ್ದಿಷ್ಟಃ ಪ್ರಾಯಃ ಸತ್ವಾತ್ಮಕಸ್ತದೇತಿ ಪಂಚರಾತ್ರೇ ॥ ೧೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ನನು ಕಥಂ ಬ್ರಹ್ಮವಾಯ್ವೋಃ ಋಜುತ್ವಮ್ ? "ಋಜವಃ ಸಮೀ- ಚೀನಾಃ ನಿರ್ದೋಷಾಃ" ಇತ್ಯುಕ್ತೇಃ ॥ ಸತ್ಯಮ್ ನಿರ್ದೋಷಾ ಏವ ತೇ॥ ತದುತ್ಪಾದಕಗುಣಾಸಂಸ್ಪರ್ಶಾತ್ ಇತಿ ॥ ತನ್ನ ॥ ಯದ್ವಜ ಇತ್ಯಾ- ದಿನಾ ಮಹತ್ತತ್ವಂ ತದಾತ್ಮಕಂ ವಾಯುಃ ಸಮಜಾಯತೇತ್ಯುಕ್ತ್ವಾತ್ ತ್ರಿಗುಣಾತ್ಮೇತ್ಯುಕ್ತ್ಯಾ (ಕ್ತ್ಯೈ) ಉಭಯೋಃ ಗೌಣದೇಹಾವಗತೇಃ ಇತ್ಯಾಶಂಕಾಂ ಪರಿಹರತಿ 'ಶುದ್ಧ' ಇತಿ ॥ 'ಶುದ್ಧಂ' ಸೂಕ್ಷ್ಮಂ ಅಬಂಧಕ ಮಿತಿ ಯಾವತ್ ॥ ಜಹುಕಲೇವರ ಸಿದ್ಧಂ ಸಾಧನಂ ಯಸ್ಯ ಇತಿ ॥ ಪ್ರನರ್ದೋಷಾವೇತಿಷ್ಠತೇ ಲಿಂಗಸ್ಯ ದುಷ್ಟಗುಣಾತ್ಮಕತ್ವಾತ್ ಇತಿ ನ ಚ ವಾಚ್ಯಮ್ ॥ ಮೋಕ್ಷಂ ವಿನಾ ತತ್ಪರಿ ಉಕ್ತಂ 'ಶುದ್ಧ' ಇತಿ ॥ ತನ್ನ ॥ ತಸ್ಯ ಮುಕ್ತಿಭೋಗ್ಯತ್ವಾತ್ ಕಥಂ ತದಾತ್ಮಕತಾ ಇತಿ ॥ ಅತ್ರ

ಬ್ರೂಮಃ ॥ ಅತ್ಯಲ್ಪರಜಸ್ತಮೋಗುಣ ಮಿಶ್ರಣಾಭ್ಯುಪಗಮಾತ್ ನೋಕ್ತ ದೋಷಃ ॥ ಉಕ್ತಂ ಚ "ವಿಲೀನಪ್ರಕೃತಿತಯಾ" ಇತಿ ॥ ನ ಚ ಬಂಧಕತ್ವಂ ॥ ದಗ್ಧಪಟವತ್ ಪಿಣ್ಯಾಕವತ್ ನಿರ್ವೀರ್ಯತ್ವಾತ್ ॥ ೧೮ ॥

## ಕನ್ನಡಾರ್ಥ

ಬ್ರಹ್ಮವಾಯುಗಳು ಋಜುಗಳೆನ್ನುವುದು ಹೇಗೆ ? "ಋಜುಗಳು ಸಮೀಚೀನರಾದವರು, ದೋಷವಿಲ್ಲದವರು" ಎಂದು ಪ್ರಮಾಣಗಳಲ್ಲಿ ಹೇಳಲಾಗಿರುತ್ತದೆ ಎಂದು ಶಂಕಿಸಬಾರದು. ಯಾಕೆಂದರೆ ಅವರವರ ಉತ್ಪಾದಕಗಳಿಂದ ಸತ್ವಾದಿ ಗುಣಗಳ ಸ್ಪರ್ಶವು ಅವರಿಗೆ ಇರುವುದಿಲ್ಲ. ಆದರೆ ಹೀಗೆ ಹೇಳುವುದು ಸಮಂಜಸವೆನಿಸಲಾರದು. ಯಾಕೆಂದರೆ, 'ಯದ್ರಜಃ' ಎಂಬ ವಾಕ್ಯದಿಂದ ಮಹತ್ತತ್ವಾತ್ಮಕವಾದ ದೇಹವಿದೆ. ಅದರಿಂದ ವಾಯುವು ಹುಟ್ಟಿದನು. ಎಂಬ ವಚನದಿಂದಲೂ, 'ತ್ರಿಗುಣಾತ್ಮಾ' ಎಂಬ ವಾಕ್ಯದಿಂದಲೂ ಬ್ರಹ್ಮವಾಯುಗಳಿಗೆ ತ್ರಿಗುಣಾತ್ಮಕ ಶರೀರವಿದೆಯೆಂದು ತಿಳಿದುಬರುವುದು" ಈ ಸಂಶಯವನ್ನು 'ಶುದ್ಧ' ಎಂಬೀ ಪದ್ಯದಿಂದ ಪರಿಹರಿಸುತ್ತಾರೆ.

ಶುದ್ಧಸತ್ವವು ಸೂಕ್ಷ್ಮವಾಗಿ ಅವರ ಶರೀರವಾಗಿದೆ. ಆದರೂ ಅವರಿಗೆ ಅದು ಬಂಧಕವಾಗಿರುವುದಿಲ್ಲ ಎಂದು ತಾತ್ಪರ್ಯ. 'ಸಿದ್ಧ ಸಾಧನ' ಬಹಳ ಕಲ್ಪಗಳಿಂದ ಸಿದ್ಧಿ ಪಡೆದ ಸಾಧನಗಳುಳ್ಳವರು.

ಲಿಂಗವು ದುಷ್ಟ ತ್ರಿಗುಣಾತ್ಮಕವಾದದ್ದು. ಹೀಗೆ ತಿಳಿಯಬಾರದು. 'ಶುದ್ಧ ಸತ್ವಾತ್ಮಕ' ಎಂಬ ಪದದಲ್ಲಿ ಹೇಳಿದುದನ್ನು ಮರೆಯಬಾರದು. ಈ ಪದ್ಯದಿಂದಲೇ ಈ ಆಕ್ಷೇಪಕ್ಕೆ ಉತ್ತರವೀಯಲಾಗಿದೆ. ಆದರೂ ಶುದ್ಧ ಸತ್ವಾತ್ಮಕ ಶರೀರವನ್ನು ಭೋಗಿಸುವವರು ಕೇವಲ ಮುಕ್ತರೇ ! ಆದುದರಿಂದ ಶುದ್ಧಸತ್ವಾತ್ಮಕ ಶರೀರವಾದರೂ ಮುಕ್ತರಾಗದಿರುವ ಋಜುಗಳಿಗೆ ಹೇಗೆ ? ಎಂಬ ಸಂಶಯವು ಬರುತ್ತದೆ. ಈ ಸಂಶಯಕ್ಕೆ ಹೀಗೆ ಪರಿಹಾರ. ಅತ್ಯಲ್ಪ ಪ್ರಮಾಣದಲ್ಲಿ ರಜ-ತಮಗುಣಗಳ ಅಂಶಗಳು ಋಜು ಶರೀರದಲ್ಲಿ ಇರುವವೆಂದು ಒಪ್ಪಿತವಾಗಿರುತ್ತದೆ. ಆದುದರಿಂದ ಯಾವ ದೋಷವೂ

ಇರುವುದಿಲ್ಲ. 'ವಿಲೀನ ಪ್ರಕೃತಿತಯಾ' ಎಂಬ ಶ್ರೀ ಸುಧಾಕಾರರ ವಚನವು ಇದರಲ್ಲಿ ಸಂವಾದಿಯಾಗಿರುತ್ತದೆ

ಅತ್ಯಲ್ಪ ಪ್ರಮಾಣವಲ್ಲಿಯಾದರೂ ರಜ-ತಮುಗುಣಗಳಿದ್ದುದರಿಂದ ಅವು ಋಜುಗಳನ್ನು ಯಾಕೆ ಸಂಸಾರದಲ್ಲಿ ಬಂಧಿಸಬಾರದು? ಎಂದು ಶಂಕಿಸಬಾರದು. ಯಾಕೆಂದರೆ, ಸುಟ್ಟ ಅರಿವೆಯುಂತೆ, ಗಾಣದಿಂದ ಎಣ್ಣೆ ತೆಗೆದು ಉಳಿದ ಹಿಪ್ಪೆ ಹಿಂಡಿಯುಂತೆ ಆ ರಜ-ತಮುಗುಣಾತ್ಮಕವಾದ ಅವರ ಲಿಂಗಶರೀರವು ನಿರ್ವೀರ್ಯವಾಗಿರುತ್ತದೆ. ॥ ೧೮ ॥

**ಅವತರಣಿಕಾ** :—ಈ ಪದ್ಯದಿಂದ ಋಜುಗಣದವರ ಸಾಧನ ವಿಚಾರವನ್ನು ಹೇಳುತ್ತಾರೆ. ಮತ್ತು ಸಾಧನಕಲ್ಪಗಳ ವಿವರವನ್ನೂ ಹೇಳುತ್ತಾರೆ.

**ಗಣದೊಳಗೆ ತಾನಿದ್ದು ಋಜುವೆಂ- ।**
**ದೆನಿಸಿಕೊಂಬನು ಕಲ್ಪಶತ ಸಾ- ।**
**ಧನವ ಗೈದಾನಂತರದಿ ತಾ ಕಲ್ಕಿಯೆನಿಸುವನು(ಯೆನಿಸಿದನು)॥**
**ದ್ವಿನವಶೀತಿಯ ಪ್ರಾಂತಭಾಗದಿ ।**
**ಅನಿಳ ಹನುಮದ್ಭೀಮರೂಪದಿ ।**
**ದನುಜರೆಲ್ಲರ ಸದೆದು ಮಧ್ವಾಚಾರ್ಯರೆನಿಸಿದನು ॥ ೧೯ ॥**

**ಪದ್ಯಾರ್ಥ** :—ಗಣದೊಳಗೆ=ಈ ಋಜುಗಣ ಜೀವ ಸಮೂಹವು ಒಂದು ಬ್ರಹ್ಮಾಂಡ ಸೃಷ್ಟಿಗೆ ಎರಡು ನೂರು ಋಜುಗಣ ಸಮೂಹವಲ್ಲಿ ತಾನಿದ್ದು ಈ ವಾಯುದೇವರು ತಾನು ಮೊದಲಿಗಿದ್ದು, ಋಜುವೆಂದೆನಿಸಿ ಕೊಂಬನು=ತಾನು ಸಾಮಾನ್ಯವಾಗಿ ಋಜುವೆಂದು ಕರೆಸುವನು. ಕಲ್ಪ ಶತ ಸಾಧನವ ಗೈದಾನಂತರದಿ=ನೂರು ಬ್ರಹ್ಮಮಾನ ಕಲ್ಪಗಳು ಸಾಧನ ಮಾಡಿದ ಅನಂತರ,ತಾ=ತಾನು ಈ ವಾಯು, ಕಲ್ಕಿಯೆನಿಸಿದನು=ನೂರಾ ಒಂದನೆ ಬ್ರಹ್ಮಕಲ್ಪದಲ್ಲಿ ಕಲ್ಕಿಪದಯೋಗ್ಯ ಋಜುವೆಂದು ನಾಮದಿಂದ ಕರೆಸಿದನು. ಹೀಗೆ ಸಾಧನ ಮಾಡುತ್ತ ಮುಂದೆ ದ್ವಿನವಶೀತಿಯ ಪ್ರಾಂತ

ಭಾಗದಿ ದ್ವಿ=ಎರಡು, ನವ=ಒಂಭತ್ತು ೨x೯=೧೮+ಅಶೀತಿ ಎಂಭತ್ತು ೮೦+೧೮=೯೮. ಹೀಗೆ ೯೮ನೇ ಬ್ರಹ್ಮಕಲ್ಪದ ನಂತರ ಅಂದರೆ, ೯೮ನೇ ಕಲ್ಪ ಕೊನೆಯ ಭಾಗ ಮುಗಿದನಂತರ ೯೯ನೇ ಕಲ್ಪದಲಿ, ಅನಿಳ=ವಾಯು ಪದಕ್ಕೆ ಬಂದ ವಾಯುವು, ಹನುಮ=ರಾಮಾವತಾರದಲ್ಲಿ ಹನುಮಂತ ರೂಪದಿಂದ, ಭೀಮ=ಕೃಷ್ಣನ ಸೇವೆಗೋಸುಗ ಭೀಮ= ದೈತ್ಯರಿಗೆ ಭಯಂಕರನೆನಿಸಿ, ದನುಜ=ದೈತ್ಯಾದಿಗಳನ್ನು, ಎಲ್ಲರನ್ನು ಸದೆದು = ಎಲ್ಲ ದೈತ್ಯಾದಿಗಳನ್ನು ಹತಗೈದನು. ಮುಂದೆ ವೈರದಿಂದ ಆ ದೈತ್ಯಾದಿಗಳು ಅವತರಿಸಿ ಡೇವರಿಲ್ಲ. ಜೀವದೇವರಿಗೆ ಐಕ್ಯ ಮುಂತಾದ ಮತ ಪ್ರವರ್ತಕರಾಗಲು, ಈ ಎಲ್ಲ ಕುತ್ಸಿತವಾದ ಮತಗಳನ್ನು ತರಿದು, ಆನಂದದಾಯಕ ಶಾಸ್ತ್ರವನ್ನು ರಚಿಸಿ, ಆನಂದವೀವರಾದುದರಿಂದ ಮಧ್ವಾಚಾರ್ಯರೆನಿಸಿದರು = "ಮಧ್ವ ಇತ್ಯಾನಂದ ಉದ್ದಿಷ್ಟಃವೇತಿ ತೀರ್ಥಮುದಾಹೃತಮ್"ಎಂಬ ವಚನದಂತೆ ಮಧ್ವಾಚಾರ್ಯರಾಗಿ ಪಾಜಕ ಕ್ಷೇತ್ರದಲ್ಲಿ ಅವತರಿಸಿದರು. ಈ ವಾಯುದೇವರ ಅನೇಕ ಅವತಾರ, ಅದರಲ್ಲಿ ಅವತಾರತ್ರಯ ಮಹಿಮೆ ವೇದದಲ್ಲಿಯೂ, ಸ್ಕಾಂದಪುರಾಣವಲ್ಲಿ ಪೊಗಳಲ್ಪಟ್ಟಿದೆ. ಇವರು ದ್ವಿತೀಯ ಈಶ್ವರರು. ಇಂತಹ ವಾಯು ಮಹಿಮೆಯನ್ನು ಪೊಗಳಿ ಸಜ್ಜನರ ಉದ್ಧಾರಗೈದ ಕರುಣಾಳುಗಳು.

**ವಿಶೇಷಾಂಶ :— ಶ್ರೀ ಪುರಂದರದಾಸರ ಸುಳಾದಿಯೂ ಇದೆ.** "ಹರಮುಖಾದ್ಯಮರರಿಗೆ ವರನೆನಿಸಿಪ ಋಜುನೊಬ್ಬ । ಹರುಷದಿ ಶತಕಲ್ಪ ಸಾಧನಗೈದು ತಾನು । ಕರೆಸುವ ಕಲಿಕಿಯೆಂದು । ಎರಡೈದು ದಶಕಲ್ಪ (೨x೫= ೧೦x೧೦= ೧೦೦) ಕಲ್ಪ ಸಾಧನ ಮಾಡುತಲಿ। ವಿರಂಚಿಯೆ ತಾನೆನಿಸಿ ಸತ್ಯಲೋಕವನಾಳಿ । ಸರುವಾಂಗ ಸಾಯುಜ್ಯವ ಪಡೆಯುವನು ಇದರಂತೆ । ಚರಿಪರು ಪ್ರತಿದಿನ ಋಜುಗಣ ಚೇತನರು । ಧರಣೀಶ ಪುರಂದರ ವಿಠಲನ ಪೂರ್ಣ । ಕರುಣಾಪಾತ್ರರು ಕೇಳೊ ಅಚ್ಛಿನ್ನಭಕ್ತರಿವರು ॥ ೧ ॥

(ಈ ಸುಳಾದಿ ನಮಗೆ ದೊರೆತಿಲ್ಲ. ಶ್ರೀ ಕಮಲಾಪತಿ ದಾಸರ ವ್ಯಾಖ್ಯಾನದಿಂದ ಸಂಗ್ರಹಿಸಿದೆ. ಉತ್ತಮವಾದ ಪ್ರಮೇಯ.)

**ಭಾವಸೂಚನ** :—ಗಣೇತಿ ॥ ಮಧ್ವಾಚಾರ್ಯಸ್ಯ ವಾಯುತ್ವೇ ವಿಪ್ರತಿಪತ್ತಿಃ । ತತ್ ಸಾಧನಾಯ ಪ್ರಾಣಾಗ್ನಿ ಇತ್ಯನೇಕ ಪ್ರಮಾಣೋದಾಹರಣಮ್ ॥ ಮಧ್ವಮಂತ್ರಾರ್ಥ ಮಂಜರ್ಯಾಂ "ಭೂಷನ್ ಯೋಧೀತಿ" ಮಂತ್ರವ್ಯಾಖ್ಯಾವಸರೇ ಸಮ್ಯಕ್ ಪ್ರಪಂಚಿತಮ್ ॥ ತತ್ರೈವಾನುಸಂಧೇಯಂ ವಿಸ್ತರಭಿಯಾ ನೇಹ ತತ್ಪ್ರತನ್ಯತೇ ॥ ೧೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಸಾಮಾನ್ಯ ವಿಶೇಷ ನಾಮಾನ್ಯಾಹ-ಗಣೇತಿ ॥ ದ್ವಿನವಾಶೀತೀತಿ ಏವಂ ಚ ಅಷ್ಟ ನವತಿ ಕಲ್ಪೋರ್ಧ್ವಮ್ ಇತ್ಯರ್ಥಃ 'ದನುಜಾಃ' ಅಕ್ಷಾದ್ಯಾಃ ಕೌರವಾದ್ಯಾಶ್ಚ ॥ ೧೯ ॥



## ಕನ್ನಡಾರ್ಥ

ಋಜು ನೂರು ಕಲ್ಪಸಾಧನಾನಂತರ ಸಾಮಾನ್ಯ ನಾಮದಿಂದ ಕಲ್ಕಿ ಎಂದು ಕರೆಸುವನೆಂದು ಹೇಳಲಾಗಿದೆ. ಹೀಗೆ ಸಾಮಾನ್ಯ ವಿಶೇಷನಾಮದಿಂದ ಕರೆಸುತ್ತಾರೆ. 'ದ್ವಿನವಶೀತಿ ॥' ೯೮ ಕಲ್ಪಗಳೆಂದು ಅರ್ಥ. ೯೮ ಕಲ್ಪದ ಅನಂತರವೆಂದು ಅರ್ಥ ಮಾಡಬೇಕು. 'ದನುಜರು' ಅಕ್ಷಕುಮಾರ ಮುಂತಾದವರು ಹನುಮದ್ರೂಪದಲ್ಲಿ, ಕೌರವ ಮುಂತಾದವರು ಭೀಮರೂಪದಲ್ಲಿ ॥ ೧೯ ॥

**ಅವತರಣಿಕಾ** :—ಶ್ರೀಹರಿಯ ನಿತ್ಯವಾದ ವೇದೋಕ್ತ ಗುಣಗಳನ್ನು ವಾಯುದೇವರು, ತಾವು ನಾಲ್ವರೂ ನಿತ್ಯ ಪೊಗಳುತ್ತ, ವಿಶ್ವವ್ಯಾಪಕನಾದ ಶ್ರೀಹರಿಗೆ ಪ್ರಥಮಾಂಗರಾಗಿ ಸಮಸ್ತ ಜಗತ್ತಿನ ಕಾರ್ಯ ನಡೆಸುವರೆಂಬ ಶ್ರುತ್ಯರ್ಥವನ್ನು ಬೋಧಿಸುತ್ತಾರೆ.

**ವಿಶ್ವವ್ಯಾಪಕ ಹರಿಗೆ ತಾ ಸಾ ।**
**ದೃಶ್ಯ ರೂಪವ ಧರಿಸಿ ಬ್ರಹ್ಮ ಸ ।**
**ರಸ್ವತೀ ಭಾರತಿಗಳಿಂದೊಡಗೂಡಿ ಪವಮಾನ ॥**
**ಶಾಶ್ವತ ಸುಭಕ್ತಿಯಲಿ ಸು ।**

**ಜ್ಞಾನ ಸ್ವರೂಪನ ರೂಪ ಗುಣಗಳ।**
**ನಶ್ವರವು ಎಂದೆನುತ ಪೊಗಳುವ ಶ್ರುತಿಗಳೊಳಗಿದ್ದು ॥ ೨೦ ॥**

**ಪದ್ಯಾರ್ಥ:**—ವಿಶ್ವ= ಪೂರ್ಣ ಗುಣನಾದುವರಿಂದ ವಿಶ್ವನು,ವಿಶ್ವಾ ಕಾರನಾದುವರಿಂದ ವಿಶ್ವನು, ಜೀವನಿಯಾಮಕನಾಮವರಿಂವ ವಿಶ್ವನು; ಪ್ರಳಯಕಾಲದಿ ಮೋಕ್ಷನಲ್ಲಿ ಜೀವರನ್ನು ತನ್ನಲ್ಲಿರಿಸುವನಾದುವರಿಂದ ವಿಶ್ವನು; ಜ್ಞಾನಸ್ವರೂಪನಾದುವರಿಂವ ವಿಶ್ವ; ವಿಶಿಷ್ಟಾನಂವ ಪೂರ್ಣನಾ ದುದರಿಂದ ವಿಶ್ವ;ವಿಶಿಷ್ಟ ಸುಬಲ ರೂಪನಾದುವರಿಂವ ವಿಶ್ವನೆಂದು ಅನೇಕ ಅರ್ಥಗಳನ್ನು ಶ್ರುತಿಪ್ರಮಾಣದೊಂದಿಗೆ ಶ್ರೀವಿದ್ಯಾಧಿರಾಜರು ಪೇಳಿದ್ದಾರೆ. ವಿಶ್ವಂ ವಿಷ್ಣುಃ= ಎಂಬ ಸಹಸ್ರನಾಮ ಆದ್ಯಪವಗಳ ಅರ್ಥಬೋಧಕವಾದ ಈ ಪದ್ಯವನ್ನುದಾಸಾರ್ಯರು ರಚಿಸಿದ್ದಾರೆ. ವ್ಯಾಪಕನು=ವಿಷ್ಣುರೂಪವೇ ಹೀಗೆ ವಿಶ್ವವ್ಯಾಪಕ= ಸಮಸ್ತ ಜೀವಾಂತರ್ಯಾಮಿ, ಸಮಸ್ತ ಜಗತ್ತಿನಲ್ಲಿ ವ್ಯಾಪಕನಾದ ಬಿಂಬರೂಪನಾದ ಶ್ರೀಹರಿಗೆ, ತಾ= ತಾನು ವಾಯು ದೇವರು, ಸಾದೃಶ್ಯ ರೂಪವ ಧರಿಸಿ= ತತ್ ಸದೃಶ ತದಧೀನವಾದ ಪ್ರತಿ ಬಿಂಬರೂಪ ಧಾರಣಮಾಡಿ, "ಶ್ರೀಹರಿಗೆ ಪ್ರಥಮಾಂಗ ಮುಖ್ಯಮೂರ್ತಿ" ಎಂಬ ಜ್ಞಾನಿಗಳ ವಚನದಂತೆ ಶ್ರೀಹರಿಗೆ ಸಮಾನ ರೂಪವೆಂದರೆ, ಪ್ರತಿ ಬಿಂಬರಾಗಿ, ಬ್ರಹ್ಮ= ಬ್ರಹ್ಮದೇವರು, ಸರಸ್ವತೀ= ಬ್ರಹ್ಮ ಪತ್ನಿಯರು, ಭಾರತೀದೇವಿಯರಿಂದೊಡಗೂಡಿ ಪವಮಾನ= ಈ ಪವಮಾನ ನಾಮಕ ವಾಯು ಬ್ರಹ್ಮ, ವಾಣಿ, ಭಾರತೀದೇವಿಯರಿಂದ ಕೂಡಿಕೊಂಡೆಯೇ, ಶಾಶ್ವತ ಸುಭಕ್ತಿಯಲ್ಲಿ= ನಿತ್ಯವಾದ ತಿರೋಹಿತವಾಗದಿದ್ದ ಸುಜ್ಞಾನ ಭಕ್ತಿಯಿಂದ, ಸುಜ್ಞಾನ ಸ್ವರೂಪನ= ಜ್ಞಾನಮಯನಾದ ಸಚ್ಚಿನ್ಮಯ ರೂಪನಾದ ಶ್ರೀಹರಿಯ ಗುಣಗಳನ್ನು, ಅನಶ್ವರವು = ಶ್ರುತಿಗಳು ಎಂದೆಂದೂ ನಾಶವಾಗದೇ ಏಕಪ್ರಕಾರವಾಗಿರುವ ಶ್ರುತಿ, ವೇದ, ಪ್ರತಿ ಪಾದ್ಯನ ರೂಪಗುಣಗಳನ್ನು ಪೊಗಳುವ ಶ್ರುತಿಗಳು ಎಂದೆನುತ= ಬ್ರಹ್ಮ ವಾಯುಗಳಿಗೆ ವೇದಗಳು ಅಂದರೆ ಶ್ರುತಿಗಳು ಸಂವಾದಗಳಾಗಿರುವುವು. ಅಲ್ಲದೆ ಅಮುಖ್ಯ ವೃತ್ತಿಯಿಂದ =ಬ್ರಹ್ಮ ವಾಯುಗಳು ಶ್ರುತಿಪ್ರತಿ ಪಾದ್ಯ ರೆಂಬುದಕ್ಕೆ ಶ್ರುತಿಗಳೊಳಗಿದ್ದು ಎಂಬ ಪದ ಸ್ವಾರಸ್ಯ, ತಾವು ಶ್ರುತಿಪ್ರತಿ

ಪಾದ್ಯನಾಗಿಯೂ ಮುಖ್ಯ ವೃತ್ತಿಯಿಂದ ವೇದ ಪ್ರತಿ ಪಾದ್ಯನಾದ ಹರಿಯ ಗುಣಗಳನ್ನು ಉಪಾಸಿಸುತ್ತಾರೆ. ಫಲಿತಾರ್ಥವೇನೆಂದರೆ, ನಿತ್ಯವಾಗಿರುವ ವೇದಗಳು ಪರಮಾತ್ಮ ಗುಣಗಳನ್ನು ಪೊಗಳುವವು. ಇಂತಹ ಅನಶ್ವರವಾದ ವೇದಗಳ ಸಂಪಾದ ರೂಪವಾಗಿ ಶ್ರೀ ಹರಿಯನ್ನು ಹೊಗಳುವರು. "ವೇದೋಕ್ತ ವೇದಾನುಕ್ತ ಗುಣಗಳನ್ನು ಹೊಗಳುವ ರೆಂದು ಅಭಿಪ್ರಾಯ.

**ಭಾವಸೂಚನ** ॥ ವಿಶ್ವೇತಿ ಸಾದೃಶ್ಯೇತಿ ॥ ಏತತ್ ಪ್ರಾಕ್ ಮೂರು ಕೋಟೀತಿ ಪದ್ಯ ವ್ಯಾಖ್ಯಾವಸರೇ ಶ್ರೀ ಹರಿ ಸಾರೂಪ್ಯಂ ಚ ವರ್ಣಿತಂ ॥ ಶ್ರುತಿವಳಗೇತಿ ॥ ಛಂದಾಂಸಿ ವಾಯೋರ್ದಿವ್ಯಾಂಶಾನಾ ಶ್ರಿತಾನ್ಯಖಿಳಾನ್ಯಪೀತಿ । ಋಜುಪ್ರಕರಣೇ ತಾಸಾಮಭಿಮಾನಿತ್ವೇನ ತದ್ಗತತ್ವಮ್ ॥ ೨೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವಿಶ್ವ"-ಇತಿ ॥ ವ್ಯಾಪಕ ಪದಂ ವಿಷ್ಣು ನಾಮಾರ್ಥಂ ॥ ಏವಂ ಚ ನಾಮದ್ವಯಮ್॥ ಸಹಸ್ರವಿಹೃತ ಬೃಹತೀ ತಥಾ ಹಿ ಋಕ್ಷು ಆದ್ಯೇಯ ಋಕ್-"॥ + ॥ ಓಂ ॥ ತದಿದಾಸ ಭುವನೇಷು ಜ್ಯೇಷ್ಠಂ ಪುನವಂ ವ ಓದತೀನಾಮ್ ॥ ಯತೋ ಜಜ್ಞ ಉಗ್ರ ಸ್ತ್ವೇಷನೃಮ್ಣೋರು ನದಂ ಯೋ ಯುವತೀನಾಮ್ ॥+॥ ಓಂ॥ ಅತ್ರ ವಿಶ್ವೋ ವಾಯುರಿತಿ ಶ್ರುತೇಃ ನಾವೈ ಕವೇಶೇನ ವಿಶಂ ವಾಯುಂ ಅಭೀಷ್ಟದಾನೇನ ವಾತಿ ಗಂಧಯತಿ ಸಂಯೋಜಯತಿ ಇತಿ ವಿಶ್ವಃ ॥ ॥ ಓಂ ॥ + ॥ ಸದ್ಯೋ ಜಜ್ಞಾನೋ ನಿಋಣಾತಿ ಶತ್ರೂನ್ ಪತಿಂ ವೋಪ್ಸ್ನ್ಯನಾಂ ಅನು ಯಂ ವಿಶ್ವೇ ಮದಂತ್ಯ ಮೂಷ್ಮಿ ಧೇನೂನಾಮಿಷುಧ್ಯಸೋಮ್ ॥ ಓಂ ॥ + ॥ ವಿಶೇಷೇಣ ಪ್ರಾಣಿಚೇಷ್ಟಕತ್ವಾತ್ ಐಶ್ವರ್ಯ ಬಲಾದಿಯೋಗಾತ್ ತಥಾ ವ್ಯಾಪ್ತೇಃ ವಿಷ್ಣುಃ ॥ "ಸಾದೃಶ್ಯಂ"- ಪ್ರತಿಬಿಂಬಂ "ಆಭಾಸಕೋಽಸ್ಯ ಪವನಃ" ಇತ್ಯುಕ್ತೇಃ ॥ "ಇದ್ದು"- ಅಭಿಮಾನಿತ್ವೇನ ॥ ೨೦ ॥

## ಕನ್ನಡಾರ್ಥ

ಈ ಪದ್ಯದಲ್ಲಿ ಇರುವ "ವ್ಯಾಪಕ" ಪದವು "ವಿಷ್ಣು" ಎಂಬ ನಾಮದ ಅರ್ಥವನ್ನು ವಿವರಿಸುವುದು. ಅಂತೂ ಇಲ್ಲಿ ಎರಡು ನಾಮಗಳು.

(೧) **"ವಿಶ್ವ** = ವಾಯುವಿಗೆ ವಿಶ್ವವೆಂದು ಶ್ರುತಿಯಲ್ಲಿ ಹೇಳಲಾಗಿದೆ. ವಿಶ್ವವೆಂಬ ನಾಮದ ಏಕದೇಶ. "ವಿಶ" ಎಂಬ ಶಬ್ದಕ್ಕೂ "ನಾಮೈಕದೇಶಗ್ರಹಣೇನ ನಾಮಗ್ರಹಣಂ"; ಈ ನ್ಯಾಯದಿಂದ ವಾಯುವೆಂದು ಅರ್ಥ. "ವಿಶ"-ವಾಯುವನ್ನು "ವಾತಿ" ಅಭೀಷ್ಟವನ್ನು ಕೊಟ್ಟು ಅದರೊಡನೆ ಸಂಯೋಜನಮಾಡುತ್ತಾನೆ. ಆದುದರಿಂದ **"ವಿಶ್ವ"**-ವಾಯು ಪ್ರೇರಕ, ವಾಯ್ವಭೀಷ್ಟಸಂಯೋಜಕ.

(೨) **"ವಿಷ್ಣು**-(ವ್ಯಾಪಕ) ವಿಶೇಷವಾಗಿ ಪ್ರಾಣಿಗಳನ್ನು ಕ್ರಿಯೆಯಲ್ಲಿ ನಡೆಯಿಸುವವನು, ಅಧಿಕ ಐಶ್ವರ್ಯ ಬಲಗಳುಳ್ಳವನು; ವ್ಯಾಪಕ ಸ್ವಭಾವದವನು." ಹೀಗೆ ಎರಡೂ ನಾಮಗಳ ಬೃಹತೀ ಮಂತ್ರಾನುಗುಣವಾದ ಅರ್ಥ ||

**"ಸಾದೃಶ್ಯ"**—ಎಂದರೆ ಇಲ್ಲಿ ಸಾಮ್ಯವೆಂದು ಅರ್ಥವಲ್ಲ. "ಪ್ರತಿಬಿಂಬ" ವೆಂದು ಅರ್ಥ. "ಆಭಾಸಕೋಽಸ್ಯ ಪವನಃ" ಎಂಬ ನಿರ್ಣಯ ಶ್ಲೋಕದಲ್ಲಿ ಪರಮಾತ್ಮನಿಗೆ ವಾಯುವು ನಿಜ ಪ್ರತಿಬಿಂಬನು ಸಾಕ್ಷಾತ್ ಪ್ರತಿಬಿಂಬನು; ಎಂಬು ಹೇಳಲಾಗಿರುತ್ತದೆ.

**"ಇದ್ದು"**— "ಅಭಿಮಾನಿ ರೂಪದಿಂದ ಇದ್ದು" ಎಂದು ಅರ್ಥ ||೨೦||

**ಅವತರಣಿಕಾ:**— ಇನ್ನು ವಾಯುದೇವರು-ಕಪಿಲನಾಮಕ ಹರಿಯಲ್ಲಿ ತ್ರಿಕೋಟಿ ರೂಪದಿಂದ ಅವತರಿಸಿ, ಅವರು ಮಾಡತಕ್ಕ ಮಹಾಕಾರ್ಯವನ್ನು ಶ್ರುತಿಗೆ ಸಮ್ಮತವಾಗಿ ವಿಸ್ತರಿಸಿ ವಾಯು ಮಾಹಾತ್ಮ್ಯ ಕೊಂಡಾಡುತ್ತಾರೆ.

**ಖೇಟ ಕುಕ್ಕುಟ ಜಲಟವೆಂಬ ತ್ರಿ।**
**ಕೋಟಿ ರೂಪವ ಧರಿಸಿ ಸತತ ನಿ।**

**ಶಾಟರನು ಸಂಹರಿಸಿ ಸಲಹುವ ಸರ್ವ ಸಜ್ಜನರ ॥**
**ಕೈಟಭಾರಿಯು ಪುರದ ಪ್ರಥಮ ಕ ।**
**ವಾಟವೆನಿಸುವ ಗರುಡ ಶೇಷ ಲ ।**
**ಲಾಟ ಲೋಚನ ಮುಖ್ಯ ಸುರರಿಗೆ ಅವ ಕಾಲದಲಿ ॥ ೨೧ ॥**

**ಪದ್ಯಾರ್ಥ:—** ಖೇಟ=ಆಕಾಶದಲ್ಲಿ ಸಂಚರಿಸುವ ಪಕ್ಷಿಗಳಲ್ಲಿ ಅಂತರ್ಯಾಮಿಯಾಗಿ ಒಂದುಕೋಟಿ ರೂಪದಿಂದಲೂ, ಕುಕ್ಕುಟ=ಕು=ಭೂಮಿಯಲ್ಲಿ ಜನಿಸಿದ ಪ್ರಾಣಿಗಳಲ್ಲಿ ಒಂದು ಕೋಟಿ ರೂಪದಿಂದ ಅಂತರ್ಯಾಮಿಯಾಗಿಯೂ, ಜಲಟ=ಜಲೇ ಅಟತಿ-ಜಲಟವೆಂಬ ನೀರಿನಲ್ಲಿ ಸಂಚರಿಸುವ ಪ್ರಾಣಿ ಅಂತರ್ಯಾಮಿಯಾಗಿ ಒಂದು ಕೋಟಿ ರೂಪದಿಂದಲೂ, ತ್ರಿಕೋಟಿ ಮೂರು ಕೋಟಿ ರೂಪಗಳನ್ನು ಧರಿಸಿ=ಧಾರಣ ಮಾಡಿ ಅವರಂತರ್ಯಾಮಿಯಾಗಿದ್ದು, ನಿಶಾಟರನು ಸಂಹರಿಸಿ=ರಾತ್ರಿಯಲ್ಲಿ ಚರಿಸುವ ದೈತ್ಯಾದಿಗಳನ್ನು ಸಂಹರಿಸಿ ಸತತ ಸರ್ವ ಸಜ್ಜನರ ಸಲಹುವ=ನಿರಂತರ ಮುಕ್ತಿ ಯೋಗ್ಯರಾದ ಸಜ್ಜೀವರನ್ನು ಕಾಪಾಡುವನು. ಈ ತ್ರಿಕೋಟಿ ರೂಪವು ಶ್ರೀ ಕಪಿಲನಾಮಕ ಹರಿಯಲ್ಲಿ ಆವಿರ್ಭೂತವಾದವು. ಸರ್ವ ರೂಪಗಳು ಚತುರ್ಬಾಹು, ಶಂಖ ಚಕ್ರಾದಿಗಳನ್ನು ಧರಿಸಿದ ರೂಪಗಳು, ಶ್ರೀ ತ್ರಿವಿಕ್ರಮ ವಾಮಪಾದ ನಖಾಗ್ರದಿಂದ ಬ್ರಹ್ಮಾಂಡ ಕಟಾಹ ಒಡೆದು ಬಹಿರುದಕ ಒಳಗೆ ಬರುತ್ತಿರಲು, ಭಗವದಾಜ್ಞೆಯಿಂದ ಈ ತ್ರಿಕೋಟಿ ರೂಪದಿಂದ ಬ್ರಹ್ಮಾಂಡ ಕಟಾಹವನ್ನು ಸರಿಪಡಿಸಿ ಮಹತ್ ಸೇವೆಗೈದ ರೂಪಗಳ ವಿವರ ಹಿಂದಿನ ಸಂಧಿಯಲ್ಲಿ ಬಂದಿದೆ. ಕೈಟಭಾರಿಯ ಪುರದ=ಕೈಟಭನಾಮಕ ದೈತ್ಯನನ್ನು ಸಂಹರಿಸಿದ ಶ್ರೀಹರಿಯ ಪುರದ=ವೈಕುಂಠಲೋಕ ಸೇರುವದಕ್ಕೆ, ಗರುಡ=ಪಕ್ಷಿಶ್ರೇಷ್ಠ ಗರುಡದೇವರಿಗೆ. ಶೇಷ=ಶೇಷದೇವರಿಗೆ, ಲಲಾಟ ಲೋಚನ=ಹಣೆಯಲ್ಲಿ ಕಣ್ಣುಳ್ಳ ರುದ್ರದೇವರು. ಮುಖ್ಯಸುರರಿಗೆ=ಮೊದಲಾದ ಪ್ರಮುಖ ದೇವತೆಗಳಿಗೆ, ಅವಕಾಲದಲಿ=ನಿರಂತರವಲ್ಲಿ, ಇವರಿಗೆಲ್ಲ, ಪ್ರಥಮ ಕವಾಟವೆನಿಸುವ= ವಾಯು-ಮೊದಲನೆ ಬಾಗಿಲು ಎಂದೆನಿಸುತ್ತಾನೆ. ಅಂದರೆ ಶ್ರೀ ಹರಿಯನ್ನು ಪೂಜಿಸಬೇಕಾದರೆ, ವಾಯು ಅಂತರ್ಗತ ಶ್ರೀ ಹರಿಯನ್ನೇ ಪೂಜಿಸಬೇಕೆಂದು ಮಥಿತಾರ್ಥ.

**ಭಾವಸೂಚನ** ॥ ಖೇಟೇತಿ ॥ ಅನಂತಾನ್ಯಸ್ಯ ರೂಪಾಣಿ ತ್ರಿಕೋಟೀನಿ ವಿಶೇಷತ ಇತಿ ರತ್ನಾಮಾಲಾ ॥ ಆಕಾಶ ಭೂಮಿಚಾರೀಣಿ ಕುಕ್ಕುಟಾನಿ ಮಹಾತ್ಮನಃ ॥ ರೂಪಾಣೀತಿ ಪ್ರವೃತ್ತಃ ॥ ನಿಶಾಟ ರಕ್ಕಸರು ॥ ೨೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಖೇಟ" ಇತಿ ॥ ತತ್ತದಂತರ್ಗತ-ತದ್ರೂಪಲಕ್ಷಣಂ **ಮಧ್ವಮಂತ್ರಾರ್ಥಮಂಜರ್ಯಾಮುಕ್ತಮ್** ॥ "ತ್ರಿಕೋಟಿರೂಪಃ ಪವನಶ್ಚ" ಇತಿ ಪ್ರತಿಜ್ಞಾಯ "ನೀಲಾಂಜನನಿಭಾಃ ಸರ್ವೇ ಸರ್ವೇ ಚಾರುಚತುರ್ಭುಜಾಃ ॥ ಶಂಖಚಕ್ರಗದಾಪದ್ಮಾಲಂಕಾರಪರಿಭೂಷಿತಾಃ ॥ ಪೀತವಾಸಸಃ ಇತ್ಯತ್ರ ರುಗ್ಮೈರಾಯುಧೈಃ" ಇತಿ ಶ್ರುತಿಃ ಪ್ರಮಾಣೀಕೃತಾ ॥ "ಕವಾಟಂ ದ್ವಾರಮ್ ॥ ೨೧ ॥

## ಕನ್ನಡಾರ್ಥ

ಖೇಟ, ಕುಕ್ಕುಟ, ಜಲಟವೆಂಬ ಪ್ರಾಣಿಗಳ ಅಂತರ್ಯಾಮಿ-ತದ್ರೂಪವಾದ ರೂಪಗಳು ಎಂದು ಅರ್ಥ. ಮಧ್ವಮಂತ್ರಾರ್ಥ ಮಂಜರೀ ನಾಮಕ ಗ್ರಂಥದಲ್ಲಿ, ಪವನನಿಗೆ ಮೂರು ಕೋಟಿ ರೂಪಗಳಿರುವುವು. ಎಂದು ಹೇಳಿ–"ನೀಲ ಅಂಜನ (ಕಾಡಿಗೆ) ದಂತೆ ಎಲ್ಲ ರೂಪಗಳು; ಎಲ್ಲಿ ರೂಪಗಳಲ್ಲಿಯೂ ನಾಲ್ಕು ಬಾಹುಗಳು; ಚಕ್ರ ಶಂಖ ಗದಾ ಪದ್ಮ ಆಯುಧ ಚಿಹ್ನೆಗಳಿಂದ ಅಲಂಕರಿಸಲ್ಪಟ್ಟವುಗಳು. ಪೀತಾಂಬರ ವಿಭೂಷಿತವಾದವುಗಳು. ಈ ಸಂದರ್ಭದಲ್ಲಿಯೇ ಬಂಗಾರದ ಆಯುಧಗಳಿಂದ ಯುಕ್ತವಾದವುಗಳು; ಎಂಬುದಾಗಿ ಹೇಳುತ್ತಾರೆ. ಅದರಲ್ಲಿ ಶ್ರುತಿಯನ್ನೂ ಪ್ರಮಾಣವೆಂದು ತೋರಿಸಲಾಗಿದೆ. "ಕವಾಟ"–ದ್ವಾರ ॥ ೨೧ ॥

**ಅವತರಣಿಕಾ :**— ಋಜುಗಣದ ಮಹಾತ್ಮರು ಬ್ರಹ್ಮಪದಕ್ಕೆ ಬರಬೇಕಾದರೆ, ಮೊದಲಿಗೆ ಒಬ್ಬ ಋಜು, ನೂರು ಕಲ್ಪ ಸಾಧನಾನಂತರ ಪುನಃ ನೂರು ಕಲ್ಪ ಸಾಧನ ಕಾಲದಲ್ಲಿ ಒಂದೊಂದು ನಾಮ

ದಿಂದ ಸಾಧನ ಮಾಡುತ್ತಾರೆ. ಆ ನೂರು ಜನ ಋಜುಗಳ ನಾಮಗಳು ಮಂಗಳ ಪ್ರದವೆಂದು ಹೇಳುತ್ತಾರೆ.

**ಈ ಋಜುಗಳೊಳಗೊಬ್ಬ ಸಾಧನ ।**
**ನೂರು ಕಲ್ಪದಿ ಮಾಡಿ ಕರೆಸುವ ।**
**ಚಾರುತರ ಮಂಗಳ ಸುನಾಮದಿ ಕಲ್ಪ ಕಲ್ಪದಲಿ ॥**
**ಸೂರಿಗಳು ಸಂತುತಿಸಿ ವಂದಿಸೆ ।**
**ಘೋರದುರಿತಗಳಳಿದು ಪೋಪವು ।**
**ಮಾರಮಣ ಸಂಪ್ರೀತನಾಗುವ ಸರ್ವ ಕಾಲದಲಿ ॥ ೨೨ ॥**

**ಪದ್ಯಾರ್ಥ:**—ಈ ಋಜುಗಳೊಳಗೊಬ್ಬ=ಈ ೨೦೦ ಮಂದಿ ಋಜು ಗಣದವರ ಪೈಕಿ ಒಬ್ಬ ಋಜು, ಮೊದಲಿಗೆ ನೂರು ಕಲ್ಪದಿ ಸಾಧನ ಮಾಡಿ, = ಬ್ರಹ್ಮಾಂಡ ಸೃಷ್ಟಿ ಆರಂಭಕ್ಕೆ ಸೃಷ್ಟನಾದ ಒಬ್ಬ ಋಜು ಮೊದಲು ನೂರು ಬ್ರಹ್ಮಕಲ್ಪ ಸಾಧನಮಾಡಿದನಂತರದಲ್ಲಿ, ಮುಂದೆ ಪುನಃ ನೂರು ಕಲ್ಪಗಳಲ್ಲಿ ಸಾಧನಮಾಡುವಾಗ್ಗೆ, ಕಲ್ಪಕಲ್ಪದಲಿ=೧೦೧ ನೇ ಬ್ರಹ್ಮಕಲ್ಪ ಆರಂಭಿಸಿ ೨೦೦ ಬ್ರಹ್ಮ ಕಲ್ಪ ಪರಿಯಂತವಾಗಿ, ಚಾರು ತರ ಮಂಗಳ ಸುನಾಮದಿ ಕರೆಸುವ=ಚಾರು ಮನೋಹರವಾದ ಸುಂದರ ವಾದ, ಮಂಗಳಕರವಾದ ಒಳ್ಳೇ ನಾಮದಿಂದ ಒಂದೊಂದು ಕಲ್ಪದಲಿ ಬೇರೆ ಮಂಗಳಕರ ನಾಮದಿಂದ ಕರೆಸಿಕೊಳ್ಳುತ್ತಾನೆ. ಈ ಮಂಗಳಕರ ವಾದ ಋಜುಗಳ ನೂರು ನಾಮಗಳನ್ನು, ಸೂರಿಗಳು=ಜ್ಞಾನಿಗಳು ಸಂಸ್ತುತಿಸಿ, ವಂದಿಸೆ=ಚನ್ನಾಗಿ ಮನಮುಟ್ಟಿ ಭಕ್ತಿಯಿಂದ ಸ್ತೋತ್ರಮಾಡಿ, ನಮನ ಮಾಡಲು, ಘೋರ ದುರಿತಗಳಿದು ಪೋಪವು=ಮಹಾ ದೊಡ್ಡ ಪಾಪರಾಶಿಗಳು ನಾಶವಾಗಿ ಸುಟ್ಟು ಹೋಗುವುವು. ಪಾಪನಾಶವಷ್ಟೇ ಅಲ್ಲ, ಪುಣ್ಯವೂ ಬರುವದು. ಹೇಗಂದರೆ, ಋಜುಗಳ ನಾಮಸ್ಮರಣೆಯಿಂದ, ಮಾರಮಣ ಸಂಪ್ರೀತನಾಗುವ ಸರ್ವಕಾಲದಲಿ=ನಿರಂತರದಲ್ಲಿ ಶ್ರೀಲಕ್ಷ್ಮೀ ಪತಿಯಾದ ಶ್ರೀಹರಿಯು ಸಂಪ್ರೀತ=ಸುಪ್ರಸನ್ನನಾಗಿ ಪ್ರೀತಿಯಿಂದ ಒಲಿ ಯುವನು, ವಾಯುವಂದಿತ ಹರಿಯು ಪ್ರೀತನಾಗಿ ಮುಕ್ತಿ ಕೊಡುವ ನೆಂದು ತಾತ್ಪರ್ಯ.

**ಭಾವಸೂಚನ** ॥ ಈ ಋಜುರೀತಿ ॥ ಅಳಿದು=ಅಪಹೃತ ॥ ೨೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪ್ರಶಂಸಾಯಾಃ ಕ್ಷಿಪ್ರಪ್ರವರ್ತಕತ್ವಾತ್ ವಾಮನೋಕ್ತನಾಮಾನಿ ವಕ್ತುಂ ಪ್ರಶಸ್ಯ ವಿಧತ್ತೇ-"ಈ" ಇತಿ ॥ "ಅಳಿದು" ನಷ್ಟೋ ಭೂತ್ವಾ ॥ ೨೨ ॥

## ಕನ್ನಡಾರ್ಥ

ಪ್ರಶಂಸೆಯು ಶೀಘ್ರವಾಗಿ ಪ್ರವೃತ್ತಿಯನ್ನು ಹುಟ್ಟಿಸುತ್ತದೆ. ಆದುಪರಿಂದ ವಾಮನ ಪುರಾಣದಲ್ಲಿ ಹೇಳಲ್ಪಟ್ಟಿರುವ ನಾಮಗಳನ್ನು ಹೇಳಲು ಪ್ರಶಂಸೆಯನ್ನು ಮಾಡಿ ವಿಧಿಸುತ್ತಾರೆ. ಈ ಪದ್ಯದಿಂದ "ಅಳಿದು"-ನಷ್ಟವಾಗಿ ॥ ೨೨ ॥

**ಅವತರಣಿಕಾ:**— ಈ ೨೩ ನೇ ಪದ್ಯ ಆರಂಭಿಸಿ ೨೯ ಪದ್ಯ ಅಂದರೆ (೭) ಪದ್ಯಗಳಲ್ಲಿ ನೂರು ಕಲ್ಪ ಸಾಧನ ಮಾಡಿದನಂತರ, ೧೦೧ ನೇ ಕಲ್ಪ ಆರಂಭಿಸಿ ೨೦೦ ಕಲ್ಪ ಬ್ರಹ್ಮದೇವರ ಪರಿಯಂತವಾಗಿ ಸಾಧನಮಾಡುವ ಋಜುಗಳ ನಾಮವನ್ನು ವಿಸ್ತರಿಸಿ ಹೇಳುತ್ತಾರೆ. ಈ ನಾಮ ಪಠನೆಯಿಂದ ಮಹಾ ಪುಣ್ಯ-ಮುಕ್ತಿಫಲವೆ ಮುಖ್ಯ.

**ಪಾಹಿ ಕಲ್ಕಿ ಸುತೇಜ ದಾಸನೆ ।**
**ಪಾಹಿ ಧರ್ಮಾ ಧರ್ಮ ಖಂಡನೆ । (ನ)**
**ಪಾಹಿ ವರ್ಚಸ್ವೀ ಋಷಣ (ನಮೋ) ಸಾಧು ಮಹೀಪತಿಯೆ ॥**
**ಪಾಹಿ ಸದ್ಧರ್ಮಜ್ಞ ಧರ್ಮಜ ।**
**ಪಾಹಿ ಸಂಪೂರ್ಣ ಶುಚಿ ವೈಕೃತ ।**
**ಪಾಹಿ ಅಂಜನ ಸರ್ಷಪನೆ ಋರ್ಪಟಃ ಶ್ರದ್ಧಾಹ್ವ ॥ ೨೩ ॥**

**ಪದ್ಯಾರ್ಥ:**— ಪಾಹಿ=ತ್ರಾಹಿ ರಕ್ಷಿಸು ಕಾಪಾಡು ಎಂದು. ಪ್ರತಿಯೊಬ್ಬ ಋಜುಗಳನ್ನು ಪ್ರಾರ್ಥಿಸುತ್ತಾರೆ.

೧. ಪಾಹಿ=ಕಾಪಾಡು. ಕಲ್ಕಿ=ಕಲಿಯನ್ನು ಸಂಹರಿಸುವ ಕಲ್ಕಿ ರೂಪನಾದ ಹರಿಗೆ ಪ್ರತಿಬಿಂಬರಾದ ವಾಯು ಕಲಿವಿದಾರಣರಾದುದರಿಂದ ಕಲ್ಕಿ ಎಂದು ಹೆಸರು. ಪ್ರತಿಯೊಬ್ಬ ಋಜುಗಳಿಗೆ ಸಂಬೋಧನಕೊಟ್ಟ ಪ್ರಾರ್ಥಿಸುತ್ತಾರೆ. ಹೇ ಕಲ್ಕಿಯೆ ಕಾಪಾಡು.

೨. ಸುತೇಜ = ಮಹಾ ಪರಾಕ್ರಮಿಯಾದ ಹೇ ಸುತೇಜನೇ ರಕ್ಷಿಸು.

೩. ದಾಸನೆ=ಸದಾ ವಾಯುವು ಮುಖ್ಯವಾಗಿ ಶ್ರೀ ಹರಿ ಪ್ರತಿ ಬಿಂಬನು ದಾಸನು.

೪. ಧರ್ಮ=ಧರ್ಮ ಸ್ವರೂಪನಾಗಿ ಸರ್ವಾಧಾರಕನೆ ಕಾಪಾಡು.

೫. ಅಧರ್ಮಖಂಡನೆ=ವೇದವಿರುದ್ಧವಾದ ಅಧರ್ಮ ನಾಶಕನೇ ರಕ್ಷಿಸು.

೬. ವರ್ಚಸ್ವೀ=ಮಹಾ ಕಾಂತಿಯುಕ್ತನಾದವನೆ ತ್ರಾಹಿ=ಪಾಹಿ.

೭. ಋಷಣ=ಶತ್ರು ಭಯಂಕರನೂ, ಮಹಾ ಕಾಂತಿಯುಕ್ತನೂ ಆದವನೆ ರಕ್ಷಿಸು.

೮. ಸಾಧು=ಸತ್ವೋದ್ರಿಕ್ತನಾಗಿ ಸಜ್ಜನರ ಉದ್ಧಾರಕನಾದವನೆ, ಪಾಹಿ.

೯. ಮಹೀಪತಿಯೆ= ಪೂಜನೀಯನಾದುದರಿಂದ ಮಹೀಪತಿಯೆ ಪಾಹಿ.

೧೦. ಸದ್ಧರ್ಮಜ್ಞ =ಪರಮ ವೈಷ್ಣವ ಧರ್ಮ ರಹಸ್ಯ ತಿಳಿದ ಸದ್ಧರ್ಮಜ್ಞನೆ ತ್ರಾಹಿ.

೧೧. ಧರ್ಮಜ =ಸದ್ಧರ್ಮ ಪ್ರವರ್ತಕನಾದುದರಿಂದ ಧರ್ಮಜನೆ ಪಾಹಿ.

೧೨. ಸಂಪೂರ್ಣ= ಜೀವೋತ್ತಮನು, ಹರಿಯ ಸಮ್ಯಕ್ ಭಕ್ತಿ ಪೂರ್ಣನಾದವನೆ ರಕ್ಷಿಸು.

೧೩. ಶುಚಿ= ಕಲ್ಯಾದಿಬಾಧೆ ದೂರನಾಗಿ ಸದಾ ಹರಿಸ್ಮರಣೆ ಯುಳ್ಳವ ಶುಚಿ= ಪಾಹಿ.

೧೪. ವೈಕೃತ= ವಿಕೃತ ಬ್ರಹ್ಮಾಂಡದಲ್ಲಿ ಸ್ಥಾವರ ಜಂಗಮದಲ್ಲಿ ವ್ಯಾಪ್ತ-ವೈಕೃತ ಪಾಹಿ.

೧೫. ಅಂಜನ =ಸ್ವಯೋಗ್ಯ ಹರಿಯ ರೂಪ ಕಾಣಲು ಅಂಜನ ರೂಪನೆ ರಕ್ಷಿಸು.

೧೬. ಸರ್ಷಪ =ಋಷಿ =ಜ್ಞಾನದಿಂದ ಯುಕ್ತನಾಗಿ ಹರಿಯವಶ ಮಾಡ್ಧನೆ ಪಾಹಿ.

೧೭. ಖರ್ಪಟಃ= ಕಲಿ ಮೊದಲಾದವರಲ್ಲಿ ಸಾಧನ ಮಾಡಿಸಿ ಅಧಃ ಪತನ ಮಾಡಿಸುವನು ಪಾಹಿ.

೧೮. ಶ್ರದ್ಧಾಹ್ವ= ಶ್ರೀ ಹರಿಯಲ್ಲಿ ಸಂಪೂರ್ಣ ಭಕ್ತಿಯುಳ್ಳವನಾದ ಶ್ರದ್ಧನಾಮಕನೆ ಪಾಹಿ.

ಈ ಪದ್ಯದಿಂದ ೧೦೧ ನೇ ಕಲ್ಪದಿಂದ ಆರಂಭಿಸಿ ೧೧೮ ಕಲ್ಪಬ್ರಹ್ಮ ಕಲ್ಪ ಒಂದೊಂದರಲ್ಲಿ ಸಾಧನ ಮಾಡುವ ೧೮ ಋಜುಗಳ ನಾಮವನ್ನು ಸ್ತೋತ್ರಮಾಡಿದ್ದಾರೆ.

**ಭಾವಸೂಚನ ||** ಪಾಹೀತಿ || ತಥಾಹಿ || ಕಲ್ಕೀ ಸುತೇಜಾ ದಾಸಶ್ಚ ಧರ್ಮಶ್ಚಾಧರ್ಮಖಂಡನಃ | ವರ್ಚಸ್ವೀ ಋಷಣಶ್ಚೈವ ಸಾಧುಶ್ಚೈವ ಮಹೀಪತಿಃ || ೧ || ಧರ್ಮಶ್ಚ ಧರ್ಮಜಶ್ಚೈವ ಸಂಪೂರ್ಣಃ ಶುಚಿ-ವೈಕೃತಾ | ಅಂಜನಃ ಸರ್ಷಪಶ್ಚೈವ ಖರ್ಪಟಶ್ಚ ತಥೈವ ಚ || ೨ || ಶ್ರದ್ಧಾಳು || ೩ ||

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಯಲ್ಲಿಯೂ ಇದೇ ಪ್ರಮಾಣ ಕೊಟ್ಟಿದ್ದಾರೆ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಪಾಹಿ" ಇತಿ || ಕಲ್ಕೀ ಸುತೇಜಾ ದಾಸಶ್ಚ ಧರ್ಮಶ್ಚಾಧರ್ಮ ಖಂಡನಃ|| ವರ್ಚಸ್ವೀ ಋಷಣಶ್ಚೈವ ಸಾಧುಃ ಸುಮಹೀಪತಿಃ|| ಧರ್ಮಜ್ಞ -ಧರ್ಮಜೌ ಪಾತಾಂ ಸಂಪೂರ್ಣಶುಚಿವೈಕೃತಾಃ || ೩ ||

## ಕನ್ನಡಾರ್ಥ

"ಕಲ್ಕಿ, ಸುತೇಜ, ದಾಸ, ಧರ್ಮ-ಅಧರ್ಮಖಂಡನ, ವರ್ಚಸ್ವೀ ಋಷಣ,ಸಾಧು-ಸುಮಹೀಪತಿ. ಧರ್ಮಜ್ಞ-ಧರ್ಮಜ, ಸಂಪೂರ್ಣ, ಶುಚಿ. ವೈಕೃತ" ಈ ನಾಮಗಳು ವಾಮನ ಪುರಾಣ ಸ್ತೋತ್ರಗಳು ॥ ೨೩ ॥

**ಅವತರಣಿಕಾ:**— ಈ ಪದ್ಯದಿಂದ ೧೯ ನೇ ಕಲ್ಪ ಆರಂಭಿಸಿ ೯೩೨ ನೇ ಕಲ್ಪ ಸಾಧನಮಾಡುವ ಒಬ್ಬ ಋಜುಗಳ ನಾಮಸ್ತೋತ್ರ ಗೈಯ್ಯುತ್ತಾರೆ.

**ಪಾಹಿ ಸಂಧ್ಯಾತ ವಿಜ್ಞಾನನೆ ।**
**ಪಾಹಿ ಮಹ ವಿಜ್ಞಾನ ಕೀರ್ತನೆ (ಕರ್ತೃನೆ) ।**
**ಪಾಹಿ ಸಂಕೀರ್ಣಾಖ್ಯ ಕತ್ಥನ ಮಹಾ(ಬುಧಿ)ಬುದ್ಧಿ ಜಯರಾ॥**
**ಪಾಹಿ ಮಾಹತ್ತರ ಸುವೀರ್ಯನೆ ।**
**ಪಾಹಿ ಮಾಂ ಮೇಧಾವಿ ಜಯ ಜಯ ।**
**ಪಾಹಿ ಮಾಂ ರಂತಿಮ್ನು ಮನು ಮಾಂ ಪಾಹಿ ಮಾಂ ಪಾಹಿ॥೨೪॥**

**ಪದ್ಯಾರ್ಥ:**— ಪಾಹಿ ರಕ್ಷಿಸು, ಕಾಪಾಡಿರೆಂದು ಎಲ್ಲರನ್ನೂ ಸ್ತುತಿ ಗೈಯ್ಯುವರು.

೧೯. ಸಂಧ್ಯಾತ= ಸಂತತ ಶ್ರೀ ಹರಿಯ ಧ್ಯಾನಾಸಕ್ತನಾದ ಸಂಧ್ಯಾತನೆ ಪಾಹಿ.

೨೦. ವಿಜ್ಞಾನನೆ = ನಿರಂತರ ಅಪರೋಕ್ಷಿಯಾಪುವರಿಂದ ವಿಜ್ಞಾನನೆ ಕಾಪಾಡು.

೨೧. ಮಹವಿಜ್ಞಾನ = ಮಹಾಪ್ರಳಯದಲ್ಲಿಯೂ, ಮತ್ತು ಸಕಲ ದೇವತೆಗಳಿಗೆ ದೇವ ಹೆಚ್ಚಿನ ಜ್ಞಾನ ಉಳ್ಳವನಾದುದರಿಂದ ಮಹಾ ವಿಜ್ಞಾನ ರಕ್ಷಿಸು.

೨೨. ಕೀರ್ತನೆ= ಭಾರತ್ಯಾದಿಗಳಿಂದ ನಿತ್ಯ ಸಂಸ್ಮರಣನೆ,ಪಾಹಿ.

೨೩. ಸಂಕೀರ್ಣಾಖ್ಯ=ಸಂಕೀರ್ಯತೇ ಇತಿ ಸಂಕೀರ್ಣ=ವಾಯು ಗುಣಮಿಳಿತ ಮಾಡುವಿಕೆ, ಸಜಾತೀಯ ವಿಜಾತೀಯ ವಸ್ತು ಸಮ್ಮೇಳನ ಕರ್ತ ವ್ಯಾಪ್ತನೂ ಆದುದರಿಂದ ಸಂಕೀರ್ಣನೆ ಪಾಹಿ.

೨೪. ಕತ್ಥನೆ=ಸ್ವಬಲನಾಮ ಹರಿಯಿಂದ=ಸ್ವಬಲ ಯುಕ್ತನಾದ ಕತ್ಥನೆ ರಕ್ಷಿಸು.

೨೫. ಮಹಾಬುದ್ಧಿ ೨೬ ಜಯಾ =ಸಂಶಯರಹಿತವಾದ ನಿಶ್ಚಿತ ಬುದ್ಧಿ ಯುಳ್ಳವನೆ, ಜಯನೆ.

೨೭. ಮಾಹತ್ತರ=ಸರ್ವಜೀವೋತ್ತಮನಾದುದರಿಂದ ಮಹತ್ತರನೆ ರಕ್ಷಿಸು.

೨೮. ಸ್ವವೀರ್ಯನೆ=ಸ್ವಬಲಶಾಲಿ ಮಹಾ ಪರಾಕ್ರಮನೆ, ಪಾಹಿ.

೨೯. ಮೇಧಾವಿ, ೩೦ ಅಜಯ; ಮಹಾ ಬುದ್ಧಿವಂತನೇ ಯಾರಿಂದಲೂ ಸೋಲಾಗದವನೆ ಪಾಹಿ.

೩೧. ರಂತಿವ್ನ=ರತಿಮಾನ್=ಸದಾ ಹರಿಯಲ್ಲೇ ರತಿಯುಳ್ಳವನೆ ರಕ್ಷಿಸು.

ರಂತಿ-ಅಗ್ನಿಬೀಜ=ರಂ, ಸಂಕರ್ಷಣಾವಿರ್ಭೂತನು.

೩೨. ಮನು=ಜ್ಞಾನರೂಪನಾದುದರಿಂದ, ಮನುವೇ ಮಂತ್ರಪ್ರತಿಪಾದ್ಯನೆ, ಮಾಂ ಪಾಹಿ ನನ್ನನ್ನು ರಕ್ಷಿಸು, ಮಾಂ ಪಾಹಿ=ನನ್ನನ್ನು ಕಾಪಾಡು ಎಂದು ಆದರಾತ್ ದ್ವಿರುಕ್ತಿ ಹೇಳಿರುವರು.

**ಭಾವಸೂಚನ:—** ಪಾಹೀತಿ ॥ ಶ್ರದ್ಧಾಳುಶ್ಚೈವ ಸಂಧ್ಯಾತೋ ಜ್ಞಾನೋ ವಿಜ್ಞಾನ ಏವ ಚ ॥ ಕೀರ್ತನಶ್ಚೈವ ಸಂಕೀರ್ಣಃ ಕತ್ಥನಶ್ಚ ತಥೈವ ಚ ಮಹತ್ತರಃ ॥ ಮಹಾಬುದ್ಧಿರ್ಜಯಶ್ಚೈವ ತಥೈವ ಚ ಮಹತ್ತರಃ ॥ ಸುವೀರ್ಯಶ್ಚೈವ ಮೇಧಾವೀ ಹ್ಯಜಯೋ ರಂತಿರೇವ ಚ ॥

(ಶ್ರದ್ಧಾಳು ಎಂಬ ರೂಪವು ದಾಸಾರ್ಯರು ಶ್ರದ್ಧಾಹ್ವ ಎಂದು ಹಿಂದೆ ೨೩ ನೇ ಪದ್ಯದ ಕೊನೆಗೆ ಹೇಳಿದ್ದಾರೆ)

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅಂಜನಃ ಸರ್ಪಪಃ ಶ್ರದ್ಧಾ ಖಪಟೌ ರಕ್ಷತಾಂ ಸು ಮಾನ್ ॥ ಪಾತಾಂ ಸಂಧ್ಯಾತವಿಜ್ಞಾನೌ ಮಹಾವಿಜ್ಞಾನಕೀರ್ತನಃ ॥ ಸಂಕೀರ್ಣಃ ಕತ್ಥನಶ್ಚೈವ ಮಹಾಬುದ್ಧಿರ್ಜಯಸ್ತಥಾ ॥ ಮಹತ್ತರಃ ಸುವೀರ್ಯಶ್ಚ ಮೇಧಾವೀ ರತಿಮಾನ್ ತಥಾ ॥ ಮನುಮಾನ್ ಪಾಂತು ಮೋದ ಪ್ರಮೋದಾಖ್ಯಸಂತಸಾನಂದ ಶರ್ಮಕಾಃ ॥ ಸಂತುಷ್ಟಃ ಪಾಹಿ ಚಾರ್ವಂಗಃ ಚಾರುಬಾಹುಪದೌ ತಥಾ ॥ ಸಾರಸ್ವತ ಸುನೇತ್ರಾಖ್ಯೌ ಸುವೀರ ಪ್ರಾಜ್ಞವಾನರೌ॥ಅಲಂಪಟಃ ಸರ್ವವೇತ್ತಾ ಸರ್ವಜಿಸ್ಮಿತ್ರ ಏವ ಚ॥ಪಾಪನಾಶಃ ಧರ್ಮನೇತಾ ಶಾರದೌಜ ತಪಸ್ವಿಕೌ ॥ ತೇಜಸ್ವಿನಾಮಾ ಚ ಋಜುರೇವಂ ಪಂಚಾಶದೀರಿತಾಃ ॥ ದಾನಶೀಲಸುಲೀಲೌ ಚ ಯಜ್ಞಃ ಕರ್ತಾ ಸುಪೂರ್ವಕಃ ॥ (ಯಜ್ವೀ) ಜಯುಸ್ವೀ ಯಾಗ ಪ್ರವೃತ್ತಶ್ಚ ಪ್ರಾಣತ್ರಾಣೋವಮರ್ಶಿಕಃ ॥ ಧರ್ಮಾದೇಷ್ಟಾ ತಾರಕಶ್ಚ ಕಾಲಃ ಕ್ರೀಡನಕಃ ತಥಾ ॥ ಸುಕರ್ತಾ ಚ ಸುಕಾಲಜ್ಞಃ ಕಾಲ ಸೂಚಕ ಏವ ಚ ॥ ತಥಾ ಚ ಕಲಿಸಂಹರ್ತಾ ಕಲಿಃ ಕಾಲಸ್ತಥೈವ ಚ ॥ ಶ್ಯಾಮರೇತಸ ಏವ ಸ್ಯಾತ್ ದಾರತಃ ಸುಬಲಸ್ತಥಾ ॥ ಸಹೋಕಪಿಜ್ಞಾನಗವ್ಯಾಃ ದಶಯುತ್ ಕಲ ಏವ ಚ ॥ ಸಂಕೀರ್ತಿತವ್ಯಃ ಶ್ರೋತವ್ಯಃ ಮಂತವ್ಯಃ ಕವ್ಯ ಏವ ಚ ॥ ಸರವ್ಯಶ್ಚೈವ ದ್ರಷ್ಟವ್ಯಃ ಗಂತವ್ಯಃ ಕ್ರವ್ಯ ಏವ ಚ ॥ ಸುಭವ್ಯಸೇವ್ಯ ಸ್ತರ್ವ್ಯಾಃ ಸ್ವರ್ಗವ್ಯಃ ಭಾವ್ಯ ಏವ ಚ ॥ ಜ್ಞಾತವ್ಯ-ವಕ್ತವ್ಯಗವ್ಯಾಃ ಲಾತವ್ಯಃ ಗುರು ರಾಜಕಃ ॥ ವಾಯುಶ್ಚೈವ ತಥಾ ಬ್ರಹ್ಮೇತ್ಯೇವಂ ಪಂಚಾಶದೀರಿತಾಃ ॥

(ಪದ್ಯ ೨೪ ಆರಂಭಿಸಿ ೨೯ ಪದ್ಯದವರೆಗೆ ಹೇಳಿದ ಎಲ್ಲ ನಾಮಗಳನ್ನು ಒಂದೆಡೆ ಹೇಳಿದ್ದಾರೆ)

ಈ ಎಲ್ಲ ನಾಮಗಳನ್ನು ವಿಂಗಡಿಸಿ ವ್ಯಾ. ದಾ. ಸಿ. ಕೌಮುದಿ ಕಾರರು ಬರೆದಂತೆ. ಕನ್ನಡಾರ್ಥದಲ್ಲಿ ಬರೆಯಲಾಗಿದೆ.

## ಕನ್ನಡಾರ್ಥ

೧ ಕಲ್ಕಿ, ೨ ಸುತೇಜ, ೩ ದಾಸ, ೪ ಧರ್ಮ, ೫ ಅಧರ್ಮಖಂಡನ

೬ ವರ್ಚಸ್ವಿ, ೭ ಋಷಣ, ೮ ಸಾಧು ೯ ಸುಮಹೀಪತಿ ೧೦ ಸರ್ವಜ್ಞ ೧೧ ಧರ್ಮಜ ೧೨ ಸಂಪೂರ್ಣ ೧೩ ಶುಚಿ ೧೪ ವೈಕೃತ ೧೫ ಅಂಜನ ೧೬ ಸರ್ಷಪ ೧೭ ಋರ್ಪಟ ೧೮ ಶ್ರದ್ಧಾ ೧೯ ಸಂಧ್ಯಾತ ೨೦ ವಿಜ್ಞಾನ ೨೧ ಮಹಾವಿಜ್ಞಾನ ೨೨ ಕೀರ್ತನ ೨೩ ಸಂಕೀರ್ಣ ೨೪ ಕತ್ಥನ ೨೫ ಮಹಾಬುದ್ಧಿ ೨೬ ಜಯ ೨೭ ಮಹತ್ತರ ೨೮ ಸ್ವವೀರ್ಯ ೨೯ ಮೇಧಾವಿ ೩೦ ಅಜಯ ೩೧ ರತಿಮಾನ್ ೩೨ ಮನು ೩೩ ಮೋದ ೩೪ ಪ್ರಮೋದ ೩೫ ಸಂತಸ ೩೬ ಆನಂದ ೩೭ ಸಂತುಷ್ಟ ೩೮ ಚಾರ್ವಂಗ ೩೯ ಚಾರುಸುಬಾಹು ೪೦ ಚಾರುಪದ ೪೧ ಸುಲೋಚನ ೪೨ ಸಾರಸ್ವತ ೪೩ ಸುವೀರ ೪೪ ಪ್ರಾಜ್ಞ ೪೫ ಕಪಿ ೪೬ ಅಲಂಪಟ ೪೭ ಸರ್ವಜ್ಞ ೪೮ ಸರ್ವಜಿತ್ ೪೯ ಮಿತ್ರ ೫೦ ಪಾಪವಿನಾಶನ ೫೧ ಧರ್ಮವಿನೇತಾ ೫೨ ಶಾರದೋಜ ೫೩ ತಪಸ್ವೀ ೫೪ ತೇಜಸ್ವೀ ೫೫ ದಾನಶೀಲ ೫೬ ಸುಶೀಲ ೫೭ ಯಜ್ಞ ೫೮ ಸುಕರ್ತ ೫೯ ಯಜ್ವೀ ೬೦ ಯಾಗವರ್ತಕ ೬೧ ಪ್ರಾಣ ೬೨ ತ್ರಾಣ ೬೩ ಅಮರ್ಷಿ ೬೪ ಧರ್ಮೋಪದೇಷ್ಟಾ ೬೫ ತಾರಕ ೬೬ ಕಾಲ ೬೭ ಕ್ರೀಡನ ೬೮ ಸುಕರ್ತಾ ೬೯ ಸುಕಾಲಜ್ಞ ೭೦ ಕಾಲಸೂಚಕ ೭೧ ಕಲಿಸಂಹರ್ತಾ ೭೨ ಕಲಿ ೭೩ ಕಾಲಿ ೭೪ ಶಾಮರೇತಸ ೭೫ ಸದಾರತ ೭೬ ಸುಬಲ ೭೭ ಸಹ ೭೮ ಕಪಿ ೭೯ ಗಮ್ಯ ೮೦ ಜ್ಞಾನ ೮೧ ದಶಕಲ ೮೨ ಶ್ರೋತವ್ಯ ೮೩ ಸಂಕೀರ್ತಿತವ್ಯ ೮೪ ಮಂತವ್ಯ ೮೫ ಕವ್ಯ ೮೬ ದ್ರಷ್ಟವ್ಯ ೮೭ ಸರವ್ಯ ೮೮ ಗಂತವ್ಯ ೮೯ ಕ್ರವ್ಯ ೯೦ ಸ್ಮರ್ತವ್ಯ ೯೧ ಸೇವ್ಯ ೯೨ ಸುಭಾವ್ಯ ೯೩ ಸ್ವರ್ಗವ್ಯ ೯೪ ಭಾವ್ಯ ೯೫ ಜ್ಞಾತವ್ಯ ೯೬ ವಕ್ತವ್ಯ ೯೭ ಗವ್ಯ ೯೮ ಲಾತವ್ಯ ೯೯ ವಾಯು ೧೦೦ ಬ್ರಹ್ಮ ॥ ೧೦೦ ॥ ಓಂ ॥ ೨೪ ॥ ೨೯ ॥

**ಅವತರಣಿಕಾ:—** ಈ ಪದ್ಯದಲ್ಲಿ ೧೩೩ ನೇ ಬ್ರಹ್ಮಕಲ್ಪ ಆರಂಭಿಸಿ ಕ್ರಮವಾಗಿ ಮುಂದೆ ಒಂದೊಂದು ಕಲ್ಪದಲ್ಲಿ ಸಾಧನಮಾಡುವ ೧೫ ಋಜುಗಳ ನಾಮಸಂಕೀರ್ತನ ಪೂರ್ವಕ ಸ್ತೋತ್ರಗೈಯ್ಯುತ್ತಾರೆ. ಅಂದರೆ ಒಂದು ಕಲ್ಪದಲ್ಲಿ ಕ್ರಮೇಣ ಸಾಧನಗೈಯ್ದು ಅವರೆ ಮುಂದಿನ ಕಲ್ಪದಲ್ಲಿ ಬೇರೆ ಬೇರೆ ನಾಮದಿಂದ ಸಾಧನಗೈಯ್ಯುತ್ತಾರೆ.

**ಪಾಹಿ ಮೋದ ಪ್ರಮೋದ ಸಂತತ ।**
**ಪಾಹಿ ಆನಂದ ಸಂತುಷ್ಟನೆ ।**
**ಪಾಹಿ ಮಾಂ ಚಾರ್ವಂಗ ಚಾರು ಸುಬಾಹು ಚಾರುಪದ ॥**
**ಪಾಹಿ ಪಾಹಿ ಸುಲೋಚನನೆ ಮಾಂ ।**
**ಪಾಹಿ ಸಾರಸ್ವತ ಸುವೀರನೆ ।**
**ಪಾಹಿ ಪ್ರಾಜ್ಞ ಕಪಿ ಅಲಂಪಟ ಪಾಹಿ ಸರ್ವಜ್ಞ** ॥ ೨೫ ॥

**ಪದ್ಯಾರ್ಥ:**— ಪಾಹಿ, ಪಾಹಿ ರಕ್ಷಿಸು ಕಾಪಾಡೆಂದು ಪ್ರಾರ್ಥನೆ.

೩೩. ಮೋದ=ಮಹರಾದಿ ಲೋಕಗಳಲ್ಲಿ ಸಂತೋಷ ಆನಂದ ಕೊಡುವನೆ ಪಾಹಿ.

೩೪. ಪ್ರಮೋದ=ಮುಕ್ತಿಯಲ್ಲಿಯೂ ವಿಶೇಷವಾಗಿ ಮುಕ್ತಾನಂದ ಪ್ರದನೆ ರಕ್ಷಿಸು.

೩೫. ಸಂತಸ=ಸಚ್ಚಿತ್ತನಾದ ಸದಾ ಸಂತೋಷದಿಂದಿರುವನೆ ಪಾಹಿ.

೩೬- ಆನಂದ=ಆನಂದಪೂರ್ಣನಾದ ಶ್ರೀಹರಿಯ ಪ್ರತಿಬಿಂಬನೆ ಸುಖರೂಪನೆ ತ್ರಾಹಿ.

೩೭. ಸಂತುಷ್ಟನೆ=ಶ್ರೀ ಹರಿಯ ಧ್ಯಾನರತಿ, ವಿನಾ ಪರಾಪೇಕ್ಷೆ ಇಲ್ಲದ ಅಲಂಬುದ್ಧಿಯೆ.

೩೮. ಚಾರ್ವಂಗ=ಮನೋಹರವಾದ ಸುಂದರ ೩೨ ಲಕ್ಷಣಗಳುಳ್ಳವನೆ ಪಾಹಿ.

೩೯. ಚಾರುಸುಬಾಹು=ಸುಂದರ ಸುಲಕ್ಷಣವಾದ ಬಾಹು ಉಳ್ಳವನೆ ರಕ್ಷಿಸು.

೪೦. ಚಾರುಪದ=ಮನೋಹರವಾದ ಲಕ್ಷಣೋಪೇತ ಪಾದ ಉಳ್ಳ ಮಹಾತ್ಮನೆ.

೪೧. ಸುಲೋಚನ=ಸುನೇತ್ರಾಖ್ಯ=ಸಲಕ್ಷಣ ನೇತ್ರ ಉಳ್ಳವನೆ ರಕ್ಷಿಸು.

೪೨. ಸಾರಸ್ವತ=ಸಮಸ್ತ ವೇದಾರ್ಥವನ್ನು ಬಲ್ಲವನೆ. ಕಾಪಾಡು.

೪೩. ಸುವೀರ=ಆರಬ್ಧಾಂತಗಾಮಿಯೆ ರಕ್ಷಿಸು.

೪೪. ಪ್ರಾಜ್ಞ=ಪ್ರಜ್ಞಾಸ್ತ್ಯಸ್ಯ ಪ್ರಾಜ್ಞ.ಪ್ರಾಶಸ್ತ್ಯ ಜ್ಞಾನ ಬುದ್ಧಿಯುಳ್ಳವನೆ ಕಾಪಾಡು.

೪೫. ಕಪಿ= ಕಂ= ಸುಖಂ ಪಿಬತೀತಿ ಕಪಿ= ಸುಖವನ್ನೆ ಪಾನ ಮಾಡ್ವನೆ.

೪೬. ಅಲಂಪಟ= ವಿಷಯಾಸಕ್ತಿ ಬಿಟ್ಟವನೆ, ಚಾಪಲ್ಯರಹಿತನೆ ರಕ್ಷಿಸು.

೪೭. ಸರ್ವಜ್ಞ= ಸಕಲವನ್ನು ತಿಳಿದವನೆ, ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸುತ್ತಾರೆ.

**ಭಾವಸೂಚನ :**— ಪಾಹೀತಿ ॥ ಮನುರ್ಮೋದಃ ಪ್ರಮೋದಶ್ಚ ಸಂತ ಆನಂತ ಏವ ಚ ॥ ಸಂತುಷ್ಟಶ್ಚೈವ ಚಾರ್ವಂಗಃ ತಥಾ ಚಾರುಃ ಸುಬಾಹುಕಃ ॥ ತಥಾ ಚಾರುಪಮಶ್ಚಾಪಿ ತಥೈವ ಚ ಸುಲೋಚನಃ ॥ ಸಾರಸ್ವತಂ ಸುವೀರಶ್ಚ ಪ್ರಾಜ್ಞಃ ಕಪಿಃ ಸ ಏವ ಚ ॥ (ಅಲಂಪಟ ಸರ್ವಜ್ಞ)(ಮುಂದಿನ ಪದ್ಯದಲ್ಲಿ)॥ ೨೫ ॥

**ಅವತರಣಿಕಾ :**—ಮುಂದೆ ೧೪೮ ಕಲ್ಪದಿಂದ ೧೬೦ ಕಲ್ಪದಲ್ಲಿರುವ ಪದಸ್ಥರಾದ ಋಜುಗಳ ನಾಮಸಂಕೀರ್ತನೆ ಮಾಡುತ್ತಾರೆ.

**ಪಾಹಿ ಮಾಂ ಸರ್ವಜಿನ್ಮಿತ್ರನೆ ।**
**ಪಾಹಿ ಪಾಪವಿನಾಶಕನೆ ಮಾಂ ।**
**ಪಾಹಿ ಧರ್ಮವಿನೇತ ಶಾರದ ಓಜ ಸುತಪಸ್ವೀ ॥**
**ಪಾಹಿ ಮಾಂ ತೇಜಸ್ವಿ ನಮೋ ಮಾಂ ।**
**ಪಾಹಿ ದಾನ ಸುಶೀಲ ನಮೋ ಮಾಂ (ನಮೋ) ।**
**ಪಾಹಿ ಯಜ್ಞಸುಕರ್ತ ಯಜ್ವೀ ಯಾಗನರ್ತಕನೆ ॥ ೨೬ ॥**

**ಪದ್ಯಾರ್ಥ :**—ಪಾಹಿ ಮಾಂ=ನಮ್ಮನ್ನು ಕಾಪಾಡಿರಿ ರಕ್ಷಿಸಿರೆಂದು ಸ್ತೋತ್ರ.

೪೮. ಸರ್ವಜಿತ್=ಸಮಸ್ತವನ್ನು ಜೈಸಿದನಾದುದರಿಂದ ಸರ್ವ ಜಿನ್ಮಿತ್ರನೆ, ಪಾಹಿ.

೪೯. ಮಿತ್ರಾ = ಆಪತ್ಕಾಲ ರಕ್ಷಕ ಮಿತ್ರನೆ, ಜಗನ್ಮಿತ್ರತತ್ತ್ವ ದ್ಯೋಗ್ಯ ಸಾಧನನೆ,

೫೦. ಪಾಪವಿನಾಶಕ=ಪಾಪ ಪರಿಹಾರಕನಾದುದರಿಂದ ಪಾಪ ವಿನಾಶಕನೆ ಪಾಹಿ.

೫೧. ಧರ್ಮವಿನೇತ=ಧರ್ಮ ನಿಯಾಮಕನೆ, ಸದಾ ಧರ್ಮರತನೆ ರಕ್ಷಿಸು.

೫೨. ಶರದೋಜ=ಸುಖ ದುಃಖ ವಿವರ್ಜಿತನೆ, ರಕ್ಷಿಸು.

೫೩. ತಪಸ್ವೀ=ಸಕಲೇಂದ್ರಿಯ ನಿಗ್ರಹ ಶಕ್ತಿಯುಳ್ಳವನೆ ಜ್ಞಾನ ನಿಧಿಯೇ ಪಾಹಿ.

೫೪. ತೇಜಸ್ವೀ=ದೇಹ ಕಾಂತಿಯಿಂದಲೂ, ದೇಹ ಬಲ ಪರಾ ಕ್ರಮಿಯೆ ರಕ್ಷಿಸು.

೫೫. ದಾನಶೀಲ=ತ್ರಿವಿಧ ಜೀವರ ಯೋಗ್ಯತೆಯರಿತು ಫಲದಾನ ಪ್ರದನೆ ಪಾಹಿ.

೫೬. ಸುಶೀಲ=ಸಂತತ ಹರಿ ವಿಸ್ಮೃತಿ ಇಲ್ಲದೆ ಶ್ರೀ ಹರಿಯು ಪ್ರೇರಿಸಿದಂತೆ ನಡತೆ ಸುಶೀಲತೆಯುಳ್ಳವನೆ ಪಾಹಿ.

೫೭. ಯಜ್ಞ=ಯಜ್ಞನಾಮಕ ಹರಿ ಅನುಗ್ರಹದಿಂದ ಯಾಗಾಭಿ ಮಾನಿ ದೇವತೆಗಳನ್ನು ಸೃಜಿಸಿದವನೆ ಪಾಹಿ.

೫೮. ಸುಕರ್ತ=ಸೂಯತ ಇತಿ ಸು, ಪೂಜಾದ್ಯರ್ಥಗಾಮಿಯೆ ಪಾಹಿ.

೫೯. ಯಜ್ವೀ=ಯಜತೇ ಸ್ಮ ಇತಿ ಯಜ್ವೀ, ವಿಧಿವತ್ ಹರಿ ಪೂಜಾರತನೆ ಪಾಹಿ.

೬೦. ಯಾಗವರ್ತಕ=ಸಮಸ್ತರಿಂದ ಯೋಗ್ಯ ಹರಿಧ್ಯಾನಮಾಡಿಸಿ ಹರಿಗೆ ಸಮರ್ಪಿಸುವದರಿಂದ ಯಾಗವರ್ತಕನೆ ಪಾಹಿ.

**ಭಾವಸೂಚನ** ॥ ಪಾಹೀತಿ ॥ ಲಂಪಟಶ್ಚೈವ ಸರ್ವಜ್ಞಃ ಸರ್ವಜಿ

ನ್ಮಿತ್ರ ಏವ ಚ ॥ ತಥಾ ಪಾಪವಿನಾಶಶ್ಚ ಏತೇ ಪಂಚಾಶದೀರಿತಾಃ ॥೬೦॥

ತಥಾ ಧರ್ಮವಿನೀತಶ್ಚ ಶಾರದೌಜಃ ತಥೈವ ಚ ॥ ಸುತಪಸ್ಕಂ ಚ ತೇಜಸ್ವೀ ದಾನಶೀಲಸ್ತಥೈವ ಚ ॥ ಸುಶೀಲಶ್ಚೈವ ಯಜ್ಞಶ್ಚ ಸುಕರ್ತಾ ಚ ತಥೈವ ಚ ॥ ಸುಷ್ಟು ಕರ್ತಾ ಚೈವ ಯಜ್ವೀ ಯಾಗ ಕರ್ತೃಕ ಏವ ಚ ॥ ೨೬ ॥

**ಅವತರಣಿಕಾ** :—ಈ ಪದ್ಯದಿಂದ ೧೬೧ ಪದಸ್ಥ ಆರಂಭಿಸಿ ೧೭೬ ಕಲ್ಪ ಪರಿಯಂತ ಪದವಾಳುವರ ೧೬ ನಾಮದ ಋಜುಗಳ ಗುಣಕೀರ್ತನೆ ಮಾಡುತ್ತಾರೆ.

**ಪಾಹಿ ಪ್ರಾಣ ತ್ರಾಣ ಅಮರು(ಋ)ಷಿ ।**
**ಪಾಹಿ ಮಾಂ ಉಪದೇಷ್ಟದಾಯಕ (ತಾರಕ) ।**
**ಪಾಹಿ ಕಾಲಕ್ರೀಡನ ಸುಕರ್ತಾ ಸುಕಾಲಜ್ಞ (ಸಕಲಜ್ಞ) ।**
**ಪಾಹಿ ಕಾಲ ಸು ಸೂಚಕನೆ ಮಾಂ ।**
**ಪಾಹಿ ಕಲಿಸಂಹರ್ತ ಕಲಿ ಮಾಂ ।**
**ಪಾಹಿ ಕಾಲಿ ಶಾಮರೇತ ಸದಾರತ ಸುಬಲನೆ ॥ ೨೭ ॥**

**ಪದ್ಯಾರ್ಥ**:— ಪ್ರತಿಯೊಬ್ಬ ಋಜುಗಳನ್ನು ನಾಮ ಸಂಕೀರ್ತನ ಪೂರ್ವಕ ಪ್ರಾರ್ಥಿಸುತ್ತ ರಕ್ಷಿಸಿರೆಂದು ಸ್ತೋತ್ರಮಾಡುತ್ತಾರೆ.

೬೧. ಪಾಹಿ ಪ್ರಾಣ=ಪ್ರಾಣಂತ್ಯನೇನೇತಿ ಪ್ರಾಣಃ ॥ ಯಾವನ ಸಂಚಾರದಿಂದ ಪ್ರಾಣಿಗಳು ಜೀವನಹೊಂದುತ್ತವೊ.

೬೨. ತ್ರಾಣ=ತ್ರಾಯತೇ ಯಸ್ಮಾತ್ ತ್ರಾಣಂ=ಸಕಲ ರಕ್ಷಕನೆ ಪಾಹಿ.

೬೩. ಅಮರುಷಿ=ಸಹನಶೀಲ, ಕ್ರೋಧಾದಿರಹಿತ, ಕ್ರೋಧಿಗಳ ನಾಶಕನೆ ರಕ್ಷಿಸು.

೬೪. ಉಪದೇಷ್ಟ=ಯೋಗ್ಯರಿಗೆ ಸದುಪದೇಷ್ಟ, ಜ್ಞಾನದಾತನೆ, ಪಾಹಿ.

೬೫. ತಾರಕ=ತಾರಯತೀತಿ ತಾರಕ, ಭವಸಮುದ್ರ ದಾಟಿಸನೆ ಪಾಹಿ.

೬೬. ಕಾಲ=ಕಲ್ಪತೇ ಸಂಖ್ಯಾಯತೇ ಇತಿ ಕಾಲಃ ॥ ಸಂಖ್ಯೆಕ್ಕೆ ನಿಲುಕದವನೆ, ಪಾಹಿ.

೬೭. ಕ್ರೀಡನ=ಶ್ರೀ ಹರಿಯ ಕ್ರೀಡೆಗೆ ಸ್ಥಾನಾಪನ್ನನೂ, ಹರಿ ವಿಹಾರದಂತೆ ಕ್ರೀಡಿಪನೆ.

೬೮. ಸುಕರ್ತಾ = ಶ್ರೀ ಹರಿ ಇಚ್ಛೆಯಂತೆ ಎಲ್ಲ ಕಾರ್ಯಸಾಧಕನೆ ಪಾಹಿ.

೬೯. ಸುಕಾಲಜ್ಞ = ಕಾಲನಾಮಕ ಹರಿ ಇಚ್ಛೆ ಬಲ್ಲವನಾದುದರಿಂದ ಕಾಲಜ್ಞನೆ,

೭೦. ಕಾಲಸೂಚಕ = ಸರ್ವ ಪ್ರಾಣಿಗಳಲ್ಲಿ ಶ್ವಾಸ ಜಪದಿಂದ ಕಾಲವನ್ನು ತಿಳಿಸುವನೆ,

೭೧. ಕಲಿಸಂಹರ್ತಾ= ಕಲ್ಯಾದಿ ದುಷ್ಟ ದೈತ್ಯರನ್ನು ಸಂಹರಿಸುವ ವೀರನೆ, ಪಾಹಿ.

೭೨. ಕಲಿ= ಕಲನಂ ಕಲಯತಿ ವಾ ಕಲಿ, ದುರ್ಜನರನ್ನು ದುಃಖದಲ್ಲಿ ಹಾಕಿದರೂ, ತಾನು ದುಃಖದಿಂದ ದೂರನಾದವನೆ.

೭೩. ಕಾಲಿ =ದುರ್ಗೆಯ ಅನುಗ್ರಹದಿಂದ ದುಷ್ಟರನ್ನು ಜೈಸಿದವನೆ, ಪಾಹಿ.

೭೪. ಶ್ಯಾಮರೇತ =ರೇತಸ್ಸಿಗೆ ಅಭಿಮಾನಿ ಪ್ರಾಣನು ಆದರೂ, ರೇತೋವಿಕಾರ ದೂರ ಶ್ಯಾಮರೇತನೆ.

೭೫. ಸದಾರತ= ನಿರಂತರ ಶ್ರೀ ಹರಿಯಲ್ಲಿ ಧ್ಯಾನರತನಾದವನೆ ಪಾಹಿ.

೭೬. ಸುಬಲ= ಸಮೀಚೀನ ಬಲವುಳ್ಳವನಾದುದರಿಂದ ಸಜ್ಜನರಿಗೆ ಬಲವನ್ನು ಕೊಡುವವನೆ ರಕ್ಷಿಸೆಂದು ಪ್ರಾರ್ಥಿಸುತ್ತಾರೆ.

**ಭಾವಸೂಚನ:**--ಪಾಹೀತಿ ॥ "ಪ್ರಾಣಸ್ತ್ರಾಣಸ್ತಥಾ ಧರ್ಮೋ ಹ್ಯುಪದೇಷ್ಟಾ ತಥೈವ ಚ॥ ತಾರಕಶ್ಚ ತಥಾ ಕಾಲಕ್ರೀಡನಶ್ಚ ತಥೈವ ಚ॥

ಸುಕರ್ತಶ್ಚ ಸುಕಾಲಜ್ಞಃ ಕಾಲಸೂಚಕ ಏವ ಚ ॥ ತಥಾ ಚ ಕಲಿಸಂಹರ್ತಾ ಕಲಿಃ ಕಾಲಸ್ತಥೈವ ಚ ॥ ಶಾಮರೇತಾಃ ಸ ಏವ ಸ್ಯಾದ್ದಾರತಃ ಸುಬಲಸ್ತಥಾ ॥

**ಅವತರಣಿಕಾ** :—ಈ ಪದ್ಯದಿಂದ ೧೭೭ನೇ ಕಲ್ಪದ ಸಾಧನ ಋಜು ಯೋಗಿಗಳ ನಾಮ ಪ್ರಶಂಸನ ಪೂರ್ವಕ, ೧೯೦ ನೇ ಬ್ರಹ್ಮಕಲ್ಪದಿ ಸಾಧನಗೈವ ಋಜು ಯೋಗಿಗಳ ೧೪ ನಾಮಗಳನ್ನು ಸಂಕೀರ್ತನೆ ಮಾಡುತ್ತಾರೆ.

**ಪಾಹಿ ಪಾಹಿ ಸಹೋ ಸದಾ ಕಪಿ ।**
**ಪಾಹಿ ಸಮ್ಯಗ್ ಜ್ಞಾನ ದಶಕುಲ ।**
**ಪಾಹಿ ಮಾಂ ಶ್ರೋತವ್ಯ ನಮೋ ಸಂಕೀರ್ತಿತವ್ಯ ನಮೋ ॥**
**ಪಾಹಿ ಮಾಂ ಮಂತವ್ಯ ಕವ್ಯನೆ ।**
**ಪಾಹಿ ದ್ರಷ್ಟವ್ಯನೆ ಸರವ್ಯನೆ ।**
**ಪಾಹಿ ಗಂತವ್ಯ ನಮೋ ಕ್ರವ್ಯನೆ ಪಾಹಿ ಸ್ಮರ್ತವ್ಯ ॥ ೨೮ ॥**

**ಪದ್ಯಾರ್ಥ**:—ಪಾಹಿ ಪಾಹಿ= ರಕ್ಷಿಸು, ಕಾಪಾಡು. ಎಂದು ಎಲ್ಲ ನಾಮುಗಳಿಗೂ ಸಮನ್ವಯ ಮಾಡಿಕೊಳ್ಳಬೇಕು.

೧೭೭. ಸಹ =ಸೃಷ್ಟಿಯಲ್ಲೂ, ಮುಕ್ತಿಯಲ್ಲೂ ಶ್ರೀ ಹರಿಯ ಸಹ ವಿಹಾರ= ಮಾಳ್ಪನೆ, ಸಹಭುಜ ಮಕರೋತ್.

೧೭೮. ಸದಾ ಕಪಿ= ನಿತ್ಯಾನಂದ ದಾಯಿಯೆ ಪಾಹಿ.

೧೭೯. ಗಮ್ಯ= ಸಜ್ಜನರಿಂದ ಹೊಂದಲಿಕ್ಕೆ ಯೋಗ್ಯನೆ ಪಾಹಿ.

೧೮೦. ಜ್ಞಾನ= ಜ್ಞಾನಾಯು ರೂಪನೆ, ಜ್ಞಾನಮಯ ರೂಪಿಯೆ ರಕ್ಷಿಸು.

೧೮೧. ದಶಕಲ= ದಶ =ಅನಂತ, ಕಲ ಸೂಕ್ಷ್ಮ ಜ್ಞಾನ ಪ್ರವೀಣನೆ ಪಾಹಿ.

೧೮೨. ಶ್ರೋತವ್ಯ ನಮೋ= ಶ್ರವಣಾರ್ಹ ಮಹಿಮೆಯುಳ್ಳವನೆ, ಕಾಪಾಡು.

೧೮೩. ಸಂಕೀರ್ತಿತವ್ಯ ನಮೋ=ಗಾನಪೂರ್ವಕ ಸ್ತೋತ್ರಕೀರ್ತನ ಮಾಡಲುಚಿತವಾದ ಮಹಿಮನೆ.

೧೮೪. ಪಾಹಿ ಮಾಂ= ಮಂತವ್ಯ =ನಿನ್ನ ಮಹಿಮೆ ಮನನ ಮಾಡಲು ಯೋಗ್ಯವಾದದನ್ನು ಎನ್ನ ಮನವರಿಸಿ ರಕ್ಷಿಸು

೧೮೫. ಕವ್ಯನೆ =ಪಂಡಿತ, ಜ್ಞಾನಿಗಳಿಂದ ಸ್ತೋತ್ರಾರ್ಹನೆ ನನ್ನನ್ನು ಕಾಪಾಡು.

೧೮೬. ದ್ರಷ್ಟವ್ಯ= ಸೂಕ್ಷ್ಮ ಜ್ಞಾನಿಗಳಿಂದ ನಿನ್ನ ದಿವ್ಯ ರೂಪ ನೋಡಲು ಯೋಗ್ಯನೆ.

೧೮೭. ಸರವ್ಯ= ಸಮ್ಯಕ್ ರೂಪಯತೀತಿ ಸರಾವಃ ಉತ್ತಮ ಪ್ರಕಾರ ಸುಸ್ವರದಿಂದ ಹರಿ ಗುಣಗಾನ ಮಾಡುವನೆ ಪಾಹಿ.

೧೮೮. ಪಾಹಿ ಮಾಂ ಗಂತವ್ಯ= ಸಕಲಯೋಗ್ಯರನ್ನು ಹರಿಯಿಂದ ಹೊಂದಿಸಿ ಮುಕ್ತಿಕೊಡಿಸುವ ಮಹಿಮನೆ.

೧೮೯. ಕ್ರವ್ಯ= ವೇದಾದಿಮಂತ್ರವರ್ಣ ಕ್ರಿಯಾದಿಗಳಿಂದ ಶ್ರೀ ಹರಿಯ ಧ್ಯಾನಮಾಡಿಸಲು ಸಮರ್ಥಗತಿಪ್ರದ.

೧೯೦. ಸ್ಮರ್ತವ್ಯ = ಹರಿಭಕ್ತಾಗ್ರೇಸರ ಮಂಗಳಕಾಯನಾದುದರಿಂದ ಸ್ಮರಣೆಮಾಡಲು ಯೋಗ್ಯನೆ, ಪಾಹಿ ಮಾಂ.

**ಭಾವಸೂಚನ:**—ಪಾಹೀತಿ ॥ "ಸಹಃ ಸದಾ ಕಪಿಶ್ಚೈವ ಗವ್ಯೋ ಜ್ಞಾನಃ ತಥೈವ ಚ ॥ ತಥೈವ ಸ್ಯಾಪ್ತಶಕಲಃ ಶ್ರೋತವ್ಯಶ್ಚ ತಥೈವ ಚ ॥ ಸಂಕೀರ್ತಿತವ್ಯಮಂತವ್ಯೌ ಕವ್ಯೋ ದ್ರಷ್ಟವ್ಯ ಏವ ಚ ॥ ತಥಾ ಸರವ್ಯೋ ಗಂತವ್ಯಃ ಕ್ರವ್ಯಃ ಸ್ಮರ್ತವ್ಯ ಏವ ಚ ॥ ೨೫ ॥

**ಅವತರಣಿಕಾ:**—ಈ ಪದ್ಯದಲ್ಲಿ ೧೯೧ ನೇ ಬ್ರಹ್ಮಕಲ್ಪ ಸಾಧನ ಋಜು ಯೋಗಿಗಳಾರಂಭಿಸಿ ೨೦೦ನೇ ಬ್ರಹ್ಮಕಲ್ಪದಲ್ಲಿ ಪೂರ್ತಿ ಸಾಧನ ಗೈವ ಬ್ರಹ್ಮ ಪದಕ್ಕೆ ಬರುವರ ನಾಮ ಸಂಕೀರ್ತನೆ ಮಾಡುತ್ತಾರೆ.

**ಪಾಹಿ ಸೇವ್ಯ ಸುಭವ್ಯ ನಮೋ ಮಾಂ ।**
**ಪಾಹಿ ಸ್ವರ್ಗವ್ಯ ನಮೋ ಭಾವ್ಯನೆ ।**

**ಪಾಹಿ ಮಾಂ ಜ್ಞಾತವ್ಯ ನಮೋ ವಕ್ತವ್ಯ ಗವ್ಯ ನಮೊ ॥**
**ಪಾಹಿ ಮಾಂ ಲಾತವ್ಯ ವಾಯುವೆ ।**
**ಪಾಹಿ ಬ್ರಹ್ಮ ಬ್ರಾಹ್ಮಣಪ್ರಿಯ ।**
**ಪಾಹಿ ಪಾಹಿ ಸರಸ್ವತೀಪತೇ ಜಗದ್ಗುರುವರ್ಯ ॥ ೨೯ ॥**

**ಪದ್ಯಾರ್ಥ:**— ಹಿಂದಿನಂತೆಯೆ, ಪಾಹಿ, ಪಾಹಿ ರಕ್ಷಿಸಿರಿ ಕಾಪಾಡಿರಿ ಜ್ಞಾನ ಕೊಡಿರೆಂದು ಪ್ರತಿಯೊಬ್ಬ ಋಜುಗಳಿಗೆ ಪ್ರಾರ್ಥನೆ.

೧೯೧. ಸೇವ್ಯ=ಸಕಲ ದೇವತೆಗಳಿಂದ ಸೇವೆಮಾಡಿಸಿ ಕೊಳ್ಳುವನೆ ರಕ್ಷಿಸು.

೧೯೨. ಸುಭವ್ಯ=ಕಾರ್ಯ ಕುಶಲನೂ, ಅತಿ ಚತುರನಾದ ಸುಭವ್ಯನೆ ಪಾಹಿ.

೧೯೩. ಸ್ವರ್ಗವ್ಯ=ಸ್ವತಂತ್ರನಾದ ಶ್ರೀ ಹರಿಪುರ ಸೇರಿಸುವ ಶಕ್ತನೇ ಕಾಪಾಡು.

೧೯೪. ಭಾವ್ಯ=ಭಾವಿಸಲು ಯೋಗ್ಯನೂ, ಧ್ಯಾನಕ್ಕೆ ಅರ್ಹನಾದ ಭಾವ್ಯನೆ, ನಮಃ

೧೯೫. ಜ್ಞಾತವ್ಯ=ಸಚ್ಛಾಸ್ತ್ರ ವೇದದಿಂದ ತಿಳಿಯಲು ಶಕ್ಯನಾದ ಜ್ಞಾತವ್ಯನೆ ನಮಃ

೧೯೬. ವಕ್ತವ್ಯ=ಗುರುದ್ವಾರಾ ವೇದಾದಿಗಳಿಂದ ಹೇಳಿಸಿಕೊಂಡು ಹೊಗಳಿಸಿಕೊಳ್ಳುವ ಶಕ್ತನೆ.

೧೯೭. ಗವ್ಯ=ವೇದಗೋಚರನು, ವೇದ ಸ್ತುತ್ಯನಾದ ಗವ್ಯನೆ, ಪಾಹಿ.

೧೯೮. ಲಾತವ್ಯ=ಆದಾತವ್ಯಾತ್ ಲಾತವ್ಯ, ಮುಂದೆ ವಾಯು ಪದವಿಗೆ ಬರುವ ಲಾತವ್ಯನೆ ಪಾಹಿ.

೧೯೯. ವಾಯುವೆ=ಸಕಲ ಜೀವ ಶ್ವಾಸನಿಯಾಮಕ ಚೇಷ್ಟಾಪ್ರದ ವಾಯುವೆ ಪಾಹಿ.

೨೦೦. ಬ್ರಹ್ಮ=ಗುಣಪರಿಪೂರ್ಣನಾದ ಬ್ರಹ್ಮನ ಪ್ರಥಮಾಂಗನೆ. ಬ್ರಾಹ್ಮಣ ಪ್ರಿಯ ಪಾಹಿ ಪಾಹಿ ಸರಸ್ವತೀಪತೇ ಜಗದ್ಗುರುವರ್ಯ=

ಬ್ರಹ್ಮ ಕುಲಕ್ಕೆ ಮುಖ್ಯ ಅಭಿಮಾನಿಯಾದುದರಿಂದ, ಬ್ರಾಹ್ಮಣಪ್ರಿಯ ಅಲ್ಲದೆ ಬ್ರಾಹ್ಮಣ ಜಾತಿಗೆ ಶ್ರೇಷ್ಠನೂ ಹೌದು. ಜಗತ್ತಿಗೆ ಗುರುವಾದ ಸರಸ್ವತೀ ಒಡೆಯನಾದ ಬ್ರಹ್ಮದೇವರೇ ರಕ್ಷಿಸಿರಿ, ರಕ್ಷಿಸಿರಿ.

**ಭಾವಸೂಚನ:—** ಪಾಹೀತಿ ॥ "ಸೇವ್ಯಃ ಸುಭವ್ಯಃ ಸ್ವರ್ಗವ್ಯಃ ಭಾವ್ಯೋ ಜ್ಞಾತವ್ಯ ಏವ ಚ॥ ವಕ್ತವ್ಯಶ್ಚೈವ ಗವ್ಯಶ್ಚ ಲಾತವ್ಯಶ್ಚ ತಥೈವ ಚ ॥ ವಾಯುಶ್ಚೈವ ತಥಾ ಬ್ರಹ್ಮೇತ್ಯೇವಂ ಪಂಚಾಶದೀರಿತಾಃ ॥ ೨೯ ॥

**ಅವತರಣಿಕಾ:—** ಶ್ರೀ ದಾಸಾರ್ಯರು ಹಿಂದೆ ನೂರುಜನ ಋಜುಗಳ ನಾಮಗಳನ್ನು ಸ್ವಂತ ಕಲ್ಪನೆಯಿಂದ ಹೇಳಿಲ್ಲ. ಸಾತ್ವಿಕ ಪುರಾಣವಾದ ಶ್ರೀ ವಾಮನ ಪುರಾಣದಲ್ಲಿ ಶ್ರೀ ವೇದವ್ಯಾಸ ದೇವರು ಹೇಳಿದಂತೆ ನಾವೂ ಹೇಳಿದ್ದೇವೆ. ಈ ಋಜುಗಳ ನಾಮ ಪಠನೆಯು ಮೋಕ್ಷಾದಿ ಪುರುಷಾರ್ಥ ಪ್ರದ.

**ವಾಮನ ಪುರಾಣದಲಿ ಪೇಳಿದ ।**
**ಈ ಮಹಾತ್ಮರ ಪರಮ ಮಂಗಳ ।**
**ನಾಮಗಳ ಸಂಪ್ರೀತಿ ಪೂರ್ವಕ ನಿತ್ಯ ಸ್ಮರಿಸುವರಾ ॥**
**ಶ್ರೀ ಮನೋರಮ ಅವರು ಬೇಡಿದ ।**
**ಕಾಮಿತಾರ್ಥಗಳಿತ್ತು ತನ್ನ ತ್ರಿ ।**
**ಧಾಮದೊಳಗನುದಿನದಲಿಟ್ಟಾನಂದ ಬಡಿಸುವನು ॥ ೩೦ ॥**

**ಪದ್ಯಾರ್ಥ:—** ವಾಮನ ಪುರಾಣದಲ್ಲಿ ಪೇಳಿದ = ಪರಮಸಾತ್ವಿಕ ಪುರಾಣವಾದ ವಾಮನ ಪುರಾಣದಲ್ಲಿ ಶ್ರೀ ವೇದವ್ಯಾಸದೇವರು ಪೇಳಿದಂತೆ ಈ ಋಜುಗಳ ನಾಮವನ್ನು ನಾವೂ ಹೇಳಿರುವೆವು. (ಸ್ವಕಲ್ಪನೆಯಲ್ಲ) ಈ ಮಹಾತ್ಮರ ಪರಮ ಮಂಗಳ ನಾಮಗಳ = ಶ್ರೀಹರಿಯ ಅಚ್ಛಿನ್ನ ಭಕ್ತರೂ, ಸದಾ ಹರಿಧ್ಯಾನರತರೂ, ಅತಿರೋಹಿತ ವಿಜ್ಞಾನಿ ಋಜು ಜ್ಞಾನಿಗಳೂ ಆದ ಕಾರಣ ಇವರ ಗಣಕ್ಕೆ ಋಜು ಗಣವೆಂಬ ಅನಾದಿಯಿಂದ ಬಂದದೆ. ಕಾರಣ ಇವರು ಮಹಾತ್ಮರು. ಈ ನೂರು ಋಜುಗಳ ಪರಮ = ಉತ್ತಮವಾದ, ಮಂಗಳ = ನಿರಂತರ ಶುಭಪ್ರದ

ವಾದ ನಾಮಗಳ = ಹೆಸರುಗಳನ್ನು, ಸಂಪ್ರೀತಿಪೂರ್ವಕ ನಿತ್ಯ ಸ್ಮರಿಸು ವರ =ಮಹಾ ಭಕ್ತಿಪೂರ್ವಕ ಒಳ್ಳೇ ಪ್ರೀತಿ ಆದರದಿಂದ, ಸದಾ ಯಾರು ನೆನೆಸುತ್ತಾರೋ ಋಜುಗಳ ನಾಮ ಪಠಿಸುವರೋ, ಶ್ರೀ ಮನೋರಮ= ಶ್ರೀ ಸಂಪತ್ತು ಮೋಕ್ಷಾದಿ ಸಂಪತ್ಪ್ರದ ಶ್ರೀ ರಮಾದೇವಿಯ ಮನಸ್ಸಿಗೆ ಉಲ್ಲಾಸಪ್ರದನಾದ ಶ್ರೀ ಹರಿಯು ಅವರು ಬೇಡಿದ ಕಾಮಿತಾರ್ಥ ಗಳಿತ್ತು = ಋಜುಗಳ ನಾಮಸ್ಮರಿಪ ಭಕ್ತರು ಯಾಚಿಸಿದ, ಮೋಕ್ಷಾದಿ ಪುರುಷಾರ್ಥಗಳನ್ನು ಕೊಟ್ಟು ತನ್ನ ಶ್ರೀಧಾಮದೊಳಗನುದಿನವಲಿಟ್ಟಾ ನಂದ ಬಡಿಸುವನು = ಹರಿಯು ಸ್ವಕೀಯವಾದ ಶ್ವೇತದ್ವೀಪ, ಅನಂತಾ ಸನ ವೈಕುಂಠದಲ್ಲಿ ಇಟ್ಟು ಅಂದರೆ ಮೋಕ್ಷವನ್ನು ಕೊಟ್ಟು ಆಯಾ ಸ್ಥಾನ ಗಳಲ್ಲಿಟ್ಟು ನಿತ್ಯವಾದ ಮುಕ್ತಾನಂದ ಕೊಡುವನು.

**ಭಾವಸೂಚನ** :— ವಾಮನಪುರಾಣೇತಿ ॥ ಇತ್ಯೇತಚ್ಛತಕಂ ನಾಮ್ನಾಂ ಋಜೂನಾಂ ಯಃ ಪಠೇತ್ಸದಾ ॥ ತ್ರೈವರ್ಗತ್ತಾಂ ಪದವೀಂ ಯಾತಿ ವಾಸುದೇವಾಭಿವೀಕ್ಷಿತಾ ಇತಿ ॥ ವಾಮನೇ ಶತಕಂ ॥೧೦೦॥ ೩೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ನೇಮಾನ್ಯಪ್ರಸಿದ್ಧಾನಿ ಇತ್ಯಾಹ–"ವಾಮನ" ಇತಿ ॥ "ಇತ್ಯೇತ ಚ್ಛತಕಂ ನಾಮ್ನಾಂ ಋಜೂನಾಂ ಯಃ ಸ್ಮರೇತ್ ಸದಾ ॥ ತ್ರೈವರ್ಗತ್ತಾಂ ಪದವೀಂ ಯಾತಿ ವಾಸುದೇವಾಭಿವೀಕ್ಷಿತಾಮ್" ॥ ಇತ್ಯೇವ ತತ್ರೋಕ್ತೇಃ ಸರ್ವಂ ಅನಾಕುಲಮ್ ॥ ೩೦ ॥

## ಕನ್ನಡಾರ್ಥ

ಈ ನಾಮಗಳು ಅಪ್ರಸಿದ್ಧವಲ್ಲವೆಂಬುದಾಗಿ ಈ ಪದ್ಯದಿಂದ ಹೇಳು ತ್ತಾರೆ.

ಈ ಋಜುಗಳ ನೂರು ನಾಮಗಳನ್ನು ಸದಾ ಪಠಿಸುವವರಿಗೆ ಸಕಲಾ ಭೀಷ್ಟಗಳಾಗುವವು. ಈ ವಿಷಯದಲ್ಲಿ ವಾಮನ ಪುರಾಣದ ಮೂಲೋಕ್ತ ಶ್ಲೋಕಗಳು ಆಧಾರ. ಆದುದರಿಂದ ಯಾವುದರಲ್ಲಿಯೂ ದೋಷ ವಿಲ್ಲ ॥ ೩೦ ॥

**ಅವತರಣಿಕಾ:**— ಋಜುಗಳಿಗೆಲ್ಲ ಒಂದು ನೂರು ಕಲ್ಪ ಮೊದಲಿಗೆ ವಿಶೇಷಾಪರೋಕ್ಷ ಅಭಿವೃದ್ಧಿಗೆ ಸಾಧನ. ನಂತರ ಶಾಸ್ತ್ರಸಿದ್ಧವಾದಂತೆ ೨ ನೇ ನೂರು ಕಲ್ಪ ಮಹಾ ಸುಖಪ್ರಾರಬ್ಧ ಭೋಗಿಗಳೆಂದು ವಿವರಿಸುತ್ತಾರೆ.

**ಈ ಸಮೀರಗೆ ನೂರು ಜನ್ಮವು ।**
**ಹಾ ಸುಖ ಪ್ರಾರಬ್ಧ ಭೋಗ ಪ್ರ ।**
**ಯಾಸವಿಲ್ಲದೆ ಐದಿದನು ಲೋಕಾಧಿಪತ್ಯವನು ॥**
**ಭೂಸುರನ ಒಪ್ಪಿಡಿ ಅವಲಿಗೆ ವಿ ।**
**ಶೇಷ ಸೌಖ್ಯವನಿತ್ತ ದಾತನ ।**
**ದಾಸವರ್ಯನು ಲೋಕಪತಿಯೆನಿಸುವುದು ಅಚ್ಚರಿವೆ ॥ ೩೧ ॥**

**ಪದ್ಯಾರ್ಥ:**— ಈ = ಹಿಂದೆ ವಿವರಿಸಿದಂತೆ ೧೯೯ ನೇ ಕಲ್ಪದಿ ಸಾಧನ ಮಾಡತಕ್ಕ ಋಜು ಶ್ರೇಷ್ಠರಾದ, ಸಮೀರಗೆ = ಸಮ್ಯಕ್ ಈರಯತಿ ಪ್ರೇರಯತಿ, ಸಮೀರಃ ಉತ್ತಮ ಪ್ರಕಾರದಿಂದ ಶರೀರ ಅವಯವಾದಿಗಳನ್ನು ಪ್ರೇರಣಾ ಮಾಡತಕ್ಕ ಮುಖ್ಯ ವಾಯುದೇವಗೆ, ನೂರು ಜನ್ಮ = ಮೊದಲನೆ ನೂರು ಜನ್ಮ ಸಾಧನ ಸಾಮಾನ್ಯ, ನೂರಾವಂದನೆ ಜನ್ಮದಿ ಬಿಂಬಾಪರೋಕ್ಷವೃದ್ಧಿ ನಂತರ, ಕಲ್ಕಿ ಪದವಾರಂಭಿಸಿ, ಬ್ರಹ್ಮಪದ ಪರಿಯಂತವಾಗಿ, ನೂರು ಜನುಮದಲ್ಲಿ, ಮಹಾ ಸುಖ ಪ್ರಾರಬ್ಧ ಭೋಗ = ಈ ಋಜುಗಳೆಲ್ಲ ದುಃಖಪ್ರಾರಬ್ಧ ಭೋಗಿಗಳಲ್ಲ, ಹೆಚ್ಚಿನ ಸುಖಪ್ರಾರಬ್ಧ ಭೋಗಿಸತಕ್ಕವರು. ಹೀಗೆ ನೂರು ಬ್ರಹ್ಮ ಕಲ್ಪದಲ್ಲಿ ಪ್ರಯಾಸವಿಲ್ಲದೆ = ಶ್ರೀ ಹರಿಯ ಅನುಗ್ರಹದಿಂದ ಕಿಂಚಿತ್ತಾದರೂ ಕಷ್ಟ ಆಯಾಸವಿಲ್ಲದೇ ಸುಖ ಪ್ರಾರಬ್ಧವನ್ನು ಅನುಭವಿಸಿ, ಐದಿದನು ಲೋಕಾಧಿಪತ್ಯವನು = ಈ ವಾಯು ದೇವರು ೨೦೦ ನೇ ಕಲ್ಪದಲ್ಲಿ ಸತ್ಯಲೋಕಕ್ಕೆ ಅಧಿಪತಿಯಾದ ಬ್ರಹ್ಮ ಪದವಿಯನ್ನು ಹೊಂದಿದರು. ಹೇಗಂದರೆ ಏಕದೇಶೀಯ ದೃಷ್ಟಾಂತ ಹೇಳುತ್ತಾರೆ. ಭೂಸುರನ ಒಪ್ಪಿಡಿ ಅವಲಿಗೆ = ಬಡ ಬ್ರಾಹ್ಮಣನಾದ, ಮಿತ್ರನಾದ ಸುದಾಮನ ಒಂದು ಮುಷ್ಟಿ ಅವಲಕ್ಕಿ ಸ್ವೀಕರಿಸಿ, ವಿಶೇಷ ಸೌಖ್ಯವನಿತ್ತದ = ಶ್ರೀ ಕೃಷ್ಣ ದೇವರು

ಹೆಚ್ಚಿನ ಸುಖ ಸಂಪತ್ತನ್ನು ಕೊಟ್ಟನು. ಆತನ = ಆ ಶ್ರೀ ಕೃಷ್ಣನ ನಿರವಧಿಕ ಭಕ್ತನಾದ, ಶ್ರೀ ಹರಿಯ ಮುಖ್ಯ ಪ್ರಥಮಾಂಗ-ಪ್ರತಿ ಬಿಂಬನಾದ, ದಾಸವರ್ಯಗೆ = ದಾಸಶ್ರೇಷ್ಠನಾದ ವಾಯು ದೇವರು, ಲೋಕಪತಿ ಎನಿಸುವುದು ಅಚ್ಚರಿವೆ=ಸತ್ಯಲೋಕಾಧಿಪತಿ ಎನಿಸಿಕೊಂಡಿದ್ದು ಏನಾಶ್ಚರ್ಯವೆ. ಹರಿ ಭಕ್ತಾಗ್ರೇಸರ ಹನುಮಂತನು ಬ್ರಹ್ಮ ಪದವಿಪೊಂದಿದು ಆಶ್ಚರ್ಯವಲ್ಲ.

**ಭಾವಸೂಚನ:**— ॥ ಅಚ್ಚರ = ಆಶ್ಚರ್ಯ ॥ ೩೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪ್ರಾಸಂಗಿಕಂ ಪರಿಸಮಾಪ್ಯ ಪ್ರಕೃತಂ ಅನುಸರತಿ-“ಈ ಸಮೀರ” ಇತಿ ॥ “ಪ್ರಯಾಸಃ”-ದುಃಖಾತ್ಮಾ ॥ ನೇದಮಾಶ್ಚರ್ಯಂ ಇತ್ಯಾಹ-ಭೂಸುರ” ಇತಿ ॥ ೩೧ ॥

## ಕನ್ನಡಾರ್ಥ

ಪ್ರಾಸಂಗಿಕವಾಗಿ ಪ್ರಾಪ್ತವಾದ ವಿಷಯದ ನಿರೂಪಣೆಯನ್ನು ಮುಗಿಯಿಸಿ, ಪ್ರಕೃತವಾದ ವಿಷಯವನ್ನು ಮುಂದುವರಿಸುತ್ತಾರೆ-“ಈ ಸಮೀರ” ಈ ಪದ್ಯದಿಂದ.

“ಪ್ರಯಾಸ”- ದುಃಖ ಸ್ವಭಾವ. ಎಂದು ಅರ್ಥ. ವಾಯುದೇವರಲ್ಲಿ ಇದು ಆಶ್ಚರ್ಯಕರವೇನೂ ಅಲ್ಲ; ಎಂಬುದನ್ನು ತಿಳಿಸುತ್ತಾರೆ-ಭೂಸುರ” ಎಂಬ ಚರಣದಿಂದ. ॥ ೩೧ ॥

**ಅವತರಣಿಕಾ:**—ಈ ಪದ್ಯದಲ್ಲಿ ಶ್ರೀ ವಾಯುದೇವರು ಇನ್ನೂರು ಬ್ರಹ್ಮಕಲ್ಪಗಳಲ್ಲಿ ಸಾಧನಮಾಡುವುದನ್ನು ಸಂಕ್ಷೇಪವಾಗಿ ತಿಳಿಸುತ್ತಾ ದೇವ ದೈತ್ಯಾದಿಗಳ ಸಾಧನಮಾಡಿಸಿ ಬ್ರಹ್ಮದೇವರ ಪದವಿಯನ್ನೂ ಭಾರತೀದೇವೀರಿಂದ ಕೂಡಿ ಹೊಂದುವರೆಂದು ವಾಯು ಮಹಿಮೆ ಪೊಗಳುವರು.

**ದ್ವಿಶತ ಕಲ್ಪಗಳಲ್ಲಿ ಬಿಡದೀ ।**
**ಪೆಸರಿನಿಂದಲಿ ಕರೆಸಿದ (ಕರೆಸುವನು) ನು ತ ।**
**ನ್ನೊಶಗ ಅಮರರೊಳಿದ್ದು ಮಾಡುವ ನವರ ಸಾಧನವ ॥**
**ಅಸದು ಪಾಸನೆ ಗೈವ ಕಲ್ಯಾ್ಯ ।**
**ದ್ಯಸುರ ಪರಸಂಹರಿಸಿ ತಾ ಪೊಂ ।**
**ಬಸಿರ ಪದ ವೈದಿದನು ಗುರು ಪವಮಾನ ಸತಿಯೊಡನೆ ॥೩೨॥**

**ಪದ್ಯಾರ್ಥ:**— ದ್ವಿಶತ ಕಲ್ಪಗಳಲ್ಲಿ=ಎರಡು ನೂರು ಬ್ರಹ್ಮಕಲ್ಪಗಳಲ್ಲಿ ಒಬ್ಬ ಋಜುಗಳು ಸೃಷ್ಟಿಗೆ ಬಂದಾರಭ್ಯ ನೂರು ಬ್ರಹ್ಮಕಲ್ಪಗಳಲ್ಲಿ ಋಜುತ್ವೇನ ವಿಶೇಷ ಅಪರೋಕ್ಷ ಅಭಿವೃದ್ಧಿಗೆ ಸಾಧನ ನಂತರ ೧೦೦ ಕಲ್ಪ ಸುಖ ಪ್ರಾರಬ್ಧ ಭೋಗ ಈ ಪ್ರಕಾರ ನಿಯಮವಂತೆ, ಬಿಡದೀ ಪೆಸರಿನಿಂದಲಿ ಕರೆಸಿದನು=ತಪ್ಪದೆ ಹಿಂದೆ ಹೇಳಿದ ೧೦೦ ನಾಮಗಳಿಂದ ಒಂದೊಂದು ಕಲ್ಪವಲ್ಲಿ ಒಂದೊಂದು ನಾಮಗಳಿಂದ ಕರೆಸುತ್ತಾ, ವಾಯು ಪದವಿಗೆ ಬಂದನಂತರ ಸಮಸ್ತ ತತ್ವನಿಯಾಮಕರಾಗಿ, ತನ್ನೊಶಗ ಅಮರರೊಳಿದ್ದು = ತನ್ನ ಅಧೀನದಲ್ಲಿದ್ದ ಗರುಡ ಶೇಷಾದಿ ದೇವತೆಗಳಿದ್ದು, ಅವರ ಸಾಧನವ ಮಾಡುವ=ಆಯಾ ತತ್ವ ಪತಿಗಳಾದ ದೇವತೆಗಳ ನಿಯಾಮಕನಾಗಿ ಪ್ರೇರಿಸಿ, ಎಲ್ಲ ದೇವತೆಗಳ ಸಾಧನವನ್ನು ಮಾಡಿಸುವನು. ಅಲ್ಲದೇ, ಅಸದುಪಾಸನೆ ಗೈವ=ಮಿಥ್ಯೋಪಾಸನೆ ಜೀವ ಬ್ರಹ್ಮ ಐಕ್ಯ ಉಪಾಸನೆ ಮಾಡುವ, ಕಲ್ಯಾದ್ಯ ಸುರಪರ ಸಂಹರಿಸಿ= ದೈತ್ಯಾದಿಗಳಲ್ಲಿ ಶ್ರೇಷ್ಠನಾದ ಕಲ್ಯಾದಿ ದೈತ್ಯರನ್ನು ಸದೆಬಡೆದು ನುಗ್ಗೊತ್ತಿ, ಹನುಮ ಭೀಮ ಮಧ್ವಾವತಾರಗಳಲ್ಲಿಯೂ ನಾನಾ ವಿಧವಾದ ದೈತ್ಯ ದಾನವ ರಕ್ಕಸರನ್ನು ಸಂಹಾರ ಮಾಡಿ, ಪವಮಾನ=ಪವಮಾನ ನಾಮಕ ವಾಯುದೇವರು, ಸತಿಯೊಡನೆ=ತನ್ನ ನಿಯತ ಪತ್ನಿಯರಾದ ಭಾರತೀ ದೇವಿಯರೊಡನೆ ೨೦೦ನೇ ಕಲ್ಪಕ್ಕೆ, ಪೊಂಬಸಿರಪದವೈದಿದನು= ಬಂಗಾರದೊಡಲ ಹಿರಣ್ಯಗರ್ಭ ಬ್ರಹ್ಮ ದೇವರ ಪದವಿಯನ್ನು ಹೊಂದಿದ ರೆಂದು ವಾಯುದೇವರ ಮಾಹಾತ್ಮ್ಯೆ ಕೊಂಡಾಡಿದ್ದಾರೆ.

**ಭಾವಸೂಚನ:**— ದ್ವಿಶತೇತಿ॥ ಪೊಂಬಸಿರು ಚತುರ್ಮುಖ ॥ ೩೨ ॥

**ವಿಶೇಷ ಸೂಚನೆ:—** "ದಾಸೋಽಹಂ ಎಂಬುವನು ಸಾತ್ವಿಕ ಜನ ದಲ್ಲಿದ್ದು ! ಮೋಸವ ದೈತ್ಯರಲ್ಲಿ ಸೋಹಂ ಎಂದೂ । ಶ್ವಾಸ ಜಪಗಳ ಮಾಳ್ಪ ಮಾತರಿಶ್ವದೇವ । ಶ್ರೀಶನಾಜ್ಞವ ಪೊಹಿಸಿ ಶಿರದಲ್ಲಿ ॥ ವಾಸುದೇವ ರಂಗ **ಪುರಂದರ ವಿಠಲನ ಶ್ವಾಸಜಪದಿಂದ** ಪ್ರೀತಿಯ ಬಡಿಸುವ ॥ ಎಂದು ಪುರಂದರ ದಾಸರ ಸುಳಾದಿ, ತ್ರಿವಿಧರ ಯೋಗ್ಯತೆಯಂತೆ ಶ್ವಾಸ ಜಪ ಮಾಡುವದೆ ಸಾಧನ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದ್ವಿಶತ" ಇತಿ ॥ ಮಾಸಮುಕ್ತಂ ಪುರಸ್ತಾತ್ ॥ "ಅಸತ್" ಇತಿ ॥ ವಿವೃತಮೇತತ್ ॥ ಪೊಂಬಸರು" ಬ್ರಹ್ಮಾ ॥ ೩೨ ॥

## ಕನ್ನಡಾರ್ಥ

೨೦೦ ಕಲ್ಪಗಳೆಂಬ ಇತ್ಯಾದಿ ವಿಷಯದಲ್ಲಿ ಮುಂದೆ ಪ್ರಮಾಣ ವನ್ನು ಹೇಳಲಾಗಿದೆ.

ಅಸದುಪಾಸನೆಯನ್ನು ಮಾಡುವ ಕಲಿ ಮುಂತಾದ ದೈತ್ಯರನ್ನು ಸಂಹರಿಸಿ, ಬ್ರಹ್ಮಪದವಿಯನ್ನು ಹೊಂದುವನು; ಈ ಸಂಗತಿಯನ್ನು ಹಿಂದೆ ತಿಳಿಸಲಾಗಿರುತ್ತದೆ. "ಪೊಂಬಸರು" ಬಹ್ಮ. (ಚತುರ್ಮುಖ)॥೧೨॥

**ಅವತರಣಿಕಾ:—** ಹಿಂದಿನ ಪದ್ಯವನ್ನೆವಿಸ್ತರಿಸುತ್ತಾವಾಯುದೇವರು ತನ್ನ ಕಲ್ಪದಲ್ಲಿ ಅನಿಮಿಷರಂತರ್ಯಾಮಿಯಾಗಿ ಅವರ ಸಾಧನ ಮಾಡಿಸುವ ಬಗೆ, ಮುಂದೆ ಬ್ರಹ್ಮಪದದಿಂದ ಸಾಧನಮಾಡುವ ವಿಚಾರವನ್ನು ಈ ಪದ್ಯ ದಲ್ಲಿ ವಾಯುಬ್ರಹ್ಮದೇವರ ಮಹಿಮೆ ಬಣ್ಣಿಸುತ್ತಾರೆ.

**ಅನಿಮಿಷರ ನಾಮದಲಿ ಕರೆಸುವ ।**
**ಅನಿಲದೇವನು ಒಂದು ಕಲ್ಪಕೆ (ವರುಷಕೆ)**
**ವನಜ ಸಂಭವನೆನಿಸಿ ಎಂಭತ್ತೇಳುವರೆ ವರುಷ(ಅಬ್ಧಾ)।**
**ಗುಣತ್ರಯ ವರ್ಜಿತನ(ಗುಣತ್ರಯಗಳೂರ್ಜಿತನ) ಮಂಗಳ ।**

**ಗುಣ ಕ್ರಿಯೆ ಸುರೂಪಂಗಳುಪಾ।**
**ಸನವು ಅವ್ಯಕ್ತಾದಿ ಪೃಥ್ವ್ಯಂತರದಿ ಇರುತಿಹುದು ॥ ೩೩ ॥**

**ಪದ್ಯಾರ್ಥ:**— ಅನಿಲದೇವನು= ಈ ವಾಯು ದೇವರು, ಒಂದು ಕಲ್ಪಕೆ=ತಮ್ಮ ಗರ್ಭ ಸಾಧನದ ಒಂದು ಕಲ್ಪದಲ್ಲಿ,ಅನಿಮಿಷರ ನಾಮದಲಿ ಕರೆಸುವ=ನಿಮಿಷ ರಹಿತ ನಿದ್ರೆ ಇಲ್ಲದ ಸ್ವಾಪರಹಿತರಾದ "ಇಂದ್ರಿಯಾ ಣಾಂ ನ ತು ಸ್ವಾಪಃ" ಇಂದ್ರಿಯಾಭಿಮಾನಿ ತತ್ವಾಭಿಮಾನಿ ದೇವತೆಗಳಿಗೆ ನಿದ್ರಾ ಅಜ್ಞಾನಾದಿಗಳಿಲ್ಲ. ಕಾರಣ ಇವರಿಗೆ ಅನಿಮಿಷರೆಂದು ಹೆಸರು. ಈ ತತ್ವಾಭಿಮಾನಿ ದೇವತೆಗಳ ಅಂತರ್ಯಾಮಿಯಾಗಿದ್ದು, ಜಾಗೃತ್ ಸ್ವಪ್ನ ಸುಷುಪ್ತ್ಯವಸ್ಥೆ ಅಲ್ಲದೇ ಮಹಾ ಪ್ರಳಯದಲ್ಲೂ ಅಜ್ಞಾನಾದಿ ದೋಷ ರಹಿತನಾದ ವಾಯುದೇವರು ಆಯಾ ತತ್ವಕ್ಕೆ ನಿಯಾಮಕ ಅಂತಃ ಪ್ರೇರಕನಾದುದರಿಂದ ಮುಖ್ಯ ದೇವತೆ.ಅನಿಮಿಷರ ಹೆಸರಿನಿಂದ ಕರೆಸುತ್ತಾ ನೆಂದು ದಾಸರ ಅಭಿಪ್ರಾಯ. ಇವನ್ನು ವ್ಯಾಸದಾಸ ಸಿ. ಕೌಮುದೀ ಕಾರರು ವಿಶದೀಕರಿಸಿ ಮಹೋಪಕಾರ ಮಾಡಿದ್ದಾರೆ. ಮುಂದೆ ವಾಯು ದೇವನು, ವನಜಸಂಭವನೆನಿಸಿ=ಪದ್ಮಕಲ್ಪದಲ್ಲಿ ಶ್ರೀ ಹರಿಯ ನಾಭಿಕಲ್ಪ ದಿಂದ ಅವತರಿಸಿದ ಚತುರ್ಮುಖನು ಎಂಭತ್ತೇಳುವರೆ ವರುಷ=ಬ್ರಹ್ಮ ಮಾನದಿಂದ ೮೭॥ ದಲ್ಲಿ ವರುಷ ಬ್ರಹ್ಮಪ್ರಳಯ ತನಕ, ಸೃಷ್ಟ್ಯಾದಿ. ವ್ಯಾಪಾರ ಮಾಡಲೋಸುಗ ಅವ್ಯಕ್ತಾದಿ ಪೃಥ್ವ್ಯಂತರದಿ=ಬ್ರಹ್ಮಾಂಡ ಉಪಚಯವಾಗಿ ಸೃಷ್ಟವಾಗಿರುವ ಅವ್ಯಕ್ತ ತತ್ವ ಮೊದಲುಮಾಡಿ ಪೃಥಿವಿ ತತ್ವ ಪರಿಯಂತ ಬ್ರಹ್ಮಾಂಡ ವ್ಯಾಪಾರಗೋಸುಗ ೨೪ ತತ್ವ, ತತ್ವ ನಿಯಾಮಕ ದೇವತೆಗಳಲ್ಲಿಪ್ಪ, ಗುಣತ್ರಯ ವಿವರ್ಜಿತನ=ಪ್ರಕೃತಿ ಜನ್ಯ ಸತ್ವಾದಿ ಗುಣಮೂರರಿಂದ ದೂರನಾದ, ಮಂಗಳ ಗುಣ ಕ್ರಿಯಸುರೂಪ= ಸಚ್ಚಿದಾನಂದ ಜ್ಞಾನ ಆನಂದ ರೂಪಿ ಹರಿಯ ಅನಂತ ಗುಣಗಳು, ಅನಂತ ರೂಪಗಳು, ಅನಂತ ಕ್ರಿಯೆಗಳನ್ನು ಉಪಾಸನೆ ಮಾಡುವರು ಮುಖ್ಯ ಉಪಾಸಕರು ಬ್ರಹ್ಮದೇವರು.

**ಭಾವಸೂಚನ:**— ॥ ಅನಿಮಿಷೇತಿ ॥ ೩೩ ॥

**ವಿಶೇಷ ಸೂಚನೆ:—ಶ್ರೀವಿಜಯರ ಸುಳಾದಿ** ಋಜು ಪ್ರಕರಣೇ "ಅಜನ ಪಟ್ಟಕೆ ಸಾರೆ ಚರಮ ದೇಹ ಚತುರ್ಭುಜಯುಕ್ತ ಜಪಮಾಲೆ ಕಮಂಡುಲ। ದ್ವಿಜಗಮನ ವಾಣಿಪತಿ ಸರ್ವ ಜೀವಿಗಳನ್ನು। ಸೃಜಿಸುವ ಮಹಾ ಯೋಗ ಚತುರ ವದನ। ಭುಜಗೇಶ ಭೋಗತಲ್ಪ ಈತಸಿಗೆ ಸ್ವಬಿಂಬ। ನಿಜ ವಾಸುದೇವನೆಂಬೋ ನಾಮ ಉಂಟು। ಭಜನೆ ಮಾಡುವ ತನ್ನಾಕಾರದಂತೆ ವ್ರಜ ಗುಣರೂಪಕ್ರಿಯ ಭೇದದಿಂದ। ರಜದೂರನಾಗಿ ಒಂದರೊಳನಂತ ಕಾಣುತ್ತ॥ ಇತ್ಯಾದಿ ದಾಸರ ವಾಕ್ಯಕ್ಕೆ ಪ್ರಮಾಣ ವಾಗಿದೆ. (ಸೃ. ಸು. ೧೬)

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅನಿಮಿಷ" ಇತಿ॥ "ಅನಿಮಿಷಾಃ"–ದೇವಾಃ॥ ಅಂತರ್ಯಾಮಿತ್ವೇನ॥ "ಎಂಭತ್ತೇಳುವರೆ"–ಸಾರ್ಧದ್ವಾದಶ ವರ್ಷಾಃ ಪ್ರಲಯ ಕಾಲ ಶಬ್ದಿತಾಃ॥ ಏವಂ ಮಂಜರೀ ವರ್ಣಿತಂ॥ ಅವ್ಯಕ್ತಾದಿಗತರೂಪಾಣಿ ಉಪಾಸ್ತೇ ಇತ್ಯರ್ಥಃ॥ ೩೩॥

## ಕನ್ನಡಾರ್ಥ

ದೇವತೆಗಳಿಗೆ ಅನಿಮಿಷರೆಂಬ ಹೆಸರು ಇರುತ್ತದೆ. ಅವರಲ್ಲಿ ಅಂತರ್ಯಾಮಿ ರೂಪದಿಂದ ವಾಯುದೇವರು ಬ್ರಹ್ಮದೇವರು ಇರುತ್ತಾರೆ.

ಅವರ ಸಾಧನ ೮೭॥ ವರ್ಷ. ಅಂದರೆ ೧೨॥ ವರ್ಷ ಪ್ರಳಯ ಕಾಲ ವೆನಿಸಿರುತ್ತದೆ. ಹೀಗೆ ಮಂಜರಿಯಲ್ಲಿ ನಿರೂಪಿಸಿರುತ್ತಾರೆ. ಅವ್ಯಕ್ತ ಮುಂತಾದವುಗಳಲ್ಲಿ ಇರುವ ಭಗವಂತನ ರೂಪಗಳನ್ನು ಉಪಾಸಿಸುತ್ತಾರೆ. ಎಂದು ಅರ್ಥ ॥ ೩೩॥

**ಅವತರಣಿಕಾ:—**ಈ ಪದ್ಯದಿಂದ ಸಕಲ ಋಜುಗಳಾರಂಭಿಸಿ ಬ್ರಹ್ಮಪದವಿ ಪರಿಯಂತ ಪೂರ್ಣ ಜ್ಞಾನ ಸಂಪನ್ನರು, ವೃಜಿನಾದಿ ವರ್ಜಿತರಾದರೂ, ಮುಕ್ತ ಬ್ರಹ್ಮರಿಗೆ ಸಮಾನರಾಗರು ಎಂಬ ಕಾರಣ ಪರಮೋತ್ಸವ ವಿವರ್ಜಿತರೆಂಬ ಶಾಸ್ತ್ರಾರ್ಥ ವಿಶದೀಕರಿಸುತ್ತಾರೆ.

**ಮಹಿತ ಋಜುಗಣಕೊಂದೆ ಪರಮೋ।**
**ತ್ಸಹ ವಿವರ್ಜನವೆಂಬ ದೋಷವು।**
**ವಿಹಿತವೇ ಸರಿ ಇದನು ಪೇಳ್ದಿರೆ ಮುಕ್ತ ಬ್ರಹ್ಮರಿಗೆ॥**
**ಬಹುದು ಸಾಮ್ಯವು ಜ್ಞಾನ ಭಕುತಿಯು।**
**ದ್ರುಹಿಣ ಪದ ಪರಿಯಂತ ವೃದ್ಧಿಯು।**
**ಬಹಿರುಪಾಸನ ಉಂಟನಂತರ ಬಿಂಬದರ್ಶನವು ॥ ೩೪ ॥**

**ಪದ್ಯಾರ್ಥ:**— ಮಹಿತಃ= ಮಹ್ಯತೇ ಇತಿ ಮಹಿತಃ ಲೋಕಾನಾಂ ಪೂಜ್ಯ, ಸಕಲ ಲೋಕರಿಂದ ಪೂಜ್ಯರಾದ, ಋಜುಗಣಕೆ=ಜೀವ ಕೋಟಿಗಳಲ್ಲಿ ಉತ್ತಮವಾದ, ಅತಿರೋಹಿತ ಜ್ಞಾನವುಳ್ಳ ಸಂತತ ಶುದ್ಧ ಸರಳವಾದ ಜ್ಞಾನವುಳ್ಳ ಋಜುಗಳು ಗಣ=೨೦೦ ಗಣ ಸಮೂಹವು ಶುದ್ಧ ಜ್ಞಾನಿಗಳ ಋಜುಗಣಕ್ಕೆ ಪರಮೋತ್ಸಹ ವಿವರ್ಜನವೆಂಬ ಒಂದೇ ದೋಷವು= ಸೃಷ್ಟ್ಯಾದಿ ವ್ಯಾಪಾರೇಚ್ಛಾ ಶೂನ್ಯವಾದ ಭಗವದುಪಾಸನೆಯು, ಅಂದರೆ "ಮುಕ್ತ್ಯರ್ಥೋದ್ಯೋಗ ತದ್ರಾಹಿತ್ಯವಾದದು, ಮುಕ್ತಿಯಲ್ಲಿ ಉಪಾಸನಾನಂದ ವಿವರ್ಜಿತ ರಾಹಿತ್ಯವು ಅಲ್ಪವಾದರೂ ಅದು ದೋಷರೂಪವಲ್ಲ ಈ ಪರಮೋತ್ಸಹ ವಿವರ್ಜಿತ ದೋಷವು ಸೃಷ್ಟಿಯಲ್ಲಿರತಕ್ಕ ಋಜುಗಳಿಗೆ ಏಕೆ. ಶಾಸ್ತ್ರವು ಹೇಳಿದೆ ಎಂದರೆ ಇವನ್ನು ಹೇಳದಿದ್ದರೆ, ಮುಕ್ತ ಬ್ರಹ್ಮರಿಗೆ ಸೃಷ್ಟಿಯಲ್ಲಿರುವ ಋಜುಗಳಿಗೆ, ಸಾಮ್ಯವು ಬಹದು=ಸಾಮ್ಯ ಸರಿಸಮಾನ ಬಂದೀತು ಎಂಬೋ ಕಾರಣ "ಪರಮೋತ್ಸಹ ವಿವರ್ಜನ ದೋಷವಾದರೂ, ಋಜುಗಳಿಗೆ ದೋಷ ರೂಪವಲ್ಲ. ಏಕೆಂದರೆ ಮುಂದಿನ ನುಡಿಗಳಿಂದಲೇ ದಾಸಾರ್ಯರು ಟೀಕಾ ರೂಪ ವಿವರಿಸುತ್ತಾರೆ. ಋಜುಗಳ ಜ್ಞಾನ, ಭಕುತಿ, ದ್ರುಹಿಣ ಪದ ಪರಿಯಂತ ವೃದ್ಧಿಯು=ಋಜುಗಳ ವಾಯು ಬ್ರಹ್ಮರ ಜ್ಞಾನ ಭಕ್ತ್ಯಾದಿಗಳು ಸಮಾನವಿದ್ದರೂ, ಸಾಧನ ಕ್ರಮವಾಗಿ ಬಿಂಬದರ್ಶನದಲ್ಲಿ ಮಾತ್ರ ಹೆಚ್ಚುವಿಕೆ, ಅಭಿವೃದ್ಧಿಯಾಗುವಿಕೆ, ಮತ್ತು ಬಹಿರುಪಾಸನೆ, ಬ್ರಹ್ಮಪದ ೮೭॥ ವರುಷ ಪರಿಯಂತ ಬಹಿರುಪಾಸನೆ ಅವ್ಯಕ್ತಾದಿ ಪೃಥ್ವ್ಯಂತ ಉಪಾಸನ ೮೭॥ ವರ್ಷನಂತರ ಸೃಷ್ಟ್ಯಾದಿ ವ್ಯಾಪಾರ ರಹಿತರಾದ ಬ್ರಹ್ಮದೇವರು ಸಕಲರಲ್ಲಿ ಬಿಂಬ

ನನ್ನು ಸ್ವಬಿಂಬನಲ್ಲಿ ಐಕ್ಯ ಚಿಂತಿಸಿ ತಮ್ಮ ಬಿಂಬನನ್ನೇ ಉಪಾಸನೆಮಾಡು ವರು. ಸೃಷ್ಟಿಕಾಲದಲ್ಲಿ ಸ್ವಬಿಂಬನ ವಿನಾ ಇತರ ಸಕಲ ಪ್ರಾಣಿ ಜೀವ ಜಡದಲ್ಲಿದ್ದ ತಮ್ಮ ಗುಣ ರೂಪ ಕ್ರಿಯೋಪಾಸನೆ ಮಾಡಿ ಆತ್ಮ ಹೃತ್ಪದ್ಮ ಗೇನ್ನೈಕ್ಯಚಿಂತನಂ ಪರಮಾರ್ಚನಮ್ ॥ ಎಂಬುವಂತೆ ಮೊದಲಿಗೆ ಋಜುಗಳಿಗೆಲ್ಲಿ ಸಾಮಾನ್ಯ ಬಿಂಬ ದರ್ಶನ ಸಾಧನ ಕ್ರಮದಿಂದ ವೃದ್ಧಿ ಯಾಗಿ ಬ್ರಹ್ಮನು ಶತಕೋಟಿ ಸೂರ್ಯ ಪ್ರಕಾಶ ಬಿಂಬೋಪಾಸನ ಗೈವರು ॥

**ಭಾವಸೂಚನ:**— ॥ ಮಹಿತೇತಿ ॥ ಋಜೂನಾಂ ಏಕ ಏವಾಸ್ತಿ ಪರಮೋತ್ಸಾಹ ವರ್ಜನಮ್ ॥ ಸಗುಣಾಲ್ಪತ್ವಮಾತ್ರತ್ವಾನ್ನರ್ಜುತ್ವೇನ ವಿರುಧ್ಯತ ಇತ್ಯನು ವ್ಯಾಕೃತೇ ॥ ಪರಮೋತ್ಸಾಹಃ ॥ ಗುಣಃ ತದ್ವ ರ್ಜನಂ ತದಲ್ಪತೇತಿ ॥ ಮಹಿತೇತಿ ॥ ಅನಂತರೇತಿ ॥ ಶತಜನ್ಮಕೃತಾನಾಂ ತು ಋಜೂನಾಂ ಪೂರ್ವಮೇವ ಚ ॥ ಅಪರೋಕ್ಷಾಭಾವ ಏವ ಹ್ಯ ಜ್ಞಾನಂ ಸಮುದೀರಿತಮ್ ॥ ಅಪರೋಕ್ಷಾನಂತರಂ ತು ನಾಸ್ತ್ಯಜ್ಞಾನಂ ನ ಸಂಶಯ ಇತಿ ಗಾರುಡೇ ॥ ೩೪ ॥

**ವಿಶೇಷ ಸೂಚನೆ:**— ಈ ಪ್ರಮಾಣದ ಅರ್ಥವು ಸಂಶಯವಾಗಿ ತೋರುತ್ತದೆ. ವಿಶೇಷಾ ಪರೋಕ್ಷ ಅಭಾವವೆಂದು ಅರ್ಥಮಾಡಬೇಕು. ಕಾರಣ **ಶ್ರೀ ವಿಜಯದಾಸಾರ್ಯರು ಸೃ. ಪ್ರಕರಣ ಸುಳಾದಿ ೧೬** ಮ ತಾಳ "**ತೊಂಭತ್ತೆಂಟು** ಮಂದಿ ಲಾತವ್ಯರು ಕಾಣೊ । ಎಂಬದು ನಿಜವೆನ್ನಿ ಒಬ್ಬಗೆ ನನ ವಾಯು ಪದವಿ । ಅಂಭುಜಸಂಭವಗೆ ಸತ್ಯ ಲೋಕದ ಪದವಿ ಉಂಬೋರು ಪ್ರಾರಬ್ಧ ಶತಸ್ಥರೊಂದೆಗಣ । **ಒಂಭತ್ತು ವಿಧ ಭಕುತಿ ಇವರಲ್ಲಿ ನಿತ್ಯಾ । ತುಂಬಿಕೊಂಡಿಹದು ಅನಾರಬ್ಧ ಕಾಲಕ್ಕೆ ।ಬಿಂಬನೋಳ್ಪದು ಮತ್ತೆ ಕಾಲವ್ಯವಧಾನ** । ಕುಂಭಿಣಿಯೊಳ ಗಿವರು ಪುಟ್ಟಿದ ಕಾಲಕ್ಕೂ । ಡಂಭಕತನ ನಡತೆ ಸಲ್ಲದು ಸರ್ವರಲಿ । ಅಂಬುಜಪತಿ ನಮ್ಮಾ ವಿಜಯ ವಿಠ್ಠಲಸಂಘ್ರಿ । ಬೆಂಬಿಡದೇ ನೋಡಿ ನಲಿ ನಲಿದಾಡುವರು"॥ ೨ ॥ ಸೃಷ್ಟಿಪ್ರ ಸುಳಾದಿ ಪುಟ (೭೫)

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ನನು ಏವಂ ನಿರ್ದುಷ್ಟೇ ಋಜುತ್ವೇ ಮುಕ್ತಸಾಮ್ಯಂ ಸ್ಯಾತ್ ಇತ್ಯತ ಆಹ–"ಮಹಿತ'' ಇತಿ ॥ ಪೂಜ್ಯ ॥ ಪರಮೋತ್ಸಾಹಃ ಮುಕ್ತ್ಯರ್ಥೋದ್ಯೋಗಃ ॥ ತದ್ರಾಹಿತ್ಯಂ ತದಲ್ಪತಾ ॥ ನ ದೋಷ ರೂಪಮ್ ॥ ಏವಂ ಚ ಸಾಮ್ಯಂ ನಿರಸ್ಯ ಋಜುತ್ವಮಪ್ಯಪೀಡಿತಮ್ ॥ ಋಜೂನಾಂ ಏಕ ಏವಾಸ್ತಿ ಪರಮೋತ್ಸಾಹವರ್ಜನಮ್ ॥ ಸಗುಣಾಲ್ಪತ್ವಮಾತ್ರತ್ವಾತ್ ನರ್ಜುತ್ವೇನ ವಿರುಧ್ಯತೇ ॥ ಇತ್ಯೇತದ್ವ್ಯಾಖ್ಯಾ ಸುಧಾಯಾಂ ಸ್ಪಷ್ಟಮೇತತ್ ॥ ಬಹಿರುಪಾಸನಾಸಾಮಾನ್ಯಾ ಪರೋಕ್ಷಃ ಕಲ್ಕ್ಯರ್ವಾಕ್ ಜನ್ಮಸು ॥ ವಿವೃತಂ ಚ ಸಾಮಾನ್ಯಾ ಪರೋಕ್ಷ ಸ್ವರೂಪಮ್ ॥ ವೃದ್ಧಿಪದಂ ತಂತ್ರೇಣ ಉಪಾತ್ತಮ್ ॥ ಕ್ರಮೇಣ ಬಿಂಬ ದರ್ಶನೇಪಿ ಸ್ಪಷ್ಟತಾಖ್ಯವೃದ್ಧಿಂ ಬ್ರೂತೇ ॥ ೩೪ ॥

## ಕನ್ನಡಾರ್ಥ

ಹೀಗೆ ಋಜು ಸ್ವಭಾವವು ನಿರ್ದುಷ್ಟವಾದರೆ ಅವರಿಗೆ ಮುಕ್ತರಿಂದ ಸಾಮ್ಯ ಬರುವುದಲ್ಲ; ಹೀಗೆ ಶಂಕಿಸಿದರೆ ಅದಕ್ಕೆ ಉತ್ತರ ರೂಪವಾಗಿ– "ಮಹಿತ" ಈ ಪದ್ಯವನ್ನು ಹೇಳುತ್ತಾರೆ. "ಮಹಿತ"– ಪೂಜ್ಯ. "ಪರಮೋತ್ಸಾಹಃ"–ಮುಕ್ತಿಯ ಸಲುವಾಗಿ ಉದ್ಯುಕ್ತವಾಗಿರುವುದು. "ತದ್ರಾಹಿತ್ಯಂ" –ಅದರಿಂದ ರಹಿತವಾಗಿರುವುದು ಎಂದರೆ ಅದರಲ್ಲಿ ಸ್ವಲ್ಪೇ ತೊಡಗಿರುವುದು ಎಂದು ಅರ್ಥ. ಇದು ಋಜುಗಳ ದೋಷವಲ್ಲ. ಹೀಗೆ ಹೇಳುವುದರಿಂದ ಮುಕ್ತಸಾಮ್ಯವನ್ನು ನಿರಾಕರಿಸಿದ್ದಾಗುತ್ತದೆ. **ಮುಕ್ತಿಯ ಸಲುವಾಗಿ ಪರಮೋತ್ಸಾಹವಿಲ್ಲದಿರುವುದೊಂದೇ ಒಂದು ಧರ್ಮ. ಹೀಗೆ ಇರುವ ಈ ಧರ್ಮವು ಋಜುತ್ವವನ್ನು ವಿರೋಧಿಸುವುದಿಲ್ಲ.** ಈ ವಿಷಯವು "ಸಗುಣಾಲ್ಪಮಾತ್ರತ್ವಾತ್" ಈ ಅನುವ್ಯಾಖ್ಯಾನದ ವ್ಯಾಖ್ಯಾ ಸುಧೆಯಲ್ಲಿ ಹೆಚ್ಚು ವಿಶದೀಕೃತವಾಗಿರುತ್ತದೆ. ಉಪಾಸನೆಯ ಬಹಿಃ ಸಾಮಾನ್ಯಾ ಪರೋಕ್ಷವು ಇರುತ್ತದೆ. ಸಾಮಾನ್ಯಾ ಪರೋಕ್ಷದ ಸ್ವರೂಪವನ್ನು ಹಿಂದೆ ನಿರೂಪಿಸಿರುತ್ತೇವೆ.

ಇಲ್ಲಿಯ "ವೃದ್ಧಿ" ಈ ಪದಕ್ಕೆ ತಂತ್ರದಿಂದ ಪುನರಾವೃತ್ತಿಯಿರುತ್ತದೆ. "ಸ್ಪಷ್ಟತಾ" ಎಂಬ ಜ್ಞಾನಗತವಾದ ವಿಶೇಷವು ಬಿಂಬ ದರ್ಶನವಿದ್ದರೂ ಕ್ರಮದಿಂದ ವೃದ್ಧಿಯಾಗುತ್ತದೆಯೆಂದು ಹೇಳುತ್ತಾರೆ. ॥ ೩೮ ॥

**ಅವತರಣಿಕಾ:**— ಋಜುಗಳು ಮತ್ತು ವಾಯು ಬ್ರಹ್ಮರಿಗೆ ಅಜ್ಞಾನಾದಿದೋಷಗಳೂ ಇಲ್ಲವೆಂದರೆ ಕೆಲ ಪುರಾಣಗಳಲ್ಲಿ ಅಜ್ಞಾನ ಭಯ ಪೇಳಿರುತ್ತದೆ. ಎಂದರೆ ಅದು ದೈತ್ಯಮೋಹಕವು ಎಂದು ಪರಿಹರಿಸಿ ಶ್ರೀ ಹರಿಯಪ್ರೀತಿಗೋಸುಗ ಭಯ ಅಜ್ಞಾನ ತೋರುವರೆಂದು ವಿವರಿಸುತ್ತಾರೆ.

**ಜ್ಞಾನರಹಿತ ಭಯತ್ವ ಪೇಳ್ವ ಪು ।**
**ರಾಣ ದೈತ್ಯರ ಮೋಹಕವು ಚತು ।**
**ರಾನನಗೆ ಕೂಡುವದೆ ಮೋಹಾ ಜ್ಞಾನ ಭಯಶೋಕ ॥**
**ಭಾನುಮಂಡಲ ಚಲಿಸಿದಂದದಿ ।**
**ಕಾಣುವುದು ದೃಗ್ದೋಷದಿಂದಲಿ ।**
**ಶ್ರೀನಿವಾಸನ ಪ್ರೀತಿಗೋಸುಗ ತೋರ್ದನಲ್ಲದಲೆ ॥ ೩೯ ॥**

**ಪದ್ಯಾರ್ಥ:**— ಶ್ರೀಬ್ರಹ್ಮವಾಯು. ಸರಸ್ವತೀ, ಭಾರತಿ ನಾಲ್ವರಿಗೆ ಅಜ್ಞಾನಾದಿ ಭಯಗಳು ಯಾವ ಕಾಲದಲ್ಲಿಯೂ ಇಲ್ಲ. ಆದರೆ ಕೆಲ ಪುರಾಣಗಳಲ್ಲಿ,ಜ್ಞಾನರಹಿತ=ವಾಯ್ವಾದಿಗಳು ನಾಲ್ಕು ಜನಕೆ ಜ್ಞಾನತಿರೋಧಾನ ಭಯತ್ವ=ಅಂಜುವಿಕೆ ಹೆದರುವಿಕೆ. ಪೇಳ್ವ=ಹೇಳುವ, ಪುರಾಣ ವ್ಯಾಸ ರಚಿತ ಕೆಲಪುರಾಣ ವಚನಗಳು, ದೈತ್ಯರ ಮೋಹಕವು=ದುಷ್ಟರಾದ ಅಸುರರು-ದಾನವರು ರಾಕ್ಷಸಾದಿ ದೈತ್ಯರಿಗೆ ಮೋಹಪುಟ್ಟಿಸಿ ಅವರಿಗೆ ವಾಯು ಬ್ರಹ್ಮನಲ್ಲಿ ದ್ವೇಷಪುಟ್ಟಿಸಿ ಅಧೋಗತಿಗೆ ಸಾಧನ ಮಾಡಿಸಲು ಶ್ರೀ ವೇದವ್ಯಾಸರು ಮೋಹಕ ವಚನಗಳನ್ನು ಪೇಳಿದ್ದಾರೆಂದು ಗಾರುಡ ಬ್ರಹ್ಮಕಾಂಡ ಉಕ್ತಿ ಇದೆ.

ಚತುರಾನನಗೆ=ಬ್ರಹ್ಮ ದೇವರಿಗೆ, ತಥಾ ವಾಯುದೇವರಿಗೆ, ಮೋಹಾ ಜ್ಞಾನ ಭಯ, ಶೋಕ=ಮೋಹ=ಭ್ರಾಂತಿ. ಅಜ್ಞಾನ, ಅಂಜಿಕೆ,

ದುಃಖಾದಿಗಳು ಎಂದಿಗಾದರೂ, ಕೂಡುವದೆ?=ಹೊಂದುವವೆ ಎಂದೆಂದಿಗೂ ಭ್ರಾಂತಿ, ಅಜ್ಞಾನ, ಅಂಜಿಕೆ ದುಃಖಾದಿ ದೋಷಗಳು ಇಲ್ಲೇ ಇಲ್ಲ. ಇದಕ್ಕೆ ಒಂದು ಸಾಮಾನ್ಯ ದೃಷ್ಟಾಂತ; ದೃಗ್ದೋಷದಿಂದಲಿ=ಕಣ್ಣಿನ ಕಾಚು ದೋಷದಿಂದ, ಭಾನು ಮಂಡಲ ಚಲಿಸಿದಂದದಿ ಕಾಣುವುದು= ಮಧ್ಯಾಹ್ನಗತ ಸೂರ್ಯಮಂಡಲ ಕಿಂಚಿತ್ ಸ್ಥಿರವಾಗಿ ನಿಂತು ಮುಂದೆ ಸಾಗುವ. ಆದರೆ ನೋಡುವರ ದೃಷ್ಟಿ ದೋಷದಿಂದ ಸೂರ್ಯಮಂಡಲ ಚಲಿಸಿದಂತೆ ಕಾಣುವುದೇ ಹೊರತಾಗಿ ಸೂರ್ಯಬಿಂಬಕ್ಕೆ ಮಧ್ಯಾಹ್ನ ಚಲನೆ ಇಲ್ಲವೋ ಅದರಂತೆ ಚತುರಾನನು=ಬ್ರಹ್ಮದೇವರು. "ಅಜ್ಞಾನಂ ತು ಚತುರ್ವಾರಂ ದ್ವಿವಾರಂ ಭಯಮೇವ ಚ" ಎಂಬುವಂತೆ, ಶ್ರೀನಿವಾಸನ ಪ್ರೀತಿಗೋಸುಗ ತೋರ್ದನಲ್ಲದಲೆ=ಶ್ರೀ ಹರಿಯ ಸಂಪ್ರೀತಿ ಬಡಿಸಿ ಅಜ್ಞರನ್ನು ಮೋಹಗೊಳಿಸಲು ತೋರಿದನು. ಹೊರತಾಗಿ ನಿಜವಾಗಿ ಬ್ರಹ್ಮವಾಯುಗಳಲ್ಲಿ ಅಜ್ಞಾನ ಭಯಗಳು ಇಲ್ಲೇ ಇಲ್ಲ.

**ಭಾವಸೂಚನ:**— ॥ ಅಜ್ಞಾನೇತಿ ॥ ಪುರಾಣೇತಿ ॥ ಅಜ್ಞಾನಂ ತು ಚತುರ್ವಾರಂ ದ್ವಿವಾರಂ ಭಯಮೇವ ಚ ॥ ಶೋಕೋಪಿ ತಾವನ್ನಾನ್ಯತ್ರ ಕದಾಚಿದ್ಬ್ರಹ್ಮಣೋ ಭವೇತ್ ॥ ಅಪಾಶ್ರಿತಃ ಕಂಜಮಲೋಕತಂತ್ರಂ ನಾತ್ಮಾನಮುದ್ಧಾ ವಿಪದಾದಿದೇವಃ ॥ ತಮುತ್ತಂ ವ್ಯಾದದಾದಾಸ್ಯಂ ತದಾಸೌ ವಿರುರಾವ ಹ॥ ಶರೀರಂ ಮಮ ದೇವೇಶ ವ್ಯಾಧಿಭಿಃ ಪರಿಪೀಡಿತ ಮಿತ್ಯಾದೀನಿ ಪುರಾಣಾನಿ ॥ ಭಾನುಮಂಡಲೇತಿ ॥ ಮಧ್ಯದಿನೇ ಸೂರ್ಯ ಕ್ಷೋಭವತ್ ಕ್ಷೋಭಮಾತ್ರಕಮಿತಿ ತತ್ತ್ವ ಪ್ರಕಾಶಿಕಾಶರ್ಕರೋಕ್ತಿಃ ॥ ಕ್ಷೋಭಃ ಚಲನಂ ಕ್ಷುಭಸಂಚಲನ ಇತಿ ಧಾತುಪಾಠಾತ್॥ ಶ್ರೀನಿವಾಸೇತಿ॥ "ಮಮಾಜ್ಞಾನಂ ದೃಶ್ಯತೇ ಯತ್ರ ಕುತ್ರ ದೈತ್ಯಾದೀನಾಂ ಮೋಹನಾರ್ಥಂ ಸದೈವ ॥ ತೇನ ಪ್ರೀತಿರ್ದೇವ ದೇವಸ್ಯ ವಿಷ್ಣೋರ್ಭವಿಷ್ಯತೀತ್ಯೇವ ವಿನಿಶ್ಚಿತಾತ್ಮಾ ॥ ಅಹಂ ಪ್ರಶ್ನಾದೀನ್ ಹ್ಯಜ್ಞವತ್ಸರ್ವದೈವ ಕರಿಷ್ಯೇಹಂ ಮೋಹನಾಯಾಧಮಾನಾಂ ॥ ಸೂರ್ಯೋದಯೇ ನಾಸ್ತಿ ತಥಾ ತಮಶ್ಚ ತಥಾ ಜ್ಞಾನಂ ನಾಸ್ತಿ ನಾಸ್ತ್ಯೇವ ದೇವೇತಿ ಗಾರುಡೇ ॥ ೩೫ ॥

**ವಿಶೇಷ ಸೂಚನೆ:— ಚತುರ್ವಾರ ಅಜ್ಞಾನ ವಿವರ**. ೧. ರಮಾ ದೇವಿಯರಿಂದ ಅಭಿಮನ್ಯಮಾನವಾದ ಅವ್ಯಾಕೃತಾಕಾಶ, ಕಾಲಪ್ರವಾಹ ಇದು ಚನ್ನಾಗಿ ತಿಳಿಯದಿರುವದು ಒಂದು. ೨. ಪ್ರಕೃತಿ ಪರಮಾಣು ರಮಾದೇವಿಯರಿಂದ ತಿಳಿದಷ್ಟು ತಿಳಿಯದೆ ಇರೋದು ಒಂದು. ೩. ರಮಾ ದೇವಿಯವರ ಜ್ಞಾನಾನಂದ ಮಾಹಾತ್ಮ್ಯ ಆದ್ಯಂತ ತೋರದಿರುವದು ಒಂದು. ೪. ಪರಮಾತ್ಮನ ಗುಣಸಾಕಲ್ಯ ತಿಳಿಯದಿರೋಣ ಒಂದು **ಈ ನಾಲ್ಕು ಅಜ್ಞಾನ.**

ಪರಮಾತ್ಮನ ಭಯ ಒಂದು ರಮಾದೇವಿಯರ ಭಯ ಒಂದು **ಈ ಎರಡು** ಭಯ-ಈ ಅಜ್ಞಾನ ಭಯಗಳು ಬ್ರಹ್ಮದೇವರಿಗೆ ಸಹಜವಾವದ್ದೇ ಸರಿ. ಇದು ಆದರೂ ಶ್ರೀ ಹರಿಯ ಪ್ರೀತ್ಯರ್ಥವಾಗೇವೇ ಹೊರ್ತು ಅಜ್ಞಾನ ಭಯ ಅವರಿಗೆಂದೆಂದಿಗೂ ಇಲ್ಲವೆಂದು ನಿಶ್ಚಯವಾಗಿ ತಿಳಿಯಬೇಕು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ನನು ಪ್ರಾಕೃತವತ್ ಅಜ್ಞಾನ ಭಯ ಶೋಕಾದ್ಯಾಃ ಅಪಿ ಬ್ರಹ್ಮಣಃ ಶ್ರೂಯಂತೇ "ಅಜ್ಞಾನಂ ತು ಚತುರ್ವಾರಂ" ಇತಿ ಪುರಾಣಾದೌ ॥ ಅತಃ ಕಥಂ ಋಜುತಾ ? ಕಥಂತಮಾಂ ತತ್ಸಂಗತಾ ಇತ್ಯತ ಆಹ:— "ಜ್ಞಾನ" ಇತಿ ॥ ಪ್ರಲಯೇಽಪ್ಯವಿಲೋಪೇ ಸೃತೌ ಕಥಂ ತತ್ಸಂಭವಃ ? "ವಾಯೋ ರ್ಮಮ ಪ್ರಲಯೇ ಸೃಷ್ಟಿಕಾಲೇ ತಥಾ ಗಾಯತ್ರ್ಯಾಃ ನಾಸ್ತಿ ನಾಸ್ತ್ಯೇವ ಮೋಹಃ" ॥ ನನು ತದಾ ಭಯಜನಕಾಭಾವಾತ್, ತಥಾತ್ವೇಽಪಿ ಸೃತೌ ಹರಿಭಕ್ಷಣ, ಕೈಟಭಾದ್ಯುಪದ್ರವಾದೇಃ ಸತ್ವಾತ್ ಯುಜ್ಯತೇ ಭಯಾದಿಕ ಮಿತಿ ಚೇತ್ ನ ॥ ಅಸುರ ಮೋಹನಾರ್ಥಂ ತಥಾ ದರ್ಶನಾದ್ಯುಪ ಪತ್ತೇಃ ॥ ನಿರ್ನಿಮಿತ್ತಂ ಕಿಮರ್ಥಂ ತೇಷಾಂ ಮೋಹನಂ ? ಇತಿ ಚೇತ್ ಸ್ವಾಮಿಪ್ರೀತ್ಯರ್ಥಂ ಇತಿ ವದಾಮಃ ॥ "ಮಮಾಜ್ಞಾನಂ ದೃಶ್ಯತೇ ಯತ್ರ ಕುತ್ರ ದೈತ್ಯಾನಾಂ ಮೋಹನಾರ್ಥಂ ಸದೈವ ॥ ತೇನ ಪ್ರೀತಿಃ ದೇವ ದೇವಸ್ಯ ವಿಷ್ಣೋಃ ಭವಿಷ್ಯತೀತ್ಯೇವ ವಿನಿಶ್ಚಿತಾತ್ಮಾ" ॥ ಇತಿ ವಚ ನಾತ್ ॥ ಅಜ್ಞಾನಂ ಶೋಕಾದ್ಯುಪಲಕ್ಷಣಮ್ ॥ ನನ್ವಿದಮೋಪ ಮೋಹ

ಕಂ ಕಿಂ ನ ಸ್ಯಾತ್, ಏವಂ ಚ ಫಲಿತಮಸ್ಮನ್ಮನೋರಥದ್ರುಮೇಣ ॥
ಇತಿ ಚೇತ್ ನೈವಮ್ ॥ ಪರಮ ಸಾತ್ವಿಕತ್ವೇನ ಗಣಿತೇನೈವ ಮುಕ್ತಿ
ರಿತಿ ಪರಿಹಾರೇ ಸ್ಥಿತೇಽಪಿ ಬ್ರೂಮಃ ಸಮಾಧ್ಯಂತರಮ್ ॥ ಏಕಾದಶ
ಭಾಗವತೇ ಬ್ರಹ್ಮಣಃ ಸನಕಾದಿ ಪ್ರಶ್ನಜ್ಞಾನ ಪ್ರಕರಣೇ ಮೋಹಮುಪ
ಲಕ್ಷಣೀಕೃತ್ಯ ಆಚಾರ್ಯೈಃ ಪ್ರಮಾಣಜ್ಞಾನಾದರಿದ್ರೈಃ ರೀತ್ಯಂತರಂ
ಉಕ್ತಂ ಮಾನಮುದಾಹರದ್ಭಿಃ ॥ "ಭ್ರಮತೀವ ಮನಃ ಕ್ವಾಪಿ ಬ್ರಹ್ಮಣೋ
ವಿಷ್ಣುಮಾಯಯಾ ॥ ಸರ್ವಜ್ಞಸ್ಯಾಪಿ ತತ್ರಾತ್ಮಾ ವಕ್ತುಮಿಚ್ಛೇಜ್ಜನಾ
ರ್ದನಃ ॥ ತತ್ ಜ್ಞಾತ್ವಾ ಚಿಂತಿತಂ ತಸ್ಯ ಚಿಂತಯತ್ಯಮುಮೇವ ತು ॥
ನ ಸ್ವಯಂ ಚಿಂತಯತ್ಯರ್ಥಂ ಸ ಹಿ ತದ್ಭಾವವಿತ್ ಸದಾ ॥ ಅನ್ಯೇತ್ವಜ್ಞಾನ
ಸಂಯುಕ್ತಾಃ ಮೋಹಮೀಯುರ್ಯಥಾ ಕ್ರಮಮ್ ॥ ತಸ್ಯ ಮಧ್ಯಂದಿನೇ
ಸೂರ್ಯೇ ಕ್ಷೋಭವತ್ ಕ್ಷೋಭಮಾತ್ರಕಂ ॥ ನೈವಾಜ್ಞಾನಂ ಯಥಾ
ಸೂರ್ಯೇ ತಮಶ್ಚಾಪಿ ಕಥಂ ಚನ ॥ ಇತಿ ಭಾವವಿವೇಕ" ಇತಿ ॥
"ಪ್ರಶ್ನಾದೀನಜ್ಞವತ್ ಕರಣಂ ಮೋಹನಾಯಾಧಮನಾಮ್" ಇತ್ಯುಕ್ತೇಃ
ಪೂರ್ವಗತಿಮೇವಾಶ್ನುವತೇ ॥ ಶ್ರವಣಮಪ್ಯೇವಂ ಹರೇಃ ಪ್ರೀತ್ಯರ್ಥಂ,
ಶಿಕ್ಷಯಾರ್ಥಂ ಸತಾಂ ಹೀತಿ ಪ್ರಯೋಜನತ್ರಯವತ್ ॥ ನನು ಮೂಲ
ರೂಪಸ್ಯೈವಮಪ್ಯವತಾರೇ ಅಭಿದಧತಿ ಜ್ಞಾನಸ್ಯಾಪರೋಕ್ಷಸ್ಯ ವರ್ಜ
ನಮ್ ॥ ವಚನಾನಿ "ಬ್ರಹ್ಮಣಸ್ತ್ವಂಶರೂಪೇಷು ಭಾರತ್ಯಾಃ ಜ್ಞಾನವರ್ಜ
ನಮ್ ॥ ಅವತಾರೇ ತು ಭಾರತ್ಯಾಃ ಕದಾಚಿತ್ ಜ್ಞಾನವರ್ಜನಮ್ ॥
ಅಪರೋಕ್ಷತಿರೋಭಾವಃ" ಇತ್ಯಾದೀನಿ, "ಅತೋ ಗ್ರಾಯತ್ರೀವತ್ ಭಾರ
ತೀಮ್" ॥ ಇತ್ಯಾದೀನ್ಯಪಿ ಮೂಲರೂಪಪರಾಣೀತಿ ವಕ್ತುಮುಚಿತಮಿತಿ
ಚೇತ್ ನ ॥ "ತದೀಶ್ವರೇಚ್ಛಯೈವೈಕ್ಷತ್ ॥ ಯದೀಷತ್ತನ್ನಾಸ್ತ್ಯೇವೇತಿ
ವಾಚ್ಯಮ್ ॥ "ತಾವನ್ಮಾತ್ರೇಣ ಚಾಜ್ಞಾನಂ ತಸ್ಯ ನೈವ ಹಿ ಚಿಂತ
ಯೇತ್ ॥ ಭಾರತ್ಯಾಸ್ತು ಯದಾ ನಾಸ್ತಿ ಸರಸ್ವತ್ಯಾಸ್ತು ಕಿಂ ಪುನಃ, ॥
ಇತ್ಯಾದಿನಾ ತಥಾಽವಗಮಾತ್ ಇತಿ ಯತ್ಕಿಂಚಿದೇತತ್ ॥ ೩೫ ॥

## ಕನ್ನಡಾರ್ಥ

ಪ್ರಾಕೃತ ಪುರುಷರಿಗೆ ಇರುವಂತೆ ಬ್ರಹ್ಮದೇವರಿಗೆ ಅಜ್ಞಾನ ಭಯ

ಶೋಕಗಳಿರುವವೆಂದು "ಅಜ್ಞಾನಂ ತು ಚತುರ್ವಾರಂ" ಈ ಮುಂತಾದ ಶ್ರುತಿಗಳು ಹೇಳುತ್ತವೆ. ಆದುದರಿಂದ ಋಜುತ್ವವು ಹೇಗೆ? ಅದು ಸಂಗತವಾಗುವುದು ಹೇಗೆ? ಈ ಆಕ್ಷೇಪವನ್ನು ಪರಿಹರಿಸುವುದಕ್ಕೋಸುಗ "ಜ್ಞಾನರಹಿತ" ಈ ಪದ್ಯವನ್ನು ಹೇಳಿರುತ್ತಾರೆ.

"ಪ್ರಳಯದಲ್ಲಿಯೂ ಸಹ ಅಜ್ಞಾನ ಮುಂತಾದವುಗಳಿಲ್ಲದಿರುವಾಗ ಸೃಷ್ಟಿಯಲ್ಲಿ ಹೇಗೆ ಸಂಭವಿಸುವವು. ನನಗೂ ವಾಯುವಿಗೂ ಗಾಯತ್ರೀ (ಸರಸ್ವತೀ) ದೇವಿಗೂ ಪ್ರಳಯ ಸೃಷ್ಟಿ ಕಾಲಗಳಲ್ಲಿ ಮೋಹವಿರುವುದೇ ಇಲ್ಲ." ಹೀಗೆ ಪ್ರಮಾಣವಿರುತ್ತದೆ.

ಇನ್ನು ಪ್ರಳಯದಲ್ಲಿ ಭಯಜನಕವಾವುದೂ ಇಲ್ಲವಾದುದರಿಂದ ಭಯ ಮುಂತಾದುವುಗಳು ಇರಲಿಕ್ಕಿಲ್ಲ. ಆದರೆ ಸೃಷ್ಟಿಯಾದ ಅನಂತರ ಹರಿಯು "ತನ್ನನ್ನು ನುಂಗುವುದು-ಕೈಟಭಾದಿಗಳ ಉಪದ್ರವ," ಈ ಮುಂತಾದ ಭಯಗಳಿರುತ್ತವೆ. ಆದುದರಿಂದ ಸಂಸಾರಾವಸ್ಥೆಯಲ್ಲಿ ಭಯಾದಿಗಳಿರುವುದು ಯುಕ್ತವಾಗಬಹುದು. ಹೀಗೆ ಶಂಕಿಸಬಾರದು. ಯಾಕೆಂದರೆ ಅಸುರರನ್ನು ಮೋಹಿಸುವುದಕ್ಕೂ ಸಹ ಭಯಾದಿಗಳನ್ನು ತೋರಿಸುವುದರಿಂದ ಆ ವೃತ್ತಾಂತಗಳನ್ನು ಹೊಂದಿಸಬಹುದು.

ನಿಮಿತ್ತವಿಲ್ಲದೇ ಅವರನ್ನು ಮೋಹಿಸುವುದೇಕೆ? ಹೀಗೆ ಶಂಕಿಸಬಹುದು. ಆದರೆ-"ಅವರನ್ನು ಮೋಹಿಸುವುದು ಸ್ವಾಮಿ ಶ್ರೀ ಹರಿಯ ಪ್ರೀತಿಗೆ ಕಾರಣವಾಗುವುದು." ಹೀಗೆ ಉತ್ತರವನ್ನು ಹೇಳುತ್ತೇವೆ.

"ಎಲ್ಲಿಯಾದರೂ ನನಗೆ ಅಜ್ಞಾನವು ಕಂಡು ತಿಳಿದುಬಂದುದಾದರೆ ಅದು ದೈತ್ಯರನ್ನು ಮೋಹಿಸುವುದಕ್ಕೋಸ್ಕರವೆಂದೇ ತಿಳಿಯಬೇಕು." ಹಾಗೆ ದೈತ್ಯ ಮೋಹನದಿಂದ ಶ್ರೀ ಹರಿಯು ಪ್ರೀತಿಯಾಗುವುದೆಂಬ ನಿಶ್ಚಯದಿಂದಲೇ ಅವರನ್ನು ಮೋಹಿಸುವುದು;" ಹೀಗೆ ವಚನಗಳಿರುತ್ತವೆ. "ಅಜ್ಞಾನಂ" ಎಂಬ ಮಾತಿನಿಂದ ಶೋಕ ಮುಂತಾದುವುಗಳನ್ನೂ ಸಂಗ್ರಹಿಸಬೇಕು

ಇನ್ನು ಇದೇ ಏಕೆ ಮೋಹಕವೆನಿಸಬಾರದು ? ಹೀಗಾದಲ್ಲಿ ನಮ್ಮ ಮನೋರಥವು ಫಲಿತವಾಗುತ್ತದೆ. ಎಂದು ಶಂಕಿಸಬಾರದು. ಯಾಕೆಂದರೆ ಪರಮಸಾತ್ವಿಕರಾದುದರಿಂದ ಅವರ ಅಜ್ಞಾನಪ್ರದರ್ಶನವು ದೈತ್ಯಮೋಹಕ ವೆಂದು ಹೇಳುವುದು ಸರಿ. ಹೀಗಿದ್ದರೂ ಇನ್ನೂ ಒಂದು ಸಮಾಧಾನವನ್ನು ಭಾಗವತ ದಶಮಸ್ಕಂಧದ ತಾತ್ಪರ್ಯದಲ್ಲಿ ಹೇಳಿರುತ್ತಾರೆ. "ಪರಮಾ ತ್ಮನ ಇಚ್ಛೆಯಿಂದ ಒಮ್ಮೊಮ್ಮೆ ಬ್ರಹ್ಮದೇವರ ಮನಸ್ಸು ಭ್ರಮಿಸಿದಂತೆ ತೋರುತ್ತದೆ. ಬ್ರಹ್ಮದೇವರು ಸರ್ವಜ್ಞರು. ಆದರೂ ಪರಮಾತ್ಮನ ಇಚ್ಛೆಯನ್ನು ತಿಳಿದು, ಅದರಂತೆ ಬ್ರಹ್ಮದೇವರು ಪರಮಾತ್ಮನನ್ನು ಚಿಂತಿ ಸುತ್ತಾರೆ." ಬ್ರಹ್ಮದೇವರು ಪರಮಾತ್ಮನ ಭಾವವನ್ನು ಸದಾ ತಿಳಿದಿರು ತ್ತಾರೆ. ಆದುದರಿಂದ ಪರಮಾತ್ಮನ ಚಿತ್ತದಂತೆ ಅನುವರ್ತಿಸುತ್ತಾರೆ. ಮಿಕ್ಕವರು ಅಜ್ಞಾನ ಸಂಬಂಧವುಳ್ಳವರು. ಬ್ರಹ್ಮದೇವರ ಕೆಳಗಿನವರಾದ ರುದ್ರಾದಿದೇವತೆಗಳು ಕ್ರಮದಿಂದ ಮೋಹವನ್ನು ಹೊಂದುತ್ತಾರೆ. "ಹೀಗೆ ಭಾವವಿವೇಕ ಗ್ರಂಥದಲ್ಲಿ ಹೇಳಲಾಗಿದೆ.'' ಎಂದು ಸನಕಾದಿಗಳ ಪ್ರಶ್ನೆಗೆ ಸಂಶಯವನ್ನು ತಿಳಿಸುವ ಸಂದರ್ಭದಲ್ಲಿ ಹೇಳಿರುತ್ತಾರೆ. ಬ್ರಹ್ಮ ದೇವನ ಜ್ಞಾನವು ಮಧ್ಯಾಹ್ನ ಸೂರ್ಯನಂತೆ ಇರುವುದು; ಸ್ವಲ್ಪ ಅಜ್ಞಾ ನವೂ ಯಾವ ರೀತಿಯಲ್ಲಿಯೂ ಮೋಹವಿಲ್ಲ.'' ಎಂದೂ ಅದರಲ್ಲಿ ನಿರೂಪಿತವಾಗಿದೆ.

ಅದರಂತೆ ಅಜ್ಞರಂತೆ ಪ್ರಶ್ನಿಸುವುದು. ಈ ಮುಂತಾದುವುಗಳೂ ಸಹ ಅಧಮಜನರ (ತಾಮಸರ) ಮೋಹನಕ್ಕಾಗಿಯೇ ! ಎಂದು ಹೇಳಿರು ವುದರಿಂದ ಹಿಂದಿನ ಗತಿಯನ್ನೇ ತಿಳಿಯಬೇಕು. ಅದರಂತೆ ಶ್ರವಣವು ಹರಿಯ ಪ್ರೀತಿಗಾಗಿ; ಸಜ್ಜನರ ನಿಶ್ಚಯಕ್ಕಾಗಿ" ಹೀಗೆ ಮೂರು ಪ್ರಯೋ ಜನಗಳನ್ನು ತಿಳಿಯಬೇಕು.

ಇನ್ನು "ಮೂಲ ರೂಪದಲ್ಲಿ ಅಜ್ಞಾನಗಳಿಲ್ಲದಿರಲಿ. ಅವತಾರ ಗಳಲ್ಲಿ ಮಾತ್ರ ಅವರ ಅಪರೋಕ್ಷ ಜ್ಞಾನವು ತಿರೋಹಿತವಾಗುತ್ತದೆಂದು ವಚನಗಳು ಹೇಳುತ್ತವೆ.—"ಬ್ರಹ್ಮದೇವರಿಗೆ ಅಂಶರೂಪಗಳಲ್ಲಿ, ಭಾರತೀ ದೇವಿಗೂ ಜ್ಞಾನವಿರುವುದಿಲ್ಲ; ಅವತಾರಗಳಲ್ಲಿಯೂ ಸಹ ಭಾರತೀದೇವಿಗೆ

ಕೆಲ ಸಂದರ್ಭಗಳಲ್ಲಿ ಜ್ಞಾನವು ತಿರೋಹಿತವಾಗುವುದು." ಹೀಗೆ ವಚನಗಳಿದ್ದುದರಿಂದ ಗಾಯತ್ರಿಯಂತೆ ಭಾರತೀದೇವಿಗೆ ಜ್ಞಾನಾದಿಗಳಿರುವವೆಂಬ ಮಾತನ್ನೂ ಸಹ ಮೂಲ ರೂಪಪರವೆಂದು ತಿಳಿಯಬೇಕೆಂಬುದು" ಸಹ ಕೂಡದು. ಹೀಗೆ ಸಂಶಯವನ್ನು ತರಬಾರದು. ಹೀಗೆ ಅಜ್ಞಾನವನ್ನು ಪ್ರದರ್ಶಿಸುವುದು ಈಶ್ವರನ ಇಚ್ಛೆಯನ್ನು ತಿಳಿದು ಅವರಂತೆ ನಟಿಸುವುದರಿಂದ; ಹೀಗೆಯೇ ಸಮಾಧಾನವನ್ನು ತಿಳಿಯಬೇಕು. ಯಾಕಂದರೆ ಅವರಿಗೆ ಯಾವಾಗಲೂ ಸ್ವಲ್ಪವೂ ಸಂಶಯ ಜ್ಞಾನಗಳಿರುವುದಿಲ್ಲ.- "ಭಾರತಿಯಲ್ಲಿ ಸ್ವಲ್ಪ ಅಜ್ಞಾನವನ್ನೂ ಸಹ ಚಿಂತಿಸತಕ್ಕದ್ದಲ್ಲ-ಭಾವಿಸತಕ್ಕದಲ್ಲ. ಭಾರತೀ ದೇವಿಯಲ್ಲಿಯೇ ಅದರ ಶಂಕೆಯನ್ನು ಮಾಡಬಾರದೆಂದಿರುವಾಗ ಸರಸ್ವತಿಯಲ್ಲಿ ಏನು ಹೇಳುವುದು ?" ಹೀಗಿರುವ ನಿರವಕಾಶ ಪ್ರಮಾಣಗಳಿಂದ ಬ್ರಹ್ಮಾ-ವಾಯು-ಸರಸ್ವತೀ-ಭಾರತೀ-ಇವರಿಗೆ ಅಜ್ಞಾನ ಮುಂತಾದವುಗಳಲ್ಲಿ ಇರುವುದೇ ಇಲ್ಲ. ಪುರಾಣ ಸಂದರ್ಭಗಳಲ್ಲಿ ಹಾಗೆ ಸಂಶಯಾದಿಗಳ ಉಲ್ಲೇಖವು ಬಂದುದಾದರೆ ಅವುಗಳನ್ನೆಲ್ಲ ಅವರು ದೈತ್ಯರ ಮೋಹನಕ್ಕಾಗಿ ತೋರಿಸಿದುದು;'' ಎಂದು ಸಮಾಧಾನದಿಂದ ಕಾಣಬೇಕು. ॥ ೩೫ ॥

**ಅವತರಣಿಕಾ:**—ಬ್ರಹ್ಮದೇವರು ಸರ್ವ ಜೀವೋತ್ತಮರು. ಜ್ಞಾನೆ ವಿರಾಗೇ ಹರಿಭಕ್ತಿಭಾವೇ ಧೃತಿಸ್ಥಿತಿಪ್ರಾಣಬಲೇಷು ಯೋಗೇ ಇತ್ಯಾದಿಗಳಲ್ಲಿ ಉತ್ತಮರೂ, ಶ್ರೀ ಹರಿಯ ಗುಣಾನಂತ್ಯಗಳನ್ನು ತಿಳಿದುಪಾಸನೆಗೈದು ಅನಂತ ಸೂರ್ಯಕೋಟಿ ಪ್ರಕಾಶ ಬಿಂಬನನ್ನು ಕಾಣುತ್ತಾರೆಂದ ಹೇಳುತ್ತಾರೆ.

**ಕಮಲಸಂಭವ ಸರ್ವರೊಳಗು ।**
**ತ್ತಮನೆನಿಸುವನು ಎಲ್ಲ ಕಾಲದಿ ।**
**ವಿಮಲ ಭಕ್ತಿ ಜ್ಞಾನ ವೈರಾಗ್ಯಾದಿ ಗುಣದಿಂದ ॥**
**ಸಮಭ್ಯಧಿಕ ವಿವರ್ಜಿತನ ಗುಣ ।**
**ರಮೆಯು ಮುಖದಿಂದರಿತು ನಿತ್ಯದಿ ।**
**ದ್ಯುಮಣಿ ಕೋಟಿಗಳಂತೆ ಕಾಂಬನು ಬಿಂಬರೂಪವನು ॥೩೬॥**

**ಪದ್ಯಾರ್ಥ**:— ಕಮಲಸಂಭವ=ನಾಭಿ ಕಮಲದಿಂದ ಪುಟ್ಟಿದ ಬ್ರಹ್ಮದೇವರು, ಸರ್ವರೊಳಗುತ್ತಮನೆನಿಸುವನು=ಸಕಲ ಜೀವಕೋಟಿಗಳಲ್ಲಿ ಶ್ರೇಷ್ಠನೆನಿಸುತ್ತಾನೆ. ಯಾತರಿಂದ ಎಂದರೆ,ಎಲ್ಲ ಕಾಲದಿ=ನಿರಂತರದಲ್ಲಿ, ವಿಮಲ=ಸ್ವಚ್ಛ ನಿರ್ದೋಷವಾದ, ಭಕ್ತಿ ಜ್ಞಾನ ವೈರಾಗ್ಯಾದಿ ಗುಣದಿಂದ=ಪರಮಾತ್ಮನಲ್ಲಿ ಹೆಚ್ಚಿನ ಸ್ನೇಹ, ಉತ್ತಮ ಜ್ಞಾನ, ಇತರ ವಿಷಯ ವಿರಕ್ತನಾಗಿ ಪರಮಾತ್ಮನ ಇಚ್ಛೆಯಂತೆ ವರ್ತಿಸುವದೆ ವೈರಾಗ್ಯ ಮೊದಲಾದ ಶ್ರೇಷ್ಠಗುಣಗಳಿಂದ ಸರ್ವರೊಳಗೆ ಶ್ರೇಷ್ಠನೆನಿಸುತ್ತಾನೆ. ಆದರೂ ಸಮಭ್ಯಧಿಕವರ್ಜಿತನ=ಸರಿ ಸಮಾನಿಕರು ಮತ್ತು ಹೆಚ್ಚಿನವರಾರಿಲ್ಲದ ಶ್ರೀಹರಿಯ, ಗುಣ=ಜ್ಞಾನಾನಂದಾದಿ ಅನಂತ ಗುಣಗಳನ್ನು, ರಮೆಯ ಮುಖದಿಂದರಿತು ನಿತ್ಯದಿ=ನಿರಂತರದಲ್ಲಿ ಸ್ವಮಾತೆಯಾದ ಶ್ರೀ ಲಕ್ಷ್ಮೀದೇವಿಯರಿಂದ ಉಪದೇಶಿಸಿಕೊಂಡು ತಿಳಿಯುತ್ತಾ, ದ್ಯುಮಣಿ ಕೋಟಿಗಳಂತೆ=ಆಕಾಶಮಣಿ ಸೂರ್ಯ,ಕೋಟಿ ಶಬ್ದ ವಾಚ್ಯ ಅನಂತಸೂರ್ಯರ ಪ್ರಕಾಶದಂತೆ ಸ್ವಹೃದಿಸ್ಥ ಬಿಂಬ ರೂಪವನ್ನು ಶ್ರೀಹರಿಯ ರೂಪವನ್ನು ಸದಾ ಕಾಂಬುವರು.

**ಭಾವಸೂಚನ**:— ॥ ಕಮಲೇತಿ ॥ ದ್ಯುಮಣೀತಿ ॥ ಸೌರಿ ಪ್ರಕಾಶೇ ಯಥೈವ ದರ್ಶನಮಿತಿ ಗಾರುಡೇ ॥ ೩೬ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕಮಲ" ಇತಿ ॥ "ಸಮ" ಇತಿ ॥ ವೈದಿಕಾದ್ವಯ ಪದಾರ್ಥ ಕಥನಮ್ ॥ ಕೋಟಿಪದಂ ಅನಂತಪರಮ್ ॥ ಅನ್ಯಥಾ ಕರ್ಮದೇವ ಸಾಮ್ಯಾಪಾತಃ ॥ ಉಕ್ತಂ ಚ–"ಬ್ರಹ್ಮಾದೀನಾಂ ದೃಶ್ಯತೇ ಶ್ರೀನಿವಾಸಃ ಹ್ಯನಂತಸೂರ್ಯಾಧಿಕ ಕಾಂತಿವತ್" ॥ ಇತಿ ॥ ೩೬ ॥

### ಕನ್ನಡಾರ್ಥ

"ಸಮಭ್ಯಧಿಕವಿವರ್ಜಿತ" ಈ ಪದವು ವೇದದಲ್ಲಿರುವ "ಅದ್ವಯಮ್" ಈ ಪದದ ಅರ್ಥವನ್ನು ವಿವರಿಸುವುದು. "ಕೋಟಿ" ಈ ಪದಕ್ಕೆ "ಅನಂತ"ವೆಂದು ಅರ್ಥ. ಇಲ್ಲದಿದ್ದರೆ ಕರ್ಮದೇವತೆಗಳಿಂದ ಸಾಮ್ಯವು

ಬರುತ್ತದೆ-"ಬ್ರಹ್ಮಾದಿಗಳು ಪರಮಾತ್ಮನನ್ನು ಅನಂತ ಸೂರ್ಯರಿಗಿಂತ ಅಧಿಕ ಕಾಂತಿವಂತನೆಂದು ನೋಡುತ್ತಾರೆ." ಹೀಗೆ ಪ್ರಮಾಣ ಗಳಿರುವುವು ॥ ೩೬ ॥

**ಅವತರಣಿಕಾ:**—ಬ್ರಹ್ಮವಾಯುಗಳಿಬ್ಬರೂ ಸಮಜ್ಞಾನ ಭಕ್ತ್ಯಾದಿ ಗುಣವುಳ್ಳವರು ಆದರೂ, ಬ್ರಹ್ಮದೇವರು ಪದ ಪ್ರಯುಕ್ತ ಕಿಂಚಿತ್ ಅಧಿ ಕರು. ಇದರಂತೆ ವಾಣಿ ಭಾರತಿಯರಲ್ಲಿ ತಿಳಿಯಬೇಕೆಂದು ಹೇಳುತ್ತಾರೆ.

**ಜ್ಞಾನ ಭಕ್ತ್ಯಾದ್ಯಖಿಳ ಗುಣ ಚತು ॥**
**ರಾನನೊಳಗಿಪ್ಪಂತೆ ಮುಖ್ಯ ।**
**ಪ್ರಾಣನಲಿ ಚಿಂತಿಪುದು ಯತ್ಕಿಂಚಿತ್ಕೊರತೆಯಾಗಿ ॥**
**ನ್ಯೂ(ನೂ)ನ ಋಜುಗಣ ಜೀವರಲ್ಲಿ ಕ್ರ ।**
**ಮೇಣ ವೃದ್ಧಿ ಜ್ಞಾನ ಭಕ್ತಿ ಸ ।**
**ಮಾನ ಭಾರತಿ ವಾಣಿಗಳಲಿ ಪದ ಪ್ರಮುಕ್ತಧಿಕ ॥೩೭ ॥**

**ಪದ್ಯಾರ್ಥ:**- ಜ್ಞಾನ ಭಕ್ತ್ಯಾದ್ಯಖಿಳಗುಣ=ಜ್ಞಾನ, ಭಕ್ತಿ,ವಿರಕ್ತಿ ಮೊದಲಾದ ಎಲ್ಲ ಗುಣಗಳು, ಚತುರಾನನನೊಳಗಿಪ್ಪಂತೆ=ಚತುರ್ಮುಖ ಬ್ರಹ್ಮದೇವರಲ್ಲಿ ಇದ್ದಂತೆ ಮುಖ್ಯ ಪ್ರಾಣನಲಿ ಚಿಂತಿಪದು=ಮುಖ್ಯ ವಾಯುದೇವರಲ್ಲಿವೆ ಎಂದು ತಿಳಿಯಬೇಕು, ಯತ್ಕಿಂಚಿತ್ಕೊರತೆಯಾಗಿ, ಬ್ರಹ್ಮಪದ ವಾಯುಪದಕ್ಕೆ ಮಾತ್ರ ಕಿಂಚಿತ್ ಸ್ವಲ್ಪ ಕಡಿಮೆ, ಬಿಂಬ ಪ್ರಕಾಶ ದರ್ಶನ ಮಾತ್ರಬ್ರಹ್ಮದೇವರಲ್ಲಿ ಹೆಚ್ಚು. ಇದರಂತೆ ನ್ಯೂನ ಋಜು ಗಣ ಜೀವರಲ್ಲಿ, ಕ್ರಮೇಣ ವೃದ್ಧಿ=ಋಜುಗಳಲ್ಲಿ ಮಾತ್ರ, ಬಿಂಬದರ್ಶನ ಸಾಧನ ಕಲ್ಪ ಪ್ರಮಾಣದಿಂದ ಹೆಚ್ಚಿಗೆ ಕಾಣಿಸುವದು, ಸಮಾನ ಭಕ್ತಿ ಜ್ಞಾನ=ಭಕ್ತಿಜ್ಞಾನಾದಿಗಳು ಎಲ್ಲ ಋಜುಗಳಲ್ಲಿಯೂ ಸಮವಾಗಿರುವುವು. ಇದರಂತೆ ಸಮಾನ ಭಕ್ತಿ ಜ್ಞಾನಾದಿಗಳು ಭಾರತಿ, ವಾಣಿಗಳಲ್ಲಿ ವಾಯು ಪತ್ನಿ ಶ್ರದ್ಧಾ ಭಾರತಿ, ಬ್ರಹ್ಮ ಪತ್ನಿ ಶರಸ್ವತೀ ದೇವಿಯರಲ್ಲಿ ಚಿಂತಿಸ ಬೇಕು. ಆದರೆ ಬ್ರಹ್ಮ ವಾಯುಗಳಂತೆ ವಾಣಿ ಸರಸ್ವತಿದೇವಿ ಭಾರತೀದೇವಿ ಯರಿಗಿಂತಲೂ ಪದ ಪ್ರಯುಕ್ತ ಹೆಚ್ಚಿಗೆ ಎಂದು ಶಾಸ್ತ್ರನಿಯಮವಿದೆ.

**ಭಾವಸೂಚನ:**— ॥ ಜ್ಞಾನೇತಿ ॥ "ಯಾವಜ್ಞಾನಂ ಚಾಸ್ತಿ ವಾಸುದೇವ ತಾವಜ್ಞಾನಂ ವಾಯುದೇವಸ್ಯ ಚಾಸ್ತೀತಿ ॥ ಹರಿಂ ಪ್ರತಿ ಹಿರಣ್ಯಗರ್ಭೋಕ್ತಿಃ ॥ ಕ್ರಮೇಣೇತಿ ॥ ಕ್ರಮೇಣೈವ ಜ್ಞಾನಿನಾಂ ವೈ ಋಜೂನಾಂ । ಅಸ್ಪಷ್ಟರೂಪಾಜ್ಞಾನೇ ಗತೇ ವಿಶೇಷ ಇತಿ ವಚನಾತ್ ॥ ೩೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜ್ಞಾನ" ಇತಿ ॥ "ಕೊರತೆ"–"ವಾಯುತ್ವೇ ಕಿಂಚಿದೂನತಾ" ಇತ್ಯುಕ್ತೇಃ ॥ "ಕ್ರಮೇಣ" ಇತಿ "ವರ್ಧಮಾನಮಾಪುಕ್ತೇಃ" ಇತಿ ಮೂಲಮನುಕೃತಮ್ ॥ ಅಧಿಕ ಭಾವಪ್ರಧಾನಃ । ತತ್ವಂ ಜ್ಞೇಯಮ್ ಇತಿ ಯೋಜ್ಯಮ್ ॥ ೩೭ ॥

## ಕನ್ನಡಾರ್ಥ

ವಾಯುಪದವಿಯಲ್ಲಿ ಬ್ರಹ್ಮಪದವಿಯಲ್ಲಿರುವದಕ್ಕಿಂತ ಕಿಂಚಿತ್ ನ್ಯೂನತೆಯಿರುತ್ತದೆ. "ಕ್ರಮೇಣ" ಈ ಮಾತು-"ಮುಕ್ತಿಯವರೆಗೆ ಕ್ರಮದಿಂದ ಬೆಳೆಯುತ್ತಿರುವುದು; ಈ ಅಭಿಪ್ರಾಯದ ಮೂಲ ಟೀಕಾಚಾರ್ಯರ ವಚನವನ್ನು ಅನುಕರಿಸುತ್ತದೆ. "ಅಧಿಕ"–ಈ ಪದವು ಭಾವ ಪ್ರಧಾನ ನಿರ್ದೇಶನವಾಗಿದೆ. ಅಂದರೆ ಆಧಿಕ್ಯ-ಅಧಿಕತ್ವವೆಂದು ಅರ್ಥ. ಈ ಅರ್ಥದಿಂದ ಈ ಪದವನ್ನು ಯೋಜಿಸಬೇಕು. ॥ ೩೭ ॥

**ಅವತರಣಿಕಾ:**— ಈ ಪದ್ಯದಿಂದ ಬ್ರಹ್ಮ ವಾಯುಗಳು ಸರಸ್ವತೀ ಭಾರತೀದೇವಿಯ ಶ್ರೀಹರಿ ಬಿಂಬಮೂರ್ತಿ ದರ್ಶನದಲ್ಲಿ ಸ್ಪಷ್ಟಾ ಸ್ಪಷ್ಟತ್ವ ಹೇಳುತ್ತಾ, ಈ ನಾಲ್ವರಿಗೆ ಮಹಾ ಪ್ರಳಯ ಕಾಲದಲ್ಲಿಯೂ ಸಹ ಅಜ್ಞಾನಾದಿ ದೋಷಗಳಿಲ್ಲವೆಂದು ಹೇಳುತ್ತಾರೆ

**ಸೌರಿ ಸೂರ್ಯನ ತೆರದಿ ಬ್ರಹ್ಮ ಸ ।**
**ವೀರ ಗಾಯತ್ರೀ ಗಿರಗಳೊಳು (ಗಳಲಿ) ।**
**ತೋರುವುದು ಅಸ್ಪಷ್ಟ ರೂಪದಿ ಮುಕ್ತಿ ಪರಿಯಂತ ॥**

**ವಾರಿಜಾಸನ ವಾಯು ವಾಣೀ ।**
**ಭಾರತಿಗಳಿಗೆ ಮಹಾ ಪ್ರಳಯದಿ ।**
**ಬಾರದ ಜ್ಞಾನಾದಿ ದೋಷವು ಹರಿಕೃಪಾಬಲದಿ ॥ ೩೮ ॥**

(ಮೂಲದಲ್ಲಿ ಗಾರುಡ ಪ್ರಮಾಣ ಕೊಟ್ಟಿರುವರು. ಮುಂದೆ ಕೊಡುತ್ತದೆ.)

**ಪದ್ಯಾರ್ಥ:**— ಮುಕ್ತಿಪರಿಯಂತವಾಗಿ,=ಅಂದರೆ ಲಿಂಗಭಂಗವಾದ ನಂತರ ಶ್ರೀ ವಾಸುದೇವನ ಉದರ ಪ್ರವೇಶಗೈದಾನಂತರದಿ ಪುನಃ ಪೊರ ಮಟ್ಟು ಸ್ವರೂಪಾನಂದಾವಿರ್ಭಾವ ನಿಜ ಸ್ಥಾನವೈದುವ ಪರಿಯಂತ ಬ್ರಹ್ಮ=ಚತುರ್ಮುಖ ಬ್ರಹ್ಮದೇವರಿಗೆ, ಸಮೀರ=ವಾಯು ದೇವರಿಗೆ, ಮತ್ತು ಗಾಯತ್ರಿ= ಸರಸ್ವತೀದೇವಿಯರು, ಗಿರಗಳೊಳು=ವೇದ ಮಂತ್ರ ವಿಶಿಷ್ಟ ವೇದಾಭಿಮಾನಿಗಳಾದ ಭಾರತೀದೇವಿಯರಲ್ಲಿ, ಶ್ರೀ ಬಿಂಬ ರೂಪಿ ಹರಿಯು, ಬ್ರಹ್ಮ ಗಾಯತ್ರಿಗಳಲ್ಲಿ; ಸೂರ್ಯ ಪ್ರಕಾಶವಂತೆ ಸ್ಪಷ್ಟ ರೂಪದಿಂದ, ವಾಯು ಭಾರತಿಗಳಲ್ಲಿ, ಸೌರಿ, ಚಂದ್ರ ಪ್ರಕಾಶವತ್ ಸೂರ್ಯನಿಗಿಂತಲೂ ಕಿಂಚಿತ್ ಅಸ್ಪಷ್ಟ ಪ್ರಕಾಶದಿಂದ ತಮ್ಮ ಹೃದಯಸ್ಥ ಬಿಂಬನಂತೆ, ಇತರ ವೇದಾದಿ ನಿಯಾಮಕನಾದ ಬಿಂಬನನ್ನು,ತತ್ವಾಭಿಮಾನಿ ದೇವತೆಗಳ ಬಿಂಬನನ್ನು ಸಹ ನೋಡುವರು. ಈ ರಹಸ್ಯವನ್ನು ವ್ಯಾಸದಾಸ ಸಿದ್ಧಾಂತ ಕೌಮುದೀ ಕಾರರು ವಿವರಿಸಿದ್ದಾರೆ. ರಾಕಾಮಧ್ಯಗತಶ್ಚಂದ್ರಃ ಸೂರ್ಯ ಇತಿ ಸೂರ್ಯನೆಂಬ ಅಭಿಧಾನಕೋಶ. ವಾರಿಜಾಸನ =ಕಮ ಲಾಸನನಾದ ಬ್ರಹ್ಮ, ವಾಯು=ಪ್ರಾಣದೇವರು, ವಾಣೀ=ಸರಸ್ವತೀ ದೇವಿ ಯರಿಗೆ, ಭಾರತಿಗಳಿಗೆ=ಶ್ರೀ ವಾಯುಪತ್ನಿ ವಿಶೇಷವಾಗಿ ಭಕ್ತಿರತಿಯುಳ್ಳ ಭಾರತೀದೇವಿ ಈ ನಾಲ್ವರಿಗೆ, ಹರಿಕೃಪಾಬಲದಿ=ಶ್ರೀಬಿಂಬರೂಪನಾದ ಶ್ರೀಹರಿಯ ಅನುಗ್ರಹವಿಶೇಷದಿಂದ, ಮಹಾಪ್ರಳಯದಿ ಬಾರದ ಜ್ಞಾನಾದಿ ದೋಷವು = ಬ್ರಹ್ಮದೇವರ ೧೦೦ ವರುಷನಂತರ ಮಹಾಪ್ರಳಯವೆಂದರೆ ಸಮಸ್ತ ಜಗತ್ತೆಲ್ಲಾ ಜಲದಲ್ಲಿ ಮುಳುಗಿಹೋಗುವ ಸಮಯದಲ್ಲೂ ಸಹ, ಈ ನಾಲ್ವರಿಗೆ ಅಜ್ಞಾನ ಮಂತಾದುವು ಇಲ್ಲೇ ಇಲ್ಲ=ಮಹಾಪ್ರಳಯ

ದಲ್ಲೂ, ವಿಶೇಷಜ್ಞಾನದಿಂದ ಶ್ರೀಹರಿಯ ಲೀಲಾವ್ಯಾಪಾರ ನೋಡುತ,
ಶ್ರೀಹರಿಯ ಸ್ತೋತ್ರಗೈಯುತ್ತಲಿರುವರು.

**ಭಾವಸೂಚನ:**—ಸೌರೀತಿ ॥ ಶ್ರೀಹರಿ ॥ ಪ್ರಳಯೇತಿ ॥ಪ್ರಳಯೇಪಿ ಪ್ರತಿ ಭಾತ ಪರಾವರಾ ಇತಿ ರತ್ನಮಾಲಾಯಾಮ್ ॥ ಇರಗ ದೀಪ ॥ ತದುಕ್ತಂ॥ ದೀಪಪ್ರಕಾಶೇ ಚ ಯಥೈವ ದರ್ಶನಂ ತಥಾಜ್ಞಾನಂ ವಾಯು ದೇವಸ್ಯ ಚಾಸ್ತಿ॥ತಥಾಸ್ಪಷ್ಟತಾನ್ಯೂನತಾಹ್ಯಸ್ತಿ ವಾಯೋಃ ತಥಾಜ್ಞಾನಂ ನೈವ ಸಂಚಿಂತನೀಯಮಿತಿ ಗಾರುಡೇ॥ವಾಯೋರ್ಮಹಾಪ್ರಳಯೇ ಸೃಷ್ಟಿ ಕಾಲೇ ತಥಾ ಗಾಯತ್ರ್ಯಾ ನಾಸ್ತಿ ನಾಸ್ತ್ಯೇವ ಮೋಹಃ । ಗಾಯತ್ರೀ ವದ್ಭಾರತೀ ಜ್ಞೇಯಯಾ ॥ ೩೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸೌರಿ" ಇತಿ ॥ "ತೋರುವುದು" ಜ್ಞಾನಮ್ ॥ "ಸೌರಿ" ಇತ್ಯನೇನ "ಸೌರಿಪ್ರಕಾಶೇ ಚ ಯಥೈವ ದರ್ಶನಂ ತಥಾ ಮಮ ಜ್ಞಾನಗತೋ ವಿಶೇಷಃ॥" ಇತ್ಯಸ್ಯ (ಇತಿ) ಪ್ರತೀಕಂ ಧೃತಮ್ ॥ "ದೀಪಪ್ರಕಾಶೇ ಚ" ಇತ್ತ್ಯುಕ್ತ್ವಾ "ತಥಾಜ್ಞಾನಂ ವಾಯುದೇವಸ್ಯ" ಇತಿ ಮೂಲೇ ಪ್ರತೀಯತೇ॥ ನ ತದ್ಯುಕ್ತಮ್ ॥ ತೃಣಜೀವಸಾಮ್ಯಾಪತ್ತೇಃ ॥ ನ ಚ ವಾಚ್ಯಮ್ ದೀಪೋ ನೈಕೋ ವಿವಕ್ಷಿತಃ॥ ಅನಂತ ಇತ್ಯೇವ ॥ ಯದಿ ಚಂದ್ರಪ್ರಕಾಶಃ ಅರ್ಥಾತ್ ಲಭ್ಯತೇ ॥ ಸ ತು ನ ಸೋಪಾಧಿಕಃ ॥ ಸ್ವಸ್ಯೈವ ಅಪ್ರಕಾಶೇ ಪರಪ್ರಕಾಶತ್ವಾಸಂಗತೇಃ ॥ ಪೂರ್ಣಕಲಾವಾನೇವೇತ್ಯಾಗತಮ್ ॥ ಸ ಸೂರ್ಯ ಇತ್ಯುಚ್ಯತೇ ॥ ವಾಲ್ಮೀಕೀಯೇ ಚ–ರಾಮಾಜ್ಞಯಾ ಚ ಲತ ಯಾ ರವಿಜೇ ವಿಭಕ್ತೇ ತಚ್ಛೋಭಾ ಸೂರ್ಯೇಣ ನಿರ್ದಿಷ್ಟಾ "ವಿಪರೀತ ಇವಾಕಾಶೇ ಸೂರ್ಯೋ ನಕ್ಷತ್ರ ಮಾಲಯಾ ॥ ಇತಿ ॥ ವಿವೃತಂ ಚೈವ ಮೇವ ಅನ್ಯೈಃ॥"ವಿಪರೀತಂ ತು ಸುಶರ್ವರೀ, ರಾಕಾಮಧ್ಯಗತಃ ಚಂದ್ರಃ ಸೂರ್ಯಃ" ಇತ್ಯಭಿಧಾನಮುದಾಹರದ್ಭಿಃ ॥ ಅಸ್ಪಷ್ಟೇತಿ ॥ "ಮುಕ್ತಿ" ಇತಿ ಚ "ಏತಾದೃಶೀ ಜ್ಞಾನ ವ್ಯಕ್ತಿರ್ವಿಶೇಷಃ ವಾಯ್ವಾದೀನಾಂ ಮೋಕ್ಷ ಪರ್ಯಂತಮಸ್ತಿ ॥ ಇತ್ಯಸ್ಯ ವ್ಯಾಖ್ಯಾನಮ್ ॥ ೩೮ ॥

## ಕನ್ನಡಾರ್ಥ

"ತೋರುವುದು" ಈ ಶಬ್ದಕ್ಕೆ ಜ್ಞಾನವೆಂದು ಅರ್ಥ ತೋರಿದರೂ "ಸೌರಿ" ಈ ಪದವನ್ನು ಪ್ರಯೋಗಿಸಿದುದರಿಂದ "ಸೌರಿಪ್ರಕಾಶೇ ಚ ಯಥೈವ ದರ್ಶನಂ" ಈ ಗರುಡ ಬ್ರಹ್ಮಕಾಂಡದ ವಚನ ಪ್ರತೀಕವನ್ನೇ ಪರಿಗ್ರಹಿಸಿದಂತೆ. "ದೀಪಪ್ರಕಾಶೇ ಚ " ಹೀಗೆ ಹೇಳಿ, "ತಥಾ ಜ್ಞಾನಂ" ಹೀಗೆ, ಅಂದರೆ ದೀಪಪ್ರಕಾಶದಲ್ಲಿ ಹೇಗೋ ಹಾಗೆ ನನಗೆ ಜ್ಞಾನವೆಂಬ ಅರ್ಥವು ತೋರಬಹುದು. ಆದುವರಿಂದ ತೃಣಜೀವ ಸಾಮ್ಯವು ಅವರಲ್ಲಿ ಬರಬೇಕಾಗುತ್ತದೆ. ಇನ್ನು ಅನಂತ ಅನೇಕ ದೀಪಗಳೆಂದು ಅರ್ಥ ಹೇಳುವುದೂ ಸರಿಯಲ್ಲ. ಆದುದರಿಂದ ಚಂದ್ರಪ್ರಕಾಶವನ್ನು ಅರ್ಥಾತ್ ಪರಿಗ್ರಹಿಸಬೇಕು. ಅದುವೂ ಸೋಪಾಧಿಕವಿಲ್ಲ. ನಿರುಪಾಧಿಕ; ಅಂದರೆ ತನಗೆ ಪ್ರಕಾಶವಿಲ್ಲದವನು ಪರರಿಗೆ ಪ್ರಕಾಶವೀಯುವನೆಂಬುದು ಅಸಂಗತ ವಾಗಿರುತ್ತದೆ. ಆದುದರಿಂದ ನಿರುಪಾಧಿಕ ಅಥವಾ ಪೂರ್ಣಕಲಾಧರ ನೆಂಬ ಅರ್ಥ ಹೇಳಬೇಕು. ಅವನನ್ನು ಸೂರ್ಯನೆಂದು ಕರೆಯುತ್ತಾರೆ. ಆಕಾಶದಲ್ಲಿ ರಾತ್ರಿಯಲ್ಲಿ ವಾಲ್ಮೀಕಿ ರಾಮಾಯಣದಲ್ಲಿ–"ಸೂರ್ಯನು ನಕ್ಷತ್ರಮಾಲೆಯಿಂದ ಹೇಗೋ ಹಾಗೆ "ಎಂಬುದಾಗಿ ವರ್ಣಿಸಿರುತ್ತಾರೆ. ವಿಪರೀತ ಶಬ್ದಕ್ಕೆ ರಾತ್ರಿಯೆಂದು ಅರ್ಥ. ಇನ್ನು ಹುಣ್ಣಿಮೆಯ ಪೂರ್ಣ ಚಂದ್ರನನ್ನು ಸೂರ್ಯನೆಂದು ಕರೆಯುತ್ತಾರೆ. ಹೀಗೆ ಕೋಶಗಳನ್ನು ಉದಾಹರಿಸುತ್ತಾ ವ್ಯಾಖ್ಯಾನಕಾರರು ಅದನ್ನು ವಿವರಿಸಿರುತ್ತಾರೆ.

ಅಸ್ಪಷ್ಟ "ಮುಕ್ತಿಪರ್ಯಂತ"– ಕ್ರಮದಿಂದ" ಜ್ಞಾನವು ಅಭಿ-ವೃದ್ಧಿ ಹೊಂದುವುದು ಹಾಗೂ ಸ್ಪಷ್ಟತಾವೆಂಬ ವಿಶೇಷವಿಲ್ಲದಿರುವುದು. ಈ ಲಕ್ಷಣವು ವಾಯು ಮುಂತಾದವರ ಬಿಂಬ ಪ್ರಕಾಶದಲ್ಲಿ ಇರುವುದು. ಎಂದು ಹೇಳುವ ಪ್ರಮಾಣದ ಅರ್ಥ ವಿವರಣವನ್ನೇ "ಅಸ್ಪಷ್ಟ ರೂಪದಿ, ಮುಕ್ತಿಪರ್ಯಂತ" ಈ ವಾಕ್ಯವು ತಿಳಿಸುವುದು. ॥ ೩೮ ॥

**ಅವತರಣಿಕಾ:**— ಬ್ರಹ್ಮದೇವರಿಗೆ ನೂರುವರ್ಷ ಮುಗಿದನಂತರ ಬಹ್ಮಣಾ ಸಹ ವಿರಜಾನದಿಸ್ನಾನ ವಿವರಣೆ, ಲಿಂಗಭಂಗ ನಂತರ ಶ್ರೀವಾಸು ದೇವನ ಉದರಪ್ರವೇಶ ವಿಷಯ ಪೇಳುತ್ತಾರೆ.

**ನೂರು ವರುಷಾನಂತರದಲಿ ಸ ॥**
**ರೋರುಹಾಸನು ತನ್ನ ಕಲ್ಪದ ।**
**ಲಾರು ಮುಕ್ತಿಯ ನೈದುವರೊ(ರು) ಅವರವರ ಕರದೊಯ್ದು॥**
**ಶೌರಿ ಪುರದೊಳಗಿಪ್ಪ ನದಿಯಲಿ ।**
**ಕಾರುಣಿಕ ಸುಸ್ನಾನ ನಿಜ ಪರಿ ।**
**ವಾರ ಸಹಿತದಿ ಮಾಡಿ ಹರಿ ಉದರ ಪ್ರವೇಶಿಸುವ ॥ ೩೯ ॥**

**ಪದ್ಯಾರ್ಥ:**— ಸರೋರುಹಾಸನು = ಕಮಲಾಸನನಾದ ಚತುರ್ಮುಖ ಬ್ರಹ್ಮದೇವರು, ತಮ್ಮ ಸಾಧನವಾದ ೮೭॥ ವರ್ಷನಂತರ ತಮ್ಮ ಆಯುರ್ಮಾನ ೧೩॥ ವರ್ಷ ಪ್ರಳಯಾನಂತರ ಪೂರ್ತಿಯಾದ ನೂರು ವರುಷಾನಂತರದಿ=ಹೀಗೆ ಸುಖಪ್ರಾರಬ್ಧ ಕರ್ಮಭೋಕ್ತ್ರವ್ಯಾನಂತರದಲ್ಲಿ ಬ್ರಹ್ಮದೇವರು, ತನ್ನ ಕಲ್ಪದಲಾರು ಮುಕ್ತಿಯನೈದುವರೊ=ತನ್ನ ಬ್ರಹ್ಮದೇವರ ಬ್ರಹ್ಮಕಲ್ಪದಲ್ಲಿ ಯಾರಾರು ತಮ್ಮ ತಮ್ಮ ಸಾಧನಪೂರ್ತಿ ಮಾಡಿಕೊಂಡು, ಮುಕ್ತಿಗೆ ಹೋಗುವರಿರುವರೋ, ಅವರವರ ಕರದೊಯ್ದು= **ಅವರವರು** ಎಂಬುದು ದ್ವಿರಾವರ್ತಿ ಗೈದಿದ್ದಾರೆ. ಇದು ಬಹು ಸ್ವಾರಸ್ಯ ಶಾಸ್ತ್ರಪ್ರಮೇಯ ರಹಸ್ಯ ಅವರು=ತೃಣ ಜೀವರಾರಂಭಿಸಿ ತಾತ್ವಿಕರ ಪರಿಯಂತವಾಗಿ,ಅವರು=ತತ್ವಾಭಿಮಾನಿ ದೇವತೆಗಳನ್ನುಸಹ ತಮ್ಮಸಂಗಡ ಕರೆದುಕೊಂಡು ಹೋಗಿ, ಶೌರಿಪುರದೊಳಿಪ್ಪ ನದಿಯಲ್ಲಿ=ಶೌರಿ ಯಾದವ ಕುಲದಿ ಅವತರಿಸಿದ ಶ್ರೀಕೃಷ್ಣ ಶ್ರೀಹರಿಪುರ ವೈಕುಂಠದಲ್ಲಿಪ್ಪ ನದಿಯಲ್ಲಿ, ವಿರಜಾನದಿ ಈ ವಿರಜಾ ಎರಡು ಕಡೆ ಇರುವದು, ವೈಕುಂಠಪುರದಲ್ಲಿಪ್ಪದು ಬ್ರಹ್ಮಾಂಡ ಅಂತರಾಳ ವಿರಜಾನದಿಯಲ್ಲಿ ಅತಾತ್ವಿಕರ ಸ್ನಾನಮಾಡಿಸಿ, ಲಿಂಗಭಂಗ, ಬ್ರಹ್ಮಾಂಡ ಬಹಿರಾವರಣ ಅವ್ಯಾಕೃತದಲ್ಲಿಪ್ಪ ವಿರಜಾನದಯಲ್ಲಿ ತಾತ್ವಿಕ ದೇವತೆಗಳನ್ನು, ಕಾರುಣಿಕ=ಕರುಣಾಳುವಾದ ಬ್ರಹ್ಮದೇವರು, ಸುಸ್ನಾನ ನಿಜ ಪರಿವಾರ ಸಹಿತದಿ ಮಾಡಿ=ಸಮೀಚೀನವಾದ ಸ್ನಾನವೆಂದರೆ,ಪ್ರಕೃತಿಬದ್ಧ ಗುಣತ್ರಯಾತ್ಮಕ ಲಿಂಗದೇಹ ಬಿಡುಗಡೆಯೇ ಸಕಲ ಮೈಲಿಗೆ ದೂರವಾದ ಸ್ನಾನವನ್ನು ತನ್ನ ಪರಿವಾರ ಬಳಗ ಮುಕ್ತಿಯೋಗ್ಯರ ಸಂಗಡಮಾಡಿ,ಲಿಂಗಭಂಗಾನಂತರ ಹರಿ ಉದರಪ್ರವೇಶಿಸುವ=

ವಾಸುದೇವನಾಮಕ ಹರಿಯ ಉದರ ಪೊಟ್ಟೆಯಲ್ಲಿ ಎಲ್ಲರಿಂದ ಕೂಡಿ ಪ್ರವೇಶಮಾಡುವನು. ಇದೇ ಬ್ರಹ್ಮದೇವರ ಕೊನೆಯ ಸಾಧನ ಶ್ರೀಹರಿ ಪ್ರೀತ್ಯರ್ಥ ಸೇವೆ.

**ಭಾವಸೂಚನ:**—ನೂರಿತಿ ॥ ನದಿ ವಿರಜಾ ॥ ಪ್ರಧಾನ ಪರಮ ವ್ಯೋಮ್ನೋರಂತರಾ ವಿರಜಾನದೀ ॥ ತಜ್ಜಲೇ ತು ತತಃ ಸ್ನಾನಂ ಲಿಂಗ ಭಂಗೋ ಭವಿಷ್ಯತೀತಿ ಪ್ರಕಾಶ ಸಂಹಿತೋಕ್ತೇಃ ॥ ೩೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನೂರು" ಇತಿ ॥ "ಶೌರಿ" ಇತ್ಯನೇನ ವಿರಜಾದ್ವೈವಿಧ್ಯಂ ಅಭಿಪ್ರೈತಿ ॥ ವೈಕುಂಠಸ್ಯ ವಿರಜಾಯಾಂ ಅತಾತ್ವಿಕಾನ್ ನಿಮಜ್ಜಯ್ಯ ತೈಃ ತಾತ್ವಿಕೈರವ್ಯಾಕೃತಾಕಾಶಂ ಗತ್ವಾ, ಬ್ರಹ್ಮಾಂಡಾತ್ ಬಹಿಷ್ಠವಿರಜಾಯಾಂ ನಿಜಪರಿವಾರೇಣ ತಾತ್ವಿಕೇನ ಸ್ನಾತಿ ॥ ಬುದ್ಧ್ಯಾ ವಿವೇಕೇನ ಮೂಲಂ ಯೋಜ್ಯಮ್ ॥ ೩೯ ॥

## ಕನ್ನಡಾರ್ಥ

"ಶೌರಿ" ಈ ಮಾತಿನಿಂದ ವಿರಜಾನದಿಯಲ್ಲಿ ವೈವಿಧ್ಯವಿದೆಯೆಂದು ಅಭಿಪ್ರಾಯವಾಗುತ್ತದೆ. ವೈಕುಂಠದ ವಿರಜಾನದಿಯಲ್ಲಿ ಅತಾತ್ವಿಕರನ್ನು ಸ್ನಾನಮಾಡಿಸಿ, ತಾತ್ವಿಕರೊಡನೆ ಅವ್ಯಾಕೃತಾಕಾಶಕ್ಕೆ ಹೋಗಿ, ಬ್ರಹ್ಮಾಂಡದ ಬಾಹಿರದಲ್ಲಿರುವ ವಿರಜಾನದಿಯಲ್ಲಿ ನಿಜಪರಿವಾರ ತಾತ್ವಿಕರೊಡನೆ ಸ್ನಾನಮಾಡುತ್ತಾರೆ ಹೀಗೆ ಅಭಿಪ್ರಾಯ ॥ ೩೯ ॥

**ಸೂಚನೆ:**— ॥ ಈ ೩೯-೪೦ ನೇ ಪದ್ಯದ ಟೀಕಾವಿವರಣೆ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ೪೧ನೇ ಪದ್ಯದಲ್ಲಿ ಮುಂದೆ ಸಪ್ರಮಾಣವಾಗಿ ವಿಶದೀಕರಿಸಿದ್ದಾರೆ. ಸುಜ್ಞರು ಮುಂದೆ ನೋಡಿ ತಿಳಿದು ಆನಂದಪಡುವದು.

**ಅವತರಣಿಕಾ:**—ಹಿಂದಿನ ಪದ್ಯದಲ್ಲಿ ಹೇಳಿದಂತೆ, ಸಕಲ ಮುಕ್ತ ಜೀವರು ಶ್ರೀವಾಸುದೇವನ ಉದರದಿಂದ ಹೊರಗೆ ಬಂದು ಶ್ರೀಹರಿಯಾಜ್ಞೆ

ಯಿಂದ, ತಮ್ಮ ತಮ್ಮ ಯೋಗ್ಯವಾದ ಮುಕ್ತಸ್ಥಾನದಲ್ಲಿ ಮುಕ್ತಾನಂದ ವನ್ನು ಅನುಭವಿಸುತ್ತ ಕ್ರೀಡಿಸುತ್ತಾರೆಂದು ಉಪದೇಶಿಸುತ್ತಾರೆ.

**ವಾಸುದೇವನ ಉದರದಲ್ಲಿ ಪ್ರ ।**
**ವೇಶ ಗೈದಾನಂತರದಿ ನಿ ।**
**ರ್ದೋಷ ಮುಕ್ತರು ಉದರದಿಂ ಪೊರಮಟ್ಟು ಹರುಷದಲಿ ॥**
**ಮೇಶ ನಿಂದಾ ಜ್ಞವ (ಜ್ಞೆಯು) ಪಡೆದನಂ ।**
**ತಾಸನ ಸಿತದ್ವೀಪ ಮೋಕ್ಷದಿ ।**
**ವಾಸವಾಗಿ ವಿಮುಕ್ತ ದುಃಖರು ಸಂಚರಿಸುತಿಹರು ॥ ೪೦ ॥**

**ಪದ್ಯಾರ್ಥ:**— ವಾಸುದೇವನ ಉದರದಲ್ಲಿ ಪ್ರವೇಶಗೈದಾನಂತ ರದಿ=ಮುಕ್ತಿಪ್ರದನಾದ ತುರ್ಯನಾಮಕ ವಾಸುದೇವನಾಮಕಪರಮಾತ್ಮನ ಉದರದಲ್ಲಿ=ಪೊಟ್ಟೆಯಲ್ಲಿ ಹೊಕ್ಕು ಪೊಂದಿರಲಾಗಿ, ನಂತರ, ನಿರ್ದೋಷ, ಮುಕ್ತರು, ನಿರ್ದುಃಖರಾದ ಮುಕುತ ಜನ ಸಮೂಹವು, ಮೇಶನಿಂದಾ ಜ್ಞೆಯ ಪಡೆದು=ಮಾ, ರಮಾ ಲಕ್ಷ್ಮೀದೇವಿಗೆ ಈಶನಾದ ಶ್ರೀ ಹರಿಯ ಆಜ್ಞೆಯನ್ನು ಹೊಂದಿ, ಉದರದಿಂ ಪೊರಮಟ್ಟು, ಶ್ರೀ ವಾಸುದೇವನ ಉದರಥಿಂದ ಹೊರಗೆ ಬಂದು, ಹರುಷದಿಂದ=ಆನಂದದಿಂದ. ಶ್ರೀಶನ ಆಜ್ಞೆಯಂತೆ ಅನಂತಾಸನ, ಸಿತದ್ವೀಪ=ಶ್ವೇತದ್ವೀಪ ವೈಕುಂಠ ಮೊದಲಾದ ತತ್ತದ್ಯೋಗ್ಯ ಮುಕ್ತಸ್ಥಾನ ಮೋಕ್ಷದಲ್ಲಿ ವಾಸವಾಗಿ=ಇರುತ್ತ, ವಿಮುಕ್ತ ದುಃಖರು=ಹೋಗಲ್ಪಟ್ಟ ದುಃಖವುಳ್ಳ ಎಲ್ಲ ಮುಕ್ತಜೀವರು "ನಿರ್ದುಃಖ ದಲಿ ಸಮರು ಸರ್ವಜೀವಿಗಳನ್ನು" ಎಂಬ ಶ್ರೀ ವಿಜಯರ ವಾಕ್ಯದಂತೆ ಮುಕ್ತಿಯಲಿ ಸಂಚರಿಸುತಿಹರು=ಮುಕ್ತಾನಂದವನ್ನು ಪೊಂದುತ್ತ ಕ್ರೀಡೆ ಮಾಡುವರು. ವೈಕುಂಠವರ್ಣನ ಶ್ರೀ ವಿಜಯದಾಸರ, ಶ್ರೀ ಗೋಪಾಲ ದಾಸರ ಮುಕ್ತಪ್ರಕರಣ ಸುಳಾದಿಗಳನ್ನು ಅವಲೋಕಿಸಿ ಮುಕ್ತರ ಕ್ರೀಡೆ ವಿವರ ಅರಿಯಲು ವಿಜ್ಞಾಪನೆ ॥

**ಭಾವಸೂಚನ:**— ವಾಸುದೇವೇತಿ ॥ ಮೇಶ ರಮೇಶ ॥ "ಬಹಿರ್ನಿ ರ್ಗತ್ಯ ತೇ ಜೀವಾಃ ವಾಸುದೇವಾಜ್ಞಯಾ ತದಾ । ವಾಸಂ ಚ ಕ್ರು

ರ್ಯಥಾಯೋಗ್ಯಂ ಶ್ವೇತದ್ವೀಪಾದಿಕೇಷು ಚೇತಿ ಪದ್ಮಪುರಾಣೇ ||೪೦||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಯಥೇಷ್ಟಂ ಅಸಂಚಾರಾತ್ ಅಮುಕ್ತ ಇತ್ಯೇವ ಸಂಜ್ಞಿತಃ || ಅತಃ ಉತ್ತರಾವಸ್ಥಾಂ ಅನುವದತಿ-"ವಾಸುದೇವೇತಿ" || "ಪೊರಮಟ್ಟು"= ಹೊರಹೊರಟು, "ಮೇಶ"--ರಮೇಶ. (ಮಾ-ರಮಾ) "ಸಿತ"-ಶ್ವೇತ ||೪೦||

**ಕನ್ನಡಾರ್ಥ**

ಸ್ವೈರವಿಹಾರ ಮುಂತಾದವುಗಳಿಲ್ಲದಿರುವುದರಿಂದ"ಅಮುಕ್ತ "ರೆಂದೇ ಕರೆಯುತ್ತಾರೆ. ಆದುದರಿಂದ ಮುಕ್ತಿಯಲ್ಲಿಯ ಅವಸ್ಥೆಯನ್ನು "ವಾಸುದೇವನ"ಈ ಶ್ಲೋಕದಿಂದ ಅನುವಾದಿಸುತ್ತಾರೆ.

"ಪೊರಮಟ್ಟು"— ಹೊರಹೊರಟು. "ಸಿತ"— ಶ್ವೇತ. || ೪೦ ||

**ಅವತರಣಿಕಾ:**— ಹಿಂದೀಪದ್ಯಗಳಲ್ಲಿ ಶ್ರೀವಾಯುಬ್ರಹ್ಮದೇವರ ಸಾಧನಗಳನ್ನುಪೇಳಿದರು.ಆದರೆ ತ್ರಿಗುಣಾತ್ಮಕವಾದ ಲಿಂಗದೇಹ ಇದ್ದರೂ, ಲಿಂಗದೇಹಬದ್ಧರಲ್ಲವೆಂಬ ವಿಷಯವನ್ನು ವಿವರಿಸುತ್ತಾರೆ.



**ಸತ್ವ ಸತ್ವ ಮಹಾಸುಸೂಕ್ಷ್ಮವು |**
**ಸತ್ವ ಸತ್ವಾತ್ಮಕ ಕಳೇವರ |**
**ಸತ್ಯ ಲೋಕಾಧಿಪನೆನಿಪಗತ್ಯಲ್ಪವೆರಡುಗುಣ ||**
**ಮುಕ್ತ ಭೋಗ್ಯವಿದಲ್ಲ-ಚಾಂಡೋ |**
**ತ್ಪತ್ತಿ ಕಾರಣವಲ್ಲ ಹರಿಪ್ರೀ |**
**ತ್ಯರ್ಥವಾಗೀಜಗದ ವ್ಯಾಪಾರಗಳ ಮಾಡುವನು (ರೂ) ||೪೧||**

ಪ್ರಮಾಣ- ಸತ್ವ ಸತ್ವ ಮಹಾಸತ್ವ ಸೂಕ್ಷ್ಮಸತ್ವಶ್ಚತುರ್ಮುಖಃ|| ಇತಿ ತಾತ್ಪರ್ಯೇ ವಾರಾಹೇ || (ಮೂಲದಲ್ಲಿ)

**ಪಧ್ಯಾರ್ಥ:**—ಸತ್ಯಲೋಕಾಧಿಪನೆನಿಪ = ಸತ್ಯಲೋಕಕ್ಕೆ ಅಧಿಪತಿ

ಯೆನಿಸುವ ಬ್ರಹ್ಮದೇವರ ಶರೀರದಲ್ಲಿ, ಸತ್ವಸತ್ವ ಮಹಾಸುಸೂಕ್ಷ್ಮವು= ಕೇವಲ ಸತ್ವಸತ್ವ ಗುಣದಿಂದ ಕೂಡಿದ,ಮಹಾಸೂಕ್ಷ್ಮ ಸತ್ವ= ದ್ವಿಜ ಫಣಿಪ ರಿಂದರಿಯುವ ಕೇವಲ ಸೂಕ್ಷ್ಮಗುಣ ಸತ್ವ ಶರೀರವುಳ್ಳವರಾದರೂ, ಅತ್ಯಲ್ಪ ವೆರಡುಗುಣ=ಸ್ವಲ್ಪ ರಜೋತಮೋ ಮಿಶ್ರವಾದುದಿದೆ, ಆದರೆ ರಜ-ತಮ ಗುಣಕಾರ್ಯ ಕಿಂಚಿತ್ತಾದರೂ ಇಲ್ಲ,ಕಾರಣ ಲಿಂಗದೇಹಬದ್ಧರಲ್ಲವೆಂಬುದು ಸಿದ್ಧ. ಮುಕ್ತಿಯಲ್ಲಿ ಮುಕ್ತರಕ್ರೀಡೆಗೆ ಅನಂತ ಅಂಶಗಳ ದೇಹತೆಗೆದು ಕೊಳ್ಳಲು ಸತ್ವ-ಸತ್ವ-ಸತ್ವವಾದ ಕೇವಲಸತ್ವಗುಣವು- ಸೃಷ್ಟಿಗೆ ತಾರದೇ ಮುಕ್ತಭೋಗ್ಯವಿರುತ್ತದೆಯೋ ಬ್ರಹ್ಮದೇವರ ಲಿಂಗಸತ್ವಗುಣವು ಮುಕ್ತರ ಭೋಗಕ್ಕೆ ಆಗುವದಿಲ್ಲ, ಕೇವಲ ಬ್ರಹ್ಮದೇವರ ದೇಹವ್ಯತಿರಿಕ್ತವಾಗಿ, ಬ್ರಹ್ಮಾಂಡ ಸೃಷ್ಟಿಗೆ ಸಹ ಬರುವುದಿಲ್ಲ ಕಾರಣ ಅಜಾಂಡೋತ್ಪತ್ತಿಕಾರಣ ವಲ್ಲವೆಂದು ಹೇಳಿದ್ದಾರೆ. ಕಿಂಚಿತ್ ರಜತಮೋದೇಹ ಸಮ್ಮಿಶ್ರಿತವಾದರೂ ತ್ರಿಗುಣಬದ್ಧರಾಗದೇ ಅಜ್ಞಾನಾದಿ ದೋಷಗಳಿಲ್ಲದೆ, ಹರಿಪ್ರೀತ್ಯರ್ಥ ಜಗದ್ವ್ಯಾಪಾರಗಳ ಮಾಡುವನು=ಕೇವಲ ಬಿಂಬನಾಮಕ ಶ್ರೀಹರಿಯು ಪ್ರೀತಿಗೋಸುಗವೇ ಜಗತ್ತಿನ ವ್ಯಾಪಾರಮಾಡುತ್ತಾರೆಂದು ಬ್ರಹ್ಮದೇವರ ಮಹಿಮೆ ಹೇಳಿದ್ದಾರೆ. ಈ ವಿಷಯದಲ್ಲಿ ಸೃಷ್ಟಿ ಸುಳಾದಿ ೧೫-೧೬ ನೋಡುವದು.

**ಭಾವಸೂಚನ:**—ಸತ್ವೇತಿ ॥ ಸತ್ವಸತ್ವ ಮಹಾಸತ್ವ ಸೂಕ್ಷ್ಮಸತ್ವ ಶ್ಚತುರ್ಮುಖ ಇತಿ ಗಾರುಡೇ ॥ ಜಗದಿತಿ ಜಗದ್ವ್ಯಾಪಾರವರ್ಜವಿ ತ್ಯುಕ್ತಾಧಿಕರಣೋಕ್ತೇಃ ॥ ೪೧ ॥



**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಮಂಜರ್ಯಾಂ ಚ ಅವ್ಯಾಕೃತಾಕಾಶೇ ವಿರಜಾ ಅಸ್ತೀತ್ಯತ್ರ "ಪ್ರಧಾನ ಪರಮವ್ಯೋಮ್ನೋರಂತರಾ ವಿರಜಾನದೀ ॥ ಪ್ರಧಾನಾತ್ಮಕದೇಹೌ ತೌ ಬ್ರಹ್ಮವಾಯೂ ಸಭಾರ್ಯಕೌ ॥ ಭೂಭಾಗೋರ್ಧ್ವಾವರಣಗೌ ಲಯೇ ಸರ್ವಸುರೈಃ ಸಹ ॥ ಸುರಾನ್ ವಿನಾವತಾರಾಣಾಂ ವಿರಂಭೇ ಚ ಸಮಾ ಪ್ತಿಕೇ ॥ ಕಾಲೇ ಭೂಭಾಗೋರ್ಧ್ವಗತೌ ಸತಾಂ ಕ್ವಾಪಿ ಹರೀಚ್ಛಯಾ

ಅತೋ ಭೂಭಾಗೋರ್ಧ್ವದೇಶಃ ಪ್ರಧಾನಮಿತಿ ಕೀರ್ತ್ಯತೇ ॥ ತಾದೃಕ್ ಪ್ರಧಾನ ಸಂಸೃಷ್ಟ ಶ್ರೀಭಾಗಃ ಪರಮಾಂಬರಮ್ ॥ ಅತಃ ಪ್ರಧಾನ ಪರಮವ್ಯೋಮೇತ್ಯೇವಾಭಿಧೀಯತೇ ॥ ನಿರಂತತಾತ್ವಿಕಾನಾಂ ಚ ಹ್ಯಂಡಾಂತಃ ತತ್ರ ಮಜ್ಜನಮ್॥ ತಾತ್ವಿಕಾನಾಂ ಚ ಸರ್ವೇಷಾಂ **ಅನಿರುದ್ಧಾವೃತಿಸ್ಥಿತೇಃ**॥ ಸತ್ವಾವರಣತಃ ತಚ್ಚ ಪ್ರದೇಶೇ ಸಂಸ್ಥಿತೇ ಜಲೇ॥ತಜ್ಜಲೇ ತು ತದಾ ಸ್ನಾನಾತ್ ಲಿಂಗಭಂಗಃ ಪ್ರಶಸ್ಯತೇ ॥ ಲಯೇ ಪೃಥಿವ್ಯಾವರಣಂ ವ್ಯುತ್ಕ್ರಮಾತ್ ಗಚ್ಛತಾಂ ಮತಮ್ ॥ ಪ್ರಥಮಾವರಣಂ ಪ್ರೋಕ್ತಂ ಸತ್ವಾವರಣಮಂತಿಮಮ್ ॥ ತಮುಚ್ಚಾವ್ಯಾಕೃತಾಕಾಶೋ ವ್ಯೋಮಶಬ್ದೇನ ಭಣ್ಯತೇ ॥ ಅಂತಿಮಾವರಣವ್ಯೋಮ್ನೋರಂತರಾ ವಿರಜಾ ತತಃ ॥ ಸಂಕರ್ಷಣಾದ್ ವಿನಷ್ಟೇಷು ಲಿಂಗದೇಹೇಷು ಕೃತ್ಸ್ನಶಃ ॥ ತದಾ ಸತ್ವೋತ್ಥಶ್ರೀ ಭಾಗಸ್ಥಲೇ ಲಕ್ಷ್ಮ್ಯಾತ್ಮಕೇ ಜಲೇ। ನೀಚಕ್ರಮಾತ್ ಭಗ್ನಲಿಂಗಾಃ ವಿಶಂತಿ ಜಠರಂ ಹರೇಃ ॥ ಪುನರಂಡೇ ಸಮುತ್ಪನ್ನೇ ಶ್ವೇತದ್ವೀಪೇಶಮಾಪ್ಯ ಚ ॥ ಮುಕ್ತಾ ಭವಂತಿ ॥ ವಾಸುದೇವ ಶರೀರಗಾಃ ॥ ಬಹಿರ್ನಿರ್ಗತ್ಯ ತೇ (ವ್ಯತೇ) ಜೀವಾಃ (ಜೀವೈಃ) ವಾಸುದೇವಾಜ್ಞಯಾ ಸದಾ ॥ ವಾಸಂ ಚಕ್ರುಃ ಯಥಾಯೋಗ್ಯಂ ಶ್ವೇತದ್ವೀಪಾದಿಕೇಷು ಚ" ॥ ಇತಿ ಪಾದ್ಮೇ" ಇತಿ ॥ ವೈಕುಂಠವರ್ಣನೇ ಚ-"ಹರಿಯಂತಃಪುರದಾ ಸುತ್ತಲಿಪ್ಪುದು ವಿರಜಾನದೀ ತತ್ವಜ್ಞಾನಿಗಳಿಗೆ ಅದರಲ್ಲಿ ಮುಳುಗೆ ನಿರ್ಮುಕ್ತಾವಹುದು ಲಿಂಗದೇಹಾ ॥ ಹರಿಯಂಗಾದೊಳಗಿದ್ದಾವೆಂಬರಾವುದಕಾವಾಣೀ ಶಿರಿದೇವೀ ತಾನೇ ಪೊರಮಟ್ಟು ಪರಿವಾಳು ॥ ರಜಶಬ್ದ ಸೂಚಿತ ಗುಣತ್ರಯವಿರವ ಕಾರಣ ವಿರಜಾಯೆನಿಸಿಪಳು ॥ ಓಂ ಹರಿಯಂತಾ ನಗರಿಗೆ ಪರಮವ್ಯೋಮಾನಾಮಾ ಹೊರಗಿದ್ದಾ ಪ್ರಕೃತಿ ಪ್ರಧಾನೇತಿ ॥ ಸತ್ವೇತಿ ॥ ಸತ್ವ ಸತ್ವೇತ್ಯತ್ರ ಪ್ರಾಂತಸ್ಸೂಕ್ಷ್ಮೇತ್ಯರ್ಥಃ ॥ ವಿವೃತ್ತೈಷಾ ಪ್ರಕ್ರಿಯಾ ॥ ೪೧ ॥

## ಕನ್ನಡಾರ್ಥ

ಮಂಜರಿಯಲ್ಲಿ-ಅವ್ಯಾಕೃತಾಕಾಶದಲ್ಲಿ ವಿರಜಾನದಿ ಇತಿ ಯೆಂಬ ವಿಷಯದಲ್ಲಿ—

"ಪ್ರಧಾನ ಪರಮಾಕಾಶಗಳ ನಡುವೆ ವಿರಜಾನದೀಯಿರುತ್ತದೆ. ಭಾರ್ಯಾಸಹಿತರಾದ ಬ್ರಹ್ಮ ವಾಯುದೇವರು ಪ್ರಧಾನಾತ್ಮಕ ದೇಹದವರು; ಲಯದಲ್ಲಿ ಸಕಲ ಸುರಸಮೇತರಾಗಿ ಭೂಭಾಗದ ಊರ್ಧ್ವಾವರಣದಲ್ಲಿ ಇರುವವರು. ಸುರರನ್ನುಳಿದು ಅವತಾರಕಾಲದಲ್ಲಿ ಆರಂಭ ಹಾಗೂ ಸಮಾಪ್ತಿ ಕಾಲಗಳಲ್ಲಿ ದೇವರ ಇಚ್ಛಾನುಸಾರವಾಗಿ ಭೂಭಾಗದ ಊರ್ಧ್ವ ದೇಶದಲ್ಲಿ ಇರುತ್ತಾರೆ. ಆದುದರಿಂದ ಭೂಭಾಗದ ಊರ್ಧ್ವ ಪ್ರದೇಶಕ್ಕೆ ಪ್ರಧಾನವೆಂದು ಕರೆಯುವರು ಅಂಥ ಪ್ರಧಾನದಲ್ಲಿ ಸಂಬದ್ಧವಾಗಿರುವ ಶ್ರೀಭಾಗವು ಪರಮಾಕಾಶವೆನಿಸುತ್ತದೆ. ಆದುದರಿಂದ ಪ್ರಧಾನ ಪರಮ ವ್ಯೋಮ (ಆಕಾಶ) ವೆಂದು ಕರೆಯುತ್ತಾರೆ. ನಿರಂಶರಾದ ಅತಾತ್ವಿಕರಿಗೆ ಅಂಡದ ಒಳಗೇ ವಿರಜಾನದಿಯ ಸ್ನಾನ. ತಾತ್ವಿಕರಿಗೆಲ್ಲ ಅನಿರುದ್ಧಾವರಣದಲ್ಲಿ ಸ್ಥಿತಿಯಿರುತ್ತದೆ. ಸತ್ವಾವರಣದಿಂದ ಉಚ್ಚಪ್ರದೇಶದಲ್ಲಿರುವ ಆ ಜಲದಲ್ಲಿ ಸ್ನಾನವಾಗುವುದರಿಂದ ಲಿಂಗಭಂಗವು ಪ್ರಶಸ್ತವೆನಿಸುತ್ತದೆ. ಲಯದಲ್ಲಿ ಪೃಥಿವ್ಯಾವರಣವು. ಇದು ವ್ಯತ್ಕ್ರಮದಿಂದ ಹೋಗುವವರಿಗೆ ಪ್ರಥಮಾವರಣವೆಂದೆನಿಸುತ್ತದೆ. ಕೊನೆಯಲ್ಲಿ ಸತ್ವಾವರಣವು ಇದಕ್ಕೆ ಉಚ್ಚವಾಗಿರುವ ಅವ್ಯಾಕೃತಾಕಾಶವೇ ವ್ಯೋಮವೆನಿಸಿರುತ್ತದೆ. ಅಂತಿಮಾವರಣ (ಸತ್ವಾವರಣ) ಹಾಗೂ ವ್ಯೋಮಗಳ ನಡುವೆ ವಿರಜಾನದಿಯಲ್ಲಿ ಇರುತ್ತದೆ. ಸಂಕರ್ಷಣನಿಂದ ಲಿಂಗದೇಹಗಳೆಲ್ಲ ನಷ್ಟವಾದ ಅನಂತರ, ಸತ್ವಾವರಣದಲ್ಲಿ ಉಚ್ಚವಾದ ಶ್ರೀಭಾಗದ ಲಕ್ಷ್ಮ್ಯಾತ್ಮಕ ಜಲದಲ್ಲಿ ನೀಚ ಕ್ರಮದಿಂದ ಲಿಂಗಭಂಗ ಹೊಂದಿ ಹರಿಯ ಜಠರವನ್ನು ಪ್ರವೇಶಿಸುತ್ತಾರೆ. ಅಂಡದ ಪುನಃ ಸೃಷ್ಟಿಯಾದನಂತರ ಶ್ವೇತದ್ವೀಪಕ್ಕೆ ಪತಿಯನ್ನು ಕುರಿತು ಬಂದು ಮುಕ್ತರಾಗುತ್ತಾರೆ. ವಾಸುದೇವನ ಶರೀರದಲ್ಲಿದ್ದು ಹೊರಗೆ ಬರುತ್ತಾರೆ. ವಾಸುದೇವನ ಆಜ್ಞೆಯಿಂದ ಶ್ವೇತದ್ವೀಪ ಮುಂತಾದ ಪ್ರದೇಶಗಳಲ್ಲಿ ಯಥಾಯೋಗ್ಯವಾಗಿ ವಾಸಮಾಡಿದರು." ಹೀಗೆ ಪದ್ಮ ಪುರಾಣ ವಚನವೆಂದು ನಿರೂಪಿಸಿದ್ದಾರೆ.

ವೈಕುಂಠವರ್ಣನದಲ್ಲಿಯೂ ಸಹ ಹೀಗೇ ವರ್ಣಿಸಿದ್ದಾರೆ. (ಈ ಪದದ ಅರ್ಥವು ಸುಲಭವಿದೆ)

"ಸತ್ವಸತ್ವ". ಈ ಪದ್ಯವನ್ನು ವಿವರಿಸುವ ಸಂದರ್ಭದಲ್ಲಿ ಈ ಪ್ರಕ್ರ

ಯೆಯನ್ನು ಹೆಚ್ಚಾಗಿ ವಿವರಿಸಲಾಗಿರುತ್ತದೆ. ॥ ೪೧ ॥

**ಅವತರಣಿಕಾ:—** ಹಿಂದಿನ ಪದ್ಯಗಳಲ್ಲಿ ಬಹು ವಿಸ್ತಾರವಾಗಿ ವಾಯು ಬ್ರಹ್ಮದೇವರ ಮಹಾ ಸಾಧನಗಳ ಬಗೆ ವಿವರಿಸಿ ಮಾಹಾತ್ಮ್ಯೆ ಹೇಳಿ ಈ ಪದ್ಯದಿಂದ ರುದ್ರದೇವರ ಸಾಧನ ಹೇಳುತ್ತಾರೆ.

**ಪಾದ (ನೂ) ನ್ಯೂನ ಶತಾಬ್ದ (೭೫) ಪರಿಯಂ ।**
**ತೋದಿ ಉಗ್ರತಪಾಹ್ವಯುದಿ ಲ ।**
**ವಣೋದಧಿಯೊಳಗೆ ಕಲ್ಪದಶ ತಪವಿದ್ದ ನಂತರದಿ ॥**
**ಸಾಧಿಸಿದ ಮಹದೇವ ಪದವಾ ।**
**ರೈದು ನವಕಲ್ಪಾವಸಾನಕೆ** (೬+೫=೧೧×೯=೯೯)
**ಐದುವನು ಶೇಷನ ಪದವ ಪಾರ್ವತಿಸಹಿತವಾಗಿ** ॥ ೪೨ ॥

**ಪದ್ಯಾರ್ಥ:—** ಪಾದನ್ಯೂನ ಶತಾಬ್ದ ಪರಿಯಂತ=ಬ್ರಹ್ಮಮಾನದಿಂದ ನೂರು ವರ್ಷಕ್ಕೆ ೧/೪ ಅಂಶ ಕಡಿಮೆ ನೂರಕ್ಕೆ ೨೫ ಕಡಿಮೆಯಾದರೆ ೭೫ ವರ್ಷ ಎಪ್ಪತ್ತೈದು ವರ್ಷದವರಿಗೆ ಅಂದರೆ ಎಪ್ಪತ್ತೈದು ಬ್ರಹ್ಮದೇವರ ವರುಷ, **ಉಗ್ರತಪನೆಂಬೋ ನಾಮದಿಂದ ರುದ್ರದೇವರು,** ಓದಿ=೧೯ಲನೇ ಕಲ್ಪ ಸಾಧನಮಾಡಿ ವಾಯುಪದಕ್ಕೆ ಬರುವ ಲಾತವ್ಯನಾಮಕ ಋಜುಗಳಲ್ಲಿ ಓದಿ, ಶ್ರೀಹರಿಯೇ ಸರ್ವೋತ್ತಮನೆಂಬ ಸೂಕ್ಷ್ಮಶಾಸ್ತ್ರಾರ್ಥ ಜ್ಞಾನಕ್ಕೆ ಯೋಗ್ಯವಾದುದನ್ನು ೭೫ ವರ್ಷ ಪಾಠ ಹೇಳಿಸಿಕೊಂಡು, ಅನಂತರ ಲವಣೋದಧಿಯೊಳಗೆ, ಲವಣ ಉಪ್ಪಿನ ಸಮುದ್ರದಲ್ಲಿ, ಕಲ್ಪದಶ=ಹತ್ತು ಕಲ್ಪ=ಈ ಕಲ್ಪಗಳು ೧೦ ಮನುಕಲ್ಪಗಳೆಂದು ಪ್ರಮಾಣ ೧ ನೇ ಸಂಧಿಯಲ್ಲಿ ಉದಾಹರಿಸಿದೆ. ಮನುಕಲ್ಪವರೆಗೆ ಲವಣಸಮುದ್ರದಲ್ಲಿ, ತಪವಿದ್ದನಂತರದಿ=ತಪಸ್ಸು, ಬ್ರಹ್ಮಜಿಜ್ಞಾಸಾ ವಿಷಯ ಹೆಚ್ಚಿನ ಆಲೋಚನೆ ಮಾಡಿದ, ನಂತರದಿ=ಆ ಮೇಲೆ, ಮಹದೇವ ಪದವ ಸಾಧಿಸಿದ=ಮಹರುದ್ರ ದೇವರು ಶೇಷಪದವನ್ನು ಸಾಧಿಸಿದ ಹೊಂದಲಿಕ್ಕೆ ಯೋಗ್ಯನಾದ. ಎಷ್ಟು ಕಲ್ಪಕ್ಕೆ ಎಂದರೆ, ಆರೈದು ನವಕಲ್ಪಾವಸಾನಕೆ=ಆರು ೬+೫=೧೧x೯=೯೯ನೇ ಬ್ರಹ್ಮಕಲ್ಪ ಕೊನೆಗೆ ೯೯ ಬ್ರಹ್ಮಕಲ್ಪ ಮುಗಿದನಂತರದಲ್ಲಿ

ಬ್ರಹ್ಮನ ೧೦೦ನೇ ಕಲ್ಪದಲ್ಲಿ ಪಾರ್ವತಿ ಸಹಿತವಾಗಿ ಶೇಷನ ಪದ ಐದುವನು=ತನ್ನ ಸೀತ ಪತ್ನಿಯಾದ ಉಮೆಯಿಂದೊಡಗೂಡಿ, ರುದ್ರ ದೇವರು ಶೇಷನ ಪದವಿ ಹೊಂದುವರು. ಪಾರ್ವತಿಯು ವಾರುಣಿದೇವಿಯ ಪದವಿಹೊಂದುವಳು.

ಈ ಪದ್ಯಾರ್ಥ ವಿವರವನ್ನೇ ಹಿಂದೆ ಸಂಧಿ (೧) ಕೃತ್ತಿವಾಸನೆ ಎಂಬ ಪದ್ಯದಲ್ಲಿ ವಿಶೇಷವಾದ ಪ್ರಮಾಣಗಳೊಂದಿಗೆ ವಿಸ್ತಾರಮಾಡಿದೆ ನೋಡಿರಿ. ಈ ಪದ್ಯದಲ್ಲಿ ದಾಸಾರ್ಯರು ಸುಧಾದಿ ಗ್ರಂಥಗಳ ಪ್ರಮಾಣ ಅನುಸರಿಸಿ ವಿಸ್ತಾರಗೈಯುವುದಲ್ಲದೇ, ಗರುಡ ಬ್ರಹ್ಮಕಾಂಡ ಪ್ರಮಾಣಕ್ಕೂ ಅನುಸರಿಸುವಂತೆ ಕಲ್ಪಸಂಖ್ಯಾಪದ ಆರೈದು ನವಕಲ್ಪಾವಸಾನಕೆ ಎಂದು ೬x೫=೩೦+೯=೩೯ ಎಂದೂ ಸಂಖ್ಯಾವಾಚಕ ಅರ್ಥಮಾಡಲು ಬರುತ್ತದೆ. ಸಾಧನ ಜೀವಿಗಳಲ್ಲಿ ಅಯೋಗ್ಯರಾದವರಿಗೆ ವ್ಯಾಮೋಹ ಪ್ರಟ್ಟಿಸಲು ಗಾರುಡ ವಚನದಂತೆ ದಾಸಾರ್ಯರು ಹೇಳಿದ್ದಾರೆ. ನಿಜವಾಗಿ ಮಹಾ ರುದ್ರದೇವರು ಶೇಷದೇವರಿಗೆ ೧೦೦ ಬ್ರಹ್ಮಕಲ್ಪ ಸಾಧನ. ಇವರಲ್ಲಿ ೫೦ ಬ್ರಹ್ಮಕಲ್ಪ. ಅಪರೋಕ್ಷ ವಿಶೇಷಾನಂತರ ಸಾಧನ. ೫೦ ಬ್ರಹ್ಮಕಲ್ಪ ಪ್ರಾರಬ್ಧ ಕ್ಷಯ ಹೀಗೆ ನಿಶ್ಚಿತವಾದ ತತ್ವವನ್ನು ದಾಸಾರ್ಯರು ಇದೇ ಸಂಧಿಯ ಪದ್ಯ ೪೫ರಲ್ಲಿ "ಸಾಧನಗಳಪರೋಕ್ಷನಂತರ । ಐದುವರು ಮೋಕ್ಷವನು ಶಿವ ಶಕ್ರಾದಿ ದಿವಿಜರು ಉಕ್ತಕ್ರಮದಿಂ ಕಲ್ಪಸಂಖ್ಯೆಯಲಿ ॥ **"ಐದಲೆಗೆ ಐವತ್ತು"** ಐದು ತಲೆಯುಳ್ಳ "ಧ್ಯೇಯಃ ಪಂಚಮುಖೋ ರುದ್ರ ಎಂಬುವಂತೆ ರುದ್ರದೇವರಿಗೆ ಐವತ್ತು ಬ್ರಹ್ಮಕಲ್ಪ ಪ್ರಾರಬ್ಧ ಭೋಗ. ಒಟ್ಟಿಗೆ ೧೦೦ ಕಲ್ಪವೆಂದು ತಾವೇ ಹೇಳಿದ್ದಾರೆ. ದಾಸಾರ್ಯರ ಉಕ್ತಿ ಸುಧಾದಿ ವಾಕ್ಯಗಳಿಗೆ ವಿರೋಧವಾಗಿ ರುದ್ರ ಶೇಷದೇವರಿಗೆ ೮೦ ಕಲ್ಪ ಸಾಧನವೆಂದು ತಿಳಿಯಬಾರದು ಶ್ರೀ ವಿಜಯರ ವಾಕ್ಯವೂ ಉಂಟು. ತಾರತಮ್ಯ ಸುಳಾದಿ ಒಂದೊಂದು ಕಲ್ಪದಲ್ಲಿ ಜೀವರಗಣವಿವರ ಪುಟ ೪೩ ಗರುಡಪನ್ನಗ ಜೀವರು ಅಷ್ಟಶತಈರ್ವರು ಸರಿಯೆನ್ನಿ ಗುಣರೂಪ ಕ್ರಿಯಾದಿ ಗಳಲ್ಲಿ ತಾರತಮ್ಯವೆ ಉಂಟು । ಸುರಪಸ್ಮರ ಪದಸ್ಥರು ನಾಲ್ವತ್ತು ಜನ ಅಹಂ । ಕಾರ ನೂವತ್ತಾರು ಜನರು ॥"

**ಭಾವಸೂಚನ** :—ಪಾದೇತಿ ॥ ಎಪ್ಪತ್ತೈದು ವರ್ಷ ॥ ಓದಿ ॥ ಶ್ರೀಲಾತವ್ಯರಲ್ಲಿ ॥ ಉಕ್ತಂ ಚ ಕರ್ಮಕ್ಷಯಪಾದಾನುವ್ಯಾಖ್ಯಾನೇ ॥ "ಲಿಂಗಾ ಲಾತವ್ಯಪೂರ್ವೇ ಋಜವೋ ಬ್ರಹ್ಮತ್ವಶತಾತ್ ॥ ಶುಶ್ರಾವೋಗ್ರ ತಪಾ ನಾಮ ಯೋಗ್ಯೋ ರುದ್ರಪದಾಶ್ರಯಃ ॥ ಸಾರ್ಧಂ ಪರಾರ್ಧಂ ವಿಷ್ಣೋಸ್ತು ಗುಣಾನ್ ಭಕ್ತ್ಯಾ ಸದೋದ್ಯತಃ ॥ ಇತಿ ॥ ದಶೇತಿ ॥ ದಶ ಕಲ್ಪಂ ತಪಸ್ತೀರ್ಣಂ ರುದ್ರೇಣ ಲವಣಾರ್ಣವ ಇತ್ಯುಕ್ತೇಃ ॥ ಆರೈದು ಕಲ್ಪೇತಿ ॥೯೯ ಕಲ್ಪಾ॥ ತದುಕ್ತಂ ಪಂಚಾಶದ್ಬ್ರಹ್ಮಣಸ್ತಥಾ ರುದ್ರಸ್ಯೇತಿ॥ ಏತತ್ ಪದ್ಯಸ್ಯ ಶ್ರೀಮನ್ನ್ಯಾಯಸುಧಾ ಚ ಪಂಚಾಶತಾಂ ಬ್ರಹ್ಮಣಾಂ ಕಾಲಾತ್ ಪೂರ್ವಂ ರುದ್ರಸ್ಯ ಆರಬ್ಧಃ ಸಂಕ್ಷಯಃ ॥ ಯೇ ತಸ್ಯ ಯಾದು ಪತ್ಯಂ ॥ ನನು "ಏಕೋನಚತ್ವಾರಿಂಶದ್ಭಿಃ ಪದಂ ಶೈವಂ ಚ ಜನ್ಮಭಿರಿತಿ" ಭಾಗವತತಾತ್ಪರ್ಯೇ ವಿರೋಧ ಪರಿಹಾರಾಯ ಬುದ್ಧ್ಯಾ ವಿವಿಕ್ತಸ್ಯ ಕಾಲಾದಿ ತಸ್ಯ ಪೂರ್ವಮಿತ್ಯಸ್ಯಾನುವೃತ್ತಿಂ ಅಭಿಪ್ರೇತ್ಯ ಪಂಚಾಶದ್ಬ್ರ-ಹ್ಮಣೇ ಇತ್ಯೇತದ್ವ್ಯಾಚಷ್ಟೇ ॥ ಪಂಚಾಶತಾಂ ಬ್ರಹ್ಮಣಾಮಿತಿ ಏಕೋನ ಚತ್ವಾರಿಂಶದ್ಬ್ರಹ್ಮಕಲ್ಪಾನಂತರಮಿತ್ಯರ್ಥಃ ॥ ರುದ್ರಸ್ಯ ಶೇಷತ್ವಾನಂತರ ಮೇವ ಮುಕ್ತೇಃ ಕ್ಲೃಪ್ತತ್ವಾದಿತಿ ॥೪೨॥ ೩೯ನೇ ಕಲ್ಪಾನಂತರ ಶೇಷ ಪದವಿಗೆ ಸಾಧನ ಪ್ರಾರಂಭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಏವಂ ಋಜುಸಾಧನಂ ಉಕ್ತ್ವಾ ತದವರಶಿವಾದಿಸಾಧನಂ ಆಹ-'ಪಾದ' ಇತಿ ॥ ಶತವರ್ಷೇ ಚತುರ್ಧಾ ವಿಭಕ್ತೇ ಪಾದಃ ಪಂಚವಿಂಶತಿಃ ॥ ತನ್ನ್ಯೂನೇತಿ ॥ ಸಾರ್ಧಂ ಪರಾರ್ಧಂ ಪಂಚಸಪ್ತತಿ ಇತಿ ಯಾವತ್ ॥ 'ಓದಿ' ಇತ್ಯನಂತರಂ ಸಾಮಾನ್ಯಾಪರೋಕ್ಷೇ ಸತ್ಯಪಿ ಇತಿ ಯೋಜ್ಯಮ್॥ ದಶೇತಿ ಅಪರೋಕ್ಷದಾರ್ಢ್ಯಾರ್ಥಂ ಚ ಇತಿ ಯೋಜ್ಯಮ್ ॥ ಆರೈದು ನವ ಒಟ್ಟು (೯೯) ತದವಸಾನೇ ಶೇಷಪದಸ್ಯ ಚತ್ವಾರಿಂಶತ್ ॥ ಗಣಶಃ ಸಂತಿ ರಾಶೀಕೃತಾಃ ದೇವಾಃ ಉಕ್ತಕಾಲೇ ಸಾಧನಾಪರೋಕ್ಷಂ ತದ್ದಾರ್ಢ್ಯಂ ಚ ಆಪ್ಯ ತತ್ತತ್ಪದಾರ್ಹಗಣೇಷು ಆಗತ್ಯ ಉಕ್ತಮಹಾಕಲ್ಪಸಾಧನೇ ಯೋಗ್ಯಾನಾಂ ಪದಪ್ರಾಪ್ತಿಃ ಇತಿ ನಿಷ್ಕರ್ಷಃ ॥ ೪೨ ॥

## ಕನ್ನಡಾರ್ಥ

ಹಿಂದಿನ ಪದ್ಯಗಳಿಂದ ಋಜುಗಳ ಸಾಧನವನ್ನು ಹೇಳಿ, ಅವರಿಗಿಂತ ಕಡಮೆಯುವರಾದ ಶಿವ ಮುಂತಾದವರ ಸಾಧನವನ್ನು 'ಪಾದನ್ಯೂನ' ಈ ಪದ್ಯದಿಂದ ಹೇಳುತ್ತಾರೆ. ನೂರು ವರ್ಷಗಳಲ್ಲಿ ಮಾಡಿದ ಸರಿಯಾಗಿ ನಾಲ್ಕು ಭಾಗಗಳಲ್ಲಿ ಒಂದು ಭಾಗವು ೨೫. ಅದರಿಂದ ಕಡಿಮೆಯಾಗಿರುವುದು ಅಂದರೆ-ಒಂದೂವರೆ ಪರಾರ್ಧ ಮೇಲೆ ೭೫ ವರ್ಷಗಳೆಂದು ಅರ್ಥ. 'ಓದಿ'-ಓದಿದ ಅನಂತರ, 'ಸಾಮಾನ್ಯವಾದ ಅಪರೋಕ್ಷವಿದ್ದರೂ ಸಹ' ಎಂದು ಯೋಜಿಸಬೇಕು. ಮತ್ತು 'ದಶಕಲ್ಪ' 'ಅಪರೋಕ್ಷವು ದೃಢವಾಗುವುದರ ಸಲುವಾಗಿ' ಎಂದೂ ಅಧ್ಯಾಹರಿಸಬೇಕು.

'ಆರೈದು ನವ' (೯೯) ಈ ಕಲ್ಪಗಳು ಮುಗಿದ ಅನಂತರ ಶೇಷ ಪದವಿಗೆ ೪೦ ಬ್ರಹ್ಮಕಲ್ಪಗಳಿಂದ ಸಾಧನ.

ಆಯಾ ಗಣದ ದೇವತೆಗಳು ರಾಶಿರಾಶಿಯಾಗಿರುತ್ತಾರೆ. ಅವರು ಹಿಂದೆ ಹೇಳಿದ ಕಾಲಗಳಲ್ಲಿ ಸಾಧನಾಪರೋಕ್ಷ ಅದರ ದಾರ್ಢ್ಯ ಇವುಗಳನ್ನು ಹೊಂದಿ ಆ ಪದವಿಗೆ ಅರ್ಹರಾದ ದೇವಗಣಗಳಲ್ಲಿ ಪ್ರವೇಶಿಸಿ, ಹಿಂದೆ ಹೇಳಿದ ಮಹಾಕಲ್ಪ ಸಾಧನವಾದ ಅನಂತರ ಆಯಾ ಪದಯೋಗ್ಯರಿಗೆ ಆಯಾ ಪದವಿಗಳು ದೊರೆಯುವವು. ಹೀಗೆ ನಿಷ್ಕರ್ಷ ॥ ೪೨ ॥

**ಅವತರಣಿಕಾ** :—ಹಿಂದಿನ ಪದ್ಯದಲ್ಲಿ ರುದ್ರದೇವರ ಸಾಧನ ಹೇಳಿ ಈ ಪದ್ಯದಿಂದ ಇಂದ್ರದೇವರು ಮತ್ತು ಕಾಮದೇವರ ಸಾಧನವನ್ನು ಹೇಳುತ್ತಾರೆ.

**ಇಂದ್ರನುನು ದಶಕಲ್ಪಗಳಲಿ ಸು- ।**
**ನಂದ ನಾಮದಿ ಶ್ರವಣಗೈದು ಮು- ।**
**ಕುಂದನಪರೋಕ್ಷಾರ್ಥ ನಾಲ್ಕು ಸುಕಲ್ಪ ತಪವಿದರ್ಧ ॥**
**ನೊಂದು ಪೊಗೆಯೊಳು ಕೋಟಿ ವರುಷ ಪು- ।**
**ರಂದರನು ಅದನುಂಡ ನಂತರ ।**
**ಪೊಂದಿದನು ನಿಜಲೋಕ ಸುರಪತಿ ಕಾಮನಿದರಂತೆ ॥ ೪೩ ॥**

**ಪದ್ಯಾರ್ಥ :** — ಇಂದ್ರ=ಇಂದ್ರದೇವರು, ಮನುದಶಕಲ್ಪಗಳಲ್ಲಿ= ಬ್ರಹ್ಮದೇವರ ಒಂದು ಹಗಲಿಗೆ ೧೪ ಮಂದಿ ಮನುಗಳು ಮನುಪದವಿಯನ್ನು ಆಳುತ್ತಾರೆ. ಇಂತಹ ಮನುದಶಕಲ್ಪಗಳಲಿ=ಪತ್ತು ಮನುಕಲ್ಪಗಳಲ್ಲಿ, ಸುನಂದನಾಮದಿ=ಸುನಂದ ಎಂಬೋ ನಾಮದಿಂದ, ಶ್ರವಣಗೈದು=ತಮ್ಮ ನಿಯತ ಗುರುಗಳಾದ ರುದ್ರದೇವರಲ್ಲಿ ಭಗವಂತನ ಗುಣಾತಿಶಯಗಳನ್ನು ಭಕ್ತಿಯಿಂದ ಕೇಳಿದ ನಂತರದಲ್ಲಿ, ಮುಕುಂದನಪರೋಕ್ಷಾರ್ಥ=ಮುಕ್ತಿ ಪ್ರದಾತನಾದ ಮುಕುಂದನಾಮ ಶ್ರೀಹರಿಯ ಬಿಂಬಾಪರೋಕ್ಷ ಸ್ವಯೋಗ್ಯ ಪೂರ್ಣವಾಗಿ ಬಿಂಬಪ್ರಕಾರ ವೃದ್ಧಿಗೈಯ್ಯಲು, ನಾಲ್ಕು ಸುಕಲ್ಪ ತಪ ವಿದರ್=ನಾಲ್ಕು ಮನುಕಲ್ಪದಲ್ಲೇ ತಪಸ್ಸುಮಾಡಿದನಂತರ ನೊಂದು ಪೊಗೆಯೊಳು ಕೋಟಿವರುಷ=ದೇವಮಾನದಿಂದ ಒಂದು ಕೋಟಿ ವರುಷ ಹೊಗೆಯಲ್ಲಿ ಕುಳಿತು, ತಪಸ್ಸುಮಾಡಿ ನೊಂದು, ಇಂತಹ ಕಷ್ಟತರವಾದ ಧೂಮ್ರಪಾನಗೈದು ತಪಸ್ಸುಮುಗಿದ ಮೇಲೆ ಅದನುಂಡನಂತರ=ಪೊಗೆ ಯನ್ನು ಪಾನಮಾಡಿದನಂತರ, ಪ್ರಾರಬ್ಧ ಭೋಗಾನಂತರ ಪೊಂದಿದನು ನಿಜಲೋಕ=ಜ್ಞಾನಸಾಧನವಾದ ಮಹರಾದಿಲೋಕದಿ ಒಂದಂಶದಿಂದ, ಸುರಪತಿ=ದೇವತೆಗಳ ಒಡೆಯನು ಮಹರ್ಲೋಕವನ್ನು ಹೊಂದಿದನು. (ಬ್ರಹ್ಮಣಾ ಸಹ ವಿರಜಾನದಿ ಸ್ನಾನ ಪರಿಯಂತ) ಕಾಮನದರಂತೆ=ಕಾಮ ದೇವರ ಸಾಧನವೂ ಇಂದ್ರದೇವರಂತೇ ತಿಳಿಯಬೇಕು. ಇಂದ್ರ, ಕಾಮ ರಿಗೆ ೨೦ ಬ್ರಹ್ಮಕಲ್ಪ ಅಪರೋಕ್ಷಾರ್ಥ ಸಾಧನ, ೨೦ ಬ್ರಹ್ಮಕಲ್ಪ ಪ್ರಾರಬ್ಧ ಭೋಗಸಾಧನ ಒಟ್ಟಿಗೆ ೪೦ ಬ್ರಹ್ಮಕಲ್ಪದಲ್ಲಿ ಸಾಧನ.

**ಭಾವಸೂಚನ :** — ಕೋಟೀತಿ ‖ ಶಕ್ರೇಣ ವರ್ಷಕೋಟಿಶ್ಚ ಧೂಮಃ ಪೀತೋತಿದುಃಖಿತ ಇತಿ ವಚನಾತ್ ‖ ೪೩ ‖

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಇಂದ್ರ' ಇತಿ ‖ "ದಶಮನುಕಲ್ಪೇಷು" ಸುಕಲ್ಪಮನೋಃ ‖ ೪೩ ‖

**ಕನ್ನಡಾರ್ಥ**

"ಮನುದಶಕಲ್ಪಗಳಲ್ಲಿ" ಎಂಬ ಪದದಲ್ಲಿ ದಶಮನುಕಲ್ಪಗಳಲ್ಲಿ

ಎಂಬುದಾಗಿ ವಿಸಿಮುಯಮಾಡಿ, ಹತ್ತು ಮನುಕಲ್ಪ (ಮನ್ವಂತರ) ಗಳಲ್ಲಿ ಎಂದು ಅರ್ಥಮಾಡಬೇಕು. ಅದರಂತೆ ಮುಂದಿನ 'ಸುಕಲ್ಪ' ಈ ಪದಕ್ಕೆ ಮನುಕಲ್ಪಗಳೆಂದು ಅರ್ಥ ಹೇಳಬೇಕು. ॥ ೪೩ ॥

**ಅವತರಣಿಕಾ :—** ಇನ್ನು ಚಂದ್ರ ಸೂರ್ಯಾದಿಗಳು ತಾತ್ವಿಕ ಸಾಮಾನ್ಯಾಪರೋಕ್ಷಿಗಳಾದರೂ ತಮ್ಮ ಸ್ವಬಿಂಬ ಪ್ರಕಾಶಕ ಪ್ರಕಾಂತಿ ಅಭಿವೃದ್ಧಿ ಬಿಂಬದರ್ಶನಗೋಸುಗ ಸಾಧನಗೈದ ವಿಚಾರವನ್ನು ಈ ಪದ್ಯದಲ್ಲಿ ಹೇಳುತ್ತಾರೆ.

**ಕರೆಸುವರು ಪೂರ್ವದಲಿ ಚಂದ್ರಾ- ।**
**ರ್ಕರತಿ ಶಾಂತ ಸುರೂಪ ನಾಮದಿ ।**
**ಎರಡೆರಡು ಮನುಕಲ್ಪ ಶ್ರವಣವ ಗೈದು ಮನುಕಲ್ಪ ॥**
**ವರ ತಪೋಬಲದಿಂದ ಅವಾರ್ಕ ।**
**ಕ್ಷಿರಗಳಾಗೀರೈದು ಸಾವಿರ ।**
**ವರುಷ ದುಃಖವ ನೀಗಿ ಕಾಂಬರು ಬಿಂಬರೂಪವನು ॥ ೪೪ ॥**

**ಪದ್ಯಾರ್ಥ :—** ಪೂರ್ವದಲಿ=ತಮ್ಮ ಸಾಧನಮಾಡತಕ್ಕ ಹಿಂದಿನ ಕಲ್ಪಗಳಲ್ಲಿ, ಚಂದ್ರ=ಚಂದ್ರದೇವರು, ಅರ್ಕ=ಸೂರ್ಯದೇವರು, ಚಂದ್ರನು ಅತಿಶಾಂತ = (ಬಹು ಶೀತಲ) ಅತಿಶಾಂತ ಹೆಸರುಳ್ಳವ ಸೂರ್ಯನು, ಸುರೂಪ=ಸಮೀಚೀನ ದೇಹಕಾಂತಿಯುಳ್ಳವನಾದುದರಿಂದ ಸುರೂಪ ವೆಂಬ, ನಾಮದಿ=ಹೆಸರಿನಿಂದ ಕರೆಸುತ್ತಾರೆ. ಎರಡೆರಡು ಮನುಕಲ್ಪ ಶ್ರವಣವ ಗೈದು=೨×೨=ನಾಲ್ಕು ಮನುಕಲ್ಪಗಳಲ್ಲಿ ಶ್ರೀಹರಿಯ ಜ್ಞಾನಾನಂದ ಗುಣಾತಿಶಯಗಳನು ನಿಯತ ಗುರುಗಳಾದ ಉಗ್ರತಪನಾಮ ರುದ್ರದೇವರಲ್ಲಿ ಶ್ರವಣವಗೈದು=ಆದರ ಭಕ್ತ್ಯಾದಿಗಳಿಂದ ಕೇಳಿ ಮನನಮಾಡಿ, ನಂತರ ಐದು ಮನುಕಲ್ಪ=ಐದು ೫ ಮನುಕಲ್ಪಗಳಲ್ಲಿ ಶ್ರವಣವಾದದ್ದು ಮನನ ಮಾಡುವಗೋಸುಗ ಐದು ಮನುಕಲ್ಪಗಳಲ್ಲಿ ತಪಸ್ಸು ಮಾಡಿ, ಪುನಃ ಇದು ದಾರ್ಢ್ಯಾರ್ಥವಾಗಿ, ಈರೈದು ಸಾವಿರ ವರುಷ=ಈರ=೨- ಐದು ೨×೧೦=ಹತ್ತು ಸಾವಿರ ವರುಷ ಅವಾರ್ಕ್ ಶಿರಗಳಾಗಿ ತಪೋಬಲದಿ

(ಪುನರಾವರ್ತನ) ತಲೆಕೆಳಗಾಗಿ ೧೦ ಸಾವಿರ ವರ್ಷ ತಪಸ್ಸುಗೈದು, ದುಃಖವನೀಗಿ ಕಾಂಬರು ಬಿಂಬರೂಪವನು=ತಲೆಕೆಳಗೆ ಮಾಡಿ ತಪಸ್ಸು ಮಾಡುವುದು ಕಷ್ಟತರವಾದ ತಪಸ್ಸಿನಿಂದ ದುಃಖವನೀಗಿ=ಸಂಚಿತಾಗಾಮಿ ಕರ್ಮರೂಪ ದುಃಖ ಕಳೆದುಕೊಂಡು ಕಾಂಬರು ಬಿಂಬರೂಪವನು= ಸಾಮಾನ್ಯಾಪರೋಕ್ಷಿಗಳಾದರೂ (೧೦) ಹತ್ತು ಬ್ರಹ್ಮಕಲ್ಪದಲ್ಲಿ ಸಾಧನಾಪ ರೋಕ್ಷಾನಂತರ ಮುಂದೆ ಹತ್ತು ಕಲ್ಪ ಪ್ರಾರಬ್ಧ ಭೋಗ ಹೀಗೆ ಚಂದ್ರ ಸೂರ್ಯಾದಿಗಳಿಗೆ ೨೦ ಬ್ರಹ್ಮಕಲ್ಪ ಒಟ್ಟಿಗೆ ಸಾಧನ.

**ಭಾವಸೂಚನ** :—ಕರೆಸುವರೇತಿ ॥ ವರ್ಷಾಯುತಂ ತು ಸೂರ್ಯೇಣ ತಪ್ತೋSರ್ವಾಕ್ ಶಿರಸಾ ಕೃತಮಿತಿ ॥ ಸೂರ್ಯಾಚಂದ್ರಮಸೋಶ್ಚೈವ ಪದಯೋಗ್ಯಂ ಸುತೇಜಸೌ ॥ ಸ್ವರೂಪ ಶಾಂತ ರೂಪಶ್ಚ ಮನ್ವಂತರ ಚತುಷ್ಟಯಮ್ ॥ ಶೃಣ್ವತಾಂ ಸುಮನಸಾಂ ಮನ್ವಂತರಂ ಉಪಾ ಸತಾಮ್ ॥ ತತಃ ಪ್ರೋಕ್ತಾಸ್ತು ತೇ ಸರ್ವೇ ಭಕ್ತ್ಯೋಗ್ರ ತಪ ಆದಯುಃ॥ ಅಪಶ್ಯನ್ ಪರಮಂ ವಿಷ್ಣುಂ ತತ್ಪ್ರಸಾದೈಧಿತಾಃ ಸದೇತಿ ತತ್ವೇ ವಿಷ್ಣು ವಚನಮ್ ॥ ೪೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಕರೆಸುವನು' ಇತಿ ॥ 'ಎರಡೆರಡು' ನಾಲ್ಕು (೪) ॥ ೪೪ ॥

## ಕನ್ನಡಾರ್ಥ

ಈ ಪದ್ಯದಲ್ಲಿ 'ಎರಡೆರಡು' ಎಂಬ ಪದಕ್ಕೆ 'ನಾಲ್ಕು' ಎಂದು ಅರ್ಥ. ॥ ೪೪ ॥

**ಅವತರಣಿಕಾ** :—ಅಪರೋಕ್ಷಾರ್ಥವಾಗಿ ತಮ್ಮ ತಮ್ಮ ಕ್ಲೃಪ್ತ ಅರ್ಧ ಕಲ್ಪಗಳ ಸಾಧನ ಆದಮೇಲೆ ಅಪರೋಕ್ಷ, ಪುನಃ ಕ್ಲೃಪ್ತ ಕಲ್ಪಗಳ ಸಾಧನ ಪ್ರಾರಬ್ಧ ಭೋಗ ನಂತರ ಮುಕ್ತಿ ರುದ್ರಾದಿಗಳಿಂದ ಗುರುದಕ್ಷಾದಿ ಗಳವರೆಗೆ ಪೇಳುತ್ತಾರೆ.

**ಸಾಧನಗಳಪರೋಕ್ಷ ನಂತರ।**
**ಐದುವರು ಮೋಕ್ಷವನು ಶಿವ ಶ- ।**
**ಕ್ರಾದಿ ದಿವಿಜರು ಉಕ್ತಕ್ರಮದಿಂ ಕಲ್ಪ ಸಂಖ್ಯೆಯಲಿ ॥**
**ಐದಲೆಗೆ ಐವತ್ತುಪೇಂದ್ರ ಸ- ।**
**ಹೋದರನಿಗಿಪ್ಪತ್ತು ದ್ವಿನವ ತ್ವ- ।**
**ಗಾಧಿಪತಿ ಪ್ರಾಣನಿಗೆ ಗುರು ಮನುಗಳಿಗೆ ಷೋಡಶವು ॥೪೫॥**

**ಪದ್ಯಾರ್ಥ** :–ಸಾಧನಗಳಪರೋಕ್ಷಾನಂತರ=ಅಪರೋಕ್ಷವಾಗಲಿಕ್ಕೆ ಯೋಗ್ಯವಾದ ಕಲ್ಪಸಾಧನಗಳ ಮಾಡಿದನಂತರ, ಅಪರೋಕ್ಷವಾದಮೇಲೆ ಪುನಃ ಅಷ್ಟೇ ಕಲ್ಪ ಪ್ರಾರಬ್ಧ ಭೋಗವನ್ನು ತೀರಿಸುತ್ತ, ಮೋಕ್ಷವನ್ನು ಐದುವರು=ಮುಕ್ತಿಯನ್ನು ಕುರಿತು ಹೋಗುವರು. ಮುಕ್ತರಾಗುವರು. ಶಿವ=ಮಂಗಳಕರನಾದ ಶ್ರೀಹರಿಯ ಭಕ್ತ "ವೈಷ್ಣವಾನಾಂ ಯಥಾ ಶಂಭುಃ" ಎನ್ನುವಂತೆ ಮಂಗಳಪ್ರದನಾದ ರುದ್ರದೇವರು, ಶಕ್ರಾದಿ ದಿವಿಜರು= ಇಂದ್ರನೇ ಮೊದಲಾದ ದೇವತೆಗಳು, ಉಕ್ತಕ್ರಮದಿಂ=ಮುಂದೆ ಹೇಳುವಂತೆ ಕಲ್ಪಸಂಖ್ಯೆಯಲಿ=ಯಾರ್ಯಾರಿಗೆ ಎಷ್ಟೆಷ್ಟು ಕಲ್ಪಗಳು ಎಂಬುವುದು ಎಣಿಕೆ ಇದೆಯೋ ಅದನ್ನು ಹೇಳುತ್ತಾರೆ. **ಐದಲೆಗೆ ಐವತ್ತು**=ಐದು ತಲೆಯುಳ್ಳ **ಮಹಾರುದ್ರದೇವರಿಗೆ** ಶೇಷಪದದಿಂದ ಮುಕ್ತಿ. ಇವರಿಗೆ **೫೦ ಕಲ್ಪ ಅಪರೋಕ್ಷ ವೃದ್ಧಿ** ಗೋಸುಗ ಸಾಧನ ನಂತರ ಪ್ರಾರಬ್ಧ ಭೋಗ ಅನು ಭೋಕ್ತವ್ಯ ಸಾಧನ ೫೦ ಕಲ್ಪ. ಹೀಗೆ ನೂರು ಬ್ರಹ್ಮಕಲ್ಪಗಳಲ್ಲಿ ಸಾಧನ, **ಉಪೇಂದ್ರ** ಸಹೋದರನಿಗಿಪ್ಪತ್ತು=ದಿತಿಯಲ್ಲಿ ಅವತರಿಸಿದ ಉಪೇಂದ್ರ **ನಾ**ಮಕ ಹರಿಯ ಒಡಹುಟ್ಟಿದ ಇಂದ್ರದೇವರಿಗೆ ಮೇಲಿನ ಕ್ರಮದಂತೆ ೨೦+೨೦=೪೦ ಕಲ್ಪಗಳು. ತ್ವಗಾಧಿಪತಿ=ತ್ವಕ್ ತತ್ವಾಭಿಮಾನಿ ಪ್ರಾಣ ನಿಗೆ=ಅಹಂಕಾರ ಪ್ರಾಣದೇವರಿಗೆ, ದ್ವಿನವ=೨×೯=೧೮+೧೮=೩೬ ಕಲ್ಪ. **ಗುರುಮನುಗಳಿಗೆ** ಷೋಡಶವು= (೧) ಬೃಹಸ್ಪತ್ಯಾಚಾರ್ಯರು, (೨) ಸ್ವಾಯಂಭುವ ಮನು, (೩) ದಕ್ಷಪ್ರಜೇಶ್ವರ, (೪) ಕಾಮಪುತ್ರ ಅನಿರುದ್ಧ, (೫) ಶಚಿ–ಇಂದ್ರದೇವರ ಪತ್ನಿ, (೬) ರತಿ–ಕಾಮಭಾರ್ಯಾ ರತಿದೇವಿ ಈ ಆರು ಜನರಿಗೆ ಸಾಧನ, ಷೋಡಶವು ೧೬+೧೬=೩೨ ಕಲ್ಪ ಗಳಲ್ಲಿ ಸಾಧನ ಬ್ರಹ್ಮಕಲ್ಪಗಳ ಕ್ಲೃಪ್ತವಿದೆ.

**ಭಾವಸೂಚನ** :—ಐದಲೆ ಐದು ತಲೆಯ ರುದ್ರಗೆ ೫೦ ಬ್ರಹ್ಮಕಲ್ಪ॥ ದೇವತೆಗಳಿಗೆ ಸ್ವೋತ್ತಮ ಪ್ರವೇಶ ರೂಪ, ಮೋಕ್ಷಕ್ಕೆ ಕರ್ಮಕ್ಷಯ ಕಾಲ ॥ ಇಂದ್ರಸ್ಯಾರ್ಕಾದಿಕೇ ಪಶೇತಿ ಅನುವ್ಯಾಖ್ಯಾನದಲ್ಲಿ ಹೇಳಿದರು। ಶ್ರೀದಾಸರು ಆದಿ ಪದಾರ್ಥ ವಿವರಣಮಾಡುತ್ತಾರೆ ॥ ಉಪೇಂದ್ರೇತಿ ॥ ಇಂದ್ರ ॥ ೪೫ ॥

**ವಿಶೇಷ ಸೂಚನೆ** :—ಶ್ರೀ ವಿಜಯದಾಸರ ತಾರತಮ್ಯ ಸುಳಾದಿ ೧೨, ಪುಟ ೫೪, ಆದಿತಾಳದಲ್ಲಿ ಗರುಡ ಶೇಷ ರುದ್ರಾದಿಗಳ ಸಾಧನ ಕಲ್ಪ ಗಳು ಹೇಳಿದ್ದಾರೆ.

"ಗರುಡಾದಿಗಳಿಗೆ ಐವತ್ತು ಇಂದ್ರ ಜೀವರಿಗಿಪ್ಪತ್ತು ।
ಮರುತ ಅಹಂಕಾರ ಹದಿನೆಂಟು ಅನಿರುದ್ಧ ದಕ್ಷಾ ।
ದ್ಯರು ಗುರು ಮನು ಶಚಿ ರತಿಗೆರಡೆಂಟು ।
ಮರುತ ದ್ವಾದಶ ಹತ್ತು ಸೂರ್ಯ ಚಂದ್ರಾದ್ಯರು ।
ವರುಣ ನಾರದವಿಡಿದು ಮಿತ್ರರಿಗೆ ಒಂಭತ್ತು ।
ಎರಡೆರಡು ನಾಲ್ಕು (೮) ಉಕ್ತಶೇಷರಿಗೆ ನಿಜವೆನ್ನಿ ।
ಮರಳಿ ಸನಕಾದಿಗಳಿಗೆ ಸಪ್ತ ಪರ್ಜನ್ಯ ಪು ।
ಷ್ಕರ ತನಕ ಆರು ಕರ್ಮದೇವತೆಗಳಿಗೈದು ।
ಅರಿವುದು ಆಜಾನುಜ ದೇವರು ಗೋಪಿಕಾ ಸ್ತ್ರೀಯರು ಚಿರಪಿತೃ ।
ಸುರ ಗಂಧರ್ವ ಮೂರರ್ಧ ಮೂರೆರಡು ।
ಅರಿವುದು ನರಗಂಧರ್ವ ಮನುಜೋತ್ತಮ ತೃಣಾಂತವಾಗಿ ಇನಿತು
ಪರಿಮಿತಿಯುಂಟು ಒಂದು ಪಾದೋನ ಪಾದಾರ್ಧವು ।
ಪರಮೇಷ್ಠಿ ಮಾನದಿಂದ ತಿಳಿವುದು ತೃಣಾಂತಕೆ ।
ತರತಮ್ಯ ಅಪರೋಕ್ಷ ಚರಮದೇಹ ಪರಿಯಂತ ।
ಪರಮ ಪುರುಷ ಹರಿ ವಿಜಯ ವಿಠಲರೇಯ ।
ಕರುಣಾಂಬುಧಿ ಇಂತು ಮುಕುತಿ ಮಾರ್ಗವ ಕೊಡುವ ॥ ೭ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಸಾಧನ' ಇತಿ ॥ ಸಾಧನಾನಿ ತದುತ್ತರಮಪರೋಕ್ಷಃ ಇತಿ

ಯೋಜ್ಯಮ್ ॥ ಪ್ರಮಾಣಂ ತು "ಬಹ್ವಪ್ರೋಗ್ರತಪಾ ನಾಮ" ಇತ್ಯಾರಭ್ಯ 'ಇತಿ ಸಾದರಂ' ಇತ್ಯಂತಾನುವ್ಯಾಖ್ಯಾನಮ್ ॥ ಇತಿ ಸಿದ್ಧೇಃ ಸಾಮಾನ್ಯ ವಿಶೇಷಾಪರೋಕ್ಷ ಕಾಲೈಕ್ಯ ವಿವಕ್ಷಯಾ ಕಲ್ಪಸಂಖ್ಯಾಂ ಆಹ 'ಐದಲೆ' ಇತಿ ॥ ರುದ್ರಃ । ಸಹೋದರಃ ಇಂದ್ರಃ ॥ 'ತ್ರಿಗಾಧಿಪತಿ ಅಹಂಕಾರಿಕಃ ॥ ಇದಂ ಉಕ್ತಂ ಭವತಿ ॥ ಬ್ರಹ್ಮಣಃ ೨೦೦ ಮಹಾಕಲ್ಪಾಃ ॥ ರುದ್ರಸ್ಯ ೧೦೦ ॥ ಇಂದ್ರ ಕಾಮಯೋಃ ೨೦ ॥ ಅಹಂ ಪ್ರಾಣಸ್ಯ ೧೮ ॥ ಬೃಹಸ್ಪತ್ಯಾದೇಃ ೧೬ ॥ ಪ್ರವಹಸ್ಯ ೧೨ ॥ ಸೂರ್ಯಾದೇಃ ೧೦ ॥ ಮಿತ್ರಸ್ಯ ೯ ॥ ಉಕ್ತಶೇಷಸ್ಯ ೮ ॥ ಸನಕಾದಿತ್ರಯಸ್ಯ ೭ ॥ ಪರ್ಜನ್ಯಾದಿ ಪುಷ್ಕರಾಂತಸ್ಯ ೬ ॥ ಕರ್ಮಜಾನಾಂ ೫ ॥ ಆಜಾನಜಾನಾಂ ೪ ॥ ಗೋಪೀನಾಂ ೩ ॥ ಉಭಯ ಗಂಧರ್ವಾಣಾಂ ೨ ॥ ರಾಜಮನುಷ್ಯೋತ್ತಮಯೋಃ ೧ ॥ ತೃಣಾಂತಾನಾಂ ಅರ್ಧಮಿತ್ಯರ್ಥಃ ॥ ಪೂರ್ವಮಪರೋಕ್ಷಾರ್ಥಂ ಉಕ್ತಕಲ್ಪೇಷು ಸಾಧನಮ್ ॥ ಯಥಾ ಅವಿರೋಧಃ ತಥೋಕ್ತಂ ಅಧಸ್ತಾತ್ ॥ "ದ್ವಿಪಂಚಾಶತ್‌ಕಲ್ಪಮಿತಾಃ ಶೇಷಾದ್ಯಾಃ ॥" "ಶೇಷಾದ್ಯಾಸ್ತು ಸಭಾರ್ಯಕಾಃ ॥" "ವಿಂಶಕಲ್ಪ ಮಿತಾಸ್ತ್ವಿಂದ್ರಜೀವಾ ದ್ವಿನವಕಲ್ಪಕಾಃ ॥" ಅಹಂ ಪ್ರಾಣಪದಾರ್ಹಾಶ್ಚ ಗುರ್ವಾದ್ಯಾಃ ದ್ವ್ಯಷ್ಟಕಾಕಲ್ಪಕಾಃ ॥ ಪ್ರವಹಸ್ತು ದ್ವಿಷಟ್‌ಕಲ್ಪೈಃ ಸೂರ್ಯಾದ್ಯಾಃ ದಶಕಲ್ಪಕಾಃ ॥ ಮಿತ್ರಾದೀನಾಂ ಚ ನವಭಿಃ ತೂಕ್ತಶೇಷಗಣಸ್ಯ ತು ॥ ಅಷ್ಟಭಿಃ ಸಪ್ತಭಿಃ ಕಲ್ಪೈಃ ಸನಕಾದಿಗಣಸ್ಯ ಚ ॥ ಷಡ್ಭಿಃ ಪರ್ಜನ್ಯಮಾರಭ್ಯ ಪುಷ್ಕರಾಂತಗಣಸ್ಯ ವೈ ॥ ಅಪರೋಕ್ಷ(ಃ)? ಕರ್ಮದೇವಾಃ ಪಂಚಕಲ್ಪಾಪರೋಕ್ಷಿಣಃ ॥ ಚತುರ್ಭೀ ರಾಜರಾಜಾನಾಂ ಅರ್ಧ ಕಲ್ಪತ್ರಯೇಣ ತು ॥ ಕೃಷ್ಣಾಂಗಸಂಗ ಗೋಪೀನಾಂ ತ್ರಿಭಿಃ ಪಿತೃಗಣಸ್ಯ ತು ॥ ಗಂಧರ್ವಾಣಾಂ ತು ಕಲ್ಪಾಭ್ಯಾಂ ಮರ್ತ್ಯೋರ್ವೇಚ್ಚಾನಾಂ ತಥೈಕತಾ ॥ ಅರ್ಧಕಲ್ಪಾಃ ತೃಣಾಂತಾನಾಂ ಯೋಗ್ಯಾನಾಂ ಹರಿದರ್ಶನೇ ॥ ನಿಯಮೋಯಂ ಸರ್ವಕಲ್ಪೇಷ್ವೇವಮೇವ ನ ಚಾನ್ಯಥಾ ॥ ಕಲ್ಪಸಂಖ್ಯಾ ಬ್ರಹ್ಮಮಾನಾತ್ ವಿಜ್ಞೇಯಾ ಯೋಗ್ಯಜೀತಸ್ತೈಃ ॥ ಪ್ರೋಕ್ತೈಃ ಕಲ್ಪೈಃ ವಿಮುಚ್ಯಂತೇ ತಾವತ್ ಕಲ್ಪೈಸ್ತು ಸಾಧನಮ್ ॥ ತತ್ಪೂರ್ವಮಪರೋಕ್ಷಸ್ಯ ಕರ್ತವ್ಯಮಿತಿ ನಿಶ್ಚಯಃ ॥ ಇತಿ ಪ್ರಕಾಶಸಂಹಿತಾಯಾಂ ॥ ಬ್ರಹ್ಮಣಸ್ತ್ವೇವ ತಾವತ್ತ್ವಮ್" ಇತ್ಯಾದಿ ಚ ॥ ೪೫ ॥

## ಕನ್ನಡಾರ್ಥ

"ಸಾಧನಗಳ ಪರೋಕ್ಷ ನಂತರ" ಇಲ್ಲಿ "ಸಾಧನಗಳು, ಅನಂತರ ಅಪರೋಕ್ಷ" ಹೀಗೆ ಯೋಜಿಸಬೇಕು.

"ಶುಶ್ರೂವೋಗ್ರತಪಾ ನಾಮ" ಇಲ್ಲಿಂದ 'ಇತಿ ಸಾವರಂ' ಇಲ್ಲಿಯ ವರೆಗೆ ಇರುವ ಅನುವ್ಯಾಖ್ಯಾನವು ಇದರಲ್ಲಿ ಪ್ರಮಾಣ. ಸಾಮಾನ್ಯ ಅಪರೋಕ್ಷ ವಿಶೇಷಾಪರೋಕ್ಷ ಇವುಗಳ ಕಾಲಗಳನ್ನು ಎರಡೂ ಒಂದೇ ಕಾಲವೆಂಬ ಪರಿಗಣನೆಯಿಂದ ಕಲ್ಪಸಂಖ್ಯಾವನ್ನು 'ಐದಲ'ವೆಂಬ ಉತ್ತರಾರ್ಧದಿಂದ ತಿಳಿಸುತ್ತಾರೆ.

'ಐದಲೆ'-ರುದ್ರ. 'ಉಪೇಂದ್ರ ಸಹೋದರ'-ಇಂದ್ರ.

ಇಲ್ಲಿ ಹೇಳಿರುವ ಕಲ್ಪಸಂಖ್ಯೆಗಳ ವಿವರ-ಬ್ರಹ್ಮದೇವರಿಗೆ ೨೦೦ ಮಹಾಕಲ್ಪ, ರುದ್ರದೇವರಿಗೆ ೧೦೦. ಇಂದ್ರಕಾಮರಿಗೆ ೨೦. ಆಹಂಕಾರಿಕ ಪ್ರಾಣ ೧೮. ಬೃಹಸ್ಪತ್ಯಾದಿಗಳಿಗೆ ೧೫. ಪ್ರವಹನಿಗೆ ೧೨. ಸೂರ್ಯಾದಿಗಳಿಗೆ ೧೦. ಮಿತ್ರನಿಗೆ ೯. ಉಕ್ತಶೇಷರಿಗೆ ೮. ಸನಕಾದಿ ಮೂವರಿಗೆ ೭. ಪರ್ಜನ್ಯನಿಂದ ಪುಷ್ಕರನವರೆಗೆ ೬. ಕರ್ಮಜರಿಗೆ ೫. ಆಜಾನಜರಿಗೆ ೪. ಗೋಪಿಕೆಯರಿಗೆ ೩. ಎರಡೂ ತರಹದ ಗಂಧರ್ವರಿಗೆ ೨. ರಾಜರು ಮನುಷ್ಯೋತ್ತಮರಿಗೆ ೧. ತೃಣಾಂತ ಜೀವರಿಗೆ ಅರ್ಧ. ಹೀಗೆ ಕಲ್ಪ ಸಾಧನಗಳ ವಿವರ.

ಅಪರೋಕ್ಷದ ಸಲುವಾಗಿ ಮುಂಚೆ ಸಾಧನ. ಅನಂತರ ಹೆಚ್ಚಿನ ಸಾಧನ. ಇದರಲ್ಲಿ ವಿರೋಧ ಬರದಂತೆ ಕೆಳಗೆ ವರ್ಣಿಸಿರುತ್ತದೆ.

(ವ್ಯಾಸದಾಸ ಸಿದ್ಧಾಂತ ಕೌಮುದಿಯಲ್ಲಿ ತೋರಿಸಿದ ಮೂಲ ಪ್ರಮಾಣ ಶ್ಲೋಕಗಳ ಅರ್ಥ ವಿವರಣ ರೂಪವಾಗಿಯೇ ಕಲ್ಪಸಂಖ್ಯೆಯ ವಿವರವನ್ನು ಬರೆಯಲಾಗಿದೆ. ಆದುದರಿಂದ ಆ ಶ್ಲೋಕಾರ್ಥಗಳನ್ನು ಮತ್ತೆ ಇಲ್ಲಿ ಬರೆಯುವ ಕಾರಣವಿಲ್ಲ. ಶ್ಲೋಕಗಳು ಸುಗಮಗಳಿವೆ. (ಸಂ. ಗೋ:ಹ) || ೪೫, ೪೬, ೪೭ ||

**ಅವತರಣಿಕಾ:**— ಈ ಪದ್ಯದಲ್ಲಿ ಪ್ರವಹಮಾರುತನಾರಂಭಿಸಿ ಪರ್ಜನ್ಯಾದಿ ಪುಷ್ಕರನ ಪರಿಯಂತ ಸಾಧನಕಲ್ಪ ಸಂಖ್ಯೆಗಳನ್ನು ಹಿಂದಿನ ಲೆಕ್ಕದಂತೆ ವಿವರಿಸುತ್ತಾರೆ.

**ಪ್ರವಹ ಮರುತಗೆ ಹನ್ನೆರಡು ಸೈಂ ।**
**ಧವ ದಿವಾಕರ ಧರ್ಮರಿಗೆ ದಶ ।**
**ನವ ಸುಕಲ್ಪವು ಮಿತ್ರರಿಗೆ ಶೇಷಶತ ಜನಕೆಂಟು ॥**
**ಕವಿ ಸನಕ ಸುಸನಂದನ ಸನ ।**
**ತ್ಕುವರ ಮುನಿಗಳಿಗೇಳು ವರುಣನ ।**
**ಯುವತಿ ಪರ್ಜನ್ಯಾದಿ ಪುಷ್ಕರಗಾರು ಕಲ್ಪದಲಿ ॥ ೪೬ ॥**

**ಪದ್ಯಾರ್ಥ:**— ಪ್ರವಹ ಮರುತಗೆ ಹನ್ನೆರಡು=ಪ್ರವಹ ವಾಯು ದೇವರಿಗೆ ೧೨+೧೨=೨೪ ಬ್ರಹ್ಮ ಕಲ್ಪ, ಸೈಂಧವ=ಸಿಂಧುವಿನಲ್ಲಿ ಉತ್ಪನ್ನನಾದ ಚಂದ್ರದೇವ, ದಿವಾಕರ=ಸೂರ್ಯದೇವ, ಧರ್ಮರಿಗೆ=ಯಮಧರ್ಮರಾಜ, ಶತರೂಪಾದೇವಿ ಮನುಪತ್ನಿಯರಿಗೆ, ದಶ=ಹತ್ತು ೧೦+೧೦=೨೦ ಬ್ರಹ್ಮ ಕಲ್ಪಗಳಲ್ಲಿ ಸಾಧನೆ. ನವ ಸುಕಲ್ಪವು ಮಿತ್ರರಿಗೆ ಇನ್ನು ೧೩ ನೇ ಕಕ್ಷ ಆರಂಭಿಸಿ ೧೩ ವರುಣ ದೇವರು ೧೪ ನಾರದರು ೧೫ ಭೃಗು ಋಷಿಗಳು. ಅಗ್ನಿದೇವರು ಪ್ರಸೂತಿ ದೇವಿ ಮೂವರು, ೧೬ ನೇ ಕಕ್ಷದಲ್ಲಿ ಮರೀಚ್ಯಾದಿ ಸಪ್ತ ಋಷಿಗಳು. ವೈವಸ್ವತ ಮನು. ವಿಶ್ವಾಮಿತ್ರ ಋಷಿಗಳು. ಮುಂದೆ ೧೭ ನೇ ಕಕ್ಷದಲ್ಲಿರುವ, ಮಿತ್ರನಾಮಕ ಸೂರ್ಯ ನಿಋತಿ ತಾರಾದೇವಿ ಇಲ್ಲಿಯವರೆಗೆ ಇರುವ ದೇವಗಣಕ್ಕೆ, ನವಸುಕಲ್ಪ=ಒಂಭತ್ತು ಬ್ರಹ್ಮ ಕಲ್ಪ ಅಂದರೆ ಒಟ್ಟು ೯+೯=೧೮ ಕಲ್ಪಸಾಧನ ಶೇಷಶತಜನಕೆಂಟು=ಎಂದು ಹೇಳುವದರಿಂದ ೧೮ ನೇ ಕಕ್ಷದಲ್ಲಿರುವ ಗಣಪ, ಧನಪ ವಿಷ್ವಕ್ಸೇನ ಶೇಷ ಶತಸ್ಥ ೮೫ ಜನರುಗಳಿಗೆ, ಎಂಟುಕಲ್ಪ ಅಂದರೆ ೮+೮=೧೬ ಬ್ರಹ್ಮ ಕಲ್ಪ ಸಾಧನ, ಕವಿ=ಜ್ಞಾನಿಗಳಾದ ಸನಕ ಸುಸನಂದನ ಸನತ್ಕುವರ ಇಲ್ಲಿ ಸನತ್ ಸುಜಾತನೆಂದೆ ಅರ್ಥ ಮಾಡಬೇಕು. (ಸನತ್ಕುಮಾರ ಕಾಮಾಂಶನು) ಈ ಮೂವರಿಗೆ, ಮತ್ತು ಮರೀಚಿ ಪುತ್ರ ವಾಕ, ಚ್ಯವನ ಉಚಿಥ್ಯಾದಿ ಋಷಿಗಳು. ಇಂದ್ರಪುತ್ರ ಜಯಂತ [illegible]ಗಳಿಗೆ. [illegible] ೬+೬=

೧೪ ಬ್ರಹ್ಮಕಲ್ಪ ಸಾಧನ, ೧ ವರುಣನ ಯುವತಿ=ಗಂಗಾ, ಮತ್ತು ಚಂದ್ರ ಯುವತಿ ರೋಹಿಣಿ, ಯಮಭಾರ್ಯಾ ಶಾಮಲಾ ೪ ಸೂರ್ಯಪತ್ನಿ ಸಂಜ್ಞಾ, ಪರ್ಜನ್ಯಾದಿ ೬ ಜನ ಮುಂದೆ ೨೧ ಕಕ್ಷ ಆರಂಭಿಸಿ ೨೬ ನೇ ಕಕ್ಷ ಪರಿಯಂತ ಪುಷ್ಕರನವರೆಗೆ, ಆರು ಕಲ್ಪವಲಿ=೬+೬=೧೨ ಒಟ್ಟಿಗೆ ೧೨ ಕಲ್ಪಸಾಧನವೆಂದು ತಿಳಿಯಬೇಕು.

**ಭಾವಸೂಚನ:**— ॥ ಪ್ರವಹೇತಿ ॥ ಸೈಂಧವ=ಚಂದ್ರ, ಕುವರ= ಕುಮಾರ । ೪೬ ॥ ವ್ಯಾ. ದಾಸ. ಸಿ. ಕೌ ॥ ಪ್ರವಹ ಇತಿ ಸನತ್‌ಕುವರ ಸನತ್‌ಸುಜಾತ ॥ ೪೬ ॥

**ಅವತರಣಿಕಾ:**—ಕರ್ಮಜ ದೇವತೆಗಳಾರಂಭಿಸಿ ಮನುಷ್ಯೋತ್ತ ಮಾದಿ ತೃಣಾಂತ ಜೀವದ ಸಾಧನ ಕಲ್ಪಗಳನ್ನು ವಿವರಿಸುತ್ತಾರೆ.

**ಐದು ಕರ್ಮಜ ಸುರರಿಗಾಜಾ ।**
**ನಾದಿಗಳಿಗೆರಡೆರಡು ಕಲ್ಪಾ ।**
**ರ್ಧಾದಿ ಕತ್ರಯ ಗೋಪಿಕಾಸ್ತ್ರೀಯರು ಪಿತೃ ತ್ರಯವು ॥**
**ಈದಿ ವೌಕಸ ಮನುಜ ಗಾಯಕ ।**
**ರೈದುವರು ಎರಡೊಂದು ಕಲ್ಪನ ।**
**ರಾಧಿಪರಿಗರೆ ಕಲ್ಪದೊಳಗಪರೋಕ್ಷವಿರುತಿಹುದು ॥ ೪೭ ॥**

**ಪದ್ಯಾರ್ಥ:**— ಐದು ಕರ್ಮಜಸುರರಿಗೆ=ಕರ್ಮಜ ದೇವತೆಗಳಿಗೆ ಐದು ಬ್ರಹ್ಮಕಲ್ಪ ೫+೫=೧೦ ಕಲ್ಪ, ಆಜಾನಾದಿಗಳಿಗೆರಡೆರಡು ಕಲ್ಪ= ಆಜಾನುದೇವತೆಗಳಿಗೆ ೨+೨=೪ ನಾಲ್ಕು ೪+೪=ಒಟ್ಟಿಗೆ ೮ ಕಲ್ಪ, ಅರ್ಧಾಧಿಕತ್ರಯಗೋಪಿಕಾಸ್ತ್ರೀಯರು = ಹದಿನಾರು ಸಾವಿರ ಇತರ ಗೋಪಿಕಾ ಸ್ತ್ರೀಯರಿಗೆ ಮೂರಕ್ಕೆ ಅರ್ಧಹೆಚ್ಚು ಅಂದರೆ ಮೂರುವರೆ ಕಲ್ಪ ೩॥+೩॥ = ಒಟ್ಟಿಗೆ ೭ ಕಲ್ಪ, ಪಿತೃತ್ರಯವು = ಚಿರಪಿತೃಗಳಿಗೆ ಮೂರು ಕಲ್ಪ ೩+೩ = ಆರು ಒಟ್ಟಿಗೆ ಆರು ಕಲ್ಪ ಈದಿವೌಕಸಗಾಯಕ = ಸ್ವರ್ಗದ ಗಾಯಕರಾದ ಗಂಧರ್ವರಿಗೆ ಇಲ್ಲಿ ಶತೋನ ಶತಕೋಟಿ ಋಷಿ

ಗಳು ಸಹ ಬಂದರು. ಎರಡು ಕಲ್ಪ ಅಂದರೆ ಒಟ್ಟಿಗೆ ೨+೨ =೪ ಕಲ್ಪ ಸಾಧನ, ಮನುಜ ಗಾಯಕರಿಗೆ = ನಿರಂಶರಾದ ಮನುಷ್ಯ ಗಂಧರ್ವರಿಗೆ ಒಂದು ಕಲ್ಪ ಅಂದರೆ ೧+೧ = ಒಟ್ಟಿಗೆ ೨ ಕಲ್ಪ ಸಾಧನ, ನರಾಧಿಪರಿಗೆ ಅರೆಕಲ್ಪದೊಳಗ ಪರೋಕ್ಷವಿರುತಿಹದು = ಮನುಜ ರಾಜರುಗಳಿಗೆ ಬ್ರಹ್ಮ ವ್ಮೂನ ಅರ್ಧಕಲ್ಪದಲ್ಲಿ ಅಪರೋಕ್ಷ ಅರ್ಧಕಲ್ಪದಲ್ಲಿ ಪ್ರಾರಬ್ಧ ಕ್ಷಯ = ಈ ಪ್ರಕಾರ ಒಂದು ಕಲ್ಪ ಸಾಧನವೆಂದು ಭಾವ.

ನರಾಧಿಪರೊಳಗೆ ತೃಣ ಜೀವಾಧಿಗಳು ಬಂದರು. ಶ್ರೀ ವಿಜಯ ದಾಸಾರ್ಯರು "ಅರಿವದು ನರಗಂಧರ್ವ ನರೋತ್ತುಮ ತೃಣಾಂತವಾಗಿ ಇನಿತು ॥ ಪರಿಮಿತಿಯುಂಟು ಒಂದು (೧) ಪಾದೋನ (।||.) ಪಾದಾರ್ಧ (||.) ಪಾದ (.|.) ಹೀಗೆ ಇದರಲ್ಲಿ ಪ್ರಭೇದ ಹೇಳಿರುತ್ತಾರೆ. । "ತಾರ ತಮ್ಯ ಅಪರೋಕ್ಷ ಚರಮದೇಹ ಪರಿಯಂತ'' ಎಂದು ಹಿಂದೆ ಪದ್ಯ ೪೫ ವಿಶೇಷ ಸೂಚನೆಯಲ್ಲಿ ಕೊಟ್ಟಿದೆ.

**ಭಾವಸೂಚನೆ:—** ॥ ಐದೇತಿ ॥ ೪೭ ॥

**ಅವತರಣಿಕಾ:—** ಹಿಂದಿನ ಪದ್ಯಗಳಲ್ಲಿ ಹೇಳಿದಂತೆ ಆಯಾಜೀವ ಗಣಕ್ಕೆ ಕ್ಲೃಪ್ತ ಕಲ್ಪಗಳಲ್ಲಿ ಸಾಧನಮಾಡಿಸಿ, ತಾನು ಅನಾದಿಯಿಂದ ಜೀವ ಬಿಂಬನಾಗಿದ್ದರೂ ಸಾಧನ ಪೂರ್ತಿಯಾಗುವವರೆಗೆ ಕಾಣಿಸದೇ ಸಾಧನ ಪೂರ್ತಿನಂತರ ಸ್ವರೂಪಾಪರೋಕ್ಷವನ್ನೀಯುವನೆಂದು ದೀಪಗಳ ದೃಷ್ಟಾಂತದಿಂದ ಹೇಳುತ್ತಾರೆ.

**ದೀಪಗಳನುಸರಿಸಿ ದೀಪ್ತಿಯು ।**
**ವ್ಯಾಪಿಸಿ ಮಹಾ ತಿಮಿರ ಕಳೆದು ಪ ।**
**ರೋಪಕಾರವ ಮಾಳ್ಪ ತೆರದಂದದಲಿ ಪರಮಾತ್ಮ ॥**
**ಆ ಪಯೋಜಾಸನರೊಳಿದ್ದು–ಸ್ವ ।**
**ರೂಪಶಕ್ತಿಯು ವ್ಯಕ್ತಿಗೈಸುತ ।**
**ತಾ ಪೊಳೆವನವರಂತೆ ಚೇಷ್ಟೆಯ ಮಾಡಿ ಮಾಡಿಸುತ ॥ ೪೮ ॥**

**ಪದ್ಯಾರ್ಥ:—** ದೀಪಗಳನನುಸರಿಸಿ ದೀಪ್ತಿಯು = ಸೂರ್ಯನ ಪ್ರಕಾಶಯುಕ್ತ. ಸಣ್ಣ ದೊಡ್ಡದೀಪಗಳಲ್ಲಿ ಇರುವ ಪ್ರಕಾಶವು, ವ್ಯಾಪಿಸಿ= ಬಹಿರದಿ ಪಸರಿಸಿ, ಮಹಾತಿಮಿರ ಕಳೆದು = ಮಹಾ ಕತ್ತಲೆ ರಾತ್ರಿಯಲ್ಲಿ ವ್ಯಾಪಿಸಿರುವ ದೊಡ್ಡ ಕತ್ತಲೆಯನ್ನು ಕಳೆದು, ಜನರಿಗೆ ಪರೋಪಕಾರ ಮಾಳ್ಪ ತೆರದಂದದಲಿ = ಜನರಿಗೆ ಉಪಕಾರವನ್ನು ಮಾಡಿ ಕತ್ತಲೆ ಕಳೆದು ಬೆಳಕು ತಂದಿತ್ತು ಅವರವರ ಕಾರ್ಯನಿರ್ವಹಿಸುವ ತೆರದಂತೆ, ಪರಮಾತ್ಮ= "ಪರಮಶ್ಚಾಸಾವಾತ್ಮಾ ಚೇತಿ ಪರಮಾತ್ಮ" ಅಥ ಕಸ್ಮಾದುಚ್ಯತೇ ಪರಮೇತಿ ॥ ಪರಮಾದ್ದೇತೋರ್ನಾಮರೂಪೇ ವ್ಯಾಕ್ರಿಯೇತೇ ತಸ್ಮಾದೇನಮಾಹುಃ ಪರಮ ಇತ್ಯಗ್ನಿವೇಶ್ಯಸ್ಮೃತಿಃ ॥ ಆನಂದಾನುಭವತ್ವಾಚ್ಚ ನಿರ್ದೋಷತ್ವಾಚ್ಚ ಭಣ್ಯತೇ ॥ ನಿತ್ಯತ್ವಾಚ್ಚ ತಥಾತ್ಮೇತಿ ವೇದವಾದಿಭಿರೀಶ್ವರ ಇತಿ ಬ್ರಹ್ಮತಂತ್ರೇ ॥ ಸದಾ ಆನಂದ ರೂಪನಾಗಿ ಜೀವರಿಗೆ ಆನಂದವನ್ನು ಕೊಡುವನು. ನಿರ್ದೋಷನಾಗಿ ಜೀವರನ್ನು ನಿರ್ದುಃಖರನ್ನು ಮಾಡುವನು. ತಾನು ನಿತ್ಯನಾಗಿ ಸನಾತನನಾಗಿರುವುದರಿಂದ ಜೀವರನ್ನು ನಿರ್ದುಃಖರನ್ನು ಮಾಡಿ, ಲಿಂಗಭಂಗಗೈಸಿ, ತಾನು ಸುಪ್ರಕಾಶನಾಗಿ, ಆನಂದರೂಪದಿಂದ ಪ್ರಕಾಶಿತನಾಗಿ ಜೀವರಿಗೆ ಮುಕ್ತಾನಂದ ಕೊಡುವನಾದುದರಿಂದ ಪರಮಾತ್ಮನೆಂದು ಬಹು ಸಾರ್ಥಕನಾಮಪ್ರಯೋಗ ಮಾಡಿದ ದಾಸಾರ್ಯರ ಮಹೋಪಕಾರ. ಇಂತಹ ಪರಮಾತ್ಮ ಬಿಂಬರೂಪನಾದ ಶ್ರೀಹರಿ. ಆ ಪಯೋಜಾಸನರೊಳಿದ್ದು = ಮುಕ್ತಬ್ರಹ್ಮಾದಿ ದೇವತೆಗಳೊಳಗೆ ಇರುತ್ತಾ ಅವರ ಸ್ವರೂಪ ಶಕ್ತಿಯ ವ್ಯಕ್ತಿಗೈಸುತ = ಆಯಾ ಜೀವರ ಸ್ವರೂಪ, ಆನಂದ ಆವಿರ್ಭಾವ ತೋರಸೂಸಿ, ತಾಪೊಳೆವನವರಂತೆ ಚೇಷ್ಟೆಯ ಮಾಡಿ ಮಾಡಿಸುತ= ಬ್ರಹ್ಮಾದಿತೃಣಾಂತ ಜೀವರ ಸ್ವರೂಪ ಪ್ರಕಾರದಂತೆ ತಾನು ಬಿಂಬರೂಪನು ಪ್ರಕಾಶಮಾನನಾಗಿ ಹೊಳೆದು, ಅಜ್ಞಾನ ಕಳೆದು ಚೇಷ್ಟೆಯನು ತಾನು ಅವರಲ್ಲಿದ್ದು ವ್ಯಾಪಾರ ಮಾಡಿ, ಜೀವರಿಂದ ಮಾಡಿಸುವನು.

**ಭಾವಸೂಚನ :—** ದೀಪೇತಿ ॥ ೪೬ ॥

ಸ್ವರೂಪ ವ್ಯಕ್ತಿ ವ್ಯಾಪ್ತಿ ಅಪರೋಕ್ಷ ವಿಚಾರ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ಬಹು ವಿಶದ ಬರೆದಿದ್ದಾರೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ದೀಪೇತಿ ॥ ಅಥ ಅಪರೋಕ್ಷಕ್ರಮಃ- ಹರೇಃ ಸ್ವರೂಪಂ ಸರ್ವಗಂ ಅಂಡಾಂತರ್ಬಹಿಷ್ಠಂ ಪಶ್ಯತಿ ಅಜಃ ॥ "ಬ್ರಹ್ಮಾ ತು ಸರ್ವಗಂ ಪಶ್ಯೇತ್ ಗುಣಾನಪ್ಯನ್ಯತೋಽಧಿಕಮ್ ॥ ತಥಾ ವಾಣೀ ತ್ರಿಗುಣ್ಯಾತ್ ಪರತಃ ಪಶ್ಯೇತ್ ವ್ಯಾಪ್ತಂ ಶತಗುಣಂ ಹರಿಮ್ ॥ ಗಿರಿಶೋ ಗರುಡಶ್ಚೈವ ತಮೋ ಮಾತ್ರಾಗತಂ ಹರಿಮ್ ಪಶ್ಯೇತ್ ॥ ಉಮಾ ಸುಪರ್ಣೀ ಚ ಮಹತ್ತತ್ವಂ ಯಾವತ್ಪ್ರಪಶ್ಯತಿ ॥ ಜಾನಂತೀಂದ್ರಶ್ಚ ಕಾಮಶ್ಚ ಬ್ರಹ್ಮ ಯಾವದಹಂಕೃತಿಃ ॥ ಪಶ್ಯಂತಃ ಮನುದಕ್ಷಾದ್ಯಾಃ ಬುದ್ಧಿತತ್ವಸ್ಥಿತಂ ಹರಿಮ್ । ಪಶ್ಯಂತಿ ಸೋಮಸೂರ್ಯೌ ಚ ಮನಸ್ಥಂ ಪರಮೇಶ್ವರಮ್ ॥ ಅನ್ಯೇ ಭೂತಸ್ಥಿತಂ ವಿಷ್ಣುಂ ಪರಿಪಶ್ಯಂತಿ ಸರ್ವದಾ "॥ ಇತ್ಯನುವ್ಯಾಖ್ಯಾನೋಕ್ತೇಃ ॥ ಸ್ವಸ್ವವ್ಯಾಪ್ತಿಭುವ್ಯಪರೋಕ್ಷಃ ಸರ್ವೇಷಾಂ । ಹರಸ್ಯ ಕೋಟ್ಯರ್ಬುದಭಾನುವತ್ ಹರಿದೃಷ್ಟಿಃ ॥ ಸಪತ್ನೀಕೌ ಬ್ರಹ್ಮವಾಯೂ ಸಾವರಣಾಂಡಾಂತರ್ಬಹಿಃ ಸರ್ವಜೀವೇಷು, ತತ್ವೇಷು, ಸರ್ವರೂಪಾಣಿ ಅಪರೋಕ್ಷೀಕುರುತಃ ॥ ಕರ್ಮದೇವಾ ಅತತ್ವೇಶಾ ಅಪಿ ರೂಪಾಣಿ ಸರ್ವಶಃ ॥ ಉಪಾಸ್ಯಾಥ ಪಿಂಡರೂಪಂ ಮುಚ್ಯಂತೇ ಸಮುಪಾಸ್ಯ ಚ॥ ಅಪ್ರತೀಕಾಃ ಸರ್ವದೇಹಗಾನ್ ತತ್ವೇಶಾನ್ ತದ್ಗತಹರೇಃ ರೂಪಾಣಿ ನಿಖಿಲಾನ್ಯಪಿ ॥ ಧ್ಯಾತ್ವೋಪಾಸ್ಯ ವಿಮುಚ್ಯಂತೇ ದೇವಾಃ ಆಜಾನಜಾದ್ಯಯಾಃ ॥ ಸ್ಥಾನೇಶಂ ಚೈವ ಮೂಲೇಶಂ ರಾಜಾನೋ ಮರ್ತ್ಯಗಾಯಕಾಃ ॥ ಇಡಾಪಿಂಗಲನಾಡೀಸ್ಥಾನ್ ॥ ನರಾಗ್ರ್ಯಾಃ ಸ್ಥಾನೇಶಮಾತ್ರಂ ದೀಪಕಾಂತಿವಿಶಿಷ್ಟೇಶಂ ನ ದೇವಾನ್ನೈವ ಮಂಟಪಮ್ ॥ ಘಟಕಾರ್ಥ ಶರೀರೇ, ವಾ ಮುಕ್ತೌ ಶಕ್ತಿಸ್ತು ತಾದೃಶೀ ॥ ತೃಣಾದ್ಯಾಃ ಸ್ವಹೃದಿಸ್ಥಿತಂ ಪಶ್ಯಂತಿ ಉಚಿತ ಜನ್ಮಭಿಃ ॥ ಪಾಮೋನಘಟಿಕಾಮಾತ್ರಂ ಸ್ವರೂಪೇ ಪ್ರಾಕೃತೇ ಹೃದಿ ॥ ಪಶ್ಯಂತಿ ಕ್ರಿಮಿಕೀಟಾದ್ಯಾಃ ಪ್ರದೀಪಪ್ರಭಯಾ ಹರಿಮ್ ॥ ಯವಮಾತ್ರಂ ಹರಿಂ ತಾರ್ಣಾಃ ಕೀಟಾದ್ಯಾಃ

ಬದರೀಮಿತಮ್ ॥ ಅಂಗುಷ್ಠಾಗ್ರ್ಯಮಿತಂ ನೃಕ್ಷಾಃ ಪ್ರದೀಪದಶಸನ್ನಿಭಮ್ ॥ ಹರಿಂ ಪಶ್ಯಂತಿ ಘಟಿಕಾಮಿತಕಾಲಂ ರಮಾಪತಿಮ್ ॥ ಸಮದೀಪಂ ಚಿದಾನಂದಾಃ ಚಿದಾನಂದಾತ್ಮಕಂ ಮೃಗಾಃ ॥ ಖಗಾಶ್ಚ ಪಶವಃ ಗಾವಃ ಹೃದ್ಗಂ ,ಜೀವಗತಂ ಹರಿಮ್ ॥ ಪ್ರದೀಪಶತಭಾಯುಕ್ತಂ ಘಟಿಕಾ ಚ ತದರ್ಧಕಮ್ । ಸಚ್ಚಿದಾನಂದ ಆತ್ಮೇತಿ ಮಾನುಷ್ಯೈಃ ಧ್ಯೇಯ ಈಶ್ವರಃ ॥ ವಿದ್ಯುದ್ವನ್ಮಾನುಷಾಃ ವಿದ್ಯುಃ ದಶವಿದ್ಯುನ್ಮಿತಂ ನೃಪಾಃ ॥ ರಾಜಾನಃ ತದ್ವಿಗುಣಗಂ ಸೂರ್ಯಮಂಡಲವತ್ ಸುರಾಃ ॥ ಗಂಧರ್ವಾಃ ಪಿತರಃ ಸೂರ್ಯಶತಸನ್ನಿಭಮೀಶ್ವರಮ್ ॥ ಗೋಪ್ಯಃ ಕೃಷ್ಣಾಂಗಸಂಗಾಹಾಃ ಪಂಚಸಾಹಸ್ರಸೂರ್ಯಭಮ್ ॥ ಅಜಾನಜಾ ದಶಸಹಸ್ರಾರ್ಕಾಭಂ ತ್ವಗ್ನಿಜಾಃ ಅಪಿ ॥ ಮರ್ತ್ಯಾ ದ್ವಿಘಟಿಕಾಮಾತ್ರಂ ತ್ರಿನಾಡ್ಯಂತಂ ನೃಪೋತ್ತಮಾಃ ॥ ತಥಾ ಮಾನುಷ ಗಂಧರ್ವಾಃ ಚತುರ್ನಾಡ್ಯಂತಮೀಶ್ವರಂ ॥ ಷಣ್ಣಾಡ್ಯಾಂ ಸುರಗಂಧರ್ವಾಃ ಗೋಪ್ಯೋ ಯಾಮಾಂತಮಂಜಸಾ ॥ ಶತೋನ ಶತಕೋಟ್ಯಸ್ತು ಋಷಯೋಽಗ್ನಿಸುತಾ ಅಪಿ ॥ ಸಾಜಾನಜಾ ದಶಘಟೀಮಿತಕಾಲಂ ಜಗದ್ಗುರುಮ್ ॥ ಪಶ್ಯಂತಿ ಕರ್ಮದೇವಾಸ್ತು ಮಧ್ಯಾಹ್ನಾಂತಮೀಶ್ವರಮ್ ॥ ಕೋಟಿಸೂರ್ಯಪ್ರಭಂ ಕರ್ಮದೇವಾಃ ಹೃದ್ಗಂ ಬಹಿಸ್ಥಿತಮ್ ॥ ದ್ವಿಸಪ್ತಲೋಕ ಸಮಿತಂ ತೇ ಪ್ರತೀಕಾಲಂಬನಾಃ ॥ ಪ್ರ ॥ ॥ ೪೮ ॥

## ಕನ್ನಡಾರ್ಥ

ಅಪರೋಕ್ಷ ಜ್ಞಾನದಲ್ಲಿ ಕ್ರಮವು ಹೀಗೆ ಇರುತ್ತದೆ.

"ಚತುರ್ಮುಖನು ಭಗವಂತನ ಸ್ವರೂಪವನ್ನು ಸರ್ವಗತವೂ, ಬ್ರಹ್ಮಾಂಡದ ಅಂತರ್ಬಹಿಸ್ಥಿತವೂ ಆದ ರೂಪವನ್ನು ನೋಡುತ್ತಾನೆ. ಸರಸ್ವತೀ (ವಾಣೀ) ದೇವಿಯು ಬ್ರಹ್ಮಾಂಡಪರಿಮಿತ ದೇಶದಿಂದ ಮೇಲಿಗಿರುವ ಮಹದಾದ್ಯಾವರಣ ರೂಪವಾದ ತ್ರೈಗುಣ್ಯದಿಂದಲೂ, ಮೇಲಿರುವ ಶತೋತ್ತರ ಪರಿಮಿತವಾದ ದೇಶವನ್ನಷ್ಟೇ ವ್ಯಾಪಿಸಿರುವ ಹರಿಯನ್ನು ನೋಡುತ್ತಾಳೆ. ಗರುಡ ರುದ್ರರು ಮಹತ್ತತ್ವಾವರಣವಾದ, ಅದಕ್ಕಿಂತ ದಶಗುಣೋತ್ತರವಾದ ತಮೋಗುಣ ಪರಿಮಿತವಾದ ದೇಶದವರೆಗೇ ಇರುವ

ಹರಿಯನ್ನು ನೋಡುತ್ತಾರೆ. ಉಮಾ ಹಾಗೂ ಸೌಪರ್ಣಿದೇವಿಯವರು ತಮೋಗುಣಕ್ಕಿಂತ ಹತ್ತು ಪಟ್ಟು ಕಡಮೆಯಾದ ಅಹಂಕಾರಪರಿಮಿತ ದೇಶದವರೆಗೇ ಇರುವ ಹರಿಯನ್ನು ನೋಡುತ್ತಾರೆ. ಇಂದ್ರ ಕಾಮರು ಅಹಂಕಾರದವರೆಗೆ ಇರುವ ಪ್ರದೇಶವರೆಗೆ ಮಾತ್ರ ಹರಿಯನ್ನು ಸಾಕ್ಷಾತ್ಕರಿಸುತ್ತಾರೆ. ಮನುದಕ್ಷ ಬೃಹಸ್ಪತಿ ಮುಂತಾದವರು ಬುದ್ಧಿ ತತ್ವದಲ್ಲಿ ಪರಿಮಿತದೇಶದವರೆಗೇ ಇರುವ ಹರಿಯನ್ನು ನೋಡುತ್ತಾರೆ. ಸೋಮ ಸೂರ್ಯರು ಮನಸ್ತತ್ವ ಪರಿಮಿತ ದೇಶದವರೆಗೆ ಇರುವ ಹರಿಯನ್ನು ನೋಡುತ್ತಾರೆ. ವರುಣ ಮುಂತಾದ ಮಿಕ್ಕವರು ಆಕಾಶಾದಿ ಭೂತ ಪರಿಮಿತವಾದ ಕ್ರಮದಿಂದ ಹತ್ತು ಹತ್ತು ಗುಣಹೀನವಾದ ಪ್ರದೇಶದ ವರೆಗೇ ಇರುವ ಹರಿಯನ್ನು ತಮ್ಮ ಯೋಗ್ಯತಾನುಸಾರವಾಗಿ ನೋಡುತ್ತಾರೆ." ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿರುತ್ತಾರೆ. ಎಲ್ಲರಿಗೂ ತಮ್ಮ ಸ್ವರೂಪ ಹಾಗೂ ತಮ್ಮ ವ್ಯಾಪ್ತಿಯಿರುವ ಪ್ರದೇಶ ಇವುಗಳಲ್ಲಿರುವ ಹರಿಯ ಅಪರೋಕ್ಷವಿರುತ್ತದೆ.

೨೮

ಕೋಟಿ ಅರ್ಬುದ ಸೂರ್ಯಸನ್ನಿಭವಾಗಿ ಹರಿಯ ಅಪರೋಕ್ಷವು ಮುಖ್ಯಪ್ರಾಣನಿಗೆ ಆಗುತ್ತದೆ. ಪತ್ನೀಸಮೇತರಾದ ಬ್ರಹ್ಮವಾಯುದೇವರು ಆವರಣಯುಕ್ತವಾದ ಬ್ರಹ್ಮಾಂಡದಲ್ಲಿಯೂ, ಅದರ ಒಳಹೊರಗೂ, ಸರ್ವ ಜೀವ ಹಾಗೂ ತತ್ವೇಶರಲ್ಲೂ ಇರುವ ಸಕಲ ಹರಿರೂಪಗಳನ್ನು ಅಪರೋಕ್ಷೀಕರಿಸುತ್ತಾರೆ. ಅತತ್ವೇಶರಾದ ಕರ್ಮದೇವತೆಗಳು ಹರಿಯ ಸಕಲರೂಪಗಳನ್ನು ಸ್ವಯೋಗ್ಯತಾನುಗುಣವಾಗಿ ಉಪಾಸಿಸಿ, ವಿರಾಡ್ರೂಪವನ್ನು ಉಪಾಸಿಸಿ ಮುಕ್ತರಾಗುತ್ತಾರೆ. ಅಪ್ರತೀಕಾಲಂಬನರು ಸಕಲ ದೇಹದಲ್ಲಿರುವ ತತ್ವೇಶ ತದ್ಗತ ಹರಿಯ ಎಲ್ಲ ರೂಪಗಳನ್ನು ಉಪಾಸಿಸಿ ಮುಕ್ತರಾಗುತ್ತಾರೆ. ಆಜಾನಜದೇವತೆಗಳು ಸ್ಥಾನೇಶನನ್ನು ಉಪಾಸಿಸುತ್ತಾರೆ. ರಾಜರು ಮೂಲೇಶನನ್ನು ಉಪಾಸಿಸಿರುತ್ತಾರೆ. ದೇವ ಗಂಧರ್ವರು ಇಡಾ ಪಿಂಗಲ ನಾಡೀಸ್ಥನನ್ನು ಉಪಾಸಿಸುತ್ತಾರೆ. ಮನುಷ್ಯೋತ್ತಮರು ಸ್ಥಾನೇಶನನ್ನೂ ಉಪಾಸಿಸುತ್ತಾರೆ ಅರ್ಧಘಟಿಕೆಯಲ್ಲಿ ಸಾಕ್ಷಾತ್ಕರಿಸುತ್ತಾರೆ. ಮುಕ್ತಿಯಲ್ಲಿ ಅಂಥ ಶಕ್ತಿಯಿರುತ್ತದೆ. ತೃಣಜೀವರು ಯೋಗ್ಯ ಜನ್ಮ

ಗಳಿಂದ ಉಪಾಸಿಸಿ, ತಮ್ಮ ಹೃದಯಗತರೂಪವನ್ನು ನೋಡುತ್ತಾರೆ. ಕ್ರಿಮಿ ಕೀಟಾದಿ ಜೀವರು ದೀಪ್ರಭಾಯುಕ್ತವಾದ ಹರಿರೂಪವನ್ನು ಪ್ರಾಕೃತ ಹೃದಯದಲ್ಲಿ ಸ್ವರೂಪದಲ್ಲಿ ಮುಕ್ಕಾಲು ಘಳಿಗೆಯವರೆಗೆ ನೋಡುತ್ತಾರೆ. ಅವರಲ್ಲೂ ತೃಣಜೀವರು ಯವ ಮಾತ್ರ ಪರಿಮಿತ ರೂಪವನ್ನು ನೋಡುತ್ತಾರೆ. ಕೀಟಾದಿಜೀವರು ಬಾರೀ ಹಣ್ಣಿನ ಅಳತೆಯುಳ್ಳ ರೂಪವನ್ನು ನೋಡುತ್ತಾರೆ. ಅಂಗುಷ್ಠಾಗ್ರಪರಿಮಿತವಾದ ರೂಪವನ್ನು ವೃಕ್ಷ ಜೀವರು ನೋಡುತ್ತಾರೆ. ಹತ್ತು ದೀಪದ ಕಾಂತಿಯುಳ್ಳ ಹರಿಯ ರೂಪವನ್ನು ಇವರು ಒಂದು ಘಳಿಗೆಯವರೆಗೆ ನೋಡುತ್ತಾರೆ. ಖಗ, ಮೃಗ, ಪಶುಜೀವರು ಚಿದಾನಂದಾತ್ಮಕವಾದ ರೂಪವನ್ನು ಒಂದುವರೆ ಘಳಿಗೆಯವರೆಗೆ ನೂರಾರು ಸಮದೀಪ ಪ್ರಭೆಯಲ್ಲಿ ಹರಿಯನ್ನು ಕಾಣುತ್ತಾರೆ.

ಮನುಷ್ಯರು ಸತ್‌ಚಿತ್ ಆನಂದ ಆತ್ಮ ಎಂಬುದಾಗಿ ಹರಿಯನ್ನು ಧ್ಯಾನಿಸಬೇಕು. ಮನುಷ್ಯಜೀವರಿಗೆ ಒಂದು ವಿದ್ಯುತ್ತಿನಂತೆ ಹರಿಯು ಹೊಳೆಯುವನು. ನೃಪರಿಗೆ ಹತ್ತು ವಿದ್ಯುತ್ತುಗಳಂತೆ ಹೊಳೆಯುವನು. ರಾಜರಿಗೆ ಅವರ ಇಮ್ಮಡಿಯಾಗಿ ಹೊಳೆಯುವನು. ಸುರರಿಗೆ ಸೂರ್ಯ ಮಂಡಲದಂತೆ ಹರಿಯು ಹೊಳೆಯುವನು. ಗಂಧರ್ವ-ಪಿತೃಗಳಿಗೆ ನೂರು ಸೂರ್ಯರಂತೆ ಹೊಳೆಯುವ ಕಾಂತಿಯುಳ್ಳವನಾಗಿ ಹೊಳೆಯುತ್ತಾನೆ. ಕೃಷ್ಣನ ಅಂಗಸಂಗಯೋಗ್ಯರಾದ ಗೋಪಿಯರಿಗೆ ಐದು ಸಾವಿರ ಸೂರ್ಯ ಸನ್ನಿಭನಾಗಿ ಹೊಳೆಯುತ್ತಾನೆ. ಆಜಾನಜ ದೇವತೆಗಳಿಗೆ ಹತ್ತು ಸಾವಿರ ಸೂರ್ಯ ಸನ್ನಿಭನಾಗಿ ತೋರುತ್ತಾನೆ.

ಮರ್ತ್ಯರಿಗೆ ೨ ಎರಡು ಘಳಿಗೆ ಮಾತ್ರ, ನೃಪೋತ್ತಮರಿಗೆ ಮೂರು ನಾಡಿಯವರೆಗೆ ಮಾತ್ರ, ಮಾನುಷ ಗಂಧರ್ವರಿಗೆ ನಾಲ್ಕು ನಾಡಿಗಳವರೆಗೆ ಮಾತ್ರ, ದೇವ ಗಂಧರ್ವರಿಗೆ, ಆರು ನಾಡಿಗಳವರೆಗೆ ಗೋಪಿಯರಿಗೆ ಯಾಮಾಂತ್ಯದವರೆಗೆ, (ಅಗ್ನಿ ಪುತ್ರರೂ) ಆಜಾನಜ ದೇವತೆಗಳಿಗೆ ಹತ್ತು ಘಳಿಗೆಯವರೆಗೆ, ಹರಿಯ ದರ್ಶನವಿರುತ್ತದೆ. ಕರ್ಮದೇವತೆಗಳು ಮಧ್ಯಾಹ್ನದವರೆಗೆ ನೋಡುತ್ತಾರೆ. ಅವರಿಗೆ ಕೋಟಿ ಸೂರ್ಯಸದೃಶನಾಗಿ

ಹರಿಯು ತೋರುವನು. ಆಪ್ರತೀಕಾಲಂಬನರಿಗೆ ಹದಿನಾಲ್ಕು ಲೋಕ ಗತವಾದ ಹರಿಯ ರೂಪವು ಕಾಣುತ್ತದೆ. ॥ ೪೮ ॥

**ಅವತರಣಿಕಾ:**- ಹಿಂದಿನ ಕಲ್ಪದಲ್ಲಿ ಮುಕ್ತರಾಗುವ ಬ್ರಹ್ಮಾದಿಜೀವಿಗಳನ್ನು ಮುಕ್ತರನ್ನು ಮಾಡಿ ತಾನು ಸ್ವಪ್ರಕಾಶನಾಗಿ ಪೊಳೆದು ಮುಕ್ತಾನಂದವಿತ್ತ ಮೇಲೆ, ಮುಂದಿನ ಕಲ್ಪದಲ್ಲಿ ಸಾಧನಮಾಡುವ ಪ್ರಾಣ ರುದ್ರೇಂದ್ರಾದಿ ಜೀವರಿಗೆ, ಸಾಧನಮಾಡಿಸುವ ವಿವರ ಹೇಳುತ್ತಾರೆ.

**ಸ್ವೋದರ ಸ್ಥಿತ ಪ್ರಾಣ ರುದ್ರೇಂ ।**
**ದ್ರಾದಿ ಸುರರಿಗೆ ದೇಹಗಳ ಕೊ ।**
**ಟ್ಟಾದರದಿ ಅವರವರ ಸೇವೆಯ ಕೊಂಬನನವರತ ॥**
**ಮೋದ ಬೋಧ ದಯಾಬ್ಧಿ ತನ್ನವ ।**
**ರಾಧಿ ರೋಗವ ಕಳೆದು ಮಹದಪ ।**
**ರಾಧಗಳ ನೋಡದಲೆ ಸಲಹುವ ಸತತ ಸ್ಮರಿಸುವರ ॥ ೪೯ ॥**

**ಪದ್ಯಾರ್ಥ:**—ಸ್ವೋದರಸ್ಥಿತ=ಪ್ರಳಯಕಾಲದಲ್ಲಿ ಸರ್ವಜೀವರನ್ನು ವಾಸುದೇವ ನಾಮಕ ಪರಮಾತ್ಮನು ತನ್ನ ಉದರದಲ್ಲಿಟ್ಟು, ನಂತರ ವಿಲಿಂಗರಾದ ಬ್ರಹ್ಮಾದಿಗಳಿಗೆ ಸುಪ್ರಕಾಶನಾಗಿ ಪೊಳೆದು ಮುಕ್ತಿಈವನು. ಇನ್ನು ಮುಂದಿನ ಕಲ್ಪಗಳಲ್ಲಿ ಸಾಧನಮಾಡುವ ವಿಲಿಂಗರಾಗದೇ ಇದ್ದ, ಪ್ರಾಣ=ಪ್ರಾಣದೇವರು (ಇವರಿಗೆ ಬ್ರಹ್ಮಪದ ಕೊಟ್ಟು) ರುದ್ರದೇವರಿಗೆ ಶೇಷಪದಕೊಟ್ಟು ಇದರಂತೆ ಸಾಧನ ಯೋಗ್ಯಸುರರಿಗೆ=ದೇವತೆಗಳಿಗೆ, ದೇಹಗಳ ಕೊಟ್ಟು=ಮುಂದಿನ ಕಲ್ಪದಲ್ಲಿ ತಕ್ಕ ದೇಹಗಳನ್ನು ಸೃಷ್ಟಿಗೈಸಿ, ಆದರದಿ ಅವರವರ ಸೇವೆಯಕೊಂಬನನವರತ=ಆಯಾ ದೇವತೆಗಳಿಂದ ಸಂಸೇವ್ಯನಾಗಿ ಬಹುಪ್ರೀತಿಯಿಂದ ಅವರ ಸೇವಾರೂಪವಾದ ಭಕ್ತಿರಸ ನಿರಂತರ ಸ್ವೀಕರಿಸುವನು. ಮೋದ=ಆನಂದಮಯನು, ಆನಂದಪ್ರದನು. ಸಂತೋಷವನ್ನು ಕೊಡುವನು, ಬೋಧ=ಜ್ಞಾನರೂಪನು ಜೀವರಿಗೆ ಸುಜ್ಞಾನವನ್ನು ಕೊಡುವನು, ದಯಾಬ್ಧಿ=ಕರುಣಾಸಮುದ್ರನು. ತನ್ನವರ ಆಧಿರೋಗವ ಕಳೆದು=ತನ್ನ ನಿಜ ಭಕ್ತರ ತಾಪತ್ರಯಾದಿ ಮಹಾ ರೋಗ

ಗಳನ್ನು ಹೋಗಲಾಡಿಸಿ, ಅಥವಾ ಆದಿ ವ್ಯಾಧಿಗಳಿಗೆ ಮೂಲಕಾರಣವಾದ ದುಃಖ ಕೊಡಲು ಕಾರಣವಾದ ಲಿಂಗದೇಹವೆಂಬ ಮಹಾ ರೋಗವನ್ನು ಕಳೆದು; ಮಹದಪರಾಧಗಳ ನೋಡದಲೆ ಸಲಹುವ, ಸತತ ಸ್ಮರಿಸುವರ= ಪ್ರಾರಬ್ಧ ಅನುಭೋಕ್ತವ್ಯ ಕಾಲದಲ್ಲಿ ತನ್ನನು ನಿರಂತರ ಸ್ಮರಿಸಿ ಸಕಲ ಕ್ರಿಯೆಗಳನ್ನು ಹರಿಗೆ ಅರ್ಪಿಸುವ ನಿಜಭಕ್ತರ ಅಪರಾಧಗಳನ್ನು ಕಳೆದು ಕಾಪಾಡುವನು.

**ಭಾವಸೂಚನ:**— ॥ ಸ್ಮೋದರೇತಿ॥ ಆಧಿಃ ಮಾನಸ ವ್ಯಥಾ ॥೪೯॥

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ೪೯-೫೦ ಪದ್ಯ ಎರಡೂ ಒಂದೆಡೆ ಬರೆದ ಕಾರಣ ಮುಂದೆ ೫೦ ನೇ ಪದ್ಯದ ವಿವರ ಹೆಚ್ಚಾ ಗಿದ್ದ ಕಾರಣ ೫೦ ನೇ ಪದ್ಯದ ಟೀಕಾವಲ್ಲಿ ಕೊಟ್ಟಿದೆ.

**ಅವತರಣಿಕಾ:**—ಈ ಪದ್ಯದಿಂದ ಪರಮಾತ್ಮ ಅನಂತ ಬ್ರಹ್ಮ ಕಲ್ಪಗಳ ಸೃಷ್ಟಿಸ್ಥಿತಿ ಲಯಾದಿ ವ್ಯಾಪಾರ ಆನಂದದಿಂದ ಅನಾಯಾಸ ಕ್ರೀಡಾ ರೂಪವಾಗಿ ಮಾಡಿ, ಪ್ರಳಯ ಕಾಲವಲ್ಲಿ ಬ್ರಹ್ಮಾದಿ ದೇವತೆ ಗಳನ್ನು ಅನ್ನ ಆಜ್ಯ ವ್ಯಂಜನಾದಿ ರೂಪದಿಂದ ಸ್ವೀಕರಿಸುವನೆಂದು ಶ್ರುತ್ಯರ್ಥವನ್ನು ವಿವರಿಸುತ್ತಾರೆ.

**ಪ್ರತಿ ಪ್ರತೀ ಕಲ್ಪದಲಿ ಸೃಷ್ಟಿ ।**
**ಸ್ಥಿತಿ ಲಯವ ಮಾಡುತಲೆ ಮೋದಿಪ ।**
**ಚತುರ ಮುಖ ಪವಮಾನರನ್ನವ ಮಾಡಿ ಭುಂಜಿಸುವ ॥**
**ಘೃತವೆ ಮೃತ್ಯುಂಜಯ ನೆನಿಪದೇ ।**
**ವತೆಗಳೆಲ್ಲುಪಸೇಚನರು ಶ್ರೀ ।**
**ಪತಿಗೆ ಮೂಜಗವೆಲ್ಲ ಓದನತಿಥಿಯೆನಿಸಿಕೊಂಬ ॥ ೫೦ ॥**

**ಪದ್ಯಾರ್ಥ:**— ಪ್ರತಿ ಪ್ರತೀಕಲ್ಪದಲಿ=ಪ್ರತಿ ಒಂದೊಂದು ಬ್ರಹ್ಮ ಕಲ್ಪದೊಳಗೆ, ಪ್ರವಾಹ ರೂಪವಾದ ಸೃಷ್ಟಿ, ಬ್ರಹ್ಮಾದಿಜೀವರ ಸೃಷ್ಟಿ

ದೇಹಗಳ ಕೊಟ್ಟು ಹುಟ್ಟಿಸುವಿಕೆ, ಸ್ಥಿತಿ=ಇರಿಸುವಿಕೆ ಪಾಲನ ಮಾಡು ವಿಕೆ, ಲಯ=ಸಂಹಾರಮಾಡುವದು, ಈ ಪ್ರಕಾರ ವ್ಯಾಪಾರಗಳನ್ನು ಮಾಡುತ್ತಲೇ ಮೋದಿಪ=ನಿರಾಯಾಸವಾಗಿ ಬ್ರಹ್ಮಾಂಡ ಜೀವರಸೃಷ್ಟಿ, ರಕ್ಷಣ, ಲಯವನ್ನು ಮಾಡುತ್ತ, ಮೋದಿಪ=ಕ್ರೀಡಾ ರೂಪವಾದ ಆನಂದ ಹೊಂದುವ, ಶ್ರೀಹರಿಯ ಮೋದಿಸುವ ಕ್ರಿಯೆ ಎಂಥದೆಂದರೆ, ಚತುರ ಮುಖಪವಮಾನರನ್ನವ=ಬ್ರಹ್ಮದೇವರು ವಾಯುದೇವರಿಂಬ ತನ್ನವನ್ನು ಮಾಡಿ, ಆ ಅನ್ನಕ್ಕೆ ರುಚಿಯಾದ ತುಪ್ಪಬೇಕು. ಘೃತವೆ ಮೃತ್ಯುಂಜಯ= ಮಹರುದ್ರ ದೇವರನ್ನೇ ತುಪ್ಪವನ್ನಾಗಿ ಮಾಡಿಕೊಂಡು, ದೇವತೆಗಳೆಲ್ಲುಪ ಸೇಚನರು=ಇಂದ್ರಾದಿ ಇತರ ದೇವತೆಗಳೆಲ್ಲ ವ್ಯಂಜನ ಪದಾರ್ಥಗಳನ್ನಾಗಿ ಮಾಡಿಕೊಂಡು, ಶ್ರೀಪತಿಗೆ=ಶ್ರೀ ಸಂಪತ್ಕರಳಾದ ಲಕ್ಷ್ಮೀದೇವಿಯ ಒಡೆ ಯನಿಗೆ, ಮೂಜಗವೆಲ್ಲ ಓದನ=ಮೂರು ಲೋಕಗಳೆಲ್ಲ ಓದನ ಅನ್ನ ರೂಪ ವಾದುದು, ಈ ಅನ್ನಭೋಜನ ಮಾಡಲಿಕ್ಕೆ, ಅತಿಥಿ=ಶ್ರೀಹರಿಯು ಆಮಂತ್ರಿತ ಬ್ರಾಹ್ಮಣನೆಂದು ಕರೆಸುವನೆಂದು ಪ್ರತ್ಯರ್ಥ ವಿವರಿಸಿದ್ದಾರೆ, ತಾನು ಸೃಷ್ಟಿಸಿ ಸಲಹಿದವರನ್ನು ತಾನೇ ಭುಂಜಿಸುವನು, ಪರಮಾತ್ಮಗೆ ಯಾವ ದುಃಖಾದಿಗಳಿಲ್ಲದ ನಿತ್ಯಾನಂದನೆಂದು ಹೇಳಿದಂತಾಯಿತು.

**ವಿಶೇಷ ಸೂಚನೆ:—"ಶ್ರೀ ಪ್ರಾಣೇಶ ವಿಠ್ಠಲದಾಸರು ದಾಸರ ಸಾಕ್ಷಾತ್ ಶಿಷ್ಯರು.** ಈ ಪದ್ಯದ ಅರ್ಥವನ್ನೇ ಜೋಗುಳ ಪದದಲ್ಲಿ ಸೂಚಿಸಿರುತ್ತಾರೆ.

"ಅನ್ನಾಜ ಪ್ರಾಣಾಜ್ಯ ಶಿವ, ದಿವಿಜರ ಶಾಖ। ವನ್ನು ಜೊಮ್ಮಾಂ ಡಾಖ್ಯ ಹರಿವಾಣದೊಳಗೆ॥ ಚನ್ನಾಗಿ ಲಲನೆ ಸಹಿತವಾಗಿ ಭುಂಜಿಸಿ। ನುಣ್ಣಾನ ವಟಪತ್ರಶಾಯಿ ಕೃಪಾಂಗಾ ॥೩॥ ಜೋ ಜೋ॥ ಎಂದು ಸ್ತೋತ್ರಮಾಡಿದ್ದಾರೆ.

**ಭಾವಸೂಚನ:-** ॥ ಅನ್ನೇತಿ ॥ "ಯಸ್ಯ ಬ್ರಹ್ಮ ಕ್ಷತ್ರಂ ಚೋಭೇ ಭವತ ಓದನಃ ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ **ಇತಿ ಶ್ರುತೇಃ ॥ ೫೦ ॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸ್ವೋದರ" ಇತಿ ॥ ಪ್ರತಿ ಇತಿ ॥ "ಚತುರ್ಮುಖ" ಇತಿ ॥ ಉಭಯೋಃ ವಿಪ್ರಕ್ಷತ್ರತ್ವಾತ್ ॥ ಉಪಸೇಚನಂ ಘೃತಾದ್ಯುಪಸ್ಕಾರಃ ॥ ತಥಾ ಚ ಶ್ರುತಿಃ "ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ ॥ ಮೃತ್ಯುಃ ಯಸ್ಯ ಉಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥ ಇತಿ ॥ ಅತಿಥಿಂ ॥ ೫೦ ॥

## ಕನ್ನಡಾರ್ಥ

ಚತುರ್ಮುಖನು ಬ್ರಾಹ್ಮಣನು. ಪವಮಾನನು ಕ್ಷತ್ರಿಯನು. ಉಪ ಸೇಚನ-ಉಪಸ್ಕಾರ.

ಪರಮಾತ್ಮನಿಗೆ ಬ್ರಹ್ಮ ಕ್ಷತ್ರಸ್ವರೂಪವಲ್ಲಿರುವ ಬ್ರಹ್ಮವಾಯು ದೇವರುಗಳು ಅನ್ನವೂ, ಮೃತ್ಯುಂಜಯನೆನಿಸಿದ ರುದ್ರನು ಘೃತವೂ ಆಗಿ ರುತ್ತಾರೆ. ಹೀಗೆ ಪರಮಾತ್ಮನನ್ನು ತಿಳಿಯುವುದು ವಿಶಿಷ್ಟ ಫಲಕಾರಣ ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿರುತ್ತಾರೆ ॥ ೫೦ ॥

**ಅವತರಣಿಕಾ:**—ಸ್ವ ಉದರ ಸ್ಥಿತ ಸಕಲ ಜೀವರಿಗೆ ಅವರವರಿಗೆ ತಕ್ಕ ರಸವಿಭಾಗ ಮಾಡಿ ಕೊಟ್ಟು ಜೀವರಿಗೆ ಆನಂದವನ್ನು ಹೇಗೆ ಕೊಡು ವನೆಂದು ಗರ್ಭಿಣಿ ಸ್ತ್ರೀ ಉದರಗತ ಶಿಶುವಿನ ದೃಷ್ಟಾಂತದಿಂದ ವಿವರಿಸು ತ್ತಾರೆ.

**ಗರ್ಭಿಣೀ ಸ್ತ್ರೀ ಉಂಡ ಭೋಜನ ।**
**ಗರ್ಭಗತ ಶಿಶು ಉಂಬ ತೆರದಲಿ ।**
**ನಿರ್ಭಯನು ತಾ ಉಂಡುಣಿಸುವನು ಸರ್ವ ಜೀವರಿಗೆ ॥**
**ನಿರ್ಬಲತಿ ಪರಮಾಣು ಜೀವಗೆ ।**
**ಅಬ್ಬುವದೆ ಸ್ಥೂಲಾನ್ನ ಭೋಜನ ।**
**ಅರ್ಭಕರು ಪೇಳುವರು ಕೋವಿದರಿದನೊಡಂಬಡರು** ॥ ೫೧ ॥

**ಪಧ್ಯಾರ್ಥ:**— ಗರ್ಭಿಣೀ ಸ್ತ್ರೀ ಉಂಡ ಭೋಜನ=ತನ್ನ ಉದರಗತ

( ಗರ್ಭದಲ್ಲಿ ) ಶಿಶುವನ್ನು ಧಾರಣ ಮಾಡಿದ ಹೆಣ್ಣು ಮಕ್ಕಳು ಊಟ ಮಾಡಿದ ಸ್ಥೂಲಾನ್ನ ರಸ ವಿಭಾಗವನ್ನು ಸೂಕ್ಷ್ಮ ನಾಳದಿಂದ ಗರ್ಭಗತ ಶಿಶುವಿಗೆ ಮುಟ್ಟಿಸಿ ಶಿಶುವಿನ ದೇಹ ಉಪಚಯಗೈಸುವುದೇ ಗರ್ಭಗತ ಶಿಶು ಉಂಬ ತೆರದಲಿ=ಗರ್ಭದಲ್ಲಿರುವ ಕೂಸಿನ ಪಿಂಡ ಬಲಿಯುವದೇ ಶಿಶು ಊಟ ಮಾಡಿದಂತಾಯಿತು. ತೆರದಲಿ=ಈ ರೀತಿಯಾಗಿ, ಶ್ರೀ ಹರಿಯು ನಿರ್ಭಯನು ತಾ ಉಂಡು=ಪರರ ಭಯವಿಲ್ಲದ ಶ್ರೀ ಹರಿಯು, ತಾನು ಉಂಡು ತನ್ನ ಸ್ವಾಖ್ಯ ಶುಭರಸವನುಂಡು, ಸರ್ವಜೀವರಿಗೆ ಉಣಿಸುವನು= ಜೀವರಿಗೆ ಯೋಗ್ಯವಾದ ರಸವನ್ನು ಉಣಿಸುತ್ತಾ ಆನಂದವನ್ನು ಕೊಡುವನು. ಸಕಲರಿಗೆ ಮಾತ್ರ ಸದೃಶನಾದ ಪರಿಬಿಂಬ ರೂಪನ ಶಕ್ತಿಯಿದು. ಅತಿನಿರ್ಬಲ=ಲೇಶವಾದರೂ ಸಾಮರ್ಥ್ಯ ಇಲ್ಲದ ಸದಾ ಬಿಂಬನ ಅಧೀನನಾಗಿ ಇರುವ ಪರಮಾಣು ಜೀವಿಗೆ=ಕೇವಲ ಸೂಕ್ಷ್ಮ ಕುದುರೆ ಬಾಲದ ಕೊನೆಯ ಕೂದಲಿನಲ್ಲಿ ಸಹಸ್ರಾರು ಭಾಗ ಮಾಡಿದಷ್ಟು ಸೂಕ್ಷ್ಮ ಅಲ್ಪನಾದ ಜೀವನಿಗೆ, ಸ್ಥೂಲಾನ್ನಭೋಜನ ಅಬ್ಬುವದೆ=ಈ ಜಡಾನ್ನರಸ ಚೇತನನಾದ ನಿರ್ಬಲ ಜೀವನಿಗೆ ಅಸಾಧ್ಯವಾಗಿ ಹೊಂದಿಕೊಳ್ಳುವದೆ ? ಜಡಾನ್ನದಿಂದ ಜೀವನಿಗೆ ಉಪಚಯವಿಲ್ಲ ಸ್ಥೂಲಾನ್ನ ಜೀವನಿಗೆ ಅಬುವದೆಂದು, ಅರ್ಭಕರು=ಏನು ತಿಳಿಯದ ಬಾಲಕರು ಜ್ಞಾನ ಶೂನ್ಯರು ಪೇಳುವರು=ಹೇಳುತ್ತಾರೆ ಹೊರತಾಗಿ, ಕೋವಿದರು=ಜ್ಞಾನಿಗಳು, ಇದ ನೊಡಂಬಡರು=ಇದನ್ನು ಒಪ್ಪುವದಿಲ್ಲ.

**ಭಾವಸೂಚನ:**— ॥ ಗರ್ಭಿಣೀತಿ ॥ ಅಬ್ಬುವದೇ ಸಾಧ್ಯವಾಗುವದೆ ॥ ೫೧ ॥

**ವಿಶೇಷ ಸೂಚನೆ:**— ॥ ಸ್ಥೂಲಾನ್ನದಲ್ಲಿ ಸ್ಥೂಲರಸ, ಸ್ಥೂಲ ದೇಹಕ್ಕೆ ಸೂಕ್ಷ್ಮರಸ, ಅನಿರುದ್ಧ ದೇಹಕ್ಕೆ ಸೂಕ್ಷ್ಮತರರಸ, ಲಿಂಗದೇಹಕ್ಕೆ ಉಪಚಯ, ತತ್ ಸಾಕ್ಷಾತ್ಕಾರ ಜೀವನಸ್ವರೂಪಕ್ಕೆಂದು ಹಿಂದೆ ೧೬ ನೇ ಸಂಧಿಯಲ್ಲಿ ಶ್ರೀ ಫಲಾರಿ ಆಚಾರ್ಯರ ವಾಕ್ಯ ಉದಹರಿಸಿದೆ. ಮತ್ತು ನಾಲ್ಕನೇ ಸಂಧಿ ೨ನೇ ಪದ್ಯದಲ್ಲಿ "ನೀಡದಂದದಿ ಇಪ್ಪಲಿಂಗಕ್ಕೆ ॥ ಪೋದ

ಶಾತ್ಮಕ ರಸವಿಭಾಗವ। ಮಾಡಿ ಷೋಡಶ ಕಲೆಗಳಿಗೆ ಉಪಚಯಗಳನೆ ಕೊಡುತ ॥ ಕ್ರೋಡ ಎಪ್ಪತ್ತೆರಡು ಸಾವಿರ ನಾಡಿಗಳ ದ್ವಾರಾ ದೇಹಕ್ಕೆ ಉಪಚಯ, ಕರಣಗಳಿಗೆ ಆನಂದ, ಅನಿಮಿಷರಿಗೆ ಆತ್ಮ ಪ್ರದರ್ಶನ।ಸುಖವ ನೀವನೆಂದು ಹೇಳಿದಂತೆ ಹೀಗೆ ರಸಗಳು ಬಹು ಉಂಟು, ರಸ ವಿಭಾಗವೂ ಬೇರೆ ಬೇರೆಂಟು! "ಪದುಮೆ ಮೊದಲು ಮಾಡಿ ಪುಷ್ಕರ ಪರಿಯಂತ ಒದಗಿ ಸರ್ವರ ಭಾಗ ವಿಧಿಭಾಗದಿ ಕೊಟ್ಟು ॥ ಹೀಗೆ ಸರ್ವರಸವಿಭಾಗ ಜ್ಞಾನ ಸಂಪಾದಿಸಬೇಕು. ಮತ್ತು ದೇವತೆಗಳ ಪೂಜಾನಂತರದಲ್ಲಿ ದೈತ್ಯರಸ ವಿಭಾಗ ಬೇರೆ ಇದೆಂದು ತಿಳಿಯಬೇಕೆಂದು ಶ್ರೀ ಗೋಪಾಲದಾಸರ ವಚನ.

ಇಂತು ಸ್ಥೂಲರಸದಲ್ಲೇ ಇಷ್ಟುವಿಧ ರಸ, ಇಂಥ ಸ್ಥೂಲ ರಸಗಳಲ್ಲಿ "ವಿಶ್ವಂ ಸ್ಥೂಲಂ ಸಮುದ್ದಿಷ್ಟಂ ಸರ್ವಗವ್ಯಾತ್ಮ ಹೇತುತಃ" ॥ ಎಂಬ ಉಪನಿಷತ್ ವಾಕ್ಯದಂತೆ ವಿಶ್ವನು ತನ್ನ ಶುಭ ಸ್ವಾಖ್ಯ ರಸಗಳನುಂಡು, ಮೇಲೆ ವಿವರಿಸಿದಂತೆ ಜೀವರಿಗೆ ತಕ್ಕ ರಸದಿಂದ ಆತ್ಮ ಪ್ರದರ್ಶನಾನಂದ ಮುಕ್ತಿಯಲ್ಲಿಯೂ ಸಹ ನಿತ್ಯ ತನ್ನ ದರ್ಶನಾನಂದ ಕೊಡುತ್ತಾನೆಂದು ಶಾಸ್ತ್ರಸಮ್ಮತ.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ರಸಾಃ ತದುಪಭೋಗ್ಯಾಃ ಬಹವಃ;" ಇತ್ಯುಕ್ತಂ ಉಪಸಂಹರತಿ:- "ಗರ್ಭಿಣೀ" ಇತಿ ॥ ॥ ೫೧ ॥

### ಕನ್ನಡಾರ್ಥ

"ಪರಮಾತ್ಮನು ಉಪಭೋಗಿಸುವ ರಸಗಳು ಅನೇಕ (ಬಹಳ) ಎಂಬ ಉಕ್ತಿಯಿದ್ದುದರಿಂದ ಉಪಸಂಹರಿಸುತ್ತಾರೆ– "ಗರ್ಭಿಣೀ" ಈ ಪದ್ಯ ದಿಂದ. ॥ ೫೧ ॥

**ಅವತರಣಿಕಾ:—** ಶ್ರೀ ಹರಿಗೆ ವೃದ್ಧಿ ಹ್ರಾಸಗಳಿಲ್ಲದ್ದರಿಂದಲೂ, ದೇವತಾಗಣದಿ ಸರಿಮಿಗಿಲೆನಿಸಿಪರಿಲ್ಲ, ಜನ್ಮಾದಿಗಳು ಇಲ್ಲದ ಶ್ರೀಹರಿಯು

ಅನಂತ ಮಹಿಮನು. ತನ್ನ ಭಕ್ತರನು ಮುಕ್ತಿಗೆ ಕರೆದೊಯ್ದು, ಪುನಃ ಸೃಷ್ಟಿಗೆ ಬಾರದಂತಾಗಿ ಮಾಡುವ ಸ್ವರೂಪಾನಂದವನಿತ್ತು ರಕ್ಷಿಸುವನೆಂದು ಹೇಳುತ್ತಾರೆ.

**ಅಪಚಯುಗಳಿಲ್ಲುಂಡು (ಡ) ದುದರಿಂ ।**
**ದುಪಚಯುಗಳಿಲ್ಲ ಮರಗಣದೊಳ ।**
**ಗುಪಮರೆನಿಸುವರಿಲ್ಲಜನ್ಮಾದಿಗಳು ಮೊದಲಿಲ್ಲ ॥**
**ಅಪರಿಮಿತ ಸನ್ಮಹಿಮ ಭಕ್ತರ ।**
**ಅಪುನರಾವರ್ತರನು ಮಾಡುವ ।**
**ಕೃಪಣ ವತ್ಸಲ ಸ್ವಪದ ಸೌಖ್ಯವನಿತ್ತು ಶರಣರಿಗೆ ॥ ೫೨ ॥**

**ಪದ್ಯಾರ್ಥ:—** ಶ್ರೀ ಹರಿಗೆ ಉಣದೇ ಇದ್ದದರಿಂದ ಅಪಚಯು ಗಳಿಲ್ಲ,=ಕಡಿಮೆಯಾಗುವಿಕೆ, ಹ್ರಾಸ ದೇಹ ಕುಗ್ಗುವಿಕೆ, ಉಂಡುದರಿಂದ ಅಪಚಯಗಳಿಲ್ಲ=ತನ್ನ ಸ್ವಾಭ್ಯರಸವನ್ನು ಭೋಜನ ಮಾಡುವುದರಿಂದ, ಶರೀರ ಪುಷ್ಟಿ ಅಭಿವೃದ್ಧಿ ಯಾವದು ಇಲ್ಲೇ ಇಲ್ಲ. ನಿತ್ಯ ತೃಪ್ತನು. ಅಮರಗಣದೊಳಗೆ=ದೇವತೆಗಳ ಸಮೂಹದಲ್ಲಿ, ಉಪಮೆರೆನಿಸುವರಿಲ್ಲ= ಶ್ರೀ ಹರಿಯ ಸರಿಸಮಾನರೆನಿಸುವರಿಲ್ಲವೆಂದಮೇಲೆ ದೇವತೆಗಳಿಂದ ಶ್ರೇಷ್ಠ ರಾದ ದೈತ್ಯಾದಿಗಳಲ್ಲಿ ಉಪಮೆರಹಿತನೆಂದು ಹೇಳುವದೇನು? ಜನ್ಮಾದಿ ಗಳು ಮೊದಲಿಲ್ಲ=ಮಾತೆ ಗರ್ಭದಿಂದ ಬರುವ ಜನನ ದುಃಖಾದಿಗಳು ಮೊದಲೇ ಇಲ್ಲ, "ಜನನರಹಿತಾಕೂತಿನಂದನ" ನೆಂದು ದಾಸಾರ್ಯರ ವಚನ, ಹೀಗೆ ಹರಿಗೆ ಹ್ರಾಸ ವೃದ್ಧಿ, ಜನನಾದಿಗಳಿಲ್ಲದುದರಿಂದ, ದೇವತೆ ಗಳ ಸಮೂಹದಲ್ಲಿ ಸರಿ ಯಾರೂ ಇಲ್ಲದುದರಿಂದ, ಅಪರಿಮಿತ ಸನ್ಮಹಿಮ= ಇಂತಹ ಅನಂತಗುಣ ಪೂರ್ಣನಾದ ಮಹಾಮಹಿಮನು, ತನ್ನ ಭಕ್ತರ= ತನ್ನ ನಿಜವಾದ ಭಕ್ತರನ್ನು, ಅಪುನರಾವೃತ್ತರನು ಮಾಡುವ=ಪುನಃ ಜನ್ಮಕೊಟ್ಟು ಸೃಷ್ಟಿಗೆ ಪುನಃ ಬಾರದಂತೆ ಮಾಡುವನು, ಅಂದರೆ ಮುಕ್ತ ರನ್ನು ಮಾಡುವನು. ಈತನು ಬಿಂಬರೂಪಿಯು, ಕೃಪಣ ವತ್ಸಲನು= ದೀನರನ್ನು ರಕ್ಷಿಸುವ ಕರುಣಾಳು, ಹೀಗೆ ಶರಣರಿಗೆ=ತನ್ನನ್ನೇ ನಂಬಿ ತನ್ನ

ವೊರೆ ಪೊಕ್ಕವರಿಗೆ, ಸ್ವಪದ ಸೌಖ್ಯವನಿತ್ತ=ಸ್ವಸ್ವಯೋಗ್ಯತೆಯಂತೆ ಮುಕ್ತಿಯಲ್ಲಿಟ್ಟು ನಿರಂತರ ಸುಖವಾದ ಆನಂದವೀವನು.

**ಭಾವಸೂಚನ:**— ॥ ಅಪಚಯೇತಿ ॥ ೫೨ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಅಪಚಯ" ಇತಿ ॥ ಅಭೋಜನೇ ಹ್ರಾಸಃ ॥ ಉಪಚಯಃ ವೃದ್ಧಿಃ ॥ ೫೨ ॥

**ಕನ್ನಡಾರ್ಥ**

ಭೋಜನವಿರದ ಮೂಲಕ ಹ್ರಾಸ ಸೊರಗುವಿಕೆಯಿಲ್ಲ. ಭೋಜನ ದಿಂದ ವೃದ್ಧಿಯೂ ಇಲ್ಲ. ಇಂತಹುದು ಶ್ರೀಹರಿಯ ಮಾಹಾತ್ಮ್ಯೆ ॥೫೨॥

**ಅವತರಣಿಕಾ:**— ಸೃಷ್ಟಿಸ್ಥಿತಿಲಯಾದಿ ವ್ಯಾಪಾರಮಾಡುವ ಶ್ರೀಹರಿಗೆ ಯಾವಾಗಲೂ ಎಂದೂ ಖೇದವೋದಾದಿಗಳಿಲ್ಲವೆಂದು ದೃಷ್ಟಾಂತ ಪೂರ್ವಕವಾಗಿ ವರ್ಣಿಸುತ್ತಾರೆ.




**ಬಿತ್ತಿ ಬೀಜವು ಭೂಮಿಯೊಳು ನೀ ।**
**ರೆತ್ತಿ ಬೆಳಸಿದ ಬೆಳಸು ಪ್ರಾಂತಕೆ ।**
**ಕಿತ್ತಿ ಮೆಲುವಂದದಲಿ ಲಕ್ಷ್ಮೀರಮಣ ಲೋಕಗಳ ॥**
**ಮತ್ತೆ ಜೀವರ ಕರ್ಮ ಕಾಲೋ ।**
**ತ್ಪತ್ತಿ ಸ್ಥಿತಿಲಯ ಮಾಡುತಲಿ ಸಮ ।**
**ವರ್ತಿಯನಿಸುವ ಖೇದ ಮೋದಗಳಿಲ್ಲ ಅನವರತ ॥ ೫೩ ॥**

**ಪದ್ಯಾರ್ಥ:**— ಭೂಮಿಯೊಳು ಬೀಜವು ಬಿತ್ತಿ=ಹಸನಮಾಡಿದ ಒಳ್ಳೆ ಭೂಮಿಯು ಮಳೆಬಂದು ಹಸಿಯಾದಾಗ್ಗೆ, ಧಾನ್ಯಗಳನ್ನು ಬಿತ್ತಿದ ಮೇಲೆ ಬೆಳೆಬರುವವರೆಗೆ ರಕ್ಷಿಸಿ ಮತ್ತು ನೀರೆತ್ತಿ ಬೆಳಸಿದ ಬೆಳಸು=ತೋಟ ಗಳಿಗೆ ಮೋಟೆಯಿಂದ ನೀರು ಉಣಿಸಿ, ಅನೇಕ ಪಲ್ಯಕಾಯಿ ಹಣ್ಣು ಹಂಪಲ ಗಿಡ ನೆಟ್ಟು ಫಲವಾಗುವವರೆಗೆ ಕಾಪಾಡಿ ಪ್ರಾಂತಕ್ಕೆ=ಹೊಲಗದ್ದೆ,

ತೋಟಗಳಲ್ಲಿರುವ ಬೆಳೆಗಳು ಪೂರ್ಣ ಫಲವಾಗಿ ಬಂದ ಮೇಲೆ ಕೊನೆಗೆ, ಕಿತ್ತಿ=ಕೆಲವು ಬೆಳೆ ಕಿತ್ತು ಗೋಧಿ ಬಿಳಿಜೋಳಾದಿ, ಪಲ್ಯಕಾಯಿ ಕಿತ್ತಿ= ಕೀಳಿ ಕೊಯ್ದು, ಧಾನ್ಯರಾಶ್ಯಾದಿಗಳನ್ನುಮಾಡಿ, ಮೆಲುವಂದದಲಿ=ಊಟ ಮಾಡುವಂತೆ, ಶ್ರೀ ಹರಿಯು, ಶ್ರೀ ಲಕ್ಷ್ಮೀರಮಣ=ಪ್ರಕೃತಿಗೆ ಅಭಿಮಾನಿ ಯಾದ ರಮೆಗೆ ಸಂಪದಭ್ಯುದಯಗೋಸುಗ ರಮೆಯಿಂದಲೇ, ಲೋಕಗಳ= ಹದಿನಾಲ್ಕುಲೋಕಗಳನ್ನೂ, ಮತ್ತೆ=ಮತ್ತೂ ಜೀವರ ಕರ್ಮ=ಸಕಲ ಜೀವರ ಅನಾದಿ ಕರ್ಮ ಮೊನೆಮಾಡಿ, ಅವರವರ ಸ್ವಭಾವಯೋಗ್ಯಕರ್ಮ ದಂತೆ; ಕಾಲೋತ್ಪತ್ತಿ=ಯಾವಯಾವ ಕಾಲದಲ್ಲಿ ಯಾವ ಬ್ರಹ್ಮಾಂಡದಲ್ಲಿ ಯಾವ ಜೀವರನ್ನುಸೃಷ್ಟಿಗೆ ತಂದು ಲಿಂಗ ಉಪಚಯ ದ್ವಾರಾ ಅನಿರುದ್ಧ. ಸ್ಥೂಲ ದೇಹಗಳನ್ನು ಕೊಡುವುದೇ ಜೀವರ ಉತ್ಪತ್ತಿ ಎಂದು ಶಾಸ್ತ್ರಸಿದ್ಧ (ಅನಾದಿ ಚಿದಾನಂದ ಸ್ವರೂಪ ನಿತ್ಯರಾದ ಜೀವರನ್ನು ದೇವರು ಸೃಷ್ಟಿ ಮಾಡಿಲ್ಲ, ಸಚ್ಚಿದಾನಂದ ನಿತ್ಯನಾದ ಹರಿಗೆ ಸಕಲ ಜೀವರು ನಿತ್ಯ ಪ್ರತಿ ಬಿಂಬರೆಂದು ಕರೆಸುತ್ತಾರೆ) ಹೀಗೆ ಜೀವರ ಸೃಷ್ಟಿ, ಸ್ಥಿತಿ, ಪಾಲನ, ಲಯ= ದೇಹವಿಯೋಗಾದಿಗಳನ್ನು ಮಾಡಿಸುವುದೆ ಸಂಹಾರ ಹೊರ್ತು, ಸ್ವರೂಪತಃ ಜೀವರು ಅಚ್ಛೇದ್ಯ ಅಭೇದ್ಯರು. ಹೀಗೆ ಸೃಷ್ಟಿ, ಪಾಲನೆ, ಲಯ ಮೂರು ಕಾರ್ಯ ಮಾಡುತಲಿ=ತಾನೇ ಸ್ವತಃ ಮಾಡುತ್ತ, ಸಮವರ್ತಿಯೆನಿಸುವ=ಸಂಸಾರ ಚಕ್ರ ಸಮ್ಯಗಾವರ್ತಯತೀತಿ ಸಮಾವರ್ತಃ (ವಿದ್ಯಾಧಿರಾಜರು) ನಿತ್ಯ ಪ್ರವಾಹ ರೂಪವಾದ ಸಂಸಾರವೆಂಬ ಯಂತ್ರಗಾಲಿ ಚಕ್ರವನ್ನು, ಸಮ್ಯಕ್= ಚನ್ನಾಗಿ, ಆವರ್ತಯತೀತಿ=ನಿಪುಣತನದಿಂದ ತಿರುಗಿಸುತ್ತಾ, ಪ್ರವಾಹರೂಪ ದಿಂದ ಪ್ರತಿ ಬ್ರಹ್ಮಾಂಡಗಳಲ್ಲಿ ಸೃಷ್ಟಿ ಸ್ಥಿತಿ ಲಯ ಮೂರು ವ್ಯಾಪಾರ ಮಾಡುವ ಹರಿಗೆ, ಅನವರತ=ನಿರಂತರವಲ್ಲಿಯೂ, ಖೇದ ಮೋದಗಳಿಲ್ಲ. ಸೃಷ್ಟಿ ಮಾಡುವವರಿಂದ ಸಂತೋಷ, ಲಯ ಮಾಡುವವರಿಂದ ಖೇದ, ದುಃಖಾದಿಗಳು ಶ್ರೀಹರಿಗೆ ಇಲ್ಲವೆಂದು ವೇದಾರ್ಥವನ್ನು ಹೇಳುತ್ತಾರೆ.

**ಭಾವಸೂಚನ:**— || ಬಿತ್ತೀತಿ || ೫೩ ||

ಸೃಷ್ಟಿ ಸ್ಥಿತಿ ಲಯ ಕಾರಣರೂಪ, ಪ್ರಹೃಷ್ಟ ಪುಷ್ಟ ತನ ದಾಸೋ ಹಂ || ಎಂದು ದಾಸಾರ್ಯರ ವಚನವೂ ಇದೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

'ಬಿತ್ತಿ' ಇತಿ॥ ಬೆಳಸು ಫಲ॥ ಮೊಲು ತಿಂಬೋಣ॥ ೫೩॥

**ಅವತರಣಿಕಾ:**—ನಿರಾಯಾಸದಿಂದ ಪ್ರತಿ ಬ್ರಹ್ಮಾಂಡ ಸೃಷ್ಟ್ಯಾದಿ ವ್ಯಾಪಾರಮಾಡುವ ಶ್ರೀಹರಿಗೆ ಹಸಿವೆ ನೀರಡಿಕೆಗಳು ಉಂಟೆಂದು ಶಂಕಿಸಿದರೆ ದೇವತೆಗಳಿಗೆ ಕ್ಷುದ್ ಭಯಾದಿಗಳಿಲ್ಲವೆಂದ ಮೇಲೆ ಶ್ರೀಹರಿಗೆ ಎಲ್ಲಿ? ಅಸುರಾದಿಗಳನ್ನು ಕ್ಷುತ್ ಪಿಪಾಸಾ ಬಾಧಿಸುವುವು ಎಂದು ಹೇಳುತ್ತಾರೆ.

**ಶ್ವಸನ ರುದ್ರೇಂದ್ರ ಪ್ರಮುಖ ಸುಮ।**
**ನಸರೊಳಿದ್ದರು ಕ್ಷುತ್ಪಿ ಪಾಸಗ।**
**ಳೊಶದೊಳಿಪ್ಪವು ಸಕಲ ಭೋಗಕೆ ಸಾಧನಗಳಾಗಿ॥**
**ಅಸುರ ಪ್ರೇತ ಪಿಶಾಚಿಗಳ ಬಾ।**
**ಧಿಸುತಲಿಪ್ಪವು ದಿನ ದಿನದಿ ಮಾ।**
**ನಿಸರೊಳಗೆ ಮೃಗ ಪಕ್ಷಿ ಜೀವರೊಳಿದ್ದು ಪೋಗುವವು॥ ೫೪॥**

**ಪದ್ಯಾರ್ಥ:**—ಶ್ವಸನ=ಪ್ರಾಣದೇವರು ಗಾಳಿ ದೇವರು, ರುದ್ರ=ಶಿವ ಇಂದ್ರದೇವರು, ಪ್ರಮುಖ=ಮುಖ್ಯರಾದ ಮೊದಲಾದ, ಸುಮನಸರು = ದೇವತೆಗಳಲ್ಲಿ ಕ್ಷುತ್ ಪಿಪಾಸಗಳಿದ್ದರೂ = ಹಸಿವೆ ನೀರಡಿಕೆಗಳಿದ್ದರೂ, ಆ ದೇವತೆಗಳಿಗೆ ಯಾವ ಬಾಧೆ ಕೊಡದೆ ಅವರ ವಶದಲ್ಲಿಪ್ಪವು= ಅವರ ಅಧೀನವಾಗಿರುವವು, ದೇವತೆಗಳಿಗೆ ಹಸಿವೆ ನೀರಡಿಕೆ ಇಲ್ಲದಲೇ, ಅವರ ಸಕಲ ಭೋಗಕೆ ಸಾಧನಗಳಾಗಿರುವುವು=ದೇವತೆಗಳ ಸುಖಾನುಭವಕ್ಕೆ ಸಾಧನ=ಅನುಸರಣೆಯಾಗಿಪ್ಪವೆಂದ ಮೇಲೆ (ಶ್ರೀ ಹರಿಗೆ ಹಸಿವೆ ನೀರಡಿಕೆ ಎತ್ತಣದಯ್ಯಾ?) ಈ ದೇವತೆಗಳ ವಿರೋಧಿಗಳಾದ ಅಸುರ= ದೈತ್ಯ ರಾಕ್ಷಸಾದಿಗಳು, ಪ್ರೇತ=ನರಕದಲ್ಲಿರುವ ಒಂದು ವಿಧದ ಜೀವ ಕೀಳ ಮನುಜರಿಗೆ ಮರಣಾನಂತರ ಬರುವ ಪ್ರೇತ ದೇಹ, ಪಿಶಾಚ=ಪಿಶ= ಮಾಂಸ, ಮಾಂಸತಿನ್ನುವ ಪ್ರೇತ ಭೂತಗಳ ಗಣವು ಪಿಶಾಚಾದಿಗಳನ್ನು ದಿನ ದಿನದಿ ಬಾಧಿಸುತಿಪ್ಪವು = ನಿತ್ಯದಲ್ಲಿಯೂ ಕ್ಷುತ್ ಪಿಪಾಸಗಳು ಬಾಧೆ

ಕೊಡುತ್ತಲೇ ಇರುವುವು. ಮಾನಿಸರೊಳಗೆ = ಮನುಷ್ಯ ಜಾತಿ ಜೀವಗಳಲ್ಲಿ ಮೃಗ = ಶ್ವಾಪದಾದಿ ಕ್ರೂರ ಮೃಗ ಹುಲಿ ಕರಡಿ, ಸಿಂಹ ಮುಂತಾದ ಮೃಗಗಳಲ್ಲಿ, ಪಕ್ಷಿ = ರೆಕ್ಕೆಯುಳ್ಳ ಆಕಾಶದಲ್ಲಿ ಹಾರಾಡುವ ಜೀವರು, ಈ ಜೀವರೊಳಿಪ್ಪ ಪೋಗುವವು = ಈ ಮೂರು ವಿಧ ಜೀವರಿಗೆ ಹಸಿವೆ ನೀರಡಿಕೆಯಾಯಿತೆಂದರೆ, ಮನುಜರು ಅನ್ನ ಭಕ್ಷಣ ಉದಕಪಾನ ಮಾಡಿದರೆ ಹಿಂಸಾ ಮೃಗಗಳು ಮಾಂಸಾದಿ ಭಕ್ಷಣ ಮಾಡಿ ನೀರು ಕುಡಿಯಲು ಪಕ್ಷಿಗಳು = ತೃಣ ಫಲಾದಿ ಭಕ್ಷಣಮಾಡಿ ನೀರು ಕುಡಿದರೆ ಹಸಿವೆ ನೀರಡಿಕೆಗಳಿದ್ದರೂ, ಬಾಧಿಸದೆ = ಯಾವ ತರದ ಬಾಧೇ ಕೊಡದೇ ಹೋಗುವುವು.

**ಭಾವಸೂಚನ:**— ॥ ಶ್ವಸನೇತಿ ॥ ೫೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಶ್ವಸನ" ಇತಿ ॥ ಕ್ಷುತ್ಪಿಪಾಸಾದಯಃ ಸರ್ವೇ ದೇವಾನಾಂ ಭೋಗಸಾಧಕಾಃ ॥ ನ ತು ಪೀಡಾಕರಾಃ ತೇಷಾಂ ಐಶ್ವರ್ಯಾದಿಗುಣೋನ್ನತೇಃ ॥ ೫೪ ॥

**ಕನ್ನಡಾರ್ಥ**

ಹಸಿವೆ ನೀರಡಿಕೆಗಳೆಲ್ಲವೂ ದೇವತೆಗಳಿಗೆ ಭೋಗಸಾಧಕಗಳು. ಅವುಗಳಿಂದ ದೇವತೆಗಳಿಗೆ ಪೀಡೆ ಬಾಧೆಯಾಗುವುದಿಲ್ಲ. ಯಾಕೆಂದರೆ ಅವರ ಐಶ್ವರ್ಯಾದಿ ಗುಣಗಳಿಗೆ ಉನ್ನತಿಯಿರುತ್ತದೆ. ॥ ೫೪ ॥

**ಅವತರಣಿಕಾ:**— ಶ್ರೀಹರಿಯು ಕ್ಷುದ್ಭಯ ಶೋಕ, ಸ್ವಪ್ನ ಸುಷುಪ್ತಿ ಮೋಹ ಅಪಸ್ಮೃತಿ ಮಾತ್ಸರ್ಯ ಮದ ಪಾಪಾದಿ ದೋಷವರ್ಜಿತನೆಂದು ಬ್ರಹ್ಮಾದಿ ದೇವತೆಗಳು ಉಪಾಸನೆ ಮಾಡಿ ಮುಕ್ತರಾಗಿರುವರೆಂದು ಪ್ರತ್ಯಕ್ಷ ಸಾಕ್ಷಿಯಾಗಿ ಶ್ರೀಹರಿಗೆ ನಿರ್ದೋಷತ್ವ ಸಿದ್ಧ ಮಾಡುತ್ತಾರೆ.

**ವಾಸುದೇವಗೆ ಸ್ವಪ್ನ ಸುಪ್ತಿ ಪಿ ।**
**ಪಾಸ ಕ್ಷುದ್ಭಯ ಶೋಕ ಮೋಹಾ।**

ಯಾಸ ಪಸ್ಮೃತಿ ಮಾತ್ಸರ್ಯ ಮದ ಪುಣ್ಯ ಪಾಪಾದಿ ||
ದೋಷ ವರ್ಜಿತನೆಂದು ಬ್ರಹ್ಮ ಸ|
ದಾಶಿವಾದಿ ಸಮಸ್ತ ದಿವಿಜರು |
ಪಾಸನೆಯು ಗೈದೆಲ್ಲ ಕಾಲದಿ ಮುಕ್ತರಾಗಿಹರು || ೪೭ ||

**ಪದ್ಯಾರ್ಥ:**—ವಾಸುದೇವಗೆ = ಜಗತ್ತಿನಲ್ಲಿ ವ್ಯಾಪಿಸಿರುವದರಿಂದಲೂ, ಮುಕ್ತಿ ಕೊಡುವನಾದುದರಿಂದಲೂ, ಶ್ರೀಹರಿಗೆ ವಾಸುದೇವನೆಂತ ನಾಮ, ಇಂತಹ ಶ್ರೀ ವಾಸುದೇವ ನಾಮಕ ಹರಿಗೆ, ಸ್ವಪ್ನ = ಕನಸು, ಸುಪ್ತಿ = ನಿದ್ರಾ ಅಜ್ಞಾನ, ಪಿಪಾಸ = ನೀರಡಿಕೆ, ಕ್ಷುದ್ಭಯ = ಹಸಿವೆಯ ಪೀಡಾ, ಶೋಕ = ದುಃಖ, ಮೋಹ = ವಿಸ್ಮೃತಿ, ಮೂರ್ಛೆ ಅಜ್ಞಾನ, ಭ್ರಾಂತಿಗೆ ಕಾರಣವಾದ ದುಃಖ, ಆಯಾಸ = ದಣಿವು, ಕಷ್ಟ, ಅಪಸ್ಮೃತಿ = ಮೂರ್ಛೆರೋಗ, ಮಾತ್ಸರ್ಯ = ಅಸೂಯೆ, ಹೊಟ್ಟೆಕಿಚ್ಚು, ಮದ = ಗರ್ವ, ಹೆಮ್ಮೆ, ಸೊಕ್ಕು, ಮತ್ತು ಪುಣ್ಯ = ಯೋಗ್ಯ ಕೃತಿ ಮಾಡುವವರಿಂದ ಬರುವ ಫಲ; ಪಾಪ=ದುಷ್ಕೃತಿಗಳನ್ನು ಮಾಡುವದರಿಂದ ಬರುವ ಫಲ ಪಾಪಗಳು, ಆದಿ = ಇವೇ ಮೊದಲಾದ ಎಲ್ಲ, ದೋಷವರ್ಜಿತನೆಂದು =ಶ್ರೀ ಹರಿಯು ದೋಷಗಳಿಂದ ರಹಿತ ನಿರ್ದೋಷನೆಂದು, ಬ್ರಹ್ಮ = ಚತುರ್ಮುಖ ಬ್ರಹ್ಮದೇವರು, ಸದಾಶಿವಾದಿ = ನಿತ್ಯ ನೂತನ ಮಂಗಳಕರವಾದ ಶ್ರೀ ರಾಮ ನಾಮ ಜಪಿಸುವುದರಿಂದ ಸದಾ ಮಂಗಳಕರನಾದ ಮಹಾರುದ್ರ ದೇವರೆ ಮೊದಲಾಗಿ ಇಂದ್ರಾದಿ ಸಮಸ್ತ ದಿವಿಜರು = ಎಲ್ಲ ದೇವತೆಗಳು, ಉಪಾಸನೆಯು ಗೈದೆಲ್ಲ ಕಾಲದಿ = ಶ್ರೀ ಹರಿಯು ನಿರ್ದೋಷನೆಂದು ಧ್ಯಾನೋಪಾಸನೆಗೈದು, ನಿರ್ದೋಷರಾಗಿ, ಎಲ್ಲ ಕಾಲದಿ = ನಿರಂತರದಲ್ಲಿ ಮುಕ್ತಿಯಲ್ಲಿಯೂ ನಿರ್ದುಃಖರಾಗಿ,ಮುಕ್ತರಾಗಿಹರು = ಸಂಸಾರ ಬಿಡುಗಡೆ ಹೊಂದಿ ಮುಕ್ತಾನಂದ ಪಡೆಯುತ್ತಲಿದ್ದಾರೆ. "ನೀನು ನಿರ್ದೋಷಿ ಎಂದು ನಾ ನಿರ್ದೋಷನಾಗುವೆ" ಎಂದು ಶ್ರೀ ವಿಜಯದಾಸರ ವಾಕ್ಯ, "ಕ್ಲೇಶ ಶೋಕಾದಿ ಶೂನ್ಯಸ್ಯ ಹರೇಃ ಕ್ಲೇಶಾದಿ ಚಿಂತನಮ್||ತೇ ಸರ್ವೇ ಅಸುರಾ ಜ್ಞೇಯಾ ನಾತ್ರ ಕಾರ್ಯಾ ವಿಚಾರಣೇತಿ" || ಗಾರುಡ ಬ್ರಹ್ಮಕಾಂಡವಚನ ||

**ಭಾವಸೂಚನ :—** ॥ ವಾಸುದೇವೇತಿ ॥ ೫೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

**॥ ವಾಸುದೇವ ಇತಿ ॥**

## ಕನ್ನಡಾರ್ಥ

**ಅರ್ಥ ಸುಲಭವಿದೆ.**

**ಅವತರಣಿಕಾ :—** ಈ ಪದ್ಯವಾರಂಭಿಸಿ ೬೧ ಪದ್ಯದವರೆಗೆ ಬ್ರಹ್ಮ ಮಾನದಿಂದ ಸಾಧನಕಲ್ಪಗಳ ಲೆಕ್ಕ, ಸೂಕ್ಷ್ಮಕಾಲವಾರಂಭಿಸಿ ಸವಿಸ್ತರ ಕಾಲ ಲವತ್ರುಟ್ಯಾದಿ ಕೋಷ್ಟಕ ಹೇಳುತ್ತಾರೆ. ಪ್ರಕೃತ ಈ ಪದ್ಯದಲ್ಲಿ ಮನುಜಮಾನದಿಂದ ಒಂದು ದಿನಕ್ಕೆ ಆಗುವ ಕಾಲ ವಿವರ ಹೇಳುತ್ತಾರೆ.

**ಪರಮ ಸೂಕ್ಷ್ಮ ಕ್ಷಣನ್ನೆದು ತ್ರುಟಿ ।**
**ಕರೆಸುವುದು ಐವತ್ತು ತ್ರುಟಿ ಲವ ।**
**ಎರಡು ಲವವೂ ನಿಮಿಷ ನಿಮಿಷಗಳೆಂಟು ಮಾತ್ರ ಯುಗ ॥**
**ಗುರು ದಶ (ಪ್ರಾಣವು) ಪ್ರಾಣಾರು ಪಳ ಹ ।**
**ನ್ನೆರಡು ಬಾಣವು ಘಟಿಕ ತ್ರಿಂಶತಿ ।**
**ಇರಳ ಹಗಲರುವತ್ತು ಘಟಿಕಗಳ(ಕವು)ಹೋರಾತ್ರಿಗಳು॥೫೬॥**

**ಪದ್ಯಾರ್ಥ :—** ಪರಮ ಸೂಕ್ಷ್ಮ ಕ್ಷಣ = "ಮನುಜಗೋಚರವೆನು ಜಾಲಾರ್ಕ ಕಿರಣ ಘನವಾಗಿ ಚರಿಸುವ ದೇಶ ಭೇದ" ಎಂದು ಶ್ರೀವಿಜಯ ದಾಸಾರ್ಯರ ಸುಳಾದಿ. ಅತಿ ಸೂಕ್ಷ್ಮ ಸೂರ್ಯಕಿರಣ ಬೆಳಕಿಂಡಿ ಬಿಸಿಲಿ ನಲ್ಲಿ ಕಾಣುವ ತ್ರಸರೇಣು ಸ್ವರ್ಗಾರಂಭಿಸಿ ಬಹು ಸೂಕ್ಷ್ಮದಿಂದ ಕಾಣು ತ್ತದೆ. ಈ ಭೂಲೋಕದಲ್ಲಿ ಜಾಲಾರ್ಕದಲ್ಲಿ ಮನುಜರಿಗೆ ಕಾಣಿಸುವ ಕಣವು ಪರಮ ಸೂಕ್ಷ್ಮವೆನಿಸುತ್ತದೆ. ಇದೇ ಕ್ಷಣಕಾಲವೆಂದು ಕರೆಯು ತ್ತಾರೆ. ಅಂದರೆ ಬೆಳಕಿಂಡಿ ಗತಸೂರ್ಯ ಕಿರಣದಲ್ಲಿ ಅನಂತ ಕಣಗಳು ಚಲಿಸುತ್ತಲಿರುತ್ತವೆ. ಆ ಕಣಗಳು ಚಲಿಸುವ ಸೂಕ್ಷ್ಮಕಾಲವೇ ಕ್ಷಣವೆಂದು ಸ್ಥೂಲಮಾನದಿಂದ ಕರೆಸುತ್ತದೆ. ಎಂದು ಪ್ರಕಾಶಸಂಹಿತಾ ಉಕ್ತಿಯಂತೆ

ಶ್ರೀವಿಜಯದಾಸರ ಕಾಲ ಪ್ರಕರಣ ಸುಳಾದಿ ವಿವರವೆನ್ನೇ ಶ್ರೀದಾಸಾರ್ಯರು ಪರಮ ಸೂಕ್ಷ್ಮ ಕಾಲಕ್ಕೆ ಕ್ಷಣವೆಂಬ ವಿಷ್ಣುರಹಸ್ಯ ಪ್ರಮಾಣ ಅನುಸರಿಸಿ ಹೇಳಿದ್ದಾರೆ.

ಇಂತಹ (೫) ಐದು ಕ್ಷಣವಾದರೆ ಒಂದು (೧) ತ್ರುಟಿ ಕಾಲಸಂಜ್ಞೆ.
ಕರೆಸುವುದು ಐವತ್ತು ತ್ರುಟಿ = ಲವ ೫೦ ತ್ರುಟಿಗೆ = ೧ ಲವಕಾಲ.

| | |
|---|---|
| | ೨ ಲವವು = ೧ ನಿಮಿಷ. |
| ನಿಮಿಷಗಳೆಂಟಕ್ಕೆ ಮಾತ್ರ | ೮ ನಿಮಿಷ = ೧ ಮಾತ್ರ. |
| ಯುಗ ಅಂದರೆ ಎರಡು | ೨ ಮಾತ್ರ = ೧ ಗುರುಕಾಲ. |
| ಗುರುಃ ದಶಕ್ಕೆ | ೧೦ ಗುರುಕಾಲ = ೧ ಪ್ರಾಣಕಾಲ. |
| ಪ್ರಾಣಾರು ಪಳ | ೬ ಪ್ರಾಣ = ೧ ಪಳ. |

ಪಳ ಹನ್ನೆರಡು, ಬಾಣವು ಅಂದರೆ ಐದು ೧೨x೫ = ೬೦ ಪಳ ಘಟಿಕಾ.
ಇಂತಹ ಗಳಿಗೆ, ತ್ರಿಂಶತಿ = ೩೦ ಗಳಿಗೆ ಗಳಿಗೆ = ಒಂದು ಹಗಲು.
ಇರಳು ಹಗಲು = ರಾತ್ರಿ ಹಗಲು ಹಗಲಿಗೆ ೩೦ ಗಳಿಗೆ ರಾತ್ರಿಗೆ.
೩೦ ಗಳಿಗೆ.

ಹೀಗೆ ಅರವತ್ತು ಘಟಿಗಳು ಅಹೋರಾತ್ರಿಗಳು = ೬೦ ಗಳಿಗೆ ಗಳಿಗೆ ಹಗಲು ರಾತ್ರಿ ಕೂಡಿ, ಒಂದು ದಿನವು ಮನುಜಮಾನದಿಂದ ಆಗುತ್ತದೆ. ದೇವತೆಗಳಿಗೆ ಇವಕ್ಕಿಂತಲೂ ಸೂಕ್ಷ್ಮಕಾಲ ಜ್ಞಾನವುಂಟು.

**ಭಾವಸೂಚನ:**— ಪರಮೇತಿ ಗುರುದಶ ಪ್ರಾಣ ಘೋವು (ಡ) ಹತ್ತು ಶ್ವಾಸ ॥ ಬಾಣ ಐದು ॥ ೫೬ ॥

**ಸೂಚನೆ:**— ಮುಂದೆ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ ಕಾರರು ವಿಸ್ತಾರವಾದ ಪ್ರಮಾಣಗಳನ್ನು ಕೊಟ್ಟು ಟೀಕಾ ಬರೆದು ಉಪ ಕಾರ ಮಾಡಿದ್ದಾರೆ.

ಮತ್ತು ಈ ಪದ್ಯಾರ್ಥಬೋಧಕ ವಿಶೇಷ ವಿಸ್ತಾರ ಪ್ರಮೇಯವು, ಪ್ರಕಾಶ ಸಂಹಿತಾ ಪ್ರಥಮ ಪರಿಚ್ಛೇದ ಮೂರನೇ ಅಧ್ಯಾಯ, ಮತ್ತು

ಶ್ರೀ ವಿಜಯದಾಸರ ಸೃಷ್ಟಿ ಪ್ರಕರಣ ಕಾಲಾಖ್ಯಸುಳಾದಿ (೯) ಸೃಷ್ಟಿ ಪ್ರಕರಣ ಪುಸ್ತಕ ಪುಟ ೩೪ ರಿಂದ ಪುಟ ೪೩ ರವರೆಗೆ ನೋಡಿ. ಸದ್ಗುರುಗಳಿಂದ ಅರ್ಥ ತಿಳಿಯುವದು. ಈ ಸೂಕ್ಷ್ಮ ಕ್ಷಣ ಕಾಲಕ್ಕಿಂತಲೂ ಅತಿ ಸೂಕ್ಷ್ಮತರ ತ್ರಸರೇಣು ತ್ರುಟಿ, ವೇಧ ಕ್ಷಣಾದಿ ಕಾಲಗಳನ್ನು ವರ್ಣಿಸಿದ್ದಾರೆ.

"ಕಾಲ ವಿವರ ತಿಳಿದು ವಿಜಯ **ವಿಠ್ಠಲರೇಯನ** ಕಾಲಿಗೆರಗಿ ಬದುಕು ಜ್ಞಾನ ಭಕುತಿಯಿಂದ ॥ ೫೪ ॥

ಈಗ ನಮ್ಮ ಗಡಿಯಾರ ಗಂಟೆ, ಮಿನಿಟು, ಸೆಕೆಂಡುಗಳ ಕಾಲವೂ ಸರಿಪಡಿಸಿಕೊಳ್ಳಿರಿ. ದಿನ, ರಾತ್ರಿ ೬೦ (ಗಳಿಗೆ) ಘಟಿಕಾಕ್ಕೆ ಒಂದ ದಿನವ ಲೆಕ್ಕವಾದರೆ, ೧ ಘಳಿಗೆ ಗಟಿಕಾಕ್ಕೆ ೨೪ ಮಿನಿಟು, ೧ ಮಿನಿಟಿಗೆ ೬೦ ಸೆಕೆಂಡುಗಳಂತೆ ೨೪ ಮಿನಿಟು ೧ ಗಳಿಗೆ ೧೪೪೦ ಸೆಕೆಂಡು ಇದರಒಳಗೆ ಇರುವ ಸೂಕ್ಷ್ಮಕಾಲವಿಚಾರ ಬಲ್ಲವರಿಂದ ಅರಿವುದು.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಸರ್ವತ್ರ ಕಾಲಾಂತರ್ಯಾಮಿತ್ವೇನ, ತತ್ತಚ್ಛಬ್ದವಾಚ್ಯತ್ವೇನ ತತ್ತತ್ಕಾಲಿಕ ದ್ರವ್ಯಪ್ರವರ್ತಕತ್ವೇನ, ಸ್ಥಿತಂ ಸಚ್ಚಿದಾನಂದ ಲಕ್ಷಣಂ ಅನಂತಸಂಜ್ಞಂ ಬ್ರಹ್ಮಕಾಲಮನುಭವತಿ ಇತಿ. ಸರ್ವ ಸಾಧನೋಪಯೋಗಿ (ಕ) ಶುಭಾಯುರ್ವೃದ್ಧಯೇ ಕಾಲೋಪಾಸ್ತಿಂ ವಕ್ತುಂ ಕಾಲ ಸ್ವರೂಪಂ ಆಹ–"ಪರಮ" ಇತಿ ॥

ವಿಷ್ಣುರಹಸ್ಯೇ ಚ— "ಅತಿಸೂಕ್ಷ್ಮಸ್ತು ಯಃ ಕಾಲಃ ಸ ಕ್ಷಣಃ ಪರಿಕೀರ್ತಿತಃ ॥ ಕ್ಷಣಾಃ ಪಂಚ ತ್ರುಟಿಃ ಪ್ರೋಕ್ತಾ ಪಂಚಾಶತ್ತಾಃ ಲವಃ ಸ್ಮೃತಃ ॥ ಲವದ್ವಯಂ ನಿಮೇಷಃ ಸ್ಯಾತ್ ಮಾತ್ರಾ ಸ್ಯಾತ್ ಅಷ್ಟಭಿಃ ಚ ತೈಃ ॥ ಯುಘಾಯಂ ವದತೇ ಚಾಷೋ ಮಾತ್ರಯೋರ್ದ್ವಿತಯಂ ಗುರುಃ ॥ ಗುರೂಣಾಂ ದಶಕಂ ಪ್ರಾಣಃ ಪ್ರಾಣಷಟ್ಕಂ ಪಲಂ ಭವೇತ್ ॥ ಪಲಷಷ್ಟಿಃ ಘಟೀ ಪ್ರೋಕ್ತಾ ತಾಃ ಷಷ್ಟಿಃ ದಿನಮುಚ್ಯತೇ ॥

ತತಃ ತ್ರಿಂಶದ್ ಘಟೀ ಪೂರ್ವಾ ದಿವಾ ರಾತ್ರಿಃ ತಥಾ ಪರಾ ॥ ೫೬ ॥ ದಿನಪಂಚದಶಂ ಪಕ್ಷಃ ತೌ ದ್ವೌ ಮಾಸಸ್ತು ತತ್ ದ್ವಯಮ್। ಋತುಃ ತತ್ ತ್ರಿತಯಂ ಪ್ರೋಕ್ತಂ ಅಯನಂ ತತ್ ದ್ವಯಂ ಪುನಃ ॥ ವರ್ಷಮಿತ್ಯು ಚ್ಯತೇ ತಚ್ಚ ದೇವಾನಾಂ ದಿನಮೇವ ತು ॥ ಅಯನಂ ತೂತ್ತರಂ ತತ್ರ ದಿವಾ ರಾತ್ರಿಶ್ಚ(ದಿ)ದಕ್ಷಿಣಾ॥ಏವಂ ದಿನಾನಾಂ ಷಷ್ಟಿಶ್ಚ ಶತತ್ರಯಸಮನ್ವಿ ತಮ್ ॥ ದಿವ್ಯವರ್ಷಮಿದಂ ಪ್ರೋಕ್ತಂ ಯುಗಸಂಖ್ಯಾಂ ತತಃ ಶೃಣು ॥ ಕೃತಂ ತ್ರೇತಾ ದ್ವಾಪರಶ್ಚ ಕಲಿಶ್ಚೇತಿ ಚತುರ್ಯುಗಮ್ ॥ ದಿವ್ಯೈಃ ದ್ವಾದಶ ಸಾಹಸ್ರೈಃ ಸಾವಧಾನಂ ನಿರೂಪಿತಮ್ ॥ ೫೭ ॥ ಚತ್ವಾರಿ ತ್ರೀಣಿ ದ್ವೇ ಚೈಕಂ ಕೃತಾದಿಷು ಯಥಾ ಕ್ರಮಮ್ ॥ ಸಂಖ್ಯಾತಾನಿ ಸಹ ಸ್ರಾಣಿ ದ್ವಿಗುಣಾನಿ ಶತಾನಿ ಚ ॥ ಚತ್ವಾರ್ಯೇವ ಸಹಸ್ರಾಣಿ ಕೃತಂ ಯುಗಮಿತೀರಿತಮ್ ॥ ಅಷ್ಟೌ ಶತಾನಿ ವರ್ಷಾಣಾಂ ಆದಾವಂತೇ ಚ ಸಂಧ್ಯಕಮ್ ॥ ಏತತ್ಪಾದವಿಹೀನಂ ತು ತ್ರೇತಾ ಯುಗಮಿತೀರ್ಯತೇ ॥ ತತೋಽಪಿ ಪಾದಹೀನಂ ತು ದ್ವಾಪರಂ ತಸ್ಯ ಯತ್ ಪುನಃ ॥ ಅರ್ಧಂ ತತ್ ಕಲಿಮಾನಂ ಸ್ಯಾತ್ ಏವಂ ಯುಗಚತುಷ್ಟಯಮ್ ॥ ದಿವ್ಯಂ ದ್ವಾದಶ ಸಾಹಸ್ರಂ ವರ್ಷಮಾನಂ ಮಹಾಯುಗಮ್॥ಮಹಾಯುಗಾನಾಂ ಸಪ್ತತ್ಯಾ ಸೈಕ ಏವಾಂತರಂ ಮನೋಃ ॥ ಚತುರ್ದಶೈವಂ ಮನವಃ ಪ್ರತ್ಯೇಕಂ ತು ತದಂತತಃ ॥ ಸಂಧ್ಯಾಕೃತೋಽಮಿತ್ರೈಕಾ ಸ್ಯಾತ್ ಕಲ್ಪಾ ದೌ ಚ ತಥೈಕತಾ ॥ ೫೮ ॥

## ಕನ್ನಡಾರ್ಥ

ಸರ್ವತ್ರ ಕಾಲಾಂತರ್ಯಾಮಿಯಾಗಿದ್ದಾನೆ. ತತ್ತಚ್ಛಬ್ದ ವಾಚ್ಯನಾಗಿ ಆಯಾ ಕಾಲದಲ್ಲಿರುವ ದ್ರವ್ಯಗಳನ್ನು ಪ್ರವರ್ತಿಸುತ್ತ ಆಯಾ ಕಾಲದೇಶ ಗಳಲ್ಲಿ ಇರುತ್ತಾನೆ. ಆದುದರಿಂದ "ಅನಂತ" ನಾಮಕನಾದ ಸಚ್ಚಿದಾನಂದ ಸ್ವರೂಪಿ ಪರಮಾತ್ಮನು ಬ್ರಹ್ಮ ಕಾಲವನ್ನು ಮುಗಿಯಿಸುತ್ತಾನೆ. ಆದುದ ರಿಂದ ಸಕಲ ಸಾಧನೋಪಯೋಗಿಯಾದ **ಶುಭಾಯುಷ್ಯದ ವೃದ್ಧಿಯು ಸಲುವಾಗಿ ಕಾಲೋಪಾಸನೆಯು ಆವಶ್ಯಕವಾಗಿದ್ದು** ಅದರ ಸಲುವಾಗಿ ಕಾಲ **ಸ್ವರೂಪವನ್ನು** "ಪರಮ" ಈ ಪದ್ಯದಿಂದ ನಿರೂಪಿಸುತ್ತಾರೆ.

ಕಾಲಸ್ವರೂಪದ ಬಗ್ಗೆ ವಿಷ್ಣುರಹಸ್ಯದಲ್ಲಿ ಹೀಗೆ ನಿರೂಪಿತವಾಗಿರುತ್ತದೆ:—

ಅತಿಸೂಕ್ಷ್ಮವಾದ ಕಾಲವು ಕ್ಷಣವೆನಿಸುತ್ತದೆ. ಐದು ಕ್ಷಣಗಳಿಗೆ ತ್ರುಟಿಯೆನ್ನುತ್ತಾರೆ. ಐವತ್ತು ತ್ರುಟಿಗಳು ಸೇರಿದರೆ "ಲವ"ವಾಗುತ್ತದೆ. ಎರಡು ಲವಗಳು ನಿಮೇಷವೆನಿಸುವವು. ಎಂಟು ನಿಮೇಷಗಳಿಗೆ "ಮಾತ್ರಾ" ಎನ್ನುವರು. ಎರಡು ಮಾತ್ರಾಗಳು ಒಂದು "ಗುರು"ವೆನಿಸುತ್ತದೆ. ಹತ್ತು ಗುರುಗಳಿಗೆ ಒಂದು ಪ್ರಾಣ. ಆರು ಪ್ರಾಣಗಳಿಗೆ ಒಂದು ಪಲ. ಅರವತ್ತು ಪಲಗಳಿಗೆ ಒಂದು ಘಳಿಗೆ. ಅರವತ್ತು ಘಳಿಗೆಗಳಿಗೆ ಒಂದು ದಿನ. ಅದರಲ್ಲಿ ಮುಂಚಿನ ಮೂವತ್ತು ಘಳಿಗೆಗಳಿಗೆ ದಿನ (ಹಗಲು) ಎಂದೂ, ಅನಂತರದ ಮೂವತ್ತು ಘಳಿಗೆಗಳಿಗೆ ರಾತ್ರಿಯೆಂದೂ ಕರೆಯುತ್ತಾರೆ. ೧೫ ದಿನಗಳಿಗೆ ಒಂದು ಪಕ್ಷ. ೨ ಪಕ್ಷಗಳಿಗೆ ಒಂದು ಮಾಸ. ೨ ಮಾಸಗಳಿಗೆ ಒಂದು ಋತು. ಮೂರು ಋತುಗಳಿಗೆ ಒಂದು ಅಯನ. ೨ ಅಯನಗಳಿಗೆ ಒಂದು ವರ್ಷ. ಮಾನವರ ಒಂದು ವರ್ಷವಂದರೆ ದೇವತೆಗಳ ಒಂದು ದಿನವೆನಿಸುತ್ತದೆ. ಇಂಥ ೩೬೦ ದಿವಸಗಳು ಅವರ ಒಂದು ವರ್ಷವೆನಿಸುತ್ತದೆ. ಹೀಗೆ ವರ್ಷಮಾನ.

ಇನ್ನು ಯುಗಮಾನ ಕೃತ, ತ್ರೇತಾ, ದ್ವಾಪರ, ಕಲಿ ಹೀಗೆ ನಾಲ್ಕು ಯುಗಗಳು. ಈ ಯುಗಗಳಿಗೆ ಸೇರಿ ದೇವಮಾನದ ೧೨,೦೦೦ ಸಾವಿರ ವರ್ಷಗಳು. ಕ್ರಮವಾಗಿ ೪, ೩, ೨, ೧ ಸಾವಿರ ವರ್ಷಗಳು ಆ ಕೃತಾದಿ ಯುಗಗಳಲ್ಲಿ ಇರುವುವು. ಹೇಗೆಂದರೆ ನಾಲ್ಕು ಸಾವಿರ ವರ್ಷಗಳು ಕೃತ ಯುಗದ ಮಾನ. ಆದ್ಯಂತ ಸಂಧಿವರ್ಷಗಳು ೮ ನೂರು. ಇದರ ಕಾಲುಭಾಗ ಕಡಮೆಯಾದ ವರ್ಷಗಳು ಅಂದರೆ ೩೬೦೦ ವರ್ಷ ತ್ರೇತಾಮಾನ. ತ್ರೇತಾ ಯುಗಕ್ಕಿಂತ ಒಂದು ಕಾಲುಭಾಗ ಕಡಮೆಯದು ಅಂದರೆ ೨೪೦೦ ವರ್ಷಗಳು ದ್ವಾಪರ ಯುಗಮಾನ. ಅದಕ್ಕೆ ಕಾಲುಭಾಗ ಕಡಮೆ ಕಲಿಯುಗ. ಅಂದರೆ ೧೨೦೦ ವರ್ಷ ಕಲಿಯುಗ ಮಾನ. ಹೀಗೆ ದೇವಮಾನದ ೧೨೦೦೦ ವರ್ಷಗಳಿಗೆ ಒಂದು ಮಹಾಯುಗ. ೭೧ ಮಹಾಯುಗಗಳಿಗೆ ಒಂದು ಮನ್ವಂತರವಾಗುತ್ತದೆ. ೧೪ ಮನುಗಳಾದುದರಿಂದ ೧೪ ಮನ್ವಂತರಗಳಾಗುತ್ತವೆ. ॥ ೫೫ ॥ ೫೬ ॥ ೫೭ ॥

**ಅವತರಣಿಕಾ:**— ಈ ಪದ್ಯದಿಂದ ಹಗಲು ರಾತ್ರಿಗೆ ೧ ದಿವಸ ಲೆಕ್ಕ ದಂತೆ, ಪಕ್ಷ, ಮಾಸ, ಋತು ಅಯನ, ಅಬ್ದ, ವರುಷ, ಮನುಜ ಮಾನ ದಿಂದ ಪೇಳುತ್ತಾ, ನಾಲ್ಕು ಯುಗಗಳಿಗೆ ಹನ್ನೆರಡು ಸಾವಿರ ದೇವ ಮಾನವರ್ಷಗಳಾಗುವವೆಂದು ಹೇಳುತ್ತಾರೆ.

**ಈ ದಿವಾರಾತ್ರಿಗಳೆರಡು ಹದಿ ।**
**ನೈದು ಪಕ್ಷಗಳೆರಡು ಮಾಸಗ ।**
**ಳಾದಪುವು ಮಾಸದ್ವಯವೆ ಋತು ಋತು ತ್ರಯಗಳಯನ ॥**
**ಐದುವದು (ವು) ಅಯನ ದ್ವಯಾಬ್ದ ಕೃ ।**
**ತಾದಿ ಯುಗಗಳು ದೇವಮಾನದಿ ।**
**ದ್ವಾದಶ ಸಹಸ್ರ ವರುಷಗಳದನು ಪೇಳುವೆನು ॥ ೫೭ ॥**

**ಪದ್ಯಾರ್ಥ:**— ಈ ದಿವಾರಾತ್ರಿಗಳೆರಡು=ಈ ಹಗಲು ರಾತ್ರಿ ಎರಡು ಕೂಡಿದರೆ ಒಂದು ದಿನ, ಇಂಥ ಹದಿನೈದು ದಿನಕ್ಕೆ ಪಕ್ಷ=ಒಂದು ಪಕ್ಷ ವೆಂದು ಕಾಲಸೂಚನೆ, ಇಂಥ ೧೫+೧೫ ದಿನಗಳಿಂದ ಕೂಡಿದ, ಪಕ್ಷಗಳೆ ರಡು ಮಾಸಗಳಾದಪವು=ಎರಡು ಪಕ್ಷಗಳು ಕೂಡಿದರೆ ೩೦ ದಿವಸಗಳಿಗೆ ಮಾಸಗಳು ಆಗುವುವು. ಅದೇ ಮಾಸ ಒಂದು ತಿಂಗಳೆಂದು ಹೆಸರು. ಮಾಸದ್ವಯವೆ ಋತು=ಎರಡು ಮಾಸಗಳು ಕೂಡಿದರೆ ಒಂದು ಋತು ಕಾಲವೆಂದು ಸಂಜ್ಞೆ, ಋತುತ್ರಯಗಳಯನ=ಮೂರು ಋತುಗಳು ಕೂಡಿದರೆ (೬ ತಿಂಗಳಿಗೆ) ಒಂದು ಅಯನವೆಂದು ಕಾಲಸೂಚನೆ. ಐದು ವದು ಅಯನ ದ್ವಯಾಬ್ದ=ಅಯನ ಎರಡು ಆದರೆ, ದಕ್ಷಿಣಾಯನ ಉತ್ತ ರಾಯಣ ಎರಡು ಅಯನಗಳಾದರೆ ಅಬ್ದ=ಒಂದು ವರುಷವೆಂದು ಮನುಜ ಮಾನದಿಂದ ಕಾಲ ವಿವರಿಸಿದ್ದಾರೆ.

(ಮುಂದೆ ನಾಲ್ಕು ಯುಗಗಳಿಗೆ, ಮನುಷ್ಯ ಮಾನಾಬ್ದ ಲೆಕ್ಕ ಪದ್ಯ ೫೯-೬೦ ರಲ್ಲಿ ವಿವರಿಸುತ್ತಾರೆ. ನೋಡುವದು.)

ಕೃತಾದಿಯುಗಾದಿಗಳು=ಕೃತ, ತ್ರೇತಾ, ದ್ವಾಪರ, ಕಲಿಯುಗ ೪ ಯುಗಗಳಿಗೆ, ದೇವಮಾನದಿ=ದೇವತೆಗಳ ಆಯುರ್ಮಾನಕಾಲ ವಿವರ

ದಿಂದ ದೇವತೆಗಳ ಕಾಲ ಲೆಕ್ಕದಿಂದ, ಒಟ್ಟು ದ್ವಾದಶ ಸಹಸ್ರ ವರುಷ ಗಳದನು ಪೇಳುವೆನು=ಹನ್ನೆರಡು ಸಾವಿರ ವರುಷಗಳ ಲೆಕ್ಕ ಮುಂದಿನ ಪದ್ಯದಿಂದ ಪೇಳುವೆನೆಂದು ಹೇಳಿದ್ದಾರೆ. ಶ್ರೀ ವಿಜಯರ ವಚನದಂತೆ ಇಲ್ಲಿಯೇ ಮನುಜ ಮಾನಾಬ್ದ ವಿವರಿಸುತ್ತದೆ. ಮನುಜರ ೩೦ ದಿನ ೧ ತಿಂಗಳು, ಪಿತೃಗಳಿಗೆ ಒಂದು ದಿವಸ, ಮನುಜರ ೩೬೦ ದಿನ ಒಂದು ಅಬ್ದಕ್ಕೆ ದೇವತೆಗಳಿಗೆ ಒಂದು ದಿವಸ ಅಂದರೆ ಮಾನವರ ೩೬೦ ವರ್ಷಗ ಳಿಗೆ ದೇವತೆಗಳಿಗೆ ೧ ವರ್ಷ ಈ ಲೆಕ್ಕದಂತೆ.

ಮನುಜರ ೧೭,೨೮೦೦೦ ವರ್ಷ ಕೃತಯುಗ
" ೧೨,೯೬೦೦೦ ವರ್ಷ ತ್ರೇತಾಯುಗ
" ೮,೬೪೦೦ ವರ್ಷ ದ್ವಾಪರಯುಗ
" ೪,೩೨೦೦೦ ವರ್ಷ ಕಲಿಯುಗಕ್ಕೆ

ಮಾನ ವರ್ಷಗಳು. ೪೩,೨೦೦೦೦ (೧) ಮಹಾಯುಗಕ್ಕೆ ಮನುಜ ಮಾನ ವರ್ಷ.

**ಭಾವಸೂಚನ:**— ‖ ಈ ದಿವ್ಯೇತಿ ‖ ೫೭ ‖

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

**‖ ಈತಿ ‖ ೫೭ ‖**

ಹಿಂದಿನ ೫೬ನೇ ಪದ್ಯದಲ್ಲೇ ಪ್ರಮಾಣ ಕೊಟ್ಟಿದ್ದಾರೆ.

**ಅವತರಣಿಕಾ:**— ದೇವ ಮಾನವದಿಂದ ಕೃತ ತ್ರೇತಾ ದ್ವಾಪರ ಕಲಿಯುಗ ನಾಲ್ಕು ಯುಗಗಳಿಗೆ ೧೨೦೦೦ ಸಾವಿರ ವರುಷಗಳಾಗುವುವು ಎಂದು ಹಿಂದಿನ ಪದ್ಯದಲ್ಲಿ ಹೇಳಿದ್ದನ್ನು ವಿವರಿಸುತ್ತಾರೆ.

**ಚತುರ ಸಾವಿರದೆಂಟು ನೂರಿವು ।**
**ಕೃತಯುಗಕೆ ಸಹಸ್ರ ಸಲೆ ಷಟ್ ।**
**ಶತವು ತ್ರೇತೆಗೆ ದ್ವಾಪರಕೆ ದ್ವಿಸಹಸ್ರ ನಾನೂರು ॥**

**ದಿತಿಜಪತಿ ಕಲಿಯುಗಕೆ ಸಾವಿರ।**
**ಶತದ್ವಯುಗಳು ಕೂಡಿ ಈ ದೇ।**
**ವತೆಗಳಿಗೆ ಹನ್ನೆರಡು ಸಾವಿರ ವಿಹವು ವರುಷಗಳು** ॥ ೫೮ ॥

**ಪದ್ಯಾರ್ಥ** :—ದೇವಮಾನದಿಂದ ವರುಷಗಳ ಲೆಕ್ಕ—

| | |
|---|---|
| ಕೃತಯುಗಕೆ, ಚತುರ ಸಾವಿರದೆಂಟುನೂರಿವು | ೪,೮೦೦ |
| ತ್ರೇತೆಗೆ=ತ್ರೇತಾಯುಗಕೆ ತ್ರಿಸಹಸ್ರ ಸಲೆಷಟಶತ | ೩,೬೦೦ |
| ದ್ವಾಪರಕೆ=ದ್ವಾಪರಯುಗಕೆ ದ್ವಿಸಹಸ್ರ ನಾನೂರು | ೨,೪೦೦ |
| ದಿತಿಜಪತಿ ಕಲಿಯುಗಕೆ ಸಾವಿರ ಶತದ್ವಯುಗಳು | ೧,೨೦೦ |
| ದೈತ್ಯರ ರಾಜನಾದ ಕಲಿ ಆಳುವ ಈ ಯುಗಕೆ ಒಟ್ಟು ಲೆಕ್ಕ | ೧೨,೦೦೦ |

ಕೂಡಿಸಿದರೆ, ದೇವತೆಗಳಿಗೆ ಹನ್ನೆರಡು ಸಾವಿರವಿಹವು. ಒಟ್ಟಿಗೆ ವರುಷಗಳು=ದೇವಮಾನದಿಂದ ೧೨,೦೦೦ ವರ್ಷವಾಗುತ್ತವೆ. ಹೀಗೆ ನಾಲ್ಕು ಯುಗಗಳಿಂದ ಯುಕ್ತವಾದ ಮಹಾಯುಗದ ವರುಷಗಳ ಲೆಕ್ಕವಾಗುತ್ತದೆ.

**ಭಾವಸೂಚನ** :—ಚತುರೇತಿ, ಸಲೆ ಒಟ್ಟು।

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಚತುರೇತಿ ॥ ಸಲೆ=ಮೊತ್ತ ॥ ೫೮ ॥

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ಈ ಪದ್ಯಾರ್ಥ ಪ್ರಮಾಣಗಳನ್ನೆಲ್ಲ ೫೬ನೇ ಪದ್ಯದಡಿ, ಪದ್ಯ ೫೭-೫೮ರ ವಿವರ ಮಾಡಿದ್ದಾರೆ.

**ಅವತರಣಿಕಾ**:—ಹಿಂದೆ ೫೭ ನೇ ಪದ್ಯದಲ್ಲಿ ಮನುಜಮಾನ ವರುಷ ವಿವರಿಸಿದಂತೆ ಮನುಜರ ೩೬೦ ದಿನದೇವತೆಗಳಿಗೆ ಒಂದು ವರ್ಷವಾದರೆ ದೇವತೆಗಳ ಮಾನ ವಿವರ ಹಿಂದೆ ೫೮ ನೇ ಪದ್ಯದಲ್ಲಿ ಹೇಳಿ,೩೬೦ ವರ್ಷಮಾನವವರ್ಷ ವಿವರ ಹೇಳುತ್ತಾರೆ.

**ಪಥ್ರಮ ಯುಗ ಕೇಳಧಿಕ ಅರೆ ವಿಂ।**
**ಶತಿ ಸುಲಕ್ಷಾಷ್ಟೋತ್ತರ ಸುವಿಂ।**
**ಶತಿ ಸಹಸ್ರ ಮನುಷ್ಯ ಮಾನಾಬ್ದಗಳು ಷಣ್ಣವತಿ॥**
**ಮಿತ ಸಹಸ್ರದ ಲಕ್ಷ ದ್ವಾದಶ।**
**ದ್ವಿತಿಯ ತೃತಿಯಕೆ ಎಂಟು ಲಕ್ಷದ।**
**ಚತುರಷಷ್ಟಿ ಸಹಸ್ರ ಕಲಿಗಿದರರ್ಧ ಚಿಂತಿಪುದು ॥ ೫೯ ॥**

**ಪದ್ಯಾರ್ಥ:**—೧ ಪ್ರಥಮಯುಗಕೆ=ಮೊದಲನೆಯ ಕೃತಯುಗಕೆ, ಏಳಧಿಕ ಅರೆವಿಂಶತಿ ಸುಲಕ್ಷಾ,=ಅರೆವಿಂಶತಿ ಅಂದರೆ ವಿಂಶತಿ ಇಪ್ಪತ್ತಕ್ಕೆ ಅರ್ಧ ಹತ್ತು ಈ ಹತ್ತಕ್ಕೆ ಏಳಧಿಕ= ೧೦+೭=೧೭ ಹದಿನೇಳು ಸುಲಕ್ಷ. ಸಮಿಾಚೀನವಾದ ೧೭ ಲಕ್ಷ, ಅಷ್ಟೋತ್ತರ ಸುವಿಶಂತಿ ಸಹಸ್ರ=ಇಪ್ಪತ್ತಕ್ಕೆ ಎಂಟು ಹೆಚ್ಚಾದದ್ದು. ಅಂದರೆ ೨೮ ಸಾವಿರ, ಒಟ್ಟಿಗೆ ಕೃತ ಯುಗಕ್ಕೆ ೧೭.೨೮೦೦೦ ವರುಷ

(ದೇವಮಾನ ೪೮೦೦x೩೬೦= ಮನುಷ್ಯ ಮಾನಾಬ್ದಗಳು=ಮನುಜರ ಮಾನದಿಂದ ವರ್ಷ.)

೨. ಷಣ್ಣವತಿ ಮಿತಸಹಸ್ರದ, ಲಕ್ಷದ್ವಾದಶ ದ್ವಿತಿಯಕೆ=ಹನ್ನೆರಡು ಲಕ್ಷದಾ, ಷಣ್ಣವತಿ ಸಾವಿರ ೯೬ ಸಾವಿರ ವರುಷ ೧೨,೯೬೦೦೦ ವರುಷ ಮಾನವವರ್ಷಗಳು ದ್ವಿತೀಯಕೆ=ತ್ರೇತಾ ಯುಗಕೆ.

೩. ತೃತಿಯಕೆ=ಮೂರನೆ ಯುಗವಾದ ದ್ವಾಪರಯುಗಕೆ ಎಂಟುಲಕ್ಷದ ಚತುರಷಷ್ಟಿ ಸಹಸ್ರ ೮,೬೪೦೦೦ ವರುಷ

೪. ಕಲಿಗಿದರರ್ಧ ಚಿಂತಿಪುದು=ಕಲಿಯುಗಕೆ

| | |
|---|---|
| ದ್ವಾಪರದ ಅರ್ಧ | ೪,೩೨೦೦೦ ವರುಷ |
| ನಾಲ್ಕು ಲಕ್ಷದಾ ಮುವತ್ತೆರಡು ವರ್ಷ ಗಳಾಗುವುವು. ಹೀಗೆ ೪ ಯುಗಕೆ ಒಟ್ಟಿಗೆ | ———— |
| ಮನುಜಮಾನಾಬ್ದಗಳು. | ೪೩,೨೦೦೦೦ |
| ಮಹಾಯುಗಕೆ ನಲ್ವತ್ತುಮೂರು ಲಕ್ಷ ಇಪ್ಪತ್ತು ಸಾವಿರ ಮಾನವ ವರುಷಗಳು. | ———— |

**ಭಾವಸೂಚನ:**— ॥ ಪ್ರಥಮೇತಿ ॥ ಪ್ರಕಾಶಸಂಹಿತಾಯಾಂ ॥ ಅಷ್ಟಾವಿಂಶತ್ ಸಹಸ್ರೇತ ಲಕ್ಷ ಸಪ್ತದಶಾಬ್ದತಃ ॥ ಕ್ಲೃಪ್ತಃ ಕೃತಯುಗ ಸ್ತಸ್ಮಾತ್ರೇತಾ ಪಾದೋನ ಉಚ್ಯತೇ ॥ ಸಹಸ್ರ ಷಣ್ಣವತ್ಯೇತಲಕ್ಷ ದ್ವಾದಶ ಸಂಮಿತಃ ॥ ತ್ರೇತ್ರಾಯುಗಸ್ತು ತತ್ಪಾದ ಸ್ಯೂನೋ ದ್ವಾಪರ ಈರಿತಃ ॥ ಚತುಷ್ಷಷ್ಟಿ ಸಹಸ್ರೇತ ದಶಲಕ್ಷಾತ್ಮ ಈರಿತಃ ॥ ದ್ವಾಪರಸ್ತು ಕಲಿಸ್ತಸ್ಮಾದರ್ಧಂ ಪಾದ ಇತಿ ಸ್ಮೃತಃ ॥ ದ್ವಿಷೋಡಶ ಸಹಸ್ರೇತ ಚತುರ್ಲಕ್ಷಾತ್ಮಕಲ್ಪಿತಃ ॥ ಚತುರ್ಯುಗಾತ್ಮಕಃ ಕಾಲೋ ಮಹಾಯುಗ ಇತೀರಿತ ಇತಿ ॥ ೫೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಏವಂ ದೇವಮಾನೇನ ಚತುರ್ಯುಗ ಸಂಖ್ಯಾಂ ಉಕ್ತ್ವಾ "ಅಷ್ಟಾವಿಂಶತಿ ಸಹಸ್ರೇತ ಲಕ್ಷ ಸಪ್ತ ದಶಾತ್ಮಕಃ ॥ ಕ್ಲೃಪ್ತಃ ಕೃತಯುಗಃ ತಸ್ಮಾತ್ ತ್ರೇತಾ ಪಾದೋನ ಉಚ್ಯತೇ ॥ ಸಹಸ್ರಷಣ್ಣವತ್ಯೇತ ಲಕ್ಷ ದ್ವಾದಶ ಸಮ್ಮಿತಃ ॥ ತ್ರೇತಾಯುಗಃ ತತಃ ಪಾದಾದೂನೋ ದ್ವಾಪರ ಈರಿತಃ ॥ ದ್ವಾಪರಸ್ಯ ಕಲಿಃ ತಸ್ಮಾತ್ ಅರ್ಧಪಾದಮಿತಃ ಸದಾ ॥ ದ್ವಿಷೋಡಶ ಸಹಸ್ರೇತ ಚತುರ್ಲಕ್ಷಾತ್ಮಕಃ ಕಲಿಃ ॥ ಇತಿ ಮಂಜಯುರ್ಕ್ತ (ಪ್ರನಾಡ್ಯಾ) ಪ್ರಾಣಾಡ್ಯಾ ಮಾನುಷ ವರ್ಷೈಃ ಕಲ್ಪಂ ಗಣಯತಿ– "ಪ್ರಥಮೇತಿ" "ಅರೆ" ಅರ್ಧ–"ಮಿತಿ"–ಪರಿಮಿತಿ ॥

(೧) 'ಕೃತಂ'–೧೭,೨೮,೦೦೦ (೨) 'ತ್ರೇತಾ'–೧೨,೯೬,೦೦೦ (೩) 'ದ್ವಾಪರಂ'–೮೬,೪,೦೦೦ (೪) 'ಕಲಿಃ'–೪,೩೨,೦೦೦ ॥ ೫೯ ॥

**ಕನ್ನಡಾರ್ಥ**

ದೇವಮಾನದಿಂದ ಚತುರ್ಯುಗಗಳ ವರ್ಷ ಸಂಖ್ಯೆಯನ್ನು ಹೇಳಿದರು. ಇನ್ನು 'ಮಂಜರೀ' ಎಂಬ ಗ್ರಂಥದಲ್ಲಿ ಮೇಲಿನ ಮೂಲದಲ್ಲಿ ತೋರಿಸಿದ ಶ್ಲೋಕಗಳಿಂದ ಹೇಳಿದಂತೆ, ಮಾನುಷ ವರ್ಷಮಾನದಿಂದ ಕಲ್ಪವನ್ನು ಗಣತಿಯಿಂದ ತಿಳಿಸುತ್ತಾರೆ. 'ಪ್ರಥಮ' ಈ ಪದ್ಯದಿಂದ.

ಅರೆ ಸಂಖ್ಯೆಗಳನ್ನು ಟೀಕಾಕಾರರು ತಾವೇ ಬರೆದಿರುವುದರಿಂದ ಮತ್ತೆ ಇಲ್ಲಿ ಅದನ್ನು ಬರೆಯುವ ಆವಶ್ಯಕತೆ ಇರುವುದಿಲ್ಲ. ॥ ೫೯ ॥

**ಅವತರಣಿಕಾ:**— ಈ ಪದ್ಯದಿಂದ ಹಿಂದೆ ಹೇಳಿದ ಮಹಾಯುಗಕ್ಕೆ ಮನುಷ್ಯ ಮಾನಾಬ್ದಗಳನ್ನು ವಿವರಿಸುತ್ತಾ, ಬ್ರಹ್ಮದೇವರ ಒಂದು ದಿನಕ್ಕೆ ಮನುಷ್ಯಮಾನಾಬ್ದ ದಿವಸಗಳ ಲೆಕ್ಕ ಹೇಳುತ್ತಾ ಕ್ರೋಡೀಕರಿಸುತ್ತಾರೆ.

**ಮೂರಧಿಕ ನಾಲ್ವತ್ತು ಲಕ್ಷದ ।**
**ಆರು ಮೂರೆರಡಧಿಕ ಸಾವಿರ ।**
**ಈರೆರಡು ಯುಗ ವರುಷ ಸಂಖ್ಯೆ ಗೈಯ್ಯಲಿನಿತಿಹದೂ ॥**
**ಸೂರಿ ಪೆಚ್ಚಿಸೆ ಸಾವಿರದಿ (ದ) ನಾ ।**
**ನೂರು ಮೂವತ್ತೆರಡು ಕೋಟಿ ಸ ।**
**ರೋರುಹಾಸನಿಗಿದು ದಿವಸವೆಂಬರು ವಿಪಶ್ಚಿತರು ॥ ೬೦ ॥**

**ಪದ್ಯಾರ್ಥ:**—ಮೂರಧಿಕ ನಾಲ್ವತ್ತು ಲಕ್ಷದ = ನಾಲ್ವತ್ತಕ್ಕೆ ಮೂರು ಹೆಚ್ಚು ಅಂದರೆ ನಾಲ್ವತ್ತು ಮೂರು ೪೩ ಲಕ್ಷದಾ,— ಆರು= ೬xಮೂರೆರಡು ೩+೨=೫ ಹೇಗೆ ೬x೫=೩೦—ಎರಡಧಿಕ. ದ್ವಿರಾವರ್ತಿ ಯೋಜನ ೩೦ಕ್ಕೆ ಎರಡು ಅಧಿಕವಾದರೆ ೩೨ ಸಾವಿರ, ಒಟ್ಟಿಗೆ ೪ ಲಕ್ಷ ೩೨ ಸಾವಿರ ವರ್ಷಗಳು. ಯುಗವರುಷ ಸಂಖ್ಯೆಯಗೈಯ್ಯಲಿನಿತಿಹದೂ= ಹೀಗೆ ನಾಲ್ಕು ಯುಗಕೆ ಒಟ್ಟಿಗೆ ಲೆಕ್ಕಮಾಡಿದರೆ, ೪,೩೨೦೦೦ ಮನುಜ ಮಾನದಿಂದ ವರುಷಗಳಾಗುವುವು. "ಚತುರ್ಯುಗಸಹಸ್ರಾಣಿ ಬ್ರಹ್ಮಣೋ ದಿನಮುಚ್ಯತೇ" ನಾಲ್ಕು ಯುಗಗಳು ಒಂದು ಸಾವಿರ ಬಾರಿ ತಿರುಗಿ

ವರೆ ಬ್ರಹ್ಮದೇವರಿಗೆ ಒಂದು ದಿವಸವಾಗುತ್ತದೆಂದು ತಿಳಿದ ಸೂರಿ=ಜ್ಞಾನಿಗಳು, ವಿದ್ವಾಂಸರು, ಸಾವಿರದಿ ಪೆಚ್ಚಿಸೆ ಒಂದು ಸಾವಿರದಿಂದ ಗುಣಿಸಲು ೪,೩೨೦೦೦೦X೧೦೦೦=೪,೩೨೦೦೦೦೦೦೦ ನಾನ್ನೂರ ಮೂವತ್ತೆರಡು ಕೋಟಿ ಮನುಜಮಾನ ವರ್ಷಗಳು, ಸರೋರುಹಾಸನಿಗಿದು ದಿವಸ=ಕಮಲಾಸನನಾದ ಬ್ರಹ್ಮದೇವರಿಗೆ ಒಂದು ದಿವಸ ಆಗುತ್ತದೆಂದು ವಿಪಶ್ಚಿತರು ಎಂಬುವರು=ಜ್ಞಾನಿಗಳು ಹೇಳುತ್ತಾರೆಂದು ಹೇಳಿದ್ದಾರೆ.

**ಭಾವಸೂಚನ :**—ಮೂರೇತಿ ಗೈಯ್ಯಲಿ ಮಾಡಿದ್ದೆ ಆದರೆ–ಇದಕೆ ವಿವರ—ಮಾನುಷ ಮಾನಲಕ್ಷಣ ಏಳಧಿಕ ಅರೆವಿಂಶತಿ ಅಂದರೆ ೧೭ ಲಕ್ಷ. ಅಷ್ಟೋತ್ತರವಿಂಶತಿ ಸಹಸ್ರ ಎಂದರೆ ೨೮ ಸಾವಿರ ೧೭,೨೮,೦೦೦ ಸಾವಿರ ಕೃತಯುಗಕೆ, ತ್ರೇತಾಯುಗಕೆ, ದ್ವಾದಶ ಲಕ್ಷ ತೊಂಭತ್ತಾರು ಸಾವಿರ ೧೨,೯೬,೦೦೦. ದ್ವಾಪರಕೆ–೮,೬೪,೦೦೦ ಎಂಟು ಲಕ್ಷದ ಅರವತ್ತು ನಾಲ್ಕು ಸಾವಿರ. ಕಲಿಯುಗಕೆ ತದರ್ಧ–೪,೩೨,೦೦೦ ಸಾವಿರ. ಒಟ್ಟು ೪, ೩೨,೦೦೦ ಸಾವಿರ ವರುಷವಾಗುತ್ತವೆ. "ಸೂರಿಪೆಚ್ಚಿಸೇತಿ ॥ ಜ್ಞಾನಿಯೂದವರು ಉಕ್ತಸಂಖ್ಯಾವನ್ನು ಸಹಸ್ರದಿಂದ ಹೆಚ್ಚಿಸಲು ನಾನೂರು ಕೋಟಿಯೆಂದರೆ ನಾಲ್ಕು ಅಬ್ಜ ಮೂವತ್ತೆರಡು ಕೋಟಿ ದಿವಸಗಳಹವು. ಉಕ್ತಂ ಚ ॥ "ಚತುರ್ಯುಗ ಸಹಸ್ರಾಣಿ ಬ್ರಹ್ಮಣೋ ದಿನಮುಚ್ಯತೇ ಎಂಬ ನ್ಯಾಯಕ್ಕೆ ಸಮನಾಗಿ ದೇವಮಾನ ೧೨,೦೦೦ ಹನ್ನೆರಡು ಸಾವಿರ ವರುಷಕ್ಕೆ ಒಂದು ಯುಗ. ಅಂಥಾ ಯುಗ ಸಾವಿರ ಕೂಡಿಸಿದರೆ ಬ್ರಹ್ಮನ ಹಗಲು. ಇದಕ್ಕೆ ಮಾನುಷ ಮಾನವೇ ಮೇಲೆ ಹೇಳಿದ್ದು. ॥ ೬೦ ॥

**"ಶ್ರೀ ವಿಜಯದಾಸರ ಸುಳಾದಿಯಂತೆ ಮನುಜಮಾನ :—**

೧. ಕೃತಾದಿ ನಾಲ್ಕು ಯುಗಗಳಿಗೆ, ೪೩,೨೦,೦೦೦ ವರುಷ.

೨. ಕೃತಾದಿ ೪ ಯುಗಗಳು ೧೦೦೦ ಸಾರೆ ತಿರುಗಿದರೆ ಬ್ರಹ್ಮದೇವರ ಒಂದು ದಿವಸಕ್ಕೆ ನಾಲ್ಕು ಅಬ್ಜ ಮೂವತ್ತೆರಡು ಕೋಟಿ ಮನುಜಮಾನ. ೪,೩೨,೦೦೦೦೦೦೦ ವರುಷ

೩. ಬ್ರಹ್ಮದೇವರ ೩೬೦ ದಿವಸಕ್ಕೆ
ಒಂದು ವರ್ಷ ಬ್ರಹ್ಮ ದೇವರ
ಮಾನಕ್ಕೆ ೧೫,೫೫,೨,೦೦೦೦೦೦೦ ವರುಷ
೪. ಇಂಥ ಬ್ರಹ್ಮದೇವರ ೧೦೦
ವರ್ಷಕ್ಕೆ ಮನುಜಮಾನ ವರ್ಷ
ಗಳು ೧೫,೫೫,೨,೦೦೦೦೦೦೦೦೦ ವರುಷ
ಸೃಷ್ಟಿ, ಸುಳಾದಿ ಪುಟ ೪೯. ಪದ್ಮ, ಖರ್ವ,ಅರ್ಬುದ.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಕ್ತಂ ಕ್ರೋಡೀಕರೋತಿ ॥ ಮೂರೇತಿ ॥ ಆರು ಮೂರು ಎರಡು ೨೦ ಪೆಚ್ಚಿಸೆ ॥ ಮಂಜರ್ಯಾಂ ಸ್ಪಷ್ಟಂ ॥ ನಾನೂರು ಮೂವತ್ತೆರಡು ಕೋಟಿ ವರುಷಾಣಾಂ (೨೦) ಸಹಸ್ರ ನ್ಯೂನೇ ತಸ್ಯ ಮನುಃ ಸಂಧಿಕಾಲ ಮೇಲನಮ್ ಪ್ರಥಮ ಮನುಃ೧೫೦೦ದ್ವಿತೀಯ ಮನುಃ ೧೬೦೦ ತೃತೀಯ ಮನುಃ೧೫೦೦,ಚತುರ್ಥ ಮನುಃ ೧೫೦೦, ಪಂಚಮ ಮನುಃ ೧೫೦೦, ಷಷ್ಠ ಮನುಃ ೧೫೦೦, ಸಪ್ತಮ ಮನುಃ ೧೪೦೦, ದಶಮ ಮನುಃ ೧೪೦೦, ಏಕಾದಶ ಮನುಃ ೧೪೦೦, ದ್ವಾದಶಮನುಃ ೧೪೦೦, ತ್ರಯೋದಶ ಮನುಃ ೧೪೦೦ ಚತುರ್ದಶ್ಚಮನುಃ ೧೬೦೦.

ಅಧಿಕಂ ಶ್ರೀ ತೃತೀಯ ತಾತ್ಪರ್ಯೇ ದ್ರಷ್ಟವ್ಯಮ್ ॥ ಸಂಧ್ಯಾ ಪಂಚದಶೈವಂ ತಾಃ ಯುಕ್ತಾಃ ಮನ್ವಂತರಾಬ್ಧಕೈಃ ॥ ಕೃತೈವಂ ಜ್ಞಾಯತೇ ಯತ್ತನ್ಮಹಾ ಯುಗಸಹ್ರಕಮ್ ॥ ಪಿತಾಮಹದಿನಂ ತ್ವೇತ

---

**ಸೂಚನೆ:**—ಇದರ ವಿಸ್ತಾರ, ಶ್ರೀ ವಿಜಯದಾಸರ ಸೃಷ್ಟಿಪ್ರಕರಣ ಸುಳಾದಿ ೧೧. ಮನುಗಳ ಸಂಧಿಕಾಲ ವಿವರ, ಪುಟ ೪೫ ರಿಂದ ೫೦ವರೆಗೆ ನೋಡುವದು,ಮೇಲೆ ಹೇಳಿದ ಲೆಕ್ಕಕ್ಕೂ ಸುಳಾದಿ ವಿವರ ಲೆಕ್ಕಕ್ಕೂ ಸ್ವಲ್ಪ ವ್ಯತ್ಯಾಸ ಬರುತ್ತದೆ. ತಜ್ಞರಿಂದ ತಿಳಿದು ಸರಿಪಡಿಸಿ ಕೊಳ್ಳುವದು, ಅಂತು ಮನುಗಳ ಸಂಧಿ ಕಾಲ ಕೂಡಿದರೆ ಬ್ರಹ್ಮದೇವರಿಗೆ ೧ ದಿನವಾಗುತ್ತದೆಂದು ಮುಖ್ಯ ತಾತ್ಪರ್ಯ.

ತ್ತಾವತೀ ರಾತ್ರಿರೇವ ಚ ॥ ಸಾ ಹಿ ಕಲ್ಪ ಇತಿ ಪ್ರೋಕ್ತಾತಚ್ಛತತ್ರಯ ಷಷ್ಟಿಕಮ್ ॥ ವರ್ಷಂ ಬ್ರಾಹ್ಮಮಿತಿ ಪ್ರೋಕ್ತಂ ತಚ್ಛತಂ ಪರಮುಚ್ಯತೇ॥ ತದರ್ಧಂ ತು ಪರಾರ್ಧಂ ಸ್ಯಾತ್ ಪಂಚಾಶದ್ ಬ್ರಹ್ಮ ವಾರ್ಷಿಕಮ್ ॥ ಪರಮಾಯುಃ ಬ್ರಹ್ಮಣಃ ಸ್ಯಾತ್ ತದತೀತೇ ಚ ತಲ್ಲಯಃ ॥ ೬೦ ॥

**ಕನ್ನಡಾರ್ಥ**

ಇಲ್ಲಿ ತಿಳಿಯಬೇಕಾದ ಹೆಚ್ಚಿನವಿಷಯಗಳನ್ನು ಭಾಗವತ ತೃತೀಯ ಸ್ಕಂಧ ತಾತ್ಪರ್ಯದಲ್ಲಿ ತಿಳಿಯಬೇಕು.

ಮನ್ವಂತರ ವರ್ಷಗಳಿಂದ ಸಹಿತವಾದರೆ ೧೫ ಯುಗಗಳಾಗುವುವು. ಹೀಗೆ ಮೇಳನದಿಂದ ಸಾವಿರ ಮಹಾ ಯುಗಗಳು ಪಿತಾಮಹನ ಒಂದು ದಿನ (ಹಗಲು) ಎಂದು ಗೊತ್ತಾಗುತ್ತದೆ. ಇದರಷ್ಟೇ ರಾತ್ರಿಮಾನ. ಇದಕ್ಕೆ ಕಲ್ಪವೆಂದು ಹೆಸರು. ಈ ೩೬೦ ದಿನಗಳು ಸೇರಿದರೆ ಬ್ರಹ್ಮಮಾನದ ಒಂದು ವರ್ಷ. ನೂರು ವರ್ಷಗಳ ಕಾಲಕ್ಕೆ "ಪರ" ವೆನ್ನುತ್ತಾರೆ. ಅರ್ಧ ಪರಕ್ಕೆ (೫೦ ವರ್ಷಕ್ಕೆ) ಪರಾರ್ಧವೆಂದು ಕರೆಯುತ್ತಾರೆ. ಹೀಗೆ ಪರಾಂತ್ಯ ಕಾಲವೇ ಬ್ರಹ್ಮದೇವರ ಪರಮಾಯುಷ್ಯ ಪರಕಾಲವು ಮುಗಿಯುವಾಗ ಬ್ರಹ್ಮಲಯವಾಗುತ್ತದೆ ॥ ೬೦ ॥

**ಅವತರಣಿಕಾ** :—ಹಿಂದಿನ ಪದ್ಯದಲ್ಲಿ ಬ್ರಹ್ಮದೇವರಿಗೆ ಒಂದು ದಿನದಲ್ಲಿ ಮನುಜ ಮಾನಾಬ್ದಗಳು ಹೇಳಿ ಈ ಪದ್ಯದಿಂದ ಬ್ರಹ್ಮದೇವರ ಮಾನದಿಂದಾಗುವ ಮಾಸ, ಅಬ್ದ ಇಂತಹ ನೂರು ವರುಷ ಲೆಕ್ಕ ಮತ್ತು ಎರಡನೇ ಐವತ್ತು ವರ್ಷದಲ್ಲಿ ಸೃಷ್ಟ್ಯಾದಿ ವ್ಯಾಪಾರ ಭಗವಂತನ ಮಹಿಮೆ ಪೇಳುತ್ತಾರೆ.

**ಶತಧೃತಿಗೆ ಈ ದಿವಸಗಳು ತ್ರಿಂ ।**
**ಶತಿಯು ಮಾಸ ದ್ವಾದಶಾಬ್ದವು ।**
**ಶತವೆರಡರೊಳು ಸರ್ವ ಜೀವೋತ್ಪತ್ತಿ ಸ್ಥಿತಿ ಲಯವು ॥**
**ಶ್ರುತಿ ಸ್ಮೃತಿಗಳು ಪೇಳುತಿಹವ ।**

**ಚ್ಯುತಗೆ ನಿಮಿಷವಿದೆಂದು ಸುಖ ಶಾ।**
**ಶ್ವತಗೆ ಪಾಸಟಿಯೆಂಬುವರೆ ಬ್ರಹ್ಮಾದಿ ದಿವಿಜರನು ॥ ೬೧ ॥**

**ಪಧ್ಯಾರ್ಥ** :—ಶತ=ನೂರು, ಅನಂತ ಧೃತಿಗೆ=ಧಾರಣಂ ಧೃತಿ=ಧೈರ್ಯ, ಸ್ಥೈರ್ಯ, ಬಲ, ಜ್ಞಾನ ಅನಂತ ಉಳ್ಳವರು, ಶ್ರೀಹರಿಯನ್ನು ಅನಂತ ಬಗೆ ಬಲ್ಲವರು, ಅನಂತ ಗುಣೋಪಾಸಕರು. ಸರ್ವಜ್ಞ ಬ್ರಹ್ಮದೇವರಿಗೆ ಈ ದಿವಸಗಳು=ಹಿಂದಿನ ಪದ್ಯದಲ್ಲಿ ಹೇಳಿವಂತೆ ೧ ದಿನ ಲೆಕ್ಕದಂತೆ ಈ ದಿನಗಳು ತ್ರಿಂಶತಿ, ಮಾಸ=ಮೂವತ್ತು ದಿನಗಳಾದರೆ ಒಂದು ತಿಂಗಳು. ಇಂಥ ಮಾಸ ದ್ವಾದಶಾಬ್ದವು=ಇಂಥ ೧೨ ತಿಂಗಳಾದರೆ ಬ್ರಹ್ಮದೇವರಿಗೆ ಒಂದು ವರ್ಷ. ಶತವೆರಡರೊಳು=ಇಂತಹ ನೂರು ವರ್ಷ ಎರಡನೇ ಭಾಗದಿ ಅಂದರೆ ಮೊದಲಿ ೫೦ ವರ್ಷ ಬಹಿರ್ಬ್ರಹ್ಮಾಂಡವಲ್ಲಿ ವ್ಯಾಪಾರ ಭಗವದುಪಾಸನೆ, ಎರಡನೇ ೫೦ ವರ್ಷ ದ್ವಿಪರಾರ್ಧವಲ್ಲಿ ಸರ್ವ ಜೀವೋತ್ಪತ್ತಿ ಸ್ಥಿತಿ ಲಯವು=ಶ್ರೀಹರಿ ಆಜ್ಞೆಯಿಂದ ಶ್ರೀಹರಿಯ ಪ್ರೀತಿಗೋಸುಗ ಸರ್ವಜೀವರ ಸೃಷ್ಟಿ, ಸ್ಥಿತಿ, ಪಾಲನೆ, ಲಯವು. ಶ್ರೀಹರಿಯು ಬ್ರಹ್ಮಾಂತರ್ಯಾಮಿ ಬ್ರಹ್ಮನಾಮದಿಂದ ಸೃಷ್ಟಿ ಸ್ವಯಂತಾನೆ ವಿಷ್ಣು ರೂಪದಿಂದ ಪಾಲನೆಯೇ ಸ್ಥಿತಿ. ಲಯವು=ರುದ್ರಾಂತರ್ಯಾಮಿಯಾಗಿ ರುದ್ರನಾಮಕ ಹರಿಯು ಲಯ ಸಂಹಾರ ಮಾಡುವನೆಂದು ಶ್ರುತಿ, ಸ್ಮೃತಿಗಳು ಪೇಳುತಿಹವು=ಹೀಗೆ ಸೃಷ್ಟಿ, ಸ್ಥಿತಿ, ಲಯ ವ್ಯಾಪಾರಗಳು ಬ್ರಹ್ಮದೇವರ ಎರಡನೇ ಐವತ್ತು ವರ್ಷದಲ್ಲಿ ಆಗುವುವು. ಅಚ್ಯುತಗೆ=ಸರ್ವಕಾರಣತ್ವಾತ್ ಸರ್ವಾದಿಃ ಯಸ್ಮಾನ್ನಚ್ಯುತ ಪೂರ್ವೇ ಸ ಹ್ಯಚ್ಯುತಸ್ತೇನ ಕರ್ಮಣಾ ॥ ಇತಿ ಭಗವದ್ವಚನಾದಚ್ಯುತಃ ॥ ಶಾಶ್ವತಂ ಶಿವಮಚ್ಯುತಮಿತಿ ಶ್ರುತೇಃ ॥ (ವಿದ್ಯಾಧಿ ರಾಜೀಯ ವಿ.ಸ. ನಾಮ) ಸರ್ವದಾ ಸರ್ವಜೀವರಲ್ಲಿ ಸರ್ವಕ್ರಿಯಗಳಲ್ಲಿದ್ದು ವ್ಯಾಪಾರ ಮಾಡುತ್ತಾ ಒಂದು ಲವವಾದರೂ ಅಗಲದೇ ಇದ್ದು ಚ್ಯುತಿರಹಿತನಾಗಿ ಶಶ್ವದೇಕ ಪ್ರಕಾಶನಾಗಿ ಇರುವ ಹರಿಗೆ ಈ ಬ್ರಹ್ಮದೇವರ (೨೦೦) ಕಲ್ಪಮಾನ ಬ್ರಹ್ಮಮಾನ ವತ್ಸರಗಳು ಒಂದು ನಿಮಿಷ=ಒಂದೆ ರೆಪ್ಪೆ ಬಡಿಯುವ ಕಾಲವಾದರೂ ಪಾಸಟಿ ಎಂಬುವರೆ=ಸರಿಸಮಾನವಲ್ಲ. ಮತ್ತು ಬ್ರಹ್ಮಾದಿ ದಿವಿಜರನು ಸುಖ

ಶಾಶ್ವತಗೆ ಪಾಸಟಿ ಎಂಬುವರೆ=ನಿತ್ಯ ಸುಖಪೂರ್ಣನಾದ ಹರಿಗೆ ಬ್ರಹ್ಮಾದಿ ದೇವದೇವತೆಗಳು ಸರಿಸಮಾನರಲ್ಲ ಎಂಬುವರೆ ? ಇದು ಎನ್ನುವುದಿಲ್ಲವೆಂಬ ಶಿಷ್ಟಯಾರ್ಥ ಕೊಡುತ್ತದೆ. ಶ್ರೀಹರಿಗೆ ಒಂದು ನಿಮಿಷ ಔಪಚಾರಿಕವು.

**ಭಾವಸೂಚನ :**— ॥ ಶತೇತಿ ॥ ಬ್ರಹ್ಮಾ ॥ ೬೧ ॥

**ವಿಶೇಷಸೂಚನೆ:**—ಪೂರ್ವದಲ್ಲಿ ೧೫ನೇ ಸಂಧಿಯಲ್ಲಿ ಕಾಲನಾಮಕ ಪರಮಾತ್ಮನ ಉಪಾಸನೆ ಹೇಳಿದಂತೆ, ಕಾಲಶಬ್ದವಾಚ್ಯ ಕಾಲನಿಯಾಮಕ ಕಾಲನಾಮಕ, ಕಾಲಾತೀತನಾದ ಭಗವಂತನು, ಅಣು ಪರಮಾಣು, ತ್ರಸ ರೇಣು, ಕ್ಷಣತೃಟಿ,ಲವ, ನಿಮಿಷ, ಪಳ, ಘಟಿಕಾ, ದಿವಸ, ಅಹೋರಾತ್ರಿ, ಪಕ್ಷ, ಮಾಸ, ಋತು,ಅಯನ ಅಬ್ದಾದಿ ಪರಾಂತ್ಯಕಾಲದಲ್ಲಿ ಕಾಲಶಬ್ದ ವಾಚ್ಯನಾದ ಶ್ರೀ ಹರಿಯನ್ನ ಜ್ಞಾನಿಗಳು ತಿಳಿದು ಧ್ಯಾನೋಪಾಸನೆಗೈದು ಕಾಲಬಾಧಾದಿಂದ ದೂರರಾಗುವರೆಂದು, ಕಾಲ ತಿಳಿದು. ಶ್ರೀ ಹರಿಯನ್ನ ಭಜಿಸಬೇಕು, ಅಣು ಕಾಲಾದಿಗಳು ಅನಿತ್ಯವಾದರೂ ಕಾಲನಾಮಕ ಹರಿಯ ರೂಪನಿತ್ಯ, ಮಹಾಕಾಲನಿತ್ಯವೆಂಬ ಸುಜ್ಞಾನವೂ ಕಾಲವು ಹರಿಯಾಧೀನವೆಂದು ತಿಳಿದುಪಾಸನೆ ಮಾಡಲೇ ಬೇಕು.

ಕಾಲಾಂತರ್ಯಾಮಿತ್ವೇನ, ತತಶ್ಶಬ್ದವಾಚ್ಯತ್ವೇನ, ತಾತ್ಕಾಲಿಕ ದ್ರವ್ಯಪ್ರವರ್ತಕತ್ವೇನ, ಸ್ಥಿತಂ ಸಚ್ಚಿದಾನಂದ ಲಕ್ಷಣಮ್ ॥ ಎಂಬ ವಚನದಂತೆ ಶ್ರೀಹರಿಯು ಸಚ್ಚಿದಾನಂದಲಕ್ಷಣವೆಂದು ಶ್ರೀ **ವಿಜಯ ದಾಸಾಚಾರ್ಯರು** ಕಾಲ ಪ್ರವರ್ತಕ ಕಾಲ ನಿಯಾಮಕ, ಸೃಷ್ಟಿಪ್ರಕರಣ ೧೧ ನೇ ಸುಳಾದಿ ಧ್ರುವತಾಳ ವೊದಲಿಗೆ, "ಪರಮಾಣ್ವಾ ದ್ವಿಪರಮಾಣು ಮಹಾ ಕಾಲಾಂತ ಕಾಲಸ್ತೇ । ನಿರುತತತ್ಕಾಲಕ್ರಿಯೆ ಪ್ರವರ್ತಕ। ಹರಿಯೆ ತತ್‌ಶಬ್ದ ವಾಚ್ಯಮಂಗಳ ಪುರುಷ ಇರುತಿಪ್ಪಾ ಉಪಯುಕಾಲಾಸ್ತಮಾನ" ಇತ್ಯಾದಿ ವಿಚಾರ ಹೇಳಿದ್ದಾರೆ. ಕಾರಣ ಈ ಕಾಲ ವಿವರ ತಿಳಿಯಲು ಸೃಷ್ಟಿ ಪ್ರಕರಣ ಸುಳಾದಿ ೯-೧೦-೧೧-ಪುಟ ೩೪ ರಿಂದ ಪುಟ ೫೪ ವರೆಗೆ ನೋಡಿ ತಿಳಿಯಲು ವಿಜ್ಞಾಪನೆ. ಇದರಲ್ಲಿ ಎಲ್ಲ ವಿವರ ವಿಸ್ತಾರವಿದೆ. ಕೊನೆಗೆ ೧೧ನೇ ಸುಳಾದಿ ಜತೆಯಲ್ಲಿ.

"ಕಾಲಾಧಿಷ್ಠಾನದಲ್ಲಿ ಕಾಲ ನಾಮಕನಾದ|ಶ್ರೀ ಲೋಲ ವಿಜಯ ವಿಠಲನ ಧ್ಯಾನಮಾಡುವದು || ೬೧ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶತ" ಇತಿ || "ಸರ್ವೇ ನಿಮೇಷಾ ಜಜ್ಞಿರೇ" ಇತಿ ಶ್ರುತಿಃ || ಉಕ್ತಾಃ ಸ್ಮೃತಯಃ || ಪಾಸಟಿ"- ಸರಿ. ಏವಂ ಶತಂ ಸೃಷ್ಟೀಃ, ಶತಂ ಪ್ರಲಯಃ ಇತ್ಯರ್ಥಃ || ೬೧ ||

## ಕನ್ನಡಾರ್ಥ

"ಸರ್ವೇ ನಿಮೇಷಾ ಜಜ್ಞಿರೇ" ಈ ಮುಂತಾದ ಶ್ರುತಿಗಳು. ಆದ ರಂತೆ, ವಿಷ್ಣುರಹಸ್ಯ, ಭಾಗವತ ತಾತ್ಪರ್ಯದಲ್ಲಿ ಉದಾಹೃತ ಪ್ರಮಾಣ ಗೀತಾ ಮುಂತಾದ ಆಗಮಗಳು ಸ್ಮೃತಿಗಳು. ಹೀಗೆ ತಿಳಿಯಬೇಕು. ಶತ ಸೃಷ್ಟಿ ಶತ ಪ್ರಲಯಗಳನ್ನು ತಿಳಿಯಬೇಕು. || ೬೧ ||

**ಅವತರಣಿಕಾ** :— ಇಂತಹ ಬ್ರಹ್ಮಕಲ್ಪವಾದರೂ ಶ್ರೀಹರಿಗೆ ನಿಮಿಷಕಾಲವಿದು, ಉಪಚಾರವೆಂದು, ವೇದಗಳು ಹೇಳುವವು. ಕಾರಣ ಮಹಾಕಾಲ ವಾಚ್ಯನಾದ ಶ್ರೀಹರಿಯ ಧ್ಯಾನಮಾಡಿ ಕ್ಲೃಪ್ತಕಾಲದಲ್ಲಿ ಬ್ರಹ್ಮಾದಿ ದೇವತೆಗಳು ತಮ್ಮ ತಮ್ಮ ಪದವಿ ಐದಿದರೆಂದು ಹೇಳುತ್ತಾರೆ.

225
ಆದಿ ಮಧ್ಯಾಂತಗಳು ಇಲ್ಲದ |
ಮಾಧವಗಿದುಪಚಾರವೆಂದು ಋ- |
ಗಾದಿ ವೇದ ಪುರಾಣಗಳು ಪೇಳುವವು ನಿತ್ಯದಲಿ ||
ಮೋದಮಯನ ಅನುಗ್ರಹವ ಸಂ- |
ಪಾದಿಸಿ ರಮಾ ಬ್ರಹ್ಮ ರುದ್ರೇಂ- |
ದ್ರಾದಿಗಳು ತಮ ತಮ್ಮ ಪದವಿಯನೈದಿ ಸುಖಿಸುವರು ೬೨||

**ಪದಾರ್ಥ** :—ಆದಿ, ಮಧ್ಯ, ಅಂತ್ಯಗಳು ಇಲ್ಲದ=ಮೊದಲು, ನಡುವೆ, ಕೊನೆ-ಎಂಬ ಕಾಲಗಳು ಶ್ರೀಹರಿಗೆ ಇಲ್ಲೇ ಇಲ್ಲ. ಸರ್ವದಾ

ಸರ್ವಕಾಲದಲ್ಲಿ ನಿತ್ಯನಾಗಿ, ಶಾಶ್ವತನಾಗಿರುವ ಮಾಧವಗೆ ಇದು=ಮಧು ಕುಲೋತ್ಪನ್ನತ್ವಾನ್ಮಧುವನ ವಿಹಾರಿತ್ವಾದ್ವಾ ಮಾಧವ=ಮಧುಕುಲದಲ್ಲಿ ಉತ್ಪನ್ನನಾದವ, ಮಧುವನ ವಿಹಾರಿಯಾದ ಹರಿಗೆ ಮಾಧವನೆಂತಲೂ, ಮಾ=ಲಕ್ಷ್ಮೀ, ಧವ=ಪತಿ ಎಂತಲೂ ಶ್ರೀಹರಿಗೆ ಮಾಧವನೆಂದು ಹೆಸರು (ವಿದ್ಯಾಧಿರಾಜೀಯ). ಮಾಧವನಿಗೆ ಇದು ಈ ಬ್ರಹ್ಮಕಲ್ಪ ಬ್ರಹ್ಮಾಂಡ ಸೃಷ್ಟಿ, ಸ್ಥಿತಿ, ಲಯ ಕಾಲಗಳು ಸಹ ಉಪಚಾರವೆಂದು=ಆದರ, ಸತ್ಕಾರ, ಪರಾಮರ್ಶೆಮಾಡಲು ಮೇಲಾಡಿ ತೋರಿಪದುಕೆ ಉಪಚಾರವೆಂದು ಹೇಳುತ್ತಾರೆ. ಇಲ್ಲಿ ಈ ಕಾಲವಾದರೂ ನಿಮಿಷಕ್ಕೂ ಸರಿಹೋಲುವ ಕಾಲವಲ್ಲೆಂಬುದಕ್ಕೆ ಉಪಚಾರ ಕಾಲವೆಂದು, ಋಗಾದಿ ವೇದ=ಋಗಾದಿ ಚತುರ್ವೇದಗಳು, ಪುರಾಣಗಳು=ಅಷ್ಟಾದಶ ಪುರಾಣಗಳು, ಉಪಪುರಾಣ ಗಳು, ನಿತ್ಯದಲಿ=ನಿರಂತರದಲ್ಲಿ ಯಾವಾಗಲೂ, ಪೇಳುತಿಹವು=ಹೇಳುತ್ತಿರು ವುವು. ಮೋದಮಯನ=ಆನಂದಮಯ, ಆನಂದಪೂರ್ಣ, ಸುಖಪೂರ್ಣ ನಾದ ಹರಿಯ, ಅನುಗ್ರಹವ=ಪ್ರೀತಿ, ಕೃಪೆ, ದಯವನ್ನು. ಸಂಪಾದಿಸಿ= ಹೊಂದಿ, ರಮಾ=ಲಕ್ಷ್ಮೀದೇವಿ, ಬ್ರಹ್ಮ=ಚತುರ್ಮುಖ ಬ್ರಹ್ಮದೇವರು, ರುದ್ರೇಂದ್ರಾದಿಗಳು=ರುದ್ರದೇವರು, ಇಂದ್ರದೇವರೇ ಮೊದಲಾದ ಎಲ್ಲ ದೇವತೆಗಳು ತಮ ತಮ್ಮ ಪದವಿಯನೈದಿ ಸುಖಿಸುವರು=ತಮ್ಮ ತಮ್ಮ ಕ್ಲೃಪ್ತ ಕಲ್ಪಗಳಲ್ಲಿ ಸಾಧನಮಾಡಿ ಶ್ರೀಹರಿಯ ಉತ್ತಮ ಪ್ರಸಾದ ಸಂಪಾದಿಸಿ, ಪದವಿಯನೈದಿ=ಇಲ್ಲಿ ಇಂದ್ರಾದಿ ಬ್ರಹ್ಮಪದವಿಯನ್ನು ಹೊಂದಿ, ಮುಕ್ತಿಯಲ್ಲಿ ಸಹ ತಮ್ಮ ಗಣ ಮಧ್ಯದಲ್ಲಿ ಉತ್ತಮರೆನಿಸಿ ಮುಕ್ತಾನಂದವನು ಅನುಭವಿಸುತ್ತ, ಆನಂದಪಡುತ್ತಲಿರುವರು ॥ ೬೨ ॥

**ಭಾವಸೂಚನ** :—ಆದೀತಿ ॥ ಉಪಚಾರೇತಿ ॥ **ಪ್ರಯೋಜ (ನ) ವಿಲ್ಲ** ॥ ವೇದೇತಿ ॥ ಆಪ್ತಕಾಮಸ್ಯ ಕಾ ಸ್ಪೃಹೇತಿ॥ಪುರಾಣಮಿತಿ॥ಸೃಷ್ಟ್ಯಾ ದಿಕಂ ಹರೇಸ್ಸರ್ವ ಪ್ರಯೋಜನಮಪೇಕ್ಷ್ಯತು ॥ ಕುರುತ ಇತಿ ॥ ೬೨॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

'ಆದಿ' ಇತಿ ॥ "ಕಾಲೋಽಯಂ ದ್ವಿಪರಾರ್ಧಾಖ್ಯೋ ನಿಮೇಷ

ಉಪಚರ್ಯತೇ ॥ ಅವ್ಯಾಕೃತಸ್ಯಾನಂತಸ್ಯ ಹ್ಯನಾದೇಃ ಜಗದಾತ್ಮನಃ ॥ ಇತಿ ॥ ೬೨ ॥

## ಕನ್ನಡಾರ್ಥ

ಎರಡು ಪರಾರ್ಧ ಮುಂತಾದ ರೂಪವಾದ ನಿಮೇಷ ರೂಪವಾದ ಕಾಲವು ಪರಮಾತ್ಮನಿಗೆ ಔಪಚಾರಿಕ. ಅನಾದಿಯೂ, ಅನಂತನೂ, ಅವ್ಯಕ್ತನೂ ಆದ ಶ್ರೀಹರಿಗೆ ಇದು ಬಾಧಕವಲ್ಲ-ಸಹಾಯಕವಲ್ಲ. ಕೇವಲ ತನ್ನ ಅಧೀನದಲ್ಲಿ ಇರುವ ನಿಮಿತ್ತ ಮಾತ್ರ. ॥ ೬೨ ॥

**ಅವತರಣಿಕಾ:**— ಈ ಕಥಾಮೃತ ಪಾನ ಮಹಿಮಾ ವರ್ಣಿಸುತ್ತ ಜ್ಞಾನಿಗಳಿಗೆ ಈ ಸುಖ ದೊರೆಯುವದೇ ಹೊರತಾಗಿ, ವ್ಯಾಕುಲರಾದ ಕುಚಿತ್ತರಿಗೆ ದೊರೆಯುವದಲ್ಲ, ಕಾರಣ ವಿವೇಕಿಗಳು ಲೋಕವಾರ್ತೆ ಬಿಟ್ಟು, ಇದನ್ನು ಅವಲೋಕಿಸುವರಿಗೆ ಹರಿಯು ಒಲಿಯುವನೆಂದು ಈ ಸಂಧಿಯನ್ನು ಮುಗಿಸುತ್ತಾರೆ.

**ಈ ಕಥಾಮೃತ ಪಾನ ಸುಖ ಸುವಿ ।**
**ವೇಕಿಗಳಿಗಲ್ಲದಲೆ ನೈಷಿಕ ।**
**ವ್ಯಾಕುಲ ಕುಚಿತ್ತರಿಗೆ ದೊರೆವುದೆ ಆವಕಾಲದಲಿ ॥**
**ಲೋಕವಾರ್ತೆಯ ಬಿಟ್ಟು ಇದನವ ।**
**ಲೋಕಿಸುತ ಮೋದಿಪರಿಗೊಲಿದು ಕೃ ।**
**ಪಾಕರ ಜಗನ್ನಾಥ ವಿಟ್ಠಲ ಪೊರೆವನನುದಿನದಿ ॥ ೬೩ ॥**

ಅಂತು ಸಂಧಿ ೨೪ ಪದ ೬೯೧ ಕ್ಕೆ
ಕಲ್ಪ ಸಾಧನ ಸಂಧಿ ಮಂಗಳ ಮಹಾ ॥
ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ:**— ಈ,=ಈ ಬಿಂಬರೂಪಿಯಾದ ಶ್ರೀ ಹರಿಯು, ಕಥಾಮೃತ=ಲೀಲಾ ಅಮೃತವೆಂಬ, ಅಮೃತಪಾನ=ಇದನ್ನು ಕುಡಿದರೆ ಮೃತಿಭಯವಿಲ್ಲದ ಶಾಶ್ವತ ಪುಷ್ಟರಾಗಿ ದೇವತೆಗಳು ಕ್ಷೀರಸಮುದ್ರದಿ ಉತ್ಪನ್ನ

ವಾದ ಬಾಹ್ಯ ಅಮೃತಪಾನಮಾಡಿ ಪುಷ್ಟರಾಗಿ ಮೃತಿರಹಿತಾಗಿರುವರೆಂದ ಮೇಲೆ, ಶ್ರೀ ಹರಿಯ ಕಥಾಮೃತ ಪಾನ ಮಹಿಮೆ ವರ್ಣಿಸಲು ಶಕ್ಯವಿಲ್ಲ. ಕಾರಣ ಈ ಹರಿಯ ಲೀಲಾ ವಿನೋದ ಮಾಹಾತ್ಮ್ಯ ಚರಿತೆ ಅಮೃತಮಯ ವಾಗಿದೆ. ಇದು, ಸುವಿವೇಕಿಗಳಿಗಲ್ಲದಲೆ=ಚನ್ನಾಗಿ ಗುರುಗಳಲ್ಲಿ ಶಾಸ್ತ್ರ ಶ್ರವಣ, ಮನನನಿಧಿಧ್ಯಾಸನ, ಧ್ಯಾನೋಪಾಸನೈವ ಶ್ರೀ ಬಿಂಬರೂಪ ಹರಿಯ ಹಿರಿಮೆ ಜ್ಞಾನ ತಿಳಿದವರೆ, ಸು ಚನ್ನಾಗಿ ವಿಮರ್ಶಿಸಿ ನಿಜವಾದ ಜ್ಞಾನವುಳ್ಳ ಸುವಿವೇಕಿಗಳಿಗೆ ಈ ಕಥಾಮೃತ ಪಾನ ದೊರೆಯುವದು. ಅಲ್ಲದೆ,ವೈಷಿಕ ವ್ಯಾಕುಲಚಿತ್ತರಿಗೆ=ವಿಷಯಾದಿಗಳಿಂದ ಇಂದ್ರಿಯಲೋಲು ಪರಾದ, ವ್ಯಾಕುಲ, ಮನಸ್ಸು ಚಂಚಲರಾಗಿ ಸರ್ವದಾ ವಿಷಯಾಸಕ್ತ ಮನ ಉಳ್ಳವರಿಗೆ, ಆವ ಕಾಲದಿ=ಯಾವ ಕಾಲದಲ್ಲಿಯಾದರೂ, ದೊರೆ ವುದೆ=ದೊರಕುವದೇ ? ಎಂದೆಂದೂ ದೊರೆಯುವದಿಲ್ಲ. ಕಾರಣ ಸಜ್ಜನರು ಗಳೇ, ಲೋಕವಾರ್ತೆಯ ಬಿಟ್ಟು=ಲೋಕದ ಜನರ ಹಾಳು ಹರಟೆ ಸಂಗತಿಗಳನ್ನು ಬಿಡುತ್ತ, ಇದನು ಅವಲೋಕಿಸುವರಿಗೆ=ಈ ಹರಿಕಥಾ ಮೃತಸಾರವನ್ನು ಇದರ ಅರ್ಥವನ್ನು ಚನ್ನಾಗಿ ಗುರುಗಳಿಂದ ತಿಳಿದು, ಅವಲೋಕಿಸುತ=ನೋಡುತ್ತ ಮನನ ನಿಧಿಧ್ಯಾನ ಮಾಡುತ್ತ, ಮೋದಿ ಪರಿಗೆ=ಸಂತೋಷಪಡುವವರಿಗೆ, ಕೃಪಾಕರ=ಕರುಣಾಳುವಾದ, ಜಗನ್ನಾಥ ವಿಠಲ=ಜಗತ್ತಿಗೆ ಸ್ವಾಮಿಯಾದ ಶ್ರೀ ಜಗನ್ನಾಥ ದಾಸಾರ್ಯರ ಬಿಂಬ ರೂಪಿಯಾದ ಹರಿಯು, ಒಲಿದು=ಪ್ರೀತನಾಗಿ ಅವರವಶನಾಗಿ, ಅನುದಿನ ದಲಿ ಪೊರೆವ=ಸದಾಕಾಲದಲ್ಲಿ ನಿತ್ಯದಲ್ಲಿ ಸಂರಕ್ಷಿಸುವನೆಂದು ದಾಸಾ ರ್ಯರು ನಿಂದು ಪ್ರೇರಿಸಿ ಬರೆಸಿದಂತೆ ಮುಂದತಿಯು ಬರೆದವು. ಸ್ವಮತಿ ಯಲ್ಲ. ಸಕಲ ತತ್ವಾಭಿಮಾನಿಗಳಂತರ್ಗತ ಜ್ಞಾನಾಯುರೂಪಿ ಶ್ರೀ ವಾಯು ದೇವಾಂತರ್ಯಾಮಿ ಹರಿಯು ಸುಪ್ರೀತನಾಗಲಿ. ಸಜ್ಜನರು ಮೋದಿಸಲೆಂದು ದಾಸರ ಪದಕೆ ಬಿನ್ನೈಸುವೆ. ಶ್ರೀ ಮಧ್ವೇಶ ಕೃಷ್ಣಾ ರ್ಪಿತವು.

**ಭಾವಸೂಚನ:—** ಫಲೋಕ್ತ್ಯೈ ಸಂಧಿಮುಪಸಂಹರತಿ ॥ ಈ ಕಥೇತಿ ॥೬೩॥ ಇತಿ ಶ್ರೀಮತ್ಕಥಾಮೃತಸಾರ ವ್ಯಾಖ್ಯಾನೇ ಭಾವ

ಸೂಚನೇ ಅಪರೋಕ್ಷ ತಾರತಮ್ಯ ಸಂಧಿಃ ಸಮಾಪ್ತಃ॥ ೨೪ ॥ ಶ್ರೀ ಹಯ ಗ್ರೀವಾಯ ನಮಃ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ—"ಈ ಕಥಾ" ಇತಿ ॥ ೬೩ ॥ ಇತಿ ಶ್ರೀಮದ್ ಹರಿ ಕಥಾಮೃತಸಾರೇ-ಕಲ್ಪ ಸಾಧನ ಸಂಧಿಃ ಸಮಾಪ್ತಿಂ ಅಗಮತ್ ॥ ಶ್ರೀಃ ॥ ೬೩ ॥

## ಕನ್ನಡಾರ್ಥ

"ಈ ಕಥೆ" ಎಂಬ ಪದ್ಯದಿಂದ ಈ ಸಂಧಿಯನ್ನು ಉಪಸಂಹರಿಸುತ್ತಾರೆ.—॥ ೬೩ ॥

೨೪ ನೇ ಸಂಧಿ ಕನ್ನಡಾರ್ಥವು ಮುಗಿದುದು.

**ಶ್ರೀ ಮಧ್ವೇಶಾರ್ಪಣಮಸ್ತು.**



ಅಪರೋಕ್ಷ ತಾರತಮ್ಯ ವಿವರ ಹರಿಕಥಾಮೃತಸಾರ ಸಂಧಿ ಪದ್ಯ ೪೮ಕ್ಕೆ ಪ್ರಮಾಣ ಪ್ರಕಾಶ ಸಂಧಿಯ ೧ನೇ ಪರಿಚ್ಛೇದ ಅಧ್ಯಾಯ ೧೦-೧೧ ರಲ್ಲಿ ವಿವರಿಸಿದಂತೆ ಶ್ರೀ ವಿಜಯದಾಸರ ತಾರತಮ್ಯ ಸುಳಾದಿ ೧೧-೧೨ ಪುಟ ೪೧ ರಿಂದ ೪೫.

## ಅಪರೋಕ್ಷ ತಾರತಮ್ಯ ಕೋಷ್ಟಕ

| ಸಂಖ್ಯೆ | ಜೀವರುಗಳ ವಿವರ | ಭಗವದ್ದರ್ಶನ ಅಪರೋಕ್ಷ ಪ್ರಮಾಣ | ಭಗವದ್ದರ್ಶನ ಕಾಂತಿ ವಿವರ | ಭಗವದ್ದರ್ಶನ ಕಾಲ ವಿವರ | ಮುಕ್ತಜೀವರ ದೇಹಕಾಂತಿ ವ್ಯಾಪ್ತಿ | ಗುಣೋಪಾಸನಾಕ್ರಮ | ಯಾವ ಯಾವ ಸ್ಥಾನದಲ್ಲಿ ಬಿಂಬನ ನೋಳ್ಪರು |
|---|---|---|---|---|---|---|---|
| ೧ | ತೃಣ ಕೀಟಾದಿ ಜೀವರು | ಒಂದು ಗೋಧಿಕಾಳು ಪ್ರಮಾಣ | ಪ್ರದೀಪದ ಕಾಂತಿ | ||| ಘಳಿಗೆ | ೧ಂಯೋಜನ ವ್ಯಾಪ್ತಿ | ಚಿದ್ರೂಪ ಆತ್ಮ (೧) ಗುಣೋಪಾಸನೆ | ಇದರ ವಿವರವು ಹಿಂದೆ ಕೊಟ್ಟಿದೆ |
| ೨ | ವೃಕ್ಷಾದಿ ಜೀವರು | ಒಂದು ಬೋರೆ ಹಣ್ಣಿನ ಪ್ರಮಾಣ | ೧೦ ಪ್ರದೀಪ ೧ಕಕ್ಕಡ ಕಾಂತಿ | ೧ ಘಳಿಗೆ | ೨ಂಯೋಜನ | ನಿರ್ದೋಷ ಆತ್ಮ | |

| | | | | | | |
|---|---|---|---|---|---|---|
| | ..., ಮೃಗ, ಪಶು, ಗೋವಾದಿ ಜೀವರು | ಅಂಗುಟ ಪರಿಮಿತ | ೧೦೦ ಪ್ರದೀಪ | ೧ ಘಳಿಗೆ | ೨೦ಯೋಜನ | ನಿರ್ದೋಷ ಚಿದಾತ್ಮ |
| ೪ | ಶೂದ್ರ ಜೀವರು | ಅಂಗುಟ | ೧೦ ಮಿಂಚಿನ ನಂದದಿ | ೧। ಘಳಿಗೆ | ೨೫ಯೋಜನ | ನಿರ್ದೋಷ ಆನಂದ |
| ೫ | ವೈಶ್ಯ ಜೀವರು | ಅಂಗುಟ | ॥ ಮಿಂಚು | ೧॥ ಘಳಿಗೆ | ೩೦ಯೋಜನ | ,, |
| ೬ | ಕ್ಷತ್ರಿಯ ಜೀವರು | ಅಂಗುಟ ಪರಿಮಿತ | ।।। ಮಿಂಚಿನಂತೆ | ೧।।। ಘಳಿಗೆ | ೩೫ಯೋಜನ | ,, |
| ೭ | ಮಾನುಷೋತ್ತಮ ಬ್ರಾಹ್ಮಣ ಜೀವರು | ಅಂಗುಟ | ೧ ಮಿಂಚಿನಂತೆ | ೨ ಘಳಿಗೆ | ೪೦ಯೋಜನ | ೪ ಗುಣಸಚ್ಚಿದಾನಂದಾತ್ಮ |
| ೮ | ಮಾನುಷ ಚಕ್ರವರ್ತಿಗಳು | ಅಂಗುಟ ಪರಿಮಿತ | ೧೦ ಮಿಂಚಿನಂತೆ | ೩ ಘಳಿಗೆ | ೮೦ಯೋಜನ | ೬ ಗುಣ |
| ೯ | ಮಾನುಷ ಗಂಧರ್ವರು | ಅಂಗುಟ | ೨೦ ಮಿಂಚಿನಂತೆ | ೪ ಘಳಿಗೆ | ೨೪೦ ಯೋಜನ | ೧೦ ಗುಣ |
| ೧೦ | ದೇವ ಗಂಧರ್ವರು | ಅಂಗುಟ | ೧ ಸೂರ್ಯ ಪ್ರಕಾಶ | ೬ ಘಳಿಗೆ | ಮೇರು ಪರ್ಯಂತ ೮೪ ಸಹಸ್ರ ಯೋಜನ | ೧೦೦೦ ಗುಣ |

| | | | | | | |
|---|---|---|---|---|---|---|
| ೧೧ | ಚಿರಪಿತೃಗಳು- ಗೋಪ್ಯಃ ಕೃಷ್ಣಾಂಗ ಸಂಗಿನ್ಯಃ | ಅಂಗುಷ್ಠ | [illegible] ಸಹಸ್ರ ಸೂರ್ಯ ಪ್ರಕಾಶ | [illegible] ಘಳಿಗೆ | [illegible] ಉಪಸರ್ಗ ವರಿಗೆ | [illegible] ಗುಣ |
| ೧೨ | ಶತೋನ ಶತಕೋಟಿ ಋಷಿಗಳು,ಅಗ್ನಿಪುತ್ರರು (೧೬,೦೦೦) ಆಜಾನಜ ದೇವತೆಗಳು | ಅಂಗುಷ್ಠ | ೧೦ ಸಾವಿರ ಸೂರ್ಯ ಪ್ರಕಾಶ | ೧೦ ಘಳಿಗೆ | ಸ್ವರ್ಗಾಂತ್ಯವು | ೧ ಲಕ್ಷ ಗುಣ ಉಪಾಸ ೧ ಕೋಟಿ ಗುಣ ಪರಿಯಂತ |
| ೧೩ | ಕರ್ಮಜ ದೇವತೆಗಳು | ಅಂಗುಷ್ಠ | ೧ ಕೋಟಿ ಭಾನು ಮಂಡಲ | ೧೫ ಘಳಿಗೆ | ಸಪ್ತದ್ವೀಪ ವಿರಾಟ ವಿಗ್ರಹ ಬ್ರಹ್ಮಾಂಡ ಖರ್ಪರವರೆಗೆ | ೧ ಕೋಟಿ ಗುಣದಿಂದ ಹೆಚ್ಚು |
| ೧೪ | ಪುಷ್ಕರಾದ್ಯ ಶಕ್ರಾಂತ್ಯ | ಅಂಗುಷ್ಠ | ಅರ್ಬುದ ಸೂರ್ಯ | ೧೫ ಘಳಿಗೆ | ಬಿಸಜ ಭವಾಂಡ ಮನಸ್ತ- ತ್ವಾಂತ | ೧ ಅರ್ಬುದ ಗುಣೋ ಪಾಸಕರು |
| ೧೫ | ಬಿಸಿಗಣ್ಣ ಮಹದೇವ ಗರುಡ ಶೇಷ.... | ಅಂಗುಷ್ಠ | ಕೋಟಿ ಅರ್ಬುದ ಸೂರ್ಯ | ೨೦ ಘಳಿಗೆ | ಅಹಂಕಾರ ತತ್ವ | ೧ ಖರ್ವ ಗುಣಗಳು |

| | | | | | | |
|---|---|---|---|---|---|---|
| ೧೬ | ಭಾರತೀ, ಸರಸ್ವತಿಯರು | ಅಂಗುಷ್ಠ | ಅನಂತ ಸೂರ್ಯ | ೬೦ ಘಳಿಗೆ | ಅವ್ಯಕ್ತ ಗುಣ ತ್ರಯಾಂತ | ಅಂಡದ ಒಳಗೆ ಹೊರಗೆ |
| ೧೭ | ಋಜ್ವಾದಿ ವಾಯು, ಬ್ರಹ್ಮದೇವರು | ಅಂಗುಷ್ಠ | ಅನಂತಾನಂತ ಸೂರ್ಯ ಪ್ರಕಾಶ | ೬೦ ಘಳಿಗೆ | ಅವ್ಯಕ್ತತತ್ವಾವರಣ ಗುಣ ತ್ರಯ ಮೀರಿ ವಾಸುದೇವ ಆವರಣವರೆಗೆ ೧೦೦ ಮಡಿ | ಅನಂತ ವೇದೋಕ್ತ ಅನುಕ್ತ ಅನಂತ ಗುಣೋಪಾಸನೆ |

ಈ ಲಸೇ ಮನೆಯಲ್ಲಿರುವ ವಿಚಾರ ಪ್ರಮಾಣಗಳನ್ನು "ತೃಣ-ಖಗ-ಮೃಗಾದಿಗಳು ಹೃದಯದಲ್ಲಿ ನೋಳ್ಪರು. ಈ ಸುಳಾದಿ ಸರ್ಗಸಾರ, ಪುಟ-೨೨೩೮-೩೯-೪೦ರಲ್ಲಿ ಕೊಟ್ಟದೆ ನೋಡಿ. ಮುಂದೆ ಪ್ರಕಾಶಸಂಹಿತಾ ಪ್ರಮಾಣದಲ್ಲಿರುವ ವಿವರ ಗುಣೋಪಾಸನೆ ಸುಳಾದಿ ಪ್ರಮಾಣವೂ ಕೊಟ್ಟದೆ.

ಇನ್ನೂ ಎರಡನೆಯದು ವಿಶದವಾದ ದೇವತೆಗಳ ತಾರತಮ್ಯಕೋಷ್ಟಕ, ಕಕ್ಷಾ ತಾರತಮ್ಯ ೩೨ ನೇ ಸಂಧಿಯಲ್ಲಿ ಕೊಡುತ್ತದೆ.

**ಮತ್ತು ೭ ನೇ ಮನೆಯಲ್ಲಿ ಎಷ್ಟು ಗುಣೋಪಾಸನೆಎಂಬುದಕೆ ಪ್ರಮಾಣ ಪ್ರಕಾಶ ಸಂಹಿತಾ.**

"ರಾಜಾನೋ ಮರ್ತ್ಯಗಂಧರ್ವಪೂರ್ವಾಷ್ಟಟ್‌ದಶಪೂರ್ವಕಾನ್ ॥ ಶತಂ ದಶಸಹಸ್ರಾಂಶ್ಚ ಲಕ್ಷ ಕೋಟಿವಿತಾನ್ ಗುಣಾನ್ ॥ ವಿಷ್ಣೋ ಗುರ್ಣಾನರ್ಬುದಾಂಶ್ಚ ಸರ್ವಾನಪಿ ತತೋಧಿಕಾನ್ ॥ ಅನಂತ ವೇದೋಕ್ತಗುಣಾನ್-ಬ್ರಹ್ಮೋಪಾಸ್ಯತಿ ನೇಶ್ವರಃ ॥

ಶ್ರೀ ಹರಿಯ ಆತ್ಮಾದಿ ಚತುರ್ಗುಣೋಪಾಸನಾ ಆರಂಭಿಸಿ ಅನಂತ ಗುಣ ಸಾಮಾನ್ಯ ವಿವರ. ತಾರತಮ್ಯ ಸುಳಾದಿಗಳ ತ್ರಿವಿಡಿತಾಳ ಪುಟ ೯೭ ರಲ್ಲಿ ಶ್ರೀ ವಿಜಯದಾಸರು ಹೇಳಿದ್ದಾರೆ.

೧. ಆನಂದ ಗುಣಪೂರ್ಣ ಉತ್ಕೃಷ್ಟ ಅಖಿಳೇಶ ।ಅನಂತ ಶಕ್ತ್ಯಾತ್ಮಕ ಸಮಸ್ತ ಪ್ರೇರಕ । ಜ್ಞಾನಮಯ ಶರೀರ ಸತ್ಸುಖವಾರಿಧಿ । ನಾನಾ ರೂಪಾತ್ಮಕ ನಿರ್ಭೇದ ಕಲ್ಯಾಣ । ಅನಂತ ಶಿರಸಾ ಪಾದಾದಿ ರೋಮ ಪೂರ್ಣ । ನಾನಾ ಮಹಿಮ ಸ್ವಯಂ ಪ್ರಕಾಶ ಪ್ರತಿರಹಿತ । ಹಾನಿವೃದ್ಧಿ ವರ್ಜಿತ ಸರ್ವೋಪಾಸ್ಯನೆಂದು ಶ್ರೀನಾರಿ ಭಜಿಸುವಳು ಸರ್ವದಾ ಮನದಲ್ಲಿ । ಧ್ಯಾನ ಮಾಡುವಳು ನವವಿಧ ಭಕುತಿಯಿಂದಲಿ। ಅನಂತಾನಂತ ಕಾಲದಲ್ಲಿ ಬಿಡದೇ ಏನಂಬೆ ಇದರಂತೆ. ಉಪಕ್ರಮೋಪಸಂಹಾರ। ತಾನೆಂನದು ಶ್ರೀ ಹರಿಯ ಮೆಚ್ಚು ಮಾಡಿ, ।

೨. ಎಣಿಕೆಗೈವದು ಬ್ರಹ್ಮವಿಡಿದು। ಮಾಣಾದೆ ಚತುರಾಸ್ಯಗುಣ ರೂಪ ಕ್ರಿಯಾದಲ್ಲಿ । ಧ್ಯಾನ ಮಾಡುವ ಜ್ಞಾನಪೂರ್ಣನಾಗಿ। ಆ ನಿಟಲ ನೇತ್ರಾದಿ ಸುರರು ತಮ ತಮ್ಮ ಯೋಗ್ಯೋಪಾಸನೆ ಮಾಡುವರಯ್ಯಾ ಒಂದೊಂದುಪಸಂಹಾರ। ಗುಣ ಪ್ರಾಣನಾಯಕ ನಮ್ಮ ವಿಜಯ ವಿಠಲ ನಂಘ್ರಿ। ರೇಣುಕಾಣದಲೆ ಸರ್ವರು ಅಪೇಕ್ಷಿಸುವರು॥ (ಇದು ಮಂದನಾಂತವಾಗಿ ಗುಣ ನಾಮ। ರೂಪಕ್ರಿಯಾ ಉಪಾಸನೆ ವಿವರ, ಕೆಲವು ಭಕ್ತರು ನಾಮೋಪಾಸಕರು. ಕುಲ ಭಕ್ತರು ರೂಪೋಪಾಸಕರು. ಕೆಲವರು

ಗುಣೋಪಾಸಕರು. ಪ್ರಾಚುರ್ಯ ಅಪ್ರಾಚುರ್ಯವಾಗಿ, ಉಪಾಸನಾಧಿಕಾರಿಗಳೆಂದು ತಿಳಿಯಬೇಕು.

ಮುಂದೆ ಅಟ್ಟತಾಳದಲ್ಲಿ **ಲಕ್ಷ್ಮಿಯಿಂದ** ಆರಂಭಿಸಿ ಶ್ರೀ ಹರಿಯನ್ನು ಹೇಗೆ ಯಾವ ಭಾವ ಯಾವಾವ ಭಾವದಿಂದ ಉಪಾಸನೆ ಮಾಡುವರೆಂಬುದು ವಿವರಿಸುತ್ತಾರೆ.

### ಅಟ್ಟತಾಳ

ಪತಿಗುರುವೆ ಸರ್ವ ಶ್ರೀದೇವಿ ಉಪಾಸ್ಯ । ಪಿತ ಗುರುವೆ ಸಿಟಿಳ ಪ್ರಾದುರ್ಭಾವನೆಂದು । ಪಿತಾಮಹನುಪಾಸ್ಯ ಮತ್ತೆ ಕೆಲವು ಉಂಟು । ಪಿತಾಮಹಾ ಗುರೋರ್ಗುರುತ್ವೇನ ಸುರೋಪಾಸ್ಯ । ಪಿತಾಮಹ ಮೂಲ ಗುರುವೆ ಸನಾತನ । ಚ್ಯುತವಿರಹಿತ ದೈವಗುಣ ಪೂರ್ಣ ಅಪರಿ । ಮಿತನೆಂದು ಸರ್ವ ಜನರೋಪಾಸ್ಯ । **ಭಾರತಿ ಮಿಕ್ಕ ಹೇವತ ಸ್ತ್ರೀಯುಪಾಸ್ಯ ।** ಸತತ ಶ್ವಶುರನೆಂದು ಭಾವಿಸುತಿಪ್ಪರು । ಅತಿಶಯ ಜಾರತ್ವ ಉಪಾಸ್ಯ ಅಪ್ಸರ ಉನ್ನತ ಸ್ತ್ರೀಯರು ಪಿಂಗಲಾದ್ಯರಿಗೆ ನಿಜ । ಪ್ರತಿ ಇಲ್ಲದೋಪಾಸ್ಯ ಭೂತಿತ್ವೇನ ಮಾರುತ ಮಿಗಿಲಾಗಿದ್ದ ದೇವತಾ ಉಪಾಸ್ಯ **ದಿತಿಸುತರು ಅಭೂತಿತ್ವೇನ ಉನ್ಮತ್ತಾಹಿತನುಪಾಸ್ಯ** । ಸುತನೆಂದು ಪರಬೊಮ್ಮನೆಂದು ದೇವಕಿ ಸತ್ಯ । ವತಿ ಮಿಗಿಲಾದ ನಾರಿ ಜನೋಪಾಸ್ಯ **ಸ್ಥಿತಿ ಈ ಪ್ರಕಾರವು ತೃಣ ಜೀವ ಮೊದಲಾಗಿ । ಚತುರಾನನ ದೇವ ಪರಿಯಂತ ಪರಮುಖ್ಯಾತಾ । ಆತ್ಮನೆಂದುಪಾಸ್ಯ ಸಿದ್ಧವಯ್ಯ ।** ಚತುರಾದಿ ಒಂದರೊಳನಂತ ತತುಜ್ಞಾನ ವಾರ್ಧಿಕರು ಮಾಳ್ಪರು । ಪತಿತ ಪಾವನ ಸ್ವಾಮಿ ವಿಜಯ ವಿಠ್ಠಲ ಶಾ । ಶ್ರಿತ ಲೋಕ ಕೊಡುವನು ತಿಳಿಸಿ ಕೊಟ್ಟು ತಾನೆ ॥ ೫ ॥ ಸಂತತ ಈ ಪ್ರಕಾರ ತಿಳಿದು ಶ್ರೀಹರಿಯ ಗುಣೋಪಾಸನೆ ಮಾಡುವದೆಂದು ಬಿನ್ನಹ. ಶ್ರೀ ಮಧ್ವೇಶಾರ್ಪಿತವು.

**ಇಲ್ಲಿಗೆ ೫ನೇ ಭಾಗ ಮುಗಿದುದು.**

# ಒಪ್ಪೋಲೆ

| ಪುಟ | ಪಂಙ್ತಿ | ತಪ್ಪು | ಒಪ್ಪು |
|---|---|---|---|
| ೨೦೧೦ | ೧೮ | ವಿದ್ಯಯಲ್ಲಿ | ವಿದ್ಯಯಿಂದ |
| ೨೦೧೨ | ೨೫ | ಈರಾಜಾಭ್ಯಾಂ | ಈರಜಾಭ್ಯಾಂ |
| ೨೦೫೯ | ೯-೧೦ | ಸಪನ್ನ | ಸಂಪನ್ನ |
| ೨೦೬೬ | ೧೦ | ಸಕಲನ | ಸಕಲ |
| ೨೦೭೩ | ೧೭ | ಜ್ಞಾನಪೂರ್ವಕ | ಜ್ಞಾನಪೂರ್ವಕ |
| ೨೦೭೫ | ೧೦ | ಸ್ತಥ್ಯೈವಾಂಗಾ | ಸ್ತಥೈವಾಂಗಾ |
| ೨೧೨೮ | ೧೫ | ಮದ್ವಾ | ಮಧ್ವಾ |
| ೨೧೧೬ | ೩ | ಕೇಶವನಾಥ | ಕೇಶವನಾದ |
| ೨೧೪೦ | ೭ | ಗಾಲಿಸಿ | ಪಾಲಿಸಿ |
| ೨೧೫೩ | ೭ | ತ್ರೈವಿಡಿ | ತ್ರಿವಿಡಿ |
| ೨೧೬೭ | ೧೯ | ಮಾನವ ಮೇಘದಂತೆ | ಮಾನವ ವೇಷದಂತೆ |
| ೨೧೯೭ | ೧೮ | ತಮೆಃ | ತಮಃ |
| ೨೨೦೦ | ೧೩ | ಧರ್ಮೋಪಯೋಗಿ | ಧರ್ಮೋಪಯೋಗಿ |
| ೨೨೩೯ | ೫ | ಶತಕಾತ್ತು | ಶತಕಾಲಾತ್ತು |
| ೨೨೬೦ | ೮ | ರಾಜ | ರಾಜನ |
| ೨೨೬೫ | ೧೦ | ಗೌತುಮರ ಇಂದ್ರನು | ಇಂದ್ರನು ಗೌತುಮರ |
| ೨೨೭೭ | ೧೩ | ಪಸಿದ್ಧವಾದ | ಪ್ರಸಿದ್ಧವಾದ |
| ೨೩೩೯ | ೧೫ | ೨೩ನೆಯ ಬೃಹತ್ತಾರತಮ್ಯ ಸಂಧಿ | |
| ೨೩೫೭ | ೧೧ | ಯಜ್ಞನಾಯಕ | ಯಜ್ಞನಾಮಕ |
| ೨೩೫೯ | ೮ | ತ್ಭವನ | ತ್ಪವನ |

| | | | |
|---|---|---|---|
| ೨೩೭೮ | ೧೩ | ಕೃತದ್ವಾರಾ | ಕೃತೀದ್ವಾರಾ |
| ೨೪೩೯ | ೮ | ೧೨ನೆ ಕಕ್ಷ | ೧೭ನೇ ಕಕ್ಷ |
| ೨೪೪೦ | ೧೪ | ಮಹಾತಾ | ಮಹಾತ್ಮಾ |
| ೨೪೪೦ | ೧೫ | ಆಶಾತ್ಮಾ | ಆಕಾಶಾತ್ಮಾ |
| ೨೪೪೧ | ೨ | ಸತ್ಕಥನ | ಸಕಥ್ನ |
| ೨೪೪೩ | ೩ | ೮ ಜನ | ೫ ಜನ |
| ೨೪೫೮ | ೧೬ | ಇವರ ಕಾಯ | ಇವರ ಕಾರ್ಯ |
| ೨೪೬೦ | ೨೩ | ದೂರಿ | ಧುರಿ |
| ೨೪೬೨ | ೩ | ಪ್ರಮು ಚಿತ್ರ | ಪ್ರಮುಖ ಚಿತ್ರ |
| ೨೪೬೫ | ೮ | ಇಂದು | ಇಂತು |
| ೨೪೬೭ | ೧೨ | ಉಥ್ಯವಚು ಮುನಿ | ಉಚಿಥ್ಯ ಮುನಿ |
| ೨೪೬೯ | ೭ | ತಸ್ಮಾದಶ್ನಿಃ | ತಸ್ಮಾದಗ್ನಿಃ |
| ೨೪೭೧ | ೩ | ಹರಿಣಜ | ಹರಿಣಿಜಾ |
| ೨೪೭೫ | ೮ | ಸ್ವಾಷಾದೇವಿ | ಸ್ವಾಹಾದೇವಿ |
| ೨೪೭೫ | ೮ | ಉಹಾದೇವಿ | ಉಷಾದೇವಿ |
| ೨೪೭೬ | ೧೦ | ಸೂಯಪತ್ನಿ | ಸೂರ್ಯಪತ್ನಿ |
| ೨೪೭೯ | ೨೧ | ಉಭಾವಪ್ಯೇತೋ | ಉಭಾವಪ್ಯೇತೇ |
| ೨೪೮೦ | ೧೩ | ಉಷಸ್ಕೋಪ್ಯಧಮಃ | ಉಷಸೋಪ್ಯಧಮಃ |
| ೨೪೮೭ | ೨ | ನಾಯಕ ತ್ರಿಷ್ಠಃ | ನಾಯಕ ಶ್ರೇಷ್ಠಃ |
| ೨೪೮೯ | ೧೭ | ಪ್ರಮಾಣವಿದ್ಧೆ | ಪ್ರಮಾಣವಿದೆ. |
| ೨೫೦೯ | ೨೧ | ದೇವತೆಗಳಿಂದ | ದೇವತೆಗಳ |
| ೨೫೨೧ | ೧೨ | ಪತ್ನಿ | ಪತಿ |
| ೨೫೩೩ | ೬ | ಕಲ್ಪಾರ್ಥ | ಕಲ್ಪಾರ್ಧ |
| ೨೫೩೩ | ೨೧ | ನಂದನಾದಿಗೆ | ಸನಂದನಾದಿಗೆ |
| ೨೫೩೯ | ೨೩ | ಅಜಾನಜಾಸ್ತತ್ಯಾ | ಅಜಾನಜಾತಸ್ಸ |
| ೨೫೩೯ | ೨೪ | ಜೀವಸ್ಸ | ಜೀವಸ್ಯ |
| ೨೫೪೭ | ೧೪ | ಋಜುಗಳು ೧೦೦/೨೦ | ಋಜುಗಳು ೧೦೦ |

| | | | |
|---|---|---|---|
| ೨೫೮೩ | ೧೨ | ಬಿಂಬಾಪರೋಕಿಗಳು | ಬಿಂಬಾಪರೋಕ್ಷಿಗಳು |
| ೨೫೮೮ | ೨೪ | ಶೀಷಾದ್ಯಮುರ | ಶೇಷಾದ್ಯಮುರ |
| ೨೬೩೯ | ೧೭ | ಇತ್ಯಾ॰ | ಇತ್ಯಾದಿ |
| ೨೬೪೧ | ೧೭ | ಬ್ರಹ್ಮಪದ | ಬ್ರಹ್ಮಪದಕೆ |
| ೨೬೪೧ | ೧೭ | ವಾಯುಪದಕ್ಕೆ | ವಾಯುಪದ |
| ೨೬೪೧ | ೨೩ | ಶರಸ್ವತಿ | ಸರಸ್ವತಿ |
| ೨೬೪೯ | ೧೧ | ಹಿಂದೀ ಪದ್ಯ | ಹಿಂದಿನ ಪದ್ಯ |
| ೨೬೬೩ | ೭ | ಐದಲ | ಐದಲೆ |
| ೨೬೭೧ | ೨ | ದೀಪ್ರಭಾಯುಕ್ತ | ದೀಪಪ್ರಭಾಯುಕ್ತ |



ಈವರೆಗೆ ೫ ಭಾಗಗಳಲ್ಲಿ ಆದ ಪುಟಗಳು

| ಭಾಗ | ಪುಟಗಳು | ಮೇಲ್-ಕೆಳಭಾಗ ಪುಟ |
|---|---|---|
| ೧ | ೧-೪೮೮ | ೬೪+೮=೭೨ |
| ೨ | ೪೮೯-೯೭೬ | ೧೬+೮=೨೪ |
| ೩ | ೯೭೭-೧೪೮೪ | ೧೬+೧೪=೩೦ |
| ೪ | ೧೪೮೫-೧೯೪೬ | ೨೪+೧೨=೩೬ |
| ೫ | ೧೯೪೭-೨೭೧೩ | ೩೨+೮=೪೦ |
| ಒಟ್ಟಿಗೆ ಪುಟಗಳು | ೨೯೧೫ | ೨೦೨ |

೬ನೇ ಭಾಗದಲ್ಲಿ ಸುಮಾರು ೭೫೦ ರಿಂದ ೮೦೦ ಪುಟದವರೆಗೆ ಆಗುವ ಸಂಭವವಿದೆ.

॥ ಶ್ರೀ ಗುರುರಾಜೋ ವಿಜಯತೇ ॥

## ಪ್ರಕಟನೆ ೭೦ (೪ನೇ ಭಾಗ ಹರಿಕಥಾಮೃತಸಾರ) ಮುಂದುವರಿದ

## ಪೋಷಕ ಮಹಾಶಯರ ಉಪಕಾರ ಸ್ಮರಣೆ

೧೦೦ ರೂ. ಶ್ರೀಮಾನ್ ಡಾಕ್ಟರ್ ವೇ॥ ಅನಂತಾಚಾರ್ಯ, (A. B.) ಶಿರಗೂರಿ. ಅಸಿಸ್ಟಂಟ ಸರಜನ್, ಸಿವ್ಹಿಲ್ ಹಾಸ್ಪಿಟಲ್, ಧಾರವಾಡ. (ನಾಲ್ಕನೇ ಭಾಗದಲ್ಲಿಯೇ ಇವರ ಹೆಸರು ಕೊಡುವುದು ಮರೆತೆ. ಕ್ಷಮಿಸಿರಿ—ಸಂ.)

೧೦೦ ರೂ. ಶ್ರೀಮಾನ್ N. N. ಕಠಾವಿಯವರು, ಅಸಿಸ್ಟಂಟ ಕಮಿಷನರು. ಡಿವಿಜನ್-ಲಿಂಗಸೂರು. ಜಿ-ರಾಯಚೂರು (ಹಿಂದಿನ ಸೂಚನೆಯಂತೆ).

೧೦೦ ರೂ. ಶ್ರೀಮಾನ್ S. S. ಮೂರ್ತಿರಾವ, ರಿ॥ ಡಿಪ್ಯುಟಿ ಡಾಯರೆಕ್ಟರ್, ಜನರಲ್ (786), 18ನೇ ಕ್ರಾಸ ರೋಡ, ಮಲ್ಲೇಶ್ವರಂ ಬೆಂಗಳೂರು-3. (ಈ ಮೂವರ ಸಹಾಯರೂ. ೪ನೇ ಭಾಗದಲ್ಲಿ ವೆಚ್ಚವಾಗಿವೆ)

೧೦೧ ರೂ. H. S. ಶ್ರೀನಿವಾಸಾಚಾರ್ಯರು, 1/36, ಭೂತಾ ನಿವಾಸ್, ವೆನ್‌ಸೆಂಟ್ ರೋಡ, ಮಾತುಂಗಾ, ಮುಂಬೈ-19.

೧೦೧ ರೂ. **ಶ್ರೀಶ್ರೀ ಅಡವಿಸ್ವಾಮಿಗಳ ವಂಶಸ್ಥರು**, ಶ್ರೀ ವೇ॥ ವಿಷ್ಣುತೀರ್ಥಾಚಾರ್ಯ ನಾರಾಯಣಾಚಾರ್ಯರು, (V. N. ಅಡವಿ) ರಿಟೈರ್ಡ ಅಕೋಂಟೆಂಟ ಜನರಲ್ Mayair Veer Nariman Road, Fort Bombay.

೧೦೦ ರೂ. ಶ್ರೀಮಾನ್ K. V. ಉಪಾಧ್ಯಾಯರು, ಮ್ಯಾನೇಜರ, ಕೋ-ಅಪ್ರಟ್ಯೂ ಬ್ಯಾಂಕ, ದಾದರ (53, ಹಿಂದು ಕಾಲೋನಿ), ಮುಂಬೈ

೧೦೧ ರೂ. ಶ್ರೀಮಾನ್ Y. ಶ್ರೀನಿವಾಸಮೂರ್ತಿಗಳು, ಪ್ರಭಂಜನ ನಿಲಯ, 15ನೇ ಕ್ರಾಸ್ ರೋಡ, ಮಲ್ಲೇಶ್ವರಂ, ಬೆಂಗಳೂರು-3.

೧೦೧ ಶ್ರೀಮಾನ್ ಬಿಂದುರಾಯರು, ಅನಂತರಾಯರು ದೇಸಾಯಿ, ಕ್ಲಬ್‌ರೋಡ, ಹುಬ್ಬಳ್ಳಿ.

## ಇತರ ಸಹಾಯಕರು ಎಲ್ಲ ಪುಸ್ತಕ ಸಂಗ್ರಹಿಸಿದವರು

೯೫ ರೂ. ಶ್ರೀ M. A. ಹನುಮಂತರಾಯರು, ರೀಡರ ಫಿಲಾಸಫಿ ಕರ್ನಾಟಕ ಕಾಲೇಜ, ಧಾರವಾಡ.

೮೫ ರೂ. ಶ್ರೀ ವೇ॥ ಪಂಡಿತ ಯಳಮಲಿ ವಿಠಲಾಚಾರ್ಯರು, ಅಧ್ಯಕ್ಷರು, ಸುರಪುರ. (ಶ್ರೀ ಗುರುರಾಜಭಜನ ಮಂಡಲಿಗೋಸುಗ)

೮೨ ರೂ. ಶ್ರೀ ವೇ॥ ಅನಂತಾಚಾರ್ಯರು, ಪ್ರಿನ್ಸಿಪಾಲ, ಆಚಾರ್ಯ ಪಾಠಶಾಲಾ ಕಾಲೇಜ, N. R. ಕಾಲೋನಿ, ಬೆಂಗಳೂರು. (ಲೈಬರರಿಗೋಸುಗ)

೨೦ ರೂ. M. R. ರಂಗಸ್ವಾಮಿರಾವ, B.E. ಅಶಿಷ್ಟೆಂಟ ಇಂಜನಿಯರ, ಕಾರವಾರ. (ಚಂದಾ ಅಲ್ಲದೇ ಹೆಚ್ಚಿನ ಸಹಾಯಕರು ಈ ಎಲ್ಲರ ಆಭಾರ ಮನ್ನಿಸುತ್ತದೆ)

## ೩೦ ರೂ. ಚಂದಾ ಒಮ್ಮೆಲೆ ಕಳಿಸಿದವರ ಉಪಕಾರ ಸ್ಮರಣೆ

ಚಂದಾದಾರನ ॥—

391 ಶ್ರೀ ರಾಮರಾವ ದೇಸಾಯಿ, ಕಾಮನಕಟ್ಟಿ, ಧಾರವಾಡ.

401 ಶ್ರೀ ವೈ. ಎಲ್. ಇನಾಂದಾರರು, ಎಂ. ಎ. ಲೆಕ್ಚರರ, ಎಕನಾಮಿಕ್ಸ, ಕರ್ನಾಟಕ ಯೂನಿವರಸಿಟಿ, ಧಾರವಾಡ.

397 ಶ್ರೀ ಎಸ್. ರಾಮಕೃಷ್ಣರಾಯರು, ಕೋ-ಅಪ್ರಟ್ಯೂ ಡಿವಿಜನ್, ರಾಯಚೂರು.

312 ಶ್ರೀ ದೇವುಡು (30), 7ನೇ ಬ್ಲಾಕ, ತ್ಯಾಗರಾಜನಗರ, ಬೆಂಗಳೂರು. (2 ಕಂತಿನಲ್ಲಿ)

353 ಶ್ರೀ ಜೋಸಿ ವಾಸುದೇವಾಚಾರ ಮಾಸ್ತರ, ತಳವಗೇರಿ, ತಾ॥ ಕುಷ್ಟಗಿ. (2 ಕಂತಿನಲ್ಲಿ)

384 ಶ್ರೀ ಕೃಷ್ಣರಾವ ಪಟವಾರಿ, ಕೋಟಕುಂಡಿ, ತಾ॥ ಮುಖ್ಖಲ (ಎ. ಪಿ.). (2 ಕಂತಿನಲ್ಲಿ)

356 ಶ್ರೀ ಪ್ರಹ್ಲಾದ, ರಾಮಚಂದ್ರಕಟಗೇರಿ, (448) ಬುಧವಾರ, ಪೂನಾ. (2 ಕಂತಿನಲ್ಲಿ)

362 ಶ್ರೀ ಭಿಷಗ್ ರತ್ನ ವೇ|| ಗುರಾಚಾರ್ಯ ಹಾರವಾಳ, ರಾಯಚೂರು. (2 ಕಂತಿನಲ್ಲಿ)

247 ಶ್ರೀ ವಿಠಲರಾವ ನರಸಿಂಗರಾವ ಕಡಪಿಕರ, ಇಂಡಷ್ಟ್ರೀಲ್ ಸಿಂಡಿಕೆಟೆಡ್ ಕ್ಯಾನರಾ ಬ್ಯಾಂಕ ಲಿ., ಉಡುಪಿ. (2 ಕಂತಿನಲ್ಲಿ)

332 ಹನಮಂತಾಚಾರ್ಯ, ಶಾಮಾಚಾರ್ಯನಗರ, ವಿಜಯನಗರ, ಹುಬ್ಬಳ್ಳಿ. (2 ಕಂತಿನಲ್ಲಿ)

## ಪೂನಾ, ಮುಂಬೈ ಪ್ರಚಾರದಲ್ಲಿ ಒಮ್ಮೆಲೆ ೩೦ ರೂಪಾಯಿ ಕೊಟ್ಟವರು

381 ಶ್ರೀ ರಾಧಾಬಾಯಿ ಮಂಗಸೂಳಿ, c/o ಎಸ್. ಎನ್. ಜ್ಯೋಷಿ, ಜಾನಕಿ ನಿವಾಸ ರೂಮ (2), ಮುಳಂಡವೆಷ್ಟ, ಮುಂಬೈ-80.

405 ಶ್ರೀ ಪಿ. ಎ. ಯಾದವಾಡ, 10|ಬಿ. ಲಕ್ಷ್ಮೀರೋಡ, ಸದಾಶಿವ ಪೇಟ, ಪೂನಾ-2.

407 ಶ್ರೀ ಬಿ. ಜಿ. ನಾಗಗೌಡರು, ರಿಟೈರ್ಡ ಡೈರಕ್ಟರ್, ಫಿಂಗರಪ್ರಿಂಟ ಬಿರೋ (58) ಸೋಮವಾರ ಪೇಟೆ, ಪೂನಾ-2.

411 ಶ್ರೀ ಅಧ್ಯಕ್ಷರು, ಭಜನಾಮಂಡಲ, 155, ಕಸಬಾ, ಪೂನಾ-2.

412 ಶ್ರೀ ನಾ.ಬಾ. ಮುದಕವಿ, 1206/38, ಶಿವಾಜಿನಗರ, ಪೂನಾ 4

413 ಶ್ರೀ ಪ್ರಾಣೇಶಾಚಾರ್ಯ, ಭೀಮಾಚಾರ್ಯ ಒಡೆಯರ್, ಚೌಕಸಿ ಬಿಲ್ಡಿಂಗ ಗ್ರೌಂಡ ಫ್ಲೋರ್, ಭೀಮಾನಿ ಷ್ಟ್ರೀಟ, ಮಾತುಂಗಾ, ಮುಂಬೈ-19.

414 ಶ್ರೀ ಕೆ. ಭೀಮಸೇನರಾಯರು, 2/21, ಭೂತನಿವಾಸ, ವಿನಸೆಂಟ ರೋಡ, ಮಾತುಂಗಾ, ಮುಂಬೈ-19.

415 ಶ್ರೀ ಟಿ. ಗೋಪಾಲರಾಯರು, ಟಾಟಾ ಬಿಲ್ಡಿಂಗ, ಸಾಯನ್, ಮುಂಬೈ.

416 ಶ್ರೀ ಕೆ. ಎಸ್. ಭುಜಂಗ, 4/105, Sevari Wadbala, North ಮುಂಬೈ-31.

417 ಶ್ರೀ ಎಸ್. ಜಿ. ಚಿಮ್ಮಲಗಿ, ಇಂಜನಿಯರ್ ಸುಪರವೈಜರ್, ಟೆಲಿ

ಫೋನಸಎಕ್ಸೆಂಜ, Byculla Gella Street, ಮುಂಬೈ-11.
418 ಶ್ರೀ ಪ್ರಹ್ಲಾದರಾವ, 1/13, ನಿತ್ಯಾನಂದನಗರ, ಗೌರ್ನಮೆಂಟ್ ಹೌಸಿಂಗ ಕಾಲೋನಿ, Andheri East, ಮುಂಬೈ-56.
419 ಶ್ರೀ ಆರ್. ಎಸ್. ಸರಾಫ, ಸರಾಫ ಬಿಲ್ಡಿಂಗ, ಮುಳಂಡ ಈಷ್ಟ, ಮುಂಬೈ-80.
420 ಶ್ರೀ ಬಿ. ಹೆಚ್. ಜೈನಾಪುರ, Mystic Rose Sital Devi Temple Road, Mahim Bombay-16.
421 ಶ್ರೀ P. T. ಕುಲಕರ್ಣಿ ಸ್ಟೆನೋಗ್ರಾಫರ್ Bajaj Auted L. T. D. 134 Dr A. B. ರೋಡ್ ವರ್ಲಿ ಮುಂಬೈ. 18
422 ಶ್ರೀ ವೆಂಕಟೇಶಮೂರ್ತಿಗಳು ರತನವಿಲಾಸ್ ನಿಯರ್ ಅರೋರ ಟಾಕೀಜ ಕಿಂಗ್ಸ್ ಸರ್ಕಲ್ ಮಾತುಂಗಾ ಮುಂಬೈ 19.
423 ಶ್ರೀ ವೆ ರಾಮಾಚಾರ್ಯ ಹುಚ್ಚಾಚಾರ್ಯ ನಾಗರಹಳ್ಳಿ ಟೀಚರ್, ಪಿ. ಡಿ ಜೆ ಹೈಸ್ಕೂಲ, (ಇವರ ಪುತ್ರರು ಶ್ರೀನಿವಾಸಾಚಾರ್ಯ ಮುಂಬೈ ಮುಖಾಂತರ)
425 ಶ್ರೀ ಎನ್. ಬಿ. ಹೆಚ್. ಕುಲಕರ್ಣಿ ಹೆಚ್. ಬಿ. ಪ್ರಗತಿ ಆರ್. ಎಸ್. ಭೋಜರಾಜರೋಡ್, ಮುಳಂಡ ವೆಸ್ಟ್ ಮುಂಬೈ 80
426 ಶ್ರೀ ವ್ಹಿ. ಎ. ಕುಲಕರ್ಣಿ ಪಂಚವಟಿ ಬ್ಲಾಕ ನಂಬರ 5 ಗಣೇಶ ಗೋವಡೆರೋಡ ಮುಳಂಡ, ವೆಷ್ಟ ಮುಂಬೈ 80
427 ಶ್ರೀ ಶಾರದಮ್ಮ C/o ಟಿ. ವಿ. ಶೇಷಾಚಾರ್ಯ 18/289 (ಪಾರ ಡೀಸ ಬಿಲ್ಡಿಂಗ, ಪ್ಲಾಂಕ್ ರೋಡ್, ಸಾಯನ್ ಮುಂಬೈ 22
433 ಶ್ರೀ ಕೆ. ಯಸ್. ಗೋವಿಂದರಾಯರು, ಏಜೆಂಟ್ L. I. C. of India H. G. M CO. LTD., ಹಟ್ಟಿ.
392 ಶ್ರೀ ರಾಘವೇಂದ್ರರಾಯರು ಚಾಕಲಬ್ಬಿ ವಕೀಲರು ಕೊಪ್ಪಳ
406 ಶ್ರೀ ಆರ್.ಹೆಚ್.ಕುಲಕರ್ಣಿ 1616 ಸದಾಶಿವಪೇಟೆ ಪೂನಾ 2.
408 ಶ್ರೀ ಎನ್. ಕೃಷ್ಣಮೂರ್ತಿಗಳು ಅರ್ಚಕರು 555 ಸದಾಶಿವಪೇಟ ಲಕ್ಷ್ಮೀರೋಡ ಪೂನಾ 2.
409 ಶ್ರೀ ಬಿ. ವಿ. ಪಪ್ಪು ಡೆಪುಟಿ ರಜಿಸ್ಟ್ರಾರ್ ಕೋಆಪರೇಟಿವ್

ಸೊಸೈಟಿ 431 ಕೇಶರವಾಡಿ ಸೋಮವಾರಪೇಟೆ ಪೂನಾ 2.
410 ಶ್ರೀ ಕೆ. ಎಸ್. ಜೋಶಿ 346 ಸೋಮವಾರಪೇಟೆ ಪೂನಾ ೨.
411 ಶ್ರೀ ಅಧ್ಯಕ್ಷರು ಭಜನಮಂಡಲ 154 ಕಸಬಾ ಪೂನಾ 2.
435 ಶ್ರೀಎ.ಆರ್.ರಾಮಚಂದ್ರ ಅನಂತರಾವ ದೇಶಪಾಂಡೆ ಹುಲ್ಲಿಕೇರಿ, ಅಂಡರಸೆಕ್ರೆಟರಿ ಹೋಮ ಡಿಪಾರಟಮೆಂಟ 181|1 ಸುಬ್ಬರಾಮ ಶೆಟ್ಟಿ ರೋಡ್ ನೆಟ್ಕಲ್ಲಪ್ಪಾ ಸರ್ಕಲ್,ಬಸವನಗುಡಿಬೆಂಗಳೂರು 4.
438 ಶ್ರೀ ಪಿ. ಟಿ. ಕಡಕೋಳ ಶಷನ್‌ಜಜ್ಜ, ರೆವಿನ್ಯೂ ಟ್ರಬಿನಲ್ 2 ಸೌಥ್ ಪಬ್ಲಿಕ್ ಕೃಷ್ಣರಾವ್ ಪಾರ್ಕ ಬಸವನಗುಡಿ ಬೆಂ 4.
445 ಶ್ರೀ ಸೆಕ್ರೆಟರಿಗಳು ಕನ್ನಡಾ ಲೈಬರರಿ C/o ಶ್ರೀ ಹೆಚ್. ಎಸ್. ಶ್ರೀನಿವಾಸಾಚಾರ್ಯ ಮುಂಬೈ
449 ಅಶ್ವತ್ಥರಾಯ ರುದ್ರದೇಶಾಯಿ ಬಿ.ಎ. ಮಾರಕ್ ಅಂಡ್ ಕಂಪೆನಿ ಯಾದಗಿರಿ ಜಿ. ಗುಲಬರ್ಗಾ.
430 ಶ್ರೀಮಾನ್ ಗಿರಿರಾಯರು ಗಧಾರ, ಹೆಡ್ ಕ್ಯಾಷಿಯರ್ ಸ್ಟೇಟ ಬ್ಯಾಂಕ್ ಆಫ್ ಹೈದರಾಬಾದ ಬ್ರಾಂಚ ಗಂಗಾವತಿ.
424 ಶ್ರೀ ಎ. ಕೆ. ನಾರಾಯಣರಾಯರು 224 ನ್ಯೂಮಹಾವೀರ ಬಿಲ್ಡಿಂಗ ತೆಲಂಗಾರೋಡ್ ಮಾತುಂಗಾ ಮುಂಬೈ 19.
455 ಶ್ರೀ ವಾಸುದೇವರಾವ ಮಾಧವರಾವ ದೇಶಪಾಂಡೆ ನಾಗಶೆಟ್ಟಿ ಕೊಪ್ಪ ಹುಬ್ಬಳ್ಳಿ.
456 ಶ್ರೀಮಾನ್ ಎನ್. ಎಸ್. ವೈತ್ರಾನಿ ಇಂಡ್ರಸ್ಟ್ರಿಯಲ್ ಟ್ರಬಿನಲ್ ಶಷನ ಜಜ್ಜ, ಲೇಬರ ಕೋರ್ಟ ಹುಬ್ಬಳ್ಳಿ.
458 ಶ್ರೀ ಕೆ.ಎಸ್. ಗೋಪಾಲಕೃಷ್ಣ C/o ಶಾಂತಮ್ಮಾ ಯಕ್ಕುಂಡಿ ಮಠ ಬಳ್ಳಾರಿಗಲ್ಲಿ ಗಾಂಧಿಚೌಕ ಹುಬ್ಬಳ್ಳಿ
452 ಶ್ರೀ ಕ್ಯಾಪ್ಟನ್ ರಾಘವೇಂದ್ರರಾವ ಹನುಮಂತರಾವ ದೇಸಾಯಿ ಡಿವಿಜನಲ್ ಕಂಟ್ರೋಲರ್, ಸ್ಟೇಟ್ ಟ್ರಾನ್ಸಪೋರ್ಟ ಕೇಶವಪುರ ಹುಬ್ಬಳ್ಳಿ.
462 ಶ್ರೀ ಕೃಷ್ಣರಾವ ಹಲಸಿಗಿ ಟೀಚರ ಮುದಿ ಹನುಮಪ್ಪನ ಓಣಿ ಮಂಗಳವಾರಪೇಟೆ ಧಾರವಾಡ.

462 ಶ್ರೀ ಕೆ. ಕೃಷ್ಣಮೂರ್ತಿರಾವ ಪ್ಲೀಡರ,ಬ್ರಾಹ್ಮಣ ಸ್ಟ್ರೀಟ ಸಾಗರ.
442 ಶ್ರೀ ಜಯರಾವ ಪಟವಾರಿ ಧರೂರು ತಾ॥ ಗದ್ವಾಲ್ ಜಿ. ಮಹಬೂಬನಗರ ಆಂಧ್ರಪ್ರದೇಶ.
ಶ್ರೀ ಎನ್. ಎಸ್, ಶ್ರೀನಿವಾಸರಾವ 1096 3 ನೇ ಕ್ರಾಸ್ ಶ್ರೀರಾಮಪುರ ಬೆಂಗಳೂರು.
454 ಶ್ರೀ ಯು. ಎಸ್. ಗೋಪಾಲಕೃಷ್ಣ S|o ಶ್ಯಾಮರಾವ ಅಗ್ರಹಾರ, ಸಾಗರ.

**೪ ಭಾಗಕ್ಕೆ ೨೦ ರೂ ಕೊಟ್ಟು ಚಂದಾದಾರ** ಆದವರು ಈಗ ಪೋಸ್ಟೇಜ್ ಡಬಲ್ ಆದ ಕಾರಣ ನಮ್ಮ ವಿನಂತಿಯಂತೆ 5-6 ಭಾಗದ 10 ರೂ ಚಂದಾ 2 ರೂ 50 ನ ಪೈ. ಪೋಸ್ಟೇಜ್ ಒಟ್ಟಿಗೆ 12**ರೂ** 50**ನ.ಪೈ. ಕಳಿಸದ ತಜ್ಞರ ಉಪಕಾರಸ್ಮರಣೆ.**

428 ಶ್ರೀಮಾನ್ ಆರ್. ಬಿ. ಕಾಖಂಡಿಕಿ, ವೆಂಕಟೇಶ ನಿವಾಸ, ಠಾಕುರಲಿ P.O. ಡೊಂಬಲಿವಲಿ, ಜಿಲ್ಹಾ ಠಾಣಾ, ಮುಂಬೈ ಪೋರ್ಟ್.
437 ಶ್ರೀ ಬಿ. ಎನ್. ಜರೇ, B. Sc., B. T. H. N. 959, 3ನೇ ಬ್ಲಾಕ, ರಾಜಾಜಿನಗರ, ಬೆಂಗಳೂರು-10.
367 ಶ್ರೀ ಹನುಮಂತಾಚಾರ್ಯ, ರಿಟೈರ್ಡ ಹೆಡ್‌ಮಾಸ್ತರ, ಜಯಚಾಮರಾಜೇಂದ್ರ ಬಡಾವಣೆ, ಚಿತ್ರದುರ್ಗ.
288 ಶ್ರೀ ವಿ. ಎ. ಪಾಟೀಲರು, ಪ್ಲೀಡರ್, ಅಥಣಿ, ಜಿ-ಬೆಳಗಾಂವ.
290 ಶ್ರೀ ಎ. ಪಿ. ಜೋಷಿ, ರಿ॥ ನಾಜರ, ಅಥಣಿ, ಜಿ-ಬೆಳಗಾಂವ.
160 ಶ್ರೀ ಪಿ. ವೆಂಕೋಬಾಚಾರ್ಯ, ಅಡ್ವೊಕೆಟ್, ಬಳ್ಳಾರಿ.
290 A|1 ಆನಂದನಗರ ಟ್ಯಾಂಕರೋಡ್ ಸೈನ್, ಮುಂಬೈ-22



# ವಿನಂತಿ

೧. ೪ ನೇ ಭಾಗ ಅಚ್ಚಾದಿಂದ ೨೫ ರೂ. ಕೊಟ್ಟ ಚಂದಾದಾರರಿಗೆ ವಿನಂತಿ ಮಾಡಿದಂತೆ ೬ ನೇ ಭಾಗಕ್ಕೆ ೫-೫ ರೂ. M. O. ಕಳಿಸಿ ೯೦-೯೫ ಚಂದಾದಾರರ ಹೆಸರು ಮೊದಲಿಗೆ ಪ್ರಕಟಿಸಿದೆ. ಪುನಃ ಅವರ **ಉಪಕಾರ ಸ್ಮರಿಸುತ್ತದೆ.**

೨. ೪ನೇ ಭಾಗದವರೆಗೆ ೨೦ ರೂ ಕಳಿಸಿ ನಂತರ ೫ ನೇ ಭಾಗಕ್ಕೆ ೫ ರೂ. ಕಳಿಸಿದ ೧೨ ಜನರ ಹೆಸರು ಇನ್ನು ೫ ರೂ ಬಂದೊಡನೆ ಮುಂದೆ ಪ್ರಕಟಿಸುತ್ತದೆ.

೩. ನಾಲ್ಕನೇ ಭಾಗದಲ್ಲಿ ಆರ್ಡರ್ ಕೊಟ್ಟ (೩) ಜನರು ಹೆಸರು ಪ್ರಕಟಿಸಿತು. ಆದರೆ (೧) ಜಿ.ಬಿ.ರಾಘವೇಂದ್ರಾಚಾರ್ಯ ಹೊಳವನಹಳ್ಳಿ ತಾ॥ ತುಮಕೂರು ೨ ಶ್ರೀ ಹನುಮಂತರಾವ ಜಮಾನದಾರರು ವೈಯನ್ ಹೊಸಕೋಟೆ-3. ಕೆ. ನಂಜಯ್ಯ ಮಾಲಕ ಮುದ್ರಣಾಲಯ ಕುಣಿಗಲ್ ತಾ॥ ತುಮಕೂರು ಈ ಮೂವರು V. P. ಪರತ ಮಾಡಿದ್ದಾರೆ. ಚಂದಾದಾರ ಆಗಲಿಲ್ಲ. ಇದರಂತೆ ಎಷ್ಟೋ ಜನರು V. P. ಪರತಮಾಡಿ ನೂರಾರು ರೂ. ಮಂಡಲಕ್ಕೆ ಹಾನಿಮಾಡಿದ್ದಾರೆ.

೪. ಪೋಸ್ಟೇಜ್ ಹೆಚ್ಚಾದರೂ, ಮುಂಗಡ ೩೦ ರೂ ಕೊಟ್ಟವರಿಗೆ ಪೋಸ್ಟ್ ಫ್ರೀ ಕಳಿಸಿದೆ. ೬ನೇ ಭಾಗಕ್ಕೆ ಇನ್ನು ೨೦೦-೨೨೫ ಚಂದಾದಾರ ರೂ. ೫ ರೂ. ಭರ್ತಿ ಕಳಿಸಿಲ್ಲ. ಅವರಿಗೆ ಮಾತ್ರ ೬ ನೇ ಭಾಗದ ೫ ರೂ. ಟಪಾಲು ೧-೬೦ ನ.ಪೈ. ಕೊಡಬೇಕಾಗುವದು.

೫- ಈ ಮಹತ್ಕಾರ್ಯ ೧೯೫೯ ಎಪ್ರೆಲಿನಲ್ಲಿ ಪ್ರಾರಂಭವಾಗಿ ೪ ವರ್ಷವಾಯಿತು. ಬಹು ಶ್ರಮದಿಂದ ೪೬೨ ಜನ ಚಂದಾದಾರರಾಗಿ ಇದರಲ್ಲಿ ೪೦-೫೦ ಜನರು ೧-೨ ಭಾಗಗಳನ್ನು ತೆಗೆದುಕೊಂಡು ಮುಂದೆ ಇನಕಾರ ಮಾಡಿರುವರು.

೬. ಮತ್ತು ಸುಮಾರು ೧೦೦-೧೦೫ ಜನರು ೪ ಭಾಗಗಳನ್ನು ತೆಗೆದು ಅರ್ಧಮರ್ದ ರೂ. ಕೊಟ್ಟದ್ದಾರೆ. ಸುಮಾರು ೧೫೦೦ ರೂ ವಸೂಲಾಗುವದು ನಿಂತಿದೆ. ಅಂಚೆ ವೆಚ್ಚದಲ್ಲಿ ಬಹು ಹಾನಿಯಾಗಿ ಮಂಡಲಕ್ಕೆ ಲುಕಸಾನ ಆಗಿದೆ. ನೂರಾರು ಪ್ರತಿ ಫ್ರೀ ಕೊಟ್ಟದೆ.

೭. ಪ್ರತಿ ಭಾಗಕ್ಕೆ ಎಲ್ಲ ಖರ್ಚು ಕೂಡಿ ೪ ಸಹಸ್ರ ರೂ. ವೆಚ್ಚ ಬಂದು ಈವರೆಗೆ ಸುಮಾರು ೨೦ ಸಹಸ್ರ ರೂ. ವೆಚ್ಚವಾಗಿದೆ. ಕೊನೆಯು ಭಾಗಕ್ಕೆ ವಿವರ ಕೊಡುತ್ತದೆ.

೮. ಒಂದನೇ ಭಾಗ ಅಚ್ಚು ಆಗಲು ೧ ಒಂದು ಸಹಸ್ರ ರೂ. ಸಾಲವಾಗಿ ಎರಡನೇ ಭಾಗದವರೆಗೆ ನಡೆಯಿತು. ಸಾಲವೂ ತೀರಿಸಿ ದಾಸರು ೩-೪ ನೇ ಭಾಗಕ್ಕೆ ಅನುಕೂಲ ಮಾಡಿಸಿದರು. ಸಾಲವಾಗಲಿಲ್ಲ.

೯. ನಂತರ ೫ ನೇ ಭಾಗ ಪ್ರಾರಂಭಕ್ಕೆ ಕೆಲಜನರು ಸಹಾಯ ನೀಡುವೆವೆಂದು ಆಶ್ವಾಸನ ಕೊಟ್ಟರೂ ಸಹಾಯನೀಡಲು ಶ್ರೀ ದಾಸರು ಅವರಿಗೆ ಪ್ರೇರಿಸಲಿಲ್ಲ. ಕಾರಣ ೧೨೫೦ ರೂ. ಸಾಲವಾಗಿದೆ. ಕೆಲವೆಡೆಯಲ್ಲಿ ಸುಮಾರು ೬೦ ಸಟ್ ಪುಸ್ತಕ ಖರ್ಚು ಮಾಡಲು ಅಮಾನತ ಇಟ್ಟ ರೂ. ಗಳು ಬಂದಿಲ್ಲ. ಪುಸ್ತಕಗಳೂ ಪರತ ಆಗಿಲ್ಲ. ದಾಸರೇ ಗತಿಯು ನಮಗೆ.

೧೦. ಕಾರಣ ಬಾಕಿ ಇದ್ದ ಚಂದಾದಾರರು ೩೦-೨೫-೨೦-೧೫-೧೦-೫ ರೂ ಬಾಕಿ ಉಳ್ಳವರು ಬೇಗನೆ ಕಳಿಸಿ ಸಹಾಯ ನೀಡಲು ಪ್ರಾರ್ಥನೆ.

೧೧. ಈ ವರ್ಷದ ಕಾಗದ ಬೆಲೆ ಪ್ರಿಂಟಿನ ಛಾರ್ಜು ತಿರುಗಾಟ ಖರ್ಚು ಬಹು ಹೆಚ್ಚಾಗಿದೆ. ಮೇಲಾಗಿ ಪೋಸ್ಟೇಜ್ ಎರಡುಪಟ್ಟು ಏರಿದೆ. ಅನಿವಾರ್ಯದಿಂದ ೫-೬ ನೇ ಭಾಗಕ್ಕೆ ಅಂಚೆ ವೆಚ್ಚ ಕೂಡಿ V. P. P. ೧೦ ರೂ. ಮೇಲೆ ಬಾಕಿ ಇದ್ದವರಿಗೆ ಮಾತ್ರ ಕಳಿಸುತ್ತದೆ.

೧೨. ಪ್ರೆಸ್ಸಿನಿಂದ ಅನೇಕ ತೊಂದರೆಯಾಗಿ ಈ ವರ್ಷ ೩ ತಿಂಗಳು ತಡವಾಗಿದೆ. ಪುಸ್ತಕದ ಗಾತ್ರವು ಹೆಚ್ಚಾಗಿ ತಡವಾಯಿತು. ಸಕಲರು ಕ್ಷಮಿಸಲು ವಿನಂತಿ.




# ಪ್ರಕಟಣೆ

ಶಕೆ ೧೮೮೫ ಪುಷ್ಯವದಿ ೩೦ ಗೆ

## ಶ್ರೀ ಪುರಂದರದಾಸರ ೪೦೦ ವರ್ಷ ಉತ್ಸವ

ಮಂಗಳವಾರಪೇಟೆ ಧಾರವಾಡ

ತ್ವರೆ ಮಾಡಿರಿ ಇಂದೇ ಚಂದಾದಾರರಾಗಿರಿ

ಶ್ರೀ ಪುರಂದರದಾಸ ಉಪನಿಷತ್ತೆಂದು ಕರೆಸಿದ ೪ ಲಕ್ಷ ೨೫ ಸಾವಿರಗ್ರಂಥ ಖಿಲವಾಗಿವೆ. ಸದ್ಯ ಪ್ರಚಾರದಲ್ಲಿದ್ದ ಸಾವಿರ ಪದಾದಿಗಳೂ ಶುದ್ಧವಾಗಿಲ್ಲ, ಕಾರಣ ಶುದ್ಧವಾಗಿ ದಾಸಸಾಹಿತ್ಯ ಕಾಯ್ದುಕೊಳ್ಳಲು

೧. ಹಳೆವಹಿಗಳು ಸಂಗ್ರಹಿಸಿ ಪರಿಶೋಧಿಸಲಾಗಿದೆ. ವಿಷಯ ವಿಭಜನೆ ತಾರತಮ್ಯ, ಪ್ರಾರ್ಥನಾ, ಸೃಷ್ಟಿ, ತೀರ್ಥಕ್ಷೇತ್ರ, ಸಾಧನ, ಉಪಾಸನಾ ಪ್ರಮೇಯ ಸ್ತೋತ್ರಾದಿ ಭಾಗಗಳಲ್ಲಿ ಪದಗಳನ್ನು ವಿಂಗಡಿಸಿದೆ. ಸುಳಾದಿ ಉಗಾಭೋಗಗಳನ್ನು ಬೇರ್ಪಡಿಸಿದೆ. ಸುಮಾರು ೬-೮ ಪುಸ್ತಕವಾಗುವವು. (ಟೀಕಾ ಟಿಪ್ಪಣಿಯೊಂದಿಗೆ)

೨. ಗುಟ್ಟಿನ ಪದಗಳನ್ನು ಆ ಒಗಟಿನ ಅರ್ಥವೂ ಬೇರೆ ಒಂದು ಪುಸ್ತಕವಾಗುವದಿದೆ.

೩. ಕರ್ನಾಟಕ ಪಿತಾಮಹರೆನಿಸಿದ ಶ್ರೀ ಪುರಂದರದಾಸಾರ್ಯರ ಪದ ಸುಳಾದಿಗಳು ಕೆಲವು ೭೨ ಮುಖ್ಯ ರಾಗಗಳಲ್ಲಿ ಸ್ವರ ಆಲಾಪಾದಿಗಳೊಂದಿಗೆ ಅಭ್ಯಾಸಕರಿಗೆ ಉಪಯೋಗವಾಗುವಂತೆ ಮಾಡುವದಿದೆ.

೪. ಶ್ರೀ ದಾಸರ ವಿಸ್ತಾರ ಚರಿತ್ರೆ ಹಿಂದಿನ ಆಧಾರಗಳಿಂದ ಅನೇಕ ವಿಷಯಗಳಲ್ಲಿ ೫-೬ ಭಾಷೆಯಲ್ಲಿ ಪ್ರಕಟಿಸುವದಿದೆ.

೫. ಪ್ರಾಚೀನ ಪದ್ಧತಿಯಂತೆ ಸುಳಾದಿ ಉಗಾಭೋಗ ಹೇಳುವವರಿಂದ ಟೇಪ ರಿಕಾರ್ಡ ಮಾಡಿಸುವದಿದೆ. ಈ ಎಲ್ಲ ಮಹತ್ಕಾರ್ಯಗಳಿಗೆ ೨೫ ಸಹಸ್ರ ರೂ. ಮೇಲೆ ಬೇಕು.

ಧನಿಕರು ೧೦೦೦. ೫೦೦, ೨೫೦ ೧೦೦, ೫೦, ೨೫ ಧನಸಹಾಯ ಮಾಡಬೇಕು. ಕೊನೆಗೆ ೫ ರೂ. ಬೇಗ M.O. ಕಳಿಸಿ ಇಂದೇ ಸದಸ್ಯರಾಗಿ ಸಹಕರಿಸಲು ವಿನಂತಿ. ನನ್ನ ವೃದ್ಧಾಪ್ಯ ಮೂಲಕ ಶ್ರೀ ಪುರಂದರ ಸಾಹಿತ್ಯ ಒಪ್ಪಿಸಿದ್ದೇನೆ ಸಂಶಯ ತಾರದೇ ಸಹಸ್ರಾರು ಭಕ್ತರು ಸಹಾಯ ನೀಡಿರಿ.

M. O. ಈ ಅಡ್ರೆಸ್ಸಿಗೆ ಕಳಿಸಿರಿ.

ಉಪಾಧ್ಯಕ್ಷ
**ಹನುಮಂತರಾವ ಗೊರಾಬಾಳ**

ಪ್ರಧಾನ ಕಾರ್ಯದರ್ಶಿ
**ಬುರ್ಲಿ ಬಿಂದುಮಾಧವ**
ಮಿಂಚಿನಬಳ್ಳಿ, ಧಾರವಾಡ